# ಅವಳು...

## ಸ್ತ್ರೀ ಸಂವೇದೀ ಮಾತು - ಕತೆಗಳು



ಸಂಪಾದಕಿ: ಮೀರಾ ಪಿ. ಆರ್.

ಸಹ ಸಂಪಾದಕಿ: ಪೂರ್ಣಿಮಾ ಕಶ್ಯಪ್



ಹನ್ನೊಂದನೆಯ ವಸಂತ ಸಾಹಿತ್ಯೋತ್ಸವದ ಸಂಭ್ರಮ

# ಅವಳು...

## ಸ್ತ್ರೀ ಸಂವೇದೀ ಮಾತು-ಕತೆಗಳು



ಕನ್ನಡ ಸಾಹಿತ್ಯ ರಂಗ
ಯು.ಎಸ್.ಎ.

# ಅವಳು...

## ಸ್ತ್ರೀ ಸಂವೇದೀ ಮಾತು-ಕತೆಗಳು

ಸಂಪಾದಕಿ

**ಮೀರಾ ಪಿ. ಆರ್.**

ಸಹ ಸಂಪಾದಕಿ

**ಪೂರ್ಣಿಮಾ ಕಶ್ಯಪ್**

**ಹನ್ನೊಂದನೆಯ ವಸಂತ ಸಾಹಿತ್ಯೋತ್ಸವದ ಸಂಭ್ರಮ**



ಕನ್ನಡ ಸಾಹಿತ್ಯ ರಂಗ

ಯು.ಎಸ್.ಎ.

**Avalu... Stree Samvedee Maatu Kategalu** — Ed. by **Meera P. R.** and Co-Ed. By **Poornima Kashyap**. Published by **Kannada Sahitya Ranga,** USA. Website: www.kannadasahityaranga.org

First Impression: 2024 Pages: 472 Price: Rs. 500/- USD 10

Paper Used: 70 GSM N.S. Maplitho Book Size: Demy 1/8

ಬಳಸಿರುವ ಕಾಗದದ ಗುಣಮಟ್ಟ: ೭೦ ಜಿಎಸ್‌ಎಂ ಎನ್‌ಎಸ್ ಮ್ಯಾಪ್‌ಲಿಥೋ

ಪುಸ್ತಕದ ಆಕಾರ: ೧/೮ ಡೆಮಿ (ಅಷ್ಟದಳ)



**ಪುಸ್ತಕ ಸಂಯೋಜನೆ ಮತ್ತು ಪ್ರಸ್ತುತಿ**
**ಅಭಿನವ**
17/18–2, ಮೊದಲನೆಯ ಮುಖ್ಯರಸ್ತೆ,
ಮಾರೇನಹಳ್ಳಿ ವಿಜಯನಗರ
ಬೆಂಗಳೂರು–560040.
ದೂ 9448804905 Email: abhinavabooks21@gmail.com.

**ಪುಸ್ತಕ ವಿನ್ಯಾಸ:** ಶ್ರೀಧರ್
**ತಾಂತ್ರಿಕ ನೆರವು:** ಶ್ರೀವತ್ಸ ಜೋಶಿ

**ಹೊದಿಕೆ ವಿನ್ಯಾಸ :** ಸೌಮ್ಯ ಪ್ರಭು ಕಲ್ಯಾಣ್‌ಕರ್
**ಒಳಪುಟದ ರೇಖಾಚಿತ್ರ ಮತ್ತು ಡಿಜಿಟಲ್ ಆರ್ಟ್ :** ಮೀರಾ ಪಿ. ಆರ್.
**ಮುದ್ರಣ: ಧರಣಿ ಪ್ರಿಂಟರ್ಸ್,** ಬೆಂಗಳೂರು ೫೬೦೦೧೦

**ಅರ್ಪಣೆ**

ಆಡದೇ ಉಳಿವ ಮಾತುಗಳಿಗೆ...

ಕೇಳದೆಯೂ ಅರಿವ ಅಂತಃಕರಣಕ್ಕೆ...

**ಕನ್ನಡ ಸಾಹಿತ್ಯ ರಂಗ**
**ಯು ಎಸ್ ಎ**

# ಕೃತಜ್ಞತೆಗಳು


ನಮ್ಮ ಈ ಸಂಕಲನವನ್ನು ಪ್ರಾಯೋಜಿಸಿದ
**ಶ್ರೀ ವತ್ಸ ಕುಮಾರ್**
ಅವರಿಗೆ
ಕನ್ನಡ ಸಾಹಿತ್ಯ ರಂಗದ ಪರವಾಗಿ ಹೃತ್ಪೂರ್ವಕ ಕೃತಜ್ಞತೆಗಳನ್ನು ಅರ್ಪಿಸುತ್ತಿರುವ

**ಮೈ. ಶ್ರೀ. ನಟರಾಜ**
ಅಧ್ಯಕ್ಷರು, ಆಡಳಿತ ಮಂಡಳಿ

**ಶ್ರೀಕಾಂತ ಬಾಬು**
ಅಧ್ಯಕ್ಷರು, ಕಾರ್ಯಕಾರಿ ಸಮಿತಿ

ಸಂಪಾದಕ ಮಂಡಳಿ
**ಮೀರಾ ಪಿ. ಆರ್.**
**ಪೂರ್ಣಿಮಾ ಕಶ್ಯಪ್**

ಸಲಹಾ ಸಮಿತಿ
**ಮೈ. ಶ್ರೀ. ನಟರಾಜ**
**ತ್ರಿವೇಣಿ ಶ್ರೀನಿವಾಸರಾವ್**
**ಗುರುಪ್ರಸಾದ ಕಾಗಿನೆಲೆ**


**11ನೇ ವಸಂತ ಸಾಹಿತ್ಯೋತ್ಸವ**
ಮೇ 17, 18, 19 – 2024
ಸಿಲ್ವರ್ ಸ್ಪ್ರಿಂಗ್, ಮೇರಿಲ್ಯಾಂಡ್

# ಗೌರವ ಸಮರ್ಪಣೆ

ನನ್ನ ಅತ್ತಿಗೆ ಶಾಂತಾ ರಾಮನ್, ಕವಯಿತ್ರಿ ಅಥವಾ ಕತೆಗಾರ್ತಿ ಅಲ್ಲ. ಎಲ್ಲರೂ ಗುರುತು ಹಿಡಿಯಬಲ್ಲ ಪ್ರಸಿದ್ಧ ವ್ಯಕ್ತಿಯೂ ಅಲ್ಲ. ಆದರೆ, ಎಲ್ಲೋ ಹುಟ್ಟಿ ಎಲ್ಲೋ ಹರಿವ ನದಿಯಂತೆ ನಮ್ಮ ಬದುಕಿಗೆ ಬಂದು, ನಮ್ಮೆಲ್ಲರ ಜೀವನವನ್ನೂ ತನ್ನ ಕ್ರಿಯಾಶೀಲ ವ್ಯಕ್ತಿತ್ವದಿಂದ ಸಮೃದ್ಧಗೊಳಿಸಿದವಳು. ಈಗ ತನ್ನ 82ರ ಹರೆಯದಲ್ಲೂ ಕ್ರಿಯಾಶೀಲವಾಗಿರುವ ಆಕೆ ಹುಟ್ಟಿದ್ದು 1941ರಲ್ಲಿ, ತಮಿಳುನಾಡಿನ ತಂಜಾವೂರಿನಲ್ಲಿ. ನನ್ನ ಅಣ್ಣ ರಾಮನ್ ಅವರನ್ನು ಮದುವೆಯಾಗಿ ಆಕೆ ಬೆಂಗಳೂರಿಗೆ ಬಂದಾಗ ಅವಳಿಗೆ 17ರ ಹರೆಯ. ಕನ್ನಡದ ಒಂದಕ್ಷರವೂ ಗೊತ್ತಿರದ ಆಕೆ, ನನ್ನ ತಂದೆಯವರು ಹೇಳಿದರೆಂಬ ಕಾರಣಕ್ಕೆ 1959ರಲ್ಲಿ ಕನ್ನಡದ ಓದು, ಬರಹವನ್ನು ಕಲಿಯಲು ಪ್ರಾರಂಭಿಸಿದ್ದು. ಹಾಗೆ ಪ್ರಾರಂಭಿಸಿದ ಒಂದು ವರ್ಷದೊಳಗೆ ಜಿ. ಪಿ. ರಾಜರತ್ನಂ, ಬೇಂದ್ರೆ, ಮೊದಲಾದವರ ರಚನೆಗಳನ್ನು ಸೊಗಸಾಗಿ ಹಾಡಬಲ್ಲಷ್ಟಾದಳು. 1965ರ ಆರಂಭದ ಹೊತ್ತಿಗೆ ಮಕ್ಕಳಿಗೆ ಕನ್ನಡ ಮತ್ತು ಸಂಗೀತವನ್ನು ಸ್ವತಃ ಕಲಿಸುವಷ್ಟು ಪರಿಣತಿ ಸಾಧಿಸಿದಳು. ಆಗ ತನ್ನ ಪುಟ್ಟ ಮಕ್ಕಳಾಗಿದ್ದ ಶ್ರೀಮತಿ ಮತ್ತು ಬದರಿಯವರ ಬೆಳವಣಿಗೆಯಲ್ಲಿ ಮುಖ್ಯ ಪಾತ್ರವಹಿಸಿ, ಅವರಿಬ್ಬರೂ ಉತ್ತಮವಾಗಿ ಬೆಳೆಯಲು ಕಾರಣಳಾದಳು. ಈಗ ಆಕೆ, ತಮ್ಮ 82ರ ಹರೆಯದಲ್ಲೂ ತಮ್ಮಿಷ್ಟದ ವೀಣೆಯನ್ನು ಅಭ್ಯಾಸ ಮಾಡುತ್ತಾ ಕ್ರಿಯಾಶೀಲವಾಗಿದ್ದಾರೆ. ನನ್ನ ಪಾಲಿಗೆ ಅವಳು ಅತ್ತಿಗೆಗಿಂತಲೂ ಹೆಚ್ಚು. ಜೀವನ ಪ್ರೀತಿ, ಕಾಳಜಿ, ಸಹಾನುಭೂತಿಯಂಥ ಭಾವಗಳಿಂದ ಇಂದಿಗೂ ನಮ್ಮೆಲ್ಲರ ಜೀವನದಲ್ಲಿ ಅತ್ಯಂತ ಪ್ರೀತಿಪಾತ್ರ ಹಿರಿಯಳಾಗಿ ಪೊರೆಯುತ್ತಿರುವ ನನ್ನ ಅತ್ತಿಗೆ ಶಾಂತಾ ರಾಮನ್ ಅವರನ್ನು ಈ ಹೊತ್ತು ಅತ್ಯಂತ ಕೃತಜ್ಞತೆಯಿಂದ ಸ್ಮರಿಸುತ್ತಿದ್ದೇನೆ.

**– ವತ್ಸ ಕುಮಾರ್**

# ಅನುಕ್ರಮ

ಲೇಖನಗಳು

* * *

# ಅಮೆರಿಕದಲ್ಲಿ ಕನ್ನಡದ ಕೃಷಿಗೆ ತೌರಾದ ಕಸಾರಂ

ಸುಮಾರು ಎರಡು ದಶಕಗಳಿಗೂ ಹಿಂದೆ ಜನ್ಮ ತಾಳಿ ಈವರೆಗೆ ಹತ್ತು ವಸಂತ ಸಾಹಿತ್ಯೋತ್ಸವಗಳನ್ನು ಶ್ರದ್ಧೆಯಿಂದ ನಡೆಸಿ ಅಮೆರಿಕದಲ್ಲಿರುವ ಹಿರಿಯ-ಕಿರಿಯ ಉತ್ಸಾಹೀ ಕನ್ನಡ ಬರಹಗಾರರಿಗೆ ಒಂದು 'ಕೃಷಿಕ್ಷೇತ್ರ'ವನ್ನು ಕೊಟ್ಟಿರುವ 'ಕನ್ನಡ ಸಾಹಿತ್ಯ ರಂಗ'ದ (ಕಸಾರಂ) ಹೆಸರು ಅಮೆರಿಕದಲ್ಲೇ ಅಲ್ಲದೇ ಕರ್ನಾಟಕದಲ್ಲೂ ಪ್ರಸಿದ್ಧವಾಗಿರುವುದು ನಮಗೆ ಹೆಮ್ಮೆಯ ವಿಷಯ. ಕಸಾರಂ ಹಮ್ಮಿಕೊಳ್ಳುವ ಹಲವು ಚಟುವಟಿಕೆಗಳಲ್ಲಿ, ಬೇರೆ ಬೇರೆ ನಗರಗಳಲ್ಲಿ ನಡೆಯುವ ದ್ವೈವಾರ್ಷಿಕ ವಸಂತ ಸಾಹಿತ್ಯೋತ್ಸವ ಅತಿ ಮುಖ್ಯವಾದುದು. ಈ ಉತ್ಸವದ ಮಹತ್ವದ ಕಾಣಿಕೆಯೆಂದರೆ ಕಸಾರಂ ಪ್ರಕಟಿಸುವ ಗ್ರಂಥ. ಕಸಾರಂ ತನ್ನ ಧ್ಯೇಯವನ್ನು ಅಮೆರಿಕನ್ನಡಿಗರ ಸಾಹಿತ್ಯಕೃಷಿಗೆ ಮೀಸಲಾಗಿರಿಸಿ ಸದ್ದಿಲ್ಲದೇ ದುಡಿಯುತ್ತ ಹಲವಾರು ಸ್ಥಳೀಯ ಲೇಖಕರ ಪ್ರೀತಿಗೆ ಪಾತ್ರವಾಗಿದೆ. ಮಹಾಕವಿ ಕುವೆಂಪುರವರ ಸಾಹಿತ್ಯ ಸಮೀಕ್ಷೆಯಿಂದ ಪ್ರಾರಂಭಿಸಿ, ಈವರೆಗೆ ನಾವು ಕಥೆ, ಕಾದಂಬರಿ, ಹಾಸ್ಯ, ಪ್ರಬಂಧ, ಅನುವಾದ, ನಾವು ಪಡೆದುಕೊಂಡಿರುವ ಅಮೆರಿಕದ ಜೀವನಾನುಭವ, ಭಕ್ತಿ ಸಾಹಿತ್ಯ, ಹೊಸ ನಾಡಿನಲ್ಲಿ ಬಂದಿಳಿದು ಹೊಸ ಜೀವನವನ್ನು ಕಂಡುಕೊಂಡು ಎದುರಿಸುವ ಬದಲಾವಣೆ, ನಾವು ಅಭ್ಯಸಿಸಿ ಅರಗಿಸಿಕೊಂಡ ಅಮೆರಿಕನ್ ಜಾನಪದ-ಹೀಗೆ ಹಲವು ಹತ್ತು ವಿಷಯಗಳ ಕುರಿತು ಗ್ರಂಥಗಳನ್ನು ಕಸಾರಂ ಪ್ರಕಟಿಸಿದೆ. ಇಷ್ಟೇ ಅಲ್ಲದೇ ಪ್ರತಿ ಸಾಹಿತ್ಯೋತ್ಸವದಲ್ಲೂ ಪ್ರಕಟವಾಗುವ ಗ್ರಂಥದ ಮತ್ತು ಆ ಸಂದರ್ಭದಲ್ಲಿ ಚರ್ಚಿಸಲ್ಪಡುವ ವಿಷಯಗಳಲ್ಲಿ ಪರಿಣತಿಯುಳ್ಳ ಒಬ್ಬಿಬ್ಬರು ಪ್ರತಿಭಾನ್ವಿತರನ್ನು ಮುಖ್ಯ ಅತಿಥಿಗಳನ್ನಾಗಿ ಆಹ್ವಾನಿಸಿ ಕರ್ನಾಟಕದಿಂದ ಕರೆಸಿಕೊಂಡು ಅವರ ಸುದೀರ್ಘ ಭಾಷಣವನ್ನು ಸಹ ಏರ್ಪಡಿಸುತ್ತಾ ಬಂದಿದ್ದೇವೆ. ಮುಖ್ಯ ಅತಿಥಿಗಳ ಭಾಷಣಗಳನ್ನು ಸಹ ನಮ್ಮ ಗ್ರಂಥದ ಮುಖ್ಯ ಅಂಗವಾಗಿ ಪ್ರಕಟಿಸುತ್ತಾ ಬಂದಿದ್ದೇವೆ. ಇಲ್ಲಿಯವರೆಗಿನ ನಮ್ಮ ಸಾಹಿತ್ಯ ಸೇವೆಯನ್ನು ಕನ್ನಡದ ಅನೇಕ ಗಣ್ಯ ಲೇಖಕರು ಗುರುತಿಸಿದ್ದಾರೆ. ನಮ್ಮಲ್ಲಿ ಪಳಗಿದ ಹಲವರು ಅನೇಕ ಪುಸ್ತಕಗಳನ್ನು ಪ್ರಕಟಿಸಿ ಕರ್ನಾಟಕದಲ್ಲಿ ಪರಿಚಿತರಾಗಿದ್ದಾರೆ.

ಈ ಬಾರಿಯ ಉತ್ಸವದ ಮೂಲವಸ್ತು 'ಸ್ತ್ರೀ ಸಂವೇದನೆ' ಸಾಹಿತ್ಯಿಕ ಮತ್ತು ಸಾಮಾಜಿಕ ದೃಷ್ಟಿಯಿಂದ ಬಹು ಮುಖ್ಯವಾದುದು. ಈ ಗ್ರಂಥಕ್ಕಾಗಿ ಬರೆದಿರುವ ಲೇಖಕರು ಭಾರತದ ಸಾಂಸ್ಕೃತಿಕ ಹಿನ್ನೆಲೆಯಿಂದ ಬಂದು ಪಾಶ್ಚಾತ್ಯ ಸಾಂಸ್ಕೃತಿಕ ಚೌಕಟ್ಟಿನಲ್ಲಿ ನೆಲೆಸಿ, ಆ ಕಾರಣದಿಂದ ವೈವಿಧ್ಯಮಯ ವೈಚಾರಿಕತೆಯ ನೇರ ಪರಿಚಯ ಉಳ್ಳವರಾಗಿರುವ ಸಾಧ್ಯತೆ ಹೆಚ್ಚು. ಅಷ್ಟೇ ಅಲ್ಲದೇ ಅವರಲ್ಲಿ ಹೆಚ್ಚಿನವರು ಕನ್ನಡದ ಅಧ್ಯಯನ ಮಾಡಿದವರಲ್ಲ,

ಅವರ ಪರಿಣತಿಯ ಹಿನ್ನೆಲೆ ವಿಜ್ಞಾನ, ಇಂಜಿನಿಯರಿಂಗ್, ವೈದ್ಯಕೀಯ ಮತ್ತಿತರ ತಾಂತ್ರಿಕ ವಿಷಯಗಳು. ಹೀಗಾಗಿ, ಈ ಗ್ರಂಥದ ಬರಹಗಳಲ್ಲಿ ಒಂದು ಹೊಸತನ ಮತ್ತು ಆರೋಗ್ಯಕರ ಚಿಂತನೆಗಳ ಮಿಶ್ರಣ ಓದುಗರಿಗೆ ದೊರಕಬಹುದೆಂಬ ಆಶಯ ನಮಗಿದೆ.

ಈ ಗ್ರಂಥದ ಸಂಪಾದಕರು ಕಸಾರಂನ ಆಡಳಿತ ಮಂಡಲಿಯ ಸದಸ್ಯರೇ ಆದ ಶ್ರೀಮತಿ ಮೀರಾ ಪಿ. ಆರ್. ಮತ್ತು ಶ್ರೀಮತಿ ಪೂರ್ಣಿಮಾ ಕಶ್ಯಪ್ ಅವರುಗಳು. ಕಸಾರಂ ಸಂಪಾದಕರು ಗ್ರಂಥ ಪ್ರಕಟಣೆಯ ವಿಷಯವನ್ನು ಅತ್ಯಂತ ಗಂಭೀರವಾಗಿ ಪರಿಗಣಿಸುವ ಒಂದು ಪರಂಪರೆಯನ್ನೇ ಸೃಷ್ಟಿಸಿಕೊಂಡಿದ್ದಾರೆ. ಗ್ರಂಥದ ವಸ್ತುವನ್ನು ನಿಗದಿಪಡಿಸುವುದರಿಂದ ಹಿಡಿದು, ಲೇಖಕರನ್ನು ಗುರುತಿಸಿ, ಆಹ್ವಾನಿಸಿ, ಅವರಿಂದ ಲೇಖನಗಳನ್ನು ಬರೆಯಿಸಿ, ಬಂದ ಲೇಖನಗಳನ್ನು ಪರಿಶೀಲಿಸಿ, ಅಗತ್ಯ ಬಿದ್ದರೆ ತಿದ್ದಿ, ಪ್ರಕಟಣೆಗೆ ಸಿದ್ಧಪಡಿಸುವ ಒಂದು ಕೈಂಕರ್ಯ ಏನಿದೆ, ಅದಕ್ಕೆ ಸಮಯ ಬೇಕು, ತಾಳ್ಮೆ ಬೇಕು, ಪ್ರತಿಭೆ ಬೇಕು, ಜಾಣ್ಮೆ ಬೇಕು ಮತ್ತು ಕನ್ನಡದ ಪ್ರೀತಿ ಮುಖ್ಯವಾಗಿ ಇರಲೇ ಬೇಕು. ಈ ಇಬ್ಬರು ಮಹಿಳೆಯರು ಈ ಎಲ್ಲ ಗುಣಗಳನ್ನೂ ಹೊಂದಿರುವುದೇ ಅಲ್ಲದೇ ಬರಹಗಳ ವಸ್ತುವನ್ನು ಕೂಲಂಕಷವಾಗಿ ಓದಿ, ಚರ್ಚಿಸಿ, ಸಿದ್ಧಪಡಿಸುವ ಕಾರ್ಯದಲ್ಲಿ ಸಹ ಪಳಗಿದವರು. ಇವರ ಶಿಸ್ತು ಮತ್ತು ಕಾರ್ಯವೈಖರಿಗೆ ವಿಶ್ವಸ್ಥ ಮಂಡಲಿ ಮತ್ತು ಕಾರ್ಯಕಾರೀ ಸಮಿತಿಯ ಅಧ್ಯಕ್ಷರಾಗಿ ನಮ್ಮ ಮೆಚ್ಚುಗೆಯನ್ನೂ ಶುಭಾಶಯಗಳನ್ನೂ ಈ ಮೂಲಕ ತಿಳಿಸಲು ಅತ್ಯಂತ ಹರ್ಷವಾಗುತ್ತಿದೆ.

ಮತ್ತೊಮ್ಮೆ ಈ ಗ್ರಂಥದ ಪ್ರಕಟಣೆಯ ಕಾರ್ಯದಲ್ಲಿ ಕೈಜೋಡಿಸಿರುವ ಎಲ್ಲರಿಗೂ ಅಭಿನಂದನೆಗಳನ್ನು ಅರ್ಪಿಸುತ್ತೇವೆ. ಬರಲಿರುವ ವಸಂತ ಸಾಹಿತ್ಯೋತ್ಸವದ ಸಂದರ್ಭದಲ್ಲಿ ನಡೆಯುವ ಈ ಗ್ರಂಥದ ಲೋಕಾರ್ಪಣೆ, ಮುಖ್ಯ ಅತಿಥಿಗಳ ಭಾಷಣ ಹಾಗೂ ವಿವಿಧ ಕಾರ್ಯಕ್ರಮಗಳನ್ನು ಎದುರು ನೋಡುತ್ತಾ, ಹಿಂದಿನ ಪ್ರಕಟಣೆಗಳಂತೆ ಈ ಗ್ರಂಥವೂ ಓದುಗರ ಮನ್ನಣೆಯನ್ನು ಪಡೆಯಲೆಂದು ಹಾರೈಸುತ್ತೇವೆ.

**ಮೈ. ಶ್ರೀ. ನಟರಾಜ**
(ವಿಶ್ವಸ್ಥ ಮಂಡಲಿಯ ಅಧ್ಯಕ್ಷ)

**ಶ್ರೀಕಾಂತ ಬಾಬು**
(ಕಾರ್ಯಕಾರೀ ಸಮಿತಿಯ ಅಧ್ಯಕ್ಷ)

# ಮುನ್ನುಡಿ

ಈ ಸಂಗ್ರಹದಲ್ಲಿ 10 ಕತೆಗಳು ಮತ್ತು 23 ಲೇಖನಗಳಿವೆ. ಕತೆಗಳು ವೈವಿಧ್ಯಮಯ-ವಾದ ಅನುಭವ ಲೋಕಗಳನ್ನು ಆಪ್ತವಾಗಿ, ಸೂಕ್ಷ್ಮವಾಗಿ ಮತ್ತು ಪ್ರಬುದ್ಧವಾಗಿ ಅನ್ವೇಷಿಸುತ್ತವೆ. ಇವುಗಳ ವಸ್ತು ಕನ್ನಡ ಕಥಾಲೋಕಕ್ಕೆ ಹೊಸದಾಗಿದೆ. ಹಲವು ಬಗೆಯ ನಿರೂಪಣೆಯ ಶೈಲಿಗಳನ್ನು ಬಳಸಿಕೊಳ್ಳುವ ಈ ಕತೆಗಳ ಸಾಮಾನ್ಯವಾದ ಗುಣವೆಂದರೆ ಬರಹದ ಗಾಂಭೀರ್ಯ ಮತ್ತು ಪ್ರಾಮಾಣಿಕತೆ. 'ನನಗೆ ಕತೆ ಬರೆಯುವುದೆಂದರೆ ಥೆರಪಿಯ ಹಾಗೆ' ಎಂದು ಕಾವ್ಯ ಕಡಮೆ ನಾಗರಕಟ್ಟೆ ಅವರ ಕತೆಯ ನಿರೂಪಕಿ ಹೇಳುತ್ತಾಳೆ. ಈ ಮಾತು ಸಂಗ್ರಹದ ಬಹುಪಾಲು ಕತೆಗಳಿಗೆ ಅನ್ವಯಿಸುತ್ತದೆ. ಅವುಗಳ ಉದ್ದೇಶವು ಅನುಭವವನ್ನು ಅರ್ಥಮಾಡಿಕೊಂಡು, ಸಾಧ್ಯವಿದ್ದರೆ ಅದರಿಂದ ಬಿಡುಗಡೆ ಪಡೆಯುವುದಾಗಿದೆ. ಏಕೆಂದರೆ ಅನೇಕ ಕತೆಗಳು ನೋವಿನ ಬಗ್ಗೆ ಇವೆ. ವಿಶೇಷವಾಗಿ ಆಪ್ತ ಮನುಷ್ಯ ಸಂಬಂಧಗಳಲ್ಲಿ ಅಪರಿಹಾರ್ಯವಾಗಿರುವ ನೋವಿನ ಬಗ್ಗೆ ಇವೆ. ಹೀಗಾಗಿ ಇವು ವ್ಯಕ್ತಿನಿಷ್ಠವಾದ, ಖಾಸಗಿ ಅನುಭವದ ಬಗ್ಗೆ ಇರುವ ಕತೆಗಳೆಂದು ತೋರಿದರೂ ಸೂಕ್ಷ್ಮವಾಗಿ ನೋಡಿದರೆ ತೀವ್ರವಾಗಿ ಬದಲಾಗುತ್ತಿರುವ ಸಮಾಜವೊಂದರ ಇಂದಿನ ತಲೆಮಾರಿನ ಸಂದಿಗ್ಧಗಳ ಬಗ್ಗೆ ಈ ಕತೆಗಳು ಇವೆ. ಗಂಡು-ಹೆಣ್ಣು ಎನ್ನುವ binaryಗಳನ್ನು ದಾಟಿ ಜೆಂಡರ್ ಪರಿಕಲ್ಪನೆಗಳನ್ನು ಹೊಸದಾಗಿ ಕಟ್ಟಿಕೊಳ್ಳುತ್ತಿರುವ ಈ ತಲೆಮಾರು ತೀವ್ರವಾದ ತಳಮಳದಲ್ಲಿದೆ. ಜೆಂಡರ್ ಅನ್ನುವುದು ಶಾರೀರಿಕ ಅಲ್ಲವೆಂದು ಒಪ್ಪಿಕೊಂಡು ದಶಕಗಳೇ ಆಗಿಹೋಗಿವೆ. ಆದರೆ ದೇಹಕ್ಕೆ ತನ್ನದೇ ಆದ ವಿಧಿ ಇದೆಯೇ? ದೇಹದ ಭಾಗಗಳನ್ನು ಬದಲಾಯಿಸಿಕೊಂಡರೆ ಇನ್ನೊಂದು ವ್ಯಕ್ತಿತ್ವವನ್ನು ಪಡೆಯುತ್ತೇವೆಯೆ? ಈ ಸಂದಿಗ್ಧಗಳಿಗೆ ಸುಲಭ ಉತ್ತರಗಳಿಲ್ಲ. ಈ ಕತೆಗಳು ಈ ಪ್ರಶ್ನೆಗಳನ್ನು ವ್ಯಕ್ತಿಗಳನ್ನು ಅಂತಃಕರಣದಿಂದ ನೋಡುವ ಮೂಲಕ ಅರ್ಥಮಾಡಿಕೊಳ್ಳಲು ಪ್ರಯತ್ನಿಸುತ್ತವೆ. ಹೀಗಾಗಿ ಈ ಕತೆಗಳಿಗೆ ಮುಖ್ಯವಾದ ಒಂದು ಸಾಮಾಜಿಕ ಆಯಾಮವೂ ಇದೆ. ಈ ಆಯಾಮವು ಗಂಡು-ಹೆಣ್ಣುಗಳ ನಡುವಿನ ಅಸಮಾನತೆಗೆ ಸಂಬಂಧಪಟ್ಟಿದೆ. ಬಹಳ ಹಿಂದೆಯೆ ಸ್ತ್ರೀವಾದವು 'The personal is political' ಎಂದು ಹೇಳಿತ್ತು. ಈ ಕತೆಗಳಲ್ಲಿ ವ್ಯಕ್ತಿಗಳ ತೀರಾ ಖಾಸಗಿ ಎಂದು ಕಾಣುವ ಅನುಭವಗಳಿಗೆ ಲಿಂಗತ್ವ ರಾಜಕೀಯದ ಆಯಾಮವಿದೆ.

ಆದರೆ ಮುಖ್ಯವೆಂದರೆ ಇಲ್ಲಿಯ ಕತೆಗಳು ಅಮೂರ್ತವಾದ ಸೈದ್ಧಾಂತಿಕತೆಯಿಂದ ಅನುಭವವನ್ನು ಶೋಧಿಸುವುದಿಲ್ಲ. ಬಹಳ ಸಹಜವಾಗಿ ಕತೆ ಹೇಳುತ್ತಲೇ ಆಳವಾದ

ಪ್ರಶ್ನೆಗಳನ್ನು ಕೆದಕುತ್ತವೆ. ಅಲ್ಲದೆ ವಾಸ್ತವ-ನಿರೂಪಣೆ-ಕತೆ ಇವುಗಳ ಸಂಬಂಧದ ಬಗ್ಗೆಯೇ ಈ ಕತೆಗಳು ಇವೆ. ಈ ಅಂಶದ ಬಗ್ಗೆ ಮುಂದೆ ಚರ್ಚಿಸುತ್ತೇನೆ.

ಉದಾಹರಣೆಗೆ ಕಾವ್ಯ ಕಡಮೆಯವರ ಕತೆಯ ನಿರೂಪಕಿ ಕತೆಗಾರ್ತಿ. ಸಂಪಾದಕರು ಕತೆಗಾಗಿ ಕೇಳಿದಾಗ 'ಒಂದು ಕತೆ ತಲೆಯಲ್ಲಿದೆ ಬರೆದು ಕಳಿಸುವುದಷ್ಟೇ' ಎಂದು ಅವಳು ಹೇಳುತ್ತಾಳೆ. ಆದರೆ ಬರೆಯುವುದು ತನ್ನ ಇಪ್ಪತ್ತು ವರ್ಷದ ಕೂಸಿನ ಬಗ್ಗೆ, ಈ ಕೂಸಿಗೆ ಅಪರೂಪದ ವಿಕಲತೆಯಿದೆ. ಅದು ವೈದ್ಯ ಲೋಕಕ್ಕೂ ಪೂರ್ತಿಯಾಗಿ ಅರ್ಥವಾಗದ್ದು. ಅವಳಿಗೆ ಅರ್ಥವಾದದ್ದು ಏನೆಂದರೆ ಅವನು ಹುಟ್ಟಿದಾಗ ಅವನಿಗೆ ಹಚ್ಚಿದ್ದ ಬೇಬಿ ಲೋಷನ್ನಿನ ವಾಸನೆ ತಾಯಿ ಮಗನನ್ನು ಬಿಡಿಸಲಾಗದ ನಂಟಿನಲ್ಲಿ ಬಂಧಿಸಿದೆ. ಈ ಕತೆಯು ಯಾವ ಭಾವುಕತೆಯೂ ಇಲ್ಲದೆ ತಾಯ್ತನದ ಬಗ್ಗೆ ಒಂದು ಹೊಸ ಚಿತ್ರವನ್ನೇ ಕಟ್ಟಿಕೊಡುತ್ತದೆ. ತಾಯಿ ಅನ್ನುವ ಸ್ಥಿರ ಚಿತ್ರದಿಂದ ಭಿನ್ನವಾದ ಚಿತ್ರಣ ಇಲ್ಲಿದೆ. ಕತೆಯ ಅಂತ್ಯದಲ್ಲಿ ತನ್ನ ಕೂಸು ಭಿನ್ನವಾದ ಲೈಂಗಿಕತೆಯನ್ನು ಅನುಭವಿಸುತ್ತಿರುವದನ್ನು ಅವಳು ಸಂತಸದಿಂದೆಯೇ ನೋಡುತ್ತಾಳೆ. ಅಮೆರಿಕಕ್ಕೆ ಬಂದು ಬಸುರಿಯಾಗಿ ಸಂಗಾತಿ ಜವಾಬ್ದಾರಿ ಹೊರಲು ಸಿದ್ಧನಾಗದಿದ್ದರಿಂದ ಒಂಟಿ ತಾಯಿಯಾಗಿ ತನ್ನ ಕೂಸನ್ನು ಬೆಳೆಸಿದ ನಿರೂಪಕಿಗೆ ಬದುಕುವುದು ಕಷ್ಟವೋ ಬರೆಯುವುದು ಕಷ್ಟವೋ ಎನ್ನುವ ಸಂದಿಗ್ಧವಿದೆ. ಇತ್ತೀಚೆಗೆ ಕನ್ನಡದಲ್ಲಿ ಬಂದಿರುವ ಅಪರೂಪದ ಕತೆಗಳಿಗೆ ಈ ಕತೆಯೂ ಒಂದು ಮೌಲಿಕ ಸೇರ್ಪಡೆಯಾಗಿದೆ.

ಈಗಾಗಲೇ ಪ್ರಬುದ್ಧ ಬರಹಗಾರರೆಂದು ಹೆಸರು ಮಾಡಿದ ಗುರುಪ್ರಸಾದ ಕಾಗಿನೆಲೆಯವರ 'ಅನೀಟಳ ಹೊಲಿಗೆಗಳು' ಕೂಡ ಇದೇ ಮಟ್ಟದ ಕತೆಯಾಗಿದೆ. ಕತೆಯ ಶುರುವಾತಿನಲ್ಲಿಯೇ ನಿರೂಪಕನು "ಇತ್ತೀಚೆಗೆ ಮನುಷ್ಯರ ನೈಜ ಸಂತಸಕ್ಕೂ ಪ್ರಾಮಾಣಿಕವಾಗಿ ಖುಷಿಪಡುವುದಕ್ಕೂ ನನಗೆ ಹೆದರಿಕೆಯಾಗುತ್ತದೆ" ಎನ್ನುತ್ತಾನೆ. ಅವನು ಹೇಳುವ ಅನೀಟಳ ಕತೆ ಅವನ ಈ ಭಾವನೆಗೆ ಪೂರಕವಾಗಿಯೇ ಇದೆ. ಅನೇಕ ವರ್ಷಗಳಿಂದ ರಾತ್ರಿ ಪಾಳಿ ಮಾಡುತ್ತಿರುವ ನಿರೂಪಕನಿಗೆ ಮನುಷ್ಯ ವ್ಯಕ್ತಿಗಳ ರಾತ್ರಿಗುಟ್ಟುಗಳು ಪರಿಚಿತವಾಗಿವೆ. ಏಕೆಂದರೆ ಪ್ರೇಮ ಕಾಮದ ಸಂಬಂಧಗಳಲ್ಲಿ ಅಡಕವಾಗಿರುವ ಹಿಂಸೆಯನ್ನು ಆತ ಕಂಡಿದ್ದಾನೆ. ಈ ಹಿಂಸೆಯು ದೈಹಿಕವಾದಾಗ ಅದರ 'ಮೊಹರುಗಳಾದ' ಗಾಯಗಳನ್ನು ಹೊಲಿಯುವುದು ಈ ಡಾಕ್ಟರ್‌ನ ಕೆಲಸವಾಗಿದೆ. ಗಾಯಗಳನ್ನು ಹೊತ್ತು ಬರುವವರಲ್ಲಿ ಹೆಣ್ಣುಗಳ ಸಂಖ್ಯೆಯೇ ಜಾಸ್ತಿ. ಗಾಯುಗಳನ್ನು ಹೊಲಿಯುವ ಕೆಲಸದಲ್ಲಿ ಸಹಾಯಕಿಯಾಗಿರುವ ಅನೀಟಳ ಪ್ರಕಾರ ದೈಹಿಕ ಹಿಂಸೆಗೆ ಬಲಿಯಾದ ಹೆಂಗಸರು 'ಗಂಡಿನ ಬೀಜವನ್ನು ಕತ್ತರಿಸಿಬಿಡುವುದೇ ಪರಿಹಾರ. ಆದರೆ ಹೊಲಿಗೆ ಹಾಕಿಸಿಕೊಂಡ ಮೇಲೆ ಅದೇ ಗಂಡಿನ ಜೊತೆಗೆ ನಗುತ್ತಾ ವಾಪಸ್ಸು ಹೋಗುವ ಹೆಣ್ಣುಗಳೇ ಜಾಸ್ತಿ'. ಅನೀಟಳ ಸ್ವಂತದ ಬದುಕು ಬೇರೆಯಾಗಿಲ್ಲ, ಅವಳ ಗಂಡ ಟೋನಿ ಆಕೆಗೆ ಇಂಥದೇ ಹಿಂಸೆ ಕೊಟ್ಟಿದ್ದಾನೆ. ಪ್ರತಿ ಸಾರಿ ನಿರೂಪಕ ಡಾಕ್ಟರ್‌ನೇ ಅವಳ ಗಾಯಗಳನ್ನು ರಿಪೇರಿ ಮಾಡುತ್ತಿರುತ್ತಾನೆ. ಈಗ ಅವಳು ಟೋನಿಯನ್ನು ಬಿಟ್ಟು ತನ್ನ ಗೆಳತಿ ಜ್ಯಾಕಿಯ ಜೊತೆಗೆ

ಅವಳು....

ಇರಲು ನಿರ್ಧರಿಸಿದ್ದಾಳೆ, ಹಾಗೆ ಮಾಡುತ್ತಾಳೆ ಕೂಡ. ಆದರೆ ಜ್ಯಾಕಿಗೆ ಜ್ಯಾಕ್ ಆಗಿ ಗಂಡಸಾಗುವ ಇಚ್ಛೆ. ಆ ಪ್ರಯತ್ನದಲ್ಲಿ ತೊಡಗುತ್ತಾಳೆ. ಆದರೆ ಶರೀರಕ್ಕೆ ತನ್ನದೇ ವಿಧಿ ಇದೆಯಲ್ಲ. ಅಷ್ಟು ಮಾತ್ರವಲ್ಲ ಗಂಡು ದೇಹದ ಜೊತೆಗೆ ಗಂಡು ವ್ಯಕ್ತಿತ್ವವನ್ನು ಆವಾಹಿಸಿಕೊಳ್ಳುತ್ತಾಳೆ. ಗಂಡಿನಂತೆ ಅನೀಟಳ ಜೊತೆಗೆ ಸಂಭೋಗ ಮಾಡಲು ಆಗದೆ ಅವಳ ಮೇಲೆ ಆಕ್ರಮಣ ಮಾಡಿ ಹೊಡೆಯುತ್ತಾಳೆ. ಅನೀಟ ಮತ್ತೆ ಗಾಯಗಳ ರಿಪೇರಿಗಾಗಿ ಡಾಕ್ಟರ್-ನಿರೂಪಕನ ಮನೆಗೆ ಬರಬೇಕಾಗುತ್ತದೆ. ಬಹು ಸಂಕೀರ್ಣವಾದ ಈ ಕತೆಯನ್ನು ಸಂಗ್ರಹಿಸಿ ಹೇಳುವುದು ಅಸಾಧ್ಯ. ಅನೀಟ ಕೇಳುವ ಪ್ರಶ್ನೆಗಳಿಗೆ ಉತ್ತರವೇ ಇಲ್ಲ. ಅವಳ ಪ್ರಕಾರ ಅವಳು 'ಟೂ ಮಚ್ ಆಫ್ ಎ ವುಮನ್' ಆಗಿದ್ದಾಳೆ. ಈಗ ಜ್ಯಾಕಿ ಸಲಿಂಗಿ ಪ್ರೇಮಿಯಾಗುವ ಬದಲು ಗಂಡನಾಗಲು ಹೊರಟಿದ್ದಾಳೆ. ಅವರು ನಿಜವಾಗಿ ಹುಡುಕುತ್ತಿರುವುದು ಸಂಪೂರ್ಣ ವ್ಯಕ್ತಿಯನ್ನು. ಇಷ್ಟೇ ಮುಖ್ಯವಾಗಿ ನಿರೂಪಕನ ನಂಬಿಕೆಗಳು ಈ ಕತೆಗೆ ಮುಖ್ಯವಾಗಿವೆ. ಲಿಂಗತ್ವ ಎನ್ನುವುದು fluid, ಅದು ಆಯ್ಕೆಯ ಪ್ರಶ್ನೆ, ಶಾರೀರಿಕ ವಿಧಿಯಲ್ಲ ಎನ್ನುವುದನ್ನು ಈಗ ನಾವೆಲ್ಲ ಒಪ್ಪಿಕೊಂಡಿದ್ದೇವೆ. ಆದರೆ ಮನುಷ್ಯರ ಅಂತರಂಗದ ಸಂದಿಗ್ಧಗಳನ್ನು ಬಲ್ಲವರಾರು? ಗುರುಪ್ರಸಾದರ ಈ ಕತೆಯು ಎತ್ತುವ ಪ್ರಶ್ನೆಗಳಿಗೆ ಉತ್ತರವನ್ನು ಕಾಲವೇ ಮುಂದೆ ಕೊಡಬೇಕು. ಇಂಥ ವಸ್ತುವಿನ ಬಗ್ಗೆ ಇಷ್ಟು ಪ್ರಬುದ್ಧವಾದ ಕತೆಯನ್ನು ಕನ್ನಡದಲ್ಲಿ ಓದಿದ್ದು ನನಗೆ ನೆನಪಿಲ್ಲ.

'ತಲಾಂತರ-ತಿಳಿವಿನಂತರ' ಕತೆಯು ಜೆಂಡರ್ ಪ್ರಶ್ನೆಯನ್ನು ಸ್ವಲ್ಪ ಹಗುರವಾಗಿ ಆದರೆ ಅರ್ಥಪೂರ್ಣವಾಗಿ ಎತ್ತುತ್ತದೆ. ಮದುವೆಯ ಹಳೆಯ ಸಂಪ್ರದಾಯಗಳ ಹಿಂದಿರುವ ಪುರುಷ ಪ್ರಾಧಾನ್ಯವನ್ನು ಹೊಸ ತಲೆಮಾರಿನ ಮಗಳು ತೀವ್ರವಾಗಿ ವಿರೋಧಿಸುತ್ತಾಳೆ. ಆದರೆ ಇವುಗಳ ಆಚೆಗೆ ತಾಯಿಗೆ ತನ್ನ ಬದುಕಿನ ಬಗ್ಗೆ ಪ್ರಶ್ನೆಗಳಿವೆ. ಅಲ್ಲದೆ ಮದುವೆ ಎನ್ನುವ ಸಂಸ್ಥೆಯು (institution) ಗಂಡು-ಹೆಣ್ಣಿನ ನಡುವಿನ ಅಸಮಾನತೆಯನ್ನು ಸಹಜಗೊಳಿಸಿಬಿಟ್ಟು ನಮ್ಮನ್ನು ಒಪ್ಪಿಸಿಬಿಡುತ್ತದೆ ಎನ್ನುವ ಅರಿವೂ ಇದೆ. ಮಗಳಿಗೆ ತಾಯಿ ನಿರ್ದಯಿ ಸಂಪ್ರದಾಯಸ್ಥೆಯಾಗಿ ಕಾಣುತ್ತಾಳೆ. ಹೊಸ ತಲೆಮಾರು ಪ್ರಕೃತಿ, ನೈಸರ್ಗಿಕ ಇವೇ ಮುಂತಾದ ಮಾತುಗಳನ್ನು ಒಪ್ಪುವುದೇ ಇಲ್ಲ. ಯಾವುದು ನಾರ್ಮಲ್, ಯಾವುದು ಅಲ್ಲ ಅನ್ನುವುದರ ಬಗ್ಗೆ ಈ ತಲೆಮಾರಿಗೆ ಬೇರೆ ನಿಲುವುಗಳೇ ಇವೆ. ಸಂಗ್ರಹದ ಅನೇಕ ಕತೆಗಳಲ್ಲಿ ಜೆಂಡರ್ ಪ್ರಶ್ನೆಯು ಮರುಕಳಿಸುತ್ತದೆ.

"ಅಹಲ್ಯಾ... ದ್ರೌಪದಿ... ತಾರಾ..." ಈ ಕತೆಯ ವಸ್ತು ಒಂದು ಕಾದಂಬರಿಗೆ ಸೂಕ್ತವೆನ್ನುವಂತಿದೆ. ಕಾನಕಾನಹಳ್ಳಿಯ ರಾಣಿ ನಡುವಯಸ್ಸಿನಲ್ಲಿ ಈಗ ಅಮೆರಿಕದಲ್ಲಿ ಶಿಕ್ಷಣ ಮುಂದುವರೆಸಲು ನಿರ್ಧರಿಸುತ್ತಾಳೆ ಒಬ್ಬ ಸಂಶೋಧಕಿಯಾಗಿ, ಬರಹಗಾರ್ತಿಯಾಗಿ ಹೆಸರು ಮಾಡುತ್ತಾಳೆ. ಗಂಡನು ಸ್ವಯಂ ನಿವೃತ್ತಿ ಪಡೆದುಕೊಂಡು ಮನೆ ನೋಡಿಕೊಳ್ಳಲು ಆರಂಭಿಸುತ್ತಾನೆ. ಹೀಗೆ ಪತಿ-ಪತ್ನಿಯರ ಸಾಂಪ್ರದಾಯಿಕ ಸಾಮಾಜಿಕ ಪಾತ್ರಗಳು ಅದಲುಬದಲಾಗುತ್ತವೆ. ಕತೆಯ ಉದ್ದಕ್ಕೂ ಪುರುಷ ಪ್ರಾಧಾನ್ಯದ ಬಗ್ಗೆ ತೀಕ್ಷ್ಣವಾದ ಪ್ರಶ್ನೆಗಳಿವೆ. ಹೀಗೆ ಪಾತ್ರಗಳ ಬದಲಾವಣೆ ದಾಂಪತ್ಯದ ಒಳಗಡೆ ಸುಲಭವಲ್ಲ. ಕತೆಯು

ಅಂತಃಕರಣದಿಂದ ಆದರೆ ಅಷ್ಟೇ ಖಚಿತವಾಗಿ ಒಬ್ಬ ಮಹಿಳೆ ತನ್ನ ಸ್ವಾಯತ್ತತೆಯನ್ನು ಹುಡುಕುವ ಪ್ರಕ್ರಿಯೆಯ ಅನೇಕ ಮಗ್ಗಲುಗಳನ್ನು ಪರೀಕ್ಷಿಸುತ್ತದೆ. ಕತೆಯ ಕೊನೆಗೆ ಇದು ನಾನು ಗೆಳೆಯನ ಕೋರಿಕೆಗಾಗಿ ಬರೆದ ಕತೆಯೆಂದು ನಿರೂಪಕ ಹೇಳಿಕೊಳ್ಳುತ್ತಾನೆ. ಅಲ್ಲದೆ ಕತೆಯನ್ನು ಓದಿದ ಕೆಲವರ ಪ್ರತಿಕ್ರಿಯೆಗಳನ್ನು ದಾಖಲಿಸುತ್ತಾನೆ. ಈ ಸಂಗ್ರಹದ ಅನೇಕ ಕತೆಗಳಲ್ಲಿ ಯಾವುದು ಕತೆ, ಯಾವುದು ವಾಸ್ತವ, ಕತೆಗಳ ಆಚೆಗೆ ವಾಸ್ತವವೆನ್ನುವುದು ಇದೆಯೇ ಎನ್ನುವ ಆಧುನಿಕೋತ್ತರ ಚರ್ಚೆಗಳಿವೆ. ಸಲ್ಮಾನ್ ರಶ್ದಿಯ Victory City ಕಾದಂಬರಿಯ ಬಗೆಗಿನ ಲೇಖನದಲ್ಲಿ ಸಾಮ್ರಾಜ್ಯಗಳ ಜಯಾಪಜಯಗಳು ಅನಿಶ್ಚಿತ, ಆದರೆ ಪದಗಳ / ಬರಹದ ವಿಜಯ ಮಾತ್ರ ನಿಶ್ಚಿತ ಎನ್ನುವ ಆ ಕಾದಂಬರಿಯ ಮುಕ್ತಾಯದ ಬಗ್ಗೆ ಚರ್ಚೆ ಇದೆ. ಹಾಗೆಯೇ ಆ ಕಾದಂಬರಿಯ ಪ್ರಮುಖ ಪಾತ್ರ ಮತ್ತು ನಿರೂಪಕಿಯಾದ ಪಂಪಕಂಪನಾ, ಇನ್ನೊಂದು ಪಾತ್ರವಾದ ವಿದ್ಯಾಸಾಗರ ಇವರು ಹೊಸ ಅವತಾರದಲ್ಲಿ ಬರುವ ಕತೆಯೂ ಪ್ರಸ್ತುತ ಸಂಗ್ರಹದಲ್ಲಿದೆ ('ಕಥನ ಬಿತ್ತಿ ಇತಿಹಾಸ ಬೆಳೆದ ಕವಿ ಪಂಪಕಂಪನಾ'). ಸಂಶೋಧಕಿ ಡಾ. ಗಂಗಾದೇವಿ, ಪಂಪಕಂಪನಾಳಂತೆ ನಿರೂಪಕಿಯೂ ಆಗಿದ್ದಾಳೆ. ಅವಳ ಸಂಶೋಧನಾ ಮಾರ್ಗದರ್ಶಕನಾಗಿದ್ದ ವಿದ್ಯಾಸಾಗರ-ನಿಂದ ಅವಳಿಗಾದ ಅನ್ಯಾಯದ ಬಗ್ಗೆ ಅವಳು ಹೇಳಿಕೊಳ್ಳುತ್ತಾಳೆ. ಹೀಗೆ ಒಂದು ಕತೆ ಇನ್ನೊಂದು ಕಾದಂಬರಿಯ ಜೊತೆಗೆ ಉದ್ದೇಶಪೂರ್ವಕವಾಗಿ ಹೊಂದಿರುವ intertextualityಯ ಪ್ರಯೋಗಶೀಲತೆಯು ಗಮನ ಸೆಳೆಯುವಂತಿದೆ 'ಕಥನ ಬಿತ್ತಿ ಇತಿಹಾಸ ಬೆಳೆದ ಕವಿ ಪಂಪಕಂಪನಾ'. ಈ ಕತೆಯು ಪ್ರಯೋಗಶೀಲವಾದ ನಿರೂಪಣೆ ಹಾಗೂ ಜೋಡಣೆಯಿಂದ ಗಮನ ಸೆಳೆಯುತ್ತದೆ. ಸಲ್ಮಾನ್ ರಶ್ದಿಯ ಕಾದಂಬರಿಯ ಕಿರು ಪರಿಚಯ ಮಾಡಿಕೊಟ್ಟು ಅಲ್ಲಿಂದ ಕತೆ ಆರಂಭವಾಗುತ್ತದೆ. ಇಡೀ ಕತೆ ಒಂದು ಸಂವಾದ ರೂಪದಲ್ಲಿದ್ದು ಪಂಪಕಂಪನಾ / ಡಾ. ಗಂಗಾದೇವಿ ಈ ಮುಖಾಮುಖಿಯಲ್ಲಿ ಆಡುವ ಮಾತುಗಳೇ ಕತೆಯಾಗಿ ಬಂದಿವೆ. ರಶ್ದಿ ಕಾದಂಬರಿಯಲ್ಲಿ ಸ್ತ್ರೀ ಪರವಾದ ನಿಲುವುಗಳನ್ನು ಅಂದಿನ ಯುಗಕ್ಕೂ ಮೀರಿದ ಹಾಗೆ ಅನುಷ್ಠಾನಕ್ಕೆ ತರಲು ಪ್ರಯತ್ನಿಸಿದ ರಾಣಿಯು, ಆ ಕುರಿತು ಬರೆದ ಕವಿಯೂ, ಈ ಕತೆಯ ನಿರೂಪಕಿ ಎಲ್ಲಾ ಒಂದೇ ಆಗಿದ್ದಾರೆ.

ಈ ಕತೆಯ ಬುನಾದಿಯಲ್ಲಿ ಮತ್ತೆ ಅದೇ ಪ್ರಶ್ನೆಯಿದೆ. ಅನುಭವದಿಂದ ಕಥನವೊ, ಕಥನದಿಂದ ಅನುಭವವೋ? ಯಾವುದು ಕಟ್ಟುಕತೆ, ಯಾವುದು ಕಟ್ಟಿದ ಕತೆ ಮತ್ತು ಯಾವುದು ಚರಿತ್ರೆ? ಹೀಗೆ ಕತೆಯ ಹಂದರದೊಳಗೆ ಒಂದು ತಾತ್ವಿಕ ಹುಡುಕಾಟವಿದೆ. ಗಂಗಾದೇವಿ, ಮಂಡನ ಯೂನಿವರ್ಸಿಟಿಯಲ್ಲಿ ಬಯೋಟೆಕ್ ಓದಿ ಸಂಶೋಧಕಿಯಾದವಳು. ಅವಳ ಗುರು ಪ್ರೊ. ವಿದ್ಯಾಸಾಗರರ ಮೆಚ್ಚಿನ ವಿದ್ಯಾರ್ಥಿನಿ. ಮಹಾ ವಿದ್ವಾಂಸರಾದ ಅವರು ವೈಯಕ್ತಿಕ ಜೀವನದಲ್ಲಿ 'ವಾಂಛೆಯ ಮಂತ್ರಗಳನ್ನು' ಜಪಿಸಿದವರು. ಕತೆಯ ನಿಜವಾದ ವಸ್ತುವೆಂದರೆ ಪುರುಷಪ್ರಾಧಾನ್ಯವೆನ್ನುವುದು. ಹೇಗೆ ಶಿಕ್ಷಣ, ಸಂಶೋಧನೆ ಸಂಸ್ಥೆಗಳಲ್ಲಿ ಗೋಚರವಾಗಿ, ಅಗೋಚರವಾಗಿ ಕೆಲಸ ಮಾಡುತ್ತದೆಯೆನ್ನುವುದಾಗಿದೆ. ಈ

ಸಂಗ್ರಹದ ಎರಡನೇ ಭಾಗದಲ್ಲಿ ಮೂವರು ಅಸಾಮಾನ್ಯ ಮಹಿಳಾ ಸಂಶೋಧಕಿಯರು, ವಿಜ್ಞಾನಿಗಳ ಜೀವನ ಚರಿತ್ರೆಗಳಿವೆ. ಡಾ. ಗಂಗಾದೇವಿ ಸಂಸ್ಥೆಗಳ ಬಗ್ಗೆ ಹೇಳಿದ್ದು ಈ ಮೂವರ ಜೀವನದಲ್ಲೂ ನಿಜವಾಗಿದೆ. ಡೈನಾಸಾರ್‌ಗಳ ಅಧ್ಯಯನಕ್ಕೆ ಬುನಾದಿ ಹಾಕಿಕೊಟ್ಟ ಮೇರಿ ಆನಿಂಗ್ ಅಪೂರ್ವವಾದ ಸಸ್ಯಶಾಸ್ತ್ರಜ್ಞೆ ಆಗಿದ್ದಂಥ ಝಾನ್ ಬ್ಯಾರೆ, ಮತ್ತು ನಕ್ಷತ್ರಗಳ ಮೂಲ ಸ್ವರೂಪದ ಬಗ್ಗೆ ಸಂಶೋಧನೆ ಮಾಡಿದ ಸಿಸಿಲೀಯಾ ಇವರುಗಳನ್ನು ಪುರುಷ ಪ್ರಧಾನ ಜ್ಞಾನಸಂಸ್ಥೆಗಳು ಹೊರಗಿಟ್ಟವು. ಅವರ ಸಂಶೋಧನೆಗೆ ಮನ್ನಣೆ ಕೊಡಲಿಲ್ಲ. ಅಸಾಮಾನ್ಯವಾದ ಪ್ರತಿಭೆ ಹಾಗೂ ಛಲದಿಂದ ಅವರು ತಮ್ಮ ಸಾಧನೆಯನ್ನು ಮಾಡಿದರು. ಕಲ್ಪಿತ ಕತೆಯ ವಿದ್ಯಾಸಾಗರನು ಪಂಪಕಂಪನಾಳ ಮೇಲೆ ಅತ್ಯಾಚಾರ ಮಾಡಿದ್ದರೆ, ಈ ಸಾಧಕಿಯರು ಅನುಭವಿಸಿದ ಅವಜ್ಞೆ, ಹಿಂಸೆ, ದೈಹಿಕ ಶ್ರಮ ಸಾಮಾನ್ಯವಲ್ಲ, ಈಗ ಗಂಗಾದೇವಿ ಕೂಡ ಇಂಥ ಸಂಸ್ಥೆಯೊಂದರಲ್ಲಿ ಬಲಿಪಶು ಆಗಿದ್ದಾಳೆ. ನೀವೇಕೆ ಪ್ರತಿರೋಧ ಮಾಡಲಿಲ್ಲ, compromise ಮಾಡಿಕೊಂಡಿರಿ ಎಂದು ಕೇಳುವುದು ಸುಲಭ. ಆದರೆ ಸಂಸ್ಥೆಗಳನ್ನು ಬಲ್ಲವರಿಗೆ ಉತ್ತರ ಗೊತ್ತಿದೆ. ಕತೆಯ ಒಂದು ಮುಖ್ಯ ಭಾಗವು ಇಂದಿನ ಜಗತ್ತಿನಲ್ಲಿ narrativeಗಳ ಸ್ಥಾನದ ಬಗ್ಗೆ ಇದೆ. ಈ ಮುನ್ನುಡಿಯಲ್ಲಿ ಅದನ್ನು ಚರ್ಚಿಸುವುದು ಸಾಧ್ಯವಿಲ್ಲ. ಕುತೂಹಲದ ಸಂಗತಿಯೆಂದರೆ ನಾನು ಹೇಳಿದ ಹಾಗೆ ಅನೇಕ ಕತೆಗಳಲ್ಲಿ ಇದು ಜಿಜ್ಞಾಸೆಯ ವಿಷಯವಾಗಿ ಬಂದಿದೆ.

'ಧ್ವನಿ' ಕತೆಯಲ್ಲಿ ಪ್ರಾಂಜಲಿ ಎನ್ನುವ ಬರಹಗಾರ್ತಿ activist ಮೇಲೆ ನಡೆದ ಕೊಲೆ ಪ್ರಯತ್ನದ ಬಗ್ಗೆ ಇದೆ. ಹಾಗೆ ನೋಡಿದರೆ ಅವಳು ತುಂಬಾ radical ಆದ ಸ್ತ್ರೀವಾದವನ್ನು ಹೇಳಿದವಳಲ್ಲ. ಜೀವನ ಶೈಲಿಗಳನ್ನು ಬದಲಾಯಿಸುವ ಬಗ್ಗೆ ಅವಳ ಮಾತುಗಳಿವೆ. ಆದರೆ ಇದು ಕೂಡ ಅಸಹನೆಗೆ ಕಾರಣವಾಗುತ್ತದೆ. ಹಿಂಸೆಗೆ ಕಾರಣವಾಗುತ್ತದೆ. ಮೀರಾ ಅವರ 'ತೊಟ್ಟಿಲು' ಕತೆ ಮತ್ತೆ ಹೊಸ ತಲೆಮಾರಿನ ಲಿಂಗತ್ವ ಆಯ್ಕೆಯ ತಳಮಳಗಳ ಬಗ್ಗೆ ಇದೆ. ಜೋನ್ಯಾತನ್ ಜೋಸೆಫೀನ್ ಆಗುವ ದಿಗಿಲು, ಆಯ್ಕೆ, ನೋವು ಇವುಗಳ ಬಗೆಗಿನ ಮೃದುವಾದ ಕತೆ ಇದು. ಅವನಿಗೆ ಹತ್ತಿರದ support group ತುಂಬಾ ಅಂತಃಕರಣದಿಂದ ಸ್ಪಂದಿಸುತ್ತದೆ. ಈ ಸಂಗ್ರಹದ ಕತೆಗಳನ್ನು ಓದಿದಾಗ ಜೆಂಡರ್ ಸಂದಿಗ್ಧಗಳ ಬಗ್ಗೆ ಇಂಥ ತಿಳುವಳಿಕೆ, ಸಾಂತ್ವನ ಕೊಡುವ ವ್ಯಕ್ತಿಗಳಿದ್ದಾರೆ ಎನ್ನುವ ಆಶಾದಾಯಕ ನಂಬಿಕೆ ಹುಟ್ಟಿಕೊಳ್ಳುತ್ತದೆ. ಇಂದಿನ ಇನ್ನೊಂದು ಹೊಸ ಮನ್ವಂತರದಲ್ಲಿ ಗಂಡು ಹೆಣ್ಣುಗಳು ಹೊಸದಾದ ಸವಾಲುಗಳನ್ನು ಎದುರಿಸುವಾಗ ಇಂಥ ಸಹಾನುಭೂತಿ ಇಲ್ಲದಿದ್ದರೆ ಮನುಷ್ಯ ಜೀವಿಗಳಿಗೆ ಉಳಿಗಾಲವಿಲ್ಲ. ಇಂದಿನ ಕತೆಯೊಂದಿಗೆ ಇಲ್ಲಿ ಹೆಣಿಗೆಯಾಗುವುದು ಗತಕಾಲದ ವೆಂಕಟಲಕ್ಷ್ಮಿಯ ಬದುಕಿನ ವಿದ್ಯಮಾನಗಳು. ಅವಳು ಬಯಸಿದ್ದೂ ಸ್ವಾಯತ್ತತೆ. ತನ್ನ ಬದುಕು ತನ್ನದೇ ಎನ್ನುವ ಹಾಗೆ ಬದುಕಲು ಅವಳು ಬಯಸಿದ್ದಳು. ಹೀಗೆ ಇದೊಂದು ಮುಗಿಯಲಾರದ ತಲತಲಾಂತರದ ಯುದ್ಧವೇ ಆಗಿದೆ.

'ಆಗ್ರಹ ಯಾತ್ರೆ' ಜನಾಂಗೀಯ ವಾದಕ್ಕೆ ಬಲಿಯಾದ ಇಬ್ಬರು ವ್ಯಕ್ತಿಗಳ ಬಗ್ಗೆ ಇದೆ. ಒಬ್ಬ ಜಾರ್ಜ್ ಫ್ಲಾಯ್ಡ್ ಎನ್ನುವ ವ್ಯಕ್ತಿ ಪೊಲೀಸರ ಹಿಂಸೆಗೆ ಬಲಿಯಾದವನು. ಆ

ಘಟನೆ ಇಡೀ ಅಮೇರಿಕವನ್ನು ತಲ್ಲಣಗೊಳಿಸಿತ್ತು. ಇನ್ನೊಬ್ಬ ಈ ಕತೆಯಲ್ಲಿ ಬರುವ ಟಿಮತಿ ವಿಲ್ಸನ್. ಪ್ರಾಯಶಃ ಅವನ ತಾಯಿಯಾಗಿರುವವಳು ಅವನ ಕತೆಯನ್ನು ನಿರೂಪಕಳಿಗೆ ಹೇಳುತ್ತಾಳೆ. ಇದು ದಾರುಣವಾದ ಕತೆ. ಟಿಮತಿ ಭಿನ್ನವಾಗಿ ಯೋಚಿಸುವ, ಭಿನ್ನವಾಗಿ ಬದುಕಲು ಪ್ರಯತ್ನಿಸಿದ ವ್ಯಕ್ತಿ. 'ಗಂಡು' ಎನ್ನುವ ಕಲ್ಪಿತ ವ್ಯಕ್ತಿತ್ವದ ಲಕ್ಷಣಗಳನ್ನು ತಿರಸ್ಕರಿಸಿ ತನ್ನ ಭಿನ್ನ ವ್ಯಕ್ತಿತ್ವ ರೂಪಿಸಿಕೊಂಡವನು. ಹಾಗೆ ಮಾಡಿದ್ದಕ್ಕಾಗಿ ಗೆಳೆಯರಿಂದ ಸಮುದಾಯದಿಂದ ಅಪಮಾನಕ್ಕೆ ಬಲಿಯಾದವನು. ಇತ್ತೀಚೆಗೆ ಎಚ್. ಎಸ್. ಶ್ರೀಮತಿ–ಯವರು ಕನ್ನಡಕ್ಕೆ ಅನುವಾದಿಸಿದ ಬೆಲ್ ಹುಕ್ಸಳ ಕೃತಿಯಲ್ಲಿ ಇಂಥದರ ಅನೇಕ ಪ್ರಸ್ತಾಪಗಳು ಬರುತ್ತವೆ. (Bell Hooks - The Will to Change). ಮೃದುವಾಗಿ non-aggresive ಆಗಿ ಇರುವ ಪುರುಷರನ್ನು ಸಮಾಜವು ಹೆಣ್ಣಿಗರನ್ನಾಗಿ, ವಿಕ್ಷಿಪ್ತರನ್ನಾಗಿ ನೋಡುತ್ತದೆ. ದುರಂತವೆಂದರೆ ಒಂದು ನೊಣವನ್ನೂ ಹಿಂಸಿಸದ ಟಿಮತಿ ಯಾರೋ ಕೊಟ್ಟ ದೂರಿನಿಂದಾಗಿ ಪೊಲೀಸ್ ದೌರ್ಬಲ್ಯಕ್ಕೆ ಬಲಿಯಾಗುತ್ತಾನೆ. ಪುರುಷ ಪ್ರಾಧಾನ್ಯ ಮತ್ತು ಪೊಲೀಸ್ ಕ್ರೌರ್ಯ ಇವೆರಡೂ ಈ ದುರಂತದ ಹಿಂದಿವೆ. ಇಂಥ ಟಿಮತಿಯ ಮೇಲಾದ ಅನ್ಯಾಯದ ವಿರುದ್ಧ ಒಂದು poster ಹಿಡಿದುಕೊಂಡು ಆ ಮಹಿಳೆ ಕುಳಿತಿದ್ದಾಳೆ. ಅವಳಿಗೆ ತಡೆಯಲಾಗದ ದುಃಖ. ಕತೆಯ ಕೊನೆಗೆ ಅವಳಿಂದ ಆ poster ಪಡೆದ ಜೋಡಿಯೊಂದು ಅಲ್ಲಿ ಕೂರುತ್ತದೆ. ಹೀಗೆ ಒಂದು poster ಪ್ರತಿರೋಧದ ಜೀವಂತ ಸಂಕೇತವಾಗುತ್ತದೆ. ಅನ್ಯಾಯದ ವಿರುದ್ಧ ಮಿಡಿಯುವ ಮನಸ್ಸುಗಳೂ ಇವೆ ಎನ್ನುವ ನಂಬಿಕೆಯೊಂದಿಗೆ ಈ ಕತೆ ಮುಗಿಯುತ್ತದೆ.

ತಂದೆಯಿಂದಲೇ ದೌರ್ಜನ್ಯಕ್ಕೆ ಒಳಗಾಗಿ ಈಗ ಬದುಕು ನಡೆಸುವುದಕ್ಕಾಗಿ Strippers Clubನಲ್ಲಿ ದುಡಿಯುವ ಹುಡುಗಿಯ ಕತೆ ಕೂಡ ಪ್ರಭಾವಿಯಾಗಿದೆ.

ಈ ಸಂಗ್ರಹದಲ್ಲಿರುವ ಕತೆಗಳನ್ನು ಒಟ್ಟಿಗೆ ಓದಿದಾಗ ಅದೆಷ್ಟು ವಿಭಿನ್ನವಾಗಿದ್ದರೂ ಅವೆಲ್ಲ ಸೇರಿ ಒಂದು ದೊಡ್ಡ ಕತೆಯ ಭಾಗಗಳಾಗಿ ಕಾಣುತ್ತವೆ. ಪುರುಷಪ್ರಾಧಾನ್ಯ, ಜೆಂಡರ್ ಸಂದಿಗ್ಧಗಳು, ಹೆಣ್ಣಿನ ಸ್ವಾಯತ್ತತೆಯ ಹುಡುಕಾಟ ಇವು ಈ ಕತೆಗಳನ್ನು ಒಂದು ಆಕೃತಿಯಾಗಿ ಹೆಣೆದಿವೆ. ಈ ಕತೆಗಳಲ್ಲಿ ಕಂಡುಬರುವ ಪ್ರಬುದ್ಧತೆ, ಸೂಕ್ಷ್ಮತೆ ಹಾಗೂ ಸಂಕೀರ್ಣತೆಗಳು ನನಗಂತೂ ಹೊಸದಾದ ಅನುಭವವನ್ನು ನೀಡಿದವು. ಶ್ರೀಮಂತವಾದ ಕನ್ನಡ ಕಥಾಲೋಕಕ್ಕೆ ಇವು ಬೆಲೆಬಾಳುವ ಸೇರ್ಪಡೆಗಳು ಎಂದು ನನಗೆ ಅನ್ನಿಸಿತು. ಎಲ್ಲಾ ಕಾಲಘಟ್ಟಗಳು ತಮ್ಮದೇ ರೀತಿಯಲ್ಲಿ the woman questionಗೆ ಉತ್ತರಗಳನ್ನು ಹುಡುಕುವುದು ಅನಿವಾರ್ಯ. ಈ ಕತೆಗಳು ಒಂದು ಹೊಸ ಮನ್ವಂತರದ ಸೂಕ್ಷ್ಮ ದಾಖಲೆಗಳಾಗಿವೆ. ಸೈದ್ಧಾಂತಿಕ ಭರಾಟೆ ಹಟಮಾರಿತನವಿಲ್ಲದೆಯೆ ಪುರುಷ ಪ್ರಾಧಾನ್ಯದ ಅನೇಕ ಮುಖಗಳನ್ನು ತೆರೆದಿಡುತ್ತವೆ. ಬೆಲ್ ಹುಕ್ಸ್ ಹೇಳುವಂತೆ ಉಗ್ರ ಸ್ತ್ರೀವಾದವು ಗಂಡು–ಹೆಣ್ಣು ಎನ್ನುವ ಬೈನರಿಗಳನ್ನು (binary) ನೆಚ್ಚಿಕೊಂಡಿತ್ತು. ಅಲ್ಲಿಂದ ಮುಂದಿನ ಹೆಜ್ಜೆಯೆಂದರೆ ಜೆಂಡರ್ ಎನ್ನುವುದು ಮುಕ್ತ ಆಯ್ಕೆ ಎನ್ನುವ ನಂಬಿಕೆಯ ಕಡೆಗೆ ಚಲನೆ. ಇದೊಂದು ಸಂಕ್ರಮಣದ ಸಂದಿಗ್ಧದ ಹಂತವಾಗಿದೆ. ಕತೆಗಳು ನಿಚ್ಚಳವಾಗಿ

ಅಂತಃಕರಣದಿಂದ ನಮ್ಮ ಸಂವೇದನೆಯನ್ನು ತಿದ್ದಬೇಕಾದ ಕಾಲವಿದಾಗಿದೆ. ಈ ಸಂಗ್ರಹದ ಕತೆಗಳು ಈ ನೈತಿಕ ಜವಾಬ್ದಾರಿಯನ್ನು ಸಮರ್ಥವಾಗಿ ನಿರ್ವಹಿಸಿವೆ ಎಂದು ನಾನು ವಿಶ್ವಾಸದಿಂದ ಹೇಳಬಲ್ಲೆ.

**-II-**

ಈ ಸಂಗ್ರಹದಲ್ಲಿ ಒಟ್ಟು 23 ಲೇಖನಗಳಿವೆ. ಎಲ್ಲವೂ ಒಂದೇ ಮಟ್ಟದ್ದವು ಎಂದು ನಾನು ಹೇಳಲಾರೆ. ಕೆಲವು ಉತ್ಕೃಷ್ಟವಾಗಿವೆ. ಕೆಲವು ಇಲ್ಲಿರದಿದ್ದರೂ ಆಗಬಹುದಿತ್ತು. ಇಷ್ಟಾದರೂ ಈ ಬರಹಗಳ ವೈವಿಧ್ಯ, non-fictional ಬರಹಗಳಾದರೂ ಅವುಗಳಲ್ಲಿ ಕಾಣುವ ಸ್ವಂತಿಕೆ ಮತ್ತು ಪ್ರಯೋಗಶೀಲತೆಗಳು ಮನಸೆಳೆಯುತ್ತವೆ. ಅವು ಅನೇಕ ವರ್ಗಗಳಿಗೆ ಸೇರಿವೆ. ಕೆಲವು ಸಾಹಿತ್ಯ ವಿಮರ್ಶೆಯ ಮಾದರಿಯವು. ಇನ್ನು ಕೆಲವು ಸಂಶೋಧನೆ ಹಾಗೂ ವಿಸ್ತಾರವಾದ ಓದಿನ ಮೂಲಕ ಅಸಾಮಾನ್ಯ ಮಹಿಳೆಯರ ಸಾಹಸಗಳನ್ನು ವರ್ಣಿಸುವಂಥವು. (ನಾನು ಈಗಾಗಲೇ ಅವುಗಳ ಪ್ರಸ್ತಾಪವನ್ನು ಮಾಡಿದ್ದೇನೆ). ಕೆಲವು ಸ್ವಂತದ ಅನುಭವಗಳು, ನೆನಪುಗಳ ಮೂಲಕ ವಾದವನ್ನು ಮಂಡಿಸುವ ರೀತಿಯವು. ನನಗೆ ಉತ್ತಮ ಎಂದು ಅನ್ನಿಸದಿದ್ದ ಲೇಖನಗಳು ಕೂಡ ಅಪ್ರಾಮಾಣಿಕವಾಗಿಲ್ಲ. ಪ್ರಶ್ನಾರ್ಹವಾದ ಉದ್ದೇಶಗಳಿಗಾಗಿ ಬರೆದ ಲೇಖನಗಳಲ್ಲ. ಕೆಲವು ಲೇಖನಗಳು ತಮ್ಮ ಸ್ವಂತಿಕೆಯಿಂದಾಗಿ ಅಚ್ಚರಿ ಹುಟ್ಟಿಸುವಷ್ಟು ಸಶಕ್ತವಾಗಿವೆ. ಇಷ್ಟೊಂದು ಸಂಖ್ಯೆಯ ಸೂಕ್ಷ್ಮ ಮನಸ್ಸುಗಳೆಲ್ಲಾ ಅಮೆರಿಕಕ್ಕೆ ವಲಸೆ ಹೋಗಿವೆಯೆ ಎಂದು ನನಗೆ ಗಾಬರಿಯೂ ಆಯಿತು! ಇರಲಿ, ಎಲ್ಲಿದ್ದರೂ ಕನ್ನಡವೆನ್ನುವ ಕೂಡು ಕುಟುಂಬದ ಸದಸ್ಯರಲ್ಲವೆ?

ಶಿವರಾಮ ಕಾರಂತರ ಮೂಕಜ್ಜಿಯ ಕನಸುಗಳು ಬಗೆಗಿನ ಲೇಖನವು ಗಟ್ಟಿಯಾದ ಓದಿನ ಮೂಲಕ ಕೆಲವು ಹೊಸ ನೋಟಗಳನ್ನು ಕೊಡುತ್ತದೆ. "ಈ ಕಾದಂಬರಿ ಮಹಿಳೆಯರ ಕುರಿತಂತೆ ಒಂದು ಮಹತ್ವದ ಮುನ್ನಡೆ. ಏಕೆಂದರೆ ಇದು ಆಧ್ಯಾತ್ಮಿಕತೆಯು ಬ್ರಾಹ್ಮಣ ಪುರುಷರ ತತ್ವಜ್ಞಾನ ಮತ್ತು ಆಚಾರಗಳಲ್ಲಿ ಮಾತ್ರ ಇರುವುದಿಲ್ಲ, ಬದಲಿಗೆ ಮಹಿಳೆಯರ ದೈನಂದಿನ ಕೆಲಸಗಳಲ್ಲಿ ಅಡಗಿದೆ ಎಂದು ಪ್ರತಿಪಾದಿಸುತ್ತದೆ" ಎನ್ನುವುದು ಈ ಲೇಖನದ ಮುಖ್ಯ ಒಳನೋಟವಾಗಿದೆ. ಈ ಸಂಗ್ರಹದಲ್ಲಿ ಮುಂದೆ ಬರುವ ಇನ್ನೊಂದು ಲೇಖನದಲ್ಲಿ ವೀಣಾ ಶಾಂತೇಶ್ವರ ಹಾಗೂ ವೈದೇಹಿಯವರ ಕತೆಗಳ ತುಲನಾತ್ಮಕ ವಿಮರ್ಶೆ ಇದೆ. ಅಲ್ಲಿ ಕೂಡ ಈ ದೈನಂದಿನ ಬದುಕಿನ ಪ್ರಸ್ತಾಪವಿದೆ. ಭಾರತೀಯ ಸಂದರ್ಭದಲ್ಲಿ ಈ ದೈನಂದಿಕತೆಯ ಕಡೆಗಣಿಸಿ ಸ್ತ್ರೀವಾದದ ಬಗ್ಗೆ ಮಾತನಾಡುವುದು ಅಸಾಧ್ಯ. ಈ ಲೇಖನದ ಇನ್ನೊಂದು ಒಳನೋಟವೆಂದರೆ ಕಾರಂತರು ಹೆಣ್ಣಿನ ದೇಹದ ಮೇಲೆ ಹೆಚ್ಚು ಗಮನ ಹರಿಸಿದ್ದಾರೆ ಎನ್ನುವುದು. ಹೆಣ್ಣು ದೇಹ ಮತ್ತು ಮನಸ್ಸು ಇರುವ ಜೀವಿ ಎನ್ನುವುದನ್ನು ಹೇಳುತ್ತಲೇ ಈ ಕೃತಿ ಅವರನ್ನು ದೇಹಕ್ಕೆ ಸೀಮಿತಗೊಳಿಸುತ್ತದೆ ಎನ್ನುವ ವಾದವನ್ನು ಗಂಭೀರವಾಗಿ ಪರಿಶೀಲಿಸುವ ಅಗತ್ಯವಿದೆ.

ಇನ್ನೊಂದು ಲೇಖನದಲ್ಲಿ ಪುರುಷ ಬರಹಗಾರರು ಸಾಮಾಜೀಕರಣದಿಂದಾಗಿ ನಾವು ಪುರುಷರು ಅನೇಕ stereotypeಗಳಿಗೆ ಬಲಿಯಾಗಿರುವುದನ್ನು ಮತ್ತು ಹೆಂಡತಿ ಹಾಗೂ ಹೆಣ್ಣು ಮಕ್ಕಳ ಸಾನ್ನಿಧ್ಯದಿಂದಾಗಿ ಮನುಷ್ಯರಾಗುವ ಬಗ್ಗೆ ಪ್ರಾಮಾಣಿಕವಾಗಿ ಬರೆದಿದ್ದಾರೆ. ಪುರುಷ ಪ್ರಾಧಾನ್ಯದಿಂದ ಪುರುಷರು ಕಳೆದುಕೊಂಡದ್ದು ಬಹಳವಿದೆ.

ಮೇರಿ ಆನಿಂಗ್‌ಳ ಜೀವನದ ಕತೆ ಅದ್ಭುತವಾಗಿ ಮೂಡಿಬಂದಿದೆ. ಹದಿನೆಂಟನೇ ಶತಮಾನದ ಕೊನೆಗೆ ಇಂಗ್ಲೆಂಡ್‌ನ ಒಂದು ಸಣ್ಣ ಸಮುದ್ರತಟದ ಹಳ್ಳಿಯಲ್ಲಿ ಹುಟ್ಟಿ ಬದುಕಿದ ಈ ಅಸಾಮಾನ್ಯ ವ್ಯಕ್ತಿಯ ಸಾಧನೆ ದಂಗುಬಡಿಸುವಂತಿದೆ. ಆದರೆ ಆ ಕಾಲದಲ್ಲಿ ಮಹಿಳೆ ವಿಜ್ಞಾನ, ಸಂಶೋಧನೆಗಳಲ್ಲಿ ಮಾಡಿದ ಸಾಧನೆ ಅನಾಮಧೇಯವಾಗಿ ಉಳಿಯುತ್ತಿತ್ತು. ಅವಳ ಆತ್ಮೀಯರು, ಸಹಾಯ ಪಡೆದವರು ಕೂಡ ಅವಳ ಸಾಧನೆಯನ್ನು ನೆನಪಿಸಿಕೊಳ್ಳಲಿಲ್ಲ. ಸದ್ಯ ನಂತರದಲ್ಲಿ ಪುರುಷ ಪ್ರಧಾನ ವೈಜ್ಞಾನಿಕ ಸಂಸ್ಥೆಗಳು ಅವಳ ಅಸಾಧಾರಣ ಪ್ರತಿಭೆಯನ್ನು ಗುರುತಿಸಿದವು. ಹಾಗೆಯೇ ಫ್ರಾನ್ಸ್ ದೇಶದ ಝಾನ್ ಬ್ಯಾರೆ. ಅವಳು ಪುರುಷರ ವೇಷದಲ್ಲಿ ಅನ್ವೇಷಣೆಗಾಗಿ ಹೊರಟಿದ್ದ ಹಡಗಿನಲ್ಲಿ ಪಡಬಾರದ ಬವಣೆಗಳನ್ನು ಅನುಭವಿಸಿಯೂ ಸಂಶೋಧನೆ ಮುಂದುವರೆಸಿದ ಸಾಹಸಿ. ಅವಳ ಕತೆ ಇದೆ. ಇನ್ನೊಂದು ಲೇಖನದಲ್ಲಿ, ಸ್ಥಾಪನೆಯಾಗಿ 700 ವರ್ಷಗಳು ಕಳೆದರೂ ಮಹಿಳೆಯರಿಗೆ ಪ್ರವೇಶ ನೀಡದ ವಿಶ್ವದ ಪ್ರಾಚೀನ ವಿಶ್ವವಿದ್ಯಾಲಯಗಳು 20ನೇ ಶತಮಾನದಲ್ಲೂ ತಾರತಮ್ಯವನ್ನು ಮುಂದುವರೆಸಿದ ಕತೆಯಿದೆ. ಖಗೋಳಶಾಸ್ತ್ರಕ್ಕೆ ಅದ್ಭುತ ಕೊಡುಗೆ ನೀಡಿದ ಸಿಸೀಲಿಯ ಪೇಯಿನ್‌ರ ಕತೆಯಿದು. ಪ್ರತಿಷ್ಠಿತ ವಿಶ್ವವಿದ್ಯಾಲಯಗಳಲ್ಲಿ ಸಂಶೋಧನೆಗಳಲ್ಲಿ ನಡೆಯುವ gender politics ಉದಾಹರಣೆ ಇದಾಗಿದೆ.

ಸಲ್ಮಾನ್ ರಶ್ದಿಯ Victory City ಕಾದಂಬರಿ ಬಗ್ಗೆ ಈಗಾಗಲೇ ಪ್ರಸ್ತಾಪಮಾಡಿದ್ದೇನೆ. ಈ ಕಾದಂಬರಿ ಕುರಿತ ಲೇಖನವು ಕಾದಂಬರಿಯ ಕತೆಯ ಸಂಗ್ರಹ ನಿರೂಪಣೆಯಂತೆ ಆರಂಭವಾದರೂ ಎರಡನೇ ಭಾಗದಲ್ಲಿ feminist utopiaದ ಪರಿಕಲ್ಪನೆಯ ಮೂಲಕ ಈ ಕೃತಿಯ ಮಹತ್ವವನ್ನು ವಿವರಿಸುತ್ತದೆ. ಈ ಲೇಖನವು ಅಭ್ಯಾಸಯೋಗ್ಯವಾಗಿದೆ. 'ಪದಗಳಷ್ಟೇ ವಿಜಯಿಗಳು' ಎಂದು ಮಂಗಳ ಹಾಡುವ ರಶ್ದಿಯ ಈ ಕೃತಿಯು ಪಡೆದ ಮನ್ನಣೆಗೆ ಅರ್ಹವಾಗಿದೆ. ವಚನ ಚಳುವಳಿಯ ಸಮಸಮಾಜದ ಮೌಲ್ಯಗಳ ಬಗೆಗಿನ ಲೇಖನವು ಹೇಗೆ ಆ ಚಳುವಳಿಯು ಸ್ತ್ರೀಯ ಸ್ಥಿರಚಿತ್ರವನ್ನು radical ಆಗಿ ಬದಲಾಯಿಸಿತು ಎನ್ನುವುದನ್ನು ಚರ್ಚಿಸುತ್ತದೆ. ಗುರುಪ್ರಸಾದ ಕಾಗಿನೆಲೆ ಅವರ ಕೃತಿ 'ಹಿಜಾಬ್' ಕುರಿತಂತಹ ಲೇಖನವು ಕೇವಲ 'ಕೂಲ್ ಗರ್ಲ್'ನಂತೆ ಕಾಣುವ ರಾಧಿಕಾ ತನ್ನ ಸ್ವಾಯತ್ತತೆಯನ್ನು ಬಿಟ್ಟುಕೊಡದೆ ಗಟ್ಟಿಯಾಗಿ ಕಾಣುವುದನ್ನು ವಿವರಿಸುತ್ತದೆ. ಜೊತೆಗೆ ಸ್ತ್ರೀ ವ್ಯಕ್ತಿತ್ವ ಮಾದರಿಗಳ ಬಗ್ಗೆ ಉಪಯುಕ್ತ ಚರ್ಚೆಯನ್ನು ತರುತ್ತದೆ. ಫೂಲನ್‌ದೇವಿಯನ್ನು ಕುರಿತ ಲೇಖನವು ಅವಳ ಬಂಡಾಯದ ಬಗ್ಗೆ ಅನೇಕ ಸೂಕ್ಷ್ಮ ಪ್ರಶ್ನೆಗಳನ್ನು ಎತ್ತುತ್ತದೆ. ಅವಳು ಕೇವಲ ಹೆಣ್ಣು ರಾಬಿನ್ ಹುಡ್‌ಳಾದಳೇ ಅಥವಾ ತನ್ನ ಸಮುದಾಯದ ಸ್ತ್ರೀಯರಿಗೆ ಆತ್ಮವಿಶ್ವಾಸ ತಂದುಕೊಟ್ಟಳೇ ಎನ್ನುವುದೂ ಒಂದು ಪ್ರಶ್ನೆಯಾಗಿದೆ. ಜೊತೆಗೆ ಫೂಲನ್‌ದೇವಿಯಂಥ

ದಲಿತ ಮಹಿಳೆ ನಿರಂತರವಾಗಿ ಅಮಾನವೀಯವಾದ ಅತ್ಯಾಚಾರ ಹಿಂಸೆಗೆ ಗುರಿಯಾದಾಗ ಅವಳು ಅನಿವಾರ್ಯವಾಗಿ ಗಂಡಸಿನ ಪಾತ್ರವನ್ನು (ದರೋಡೆಕೋರ) ವಹಿಸಬೇಕಾಗುತ್ತದೆ. ಅಲ್ಲದೆ ಗಂಡಸರನ್ನು ಅವಲಂಬಿಸಬೇಕಾಗುತ್ತದೆ. ಇಂಥ ವೈರುಧ್ಯಪೂರ್ಣ ಬದುಕು ಅವಳದು. ಬೌದ್ಧ ಧರ್ಮವನ್ನು ಸ್ವೀಕರಿಸಿ ಬದಲಾವಣೆಯತ್ತ ಹೆಜ್ಜೆ ಇಡುತ್ತಿದ್ದ ಫೂಲನ್‌ಳ ಕೊಲೆಯೊಂದಿಗೆ ಅವಳ ಜೀವನ ಅಪೂರ್ಣವಾಗಿಯೇ ಉಳಿಯುತ್ತದೆ.

ಸ್ತ್ರೀ ವಾದವು ಹೆಣ್ಣಿನ ಸುತ್ತಲಿರುವ ಅಗೋಚರ ಬೇಲಿಗಳನ್ನು ಕಾಣಿಸಿ ಅವುಗಳನ್ನು ದಾಟುವ ಬಗೆಗಳನ್ನು ಹುಡುಕಬೇಕಾಗುತ್ತದೆ. ಈ ಸಂಗ್ರಹದ ಲೇಖನಗಳಲ್ಲಿ ಕೆಲವು ಅತ್ಯಾಧುನಿಕ ತಂತ್ರಜ್ಞಾನ ವಿಜ್ಞಾನಗಳ ಸಂಸ್ಥೆಗಳಲ್ಲಿ ಇರುವ ಅಗೋಚರವಾದ glass ceiling ಬಗ್ಗೆ ಇವೆ. COO ಹುದ್ದೆಯನ್ನು ಸ್ತ್ರೀ ಒಬ್ಬಳು ತನ್ನ ಅರ್ಹತೆಯಿಂದ ಪಡೆದರೆ 'SheOO' ಎನ್ನುವ ಕುಹಕದ ಮಾತುಗಳು ಕೇಳಿಬರುತ್ತವೆ. ಅಮೆರಿಕದಂಥ ದೇಶದಲ್ಲಿ ಈವರೆಗೂ ಒಬ್ಬ ಮಹಿಳೆಯೂ ರಾಷ್ಟ್ರಾಧ್ಯಕ್ಷಳಾಗಿಲ್ಲವೆನ್ನುವ ಮಾತು ಕೇಳಿ ಬರುತ್ತದೆ ಈ ಲೇಖನಗಳಲ್ಲಿ. ಅಲ್ಲದೆ ಸ್ತ್ರೀಯರ ಬಗ್ಗೆ ಅತ್ಯಂತ ಅಸಹ್ಯ ಲೈಂಗಿಕ ಧೋರಣೆಯುಳ್ಳ ಒಬ್ಬ ವ್ಯಕ್ತಿ ಆ ಹುದ್ದೆಯನ್ನು ಪಡೆದುಕೊಂಡಿದ್ದರ ಬಗ್ಗೆ ಗಾಢವಾದ ವಿಷಾದವೂ ಇಲ್ಲಿದೆ. ಆದರೆ ಅಷ್ಟೇ ಮುಖ್ಯವಾಗಿ ಪುರುಷರು ಸ್ತ್ರೀ ಸಂವೇದನೆಯನ್ನು ಅರ್ಥಮಾಡಿಕೊಂಡು ತಾವೂ ಬದಲಾಗುವ ಬಗ್ಗೆ ಅನೇಕ ಲೇಖನಗಳಲ್ಲಿ ಪ್ರಸ್ತಾಪ ಬರುತ್ತದೆ. ಸ್ತ್ರೀವಾದವು ಸಾಂದರ್ಭಿಕವಾದುದು (context sensitive) ಎನ್ನುವ ಅರ್ಥದಲ್ಲಿ. ಅದು ಸಂಸ್ಕೃತಿ ವಿಶಿಷ್ಟವೂ ಆಗಿರುವಂಥದು. ಹೀಗಾಗಿ ಇಲ್ಲಿರುವ ಲೇಖನಗಳು ಎರಡು ಸಂಸ್ಕೃತಿಗಳೊಂದಿಗೆ ವ್ಯವಹರಿಸಬೇಕಾಗುತ್ತದೆ. ಭಾರತದ ಸುದೀರ್ಘವಾದ ಚರಿತ್ರೆ, ಧರ್ಮಗಳು, ಇಲ್ಲಿಯ ಸಾಂಸ್ಕೃತಿಕ ಪಠ್ಯಗಳು, ಇಲ್ಲಿಯ ಬಾಲ್ಯದ ನೆನಪುಗಳು ಜೊತೆಗೆ ಬಂದು ನೆಲೆಸಿದ ಅಮೆರಿಕದ ಸದಾ ಸಂಕ್ರಮಣ ಸ್ಥಿತಿಯಲ್ಲಿರುವ ಸಮಾಜ ಇವೆರಡನ್ನೂ ನಿರ್ವಹಿಸುತ್ತಲೇ ಸಮಗ್ರವೂ ಮಾನವೀಯವೂ ಆಗಿರುವ ಸಂವೇದನೆಯ ಹುಡುಕಾಟವನ್ನು ಮುಂದುವರೆಸಬೇಕಾಗುತ್ತದೆ. ಎ. ಕೆ. ರಾಮಾನುಜನ್ ಇದನ್ನು second sight ಎಂದು ಕರೆದಿದ್ದರು. ಇದು ವಲಸಿಗರಿಗೆ ಅಥವಾ ಸುದೀರ್ಘ ಕಾಲ ವಿದೇಶದಲ್ಲಿ ನೆಲೆಸಿದವರಿಗೆ ದೊರೆಯುವ ಇನ್ನೊಂದು ಕಣ್ಣು, ದೃಷ್ಟಿಕೋನ. ಈ ಸಂಗ್ರಹದಲ್ಲಿಯ ಬಹುಪಾಲು ಬರಹಗಳು ಈ ಕಾರಣಕ್ಕಾಗಿ ಮುಖ್ಯವಾಗಿವೆ. ಜಾಗತೀಕರಣಗೊಂಡ ಇಂದಿನ ಜಗತ್ತಿನಲ್ಲಿ ಇರುವ ಜಾಗವೇ ಮನೆ ಎಂದು ಒಪ್ಪಿಕೊಳ್ಳಬೇಕಾಗುತ್ತದೆ. ಅದೇ ಹೊತ್ತಿಗೆ ಎರಡು ಸಂಸ್ಕೃತಿಗಳಿಗೆ ವಾರಸುದಾರರಾಗುವ ಅವಕಾಶವೂ ಇರುತ್ತದೆ. ಈ ಸಂಗ್ರಹವನ್ನು ಓದಿದಾಗ ನನಗೆ ತುಂಬಾ ಸಂತೋಷವನ್ನು ಕೊಟ್ಟ ವಿಷಯವೆಂದರೆ ಇಲ್ಲಿಯ ಬರಹಗಳಲ್ಲಿ ಇರುವ ಸೂಕ್ಷ್ಮವಾದ ಸ್ಪಂದನೆ ಮತ್ತು ಮನುಷ್ಯಪರವಾದ ಚಿಂತನೆ. ದುರಂತವೆಂದರೆ ನಮ್ಮ ಮಾಧ್ಯಮಗಳು ಇಲ್ಲಿ ಭಾರತದಲ್ಲಿ ಅಮೆರಿಕನ್ ಭಾರತೀಯರು ಟ್ರಂಪ್‌ನಂಥವನ ಹಿಂಬಾಲಕರು ಅಥವಾ ಪಶ್ಚಿಮದಿಂದ ಏನನ್ನೂ ಕಲಿಯದ ಸಂಪ್ರದಾಯವಾದಿಗಳು ಎಂದು ಬಿಂಬಿಸುತ್ತವೆ. ಈ ಸ್ಥಗಿತ ಚಿತ್ರಗಳನ್ನೇ ನೋಡುವವರಿಗೆ ಈ ಸಂಗ್ರಹವು ನಿಜವಾದ

ಅರ್ಥದಲ್ಲಿ educative ಆಗಿದೆ. ಇಂಥ ಮಾಧ್ಯಮ ನಿರ್ದೇಶಿತ ಪೂರ್ವಗ್ರಹಗಳಿಂದ ಹೊರಬಂದು ಅನೇಕ ಸೂಕ್ಷ್ಮ ಜಾಗೃತ ಮನಸ್ಸುಗಳೊಂದಿಗೆ ಸಂಬಂಧ ಕುದುರಿಸಿದಂಥ ಅನುಭವ ಈ ಸಂಗ್ರಹದ ಓದಿನಿಂದ ಸಿಕ್ಕುತ್ತದೆ. ನನಗಂತೂ ಇಂಥ ಅರ್ಥಪೂರ್ಣ ಅನುಭವ ಸಿಕ್ಕಿದೆ.

**–ರಾಜೇಂದ್ರ ಚೆನ್ನಿ**

# ಅರಿಕೆ

ಈ ಬಾರಿಯ ನಮ್ಮ ಸಮ್ಮೇಳನದ ಕೇಂದ್ರ ವಿಷಯ, ಸ್ತ್ರೀ ಸಂವೇದನೆಗೆ ಸಂಬಂಧಿಸಿದ್ದಾಗಿರುತ್ತದೆ ಎಂದು ಕನ್ನಡ ಸಾಹಿತ್ಯ ರಂಗ ತೀರ್ಮಾನಿಸಿದ ನಂತರ, ಈ ವಿಷಯಕ್ಕೆ ಸಂಬಂಧಿಸಿದಂತೆ ಹೊರತರಲಾಗುವ ಪುಸ್ತಕಕ್ಕಾಗಿ ಬರೆಯಲು, ಲೇಖಕರಿಗೆ ಆಹ್ವಾನವನ್ನು ಕಳಿಸಿಕೊಡುವ ಕಾರ್ಯ ಮೊದಲಾಯಿತು. ಹಾಗೆ ಆಹ್ವಾನವೊಂದನ್ನು ರಚಿಸಲು ಹೊರಟಾಗ ನಮ್ಮ ಮನಸ್ಸಿನಲ್ಲಿ ಮೂಡಿದ ಮೊದಲ ಪ್ರಶ್ನೆ, ಸ್ತ್ರೀ ಸಂವೇದನೆ ಎನ್ನುವ ವಿಷಯವನ್ನು ಹೇಗೆ ವಿವರಿಸುವುದು ಎಂಬುದು. ಸ್ತ್ರೀ ಸಂವೇದನೆ ಎಂದರೆ ಹೀಗಿರುವಂಥದ್ದು ಮತ್ತು ಈ ಕುರಿತಾಗಿ ನಮಗೆ ಲೇಖನಗಳು ಬೇಕಾಗಿವೆ ಎಂದು ಸಂಪಾದಕ ಮಂಡಳಿ ಹೇಳಬೇಕಾದಾಗ ಸ್ತ್ರೀ ಸಂವೇದನೆ ಎಂದರೆ ಏನು ಎಂದು ಸರಳವಾಗಿ, ಸೂಕ್ತವಾಗಿ ಹೇಳುವುದು ಹೇಗೆ? ಹಾಗೆ ನೋಡಿದರೆ ಶಬ್ದಗಳು ಕೂಡ ದೇಶ ಕಾಲಗಳಿಗನುಗುಣವಾಗಿ ತಮ್ಮ ಅರ್ಥವನ್ನು ಬದಲಾಯಿಸಿಕೊಳ್ಳುತ್ತಾ, ವಿಸ್ತರಿಸಿಕೊಳ್ಳುತ್ತಾ ಹೋಗಬಹುದು. 'ಸ್ತ್ರೀ ವಾದ'ವೆಂದರೆ ಏನೆಂದು ವಿವರಿಸಲು ಹಲವು ಪ್ರಯತ್ನಗಳು ನಡೆದಿವೆ. ಆದರೆ ಮಾನವೀಯ ಕಾಳಜಿಯೇ ಮೂಲಸ್ರೋತವಾದ ಹಾಗು ಸ್ತ್ರೀವಾದದ ಉಗಮ, ವಿಕಾಸ, ಸ್ತ್ರೀವಾದಿ ಚಳುವಳಿಗಳ ಮೂಲ ತುಡಿತವಾದ 'ಸ್ತ್ರೀ ಸಂವೇದನೆ'ಯನ್ನು ವಿವರಿಸುವುದು ಅಷ್ಟು ಸುಲಭವಾದ ಕೆಲಸವಲ್ಲ ಎಂದು ಅರಿವಾಯ್ತು.

ಜೀವವೊಂದು ತನ್ನ ಬದುಕಿನ ಅನುಭವಗಳ ಮೂಲಕವೇ ತನ್ನ ಸುತ್ತಲಿನ ಜಗತ್ತನ್ನು ಪರಿಭಾವಿಸುವ, ಅರಿಯಲೆತ್ನಿಸುವ ಮತ್ತು ಹಾಗೆ ತನ್ನ ಅನುಭವ ಒದಗಿಸಿದ ಅರಿವಿನ ಮೂಲಕವೇ ತನ್ನದೇ ದೃಷ್ಟಿಯಿಂದ ಬದುಕಿಗೆ ಪ್ರತಿಸ್ಪಂದಿಸುವುದನ್ನು 'ಸಂವೇದನೆ' ಎಂದು ಕರೆಯಬಹುದು. ಪ್ರತಿ ವ್ಯಕ್ತಿಯ ಹಿನ್ನೆಲೆ, ಪರಿಸರ, ಅನುಭವ, ವಿಚಾರಶಕ್ತಿ ಮತ್ತು ಭಾವನೆ ವಿಭಿನ್ನವಾಗಿರುವುದರಿಂದ ಅವರವರ ಸಂವೇದನೆಗಳೂ ವಿಭಿನ್ನವಾಗಿರುತ್ತವೆ. ಈ ಭಿನ್ನತೆಯ ಅಭಿವ್ಯಕ್ತಿ ಸಾಹಿತ್ಯ, ಕಲೆ, ನಾಟಕ, ಸಿನಿಮಾ ಮುಂತಾದ ಮಾಧ್ಯಮಗಳಲ್ಲಿ ಮತ್ತು ಅನುದಿನದ ಬದುಕಿನಲ್ಲಿ ವೈವಿಧ್ಯಮಯವಾಗಿ ಪ್ರಕಟಗೊಳ್ಳುವುದುಂಟು. ಮನುಷ್ಯ ಸಂವೇದನೆ ಎನ್ನುವುದನ್ನು ಕೇವಲ ವ್ಯಕ್ತಿಯೊಬ್ಬನ ವೈಯಕ್ತಿಕ ಅನುಭವ ಮತ್ತು ನಿಲುವುಗಳ ಆಧಾರದ ಹೊರತಾಗಿ ಒಟ್ಟಾರೆಯಾಗಿ ಸಾಮೂಹಿಕ ನೆಲೆಗಟ್ಟಿನಲ್ಲಿ ನೋಡಬೇಕಾದ ಅಗತ್ಯದಂತೆಯೇ ಸ್ತ್ರೀ ಸಂವೇದನೆ ಎಂದಾಗ ಕೂಡ ಅದು ಬಹುನೆಲೆಗಟ್ಟಿನ ಅನುಭವಜನ್ಯ ಅರಿವು ಮತ್ತು ಅಭಿವ್ಯಕ್ತಿ ಅಂದುಕೊಂಡೇ ನೋಡಬೇಕಾಗುತ್ತದೆ. ಪುರುಷ ಪ್ರಧಾನ ಸಮಾಜದಲ್ಲಿ ಮಹಿಳೆಯರ ಜೀವನ, ದೃಷ್ಟಿಕೋನ ಮತ್ತು ಮನೋಧರ್ಮವನ್ನು

ಪ್ರತಿನಿಧಿಸುವ/ಪ್ರತಿಬಿಂಬಿಸುವ, ಸಹಜತೆ ಮತ್ತು ಸಮಾನತೆಯ ನೆಲೆಯಲ್ಲಿ ರೂಪುಗೊಳ್ಳುವ ಒಂದು ಆರೋಗ್ಯಕರ ಅಭಿವ್ಯಕ್ತಿಯನ್ನು "ಸ್ತ್ರೀ ಸಂವೇದನೆ" ಎನ್ನಬಹುದೇನೋ. ಅದರ ಜೊತೆಗೇ ತನ್ನ ಸಹಜೀವಿಯಾದ ಮಹಿಳೆಯ ಹಾಗೂ ಅವಳ ಲೋಕಾನುಭವ ಮತ್ತು ಅರಿವಿನ ಕುರಿತಂತೆ ಸಹಜವಾಗಿ ಮಿಡಿಯುವ, ಅರಿಯಲೆತ್ನಿಸುವ ಇನ್ನೊಂದು ಲಿಂಗದ ಸಹಾನುಕಂಪವೂ ಇದಾಗಿರಬಹುದು.

ಸಮಾಜ, ಉದ್ಯೋಗ ಮತ್ತು ಕುಟುಂಬಗಳಲ್ಲಿ ಮಹಿಳೆಯರ ತುಳಿತ ಹಾಗೂ ಶೋಷಣೆಯ ಬಗ್ಗೆ ಅರಿವು ಮೂಡಿಸಿ, ಈ ಪರಿಸ್ಥಿತಿಯನ್ನು ಪರಿವರ್ತಿಸಲು ಪುರುಷರು ಮತ್ತು ಸ್ತ್ರೀಯರು ಸೇರಿ ನಡೆಸುವ ಪ್ರಯತ್ನಪೂರ್ವಕ ಕ್ರಿಯೆಯೇ 'ಸ್ತ್ರೀ ವಾದ' ಎಂಬುದು ಸ್ತ್ರೀ ವಾದಕ್ಕೆ ಒಪ್ಪಿತ ವ್ಯಾಖ್ಯೆ. ಸಮಾನತೆ, ಸ್ವಾತಂತ್ರ್ಯಗಳೊಂದಿಗೆ ಪ್ರತ್ಯೇಕತೆ, ಮೇಲು-ಕೀಳಿಲ್ಲದೆ ಪರಸ್ಪರ ಒಪ್ಪಿ ಗೌರವಿಸುವ ಘನತೆಯ ಜೀವನವಿಧಾನ ಸ್ತ್ರೀವಾದದ ಕನಸು, ಆದರ್ಶ. ಸ್ತ್ರೀ ಸಂವೇದನೆಯಿಲ್ಲದಲ್ಲಿ ಇಂತಹ ದೊಡ್ಡದೊಂದು ಆದರ್ಶದ ಕಲ್ಪನೆಯೂ ಹುಟ್ಟಲಾರದು. ಹಾಗೆಯೇ ಸ್ತ್ರೀವಾದೀ ನಿಲುವನ್ನು ಅರಿತು ಗೌರವಿಸುವ ಸಮಾಜವೊಂದರ ವ್ಯಕ್ತಿಗಳಿಗೆ, ಸ್ತ್ರೀ ಸಂವೇದನೆಯಂಥಾ ಉನ್ನತ ಮನೋಭಾವವನ್ನು ಸಹಜವಾಗಿ ಬೆಳೆಸಿಕೊಂಡು ಸಮಾನತಾವಾದಿಗಳಾಗುವ ಅವಕಾಶವೂ ಇರುತ್ತದೆ ಎಂದೂ ಹೇಳಬಹುದು. ಮೊದಲೇ ತಿಳಿಸಿದಂತೆ ಕಾಲ ದೇಶಗಳು ಬದಲಾದಂತೆ ಶಬ್ದಗಳಿಗೂ ಮತ್ತು ಅವು ಹೊಮ್ಮಿಸುವ ಅರ್ಥಕ್ಕೂ ಇರುವ ಹರವಿನಲ್ಲಿ ಕೂಡ ವ್ಯತ್ಯಾಸವಾಗಬಹುದು ಅನ್ನಿಸಿದರೂ, ನಾವಿರುವ ಈ ಕಾಲಘಟ್ಟದಲ್ಲಿ ಸ್ತ್ರೀ ಸಂವೇದನೆ ಎನ್ನುವ ವಿಷಯದ ಅರಿವು ಮತ್ತು ಅಗತ್ಯವನ್ನು ಚಿಂತಿಸುವ ಮೂಲಕವೇ ನಾವು ಈ ವಿಷಯವನ್ನು ಅರಿಯುವ ಪ್ರಯತ್ನವನ್ನು ಮಾಡಹೊರಟೆವು. ಆ ಪ್ರಯತ್ನದ ಫಲವಾಗಿಯೇ ಈ ಪುಸ್ತಕ ಹೊರಬಂದಿದೆ. ನಮ್ಮ ಪ್ರಶ್ನೆಗೆ ಉತ್ತರ ಸಿಕ್ಕಿದೆ ಎಂದಲ್ಲದಿದ್ದರೂ ಸ್ತ್ರೀ ಸಂವೇದನೆ ಎಂಬ ಈ ಸೂಕ್ಷ್ಮ ವಿಷಯದ ಅರಿವಿನ ಅಗತ್ಯ ನಮ್ಮೆಲ್ಲರಿಗೂ ಎಷ್ಟು ಅವಶ್ಯಕವಾಗಿದೆ ಎಂಬುದು ನಮಗೆ ಈಗ ಮೊದಲಿಗಿಂತಲೂ ಹೆಚ್ಚು ಸ್ಪಷ್ಟವಾಗಿದೆ.

ಜೀವಪರ ಎನಿಸುವ, ಸಮಾನತೆಯ ಪರ ಎನಿಸುವ ಮನೋಧರ್ಮ ತಾನೇ ತಾನಾಗಿ ಅತ್ಯಂತ ಸಹಜವಾಗಿ, ಹಾಗೆ ಹೇಳದೆಯೂ ಸ್ತ್ರೀ ಸಂವೇದನೆ ಎಂದು ಗುರುತಿಸುವ ಮನೋಭಾವವನ್ನು ಪೋಷಿಸುವಂತದ್ದೇ ಆಗಿರುತ್ತದೆ ಎಂಬುದರಲ್ಲಿ ಯಾವ ಸಂಶಯವೂ ಇಲ್ಲ. ಹಾಗೆಯೇ ಹೆಂಗಸರನ್ನು ಹಾಡಿ ಹೊಗಳುವ, ಅವರ ಸ್ಥಿತಿ ಗತಿಯ ಕುರಿತು ಸುಳ್ಳೇ ಅನುಕಂಪವನ್ನು ಬಿಂಬಿಸುವ ಅಥವಾ ಯಾವುದೋ ಕಾರಣದಿಂದಾಗಿ ಹೆಚ್ಚು ಚರ್ಚಿತವಾದ, ಹೆಚ್ಚು ಯಶಸ್ವಿ ಎನಿಸಿದ, ಆಧುನಿಕ ಎನಿಸಿದ ಮಾತ್ರದಿಂದಲೇ ಒಂದು ಕೃತಿ/ಕಲಾಕೃತಿ ಸ್ತ್ರೀ ಸಂವೇದನಾತ್ಮಕವಾಗಿ ಇದೆ ಎಂದುಕೊಳ್ಳುವುದೂ ಅನೇಕ ವೇಳೆ ಸುಳ್ಳಾಗಿರುವುದೂ ಉಂಟು. ಸಿದ್ಧಮಾದರಿಗಳ ಸವಕಲು ದೃಷ್ಟಿಕೋನದ ಹೊರತಾಗಿ ಲೋಕವನ್ನು, ಜೀವನವನ್ನು ಅದು ಇರುವ ಹಾಗೆಯೇ ಕಾಣಬಯಸುವ ಕಣ್ಣು ಸ್ತ್ರೀ ಸಂವೇದನೆಯದ್ದು. ಸ್ತ್ರೀ ಸಂವೇದನೆ

ಎಂಬುದು ಈ ಕಾರಣದಿಂದಾಗಿ ಎಲ್ಲಾ ಕಾಲಕ್ಕೂ ಜೀವನ/ಸಾಹಿತ್ಯ/ಕಲಾಕೃತಿಯ ಒಟ್ಟಾರೆ ಧೋರಣೆ, ಕಾಳಜಿಗಳನ್ನು ಗುರುತಿಸುವ ಮಾನದಂಡವೂ ಆಗಿದೆ.

ಬಾಲ್ಯದಿಂದಲೂ ನಾವೆಲ್ಲರೂ ಒಂದೇ ಕಥೆಯೊಂದನ್ನು, ವಿಷಯವೊಂದನ್ನು ಮತ್ತೆ ಮತ್ತೆ ಅದರ ಬೇರೆಬೇರೆ ರೂಪಗಳಲ್ಲಿ ಕೇಳುತ್ತಾ ಓದುತ್ತಾ ಬೆಳೆಯುತ್ತೇವೆ. ಈಗಾಗಲೇ ಗೊತ್ತಿರುವ ವಿಷಯವೊಂದನ್ನು ಇನ್ನೊಂದು ಹೊಸ ಬಗೆಯಲ್ಲೇ ಮತ್ತೆ ಕೇಳುವ ಸಹಜ ಬಯಕೆ ನಮ್ಮೆಲ್ಲರದ್ದೂ. ಹೀಗಾಗಿಯೇ ಸಾವಿರ ಸಾವಿರ ರೂಪದ ರಾಮಾಯಣ, ಮಹಾಭಾರತ, ಪುರಾಣ, ಜಾನಪದ, ಆಧುನಿಕ ಕಥೆಗಳು ರೂಪುಗೊಳ್ಳುತ್ತಲೇ ಉಳಿದಿವೆ. ಹೀಗಿದ್ದೂ ಸೂಕ್ಷ್ಮವಾಗಿ ಗಮನಿಸುವಾಗ ಈ ಎಲ್ಲ ವೈವಿಧ್ಯತೆಗಳಲ್ಲೂ ಬಹುತೇಕವಾಗಿ ಒಂದೇ ಬಗೆಯ ದೃಷ್ಟಿಕೋನವು ಪುನರಾವರ್ತಿತವಾಗಿರುವುದು ತಿಳಿಯುತ್ತದೆ. ಬಹುತೇಕವಾಗಿ ಈ ಪುನರಾವರ್ತಿತ ಲೋಕದೃಷ್ಟಿಗೆ ಕಾರಣ, ಸಿದ್ಧಮಾದರಿಯಲ್ಲಿ ರೂಪುಗೊಂಡ ಒಂದು ನಂಬಿಕೆ. ಈ ನಂಬಿಕೆ, ಸಹಜ ಅರಿವಿನಿಂದ ಮೂಡಿದ್ದಲ್ಲದೆ ಕೇವಲ ಬಲಿಷ್ಠರ ಹಿತಕ್ಕಾಗಿ ಎಂದು ರೂಪುಗೊಂಡ ವ್ಯವಸ್ಥೆಯ ಸಾಮಾಜಿಕ-ರಾಜಕೀಯ ಪಿತೂರಿಯಿಂದ ಉಂಟಾದದ್ದಾಗಿರುತ್ತದೆ. ಈ ಸ್ಥಾಪಿತ ಉದ್ದೇಶವನ್ನು ಮೀರಿದ ಇನ್ನೊಂದೇ ಮಾದರಿಯ ಯೋಚನೆ ಅಲ್ಲಲ್ಲಿ ಅಷ್ಟಿಷ್ಟು ಕಾಣಿಸಿಕೊಂಡರೂ ಅದು ಮುಂಚೂಣಿಯಲ್ಲಿರದ ಕಾರಣಕ್ಕೆ ಸ್ಥಾಪಿತ ಮನೋಸ್ಥಿತಿಯೇ ವಿಜೃಂಭಿಸುತ್ತಿರುತ್ತದೆ. ಈ ಸ್ಥಾಪಿತ ಮನಸ್ಥಿತಿ ನಮ್ಮ ದಿನನಿತ್ಯದ ಬದುಕಿನಲ್ಲೂ ಹಾಸುಹೊಕ್ಕಾಗಿ ಅದೇ ನಮ್ಮ ಸಹಜ ನಂಬಿಕೆ, ನಡವಳಿಕೆಗಳೆಂದು ನಮಗೆ ಅನ್ನಿಸುವಷ್ಟು ಆಳವಾಗಿ ಬೇರೂರಿಬಿಟ್ಟಿರುತ್ತದೆ. ಇದನ್ನು ಗುರುತಿಸಲು, ಬದಲಿಸಲು ಒಂದು ಎಚ್ಚರದ ಮನಸ್ಥಿತಿಯನ್ನು ನಾವು ಯಾವ ಕಾಲದಲ್ಲೂ ಜಾಗೃತವಾಗಿ ಇಟ್ಟುಕೊಳ್ಳದ ಹೊರತು ನಮ್ಮದೇ ಆಲೋಚನೆ, ಮಾತು, ವರ್ತನೆಗಳಲ್ಲಿ ಇರುವ ಸುಳ್ಳನ್ನು, ವೈರುಧ್ಯವನ್ನು ಗುರುತಿಸುವುದು ನಮಗೆ ಸಾಧ್ಯವೇ ಆಗದೆ ಹೋಗುತ್ತದೆ. ಸೂಕ್ಷ್ಮತೆ ಎನ್ನುವುದು, ಸಂವೇದನೆ ಎನ್ನುವುದು ನಮಗೆ ಈ ಜಾಗೃತಿಯನ್ನು ಒದಗಿಸಿಕೊಡುವ ಮನಸ್ಥಿತಿ. ಸ್ತ್ರೀ ಸಂವೇದನೆ ಎನ್ನುವುದು ಎಲ್ಲಾ ಕಾಲದಲ್ಲೂ ನಾವು ಜಾಗೃತರಾಗಿ ಕಾಪಿಟ್ಟುಕೊಳ್ಳಬೇಕಾದ ಇಂತಹದ್ದೇ ಅತ್ಯಗತ್ಯ ಎಚ್ಚರವಾಗಿದೆ. ಈ ಎಚ್ಚರವು ನಮ್ಮ ಸಹಜ ತಿಳಿವಳಿಕೆಯೂ ನಡವಳಿಕೆಯೂ ಆದಾಗ ಮಾತ್ರ ಮುಂದೊಮ್ಮೆ ಈ ಲೋಕ ಸುಳ್ಳಿನಿಂದ, ಹಿಂಸೆಯಿಂದ, ದಬ್ಬಾಳಿಕೆ-ಅಸಮಾನತೆಗಳಿಂದ ಮುಕ್ತವಾಗಬಹುದು.

ಈ ಎಚ್ಚರವನ್ನು ತಪ್ಪಿಸಲೆಂದೇ ಬಯಸುವ ಪಿತೃಪ್ರಧಾನ ವ್ಯವಸ್ಥೆಗೆ, ವೈರುಧ್ಯಗಳನ್ನು ಹುಟ್ಟಿಸಿ ಸಮಾಜದ ದಿಕ್ಕು ತಪ್ಪಿಸುವುದರಲ್ಲಿಯೇ ಆಸಕ್ತಿ. ಹೆಂಗಸನ್ನು ದೇವಿ ಎಂದು ವೈಭವೀಕರಿಸುವುದು ಹಾಗೆಯೇ ದಾಸಿ ಎಂದು ಜರಿಯುವುದು ಈ ವೈರುಧ್ಯಕ್ಕೊಂದು ಉದಾಹರಣೆ. ಹೆಣ್ಣೆನ್ನುವ ಜೀವ, ದೇವಿಯೂ ಅಲ್ಲದ ದಾಸಿಯೂ ಅಲ್ಲದ ತನ್ನಂತೆಯೇ ಮನುಷ್ಯ ಮಾತ್ರಳಾದ ಇನ್ನೊಂದು ಜೀವಿ ಎಂದುಕೊಂಡುಬಿಟ್ಟಾಕ್ಷಣ ತಾನು ಎಲ್ಲದರಲ್ಲಿಯೂ ಅವಳಿಗಿಂತ ಮೇಲು ಎಂದುಕೊಳ್ಳುವ ಹುಂಬತನವನ್ನು ಹಾಗೂ ತನ್ನಿಷ್ಟದಂತೆ ಈ ವ್ಯವಸ್ಥೆಯನ್ನು ರೂಪಿಸಿಕೊಂಡು ಬೇಕಾದವರ ಮೇಲೆ ಬೇಕಾದ ಹಾಗೆ

ಅಧಿಕಾರ ಚಲಾಯಿಸಬಹುದೆನ್ನುವ ಅವಕಾಶವೂ ಈ ಬಲಿಷ್ಠರಿಗೆ ತಪ್ಪಿಹೋಗುತ್ತದೆ. ದೇವಿ ಎಂದು ಹೆಣ್ಣನ್ನು ವೈಭವೀಕರಿಸುವಾಗಲೂ ಮನುಷ್ಯ ಸಹಜ ಮಿತಿ, ದೌರ್ಬಲ್ಯಗಳಿಗೆ ಅವಳು ಅತೀತಳೆಂಬ ಭ್ರಮೆ ಹುಟ್ಟಿಸಿ, ಅವಳನ್ನು ಇನ್ನೊಂದು ಬಗೆಯಲ್ಲಿ ಸುಳ್ಳಿನ ಹುನ್ನಾರದಲ್ಲಿ ಸಿಲುಕಿಸಲಾಗುತ್ತದೆ. ಈ ವ್ಯವಸ್ಥಿತ, ರೂಢಿಗತ ಸಂಚಿನಿಂದ ಬಿಡಿಸಿಕೊಂಡು ಆಚೆ ಬರಲು ಸ್ತ್ರೀ ಸಂವೇದನೆಯೆಂಬ ಸೂಕ್ಷ್ಮತೆ, ಅರಿವು, ಎಚ್ಚರ ಮಹಿಳೆ, ಪುರುಷ ಅಥವಾ ಇನ್ಯಾವುದೇ ಲಿಂಗಕ್ಕೆ ಸೇರಿದವರೆಲ್ಲರಿಗೂ ಅತ್ಯಾವಶ್ಯಕವಾಗಿ ಬೇಕಾಗಿದೆ. ಯಾಕೆಂದರೆ ಪಿತೃಪ್ರಧಾನ ವ್ಯವಸ್ಥೆಯಲ್ಲಿ ಹಿಂಸೆಗೆ ಬಲಿಪಶುವಾಗುವುದು ಕೇವಲ ಹೆಂಗಸರಷ್ಟೇ ಅಲ್ಲ, ಎಲ್ಲರೂ ಕೂಡ. ಸ್ವತಃ ಈ ವ್ಯವಸ್ಥೆಯನ್ನು ಒಪ್ಪುವವರು ಕೂಡ ತಮಗೆ ಅರಿವಿಲ್ಲದೆಯೇ ಈ ವ್ಯವಸ್ಥೆಯ ಸುಳಿಯಲ್ಲಿ ಸಿಕ್ಕಿಬಿದ್ದವರೇ ಆಗಿರುತ್ತಾರೆ ಎಂದ ಮೇಲೆ ಇನ್ನು ಉಳಿದವರ ಪಾಡು ಹೇಳುವಂತೆಯೇ ಇಲ್ಲ. ಹೀಗಾಗಿಯೇ ಸ್ತ್ರೀ ಸಂವೇದನೆಯ ಅಗತ್ಯ ಎಲ್ಲರದ್ದೂ ಕೂಡ.

ಹೀಗೆ ಸ್ತ್ರೀ ಸಂವೇದನೆ ಎನ್ನುವುದೇ ಒಂದು ಅರಿವು, ತಿಳಿವಳಿಕೆಯಾಗಿದೆ. ಈ ಅರಿವಿನ ಮೂಲಕ ಸ್ಥಾಪಿತ ಸತ್ಯವನ್ನು, ಸಿದ್ಧಮಾದರಿಗಳನ್ನು ಕಣ್ಮುಚ್ಚಿ ಒಪ್ಪಿಕೊಳ್ಳುವ ಬದಲು, ನಾವಿರುವ ಈ ಲೋಕವನ್ನು ಮತ್ತು ನಮ್ಮನ್ನು ನಾವು, ಇರುವ ಹಾಗೆಯೇ ಅರಿಯುವ ಪ್ರಯತ್ನವನ್ನು ನಾವು ಮಾಡಬಹುದು. ಪುರುಷ ನಿರ್ಮಿತ ಸಿದ್ಧಮಾದರಿಗಳನ್ನು ಮೀರಿ ಬೇರೊಂದೇ ಬಗೆಯಲ್ಲಿ ಲೋಕವನ್ನು ಪರಿಭಾವಿಸುವ, ಕಾಣುವ, ಸ್ಪಂದಿಸುವ ಇಂತಹದ್ದೊಂದು ಮನಸ್ಥಿತಿ ಕೇವಲ ಮಹಿಳೆಯರಿಗೆ ಮಾತ್ರ ಸೀಮಿತವೂ ಮೀಸಲೂ ಆದದ್ದಲ್ಲ ಅಥವಾ ಮಹಿಳೆಯಾದ ಮಾತ್ರದಿಂದಲೇ ಆ ವ್ಯಕ್ತಿಗೆ ಸ್ತ್ರೀ ಸಂವೇದಿ ಮನಸ್ಥಿತಿಯೊಂದು ಇದ್ದೇ ಇರುವುದು ಅಂತಲೂ ಅಲ್ಲ. ಸತ್ಯ ಮತ್ತು ಸಮಾನತೆಯ ನೆಲೆಯಿಂದ ತನ್ನನ್ನು ಹಾಗು ತನ್ನ ಸುತ್ತಲಿನ ಎಲ್ಲವನ್ನೂ ಅರಿಯಲು ಹೊರಡಬೇಕೆನ್ನುವ ಎಲ್ಲರಿಗೂ ಈ ಹಾದಿ ಎಷ್ಟು ಕಷ್ಟದ್ದು ಎನ್ನುವುದು ತಿಳಿದಿರುತ್ತದೆ. ಈ ಹಾದಿಯ ಗೊಂದಲಗಳನ್ನು, ಕಷ್ಟಗಳನ್ನು ಕಳೆಯಲು ನಮಗೊದಗಿ ಬರಬಹುದಾದ ಹಲವು ವಿಷಯಗಳಲ್ಲಿ ಸ್ತ್ರೀ ಸಂವೇದನೆಯೂ ಒಂದು ಎಂದರೆ ತಪ್ಪಾಗಲಾರದು. ಹೀಗಾಗಿಯೇ ಸ್ತ್ರೀ ಸಂವೇದನೆಯೆಂಬುದು ಲಿಂಗಾತೀತವಾಗಿ ಎಲ್ಲರಿಗೂ ಮುಖ್ಯವೆನಿಸುವ ವಿಷಯ. ಅದಕ್ಕೆ ಸಾಕ್ಷಿಯಾಗಿ ಎನ್ನುವಂತೆ, ಈ ಪುಸ್ತಕದಲ್ಲಿ ಬರೆದ ಲೇಖಕ ಲೇಖಕಿಯರಿದ್ದಾರೆ. ಆಹ್ವಾನ ತಲುಪುತ್ತಿದ್ದಂತೆ ನಮಗೆ ಬರೆಯುತ್ತೇವೆ ಎಂದು ತಾವಾಗಿಯೇ ತಿಳಿಸಿದವರಲ್ಲಿ ಸ್ತ್ರೀ ಮತ್ತು ಪುರುಷ ಲೇಖಕರಿಬ್ಬರೂ ಸಮಾನ ಸಂಖ್ಯೆಯಲ್ಲಿ ಇದ್ದರು. ಸ್ತ್ರೀವಾದಿ ಚಳುವಳಿಯ ವಿವಿಧ ಹಂತಗಳಲ್ಲಿ, ಸ್ತ್ರೀವಾದವೆಂದರೆ ಕೇವಲ ಹೆಂಗಸರಿಗೆ ಸಂಬಂಧಿಸಿದ ವಿಷಯವೆಂದೊ ಅಥವಾ ಇದು ಪುರುಷರ ವಿರುದ್ಧವಾದ ಕಾರ್ಯಾಚರಣೆ ಎಂಬ ಅರ್ಥವನ್ನೋ ಬಿಂಬಿಸಲಾಗಿತ್ತು. ಆ ಕಾಲದಿಂದ ನಾವೀಗ ಸಾಕಷ್ಟು ದೂರ ಸಾಗಿ ಬಂದಿರಬಹುದೆನ್ನುವುದನ್ನು ಕೂಡ ಈ ಸಮಾನ ಆಸಕ್ತಿ ಧ್ವನಿಸುತ್ತದೆ ಎಂದು ನಮಗನ್ನಿಸಿತು. ಸ್ತ್ರೀ ಸಂವೇದನೆಯ ಕುರಿತಂತೆ ನಾವು ಬೆಳೆಸಿಕೊಳ್ಳುವ, ಹೆಚ್ಚಿಸಿಕೊಳ್ಳುವ ನಮ್ಮ ಅರಿವು

ನಮ್ಮ ಲೋಕವನ್ನು ಇನ್ನಷ್ಟು ಮಾನವೀಯಗೊಳಿಸುವುದು ಮತ್ತು ನಮ್ಮೆಲ್ಲರನ್ನೂ ಇನ್ನಷ್ಟು ಹತ್ತಿರವಾಗಿಸುವುದು. ಮಾನವೀಯತೆ, ಮತ್ತು ಅದರಲ್ಲಿ ನಾವಿಡಬಹುದಾದ ನಂಬಿಕೆ ಕೂಡ ಒಂದು ತಿಳಿವಳಿಕೆಯೇ. ಸಂವೇದನೆಗಳಿಲ್ಲದ ಬದುಕು ಅಷ್ಟರಮಟ್ಟಿಗೆ ತನ್ನನ್ನಾಗಲಿ, ಅನ್ಯವನ್ನಾಗಲಿ ಅರಿಯುವ, ಅನುಭವಿಸುವ, ಗ್ರಹಿಸುವ, ಪರಸ್ಪರದಲ್ಲಿ ಮಿಡಿಯುವ ಸಾಮರ್ಥ್ಯವೇ ಇಲ್ಲದ ಸ್ಥಿತಿಯಲ್ಲಿ ಇರುವುದುಂಟು. ನಮ್ಮ ಬದುಕಿನ ಹಲವು ಸಂಗತಿಗಳಲ್ಲಿ ನಾವು ಈಗಲೂ ಕಾಣುವುದು ಈ ಸ್ತ್ರೀ ಸಂವೇದನಾರಹಿತ ಸ್ಥಿತಿಯನ್ನೇ.

ನಾವು ಪರಸ್ಪರ ಸಂವಹನ ನಡೆಸಲು ಬಳಸುವ ಭಾಷೆಯನ್ನು ನೋಡಿದಾಗಲೂ ಈ ಸಂವೇದನಾರಾಹಿತ್ಯದ ಹಲವು ರೂಪಗಳು ನಮಗೆ ಮೇಲ್ನೋಟಕ್ಕೇ ಕಾಣುವುದುಂಟು. ಇದು ದಿನನಿತ್ಯದ ಮಾತಿನಲ್ಲಷ್ಟೇ ಅಲ್ಲ, ವಾಟ್ಸಾಪಿನಲ್ಲಿ ತೇಲಿಬರುವ ಒಂದು ಕೆಟ್ಟ ಹೇಳಿಕೆ ಅಥವಾ ಜೋಕ್, ವೇದಿಕೆಯ ಮೇಲೆ ಹಾಸ್ಯವೆಂಬ ಹೆಸರಿನಲ್ಲಿ ನಡೆಸುವ ಕಾರ್ಯಕ್ರಮ, ಗಾದೆ, ಬಯ್ಗುಳ, ನಾಟಕ, ಸಿನಿಮಾ, ಸುದ್ದಿ ಮಾಧ್ಯಮ, ಸಾಮಾಜಿಕ ಮಾಧ್ಯಮಗಳಿಂದ ಹಿಡಿದು ಸಾಹಿತ್ಯಲೋಕದಲ್ಲೂ ಇದು ಧಾರಾಳವಾಗಿ ಕಾಣಬರುವುದುಂಟು.

ಭಾರತೀಯ ಕಾವ್ಯ ಮೀಮಾಂಸೆ ಅಥವಾ ಸಾಹಿತ್ಯ ವಿಮರ್ಶೆ ಸುಮಾರು ಕ್ರಿ.ಶ. 5ನೇ ಶತಮಾನದಿಂದಲೇ ಮೊದಲಾಗಿದೆ. 9–10ನೆಯ ಶತಮಾನದಲ್ಲಿ ಬರುವ ಧ್ವನ್ಯಾಲೋಕದ ಆನಂದವರ್ಧನ, ಕಾವ್ಯವೆಂದರೆ ಏನು (ಸಾಹಿತ್ಯವೆಂದರೆ ಏನು?) ಎಂಬ ಮಹತ್ವದ ಪ್ರಶ್ನೆಯ ಜಿಜ್ಞಾಸೆ ಮಾಡುತ್ತಾ ಕಾವ್ಯವೆಂಬುದು 'ಕಾಂತಾ ಸಮ್ಮಿತ' ಎಂದು ಹೇಳುತ್ತಾನೆ. ಅದರ ಅರ್ಥ ಕಾವ್ಯವೆಂಬುದು ಪ್ರಿಯವಾದ ಹೆಣ್ಣೊಬ್ಬಳು ಮಾತಾಡಿದಂತೆ ಎಂದು. ಆನಂದವರ್ಧನನ ಈ ಮಾತನ್ನು ಹಲವು ವಿಭಿನ್ನ ನೆಲೆಗಳಿಂದ ನೋಡುತ್ತಾ ಹಲವು ವಿಭಿನ್ನ ರೀತಿಗಳಲ್ಲಿ ಅರ್ಥೈಸಬಹುದಾದರೂ ಸ್ತ್ರೀ ಸಂವೇದೀ ಆಶಯ ಮತ್ತು ಹುಡುಕಾಟದ ಉದ್ದೇಶದಿಂದಾಗಿ ಸದ್ಯಕ್ಕೆ ಸಾಹಿತ್ಯವೆಂಬುದು ಹೆಣ್ಣೊಬ್ಬಳ ನುಡಿಯಂತೆ ಮಧುರವಾದುದೂ, ಅನುನಯದಿಂದ ಕೂಡಿದ್ದೂ ಎಂಬ ಕೃತಿಕಾರನ ಮಾತಿನಲ್ಲೇ ಇರುವ ಸಾಂದರ್ಭಿಕ, ನಿರ್ದಿಷ್ಟ ಅರ್ಥವನ್ನಷ್ಟೆ ಇಟ್ಟುಕೊಂಡು ವಿಶ್ಲೇಷಿಸಬಹುದು.

ಹಾಗೆ ನೋಡಿದರೆ, ಸುಮಾರು ಒಂದೂವರೆ ಸಾವಿರ ವರ್ಷಗಳ ಇತಿಹಾಸವಿರುವ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಹೆಣ್ಣೊಬ್ಬಳ ನುಡಿಯನ್ನು ಕೇಳಲು ನಾವು ಹನ್ನೆರಡನೆಯ ಶತಮಾನದವರೆಗೂ ಕಾಯಬೇಕಾಯಿತು ಎನ್ನುವುದೆ ಒಂದು ಸೋಜಿಗ! ಅಲ್ಲಿಯವರೆಗೂ ಹೆಂಗಸರು ಸಾಹಿತ್ಯ ನಿರ್ಮಿತಿಯನ್ನೇ ಮಾಡಿರಲಿಲ್ಲ ಎಂದುಕೊಳ್ಳುವುದು ಮೂರ್ಖತನವಾಗುತ್ತದೆ. ಆದರೆ ಅಲ್ಲಿಯವರೆಗೂ ಅರಮನೆ, ಗುರುಮನೆಗಳ ನೆರಳಿನಲ್ಲೇ ಬೆಳೆಯಬೇಕಿದ್ದ ಸಾಹಿತ್ಯ ಲೋಕದಲ್ಲಿ, ಗಂಡು ಕವಿಗಿದ್ದಂತೆ ಹೆಣ್ಣು ಕವಿಗೆ ಜಾಗವಿರಲಿಲ್ಲ ಎಂದುಕೊಳ್ಳಬಹುದಷ್ಟೇ. ಹೀಗಾಗಿ ಅದು ದಾಖಲಾಗಿರದಿದ್ದರೂ ಜಾನಪದದಲ್ಲಿ ಖಂಡಿತ ಹೆಣ್ಣಿನ ಧ್ವನಿ ಇದ್ದಿರಲೇಬೇಕು. ಇವತ್ತಿಗೂ ಅನೇಕ ಜಾನಪದ ಕಥನ ಕಾವ್ಯಗಳಲ್ಲೂ ನಾಟಕಗಳಲ್ಲೂ ಮಹಿಳೆಯ ಕುರಿತ ಶಕ್ತ, ಅಸಾಂಪ್ರದಾಯಿಕ ನಿಲುವು ಪ್ರಖರವಾಗಿಯೇ ಇರುವುದು ಕಾಣಸಿಗುತ್ತದೆ. ಜಾನಪದ ಸಾಹಿತ್ಯ, ಅದರ ಕರ್ತೃವಿಗೆ ಒದಗಿಸಿಕೊಡುವ

ಅನಾಮಿಕತೆಯೇ ಈ ನಿಲುವಿಗೆ ಕಾರಣವಿರಬಹುದೆಂಬುದೂ ಊಹಿಸಬಲ್ಲ ವಿಷಯ. ದೇಸೀ ಜಾನಪದದ ಹೊರತಾಗಿ ಮಾರ್ಗ ಪರಂಪರೆಯಲ್ಲಿ, ಇದ್ದಕ್ಕಿದ್ದಂತೆ 12ನೆಯ ಶತಮಾನದಲ್ಲಿ ಕೇಳುವ ಹೆಣ್ಣಿನ ಧ್ವನಿಗಳ ವೈವಿಧ್ಯತೆ, ತೀವ್ರತೆ, ಭಾವಾಭಿವ್ಯಕ್ತಿ, ಕಾವ್ಯಾಭಿವ್ಯಕ್ತಿ ಗಮನಿಸುವಾಗ ಯಾರಿಗಾದರೂ ಇದಕ್ಕೊಂದು ದೊಡ್ಡ ಪರಂಪರೆ ಇದ್ದಿರಲೇಬೇಕು ಎಂಬುದು ಖಂಡಿತವಾಗಿಯೂ ಹೊಳೆಯುತ್ತದೆ. ಆದರೆ ಆ ಪರಂಪರೆ ನಮ್ಮ ಗಮನಕ್ಕೇ ಬರದೆ ಹೋಗಿರುವುದರಲ್ಲಿ ಸಾಮಾಜಿಕ ಲಿಂಗ ರಾಜಕಾರಣವು ಕಾರಣವಾಗಿದೆ. ಈ ಮಧುರವಾದ, ಅನುನಯದಿಂದ ಕೂಡಿದ ಹೆಣ್ಣೊಬ್ಬಳು ನುಡಿಯುವ ನುಡಿಯಾದರೂ ಹೇಗಿದೆ ಎಂದು ನಮ್ಮ ವಚನಗಳನ್ನು ನೋಡಿದಾಗ ಕಾಣಸಿಗುವ ಮಾದರಿಗಳು ಒಂದಲ್ಲ, ಹತ್ತಲ್ಲ. ಅದು ನೂರು, ಸಾವಿರ ರೀತಿಗಳಲ್ಲಿವೆ. ಕಾವ್ಯ ಮೀಮಾಂಸೆಯ ಕಾಂತಾ ಸಮ್ಮಿತಿಯ ಕಲ್ಪನೆಗೆ ಹೊರತಾದ ನೂರು ಸಾವಿರ ಬಗೆಯಲ್ಲಿ ಅವಳು ಮಾತನಾಡಿದ್ದಾಳೆ. ನಮ್ಮ ಪುಣ್ಯಕ್ಕೆ ನಾವು ಅದನ್ನು ಕೇಳಲು ಸಿಕ್ಕಿದೆ. ಹಾಗೆ ಸಿಕ್ಕ ಮಾತಿನಲ್ಲಿ ನಿರ್ಭಿಡತೆಯಿದೆ, ತೀವ್ರತೆಯಿದೆ, ದಬ್ಬಾಳಿಕೆಯ-ಹಿಂಸೆಯ ಕುರಿತು ಆಕ್ರೋಶವಿದೆ.

ಗಂಡಾಳ್ವಿಕೆಯೇ ಆದರ್ಶವಾದ ವ್ಯವಸ್ಥೆಯಲ್ಲಿ, ಬಳಸುವ ಭಾಷೆ ಮತ್ತು ಅದು ಹೊಮ್ಮಿಸುವ ಅರ್ಥದ ಹಿಂದಿನ ಮನಸ್ಥಿತಿಯ ಕುರಿತು 12ನೆಯ ಶತಮಾನದ ವಚನಕಾರ್ತಿ ನೀಲಾಂಬಿಕೆಯ ಮಾತುಗಳ ಹಿಂದಿನ ಸೂಕ್ಷ್ಮತೆಯನ್ನು ಅವಲೋಕಿಸಬಹುದು. 'ಹೆಣ್ಣು ಜನ್ಮವೆಂದರೆ ಕೊನೆಯಿಲ್ಲದ ಕಷ್ಟಗಳ ಸರಮಾಲೆ' ಎನ್ನುವ ಸ್ಥಾಪಿತ ಮನೋಭಾವವನ್ನು ಮೀರಿದ ಧ್ವನಿಯೊಂದು ನೀಲಮ್ಮನ ವಚನದಲ್ಲಿ ಹೀಗೆ ಬಂದಿದೆ, 'ಹಂದೆಯಲ್ಲ ನಾನು, ಹರುಷದ ಹೆಣ್ಣು'. ಇಂಥಾ ಹರುಷದ ಹೆಣ್ಣು ತನ್ನದೇ ಇನ್ನೊಂದು ವಚನದಲ್ಲಿ, 'ಮಡದಿ ಎಂಬ ಶಬ್ದ ನಿಶ್ಶಬ್ದವಾದಡೆ ನಾನೀಗ ನಿಜ ಸುಖಿ ಬಸವಾ' ಎಂದು ಪತಿಗೆ ಹೇಳುತ್ತಾಳೆ. ಈ ಎರಡು ಮಾತು, ತಾನು ಹೇಳಬೇಕದ್ದನ್ನೆಲ್ಲಾ ಹೇಳುತ್ತಿರುವಂತೆ ಕಾಣಿಸುತ್ತಿದೆ. ಹೆಣ್ಣು ಹಳಿಯುತ್ತಿರುವುದು ಅಥವಾ ಅಳುತ್ತಿರುವುದು ತನ್ನ ಹೆಣ್ಣು ದೇಹದ ಜೈವಿಕ ಸ್ಥಿತಿಗಲ್ಲ ಬದಲಿಗೆ ಹೆಣ್ಣೆಂಬ ಕಾರಣದಿಂದ ತನಗೊದಗಿ ಬಂದಿರುವ ಪಾತ್ರಗಳ ಅನಿವಾರ್ಯತೆಯನ್ನು ಹೊರುವ ಸ್ಥಿತಿ ಬಂದಿರುವುದಕ್ಕೆ. ತನ್ನ ಬಾಳ ಸಂಗಾತಿಯನ್ನು 'ಬಸವಾ..' ಎಂಬ ಹೆಸರಿನಲ್ಲಿ ಕರೆಯುವುದೇ ಎಷ್ಟೆಲ್ಲಾ ಹೇಳುತ್ತಿದೆ!

**ಮಡದಿ ಎನ್ನಲಾಗದು ಬಸವಂಗೆ ಎನ್ನನು**
**ಪುರುಷನೆನಲಾಗದು ಬಸವನ ಎನಗೆ**
**ಉಭಯ ಕುಳವ ಹರಿದು ಬಸವಂಗೆ**
**ಶಿಶುವಾದೆನು ಬಸವನೆನ್ನ ಶಿಶುವಾದನು...**

ಗಂಡು ಅಥವಾ ಪುರುಷ ಎನ್ನುವ ಹೆಸರಿನಲ್ಲೇ ಪೌರುಷದ, ಆಳುವವನು ಎನ್ನುವ, ದಬ್ಬಾಳಿಕೆಯ, ಹಿಂಸೆಯ ಲೇಪವಿದೆ. ಗಂಡ, ಪತಿ, ಯಜಮಾನ ಎಂಬ ಹೆಸರುಗಳ ಹಿಂದಿನ ಹಿಂಸಕ ಅರ್ಥವನ್ನು ತಿಳಿದ ಯಾರಾದರೂ ತನ್ನ ಪ್ರೀತಿಪಾತ್ರ ಜೀವವಾದ

ಜೀವನ ಸಂಗಾತಿಯನ್ನು ಹಾಗೆ ಕರೆಯುವುದಕ್ಕೆ ಎಷ್ಟು ಕಷ್ಟಪಡಬೇಕಾಗಿ ಬರಬಹುದು! ಒಬ್ಬರಿಗೊಬ್ಬರು ಅಕ್ಕರೆ ಕೊಡುವ, ಪಡೆಯುವ ಪ್ರಕ್ರಿಯೆಯಲ್ಲಿ ಹಿಂಸೆಯನ್ನು ಮೀರುವ ಬಯಕೆಯಿದೆ. ಇದು ಹೆಣ್ಣಿನದಷ್ಟೇ ಅಲ್ಲ, ಮಾನವಮಾತ್ರರಾದ ಎಲ್ಲರದ್ದೂ ಕೂಡ. ಪರಸ್ಪರ ಹೀಗೆ ಮಿಡಿಯುವ, ಅಕ್ಕರೆಯೂಡುವ, ಅರಿಯುವ ಹಂಬಲ ಸ್ತ್ರೀ ಸಂವೇದನೆಯ ರಾಹಿತ್ಯವಿರುವ ವ್ಯವಸ್ಥೆಯಲ್ಲಿ ಕಾಣಸಿಗುವುದು ಸಾಧ್ಯವಿಲ್ಲ. ಇಂಥದ್ದೊಂದು ಪ್ರೇಮರಾಹಿತ್ಯದ ವ್ಯವಸ್ಥೆಯಲ್ಲಿ ಯಾರು ತಾನೆ ನೆಮ್ಮದಿಯಿಂದ ಸಂತೋಷದಿಂದ ಇರಲು ಸಾಧ್ಯ? ಇಂತಹ ವ್ಯವಸ್ಥೆಯಲ್ಲಿ ಪಾತ್ರಗಳ ಭಾರದಲ್ಲಿ ನರಳುವುದು ಕೇವಲ ಹೆಣ್ಣು ಅಂದುಕೊಳ್ಳುವುದು ಕೂಡ ಅರ್ಧಸತ್ಯವೇ.

ಕಲ್ಯಾಣದ ಕ್ರಾಂತಿ ರಕ್ತಸಿಕ್ತವಾಗಿ ಕೊನೆಗೊಂಡ ಬಳಿಕ ಇದ್ದಕ್ಕಿದ್ದಂತೆ ಮಹಿಳಾ ಸಾಹಿತ್ಯವೂ ಹಾಗೆಯೇ ಇನ್ನುಳಿದ ದಮನಿತರ ಧ್ವನಿಗಳೂ ಕನ್ನಡ ಸಾಹಿತ್ಯದಲ್ಲಿ ಒಟ್ಟಿಗೇ ಮಾಯವಾಗಿಬಿಡುವುದನ್ನು ಕಂಡಾಗ ಈ ಎಲ್ಲಕ್ಕೂ ಇರುವ ಹತ್ತಿರದ ನಂಟು ಗೋಚರಕ್ಕೆ ಬರುತ್ತದೆ. ಅಲ್ಲಲ್ಲಿ ಅಷ್ಟಿಷ್ಟು ಮಹಿಳಾ ಧ್ವನಿಗಳು ಕೇಳಿದರೂ ಅದು ಒಟ್ಟಾರೆಯಾಗಿ ಪಿತೃವ್ಯವಸ್ಥೆಯ ಮೌಲ್ಯಗಳ ಮುಖವಾಣಿಯಾಗಿಯೇ ಕಂಡಿವೆ. ಅದು ಹಾಗೆ ಇರುವುದಕ್ಕೆ ಕಾರಣವನ್ನು ಸುಲಭವಾಗಿಯೇ ಊಹಿಸಬಹುದಾಗಿದೆ. ಮಹಿಳಾ ಸಾಹಿತ್ಯವೂ ಸೇರಿದಂತೆ, ದಮನಿತರ ಸಾಹಿತ್ಯದಲ್ಲಿ ಬರೆದದ್ದಷ್ಟೇ ಅಲ್ಲ, ಬರೆಯದೆ ಉಳಿದಿದ್ದರ ಕುರಿತು ಮತ್ತು ಹಾಗೆ ಬರೆಯದಿರಲು ಇರಬಹುದಾದ ಕಾರಣಗಳನ್ನು ಕುರಿತೂ ಚಿಂತಿಸಲು ಪ್ರೇರೇಪಿಸುವುದು ಕೂಡ ಸೂಕ್ಷ್ಮಗ್ರಹಿಕೆ ಇರುವ ಸಂವೇದನಾಶೀಲ ಮನಸ್ಸಿಗೆ ಮಾತ್ರ ಸಾಧ್ಯ.

ಮತ್ತೆ ನಾವು ಹೆಚ್ಚಿನ ಸಂಖ್ಯೆಯಲ್ಲಿ, ವೈವಿಧ್ಯತೆಯಲ್ಲಿ ಮಹಿಳಾ ಧ್ವನಿಗಳನ್ನು ಕೇಳಿಸಿಕೊಳ್ಳಲು ಆಧುನಿಕ ಕನ್ನಡ ಸಾಹಿತ್ಯದ ಕಾಲದವರೆಗೂ ಕಾಯಬೇಕಾಯ್ತು. 19ನೇ ಶತಮಾನದಿಂದ ಮೊದಲುಗೊಂಡು 20ನೇ ಶತಮಾನಕ್ಕೆ ಬರುವಾಗ ಹಾಗೆ ಹೊಮ್ಮಿದ ಮಹಿಳಾ ಧ್ವನಿಗಳು ಕಾಲಾನುಕ್ರಮದಲ್ಲಿ ಗಟ್ಟಿಯಾದದ್ದನ್ನು, ನಿರ್ಭಿಡೆಯಾದುದನ್ನೂ ಎಲ್ಲಕ್ಕಿಂತ ಮುಖ್ಯವಾಗಿ ವೈವಿಧ್ಯಮಯತೆಯನ್ನು ಮತ್ತೆ ಸಾಧಿಸಹೊರಟಿದ್ದನ್ನು ಕಾಣಬಹುದು. ಹೊಸ ಕಾಲದ ಹೊಸ ಭಾಷೆಯಲ್ಲಿ ಬರೆಯುತ್ತಿದ್ದ, ಪ್ರಕಟಿಸುತ್ತಿದ್ದ ಹೊಸಗನ್ನಡದ ಅರುಣೋದಯ ಕಾಲದ ಲೇಖಕಿಯರ ಭಾಷೆ, ವಿಷಯ, ಪ್ರಸ್ತುತಿ ಎಲ್ಲದರಲ್ಲಿಯೂ ಬಹುತೇಕವಾಗಿ ಕಾಣಿಸುತ್ತಿದ್ದ ಅತಿವಿನಯ ಅಥವಾ ಅತಿ ಕೃತಜ್ಞತಾ ಭಾವಕ್ಕೂ ಆ ಕಾಲದ ಅನಿವಾರ್ಯಗಳೇ ಕಾರಣವಾಗಿತ್ತೆಂಬುದನ್ನು ನಾವು ಸುಲಭವಾಗಿಯೇ ಊಹಿಸಬಹುದಾಗಿದೆ. ಉದಾರವಾದದ ಕಡೆಗೆ ಒಲವಿದ್ದವರು, ಹಠವಿಲ್ಲದೆ ಭಿನ್ನಾಭಿಪ್ರಾಯ-ವನ್ನು ಸಹಾನುಭೂತಿಯಿಂದ ಪರಿಶೀಲಿಸುತ್ತಿದ್ದವರು, ಮಹಿಳೆಯರ ಸಾಹಿತ್ಯ ರಚನೆಯ ಕುರಿತು ಪ್ರೋತ್ಸಾಹದ ನಿಲುವು ತಾಳಿದ್ದ ಬಹುತೇಕ ಹಿರಿಯರು, ವಿದ್ವಾಂಸರು, ಸಾಹಿತ್ಯ ಲೋಕದ ಮುಂಚೂಣಿಯಲ್ಲಿದ್ದವರು ಕೂಡ ಹೆಂಗಸರು ಏನನ್ನು ಕುರಿತು ಬರೆಯಬಹುದು, ಹೇಗೆ ಬರೆಯಬೇಕು-ಬಾರದು ಎಂಬ ವಿಷಯದಲ್ಲಿ ಅಚ್ಚರಿಯಾಗುವಷ್ಟು ಸಾಂಪ್ರದಾಯಿಕ ಕಟುನಿಲುವು ಹೊಂದಿದ್ದನ್ನು ಸ್ವತಃ ಅವರದ್ದೇ ಬರಹಗಳ ಮೂಲಕ ಮತ್ತು ಅವರ

ನಂತರದ ಬರಹಗಾರ–ವಿಮರ್ಶಕರ ಕೃತಿಗಳ ಮೂಲಕ ನಾವೀಗ ಅರಿಯಬಹುದಾಗಿದೆ. ಆ ಕಾಲದಲ್ಲಿ ನಡೆದ ಮುಖ್ಯ ಸಂವಾದಗಳನ್ನು, ವಾಗ್ವಾದಗಳನ್ನು ಗಮನಿಸಿದಾಗ, ಅದು ಸ್ತ್ರೀಸಂವೇದೀ ನೆಲೆಯಲ್ಲಷ್ಟೇ ಅಲ್ಲ ಸಾಹಿತ್ಯಿಕವಾಗಿ ಕನ್ನಡ ಸಾಹಿತ್ಯದ ಆ ಕಾಲದ ಮತ್ತು ಆ ನಂತರದ ಕಾಲದ ದಿಕ್ಕು, ಧೋರಣೆ, ಹೊಯ್ದಾಟಗಳತ್ತ ಬೆಳಕು ಚೆಲ್ಲುವ, ಚಾರಿತ್ರಿಕ ಮಹತ್ವವುಳ್ಳ ಸಂಗತಿಯಾಗಿದೆ. ಶತಮಾನಗಳ ಕಾಲ ಸುಮ್ಮನುಳಿದಿದ್ದ ಧ್ವನಿಯೊಂದು ತನ್ನಿಷ್ಟದಂತೆ ಮಾತನಾಡಲು ಹೊರಟಾಗ, ಅದಕ್ಕೆ ಬಂದ ಕಠಿಣ ಟೀಕೆಗಳು ಆ ಮೂಲಕ ಆ ಧ್ವನಿಯನ್ನು ಉಡುಗಿಸಿಬಿಡಬಹುದಾದಷ್ಟು ಶಕ್ತಿ ಇದ್ದವರದ್ದಾಗಿದ್ದವು. ಯಾರೂ ವಿಮರ್ಶಾತೀತರಲ್ಲದಿದ್ದರೂ ಆಗಷ್ಟೇ ಹೊಸ ಕಾಲಘಟ್ಟದ ಹೊಸ್ತಿಲಲ್ಲಿ ನಿಂತು ಶತಮಾನಗಳ ಕಾಲ ಸುಮ್ಮನುಳಿದಿದ್ದ ಧ್ವನಿಯೊಂದು ಮಾತನಾಡಲು ಹೊರಟಾಗ ಅದಕ್ಕೆ ಹೇಳಿಕೊಳ್ಳುವಂಥ ಸ್ವಾಗತವೇನೂ ಸಿಕ್ಕಿರಲಿಲ್ಲ ಎಂಬುದನ್ನು ಗಮನಿಸಲೇಬೇಕು. ಈ ಸವಾಲು ಇನ್ನೊಂದೇ ರೂಪದಲ್ಲಿ ಇಂದಿಗೂ ಜೀವಂತವಾಗಿದೆ. ಬರೆಯುವ ಕುರಿತು ಇರಲಿ, ಲೇಖಕಿಯೊಬ್ಬಳ ಅನುಭವವೊಂದನ್ನು ರುಜು ಮಾಡಲು ಕೇಳುವ, ಹಾಗೆ ಮಾಡದಿದ್ದರೆ ನೀವು ಬರೆದದ್ದೇ ಸುಳ್ಳಿರಬಹುದು ಎಂದು ಅನುಮಾನಿಸುವ, ಅವಮಾನಿಸಲು ನೋಡುವ, ಅತ್ಯಂತ ಆಧುನಿಕರೆಂದು ತಮ್ಮನ್ನು ತಾವೇ ಅಂದುಕೊಂಡಿರುವ ಅನೇಕರು ಈ ಕಾಲದ ಸಾಹಿತ್ಯ ಲೋಕದಲ್ಲೂ ದೊಡ್ಡ ಸಂಖ್ಯೆಯಲ್ಲಿ ಇದ್ದಾರೆ. ಇಂದಿಗೂ ಪುರುಷ ಬರಹಗಾರನೊಬ್ಬನಿಗೆ ಸವಾಲಾಗದ ಹಲವು ವಿಷಯಗಳು ಮಹಿಳಾ ಲೇಖಕರದ್ದು. ಆದರೆ,

**ಇರಲಿರಲಿ ಈ ಭಾರ–**
**ಕಳುಕುವರು ನಾವಲ್ಲ**
**ಅರ್ಜುನನ ಒಕ್ಕಲಲ್ಲ!** (ಚಂಡ ಶಾಸನ – ಬೆಳಗೆರೆ ಜಾನಕಮ್ಮ)

ಎಂದು ಬದುಕಿನಂತೆಯೇ ಬರಹವನ್ನೂ ಒಂದು ಬಗೆಯ ಸವಾಲಿನಲ್ಲೇ ಮಾಡಬೇಕಾಗಿ ಬರುವ ಹಲವು ಸಂದರ್ಭಗಳು ಮಹಿಳಾಲೇಖಕಿಯರನೇಕರಿಗೆ ಈ ಕಾಲಕ್ಕೂ ಇದೆ. ಇದು ಈಗಲೂ ಹೀಗಿರುವುದಕ್ಕೆ ಕಾರಣ ಒಟ್ಟಾರೆಯಾಗಿ ಸಮಾಜದಲ್ಲಿ ಇರುವ ಸ್ತ್ರೀ ಸಂವೇದನಾ ರಾಹಿತ್ಯ ಮನೋಭಾವವೇ ಆಗಿದೆ. ವೈಯಕ್ತಿಕ ನೆಲೆಯಿಂದ ಮಾಡಹೊರಡುವ ಲೋಕಾನುಭವದ ಸಹಜ ನಿರೂಪಣೆಯೊಂದನ್ನು ಹೀಗೆಯೇ ಇರಬೇಕೆಂದು ನಿರ್ದೇಶಿಸುವ, ನಿಯಂತ್ರಿಸುವ ಮತ್ತು ಅದು ಹಾಗಿಲ್ಲದೆ ಹೋದಾಗ ಅದನ್ನು ತಿರಸ್ಕರಿಸಿ, ನಿರುಪಯುಕ್ತವೆಂದು ಅಧಿಕಾರದ ಧೋರಣೆಯಲ್ಲಿ ಮಾತನಾಡುವ ಲೋಕದ ಅಟಾಟೋಪದಲ್ಲಿ ಎಷ್ಟೋ ಸಹಜ ಮಾತುಗಳು ಬೆಳಕಿಗೇ ಬರದೆ ಹೋಗಿರಬಹುದು. ಈ ಧ್ವನಿಗಳಲ್ಲಿ ಹೆಚ್ಚಿನವು ಮಹಿಳೆಯರದೇ ಆಗಿರಲೂಬಹುದು ಎನ್ನುವುದು ಯಾರೂ ಊಹಿಸಬಹುದಾದ ವಿಷಯವೇ ಆಗಿದೆ. ಇದರಿಂದ ನಷ್ಟವಾಗಿರುವುದು ಕೇವಲ ಮಹಿಳೆಯರಿಗಷ್ಟೇ ಅಲ್ಲ, ಇಡೀ ಲೋಕಕ್ಕೆ.

ಒಂದು ದೇಹವು ಆರೋಗ್ಯಕರವಾಗಿರಲು, ಆ ದೈಹಿಕ ವ್ಯವಸ್ಥೆಯನ್ನು ಸರಿತೂಗಿಸಿ-ಕೊಂಡು ಅನುದಿನವೂ ನಡೆಸುವ ಒಂದು ಗೊತ್ತಾದ ವ್ಯವಸ್ಥಿತ ಪ್ರಕ್ರಿಯೆ ಇರುವುದುಂಟು. ಈ ವ್ಯವಸ್ಥೆಗೆ ಭಂಗ ತರುವ ಯಾವುದೋ ಒಂದು ವ್ಯತಿರಿಕ್ತ ಪ್ರಕ್ರಿಯೆ ದೇಹದ ಒಳಗಿನಿಂದಲೋ ಅಥವಾ ಹೊರಗಿನಿಂದಲೋ ಅಡ್ಡ ಬಂದಲ್ಲಿ ಈ ವ್ಯವಸ್ಥೆಯ ಸಮತೋಲನಕ್ಕೆ ಭಂಗ ಉಂಟಾಗಿ ಅದು ಖಾಯಿಲೆಯಾಗಿ ಪರಿಣಮಿಸುವುದು ಎಲ್ಲರಿಗೂ ತಿಳಿದ ವಿಷಯವೇ ಆಗಿದೆ. ಇಡೀ ಸಮಾಜವನ್ನೇ ಒಂದು ದೇಹವನ್ನಾಗಿ ಭಾವಿಸಿದರೆ, ಒಂದು ಸುವ್ಯವಸ್ಥಿತ ಸಹಜ ಸ್ಥಿತಿಯನ್ನು ಅಸಮತೋಲನಗೊಳಿಸಿ, ಸಮಾಜದ ಸ್ವಾಸ್ಥ್ಯ ಕೆಡಿಸುವ ಹಲವು ಸಂಗತಿಗಳಲ್ಲಿ ಮುಖ್ಯವಾಗಿ ಕಾಣುವುದು ಈ ಸಹಾನುಕಂಪದ ಕೊರತೆಯೇ. ಈ ಕೊರತೆಯಿಂದಾಗಿಯೇ ಮಾನವಕುಲದ ಚರಿತ್ರೆಯಲ್ಲಿ ವರ್ಗ, ಬಣ್ಣ, ಲಿಂಗ, ಜಾತಿ ಇತ್ಯಾದಿ ಇತ್ಯಾದಿಗಳಲ್ಲಿ ಮೇಲು ಕೀಳೆಂಬ ಸುಳ್ಳುಗಳನ್ನು ಸೃಷ್ಟಿಸಿ ಒಬ್ಬರನ್ನೊಬ್ಬರು ದ್ವೇಷಿಸುವಂತೆ, ಹಿಂಸಿಸುವಂತೆ ಮಾಡಲಾಗಿದೆ. ಯಾವ ವರ್ಗ, ಯಾವ ಜಾತಿ, ಬಣ್ಣದ ಗುಂಪಿನಲ್ಲೂ ಆಯಾ ಗುಂಪಿನ ಕಟ್ಟ ಕಡೆಯ ಸಂತ್ರಸ್ತೆಯಾಗಿ ಬಹುಮಟ್ಟಿಗೆ ಕಾಣುವುದು ಹೆಣ್ಣು ಜೀವವನ್ನೇ. ಈ ದುರಂತವನ್ನು ಸರಿಮಾಡಲು ಈ ಕಟ್ಟ ಕಡೆಯ ಜೀವದ ಕುರಿತು, ಆ ಸ್ಥಿತಿಯ ಕುರಿತು ಸಹಾನುಕಂಪದಿಂದ ತಿಳಿದುಕೊಳ್ಳುವ ಸ್ತ್ರೀ ಸಂವೇದೀ ಮನಸ್ಥಿತಿ ಬೇಕಾಗುತ್ತದೆ. ಹಾಗೆಯೇ ಒಂದು ಸಮಾಜದಲ್ಲಿ ಮಹಿಳೆಯರ ಬದುಕು ಹಸನಾದಂತೆಲ್ಲಾ ಅದು ಸಮಾಜದ ಉಳಿದೆಲ್ಲಾ ಸ್ತರಗಳಲ್ಲೂ ಬಿಂಬಿಸಿ, ಇಡೀ ಸಮಾಜದ ಸ್ವಾಸ್ಥ್ಯ ಸುಧಾರಿಸುವುದನ್ನು ನಾವು ನೋಡುತ್ತಲೇ ಇದ್ದೇವೆ. ಹೀಗಾಗಿಯೇ ಇದು ಎಲ್ಲರಿಗೂ ಸಂಬಂಧಿಸಿದ ವಿಷಯ. ಸುಧಾರಣೆ ಎನ್ನುವುದು ಕೇವಲ ಕೆಲವೇ ಜನ ಸ್ತ್ರೀಯರ ಸ್ಥಿತಿಗತಿ ಸುಧಾರಿಸುವುದಲ್ಲ ಮತ್ತು ಹಾಗಾಗುವುದರಿಂದ ಆ ಸಮಾಜವೇ ಬಹಳ ಸುಧಾರಿಸಿದ ಸಮಾಜ ಎಂದೇನೂ ಹೇಳಲಾಗುವುದಿಲ್ಲ. ಉದಾಹರಣೆಗೆ, ಅಮೆರಿಕಾದಲ್ಲಿ ಈವರೆಗೆ ಒಬ್ಬ ಮಹಿಳೆಯೂ ಈ ದೇಶದ ಅಧ್ಯಕ್ಷರಾಗಿಲ್ಲ ಎಂಬುದು ನಿಜವಾದರೂ ಅದನ್ನು ಒಂದು ಮಾನದಂಡವಾಗಿಟ್ಟುಕೊಂಡು ಅಮೆರಿಕಾದ ಉಳಿದೆಲ್ಲ ಮಹಿಳೆಯರ ಸ್ಥಿತಿಗತಿಯನ್ನು ಅಳೆಯಹೊರಡುವುದು ಅಥವಾ ಅದನ್ನು ಈಗಾಗಲೇ ಹಲವಾರು ಮಹಿಳಾ ಪ್ರಧಾನಿ/ಅಧ್ಯಕ್ಷರು ಬಂದು ಹೋಗಿರುವ ಮೂರನೇ ಜಗತ್ತಿನ ದೇಶಗಳ ಮಹಿಳೆಯರ ಸ್ಥಿತಿಗತಿಯೊಂದಿಗೆ ತುಲನೆ ಮಾಡುವುದು ಸಾಧ್ಯವಿಲ್ಲದ ಕೆಲಸ. ಇಂಥಾ ಸೂಕ್ಷ್ಮ ವಿಷಯಗಳ ಹಿಂದಿರುವ ರಾಜಕೀಯವನ್ನೂ ನಾವು ಇನ್ನೂ ಹೆಚ್ಚು ಅರ್ಥ ಮಾಡಿಕೊಳ್ಳಬೇಕಿದೆ.

ಸಿದ್ಧಮೌಲ್ಯಗಳನ್ನು ಪ್ರತಿಪಾದಿಸುತ್ತಾ ಆಚರಿಸುತ್ತ, ತಾನು ಹೇಳುವ ಸರಿ ತಪ್ಪುಗಳನ್ನು ಎಲ್ಲರೂ ಒಪ್ಪಬೇಕೆಂದು ಬಯಸುವ ದಬ್ಬಾಳಿಕೆಯ ಮನಸ್ಥಿತಿಯ ವಿರುದ್ಧವಾಗಿ ನಿಂತು ಹಿಂಸೆಯನ್ನು ವಿರೋಧಿಸುವ, ಸಮಾನತೆಯ ಪರ ನಿಲ್ಲುವ, ಮಾನವೀಯ ಕಾಳಜಿಯ ಗುಣ ಮತ್ತು ಅದಕ್ಕೆ ಪ್ರತಿಸ್ಪಂದಿಸಿ ಮಿಡಿಯುವ ಮನಸ್ಥಿತಿ ಇರುವ ಎಲ್ಲರೂ ಸಹಜವಾಗಿಯೇ

ಸ್ತ್ರೀ ಸಂವೇದಿಯಾಗಿಯೂ ಇರುತ್ತಾರೆ ಎಂದು ಹೇಳುವ ಹಾಗಿಲ್ಲದಿರುವುದು ಕೂಡ ಒಂದು ದುರಂತವೇ. ಪಿತೃಪ್ರಧಾನ ವ್ಯವಸ್ಥೆಯ ಮೌಲ್ಯಗಳನ್ನು ನಾವೆಲ್ಲರೂ ಎಷ್ಟು ರೂಢಿಗತ ಮಾಡಿಕೊಂಡುಬಿಟ್ಟಿದ್ದೇವೆಂದರೆ, ಎಷ್ಟೋ ಬಾರಿ ಇದು ಸಂತ್ರಸ್ತ ಹಾಗು ಶೋಷಕ ಇಬ್ಬರ ಅರಿವಿಗೂ ಬಾರದಷ್ಟು ನಮ್ಮೆಲ್ಲರ ಬದುಕಿನಲ್ಲಿ ಹಾಸುಹೊಕ್ಕಾಗಿ ಹೆಣೆದುಕೊಂಡುಬಿಟ್ಟಿದೆ. ಈ ಅಸಮಾನತೆಯೇ ಸಹಜ ಸ್ಥಿತಿ ಎಂಬಂತೆ ಒಪ್ಪಿತವೂ ಆಗಿಬಿಟ್ಟಿದೆ. ಹಾಗೆ ನೋಡಿದರೆ, ಒತ್ತಡ, ಹಿಂಸೆ, ಅಭದ್ರತೆಯಂಥಾ ಸಂಕೀರ್ಣ ಭಾವನೆಗಳು ಕೇವಲ ಹೆಣ್ಣಿಗಷ್ಟೇ ಅಲ್ಲ, ಮನುಷ್ಯ ಮಾತ್ರರಾದ ಎಲ್ಲರಿಗೂ ಇರುತ್ತದೆ. ಆದರೆ ಇತಿಹಾಸದುದ್ದಕ್ಕೂ ಬಹುಕಾಲದಿಂದಲೂ ಪುರುಷಪ್ರಧಾನ ಲೋಕದಲ್ಲಿ ಹೆಂಗಸಿನ ಇಂಥ ಕಷ್ಟಗಳು ಉಳಿದ ಎಲ್ಲರಿಗಿಂತಲೂ ಹೆಚ್ಚಿದ್ದ ಕಾರಣಕ್ಕೆ ಮತ್ತು ಬಹುತೇಕ ಎಲ್ಲಾ ಕಾಲದ ಎಲ್ಲಾ ಸಮಾಜಗಳಲ್ಲೂ ಪರಮ ಶೋಷಿತಳಾಗಿದ್ದು ಮಹಿಳೆಯೇ ಆದ ಕಾರಣಕ್ಕೆ ಸ್ತ್ರೀ ಸಂವೇದನೆ ಎಂಬ ಅರಿವಿನ ಮೂಲಕ ಲೋಕದ ಉಳಿದೆಲ್ಲಾ ಕಷ್ಟಗಳಿಗೂ ಮಿಡಿಯ ಬಹುದಾದ, ಆದ ತಪ್ಪುಗಳನ್ನು ಸರಿಪಡಿಸಿಕೊಳ್ಳಬಹುದಾದ ಮಾರ್ಗವೊಂದು ಸಿಗಬಹುದು. ಒಟ್ಟಿನಲ್ಲಿ ಸ್ತ್ರೀ ಸಂವೇದೀ ಒಳಮನವಿಲ್ಲದೆ, ಈ ಲೋಕವನ್ನು ಅದು ಇರುವ ಹಾಗೆ ಅರಿಯುವ ಸಾಮರ್ಥ್ಯವನ್ನೇ ನಾವು ಕಳೆದುಕೊಳ್ಳುವುದಂತೂ ಸತ್ಯ.

ಈ ವರ್ತಮಾನ ಕಾಲದಲ್ಲಿ ನಾವು ಗಮನಿಸಬೇಕಾದ ಇನ್ನೊಂದು ಬಹುಮುಖ್ಯವಾದ ಸಂಗತಿಯೆಂದರೆ, ಲಿಂಗತ್ವದ ಅಸ್ಮಿತೆಯಾದರೂ ಹೇಗೆ ನಿರ್ಧಾರಿತವಾಗುತ್ತದೆ ಎನ್ನುವುದು. ಸಾಂಪ್ರದಾಯಿಕವಾದ ದೇಹಲಕ್ಷಣಗಳನ್ನಾಧರಿಸಿ ನಿರ್ಧಾರಿತವಾಗುತ್ತಿದ್ದ ಗಂಡು ಹೆಣ್ಣುಗಳೆಂಬ ಲಿಂಗತ್ವದ ಆಚೆಗೂ ಇದು ಚಾಚಿಕೊಳ್ಳಬಹುದೆನ್ನುವ ಸಾಧ್ಯತೆ ಹೆಚ್ಚು ಹೆಚ್ಚು ಬೆಳಕಿಗೆ ಬರುತ್ತಿದ್ದಂತೆ ಲಿಂಗ ಮತ್ತು ಲೈಂಗಿಕ ಆಯ್ಕೆಯ ಬಗೆಗಿನ ಸಾಧ್ಯತೆಗಳೂ ವಿಸ್ತರಿಸಿಕೊಳ್ಳುತ್ತಾ ಅದು ಸದ್ಯಕ್ಕೆ LGBTQIA+ ಎಂಬಲ್ಲಿಗೆ ಬಂದಿದೆ. ಮೊದಲಿನಿಂದಲೂ ಇದ್ದ ಸಂಗತಿಯೇ ಆದರೂ ಬದಲಾದ ವಿದ್ಯುನ್ಮಾನ, ಸಾಮಾಜಿಕ ಮಾಧ್ಯಮದ ಕಾಲದಲ್ಲಿ ಇದರ ಕುರಿತ ಅರಿವು ಮತ್ತು ಕಾಣುವಿಕೆಯೂ ಹೆಚ್ಚಾಗುತ್ತಾ ಅದಕ್ಕೆ ತಕ್ಕಂತೆ ಹಿಂದೆಂದಿಗಿಂತಲೂ ತೀವ್ರವಾದ ವಿರೋಧವನ್ನು ಎದುರಿಸುತ್ತಿರುವ ಕಷ್ಟಕಾಲದಲ್ಲಿದೆ. ಈ ಕಾಲದ ಇಂಥದ್ದೊಂದು ಹೊಸ ಸಂದರ್ಭದಲ್ಲಿ ಹೆಣ್ಣು ಅಥವಾ ಗಂಡು ಎನ್ನುವ ಶಬ್ದಗಳ ಅರ್ಥವೇ ಬದಲಾಗುತ್ತಿರುವಾಗ, ಮೂಡಬಹುದಾದ ಹೊಸ ಪ್ರಶ್ನೆಗಳೂ ಹೊಸದೇ ಆಗಿವೆ. ಈ gender fluidity ಅನ್ನುವ ನೆಲೆಗಟ್ಟಿನ ಹಿನ್ನೆಲೆಯಲ್ಲಿ ಕಾಣುವ ಕೆಲವು ಹೊಳಹುಗಳು ಕೂಡ ಈ ಪುಸ್ತಕದಲ್ಲಿರುವ ಕೆಲವು ಬರಹಗಳಲ್ಲಿ ಅಲ್ಲಲ್ಲಿ ಕಾಣಿಸಿಕೊಂಡಿದೆ.

ವಿವರಿಸಲು, ಅರ್ಥೈಸಲು ಅಷ್ಟು ಸುಲಭವಲ್ಲದ ಸ್ತ್ರೀ ಸಂವೇದನೆ ಎನ್ನುವ ಈ ವಿಷಯ ಕುರಿತಂತೆ ಹೆಚ್ಚಿನ ಸಂಖ್ಯೆಯಲ್ಲಿ, ಅತಿ ಕಡಿಮೆ ಅವಧಿಯಲ್ಲಿಯೇ ನಮಗೆ ಬಂದ ಲೇಖನಗಳನ್ನು ನೋಡಿದಾಗ ಈ ವಿಷಯವು ಎಲ್ಲರನ್ನೂ ಒಂದಲ್ಲ ಒಂದು ರೀತಿಯಲ್ಲಿ ಚಿಂತನೆಗೆ ಹಚ್ಚಿದೆ ಮತ್ತು ಬರೆಯಲು ಪ್ರೇರೇಪಿಸಿದೆ ಎನ್ನುವ ವಿಷಯವಂತೂ ನಮಗೆ ಮನದಟ್ಟಾಯಿತು. ಆಯಾ ಬರಹಗಾರರು ತಮ್ಮ ವೈಯಕ್ತಿಕ ನೆಲೆಯಲ್ಲಿ ಸ್ತ್ರೀ

ಸಂವೇದನೆ ಎನ್ನುವುದನ್ನು ಹೇಗೆ ಅರ್ಥೈಸುವ ಪ್ರಯತ್ನ ನಡೆಸಿದ್ದಾರೆ ಅಷ್ಟೂ ಭಿನ್ನ ರೀತಿಯ ಬರಹಗಳು ನಮಗೆ ಸಿಕ್ಕಿವೆ. ಹೆಚ್ಚಿನವರೆಲ್ಲರೂ ತಮ್ಮ ತಮ್ಮ ಅನುಭವ, ಆಲೋಚನೆ ಮತ್ತು ಅಧ್ಯಯನದ ಆಧಾರದ ಮೇಲೆ ಸ್ತ್ರೀ ಸಂವೇದನೆ ಎನ್ನುವ ಸೂಕ್ಷ್ಮ ವಿಷಯವನ್ನು ತಮ್ಮದೇ ರೀತಿಯಲ್ಲಿ ಅರ್ಥೈಸಿಕೊಂಡು ಬರೆದ ಬರಹಗಳು ಇಲ್ಲಿವೆ. ಹಾಗೆಯೇ ನಮ್ಮ ಈ ಪುಸ್ತಕದಲ್ಲಿ ಬರೆದ ಲೇಖಕರೆಲ್ಲರೂ ನುರಿತ ಬರಹಗಾರರೇ ಎಂದೇನಿಲ್ಲ. ಅಮೆರಿಕಾದಲ್ಲಿದ್ದು ಕನ್ನಡ ಸಾಹಿತ್ಯದಲ್ಲಿ ಆಸಕ್ತರಾಗಿದ್ದು ನಮ್ಮ ಈ ಸಮ್ಮೇಳನದ ಕೇಂದ್ರ ವಸ್ತುವಿನ ಕುರಿತು ಬರೆಯಬೇಕೆಂಬ ಆಸಕ್ತಿ ಇದ್ದ ಎಲ್ಲಾ ಬರಹಗಾರರಿಗೂ ಇಲ್ಲಿ ಅವಕಾಶ ಒದಗಿಸುವುದು ಕನ್ನಡ ಸಾಹಿತ್ಯ ರಂಗದ ಮುಖ್ಯ ಉದ್ದೇಶಗಳಲ್ಲೊಂದಾದ ಕಾರಣ, ಈ ಪುಸ್ತಕದಲ್ಲಿ ಇದೇ ಮೊದಲ ಬಾರಿಗೆ ಬರೆದವರಿಂದ ಹಿಡಿದು, ಈಗಾಗಲೇ ತಮ್ಮ ಪುಸ್ತಕಗಳನ್ನು ಪ್ರಕಟಿಸಿ ಹೆಸರು ಮಾಡಿರುವ, ಪುರಸ್ಕಾರಗಳನ್ನು ಪಡೆದಿರುವ, ನಿರಂತರವಾಗಿ ಬರೆಯುತ್ತಿರುವ ಅಥವಾ ಆಗಾಗ್ಗೆ ಬರೆಯುವ ಬರಹಗಾರರೂ ಇದ್ದಾರೆ. ಹಾಗೆ ಬರೆದ ಲೇಖಕರ ಆಸಕ್ತಿ, ಹಿನ್ನೆಲೆ, ಕೆಲಸ ಮಾಡುತ್ತಿರುವ ಕ್ಷೇತ್ರ ಎಲ್ಲವೂ ಬೇರೆಬೇರೆಯದ್ದಾಗಿದೆ. ಇದು ನಮ್ಮ ಪುಸ್ತಕದ ವಸ್ತು, ಗ್ರಹಿಕೆ, ವಿಷಯ ಮಂಡನೆಗೆ ಸಾಕಷ್ಟು ವೈವಿಧ್ಯ ಒದಗಿಸಿರುವ ಹಾಗೆಯೇ ಕೆಲವು ವಿಷಯಗಳಲ್ಲಿ ಅಸಮತೋಲನವನ್ನೂ ತಂದಿರಬಹುದು. ಬಹುಮುಖ್ಯವಾಗಿ ಮಹಿಳಾ ಸಂವೇದನೆ, ಸ್ತ್ರೀವಾದ ಇತ್ಯಾದಿ ವಿಷಯಗಳ ಕುರಿತು ಕೆಲಸ ಮಾಡಿರುವ ಅಕಡೆಮಿಕ್ ಅಥವಾ ಹೋರಾಟದ ಹಿನ್ನೆಲೆಯ ಬರಹಗಾರರ ಪ್ರಸ್ತುತಿಗಳಿಗಿಂತ ಭಿನ್ನವಾದ ಪ್ರಸ್ತುತಿಗಳು ಇಲ್ಲಿ ಕಾಣಿಸಿಕೊಂಡಿರಲೂಬಹುದು. ಒಟ್ಟಾರೆಯಾಗಿ ಸ್ತ್ರೀ ಸಂವೇದನೆ ಎಂಬ ಸೂಕ್ಷ್ಮ ವಿಷಯದ ಘನತೆ, ಅವಶ್ಯಕತೆ ಮತ್ತು ವ್ಯಾಪ್ತಿಯನ್ನು ಅರಿತು, ಅದರ ಕುರಿತಂತೆ ಬರೆದಿರುವ ಎಲ್ಲಾ ಲೇಖನಗಳನ್ನೂ ಇಲ್ಲಿ ಒಂದುಗೂಡಿಸಲಾಗಿದೆ. ನಮ್ಮ ವಿಷಯಕ್ಕೆ ಅಷ್ಟು ಸೂಕ್ತ ಅಥವಾ ಸಮರ್ಪಕ ಎನಿಸದ ಕೆಲವೇ ಕೆಲವು ಬರಹಗಳನ್ನು ಕೈಬಿಟ್ಟಿದ್ದೂ ಇದೆ.

ಈ ಪುಸ್ತಕದಲ್ಲಿ ಅಮೆರಿಕಾದಲ್ಲೇ ಹುಟ್ಟಿ ಬೆಳೆಯುತ್ತಿರುವ ನಮ್ಮ ಹೊಸ ತಲೆಮಾರಿನ ಕೆಲವು ಬರಹಗಾರರು ಕೂಡ ಬರೆದಿದ್ದಾರೆ. ಇಲ್ಲಿ ಹುಟ್ಟಿ ಬೆಳೆಯುತ್ತಿರುವ ನಮ್ಮ ಹೊಸ ತಲೆಮಾರಿಗೆ ಕನ್ನಡ ಸಾಹಿತ್ಯವನ್ನು ಪರಿಚಯಿಸುವ ಕೆಲಸವನ್ನು ಕೂಡ ಕನ್ನಡ ಸಾಹಿತ್ಯ ರಂಗ ಈಗಾಗಲೇ ಮಾಡುತ್ತಾ ಬಂದಿದೆ. ನಮ್ಮೆಲ್ಲರಿಗೂ ಇದೊಂದು ಹೃದ್ಯಂಗಮವಾದ ವಿಷಯ. ಅಮೆರಿಕಾದ ಇಂಗ್ಲಿಷ್ ಪರಿಸರದಲ್ಲಿ ಬೆಳೆಯುತ್ತಿರುವ ನಮ್ಮ ಮಕ್ಕಳು ಕನ್ನಡ ಸಾಹಿತ್ಯವನ್ನು ಅದರ ಇಂಗ್ಲಿಷ್ ಅನುವಾದದಲ್ಲಿ ಓದಿಕೊಂಡು ಅದಕ್ಕೆ ಸ್ಪಂದಿಸುವ ಪ್ರಕ್ರಿಯೆಯಲ್ಲಿ ನಮ್ಮ ಸಂತೋಷಕ್ಕೂ ಮಿಗಿಲಾದ ಇನ್ನೊಂದು ಲಾಭವೂ ಇದೆ. ಈ ಪುಸ್ತಕದ ಮಟ್ಟಿಗೆ ಹೇಳುವುದಾದರೆ, ಸ್ತ್ರೀವಾದ ಹಾಗೆಯೇ ಮಾನವ ಹಕ್ಕುಗಳಿಗೆ ಸಂಬಂಧಿಸಿದ ಅನೇಕ ಚಳುವಳಿಗಳು ಭಾರತಕ್ಕಿಂತ ಹಲವು ದಶಕಗಳ ಮೊದಲೇ ಶುರುವಾದದ್ದು ಅಮೆರಿಕಾ ಎನ್ನುವ ಈ ನೆಲದಲ್ಲಿ. ಇಂದಿಗೂ ಇಲ್ಲಿ ಪ್ರಜಾಪ್ರಭುತ್ವ, ಸಮಾನತೆ ಇತ್ಯಾದಿ ತತ್ವಗಳು ಪ್ರಾಯೋಗಿಕವಾಗಿ ಭಾರತದಲ್ಲಿ ದಿನನಿತ್ಯದ ಆಚರಣೆಯಲ್ಲಿ ಇರುವುದಕ್ಕಿಂತ

ಬಹಳ ಭಿನ್ನವಾಗಿದೆ. ಇಲ್ಲಿ ಹುಟ್ಟಿ ಬೆಳೆದು ಇಲ್ಲಿಯವರೇ ಆದ ಈ ಹೊಸ ತಲೆಮಾರು ಈ ಎಲ್ಲಾ ವಿಷಯಗಳಿಗೂ ಸ್ಪಂದಿಸುವ ರೀತಿಯನ್ನು ಅವಲೋಕಿಸುವ ಅವಕಾಶ ನಮಗೆ ಸಿಕ್ಕಿದೆ. ಆ ಮೂಲಕ ನಮ್ಮ ನಂಬಿಕೆ, ನಡವಳಿಕೆಗಳನ್ನೂ ನಾವು ವಿಮರ್ಶೆ ಮಾಡಿಕೊಳ್ಳುವ ಅವಕಾಶವಿದೆ. ಕನ್ನಡದ ಮೂರು ಕಾದಂಬರಿಗಳನ್ನು ಅನುವಾದದಲ್ಲಿ ಓದಿ ಈ ಹೊಸ ತಲೆಮಾರಿನ ಬರಹಗಾರರು ಮಾಡಿರುವ ಅವಲೋಕನವನ್ನು ಮತ್ತೆ ಇಂಗ್ಲೀಷಿನಿಂದ ಕನ್ನಡಕ್ಕೆ ತಂದು ಇಲ್ಲಿ ಹಂಚಿಕೊಳ್ಳಲಾಗಿದೆ. ಇಂಗ್ಲೀಷಿನಲ್ಲಿ ಅನುವಾದಗೊಂಡಿರುವ ಕೆಲವೇ ಕನ್ನಡ ಕೃತಿಗಳನ್ನು ಹೊಸ ತಲೆಮಾರಿನ ಲೇಖಕರು ಆರಿಸಿಕೊಳ್ಳಬೇಕಾದ ಅನಿವಾರ್ಯತೆ ಇಲ್ಲಿಯೂ ಕಂಡಿದೆ. ಕನ್ನಡದಿಂದ ಇಂಗ್ಲೀಷಿಗೆ ಅನುವಾದಗೊಳ್ಳುವ ಕೃತಿಗಳ ಸಂಖ್ಯೆ ಹೆಚ್ಚಿದಂತೆಲ್ಲಾ ಈ ಕೃತಿಗಳ ಕುರಿತ ಹೊಸತೊಂದು ನೆಲೆಯ ವಿಮರ್ಶೆಯೂ ನಮಗೆ ಸಿಗಬಹುದೆಂದು ಈ ಲೇಖನಗಳು ನಮಗೆ ಹೇಳುತ್ತಿವೆ.

ಮುಖ್ಯವಾಗಿ ಪುಸ್ತಕದ ಬರಹಗಳನ್ನು ಕತೆಗಳು ಮತ್ತು ಲೇಖನಗಳು ಎಂಬ ಎರಡು ವಿಭಾಗಗಳಲ್ಲಿ ವಿಂಗಡಿಸಲಾಗಿದೆ. ಲೇಖನಗಳ ವಿಭಾಗದಲ್ಲಿ ಪ್ರಬಂಧಗಳು, ಜೀವನ ಚಿತ್ರಗಳು, ಸ್ವತಃ ಅನುಭವದ ಹಿನ್ನೆಲೆಯಲ್ಲಿ ಮೂಡಿದ ಆಲೋಚನೆಗಳು ಅಲ್ಲದೆ ಪುಸ್ತಕ ವಿಮರ್ಶೆಗಳೂ ಇವೆ. ಪುಸ್ತಕದ ಮೊದಲ ಭಾಗದಲ್ಲಿ ಕತೆಗಳಿದ್ದು ನಂತರದ ಭಾಗ ಲೇಖನಗಳದ್ದು. ಎರಡೂ ವಿಭಾಗಗಳಲ್ಲೂ ಇರುವ ಬರಹಗಳನ್ನು ಲೇಖಕರ ಮೊದಲ ಹೆಸರನ್ನಾಧರಿಸಿ ಮಾಡಿದ ಅನುಕ್ರಮದಲ್ಲಿ ಜೋಡಿಸಲಾಗಿದೆ.

ಈ ಬಾರಿಯ ವಸಂತ ಸಾಹಿತ್ಯೋತ್ಸವಕ್ಕೆ ಮುಖ್ಯ ಅತಿಥಿಗಳಾಗಿರುವ, ಪ್ರಮುಖ ಸ್ತ್ರೀವಾದಿ ಲೇಖಕಿ ಮತ್ತು ಚಿಂತಕಿ ಡಾ. ಎಚ್. ಎಸ್. ಶ್ರೀಮತಿ ಅವರು ತಮ್ಮ ಅಧ್ಯಕ್ಷ ಭಾಷಣದ ಸಾರಾಂಶವನ್ನು ನಮ್ಮ ಪುಸ್ತಕದಲ್ಲಿ ಪ್ರಕಟಿಸಲು ಅನುಮತಿ ಕೊಟ್ಟು ಸಕಾಲದಲ್ಲಿ ಕಳಿಸಿಕೊಟ್ಟಿದ್ದಾರೆ. ಅವರಿಗೆ ನಮ್ಮ ಗೌರವಪೂರ್ವಕ ವಂದನೆಗಳು.

ಈ ಯೋಜನೆಯ ಪ್ರಾರಂಭದಿಂದ ಹಿಡಿದು, ಪುಸ್ತಕವಾಗಿ ಇದು ಹೀಗೆ ಕೈಸೇರುವವರೆಗೆ ನಮಗೆ ನೆರವಾದ ಅನೇಕರಿದ್ದಾರೆ.

- ಆಯ್ಕೆಯ ಪ್ರಕ್ರಿಯೆಯಲ್ಲಿ ನೆರವಾಗಿ, ಬರಹಗಳನ್ನು ಉತ್ತಮಪಡಿಸುವಲ್ಲಿಯೂ ಸೂಕ್ತ ಸಲಹೆ ಸಹಕಾರಗಳನ್ನಿತ್ತ ಪುಸ್ತಕದ ಸಲಹಾ ಸಮಿತಿಯ ಸದಸ್ಯರಾದ ಮೈ. ಶ್ರೀ. ನಟರಾಜ, ತ್ರಿವೇಣಿ ಶ್ರೀನಿವಾಸರಾವ್ ಮತ್ತು ಗುರುಪ್ರಸಾದ ಕಾಗಿನೆಲೆ,
- ಪುಸ್ತಕವನ್ನು ಪ್ರಾಯೋಜಿಸಿರುವ, ಕಸಾರಂ ಪೋಷಕರೂ ಹ್ಯೂಸ್ಟನ್ನಿನ ಹೆಮ್ಮೆಯ ಕನ್ನಡಿಗರೂ ಆದ ವತ್ಸ ಕುಮಾರ್,
- ನಮ್ಮ ಕೋರಿಕೆಯನ್ನು ಮನ್ನಿಸಿ ಅತ್ಯಲ್ಪ ಕಾಲದಲ್ಲಿ ಎಲ್ಲಾ ಬರಹಗಳನ್ನೂ ಓದಿ, ಚೆಂದದ ಮೌಲಿಕ ಮುನ್ನುಡಿ ಬರೆದುಕೊಟ್ಟ ಡಾ. ರಾಜೇಂದ್ರ ಚೆನ್ನಿ,
- ಪುಸ್ತಕದ ಹಸ್ತಪ್ರತಿಯನ್ನು ಓದಿ, ಅಚ್ಚುಕಟ್ಟಾಗಿ ಕರಡು ತಿದ್ದಿಕೊಟ್ಟ ಸಪ್ನಾ ಭಟ್ ಮತ್ತು ಸತ್ಯಪ್ರಕಾಶ್ ಕಾಗಿನೆಲೆ,

- ಎಂದಿನಂತೆ ಮುದ್ರಣದ ಅನುಕೂಲಕ್ಕೆ ತಕ್ಕಂತೆ ಲಿಪಿ ಬದಲಾವಣೆ ಮಾಡಿ, ಕರಡು ಪ್ರತಿಯನ್ನು ಒಪ್ಪ ಮಾಡಿಕೊಟ್ಟ ಶ್ರೀವತ್ಸ ಜೋಶಿ,
- ಪುಸ್ತಕವನ್ನು ಅಚ್ಚುಕಟ್ಟಾಗಿ ಮುದ್ರಿಸಿ ಪ್ರಕಟಿಸಿರುವ ಅಭಿನವ ರವಿಕುಮಾರ್, ಪಿ. ಚಂದ್ರಿಕಾ ಮತ್ತು ಅಭಿನವ ಬಳಗ,
- ಸೂಕ್ತವಾದ ಮುಖಪುಟ ಚಿತ್ರವನ್ನು ಕೊಟ್ಟ ಸೌಮ್ಯ ಪ್ರಭು ಕಲ್ಯಾಣ್‌ಕರ್,
- ಚೆಂದವಾಗಿ ವಿನ್ಯಾಸಗೊಳಿಸಿದ ಶ್ರೀಧರ್, ಮುದ್ರಿಸಿದ ಹೂವಪ್ಪ ಮತ್ತು ಧರಣಿ ಪ್ರಿಂಟರ್ಸ್‌ನ ಸಿಬ್ಬಂದಿ ವರ್ಗ,
- ಈ ಪುಸ್ತಕವನ್ನು ಸಂಪಾದಿಸುವ ಅವಕಾಶವನ್ನು ನಮಗೆ ಕೊಟ್ಟ ಕನ್ನಡ ಸಾಹಿತ್ಯ ರಂಗ.

ಇವರೆಲ್ಲರಿಗೆ ಮತ್ತು

ಓದುತ್ತಿರುವ ನಿಮ್ಮೆಲ್ಲರಿಗೆ,

ನಮ್ಮ ಪ್ರೀತಿಪೂರ್ವಕ ಧನ್ಯವಾದಗಳು.

– **ಮೀರಾ ಪಿ. ಆರ್** (ಸಂಪಾದಕಿ)

– **ಪೂರ್ಣಿಮಾ ಕಶ್ಯಪ್** (ಸಹ ಸಂಪಾದಕಿ)

# ಸ್ತ್ರೀ ಸಂವೇದನೆ

## ಕನ್ನಡ ಸಾಹಿತ್ಯ ರಂಗದ ಹನ್ನೊಂದನೆಯ ಸಮ್ಮೇಳನದ ಮುಖ್ಯ ಅತಿಥಿ

## ಎಚ್. ಎಸ್. ಶ್ರೀಮತಿ ಅವರ ಆಶಯ ಭಾಷಣ

ಉತ್ತರ ಅಮೆರಿಕಾ ನಾಡಿನಲ್ಲಿ ನೆಲೆಸಿರುವ ಕನ್ನಡಿಗರು ತಂತಮ್ಮ ವೃತ್ತಿಜೀವನದ ಜೊತೆಗೆ ತಮ್ಮ ನುಡಿಯ ಜೊತೆಗೂ ನಂಟನ್ನು ಕಾಯ್ದುಕೊಳ್ಳುತ್ತಾ ಬರುತ್ತಿದ್ದಾರೆ. ಆ ನಿಟ್ಟಿನಲ್ಲಿ ಕನ್ನಡ ಸಾಹಿತ್ಯ ರಂಗವು ಕಳೆದ ಎರಡು ದಶಕಗಳಿಂದ ನಡೆಸಿಕೊಂಡು ಬಂದಿರುವ ಚಟುವಟಿಕೆಗಳ ಸ್ವರೂಪವನ್ನು ಅರಿತುಕೊಳ್ಳುವ ಅವಕಾಶ ನನಗೆ ದೊರಕಿರುವುದು ಸಂತಸದ ಸಂಗತಿ. ಇಲ್ಲಿನ ಕನ್ನಡಿಗರಲ್ಲಿ ಕವಿಗಳು, ಕತೆಗಾರರು, ಕಾದಂಬರಿಕಾರರು, ನಾಟಕಕಾರರು, ಪ್ರಬಂಧಕಾರರು, ವಿಮರ್ಶಕರು, ವೈಚಾರಿಕ ಬರಹಗಾರರು ಎಲ್ಲರೂ ಇದ್ದಾರೆ. ಗಂಡಸರಷ್ಟೇ ಸಮಬಲದ ಹೆಂಗಸರೂ ಬರಹದಲ್ಲಿ ತೊಡಗಿಸಿಕೊಂಡಿದ್ದಾರೆ.

ಹೀಗೆ ತೊಡಗಿಸಿಕೊಂಡಿರುವ ಗಂಡಸರ ಬದುಕು ಹಾಗೂ ಬರಹಗಳು ಮತ್ತು ಹೆಂಗಸರ ಬದುಕು ಹಾಗೂ ಅವರ ಬರಹಗಳಲ್ಲಿ, ಒಂದು ಸಾಮಾನ್ಯ ವ್ಯತ್ಯಾಸವನ್ನು ಗುರುತಿಸಬಹುದು. ಹೆಂಗಸರಲ್ಲಿ ಬಹುತೇಕರು, ವಿವಾಹದ ಕಾರಣವಾಗಿ, ತಮ್ಮ ಸಂಗಾತಿಯು ಈ ನೆಲದಲ್ಲಿ ತನ್ನ ವೃತ್ತಿಯನ್ನು ಆಯ್ದುಕೊಂಡ ಹಿನ್ನೆಲೆಯಲ್ಲಿ, ಆತನನ್ನು ಹಿಂಬಾಲಿಸಿ ಬಂದವರೇ ಆಗಿದ್ದಾರೆ. ಈ ಹೆಂಗಸರಲ್ಲಿ ಕೆಲವರು ಇಂಡಿಯಾದಲ್ಲಿ ಇದ್ದಾಗಲೇ ಉನ್ನತ ಶಿಕ್ಷಣಗಳನ್ನು ಪಡೆದವರೂ ಇದ್ದಾರೆ, ಹಾಗೆಯೇ ದಶಕಗಳ ಹಿಂದೆಯೇ ಇಲ್ಲಿಗೆ ಬಂದ ಹೆಂಗಸರಲ್ಲಿ ಕನಿಷ್ಠ ಶಿಕ್ಷಣವನ್ನಷ್ಟೇ ಪಡೆದಿದ್ದವರೂ ಇದ್ದಾರೆ. ಆದರೆ, ಅಂತಹ ಎಷ್ಟೋ ಮಹಿಳೆಯರು ಕೂಡಾ, ಇಲ್ಲಿಗೆ ಬಂದ ಬಹುಕಾಲದ ನಂತರದಲ್ಲಿ, ಇಲ್ಲಿನ ಅಗತ್ಯಗಳಿಗೆ ಹೊಂದುವ ಹೆಚ್ಚಿನ ಶಿಕ್ಷಣವನ್ನು, ತಮಗೆ ಇಷ್ಟವಾದ ವೃತ್ತಿ ನೌಕರಿಗಳನ್ನು ಪಡೆದು ತಮ್ಮ ಸಾಮರ್ಥ್ಯಗಳನ್ನು ಒರೆಗೆ ಹಚ್ಚಿದ್ದಾರೆ. ಇನ್ನು ಕೆಲವರು, ಮನೆಯಲ್ಲೇ ಉಳಿದು ಕೂಡಾ, ತಮ್ಮ ಅಭಿವ್ಯಕ್ತಿಗಳಿಗೆ ಬರಹಗಳ ಮೂಲಕ, ದಾರಿಗಳನ್ನು ಕಂಡುಕೊಂಡಿದ್ದಾರೆ. ಆದರೆ, ಇದು ಅವರ ಬರಹಗಳ ತೂಕವನ್ನು ಪುರುಷ ಬರಹಗಳೊಂದಿಗೆ ತೂಗಿನೋಡುವ ರಿಯಾಯತಿಯನ್ನೇನೂ ಬೇಡುವುದಿಲ್ಲ. ಇದು ನನಗೆ ಅತ್ಯಂತ ಆಸಕ್ತಿದಾಯಕ ಎನಿಸಿದ ಮಾತಾಗಿದೆ.

ಕನ್ನಡ ಸಾಹಿತ್ಯ ರಂಗವು ತನ್ನ ಚಟುವಟಿಕೆಗಳಲ್ಲಿ ಪ್ರತಿ ಎರಡು ವರ್ಷಕ್ಕೊಮ್ಮೆ ನಡೆಸಿಕೊಂಡು ಬಂದಿರುವ ವಸಂತೋತ್ಸವದ ಸಂದರ್ಭದಲ್ಲಿ ಒಂದು ಗೊತ್ತಾದ ವಿಷಯವನ್ನು ಆಯ್ದುಕೊಂಡು ಆ ವಿಷಯದ ಹಲವು ನೆಲೆಗಳನ್ನು ವಿವರಿಸುವ,

ವಿಶ್ಲೇಷಿಸುವ ಬರಹಗಳನ್ನು ಸಂಕಲಿಸಿ ಗ್ರಂಥರೂಪದಲ್ಲಿ ಪ್ರಕಟಿಸಿದೆ. ಪ್ರತಿ ವರ್ಷವೂ ಆಯ್ದುಕೊಂಡಿರುವ ವಿಷಯಗಳು ಕುತೂಹಲಕಾರಿಯಾಗಿವೆ. ಅಂತಹ ನಾಲ್ಕೈದು ವಿಷಯಗಳನ್ನು ಆಧರಿಸಿ ಪ್ರಕಟಿಸಿರುವ ಪುಸ್ತಕಗಳನ್ನು ಓದುವ ಅವಕಾಶ ನನಗೆ ದೊರಕಿದೆ.

ಅಂತಹ ನಾಲ್ಕು ಪುಸ್ತಕಗಳನ್ನು ಓದಿದಾಗ ಅಚ್ಚರಿ ಹಾಗೂ ಗೌರವಗಳು ಒಟ್ಟಾಗಿಯೇ ನನ್ನಲ್ಲಿ ಮೂಡಿವೆ. 'ಅನುವಾದ ಸಂವಾದ', 'ಅವರವರ ಭಕುತಿಗೆ', 'ಅಮೆರಿಕನ್ ಜಾನಪದ' ಮತ್ತು 'ಬದಲಾವಣೆಯ ಬೆನ್ನಟ್ಟಿ' ಎಂಬ ಪುಸ್ತಕಗಳಲ್ಲಿ, ಮೊದಲ ಎರಡು ಪುಸ್ತಕಗಳ ವಿಷಯಗಳು ಅಮೆರಿಕದ ಕನ್ನಡಿಗರಿಗೆ ಮಾತ್ರ ವಿಶಿಷ್ಟವಾದುವಲ್ಲ. ಕೊನೆಯ ಎರಡು ಇಲ್ಲಿನ ಕನ್ನಡಿಗರು ಮಾತ್ರ ಚಿಂತಿಸಬಹುದಾದ ವಿಷಯಗಳು. ಪ್ರತಿ ಸಂಪುಟಗಳಲ್ಲೂ ಸಂಪಾದಕರು ವಿಷಯಗಳ ವ್ಯಾಪ್ತಿಯನ್ನು ಗುರುತಿಸಿ ಜವಾಬ್ದಾರಿಯನ್ನು ಹೊರಬಲ್ಲವರನ್ನು ಗುರುತಿಸಿ, ಅವರಿಂದ ಬರಹಗಳನ್ನು ಪಡೆದುಕೊಂಡು ಸಂಕಲಿಸುವಲ್ಲಿ ಅಪಾರವಾದ ಶ್ರಮವನ್ನು ವಹಿಸಿರುವುದು ಎದ್ದುಕಾಣುತ್ತದೆ. ಲೇಖನಗಳನ್ನು ಬರೆದವರೂ ಕೂಡ ನಿರೂಪಣೆಯಲ್ಲಿ ತಮ್ಮ ಸ್ವಂತಿಕೆಯನ್ನು ಕಾಯ್ದುಕೊಂಡೂ, ಮೂಲ ವಿಷಯಕ್ಕೆ ಪೂರಕವಾದ ಸಾಮಗ್ರಿಗಳನ್ನು ಸಂಗ್ರಹಿಸಿ ಮಂಡಿಸಿದ್ದಾರೆ. ಕೆಲವರ ಒಳನೋಟಗಳು ಅಪೂರ್ವವಾಗಿವೆ. ಇಲ್ಲಿ ಬರೆದವರು ವೃತ್ತಿಪರ ವಿಮರ್ಶಕರಾಗಲೀ ಸಂಶೋಧಕರಾಗಲೀ ಅಲ್ಲ. ಆದರೆ ಅವರು ಪಡೆದುಕೊಂಡ ಶಿಕ್ಷಣ ಕ್ರಮದಲ್ಲಿ ಮೈಗೂಡಿಸಿಕೊಂಡ ತರ್ಕಬದ್ಧತೆ ಮತ್ತು ವಿಷಯದ ಕಡೆಗೆ ಸದಾ ಕೇಂದ್ರೀಕರಿಸುವ ದಾರಿಯನ್ನು ಹಿಡಿದಿದ್ದಾರೆ. ಇದೊಂದು ಗಮನಿಸಲೇಬೇಕಾದ ಸಂಗತಿಯಾಗಿದೆ. ಕನ್ನಡ ಸಾಹಿತ್ಯದ ಆಕರ ಗ್ರಂಥಗಳು ಸುಲಭವಾಗಿ ದೊರಕದೇ ಇರುವ ಇಲ್ಲಿನ ಸಂದರ್ಭದಲ್ಲಿ 'ಅವರವರ ಭಕುತಿಗೆ' ಸಂಪುಟದ ಬರಹಗಾರರು ತೋರಿರುವ ಬದ್ಧತೆ ಅಭಿನಂದನೀಯವಾಗಿದೆ. 'ಅಮೆರಿಕನ್ ಜಾನಪದ' ಸಂಕಲನವಂತೂ ಕನ್ನಡದ ಓದುಗರಿಗೆ ತೆರೆದಿಡುವ ಜಗತ್ತು ಅಪೂರ್ವವಾಗಿದೆ. ಈ ಅಪೂರ್ವ ಸಂಕಲನ ಕನ್ನಡ ನಾಡಿನಲ್ಲಿ ಪಡೆಯಬೇಕಾದ ಮನ್ನಣೆಯನ್ನಾಗಲೀ ಗಮನವನ್ನಾಗಲೀ ಪಡೆಯದಿರುವುದು ಖೇದಕರ ಸಂಗತಿ. ನಷ್ಟ ಕನ್ನಡ ವಿದ್ವತ್ ಪ್ರಪಂಚದ್ದೇ ಆಗಿದೆ. 'ಅನುವಾದ ಸಂವಾದ' ಸಂಕಲನವು ಅನುವಾದ ತತ್ವಗಳ ಬೆನ್ನುಹತ್ತದೆ, ಆಯ್ದ ಮೂಲ ಬರಹಗಳನ್ನು ಕನ್ನಡಕ್ಕೆ ಅನುವಾದಿಸುವ ಕಡೆಗೆ ಗಮನ ಹರಿಸಿದೆ. ಅನುವಾದಕ್ಕಾಗಿ ಆಯ್ದುಕೊಂಡ ಬರಹಗಳು ಎಲ್ಲ ಬಗೆಯ ಪ್ರಕಾರಗಳಿಗೂ ಸೇರಿವೆ. ಆಯ್ಕೆಯಲ್ಲಿ ಔಚಿತ್ಯಪ್ರಜ್ಞೆ ನೆಲೆಗೊಂಡಿದೆ. ಅನುವಾದಕರೂ ಕೂಡ ಮೂಲ ಕೃತಿಗಳನ್ನು ಕನ್ನಡದ ಜಾಯಮಾನಕ್ಕೆ ಸಲ್ಲುವಂತೆ ನಿರೂಪಿಸಿದ್ದಾರೆ. 'ಬದಲಾವಣೆಯ ಬೆನ್ನಟ್ಟಿ' ಸಂಕಲನವಂತೂ ಅಲ್ಲಿಂದ ಬಂದು ಇಲ್ಲಿ ನೆಲೆಸಿದವರ ಕಥನಗಳನ್ನು ಹೆಚ್ಚು ಭಾವುಕವಾಗದಂತೆ ನಿರೂಪಿಸಿರುವ ಬರಹಗಳಿಂದ ಕೂಡಿದೆ. ನೆಲ, ನೆಲೆಗಳಿಂದ ದೂರ ಬಂದವರ ಕಥನಗಳು ಎಂದಿಗೂ ತಮ್ಮ ಮಹತ್ವವನ್ನು ಕಳೆದುಕೊಳ್ಳುವುದಿಲ್ಲ.

ಇಂತಹ ಪ್ರಯತ್ನಗಳನ್ನು ಯಶಸ್ವಿಯಾಗಿ ನಿರ್ವಹಿಸಿ ತಮ್ಮ ಕನ್ನಡದ ಋಣವನ್ನು ತೀರಿಸುತ್ತಿರುವ ಇಲ್ಲಿನ ಕನ್ನಡಿಗರನ್ನು ಅಭಿನಂದಿಸುವ ಮಾತುಗಳನ್ನು ಆಡುವುದೂ

ಕೂಡ ತುಂಬಾ ಔಪಚಾರಿಕವಾಗುತ್ತದೆ. ಇದರಲ್ಲಿ ತೊಡಗಿಸಿಕೊಂಡ ಎಲ್ಲರಿಗೂ ನನ್ನ ನಮಸ್ಕಾರಗಳನ್ನು ಸಲ್ಲಿಸುತ್ತೇನೆ. 'ಸ್ತ್ರೀ ಸಂವೇದನೆ' ಎಂಬ ಸೂಕ್ಷ್ಮ ವಿಷಯವನ್ನು ಕುರಿತು ಮಾತನಾಡುವ ಅವಕಾಶವನ್ನು ಈ ನೆಲದ ಕನ್ನಡ ಸಾಹಿತ್ಯ ರಂಗವು ನನಗೆ ಒದಗಿಸಿದೆ. ಇದನ್ನು ನಾನು ನನಗೆ ದೊರೆತ ಗೌರವ ಎಂದುಕೊಳ್ಳುತ್ತೇನೆ. ಅದರೊಂದಿಗೇ, ನನ್ನಲ್ಲಿ ಈ ಕುರಿತು ಇರುವ ಆಲೋಚನೆಗಳನ್ನು ಮತ್ತೊಮ್ಮೆ ಒರೆಗೆ ಹಚ್ಚಿ ನೋಡುವ ಸದವಕಾಶ ಎಂದು ಕೂಡಾ ಭಾವಿಸಿ, ನನ್ನ ಮಾತನ್ನು ಆರಂಭಿಸುತ್ತೇನೆ.

ಎಲ್ಲ ಜೀವಿಗಳೂ ತಮ್ಮ ಬದುಕಿನ ಅಗತ್ಯಗಳಿಗೆ ತಕ್ಕಂತೆ ಮಾತ್ರವೇ, ತಾವು ಬದುಕುತ್ತಿರುವ ಲೋಕದ ಪರಿಸರಕ್ಕೆ ಸ್ಪಂದಿಸುತ್ತವೆ. ದೇಹ, ಬುದ್ಧಿ, ಮನಸ್ಸುಗಳ ನೆಲೆಗಳಲ್ಲಿ ಜೀವಸಹಜ ಸಂವಹನಗಳು ಸಾಗಿ, ಆ ಜೀವಿಗಳ ಆಯಾ ಸಂದರ್ಭಗಳಿಗೆ ತಕ್ಕಂತೆ ವರ್ತಿಸುತ್ತವೆ. ಹುಟ್ಟಿನೊಂದಿಗೇ ಬೆಳೆಯುವ ಈ ಸ್ಪಂದನೆಗಳು, ಜೀವಿಯ ಮೂಲಭೂತ ಅಗತ್ಯವೇ ಆಗಿರುತ್ತದೆ. ಹಾಗಾಗಿ ಇವನ್ನು ಜೀವಸಹಜ ಪ್ರವೃತ್ತಿಗಳು (instinctive) ಎಂದಷ್ಟೇ ತಿಳಿಯಬಹುದು. ಇವು ಹೊರಗಿನ ಕಲಿಕೆಯಿಂದ ಹುಟ್ಟಿದವಲ್ಲ. ಜೀವವೈವಿಧ್ಯದ ಅನುಸಾರವಾಗಿ, ಆಯಾ ಗುಂಪಿನ ಎಲ್ಲ ಜೀವಿಗಳೂ ಒಂದೇ ಬಗೆಯ ಪ್ರವೃತ್ತಿಗಳನ್ನು ತೋರಿಸುತ್ತವೆ. ಜೀವಿಯ ಅಳಿವು ಉಳಿವಿನ ಪ್ರಶ್ನೆಯಾಗಿ ಈ ಪ್ರವೃತ್ತಿಗಳು ಇರುತ್ತವೆ. ಒಂದು ಜೀವಿಯು, ತನ್ನ ಆಹಾರ, ಅಥವಾ ಇನ್ನಿತರ ಮೂಲಭೂತ ಅಗತ್ಯಗಳಿಗಾಗಿ ಇನ್ನೊಂದು ಜೀವಿಯ ಮೇಲೆ, ಮಾರಣಾಂತಿಕ ಹಲ್ಲೆಗಳನ್ನೂ ನಡೆಸುತ್ತದೆ. ಆದರೆ, ಈ ಆಕ್ರಮಣಗಳ ಮೂಲದಲ್ಲಿ ದ್ವೇಷ, ಹಿಂಸೆ, ಅಥವಾ ಕ್ರೌರ್ಯ ಎಂಬ ಯಾವ ಭಾವಗಳೂ ಇರುವುದಿಲ್ಲ. ಒಂದು ಜೀವಿಯು ಇನ್ನೊಂದು ಜೀವಿಯ ಆಹಾರ ಎನಿಸುವುದು, ಪ್ರಕೃತಿಯ ಭಾಗವಾಗಿಯೇ ಇರುವ ಒಂದು ಸಹಜವಾದ ಚಕ್ರಚಲನೆ ಅಷ್ಟೇ. ಆದರೆ ಮಾನವರು ಮಾತ್ರವೇ ದ್ವೇಷಮೂಲದ ಇಂತಹ ಭಾವನೆಗಳನ್ನು ಹೊಂದಿರುತ್ತಾರೆ. ಮಾನವರು ಕಲ್ಪಿಸಿದ ಮಹಾನ್ ಚಿಂತನೆಗಳು, ಇದನ್ನೇ ಸಮರ್ಥಿಸುತ್ತಾ, ದ್ವೇಷ ಹಾಗೂ ಹಿಂಸೆ ಎಂಬವು ಮಾನವರಾದ ನಮ್ಮ ಹುಟ್ಟುಗುಣಗಳೇ ಆಗಿವೆ ಎನ್ನುವುದಿದೆ. ಇದನ್ನೇ ನಿಜ ಎಂದು ಒಪ್ಪಿದರೆ, ಸ್ತ್ರೀ ಸಂವೇದನೆ, ಅಥವಾ ಪುರುಷ ಸಂವೇದನೆ ಎಂಬವನ್ನು ಗುರುತಿಸಲು, ಈ ಮೂಲದಿಂದಲೇ ಆರಂಭಿಸಬೇಕಾಗುತ್ತದೆ. ಈವರೆಗೂ ನಮ್ಮ ಎಲ್ಲ ಚಿಂತನೆಗಳೂ ಈ ದಾರಿಯನ್ನೇ ಹಿಡಿದಿವೆ. ಆದರೆ, ಸ್ತ್ರೀವಾದೀ ಚಿಂತನೆಯು ಮಾತ್ರ ದ್ವೇಷ, ಹಿಂಸೆ ಎಂಬವು ಮಾನವರ ಸಹಜ ಹುಟ್ಟುಗುಣಗಳು ಎಂಬವನ್ನು ಸ್ಪಷ್ಟವಾಗಿಯೇ ನಿರಾಕರಿಸುತ್ತವೆ. ಸ್ತ್ರೀ ಸಂವೇದನೆಯ ನಿಜಸ್ವರೂಪವನ್ನು ಅರ್ಥ ಮಾಡಿಕೊಳ್ಳಲು ಈ ಸ್ತ್ರೀವಾದೀ ಚಿಂತನೆಗಳು ನೆರವಾಗುತ್ತವೆ ಎಂದು ನಂಬಿದ್ದೇನೆ.

ಮಾನವ ಜೀವಿಯ ಮಿದುಳು ಅಗಾಧವಾದ ಬೆಳವಣಿಗೆಯನ್ನು ಪಡೆದ ಕಾರಣವಾಗಿ, ಜೀವಸಹಜ ಪ್ರವೃತ್ತಿಗಳನ್ನು ಕೂಡಾ ಹೆಚ್ಚಿನ ಕೌಶಲ್ಯದಿಂದ ನಿಭಾಯಿಸುವ ಚೈತನ್ಯವು ಕೂಡಿಕೊಂಡಿತು. ಮುಖ್ಯವಾಗಿ ಲೋಕಪರಿಸರವನ್ನು ತನ್ನ ಅನುಕೂಲಗಳಿಗೆ ತಕ್ಕಂತೆ

ಒಗ್ಗಿಸುವ ಕಲೆ ಕರಗತವಾಯಿತು. ಇಲ್ಲಿಂದ ಮನುಕುಲದ ನಿಜವಾದ ಚರಿತ್ರೆಯು ಮೊದಲಾಗುತ್ತದೆ. ಜೀವಸಹಜ ಪ್ರವೃತ್ತಿಗಳನ್ನು ಸಂಸ್ಕರಿಸುವ ವಿಧಾನಗಳು ಕೂಡಾ ಹಲವು ವೈವಿಧ್ಯಗಳಲ್ಲಿ ಕಾಣಿಸಿಕೊಂಡವು. ಇದರ ಪರಿಣಾಮಗಳು ಮಾನವ ಚರಿತ್ರೆಯ ಕಾಲಘಟ್ಟಗಳಲ್ಲಿ ಸಾಗಿ ಬರುತ್ತಿವೆ. ಈ ಪ್ರಕ್ರಿಯೆಯಲ್ಲಿ ಒಟ್ಟು ಮನುಕುಲಕ್ಕೇ ಸಮಾನವಾಗಿ ಅನ್ವಯವಾಗುತ್ತವೆ ಎಂಬ ಸಹಜ ಪ್ರವೃತ್ತಿ ಲಕ್ಷಣಗಳು ಕೂಡಾ ಕಳೆದುಹೋಗಿವೆ. ಆ ಜಾಗದಲ್ಲಿ ಈಗ ಯಾವುದೋ ಹೊರಗಿನ ತರಬೇತಿಯ ಪರಿಣಾಮಗಳು ಎಂದು ತೋರುವ ಪ್ರವೃತ್ತಿ ಲಕ್ಷಣಗಳು ನೆಲೆಗೊಂಡಿವೆ. ಲೋಕಪರಿಸರವನ್ನು ನಿಯಂತ್ರಿಸಬಹುದು ಎಂಬ ಚಿಂತನೆ-ಯೊಂದಿಗೇ, ಬದುಕಿನ ಅಗತ್ಯಗಳಿಗಿಂತಲೂ ಹೆಚ್ಚಿನ ಸಂಪನ್ಮೂಲಗಳನ್ನು ದಕ್ಕಿಸಿಕೊಳ್ಳುವ ಪ್ರವೃತ್ತಿಯೂ ಬೆಳೆಯಿತು.

ಈ ಹಿನ್ನೆಲೆಯಲ್ಲಿಯೇ ಸಮಾಜ ಎಂಬ ರಚನೆ ಆದದ್ದು. ಈ ಸಮಾಜದ ಜನರ ನಡುವೆಯೇ ಸಂಪನ್ಮೂಲಗಳನ್ನು ದಕ್ಕಿಸಿಕೊಳ್ಳುವ ಪೈಪೋಟಿಯೂ ಮೊದಲಾಯಿತು. ಇದಕ್ಕಾಗಿ ಬಲಪ್ರಯೋಗ. ಇದರ ಪರಿಣಾಮದಲ್ಲಿ ಅಧಿಕಾರ, ಅಧೀನತೆ ಎಂಬ ಶ್ರೇಣೀಕರಣಗಳೂ ಮೊದಲಾದವು. ಇದರೊಂದಿಗೆ ಜೀವಸಹಜ ಪ್ರವೃತ್ತಿಗಳು ಕೂಡಾ ಮೇಲು ಕೀಳಿನ ಜಾಲಗಳಲ್ಲಿ ಸಿಲುಕಿಹೋಗಿವೆ. ನಮ್ಮ ಜೀವಸಹಜ ಪ್ರವೃತ್ತಿಗಳು ಕೂಡಾ ಸಮುದಾಯದಿಂದ ಸಮುದಾಯಕ್ಕೆ, ವ್ಯಕ್ತಿಯಿಂದ ವ್ಯಕ್ತಿಗೆ, ಭಿನ್ನ ಬಗೆಯವೇ ಆಗಿ ಕಾಣುವ ಒತ್ತಾಯಗಳಲ್ಲಿ ನಾವೆಲ್ಲರೂ ಇದ್ದೇವೆ. ಹೀಗೆ ಒತ್ತಾಯಗಳಲ್ಲಿ ಸಿಲುಕಿರುವ ಪ್ರವೃತ್ತಿಗಳನ್ನೇ ನಮ್ಮ 'ನಿಜ ಸಂವೇದನೆಗಳು' ಎಂದು ನಂಬಿದ್ದೇವೆಯೇ ತಿಳಿಯದು. ಹಾಗಲ್ಲವಾದರೆ, ಒಂದೇ ಜೀವಕುಲವಾದ ನಮ್ಮನಮ್ಮಲ್ಲಿ ಸ್ತ್ರೀ ಸಂವೇದನೆ, ಪುರುಷ ಸಂವೇದನೆ, ಜಾತಿ, ಜನಾಂಗ, ವರ್ಗ, ಶಿಕ್ಷಣ, ಊರು, ಕೇರಿ ಮುಂತಾಗಿ ಭಿನ್ನಗೊಂಡ ಸಂವೇದನೆಗಳು ಇವೆ ಎಂಬುದನ್ನು ಗ್ರಹಿಸುವುದು ಹೇಗೆ ಎಂಬ ಪ್ರಶ್ನೆಗಳು ಬಗೆಹರಿಯಲಾರವು.

ಪುರುಷರು ಮತ್ತು ಮಹಿಳೆಯರು ಮೇಲು-ಕೀಳು, ಅಧಿಕಾರ-ಅಧೀನತೆ ಎಂಬ ನೆಲೆಗಳಲ್ಲಿ ಉಳಿದುಹೋಗಿರುವ ಸಂಗತಿಯೇ, ಸಮಾಜ ರಚನೆಯಲ್ಲಿ ಉಂಟಾಗಿರುವ ಶ್ರೇಣೀಕರಣದ ಮೂಲಮಾದರಿ. ಪ್ರಸ್ತುತದ ನಮ್ಮ ಇಂದಿನ ಚರ್ಚೆ ಸಂವಾದಗಳಿಗಾಗಿ ಈ ಮೂಲಮಾದರಿಯ ಗುಣಲಕ್ಷಣಗಳು, ಹಾಗೂ ಅವು ನಮ್ಮನ್ನು ನಿಯಂತ್ರಿಸುತ್ತಿರುವ ಬಗೆಗಳನ್ನು ವಿವರಿಸಿಕೊಳ್ಳುವ ಅಗತ್ಯವಿದೆ. ಮಾನವ ಚರಿತ್ರೆಯ ಮೊದಲ ಹಂತಗಳಲ್ಲಿ ಮಾತೃಪ್ರಧಾನ ವ್ಯವಸ್ಥೆಯು ಪ್ರಕೃತಿಸಹಜವಾಗಿ ಜಾರಿಯಲ್ಲಿತ್ತು. ಶಿಶುವಿನ ಜನನವನ್ನು ಹೆಣ್ಣುದೇಹದ ನಿಗೂಢತೆ ಎಂಬಂತೆ ತಿಳಿಯಲಾಗಿತ್ತು. ಇದೇ ಕಾರಣಕ್ಕಾಗಿ ಸಮುದಾಯದ ಎಲ್ಲರೂ ಹೆಣ್ಣನ್ನು ಗೌರವದಿಂದ, ಅದಕ್ಕಿಂತಲೂ ಮಿಗಿಲಾಗಿ ಭಯದಿಂದ ನೋಡುವಂತೆ ಆಗಿತ್ತು. ಮಾನವರ ಮಿದುಳಿನ ವಿಕಾಸ, ಹಾಗೂ ಜೀವನಶೈಲಿಗಳಲ್ಲಿ ಆದ ಬದಲಾವಣೆಗಳ ಕ್ರಮದಲ್ಲಿ ಸಂತಾನದ ನಿಗೂಢತೆಯ ಅರಿವು ಕೂಡಾ ಆಗತೊಡಗಿತು. ಇದು ಪುರುಷರಿಗೆ ಹೆಚ್ಚಿನ ಪ್ರಾಬಲ್ಯವನ್ನು ಒದಗಿಸಿದ ಚಾರಿತ್ರಿಕ ಬಿಂದುವೇ ಆಯಿತು. ಈ ವೇಳೆಗಾಗಲೇ ಅವಳ ಗಳಿಕೆ ಹಾಗೂ ಅವಳ ಚಲನೆಗಳ ಮೇಲೆ ನಿಯಂತ್ರಣಗಳನ್ನು ಹೇರುವ ಅವಕಾಶಗಳು

ಪುರುಷನಿಗೆ ಲಭ್ಯವಾಗಿದ್ದವು. ಮಹಿಳೆಯ ಸಂತಾನ ಶಕ್ತಿಯನ್ನು ಅಧೀನಕ್ಕೆ ಪಡೆದರೆ, ಅವಳನ್ನೇ ಇಡಿಯಾಗಿ ಅಧೀನಕ್ಕೆ ಪಡೆಯಬಹುದು ಎಂಬುದು ಪುರುಷನಿಗೆ ಈಗ ಹೊಳೆದುಬಿಟ್ಟಿತು. ನಿಧಾನವಾಗಿ ಪಿತೃಪ್ರಧಾನತೆಯು ಮಾತೃಪ್ರಧಾನತೆಯನ್ನು ಬದಿಗೆ ಸರಿಸಿ, ತನ್ನ ಅಧಿಕಾರವನ್ನು ಸ್ಥಾಪಿಸುವುದೂ ಸಾಧ್ಯವಾಯಿತು. ಈ ಚರಿತ್ರೆಯನ್ನು ವಿವರಿಸಲು ಇಲ್ಲಿ ಅವಕಾಶವಿಲ್ಲ.

ಸಂಪನ್ಮೂಲಗಳ ಮೇಲೆ ಸಂಪೂರ್ಣವಾಗಿ ತಮ್ಮದೇ ಅಧಿಕಾರವನ್ನು ಸ್ಥಾಪಿಸಿಬಿಡಲು ಪುರುಷರಿಗೆ ಅನುಕೂಲವಾಗುವ ಚಾರಿತ್ರಿಕ ಸಂದರ್ಭಗಳೂ ಒದಗಿಬಂದವು. ಸಂಪನ್ಮೂಲಗಳ ಮೇಲಿನ ಹಿಡಿತ ಎಂಬುದು ಚಕ್ರಗತಿಯಲ್ಲಿ ಸಾಗಿದರೆ, ಅದು ಒಂದಲ್ಲ ಒಂದು ಹಂತದಲ್ಲಿ ಮತ್ತೆ ಮಹಿಳೆಯರ ಹಿಡಿತಕ್ಕೆ ಬರುತ್ತಿತ್ತೋ ಏನೋ. ಆದರೆ ಹೀಗಾಗಲಿಲ್ಲ. ಒಮ್ಮೆ ದಕ್ಕಿದ ಹಿಡಿತವು ನಿರಂತರವಾಗಿ ನೇರಗತಿಯಲ್ಲಿ ಸಾಗುವಂತೆ ಮಾಡುವ ಒಂದು ಮುಖ್ಯ ತಂತ್ರಗಾರಿಕೆಯು ಪುರುಷರ ಕೈಗೆ ದಕ್ಕಿತು. ಸಂತಾನದ ಸೃಷ್ಟಿಯಲ್ಲಿ ಮಾತೃವಿನಷ್ಟೇ ಪ್ರಮುಖವಾದ ಪಾತ್ರ ಪಿತೃವಿಗೂ ಇದೆ ಎಂಬ ಅರಿವು ಬಂದ ಮೇಲೆ, ಪುರುಷನಿಗೆ ತನ್ನ ಈ ಪಾತ್ರವನ್ನೇ ಪ್ರಧಾನತಂತ್ರವಾಗಿ, ಅಧಿಕಾರದಂಡವಾಗಿ ಬಳಸುವ ತಂತ್ರಗಳೂ ಹೊಳೆದು, ಅವು ವಿಕಸನಗೊಂಡವು. ಸ್ಥೂಲವಾಗಿ ಇಲ್ಲಿಂದಲೇ ಪಿತೃಪ್ರಧಾನ ವ್ಯವಸ್ಥೆಯು ಬಲಗೊಳ್ಳುತ್ತಾ ಬಂದ ಕತೆಯು ಮೊದಲಾಗುತ್ತದೆ. ಈ ತಂತ್ರಗಾರಿಕೆಯನ್ನು ಕೇಟ್ ಮಿಲೆಟ್ ಲೈಂಗಿಕತಾ ರಾಜಕಾರಣ (Sexual Politics) ಎಂದು ಸ್ಪಷ್ಟಪಡಿಸಿ ಗುರುತಿಸಿದಳು. ಇದರ ವಿವರಗಳಿಗೆ ಹೋಗದೆ, ಪಿತೃಪ್ರಧಾನ ವ್ಯವಸ್ಥೆಯು ತನ್ನ ಅಧಿಕಾರದ ಆಶಯಗಳನ್ನು ಭದ್ರವಾಗಿ ನೆಲೆಗೊಳಿಸಿ, ಅವನ್ನು ತಲೆಮಾರುಗಳಲ್ಲಿ ನಿರಂತರವಾಗಿ ಮುಂದುವರೆಸಿಕೊಂಡು ಹೋಗುವಂತೆ ಮಾಡಿದ ಸಂಗತಿಗಳು ಯಾವುವು ಎಂಬುದನ್ನು ಗಮನಿಸುವುದು ನಮ್ಮ ಇಂದಿನ ಚರ್ಚೆ ಮತ್ತು ಸಂವಾದಗಳಿಗೆ ಅಗತ್ಯವಾದ ಆಧಾರವಾಗಿದೆ.

ಅದರಲ್ಲಿ ಬಹಳ ಮುಖ್ಯವಾದುದು, ಸಮಾಜದ ಎಲ್ಲರೂ– ಮಹಿಳೆಯರು ಮಾತ್ರವಲ್ಲ, ಪುರುಷರೂ ಕೂಡಾ– ಪುರುಷಪ್ರಧಾನತೆಯ ಆಶಯಗಳಿಗೆ ಯಾವ ಧಕ್ಕೆಯೂ ಬಾರದಂತೆ ಬದುಕಲೇ ಬೇಕಾದಂಥ ಅನಿವಾರ್ಯದ ಪರಿಸ್ಥಿತಿಯನ್ನು ಉಂಟುಮಾಡುವುದು. ಇದನ್ನು ಆಗುಮಾಡಲು, ಮೊದಲಿಗೆ ಸಮಾಜದ ಎಲ್ಲರೂ ಇದನ್ನು ಒಪ್ಪಿಕೊಳ್ಳುವಂತೆ ಮಾಡುವ ಕಠಿಣ ತರಬೇತಿಯನ್ನು ನೀಡಬೇಕಾಗುತ್ತದೆ. ಇದರಲ್ಲಿ ಯಾರಿಗೂ ಆಯ್ಕೆಯೇನೂ ಇರುವುದಿಲ್ಲ. ಏಕೆಂದರೆ ಮಗುವು ಈ ಲೋಕಕ್ಕೆ ಇಳಿದ ಕ್ಷಣದಿಂದಲೇ ಈ ತರಬೇತಿಯ ಪಾಠಗಳು ಮೊದಲಾಗುತ್ತವೆ. ಕುಟುಂಬ, ಮನೆಯಾಚೆಗಿನ ಪರಿಸರ, ಸಾರ್ವಜನಿಕ ವಲಯದ ಎಲ್ಲ ಸಾಂಸ್ಥಿಕ ರಚನೆಗಳು, ಹಾಗೂ ಜ್ಞಾನವಲಯಗಳೂ ಸೇರಿದಂತೆ ಈ ತರಬೇತಿಯು, ವಿಸ್ತರಿಸಿಕೊಳ್ಳುತ್ತಲೇ ಹೋಗುತ್ತದೆ. ನಿಲುಗಡೆಯೇ ಇಲ್ಲದ ಈ ತರಬೇತಿಯ ಪ್ರಭಾವದಲ್ಲಿ ಎಲ್ಲ ಸ್ತ್ರೀ ಪುರುಷರ ದೇಹ, ಮನಸ್ಸು, ಹಾಗೂ ಬುದ್ಧಿಗಳು ಈ ಕಲಿಕೆಯನ್ನೇ ತಮ್ಮ ಸಹಜ ಪ್ರವೃತ್ತಿಗಳು, ನಿಜದ ಸಂವೇದನೆಗಳು ಎಂದು ನಂಬಿಬಿಡುತ್ತವೆ. ಅವರ ಬದುಕುವ ರೀತಿಗಳೂ ಈ ನಂಬಿಕೆಯನ್ನೇ ಆಧರಿಸಿ ರೂಪುಗೊಳ್ಳುತ್ತವೆ.

ಹೆಣ್ಣು ಬದುಕನ್ನು ಅರ್ಥ ಮಾಡಿಕೊಳ್ಳುವ, ಅವಳ ಬದುಕು ಎದುರಿಸುತ್ತಿರುವ ಸಾಮಾಜಿಕ ಸಮಸ್ಯೆಗಳನ್ನು ಪರಿಹರಿಸುವ ನಿಟ್ಟಿನಲ್ಲಿ ಆರಂಭವಾದ ಸ್ತ್ರೀವಾದೀ ಚಿಂತನೆ ಹಾಗೂ ಹೋರಾಟಗಳು ಮೊದಮೊದಲಲ್ಲಿ ಹೆಣ್ಣುಬದುಕಿನ ಎಲ್ಲ ಕಷ್ಟಗಳಿಗೂ ಪುರುಷರೇ ಕಾರಣ ಎಂದು ತಿಳಿದದ್ದು ಹೌದು. ಸ್ತ್ರೀವಾದವು ಮಾಗುತ್ತಾ ಬಂದಂತೆ ಇಂದು ಮಹಿಳೆಯರಂತೆಯೇ ಪುರುಷರು ಕೂಡಾ ಈ ಪಿತೃಪ್ರಧಾನ ವ್ಯವಸ್ಥೆಯ ಆಟದಲ್ಲಿ ಉರುಳುವ ದಾಳಕ್ಕೆ ತಕ್ಕಂತೆ ನಡೆಯುವ ಕಾಯಿಗಳಷ್ಟೇ ಎಂಬುದನ್ನು ಮನಗಂಡಿದೆ. ಇದು ಒಂದು ವಿಸ್ತಾರವಾದ ಚರ್ಚೆಯನ್ನು ಬೇಡುವ ಮಾತು. ಸಾಧ್ಯವಾದರೆ, ನಮ್ಮ ಸಂವಾದಗಳಲ್ಲಿ ಇದನ್ನು ಪ್ರಸ್ತಾಪಿಸಬಹುದು. ಸದ್ಯಕ್ಕೆ ಸ್ತ್ರೀ ಸಂವೇದನೆ ಮತ್ತು ಪುರುಷ ಸಂವೇದನೆ ಎಂಬ ಪರಿಭಾಷೆಗಳನ್ನು ವಿವರಿಸಿಕೊಳ್ಳೋಣ. ಒಂದು ಚಾರಿತ್ರಿಕ ಘಟ್ಟದಲ್ಲಿ ಮಹಿಳಾ ಸಮುದಾಯಕ್ಕಿಂತಲೂ ಪುರುಷ ಸಮುದಾಯವು ಹೆಚ್ಚು ಪ್ರಬಲಗೊಂಡು ನಿಲ್ಲುವ ಅವಕಾಶಗಳು ನಿರ್ಮಾಣವಾದವು ಎಂಬುದು ಹೌದು. ಆದರೆ, ಈ ಅವಕಾಶವನ್ನು ಕಳೆದುಹೋಗದಂತೆ ಕಾಪಾಡಿಕೊಳ್ಳಲು, ಪುರುಷರು ಮಹಿಳೆಯರ ಮೇಲೆ ಹಲವು ಬಗೆಯ ನಿಯಂತ್ರಣಗಳನ್ನು ಹೇರಿದರು ಎಂಬುದೂ ನಿಜವೇ. ಹಲಕೆಲವು ಪುರುಷರು, ಹಲಕೆಲವು ಮಹಿಳೆಯರ ಮೇಲೆ ಬಲವನ್ನು ಪ್ರಯೋಗಿಸಿದರು, ಎಂಬಂತೆ ಆಗಿದ್ದರೆ ಯಾವ ಆಶ್ಚರ್ಯವೂ ಇಲ್ಲ. ಆದರೆ ಪುರುಷ ಸಮುದಾಯದ ಎಲ್ಲರೂ ಮಹಿಳಾ ಸಮುದಾಯದ ಎಲ್ಲರ ಮೇಲೂ ಸಾರಾಸಗಟಾಗಿ ಈ ನಿಯಂತ್ರಣವನ್ನು ಪಡೆಯಲು ಸಾಧ್ಯವಾದದ್ದು ಹೇಗೆ ಎಂಬುದು ಮಾತ್ರ ನಿಗೂಢವಾದ ಪ್ರಶ್ನೆ. ಈ ಪ್ರಶ್ನೆಯ ಹಿಂದೆ ಬಿದ್ದ ಸ್ತ್ರೀವಾದಿಗಳು ಪಿತೃಪ್ರಧಾನ ವ್ಯವಸ್ಥೆಯ ಉಗಮ, ಬೆಳವಣಿಗೆ, ಹಾಗೂ ನಿರಂತರವಾಗಿ ಸಾಗುವ ತಂತ್ರಗಾರಿಕೆಗಳ ಮೂಲಗಳನ್ನು ಶೋಧಿಸುತ್ತಲೇ ಸಾಗಿದರು. ಈ ಚರಿತ್ರೆಯ ಎಲ್ಲ ವಿವರಗಳನ್ನೂ ಪ್ರಸ್ತಾಪಿಸುವ ಸಮಯ ಇದಲ್ಲ. ಹಲವು ಓದುಗಳಲ್ಲಿ, ಸಂವಾದಗಳಲ್ಲಿ ಈ ಮಾಹಿತಿಗಳನ್ನು ಪಡೆಯುವುದು ಕಷ್ಟವೂ ಅಲ್ಲ.

ಸ್ತ್ರೀ ಸಂವೇದನೆ ಎಂಬ ಪರಿಭಾಷೆಯನ್ನು ವಿವರಿಸಲು ಇಷ್ಟು ದೀರ್ಘವಾದ ಹಿನ್ನೆಲೆ ಅಗತ್ಯವೇ ಎನಿಸಿರಬಹುದು. ಕ್ಷಮಿಸಿ. ಮಹಿಳಾ ಸಮುದಾಯದ ಪ್ರಸ್ತುತ ಸಾಮಾಜಿಕ ಪರಿಸ್ಥಿತಿಯನ್ನು ಅರಿಯಲು, ವ್ಯಕ್ತಿಗತವಾಗಿಯೂ ಒಬ್ಬ ಮಹಿಳೆಯು ಎದುರಿಸುವ ಬದುಕಿನ ಸಂದರ್ಭಗಳು ಏಕೆ ಸಂಕೀರ್ಣವಾಗಿಯೇ ಇರುತ್ತವೆ ಎಂಬುದನ್ನು ತಿಳಿಯಲು, ಮಾನವ ಚರಿತ್ರೆಯಲ್ಲಿ ಪಿತೃಪ್ರಧಾನ ವ್ಯವಸ್ಥೆಯ ಉಗಮ, ಬೆಳವಣಿಗೆಯ ಚಾರಿತ್ರಿಕ ಹಂತಗಳನ್ನು ವಿವರಿಸಿಕೊಳ್ಳುವುದು ಅನಿವಾರ್ಯವೇ ಆಗುತ್ತದೆ. ಆದರೂ, ಇಲ್ಲಿ ಸೇರಿರುವ ಎಲ್ಲರೂ ಈ ಪ್ರಾಥಮಿಕ ಸಂಗತಿಗಳನ್ನು ಅರಿತವರೇ ಆಗಿದ್ದಾರೆ ಎಂಬ ಒಪ್ಪಿತ ಗ್ರಹಿಕೆಯಿಂದ, ಸ್ತ್ರೀ ಸಂವೇದನೆ ಎಂಬ ವಿಷಯಕ್ಕೆ ಬರುತ್ತೇನೆ.

ಪಿತೃಪ್ರಧಾನ ವ್ಯವಸ್ಥೆಯು ತನ್ನ ಆಶಯಗಳನ್ನು ಜಾರಿಗೊಳಿಸಲು ತನ್ನದೇ ಆದ ತಂತ್ರಗಾರಿಕೆಯ ಒಂದು ಬಲವಾದ ಜಾಲವನ್ನು ಹೆಣೆಯುತ್ತದೆ. ಈ ಜಾಲದ ಪ್ರತಿಯೊಂದು ಎಳೆಯೂ ಇನ್ನಷ್ಟು ಸೂಕ್ಷ್ಮದ ಉಪತಂತ್ರಗಾರಿಕೆಗಳನ್ನು ರೂಪಿಸಿಕೊಳ್ಳುವ ಮೂಲಕ

ಮೂಲಜಾಲವು ಎಲ್ಲಿಯೂ ಸಡಿಲುಗೊಳ್ಳದೆ ತಲೆಮಾರುಗಳಲ್ಲಿ ನಿರಂತರವಾಗಿ ಸಾಗುವಂತೆ ಒತ್ತಾಸೆಯನ್ನು ಒದಗಿಸುತ್ತವೆ. ಇದರ ಕಾರ್ಯಾಚರಣೆಗಳಿಗಾಗಿ ರೂಪುಗೊಳ್ಳುವ ಸಾಮಾಜಿಕ ಸಂಸ್ಥೆಗಳು ತಮತಮಗೇ ವಿಶಿಷ್ಟವಾದ ನೀತಿನಿಯಮಗಳನ್ನು ಜಾರಿಗೊಳಿಸುವ ಮೂಲಕ, ತಮ್ಮ ತಮ್ಮ ಸದಸ್ಯರನ್ನು ಪಿತೃಪ್ರಧಾನ ವ್ಯವಸ್ಥೆಗೆ ಬದ್ಧರಾಗಿ ಉಳಿಯುವಂತೆ ಮಾಡುತ್ತವೆ. ಕುಟುಂಬ, ವಿವಾಹ, ಧರ್ಮ, ಮತ್ತು ರಾಜಕೀಯ ಎಂಬ ಸಂಸ್ಥೆಗಳು ನೇರವಾದ ನಿಯಂತ್ರಣವನ್ನು ಸಾಧಿಸುತ್ತವೆ. ಉಳಿದ ಸಾರ್ವಜನಿಕ ವಲಯದ ಎಲ್ಲ ಸಾಂಸ್ಥಿಕ ರಚನೆಗಳೂ ಈ ಮೂಲ ನಿಯಮಗಳ ಪಡಿಯಚ್ಚಿನಂತೆಯೇ ಕೆಲಸ ಮಾಡುತ್ತವೆ. ಶಿಕ್ಷಣ, ಕ್ರೀಡೆ, ಹಾಗೂ ಇತರ ಮನೋರಂಜನೆಯ ವಲಯಗಳ ಮಾತಿರಲಿ, ಸಾಹಿತ್ಯ, ಕಲೆ ಎಂಬ ಸೃಜನಶೀಲ ಅಭಿವ್ಯಕ್ತಿಗಳು ಕೂಡಾ ಸಾಂಸ್ಥಿಕ ರಚನೆಗಳೇ ಆಗಿಬಿಡುತ್ತವೆ. ಬರಹಗಾರರು, ಕಲಾವಿದರು ತಮ್ಮ ಸೃಜನಶೀಲತೆಯನ್ನು ವೈಯಕ್ತಿಕವಾದದ್ದು ಎಂದೇ ನಂಬುತ್ತಾರೆ. ಆದರೆ ಅರಿತೋ ಅರಿಯದೆಯೋ ಅವರು ಪಿತೃಪ್ರಧಾನತೆಯ ಲೈಂಗಿಕತಾವಾದೀ ಪಾಠಗಳನ್ನೇ ಒಪ್ಪಿಸುತ್ತಿರುತ್ತಾರೆ. ಇದನ್ನು ಮುಂದೆ ಚರ್ಚೆಗೆ ತರಲಿದ್ದೇನೆ.

ಇವುಗಳ ಈ ಕಾರ್ಯ ಸ್ವರೂಪವನ್ನು ಅರ್ಥ ಮಾಡಿಕೊಳ್ಳುವುದು ಸುಲಭವೇನೂ ಅಲ್ಲ. ಏಕೆಂದರೆ, ಇಲ್ಲಿನ ಎಲ್ಲ ನಿಯಮಗಳೂ ಅಗೋಚರವೂ, ಅಘೋಷಿತವೂ ಆಗಿ, ಮಿಥ್‌ಗಳ ರೂಪದಲ್ಲಿ ಸಂವಹನಗೊಳ್ಳುತ್ತವೆ. ಹೆಣ್ಣುಬದುಕಿನ ಸಾಮಾಜಿಕ ಪರಿಸ್ಥಿತಿಯನ್ನು ಸರಿಯಾಗಿ ಗ್ರಹಿಸಬೇಕೆಂದರೆ, ಹತ್ತುಹಲವು ಸಾಂಸ್ಥಿಕ ರಚನೆಗಳಲ್ಲಿ ಹುದುಗಿಕೊಂಡಿರುವ ಬಗೆಬಗೆಯ ಮಿಥ್‌ಗಳನ್ನು ಒಡೆದು ವಿಶ್ಲೇಷಿಸುವ ಅಗತ್ಯವಿದೆ ಎಂದು ಸಿಮೋನ್ ದ ಬೊವಾ ಹೇಳಿದಳು. ಅಸ್ತಿತ್ವವಾದದ ಗಂಭೀರ ಚಿಂತಕಿಯಾದ ಆಕೆಯು, ಈ ವಿಧಾನವನ್ನು ಹೆಣ್ಣಿನ ಅಸ್ತಿತ್ವದ ಬೇರುಗಳನ್ನು ಶೋಧಿಸುವಲ್ಲಿಯೂ ಬಳಸಿದಳು. ಸ್ವ-ಅರಿವು, ಹಾಗೂ ಸ್ವ-ಪ್ರೀತಿಯನ್ನು ಗುರುತಿಸಿಕೊಳ್ಳಲು ಸಾಧ್ಯವಾದ ಹೊರತು ನಮ್ಮ ಸಂವೇದನೆಗಳ ನಿಜ ಸ್ವರೂಪವನ್ನು ಗ್ರಹಿಸಲು ಸಾಧ್ಯವಾಗುವುದಿಲ್ಲ ಎಂಬ ಚರ್ಚೆಯನ್ನು ಬೊವಾ ತನ್ನ ಸೆಕೆಂಡ್ ಸೆಕ್ಸ್ ಕೃತಿಯಲ್ಲಿ ದೀರ್ಘವಾಗಿಯೇ ಬೆಳೆಸಿದ್ದಾಳೆ. ಒಂದು ಕಾಲ್ಪನಿಕ ಸಂದರ್ಭವನ್ನು ಆಕೆ ಪ್ರಸ್ತಾಪಿಸುತ್ತಾಳೆ. ಒಬ್ಬ ಹೆಣ್ಣು, ಹೆಚ್ಚೂ ಕಡಿಮೆ ಸಾವಿನ ತೀರಾ ಸಮೀಪಕ್ಕೆ ಸರಿದು ಬಿಟ್ಟಿರುವ ತನ್ನ ರೋಗಿಷ್ಠ ಪತಿಯ ಆರೈಕೆಯನ್ನು ಮಾಡುತ್ತಿದ್ದಾಳೆ. ಈ ಕೆಲಸದಲ್ಲಿ ಆಕೆ ಅತ್ಯಂತ ಪ್ರಾಮಾಣಿಕವಾಗಿಯೇ, ನಿಷ್ಠೆಯಿಂದಲೇ ತೊಡಗಿದ್ದಾಳೆ. ಸಾವು ಖಚಿತ ಎಂಬ ಅರಿವು ಅವಳಿಗೂ ಇದೆ. ಆಕೆಯು ಈ ಸೇವೆಯನ್ನು ಸಾಯುವ ಹೊತ್ತಿನಲ್ಲಿ ಆ ಮನುಷ್ಯನಿಗೆ ಒಂದಿಷ್ಟು ಶಾಂತಿ ಸಮಾಧಾನಗಳಾದರೂ ದೊರೆಯಲಿ ಎಂಬ ಮಾನವೀಯ ನೆಲೆಯಿಂದ ಮಾಡುತ್ತಿದ್ದಾಳೆಯೇ, ಅಥವಾ ಹೆಂಡತಿಯಾಗಿ ಇದು ತನ್ನ ಕರ್ತವ್ಯ ಎಂಬುದಕ್ಕೆ ಕಟ್ಟುಬಿದ್ದು ಮಾಡುತ್ತಿದ್ದಾಳೆಯೇ ಎಂಬುದು ತಿಳಿಯುವುದಿಲ್ಲ.

ನಮ್ಮ ಸುತ್ತಲೂ ಇಂಥಾ ಅನೇಕ ಪ್ರಕರಣಗಳನ್ನು ನೋಡುತ್ತಿರುತ್ತೇವೆ. ತನ್ನ ಆಪ್ತರು ಎಂಬ ಭಾವದಲ್ಲಿ ಈ ಬಗೆಯ ದೀರ್ಘಕಾಲೀನ ಸೇವೆಯಲ್ಲಿ ತೊಡಗಿದ್ದು, ಕೊನೆಗೊಮ್ಮೆ ಆ ನಿರೀಕ್ಷಿತ ಸಾವು ಬಂದೇಬಿಟ್ಟಾಗ, ಆರೈಕೆ ಮಾಡುತ್ತಿದ್ದ ಹೆಣ್ಣಿಗೆ ಉಂಟಾಗುವ

ಭಾವ ಎಂಥದ್ದು? ಅಂತೂ ಮುಗಿಯಿತು ಎಂಬ ನಿರಾಳತೆಯೇ, ಅಥವಾ ಬಾಧಿಸುವ ದುಃಖವೇ? ಸ್ವತಃ ಅವಳಿಗೂ ತಿಳಿಯದು. ಆದರೆ ಏನೂ ಹೇಳದಿದ್ದರೂ, ಆಕೆಯು ಯಾವುದೋ ಬಂಧನದಿಂದ ಹೊರಬಂದವಳಂತೆ ನಿರಾಳವಾಗುವುದನ್ನು ಸ್ಪಷ್ಟವಾಗಿಯೇ ಗುರುತಿಸಬಹುದು. ಈ ನಿರಾಳತೆ ಅವಳಿಗೆ ಬಂದದ್ದು ಸ್ವಂತದ ಕಾರಣಕ್ಕೋ, ಅಥವಾ ಸಾಮಾಜಿಕವಾಗಿ ಹೇರಲಾದ ಒತ್ತಡವು ನಿವಾರಣೆಗೊಂಡ ಕಾರಣಕ್ಕೋ ಎಂಬುದು ಅರ್ಥವಾಗುವುದಿಲ್ಲ. ಈ ಗೊಂದಲವನ್ನು ಅಸ್ತಿತ್ವವಾದಿಗಳು ಅಧಿಕೃತ-ಸ್ವ, ಮತ್ತು ಅನಧಿಕೃತ-ಸ್ವ (Authentic-Self ಮತ್ತು Unauthentic-Self) ಎಂಬ ಪರಿಭಾಷೆಗಳಲ್ಲಿ ವಿವರಿಸುತ್ತಾರೆ. ಈ ಒತ್ತಡವನ್ನೇ, ತನ್ನ ಸ್ವಂತದ ಭಾವನೆ ಹಾಗೂ ಸ್ವಂತ ನಿರ್ಧಾರದ ನಡೆಗಳು ಎಂದು ತಿಳಿದು ವರ್ತಿಸುವ ನಂಬಿಕೆಯನ್ನು ಬೊವಾ Bad Faith ಎಂದು ವ್ಯಾಖ್ಯಾನಿಸುತ್ತಾಳೆ.

ಸ್ತ್ರೀವಾದೀ ಚಿಂತನೆ ಎಂಬುದು, ಉಳಿದೆಲ್ಲ ಜ್ಞಾನವಲಯಗಳಂತೆ ಪ್ರತ್ಯೇಕ ವಿಭಾಗವೆನಿಸಿ ನಿಲ್ಲುವ ಚಿಂತನೆಯಲ್ಲ. ಮಹಿಳೆಯರ ಬದುಕುಗಳಷ್ಟೇ ಅಲ್ಲ, ಪುರುಷರ ಬದುಕುಗಳು ಕೂಡಾ ಪಿತೃಪ್ರಧಾನ ರಾಜಕಾರಣದಲ್ಲಿ ಬಂಧನಕ್ಕೆ ಒಳಗಾಗಿವೆ ಎಂಬ ಅರಿವನ್ನು ಹೊಂದಿರುವ ಒಂದು ಸಾವಯವ ಚಿಂತನೆ. ಈ ಅರಿವನ್ನು ದೃಢೀಕರಿಸುವ ಒಂದು ಹಾದಿಯಾಗಿ, ಈ ಚಿಂತನೆಯು ಪಿತೃಪ್ರಧಾನ ವ್ಯವಸ್ಥೆಯು ತನ್ನ ಸಾಂಸ್ಥಿಕ ರಚನೆಗಳಲ್ಲಿ, ಹಾಗೂ ಜ್ಞಾನವಲಯಗಳಲ್ಲಿ ಹುದುಗಿಸಿಟ್ಟಿರುವ ನಿಯಮಾವಳಿಗಳು, ಹಾಗೂ ಮಿಥ್‌ಗಳನ್ನು ಮರುಶೋಧನೆಗೆ ಒಳಪಡಿಸುತ್ತದೆ. ಈ ಸ್ತ್ರೀವಾದೀ ಚರ್ಚೆಗಳಲ್ಲಿ ಬಳಸಲಾಗುವ ಕೆಲವು ಪರಿಭಾಷೆಗಳನ್ನು ಬಳಸುವ ಅಗತ್ಯ ಇಲ್ಲಿದೆ. ಸಾಮಾನ್ಯವಾಗಿ ಪಿತೃಪ್ರಧಾನ ಸಮಾಜದಲ್ಲಿ ಹೆಣ್ಣು ಮತ್ತು ಗಂಡುಗಳನ್ನು ವಿಂಗಡಿಸಿಡುವ ಉದ್ದೇಶಕ್ಕಾಗಿಯೇ ಕೆಲವು ಮಿಥ್‌ಗಳನ್ನು ನೆಲೆಗೊಳಿಸಲಾಗಿದೆ. ಅದರಲ್ಲಿ ಬಹಳ ಮುಖ್ಯವಾದುದು ಮನುಷ್ಯ ಗುಣಗಳನ್ನು ಹೆಣ್ಣುಗುಣ, ಗಂಡುಗುಣ ಎಂದು ಪ್ರತ್ಯೇಕಿಸುವ ಮಾತು. ಮೇಲುನೋಟಕ್ಕೆ, ಚಿಕ್ಕ ಮಕ್ಕಳಿಂದಲೇ ಈ ಗುಣಗಳು ಹೀಗೆಯೇ ಪ್ರತ್ಯೇಕಗೊಂಡು ಕಾಣುತ್ತವೆ ಎಂಬುದೂ ಸುಳ್ಳಲ್ಲ. ಹೆಣ್ಣುಮಗುವು ಮೃದು ಗುಣಗಳನ್ನೇ ತೋರುವುದು, ಮತ್ತು ಗಂಡು ಮಗುವು ಒರಟು ಗುಣಗಳನ್ನೇ ತೋರುವುದು ಸಹಜವೇ ಎಂಬಂತೆ ಕಾಣುತ್ತದೆ. ಹದಿಹರಯಕ್ಕೆ ಬರುವ ವೇಳೆಗೆ ಈ ಮಕ್ಕಳು ಸ್ತ್ರೀತ್ವ ಹಾಗೂ ಪುರುಷತ್ವದ ಗುಣಗಳನ್ನು ವ್ಯಕ್ತ ಮಾಡುತ್ತವೆ. ಹೆಣ್ಣು ನಯ, ವಿನಯ, ನಾಚಿಕೆ, ಹೊಂದಾಣಿಕೆ, ಸಹನೆ, ತ್ಯಾಗ, ಪೋಷಣೆ, ಕಾಳಜಿ, ಸಂಗೋಪನೆಯ ಭಾವನೆ ವರ್ತನೆಗಳನ್ನು ತೋರಿದರೆ, ಗಂಡು ಆಕ್ರಮಣ, ಅಹಮಿಕೆ, ಧೈರ್ಯ, ಸಾಹಸ, ಮುನ್ನುಗ್ಗುವಿಕೆ, ಸ್ವಾತಂತ್ರ್ಯ, ರಕ್ಷಕನೆಂಬ ಭಾವನೆ ವರ್ತನೆಗಳನ್ನು ಮೈಗೂಡಿಸಿಕೊಳ್ಳುತ್ತಾನೆ. ಹೆಣ್ಣು ಗಂಡುಗಳ ನಡೆನುಡಿಗಳಲ್ಲಿ ಕೂಡಾ ಈ ಗುಣಗಳೇ ವ್ಯಕ್ತಗೊಳ್ಳುತ್ತವೆ. ನಾವು ಇವನ್ನು ಹೆಣ್ಣು/ಗಂಡಿನ ಸಹಜ ಹುಟ್ಟುಗುಣಗಳು ಎಂದೇ ತಿಳಿಯುತ್ತೇವೆ. ಅದಕ್ಕೆ ತಕ್ಕಂತೆಯೇ ಆ ಮಕ್ಕಳ ಲಾಲನೆ ಪಾಲನೆಗಳು, ವೇಷಭೂಷಣಗಳು ಕೂಡಾ ವ್ಯತ್ಯಸ್ತಗೊಳ್ಳುವುದೂ ಇದೆ. ಈ ದಿಸೆಯಲ್ಲಿ ಅರಳಲು ಅವರಿಗೆ ಅಗತ್ಯವಾದ ಒತ್ತಾಸೆಗಳನ್ನೂ ಒದಗಿಸುತ್ತೇವೆ. ಹಾಗೆ ನೋಡಿದರೆ, ತೀರಾ ಎಳವೆಯಲ್ಲಿ ಈ ಹೆಣ್ಣುಗುಣ/

ಗಂಡುಗುಣ ಎಂಬ ಪ್ರತ್ಯೇಕತೆಯು ಕಾಣುವುದೇ ಇಲ್ಲ. ಚಿಕ್ಕ ವಯಸ್ಸಿನ ಗಂಡು/ಹೆಣ್ಣು ಮಕ್ಕಳಿಗೆ ಒಂದೇ ಬಗೆಯ ವೇಷಭೂಷಣಗಳನ್ನು ತೊಡಿಸಿ ನೋಡಿದೆವೆಂದರೆ ಈ ಮಾತು ನಿಜ ಎಂಬುದು ತಿಳಿಯುತ್ತದೆ.

ಇನ್ನು ಹದಿಹರಯದ ವಯಸ್ಸಿಗೆ ಕಾಲಿರಿಸುವ ಹಂತದಿಂದಲೇ ಸ್ತ್ರೀತ್ವ ಎಂಬ ಚಹರೆಗಳನ್ನು ಹೆಣ್ಣುಗಳೂ, ಪುರುಷತ್ವ ಎಂಬ ಚಹರೆಗಳನ್ನು ಗಂಡುಗಳೂ ಆವಾಹಿಸಿಕೊಳ್ಳುತ್ತಾರೆ. ಜೈವಿಕ ಸಹಜವಾಗಿ ಹೆಣ್ಣು ಹಾಗೂ ಗಂಡುಗಳ ದೇಹರಚನೆಗಳಲ್ಲಿ ವ್ಯತ್ಯಾಸಗಳು ಕಾಣುತ್ತವೆ ಎಂಬುದು ನಿಜ. ಈ ವ್ಯತ್ಯಾಸಗಳು ಕೇವಲ ದೈಹಿಕ ಅಂಗಗಳಿಗೆ ಮಾತ್ರವೇ ಸೀಮಿತವಾಗಿರುತ್ತವೆ. ಆದರೆ ಈ ಲೈಂಗಿಕ ವ್ಯತ್ಯಾಸಗಳನ್ನೇ ಮುಂದುಮಾಡಿ, ಸ್ತ್ರೀತ್ವ ಮತ್ತು ಪುರುಷತ್ವ ಎಂಬ ವ್ಯಾಖ್ಯಾನಗಳನ್ನು ಮಾಡುವುದು ಮಾತ್ರ, ಪಿತೃಪ್ರಧಾನತೆಯ ಮುಖ್ಯ ರಾಜಕಾರಣದ ಒಂದು ತಂತ್ರವಷ್ಟೇ ಆಗಿದೆ. ಅದೊಂದು ಮಿಥ್. ಇದನ್ನೇ ವಿಸ್ತರಿಸುತ್ತಾ, ಹೆಣ್ಣನ್ನು ಅಪೂರ್ಣ ಗಂಡು, ಗಂಡುದೇಹದಿಂದ ಬೇರ್ಪಟ್ಟು ಉದುರಿದ ಊನಜೀವ ಎಂಬ ವ್ಯಾಖ್ಯಾನಗಳು ನೆಲೆಗೊಂಡಿವೆ. ಈ ಮೂಲಕವೇ ಪುರುಷ ಶ್ರೇಷ್ಠತೆ ಎಂಬ ಮೌಲ್ಯವನ್ನು ದೃಢೀಕರಿಸಲಾಗುತ್ತದೆ. ಪುರುಷ ಶ್ರೇಷ್ಠತೆಗೆ ಊನಜೀವಿಯಾದ ಮಹಿಳೆಯು ಅಧೀನಗೊಳ್ಳುವುದು ಅನಿವಾರ್ಯವೇ ಎಂಬುದೂ ಒಪ್ಪಿತ ಎನಿಸಿ ನೆಲೆಗೊಳ್ಳುತ್ತದೆ. ಇದಕ್ಕೆ ಅನುಗುಣವಾಗಿಯೇ ಪುರುಷಾಧಿಕಾರ ಮತ್ತು ಮಹಿಳಾ ಅಧೀನತೆ ಎಂಬ ಸಮೀಕರಣವು ನ್ಯಾಯಸಮ್ಮತ ಎಂದೂ, ಇದರಲ್ಲಿ ಯಾವುದೇ ಕೈವಾಡವೂ ಇಲ್ಲ ಎಂದೂ ತೀರ್ಮಾನವೇ ಆಗಿಬಿಡುತ್ತದೆ. 'ಲಿಂಗತ್ವ' ಎಂಬುದು ಈ ಅಸಹಜ ಶ್ರೇಣೀಕರಣದ ರಾಜಕಾರಣವನ್ನು ವಿವರಿಸಲು ಬಳಕೆಗೊಳ್ಳುವ ಒಂದು ಸ್ತ್ರೀವಾದೀ ಪರಿಭಾಷೆ. ಈ ಪರಿಭಾಷೆಯು ಹೆಣ್ಣುಗುಣ ಗಂಡುಗುಣ ಎಂಬ ಪ್ರತ್ಯೇಕತೆಯ ತಂತ್ರವನ್ನೂ, ಸ್ತ್ರೀತ್ವ ಪುರುಷತ್ವ ಎಂಬ ಶ್ರೇಣೀಕರಣದ ಹುನ್ನಾರಗಳನ್ನೂ ಯಾವ ಗೊಂದಲಗಳಿಗೂ ಎಡೆಗೊಡದೆ ವಿವರಿಸುತ್ತದೆ.

ಸ್ತ್ರೀವಾದಿಗಳ ವಿವರಣೆಗಳೇನೇ ಇರಲಿ. ಈ ಪ್ರತ್ಯೇಕತೆ ಹಾಗೂ ಶ್ರೇಣೀಕರಣವನ್ನು ಮಹಿಳೆಯರೂ ಪುರುಷರೂ ಸಮಾನವಾಗಿಯೇ, ಉಸಿರೆತ್ತದೆ ಒಪ್ಪಿಕೊಳ್ಳುತ್ತಾರೆ; ಮತ್ತು ಆಯಾ ಚಹರೆಗಳನ್ನು ಹುಟ್ಟುಗುಣವೇ ಹೌದು ಎಂಬಷ್ಟು ಸಹಜವಾಗಿ ಆವಾಹಿಸಿಕೊಳ್ಳುತ್ತಾರೆ. ಅವರಲ್ಲಿ ಯಾರೊಬ್ಬರಿಗೂ ಈ ಕುರಿತ ಅನುಮಾನವಾಗಲೀ, ಪ್ರಶ್ನೆಯಾಗಲೀ ಬರುವುದೇ ಇಲ್ಲ. ಇದು ಹೇಗೆ ಸಾಧ್ಯವಾಯಿತು ಎಂಬುದನ್ನು ವಿವರಿಸಲು, ಸಾಮಾಜೀಕರಣ ಎಂಬ ಒಂದು ಪರಿಕಲ್ಪನೆಯನ್ನು ಬಳಸಲಾಗುತ್ತದೆ. ಪಿತೃಪ್ರಧಾನತೆಯ ರಾಜಕಾರಣದ ಭಾಗವಾಗಿಯೇ ಮಾನವರ ಬೌದ್ಧಿಕ ಸಾಮರ್ಥ್ಯವನ್ನು ಸಾಂಸ್ಥೀಕರಣಗೊಳಿಸಿ, ಜ್ಞಾನವಲಯಗಳನ್ನು ನೆಲೆಗೊಳಿಸಲಾಯಿತು ಎಂಬುದನ್ನು ಸ್ತ್ರೀವಾದಿಗಳು ಸಾಬೀತು ಮಾಡಿರಬಹುದು. ಆದರೆ ಈ ರಾಜಕಾರಣಕ್ಕೇ ಬದ್ಧವಾಗಿದ್ದ ವಲಯಗಳವರೇ ಆದ ಬುದ್ಧಿಜೀವಿಗಳಲ್ಲಿ ಕೆಲವರಿಗಾದರೂ, ಸಮಾಜದಲ್ಲಿ ಇರುವ ಅಸಮಾನತೆಯ ಸಂಗತಿಗಳು ಅನುಭವಕ್ಕೆ ಬಂದವು. ಇಂಥವರು, ಪಿತೃಪ್ರಧಾನತೆ ಎಂಬ ಕಲ್ಪನೆಯೇ ಇಲ್ಲದಿದ್ದರೂ, ಈ ಕುರಿತ ಚಿಂತನೆಗೆ ತೊಡಗಿದರು.

ಅದರಲ್ಲೂ ನೇರವಾಗಿ ಸಮಾಜವನ್ನು, ಮನುಷ್ಯರ ಮನಸ್ಸನ್ನು ಕುರಿತ ಅಧ್ಯಯನ ಮಾಡುವ ಸಮಾಜ ಶಾಸ್ತ್ರಜ್ಞರು, ಹಾಗೂ ಮನೋವಿಜ್ಞಾನಿಗಳು ಅಸಮಾನತೆಯ ಮೂಲಗಳನ್ನು ತಿಳಿಯಲು ಪ್ರಯತ್ನಿಸಿದರು. ಶ್ರೇಣೀಕರಣದ ವೈವಿಧ್ಯಗಳಿಂದಾಗಿ ಮನುಷ್ಯರ ನಡುವೆ ಅಸಮಾನತೆಗಳು ನೆಲೆಸಿವೆ ಎಂಬುದನ್ನೂ, ಸಮಾಜವ್ಯವಸ್ಥೆಯಲ್ಲಿ ಇದರ ಸಲುವಾಗಿಯೇ ಒಂದು ಕಲಿಕಾಕೇಂದ್ರವು ಕೆಲಸ ಮಾಡುತ್ತದೆ ಎಂಬುದನ್ನೂ ಕಂಡುಕೊಂಡರು. ಇವೆರಡನ್ನೂ ವಿವರಿಸಲು ಸಾಮಾಜೀಕರಣ ಎಂಬ ಪರಿಭಾಷೆಯನ್ನು ಬಳಸಿದರು. ಈ ವಿವರಣೆಯು ಜಾತಿ, ಜನಾಂಗ, ವರ್ಗ ಮುಂತಾದ ಹಲವು ಸಮುದಾಯಗಳಲ್ಲಿನ ಅಸಮಾನತೆಯನ್ನು ಮಾತ್ರವೇ ವಿವರಿಸಲು ಶಕ್ತವಾಯಿತು. ಆದರೆ, ಈ ಎಲ್ಲ ಸಮುದಾಯಗಳಲ್ಲೂ ಗಂಡು ಮತ್ತು ಹೆಣ್ಣುಗಳ ನಡುವೆ ಇರುವ ಅಸಮಾನತೆಯನ್ನು ಅದು ವಿವರಿಸಲು ಹೋಗಲೇ ಇಲ್ಲ. ಬಹುಶಃ ಪಿತೃಪ್ರಧಾನತೆಯನ್ನೇ ಪ್ರತಿನಿಧಿಸುವ ಈ ವಲಯಗಳಿಗೆ, ಈ ಸಂಗತಿಯು ತೋಚದೆಯೇ ಹೋಯಿತು ಎನ್ನಬಹುದು, ಅಥವಾ ಇದರ ಅಗತ್ಯವೇ ಅವುಗಳಿಗೆ ಕಾಣಲಿಲ್ಲ ಎಂದರೂ ಸರಿಯೇ. ಆದರೆ, ಈ ಸೂಕ್ಷ್ಮವನ್ನು ಗ್ರಹಿಸಿದ ಸ್ತ್ರೀವಾದೀ ಚಿಂತನೆಯು ಸಾಮಾಜೀಕರಣ ತರಬೇತಿಯ ಕಲ್ಪನೆಯಲ್ಲಿ ಬಿಟ್ಟುಹೋಗಿದ್ದ ಇನ್ನೊಂದು ಎಳೆಯನ್ನು ಗುರುತಿಸಿದರು; ಮತ್ತು ಅದನ್ನು 'ಲೈಂಗಿಕತಾವಾದೀ ಸಾಮಾಜೀಕರಣ' ಎಂಬ ಪರಿಕಲ್ಪನೆಯನ್ನು ಬಳಸಿ ವಿವರಿಸಿದರು. ಈ ತರಬೇತಿಯ ಉದ್ದಕ್ಕೂ ಹೆಣ್ಣುಗುಣ, ಗಂಡುಗುಣ, ಪುರುಷತ್ವ, ಸ್ತ್ರೀತ್ವ ಎಂಬ ಮಿಥ್‌ಗಳನ್ನೇ ವಾಸ್ತವಗಳು ಎಂಬಂತೆ ಪ್ರಸಾರ ಮಾಡಲಾಗುತ್ತದೆ ಎಂಬುದನ್ನೂ ಸಾಬೀತು ಮಾಡಿದರು. ಈ ತರಬೇತಿಯ ಪಾಠಗಳನ್ನೇ ಮೈಗೂಡಿಸಿಕೊಳ್ಳುತ್ತಾ ಪುರುಷರು ಯಜಮಾನಿಕೆಯ ಅಹಮನ್ನೂ, ಮಹಿಳೆಯರು ಆಳಿನ ದೈನ್ಯವನ್ನೂ ತೋರುತ್ತಾರೆ.

ಮೇಲುನೋಟಕ್ಕೆ ಈ ತರಬೇತಿಯು ಪುರುಷರ ಪರವಾಗಿ ಇದೆ ಎಂದೇ ಕಾಣುತ್ತದೆ. ಪುರುಷರು ಇದನ್ನು ಇಷ್ಟಪಡುವುದು ಸಹಜವೇ ಎಂದೂ ತೋರುತ್ತದೆ. ಅದೂ ಹೋಗಲಿ ಎಂದರೆ, ಅಧೀನತೆಯ ಸಂಕಟಗಳನ್ನು ಅನುಭವಿಸುವ ಮಹಿಳೆಯರು ಕೂಡಾ ತಮ್ಮ ಈ ಸ್ಥಿತಿಯನ್ನು ಸಮಾಧಾನವಾಗಿಯೇ ಸ್ವೀಕರಿಸಿದ್ದಾರೆ ಎಂಬಂತೆ ಕಾಣುತ್ತದೆ. ಆದರೆ, ಯಾವುದೇ ಒಬ್ಬ ಗಂಡಸು, ಅಥವಾ ಒಬ್ಬ ಹೆಣ್ಣಿನ ಜೀವನದ ಅನುಭವಗಳನ್ನು ಕೇಳಿಸಿಕೊಂಡರೆ, ಹೆಣ್ಣು ಗಂಡು ಎಂಬ ಭೇದವೇ ಇಲ್ಲದೆ ಪ್ರತಿಯೊಬ್ಬರೂ ಹೇಳಲಾಗದ ಯಾವುದೋ ಅತೃಪ್ತಿ, ಹಾಗೂ ಅಸಮಾಧಾನಗಳಲ್ಲಿ ತೊಳಲುತ್ತಿರುವುದು ತಿಳಿಯುತ್ತದೆ. ಇದೇಕೆ ಹೀಗೆ ಎಂಬುದು ಸುಲಭವಾಗಿ ಅರ್ಥವಾಗುವ ಮಾತಲ್ಲ. ಬದಲಿಗೆ ಇವನ್ನು ಅವರವರ ವೈಯಕ್ತಿಕ ಸಮಸ್ಯೆಗಳು ಎಂದೇ ನೋಡಲಾಗುತ್ತದೆ. ಈ ಕುರಿತು ಸ್ತ್ರೀವಾದವು ಬಲು ಸೂಕ್ಷ್ಮವಾಗಿ ಅಧ್ಯಯನ ಮಾಡಿ ಒಪ್ಪಬಹುದಾದ ಒಂದು ಮಾತನ್ನು ಹೇಳುತ್ತದೆ. ಅಸ್ತಿತ್ವವಾದಿಗಳು 'ನಮ್ಮ ವ್ಯಕ್ತಿತ್ವ' ಎಂಬುದರಲ್ಲಿ, ನಮ್ಮ ಅರಿವನ್ನು ಅಧಿಕೃತ, ಹಾಗೂ ಅನಧಿಕೃತ ಎಂದು ಪ್ರತ್ಯೇಕಗೊಳಿಸಿ ನೋಡುತ್ತಾರೆ. ಇದನ್ನೇ, ಕಪ್ಪು ಸ್ತ್ರೀವಾದಿ ಬೆಲ್ ಹುಕ್ಸ್, ಸ್ವ-ಅರಿವು ಮತ್ತು ಸ್ವ-ಪ್ರೀತಿ ಎಂಬವು ಮಾತ್ರವೇ ನಿಜವಾದ ನಮ್ಮ ವ್ಯಕ್ತಿತ್ವದ

ಕುರುಹುಗಳು ಎಂದು, ಸರಳವಾದ ಪರಿಕಲ್ಪನೆಗಳಲ್ಲಿ ವಿವರಿಸುತ್ತಾಳೆ. ಪ್ರೀತಿಯ ನಿಜ ಸ್ವರೂಪವನ್ನು ಅರಿಯಲು ನೆರವಾಗುವ ನಾಲ್ಕು ಸರಣಿ ಪುಸ್ತಕಗಳನ್ನು ಬೆಲ್ ಹುಕ್ಸ್ ರಚಿಸಿದ್ದಾಳೆ. ಸಾಮಾಜೀಕರಣದ ತರಬೇತಿಯಿಂದಾಗಿ 'ಪ್ರೀತಿ' ಎಂಬುದು ಕೂಡಾ ಮನುಷ್ಯರೆನಿಸಿದ ಎಲ್ಲರಿಗೂ ಸಮಾನವೆನಿಸುವ ಬಗೆಯದಾಗಿ ಉಳಿದಿಲ್ಲ ಎಂದು ಹೇಳುವ ಬೆಲ್ ಹುಕ್ಸ್, ಪ್ರೀತಿಯನ್ನು ಕಂಡುಕೊಳ್ಳಲು ಹೆಣ್ಣುಗಳು, ಗಂಡುಗಳು, ಬೇರೆಬೇರೆ ಜಾತಿ ಜನಾಂಗ ಎಂಬ ಶ್ರೇಣಿಯವರು ತಮತಮಗೇ ವಿಶಿಷ್ಟವಾದ ದಾರಿಗಳನ್ನು ಹುಡುಕುವ ಅಗತ್ಯವಿದೆ ಎನ್ನುತ್ತಾಳೆ. ಇದೇ ಕಾರಣದಿಂದಲೇ, ಈ ದಾರಿಗಳನ್ನು ಪ್ರತ್ಯೇಕವಾಗಿಯೇ ಚರ್ಚಿಸಲು ಸರಣಿ ಪುಸ್ತಕಗಳು ಆಕೆಗೆ ಅಗತ್ಯವೆನಿಸಿದವು. ಈ ಪೈಕಿ, ಮಹಿಳೆಯರು ಜೀವಮಾನವಿಡೀ ಒಂದು ಹಿಡಿ ಪ್ರೀತಿಗಾಗಿ ಹಂಬಲಿಸುತ್ತಲೇ, ಅದಕ್ಕಾಗಿ ಪರದಾಡುತ್ತಲೇ ಉಳಿದುಬಿಡುತ್ತಾರೇಕೆ ಎಂಬ ಪ್ರಶ್ನೆಯನ್ನು ಶೋಧಿಸುವ Communion- The Female Search for Love ಎಂಬ ಕೃತಿಯನ್ನು ಸ್ವಲ್ಪ ಪ್ರಸ್ತಾಪಿಸುತ್ತೇನೆ. 'ಸ್ತ್ರೀ ಸಂವೇದನೆ' ಎಂಬ ಮಾತನ್ನು ಅರ್ಥಮಾಡಿಕೊಳ್ಳುವಲ್ಲಿ ಇದು ತುಂಬಾ ನೆರವಾಗುತ್ತದೆ ಎಂಬುದು ನನ್ನ ಗ್ರಹಿಕೆ.

ಲೈಂಗಿಕತಾವಾದೀ ಸಾಮಾಜೀಕರಣ ತರಬೇತಿಯಲ್ಲಿ ಪ್ರೀತಿ ಎಂಬ ಭಾವನೆಗೆ ಸ್ಥಾನವೇ ದೊರೆಯುವುದಿಲ್ಲ. ಪುರುಷತ್ವದ ಅಡಿಯಾಳಾಗಬೇಕಾದ ಸ್ತ್ರೀತ್ವಕ್ಕೆ ತನ್ನ ಜೀವಸಹಜ ಲೈಂಗಿಕ ಅಗತ್ಯಗಳನ್ನು ಸ್ವತಂತ್ರವಾಗಿ ಪೂರೈಸಿಕೊಳ್ಳುವ ಅವಕಾಶಗಳು ಇರುವುದಿಲ್ಲ. ಈ ಅಗತ್ಯಕ್ಕಾಗಿ ಸ್ತ್ರೀತ್ವವು ಪುರುಷತ್ವದ ಕರುಣೆಗಾಗಿ ಕಾಯಬೇಕಾಗುತ್ತದೆ. ಗಂಡು ಹೆಣ್ಣುಗಳ ನಡುವಣ ಪ್ರೀತಿಯು ಜೀವಸಹಜವಾದ ಅಗತ್ಯವೇ ಆದ ಲೈಂಗಿಕ ವಾಂಛೆಯ ಬಿಂದುವಿನಿಂದಲೇ ತೊಡಗುತ್ತದೆ. ಈ ಆಕರ್ಷಣೆಯು ಪ್ರೀತಿಯ ಹಲವು ಛಾಯೆಗಳನ್ನು ಕ್ರಮೇಣವಾಗಿ ಪ್ರಕಟಿಸುವ ಸಾಧ್ಯತೆಗಳೂ ಇರಬಹುದು. ಆದರೆ ಈ ವಿಕಸನ ಪ್ರಕ್ರಿಯೆಗೆ ಮೊದಲೇ ಗಂಡು ಹೆಣ್ಣುಗಳು, ಅಧಿಕಾರ ಮತ್ತು ಅಧೀನತೆಯ ಚೌಕಟ್ಟಿಗೆ ಬಂಧಿತರಾಗಿರುತ್ತಾರೆ. ಹಾಗಾಗಿ ಗಂಡು ಹೆಣ್ಣುಗಳ ಸಂಬಂಧವು ಇಡಿಯಾಗಿ ಒಂದು ರಾಜಕೀಯ ಆಟವಾಗಿ ಮಾತ್ರವೇ ಉಳಿಯುತ್ತವೆ. ಸಂಬಂಧವು ಪರಸ್ಪರದ ಭಾವವನ್ನು ತಳೆಯುವ ಬದಲು, ಸ್ಪರ್ಧೆಯ ಕಣವಾಗಿ ಮಾರ್ಪಡುತ್ತದೆ. ಪುರುಷರು ಯಜಮಾನಿಕೆಯ ಪಾತ್ರಕ್ಕೆ ಅಗತ್ಯ ಎಂದು ತಮ್ಮನ್ನು ನಂಬಿಸಲಾದ ಭಾವ ಸ್ಪಂದನೆಗಳನ್ನು ಮಾತ್ರವೇ ತೋರುತ್ತಾ ದಣಿಯುತ್ತಾರೆ. ಮಹಿಳೆಯರಂತೂ ತಮ್ಮ ಭಾವ ಸ್ಪಂದನೆಗಳು ತಮಗೇ ವಿರುದ್ಧವಾಗಿ ನಿಂತಿರುವುದರ ಪರಿಣಾಮಗಳನ್ನು ಅನುಭವಿಸುತ್ತಾ ನೋಯುತ್ತಾರೆ. ಇದರ ನೇರ ಹಾಗೂ ಸ್ಪಷ್ಟ ಅರಿವು ಇಬ್ಬರಿಗೂ ಸಾಧ್ಯವಾಗುವುದಿಲ್ಲ. ಈ ದುರಂತದಲ್ಲಿ ಇಬ್ಬರೂ ಸ್ಪರ್ಧೆಯ ಚೌಕಟ್ಟನ್ನೇ 'ಪ್ರೀತಿ' ಎಂದು ತಪ್ಪಾಗಿ ತಿಳಿಯುತ್ತಾರೆ. ಈ ಮೊದಲೇ ತಮಗೆ ಸೂಚಿತವಾದ ಸ್ಥಿರಮಾದರಿ ಪಾತ್ರಗಳಾಗಿ ಅವರು ಬದುಕುತ್ತಾರೆ. ತಮಗೆ ನಿಗದಿತವಾದ ಕರ್ತವ್ಯಗಳನ್ನು ಮಾಡುತ್ತಾರೆ. ಸರಿ ತಪ್ಪುಗಳ, ಅಥವಾ ಹಿತ ಅಹಿತಗಳ ಯೋಚನೆಯೇ ಅವರಿಗೆ ಬರುವುದಿಲ್ಲ. ವಿಷಾದಕರವಾದ ಮಾತೆಂದರೆ ಅವರ ವ್ಯಕ್ತಿತ್ವದ ಪ್ರತಿನಿಧಿಗಳೇ

ಎನಿಸಬೇಕಾದ ಅವರ ದೇಹ, ಬುದ್ಧಿ, ಹಾಗೂ ಮನಸ್ಸು ಎಂಬ ಎಲ್ಲವೂ ಇಡಿಯಾಗಿ ಇದಕ್ಕೇ ಒಗ್ಗಿಕೊಂಡುಬಿಡುತ್ತವೆ.

ಈ ಹಿನ್ನೆಲೆಯಲ್ಲಿ ಸ್ತ್ರೀ ಸಂವೇದನೆ ಎಂಬ ಮಾತು ಮಹಿಳೆಯರ ಭಾವಲೋಕವನ್ನು ಸರಿಯಾಗಿ ಪ್ರತಿನಿಧಿಸಬಲ್ಲುದೇ ಎಂಬುದನ್ನು ನಾವು ಶೋಧಿಸಿಕೊಳ್ಳಬೇಕಿದೆ. ಇದನ್ನು ಕುರಿತ ಗೊಂದಲಗಳನ್ನು ವಿವರಿಸಿಕೊಳ್ಳುವ ಸವಾಲನ್ನು ನಾವಿನ್ನೂ ಎದುರುಗೊಂಡೇ ಇಲ್ಲ. ಈ ಬಾರಿಯ ವಸಂತೋತ್ಸವದ ಭಾಗವೇ ಆಗಿ ಬರಲಿರುವ ಸಂಚಿಕೆಗಾಗಿ, ಸಂಪಾದಕರು 'ಸಂವೇದನೆ' ಎಂಬ ಪರಿಕಲ್ಪನೆಯನ್ನು ಒಂದು ಸಣ್ಣ ಟಿಪ್ಪಣಿಯ ಮೂಲಕ ಒದಗಿಸಿದ್ದಾರೆ: "ಜೀವವೊಂದು ತನ್ನ ಅನುಭವಗಳು ಒದಗಿಸಿದ ಅರಿವಿನ ಮೂಲಕವೇ ತನ್ನದೇ ಆದ ದೃಷ್ಟಿಯಿಂದ ಬದುಕಿಗೆ ಸ್ಪಂದಿಸುವುದನ್ನು ಸಂವೇದನೆ ಎಂದು ಕರೆಯಬಹುದು" ಎಂದು ಅದನ್ನು ನಿರ್ವಚಿಸಿದ್ದಾರೆ. ಸರಿಯೇ. ಆದರೆ ಸ್ತ್ರೀಯರು ಮಾತ್ರವಲ್ಲ ಪುರುಷರು ಕೂಡಾ ತಮ್ಮ ನಿಜ ಸಂವೇದನೆಗಳನ್ನು ಗುರುತಿಸಲಾಗದ ಸ್ಥಿತಿಯನ್ನು ತಲುಪಿದ್ದಾರೆ. ನಮ್ಮ ಬದುಕು ನಮ್ಮದಾಗಿ ಉಳಿದಿಲ್ಲ. ನಮ್ಮ ದೇಹ, ನಮ್ಮ ಬುದ್ಧಿ, ನಮ್ಮ ಮನಸ್ಸುಗಳು ಒಂದಾಗಿ ಕಾಣುವ ನಮ್ಮ ಅಧಿಕೃತ ವ್ಯಕ್ತಿತ್ವವು ಪಿತೃಪ್ರಧಾನ ವ್ಯವಸ್ಥೆಯ ಆಕ್ರಮಣಕ್ಕೆ ಸಿಲುಕಿ ಮರೆಯಾಗಿಬಿಟ್ಟಿದೆ. ನಮ್ಮ ಅಧಿಕೃತ ವ್ಯಕ್ತಿತ್ವವನ್ನು ಇಲ್ಲವಾಗಿಸದ ಹೊರತು, ತನ್ನ ತಾಳಕ್ಕೆ ಹೆಜ್ಜೆ ಹಾಕುವ ಮನೋಭಾವವನ್ನು ನಮ್ಮಲ್ಲಿ ನೆಲೆಗೊಳಿಸಲಾಗದು ಎಂಬುದು ಪಿತೃಪ್ರಧಾನ ವ್ಯವಸ್ಥೆಗೆ ತಿಳಿದಿದೆ. ನಮ್ಮ ಸಂವೇದನೆಗಳು ವ್ಯವಸ್ಥೆಯ ನಿರ್ದೇಶನದಂತೆಯೇ ಸ್ಪಂದಿಸಬೇಕು ಎಂದರೆ, ನಮ್ಮ ಅಧಿಕೃತ ವ್ಯಕ್ತಿತ್ವವನ್ನು ಅನಧಿಕೃತಗೊಳಿಸಬೇಕು. ಈ ಬದಲಾವಣೆಯನ್ನು ನಾವು ಸುಲಭವಾಗಿ ಗುರುತಿಸಲಾರೆವು. ಏಕೆಂದರೆ ಈಗಾಗಲೇ ನಮ್ಮ ಪ್ರಜ್ಞಾವಲಯವು ವಿಸ್ಮೃತಿಗೆ ಒಳಗಾಗಿದೆ. ಈಗಾಗಲೇ ನಮ್ಮ ಮೇಲೆ ಹೇರಲಾದ ಸ್ಥಿರಮಾದರಿ ಪಾತ್ರಗಳಿಗೆ ಅನುಗುಣವಾಗಿ, ನಮ್ಮ ಎಲ್ಲ ಸಂವೇದನೆಗಳೂ ಸ್ಪಂದಿಸುವುದೂ ಸಹಜವೇ ಎನಿಸಿಬಿಟ್ಟಿದೆ.

ಈ ಪರಿಸ್ಥಿತಿಯಲ್ಲಿ ಸ್ತ್ರೀ ಸಂವೇದನೆ ಎಂಬುದನ್ನು ಗುರುತಿಸುವ ದಾರಿಯಾದರೂ ಇದೆಯೇ, ಅದೂ ನಮಗೆ ಗೊತ್ತಿಲ್ಲ. ಇದನ್ನು ಶೋಧಿಸಿಕೊಳ್ಳುವ ಬಿಂದುವಿನಿಂದಲೇ ನಾವೀಗ ನಮ್ಮ ನಿಜ ಸಂವೇದನೆಗಳನ್ನು ಗುರುತಿಸುವ ಹಾದಿಗಳನ್ನು ಕಂಡುಕೊಳ್ಳಬೇಕಿದೆ. ಈ ಲೋಕವನ್ನು 'ನಮ್ಮದೇ ಕಣ್ಣುಗಳಿಂದ' ನೋಡುವುದನ್ನು, ಅನುಭವಿಸುವುದನ್ನು ನಾವು ಹೊಸದಾಗಿಯೇ ಕಲಿಯಬೇಕಿದೆ. ಈ ನಿಟ್ಟಿನಲ್ಲಿ ನಮಗೆ ನೆರವಾಗಬಲ್ಲ ಒಂದು ಉಪಯುಕ್ತ ಹಾದಿಯನ್ನು ಸ್ತ್ರೀವಾದವು ತೋರಿಸುತ್ತದೆ. ಈ ಲೋಕವನ್ನು ನಮ್ಮದೇ ಕಣ್ಣುಗಳಿಂದ ನೋಡುವುದನ್ನು ಕಲಿಯಲು, ಸದ್ಯದ ವರ್ತಮಾನದಲ್ಲಿ ನಾವು ನಿಂತಿರುವ ಸಾಮಾಜಿಕ ಪರಿಸ್ಥಿತಿಯನ್ನು ಪ್ರಜ್ಞಾಪೂರ್ವಕವಾಗಿ ಅವಲೋಕಿಸಬೇಕು. ಇದನ್ನು ಸ್ತ್ರೀವಾದವು 'ನಿಂತ ನಿಲುವಿನ ನೋಟ' (Standpoint View) ಎಂಬ ಪರಿಕಲ್ಪನೆಯ ಮೂಲಕ ವಿವರಿಸುತ್ತದೆ. ನಮ್ಮ ವರ್ತಮಾನದ ಪರಿಸ್ಥಿತಿಯು ನಮಗೆ ಒದಗಿಸುತ್ತಿರುವ ಅನುಭವಗಳನ್ನೇ ಆಧಾರವಾಗಿಸಿಕೊಂಡು, ನಮ್ಮ ಮುಂದಿನ ದಾರಿಗಳ ಸ್ವರೂಪವನ್ನು ಗ್ರಹಿಸುವ ಪ್ರಯತ್ನವನ್ನು

ಮಾಡಬಹುದು ಎಂಬ ಸೂಚನೆಯನ್ನು ಈ ಪರಿಕಲ್ಪನೆಯು ಒದಗಿಸುತ್ತದೆ. ವಿಸ್ಮೃತಿಗೆ ಸರಿದುಹೋಗಿರುವ ಪ್ರಜ್ಞೆಯನ್ನು ಜಾಗ್ರತಗೊಳಿಸುವ ಈ ಮಾತನ್ನು ಸರಿಯಾಗಿ ಅರ್ಥ ಮಾಡಿಕೊಳ್ಳಬೇಕು. ಪಿತೃಪ್ರಧಾನ ವ್ಯವಸ್ಥೆಯು ತನ್ನ ಕುತಂತ್ರಗಳನ್ನು ಬಳಸಿ ನಮ್ಮ ದೇಹ, ಬುದ್ಧಿ, ಹಾಗೂ ಮನಸ್ಸುಗಳನ್ನು ನಿಯಂತ್ರಿಸುವುದರಲ್ಲಿ ಯಶಸ್ಸನ್ನು ಸಾಧಿಸಿರಬಹುದು. ಆದರೆ ನಮ್ಮ ಪ್ರಜ್ಞೆಯ ಆಳವನ್ನು ಆಕ್ರಮಿಸಿಕೊಳ್ಳುವುದು ಅದಕ್ಕೆ ಸಾಧ್ಯವಾಗಿಲ್ಲ. ನಮ್ಮ ಪ್ರಜ್ಞೆಯು ಸಕ್ರಿಯಗೊಳ್ಳಲು ಅವಕಾಶಗಳಿಲ್ಲದೆ ವಿಸ್ಮೃತಿಗೆ ಸರಿದಿದೆ ಅಷ್ಟೇ. ಸ್ತ್ರೀವಾದೀ ಅಧ್ಯಯನಗಳು ಈ ಸಂಗತಿಯನ್ನು ಶೋಧಿಸಿ ಸ್ಪಷ್ಟಪಡಿಸಿವೆ; ಮತ್ತು ಈ ವಿಸ್ಮೃತಿಯಿಂದ ಹೊರಗೆ ಬರಲು ಅಗತ್ಯವಾದ ಒಂದು ನೀಲನಕ್ಷೆಯನ್ನು ಕೂಡಾ ರೂಪಿಸಿದೆ. ಸ್ತ್ರೀ ಸಂವೇದನೆ ಎಂಬ ವಿಷಯವನ್ನು ಸ್ಪಷ್ಟವಾಗಿ ವಿವರಿಸಿಕೊಳ್ಳಲು, ಈ ನೀಲನಕ್ಷೆಯನ್ನು ಕುರಿತು ಸ್ಥೂಲವಾಗಿಯಾದರೂ ಅರಿಯುವುದು ಒಳ್ಳೆಯದು.

ನಾನು ಯಾರು ಎಂಬ ಮೂಲಪ್ರಜ್ಞೆಯನ್ನೇ ಕಳೆದುಕೊಂಡಿರುವ ಪರಿಸ್ಥಿತಿಯಲ್ಲಿ, ಯಾವ ಸಂವೇದನೆಯನ್ನು ಇದು ನನ್ನದು ಎಂದು ಗುರುತಿಸಿಕೊಳ್ಳುವುದು? ಈವರೆಗೂ ನನಗೆ ದೊರಕಿರುವ ಜೀವನಾನುಭವಗಳು, ಆ ಮೂಲಕವೇ ರೂಪುಗೊಂಡಿರುವ ನನ್ನ ಲೋಕಗ್ರಹಿಕೆಯು ನನ್ನದಲ್ಲವೇ ಅಲ್ಲ ಎಂಬ ಕಟುಸತ್ಯದ ಅರಿವು ಆಗಬೇಕಿದೆ. ಈ ಅರಿವು ಬರಲು, ನನ್ನ ಪ್ರಜ್ಞೆಗೆ ಆವರಿಸಿರುವ ವಿಸ್ಮೃತಿಯ ತೆರೆಯು ಸರಿಯಬೇಕಿದೆ. ಮಾನವರಲ್ಲಿ ಅಪರೂಪದ ಹಲಕೆಲವರಿಗೆ, ಅದು ಹೇಗೋ ಅಂತರಾಳದ ಪ್ರಜ್ಞೆಯು ಎಚ್ಚರಗೊಳ್ಳುವುದಿದೆ. ಅಂಥವರಲ್ಲಿ ಕೆಲವರು ತಮ್ಮ ಸಹಮಾನವರೂ ಕೂಡಾ ಜಾಗ್ರತರಾಗಲಿ ಎಂದು ಪ್ರಯತ್ನಿಸುತ್ತಾರೆ ಎಂಬುದನ್ನು ನಮ್ಮ ಚರಿತ್ರೆಯು ಹೇಳುತ್ತದೆ. ಸ್ತ್ರೀವಾದೀ ಚರಿತ್ರೆಯೂ ಹೀಗೆ ಜಾಗ್ರತರಾದ ಮಹಿಳೆಯರಿಂದಲೇ ಮೊದಲಾದದ್ದು. ಅವರು ನಡೆಸಿದ ಚಿಂತನೆ ಮತ್ತು ಹೋರಾಟಗಳ ಮುಂದುವರಿಕೆಯಾಗಿ, ಜನಸಾಮಾನ್ಯ ಮಹಿಳೆಯರೂ ಸಬಲರಾಗಲಿ ಎಂಬ ಪ್ರಯೋಗಗಳನ್ನು ಅವರು ಮಾಡಿದರು. ಅಂಥಾ ಹಲವಾರು ಅರ್ಥಪೂರ್ಣ ಪ್ರಯೋಗಗಳಲ್ಲಿ, ಅವರು ರೂಪಿಸಿ ನಡೆಸಿದ 'ಮಹಿಳಾ ಜಾಗೃತಿ ಶಿಬಿರಗಳು' ತುಂಬಾ ಮಹತ್ವವಾದುದು. ಇದರ ಮುಖ್ಯ ಕಾರ್ಯಸೂಚಿಯಾಗಿ, ಮಹಿಳೆಯರ ಒಂದು ಗುಂಪನ್ನು ಒಂದೆಡೆ ಸೇರಿಸಿ, ಅನೌಪಚಾರಿಕವೋ ಎಂಬಂತೆ ಕಾಣುವ ಶಿಬಿರವನ್ನು ಯೋಜಿಸಲಾಗುತ್ತದೆ. ಆ ಮಹಿಳೆಯರನ್ನು ಒಂದು ನಿರ್ದಿಷ್ಟ ವಿಷಯದ ಕುರಿತು ಮಾತುಕತೆಗೆ ತೊಡಗುವಂತೆ ಪ್ರೇರೇಪಿಸಲಾಗುತ್ತದೆ. ತಮ್ಮ ಮಾತುಕತೆಗೆ ಒಂದು ಚೌಕಟ್ಟನ್ನು ಹಾಕಲಾಗಿದೆ ಎಂಬ ನೇರ ಅರಿವು ಅವರಿಗೆ ಆಗುವುದಿಲ್ಲ. ಇದರಿಂದಾಗಿ ಅವರು ಮುಕ್ತವಾಗಿ, ದಿನನಿತ್ಯವೂ ಹರಟುವ ರೀತಿಯಲ್ಲೇ ತಮ್ಮ ಅನುಭವಗಳನ್ನು ಪರಸ್ಪರ ಹಂಚಿಕೊಳ್ಳುತ್ತಾರೆ. ಆದರೆ, ಈ ಪ್ರಕ್ರಿಯೆಯಲ್ಲಿ ಈ ಮಹಿಳೆಯರು ತಮ್ಮ ವಿಸ್ಮೃತಿಯಿಂದ ಹೊರಗೆ ಬರುವ ವಿಧಾನಗಳನ್ನು ಶಿಬಿರದ ಆಯೋಜಕರು ಅಳವಡಿಸಿರುತ್ತಾರೆ. ನಿಗದಿತವಾದ ವಿಷಯದ ಸುತ್ತಲೇ ಮಾತುಕತೆಗಳು ಸಾಗುವಂತೆ ಉಸ್ತುವಾರಿಯನ್ನು ಮಾಡುತ್ತಾರೆ. ಆದರೆ ಅಲ್ಲಿನ ಮಹಿಳೆಯರಿಗೆ ತಮ್ಮನ್ನು ಯಾರೋ ಗಮನಿಸುತ್ತಿದ್ದಾರೆ ಎಂಬ ಭಾವನೆಯು

ಬಾರದಂತೆ ಎಚ್ಚರವಹಿಸುತ್ತಾರೆ. ಹಾಗಾಗಿ ಆ ಮಹಿಳೆಯರಿಗೆ ತಮ್ಮ ಈ ಮಾತುಕತೆಗಳನ್ನು, ಬೇರೆ ಯಾರೋ ಕೇಳಿಸಿಕೊಳ್ಳುತ್ತಿದ್ದಾರೆ ಎಂಬ ಆತಂಕವಾಗಲೀ, ಮೂಗು ತೂರಿಸುತ್ತಿದ್ದಾರೆ ಎಂಬ ಭಾವನೆಯಾಗಲೀ ಬರುವುದಿಲ್ಲ. ಆದರೆ ಅವರ ಯಾವ ವಿಶೇಷ ಪ್ರಯತ್ನವೂ ಇಲ್ಲದೆಯೇ, ಈ ಒಟ್ಟು ಪ್ರಕ್ರಿಯೆಯಲ್ಲಿ ಅಲ್ಲಿ ಮಹಿಳೆಯರಿಗೆ ಎರಡು ಮುಖ್ಯ ಸಂಗತಿಗಳು ಅರಿವಿಗೆ ಬರುತ್ತವೆ. ಈವರೆಗೂ ಎಲ್ಲ ಮಹಿಳೆಯರೂ ತಮತಮಗೆ ಒದಗಿದ ಸಂಕಷ್ಟಗಳನ್ನು ವೈಯಕ್ತಿಕವಾದವು ಎಂದು ಭಾವಿಸಿದ್ದರಾಗಿ ಒಂಟಿತನವನ್ನು ಅನುಭವಿಸುತ್ತಿದ್ದರು. ಅದಕ್ಕಿಂತಲೂ ಮುಖ್ಯವಾಗಿ ಈ ಸಂಕಷ್ಟದ ಪರಿಸ್ಥಿತಿಗೆ ತಮ್ಮ ನಡವಳಿಕೆಗಳೇ ಕಾರಣ ಎಂದು ಆರೋಪಿಸಿಕೊಂಡು ಅಪರಾಧೀ ಭಾವಕ್ಕೂ ಪಕ್ಕಾಗುತ್ತಿದ್ದರು. ಈ ಶಿಬಿರದಲ್ಲಿ ಎಲ್ಲ ಮಹಿಳೆಯರೂ ಇದೇ ಬಗೆಯ ಸಂಕಷ್ಟಗಳಿಗೆ ಸಮಾನವಾಗಿ ಬಲಿಯಾಗುತ್ತಾರೆ ಎಂಬ ಅರಿವು ಬರುತ್ತದೆ. ತನ್ನ ಪಾತ್ರವೇ ಇಲ್ಲದ ಯಾವ ಕಾರಣಕ್ಕೆ ಶಿಕ್ಷೆಯಾಗುತ್ತಿದೆ ಎಂಬ ಪ್ರಶ್ನೆಯೂ ಮೂಡುತ್ತದೆ. ಈ ಬಿಂದುವೇ ಆಕೆಯ ಪ್ರಜ್ಞೆಯು ಎಚ್ಚರಗೊಳ್ಳುತ್ತಿದೆ ಎಂಬುದರ ಸ್ಪಷ್ಟ ಸೂಚನೆಯಾಗಿದೆ. ಇದರೊಂದಿಗೆ ಆಕೆಯು ಪ್ರತ್ಯೇಕತೆಯ, ಒಂಟಿತನದ ಭಾರದಿಂದ ಕ್ರಮೇಣವಾಗಿ ಹೊರಬರುತ್ತಾಳೆ. ಈ ಹೊಸ ಬೆಳಕಿನಲ್ಲಿ ಆಕೆಯ ಲೋಕಗ್ರಹಿಕೆಯ ಸ್ವರೂಪವೇ ಬದಲಾಗುತ್ತದೆ. ಇದು ಸ್ವ-ಅರಿವು ಮೂಡುವ ಕಾರಣವೂ ಆಗುತ್ತದೆ. ಏಕಾಂಗಿಯಾಗಿ ಉಳಿದಿದ್ದ ಆಕೆಯ ಪ್ರಜ್ಞೆಯು ಈಗ ಸಮುದಾಯ ಪ್ರಜ್ಞೆಯ ಭಾಗವಾಗುತ್ತದೆ.

ಸ್ವ-ಅರಿವು ಮೂಡಿದ ವ್ಯಕ್ತಿಗೆ ತನ್ನ ದೇಹ, ತನ್ನ ಬುದ್ಧಿ, ತನ್ನ ಮನಸ್ಸುಗಳು ತನ್ನದೆನಿಸಿ ಉಳಿದಿಲ್ಲ ಎಂದು ತಿಳಿಯಲು ಹೆಚ್ಚಿನ ಸಮಯವೇನೂ ಬೇಕಾಗುವುದಿಲ್ಲ. ತನ್ನ ನಿಜವಾದ ಇರವನ್ನು ಗುರುತಿಸಲು ಕಷ್ಟವಾಗುವುದಿಲ್ಲ. ತನ್ನ ಅಸ್ತಿತ್ವದ ಈ ಶೋಧವು ಸ್ವ-ಪ್ರೀತಿಯನ್ನೂ ಮೂಡಿಸುತ್ತದೆ. ಹೆಣ್ಣು ತನ್ನ ಸಂವೇದನೆಯ ನಿಜ ರೂಪವನ್ನು ಗ್ರಹಿಸಲು ಈ ಸ್ವ-ಅರಿವು ಹಾಗೂ ಸ್ವ-ಪ್ರೀತಿಯನ್ನು ಕಂಡುಕೊಳ್ಳಲೇಬೇಕು. ಹಾಗೆ ನೋಡಿದರೆ, ಪಿತೃಪ್ರಧಾನತೆಯ ಲೈಂಗಿಕತಾವಾದೀ ಸಾಮಾಜೀಕರಣದ ಕ್ರಮವೂ ಕೂಡಾ ಸ್ವ-ಪ್ರೀತಿಯ ಬಗೆಗೆ ಮಾತಾಡುತ್ತದೆ. ಆದರೆ, ಈ ತರಬೇತಿಯ ಪಾಠವನ್ನು ಕಲಿತವರು ಎಂದಿಗೂ ಸ್ವ-ಪ್ರೀತಿಯನ್ನು ಗಳಿಸಲಾರರು. ಬದಲಿಗೆ, ಸ್ವ-ಮೋಹವನ್ನು ಕಲಿಯುತ್ತಾರೆ. ಯಾರನ್ನೋ ಮೆಚ್ಚಿಸಲು, ಅವರ ನೋಟದಲ್ಲಿ ನಾನು ಹೇಗೆ ಕಾಣುತ್ತೇನೆ ಎಂಬುದನ್ನೇ ಧ್ಯಾನಿಸುತ್ತಾ ಅಣಿಯಾಗುವುದನ್ನೇ ಸ್ವ-ಮೋಹ ಎನ್ನಬಹುದು. ಹೆಣ್ಣಾದವಳು ಗಂಡಿಗೆ ಆಕರ್ಷಕವಾಗಿ ಕಾಣದಿದ್ದರೆ, ಅವಳಿಗೆ ಪ್ರೀತಿಯು ದೊರೆಯಲಾರದು ಎಂಬ ಮಾತಿರಲಿ, ಮೂಲಭೂತವಾದ ಲೈಂಗಿಕ ಅಗತ್ಯಗಳೂ ಪೂರೈಕೆಯಾಗಲಾರವು ಎಂಬ ಬೆದರಿಕೆಯನ್ನು ಹಾಕಲಾಗಿದೆ. ಈಗ ಕನ್ನಡಿಯ ಮುಂದೆ ನಿಂತು ತನ್ನನ್ನೇ ಧ್ಯಾನಿಸಿ ನೋಡುತ್ತಿರುವಂತೆ ಕಾಣುವ ಹೆಣ್ಣು, ವಾಸ್ತವದಲ್ಲಿ ತನ್ನ ಹಿಂಬದಿಯಲ್ಲಿ ಒಬ್ಬ ಗಂಡಿನ ನೋಟವನ್ನು ಕಲ್ಪಿಸಿಕೊಂಡು, ಆ ನೋಟಕ್ಕೆ ತಾನು ಮೆಚ್ಚುಗೆಯಾಗುವ ಕನಸುಗಳಲ್ಲಿ ಮುಳುಗಿರುತ್ತಾಳೆ. ಅವನ ಆಸೆಗಳನ್ನು ಊಹಿಸುತ್ತಾ ತನ್ನ ಅಲಂಕಾರ, ಹಾವಭಾವಗಳನ್ನು ತಿದ್ದಿಕೊಳ್ಳಲು ಹವಣಿಸುತ್ತಾಳೆ. ಗಂಡಿನ ಪಾಲಿನ ಸ್ವ-ಮೋಹವೂ ಇದೇ ರೀತಿಯಲ್ಲಿ ವರ್ತಿಸುತ್ತದೆ. ವ್ಯತ್ಯಾಸವೆಂದರೆ, ಅವನು

ಪುರುಷತ್ವದ ಚಹರೆಗಳನ್ನು ಅಭಿವ್ಯಕ್ತಿಸುವ ಹಾವಭಾವಗಳನ್ನು ರೂಢಿಸಿಕೊಳ್ಳುವಲ್ಲಿ ಮಗ್ನನಾಗುತ್ತಾನೆ. ಅವನಿಗೆ ಸಿಕ್ಸ್ ಪ್ಯಾಕ್ ತೋರುವ, ಹ್ಯಾಂಡ್‌ಸಂ ಎನಿಸುವ ಒತ್ತಡವಾದರೆ, ಇವಳಿಗೆ ಬಳುಕುವ ಬಳ್ಳಿಯಾಗಿ, ಶೃಂಗಾರದ ಗೊಂಬೆಯಾಗಿ ನಿಲ್ಲಬೇಕಾದ ಒತ್ತಡಗಳು ಇರುತ್ತವೆ.

ಎಷ್ಟೋ ವೇಳೆ ತರುಣಿಯರು, ಮಾತ್ರವಲ್ಲ ತರುಣರು ಕೂಡಾ ಈ ಸ್ವ-ಮೋಹವನ್ನೇ ಸ್ವ-ಪ್ರೀತಿ ಎಂದು ಭ್ರಮಿಸುತ್ತಾರೆ. ನನ್ನ ಇಷ್ಟದಂತೆ ಸ್ವತಂತ್ರವಾಗಿ ಬದುಕುವುದು ಎಂದರೆ, ಯಾರಿಗೂ ಯಾವುದಕ್ಕೂ ಕೇರ್ ಮಾಡದೆ ಇರುವುದು ಎಂದಲ್ಲ. ಬದಲಿಗೆ, ನನ್ನ ಅಸ್ತಿತ್ವದ ಮೇಲೆ ನಡೆಯುತ್ತಿರುವ ಆಕ್ರಮಣಗಳ ಪರಿಯನ್ನು ಸರಿಯಾಗಿ ಗುರುತಿಸಿ ಸೂಕ್ತ ಬಗೆಯ ಪ್ರತಿರೋಧವನ್ನು ಒಡ್ಡುವುದು ಎಂಬ ಅರ್ಥ. ಈ ಸ್ವ-ಪ್ರೀತಿಯು ಮಾತ್ರವೇ ನನ್ನನ್ನು ಸ್ವತಂತ್ರವಾಗಿ ಉಳಿಸುತ್ತದೆ. ಮಾತ್ರವಲ್ಲ, ನಾನು ಬದುಕುತ್ತಿರುವ ಇಡೀ ಸಮುದಾಯವೇ ಮುಕ್ತವಾಗಿ ಉಳಿಯಬೇಕು ಎಂಬುದನ್ನು ಸಮರ್ಥಿಸುತ್ತದೆ, ಮತ್ತು ಅದಕ್ಕೆ ಒತ್ತಾಸೆಯಾಗಿ ನಿಲ್ಲುತ್ತದೆ. ನನ್ನ ದೇಹ, ನನ್ನ ಬುದ್ಧಿ, ಹಾಗೂ ನನ್ನ ಮನಸ್ಸುಗಳು ಒಗ್ಗೂಡಿಯೇ ಈ ಸಕಾರಾತ್ಮಕ ಸಂವೇದನೆಯನ್ನು ಹೊಂದಲು ಅಣಿಯಾಗಬೇಕು. ಅಂದರೆ, ನನ್ನ ಸಂವೇದನೆ ಎಂಬುದು ಗಂಡೋ ಹೆಣ್ಣೋ ಎಂಬ ನನ್ನ ಹುಟ್ಟಿನಿಂದಲೇ ಒದಗಿಬರುವ ಮಾತಲ್ಲ. ನಾನು ಕಂಡುಕೊಳ್ಳುವ ಸ್ವ-ಅರಿವು ಹಾಗೂ ಸ್ವ-ಪ್ರೀತಿಗಳ ಬೆಳಕಿನಲ್ಲಿ ಸೂಕ್ಷ್ಮವಾದ ನನ್ನ ನಿಜದ ಸಂವೇದನೆಗಳು ಚುರುಕುಗೊಳ್ಳುತ್ತವೆ. ನನ್ನ ಲೋಕಗ್ರಹಿಕೆಯನ್ನು ನಿಚ್ಚಳವಾಗಿಸುತ್ತವೆ. ಇವು ನನ್ನ ಬದುಕಿಗೆ ಮಾತ್ರವೇ ಅಲ್ಲ, ನನ್ನ ಸಮುದಾಯದ ಬದುಕಿಗೂ ಒಳಿತನ್ನೇ ಬಯಸುವ ಸಂವೇದನೆಯೇ ಆಗಿರುತ್ತದೆ. ಇದರಿಂದ ಮಾತ್ರವೇ, ಹೆಣ್ಣು ಗಂಡುಗಳು ಮಾತ್ರವಲ್ಲ, ವೈವಿಧ್ಯಮಯ ಲೈಂಗಿಕತಾ ಆದ್ಯತೆಯವರೂ ಒಳಗೊಂಡು ಎಲ್ಲ ಮನುಷ್ಯರೂ ಬದುಕಿನ ಆಯಾ ಸಂದರ್ಭ ಹಾಗೂ ಅಗತ್ಯಗಳಿಗೆ ತಕ್ಕಂತೆ ಆರೈಕೆ, ಪೋಷಣೆ, ತ್ಯಾಗ, ಸಹನೆಗಳನ್ನೋ, ಅಥವಾ ಧೈರ್ಯ, ಸಾಹಸ, ವಿವೇಚನೆಯ ನಿರ್ಧಾರ ಎಂಬುವನ್ನು ಸಮಾನವಾಗಿಯೇ ಅಭಿವ್ಯಕ್ತಿಸುತ್ತಾರೆ. ಹೆಣ್ಣುಗುಣ/ಗಂಡುಗುಣ, ಸ್ತ್ರೀ ಸಂವೇದನೆ/ಪುರುಷ ಸಂವೇದನೆ ಎಂಬ ಬೈನರಿ ಚಿಂತನೆಗಳ ಅಗತ್ಯವೇ ಬರುವುದಿಲ್ಲ.

ಸ್ತ್ರೀ ಸಂವೇದನೆ ಎಂಬುದನ್ನು ಸಾಹಿತ್ಯ ಹಾಗೂ ಕಲಾವಲಯಗಳು ಹೇಗೆ ಗ್ರಹಿಸುತ್ತವೆ, ಹೇಗೆ ಅಭಿವ್ಯಕ್ತಿಸುತ್ತವೆ ಎಂಬ ಪ್ರಶ್ನೆಯು ಆಸಕ್ತಿದಾಯಕವಾದುದು. ಇಲ್ಲಿ ನೆರೆದಿರುವ ನಾವೆಲ್ಲರೂ ಸಾಹಿತ್ಯ ಲೋಕದ ಬಗ್ಗೆ ಹೆಚ್ಚಿನ ಆಸಕ್ತಿಯನ್ನು ಹೊಂದಿರುವವರು. ಈ ಕಾರಣದಿಂದ, ಸ್ತ್ರೀ ಸಂವೇದನೆಯನ್ನು ಕುರಿತು, ಸಾಹಿತ್ಯ ಲೋಕದ ಗ್ರಹಿಕೆ ಯಾವ ಬಗೆಯದಾಗಿದೆ ಎಂಬ ಪ್ರಶ್ನೆಯೊಂದಿಗೆ, ಕನ್ನಡ ಸಾಹಿತ್ಯ ಕೃತಿಗಳ ಒಂದು ಸಣ್ಣ ಸಮೀಕ್ಷೆಯನ್ನು ಮಂಡಿಸಲು ಪ್ರಯತ್ನಿಸುತ್ತೇನೆ. ಬರಹಗಾರರು, ವಿಮರ್ಶಕರು, ಹಾಗೂ ಓದುಗರು ಸ್ತ್ರೀ ಸಂವೇದನೆ ಎಂಬುದನ್ನು ಹೇಗೆ ಗ್ರಹಿಸುತ್ತಾರೆ ಎಂಬುದನ್ನು ವಿವರಿಸಿಕೊಳ್ಳುವುದು ಒಂದು ಭಾಗವಾದರೆ, ಸಾಹಿತ್ಯ ವಲಯವು ಕಟ್ಟಿರುವ ಈ ಕಥನಗಳಿಗೆ

ಸ್ತ್ರೀವಾದೀ ತಿಳಿವಳಿಕೆಯು ಹೇಗೆ ಪ್ರತಿಕ್ರಿಯಿಸಿದೆ ಎಂಬುದನ್ನು ಗಮನಿಸುವುದು ಇನ್ನೊಂದು ಭಾಗ. ಇಲ್ಲಿ ವ್ಯವಸ್ಥೆಯ ಒಂದು ಮುಖ್ಯ ಸಂಸ್ಥೆಯೇ ಆಗಿ ನೆಲೆಗೊಂಡಿರುವ ಸಾಹಿತ್ಯ ವಲಯವನ್ನು ಸ್ತ್ರೀವಾದೀ ಚಿಂತನೆಯು ಎದುರುಗೊಳ್ಳುವ ಕ್ರಮವು ಕಾಣುತ್ತದೆ. ನಮ್ಮದು ಎಂದು ನಾವು ನಂಬುತ್ತಾ ಬಂದಿರುವ ನಮ್ಮ ಸಂವೇದನೆಗಳು ನಮ್ಮವಲ್ಲವೇ ಅಲ್ಲ ಎಂಬ ಆಘಾತಕಾರೀ ಸತ್ಯವನ್ನು ನಾವು ಎದುರುಗೊಳ್ಳುತ್ತೇವೆ. ನಮ್ಮ ನಿಜ ಸಂವೇದನೆಗಳನ್ನು ಗುರುತಿಸಿಕೊಳ್ಳುವ ಒಂದು ಪ್ರಾಯೋಗಿಕ ಅನುಭವವನ್ನೂ ಈ ಸಮೀಕ್ಷೆಯು ಒದಗಿಸುತ್ತದೆ ಎಂಬ ನಿರೀಕ್ಷೆಯೂ ಇದೆ.

ಸಾಹಿತ್ಯ ಅಭಿವ್ಯಕ್ತಿಗಳಲ್ಲಿ ಹೆಣ್ಣಿನ ಪಾತ್ರಗಳು ಬೇಕಾದಷ್ಟು ಕಾಣುತ್ತವೆ ಎಂಬುದು ಹೌದು. ಆದರೆ ಮಹಿಳೆಯನ್ನು ಕೇಂದ್ರವಾಗಿಸಿಕೊಂಡ ಕಥನಗಳು ಇಲ್ಲಿ ಇಲ್ಲವೇ ಇಲ್ಲ. ಪುರುಷ ಕೇಂದ್ರಿತವೇ ಆಗಿರುವ ಈ ಕಥನಗಳಲ್ಲಿ ಸ್ತ್ರೀ ಪಾತ್ರವು ಒಂದು ಅನುಬಂಧವಾಗಿ, ಪುರುಷ ಪಾತ್ರಕ್ಕೆ ಪೋಷಕ ಪಾತ್ರವಾಗಿ, ಅವನ ಸುತ್ತಲೂ ಸುತ್ತುತ್ತವೆ. ಹೆಣ್ಣು ಪಾತ್ರಗಳು ಹೆಣ್ಣಿನ ಅರಿವು, ಪ್ರಜ್ಞೆ, ಜಾಗೃತಿ ಎಂಬ ಯಾವ ಸಂಗತಿಗಳನ್ನೂ ಹೇಳುವುದಿಲ್ಲ. ಹಾಗಾಗಿ ಸಾಹಿತ್ಯ ವಲಯವು ಪುರುಷ ಕೇಂದ್ರಿತವೇ ಆದ ಚಿಂತನೆಗಳನ್ನೇ ಒಪ್ಪಿಕೊಂಡಿರುವುದು ಎನ್ನಬಹುದು. ಹೆಣ್ಣು ಮನೋಭಾವನೆಗಳನ್ನು ಗಂಡು ಮನೋಭಾವನೆಗಳೊಂದಿಗೆ ಇಟ್ಟು ಗುರುತಿಸಲಾಗುತ್ತದೆ. ಹಾಗಾಗಿಯೇ, ಪಿತೃಪ್ರಧಾನತೆಯ ಆಶಯಗಳೇ ಆದ ಅಧೀನತೆ–ಹೊಂದಾಣಿಕೆ–ವಿರೋಧ ಎಂಬ ಮಾದರಿಯೇ ಇಲ್ಲಿನ ಹೆಣ್ಣು ಪಾತ್ರಗಳಲ್ಲಿ ಕಾಣಿಸುವುದು. ಅಧೀನತೆಯ ಸಂಕಷ್ಟವನ್ನು ನಿಭಾಯಿಸಲು, ಹೊಂದಾಣಿಕೆಯ ಪ್ರಯತ್ನ, ಹೊಂದಾಣಿಕೆಗೂ ಬಗ್ಗದ ಸಂಕಷ್ಟ ಬಂದಾಗ ವಿರೋಧಗಳನ್ನು ಒಡ್ಡುವ ಪ್ರಯತ್ನಗಳನ್ನು ಮಾಡುವುದು ಎಂಬ ಮಾದರಿ.

ಹೆಣ್ಣು ಗೌರಿಯಾದಾಗ ಅಧೀನತೆ, ಹೊಂದಾಣಿಕೆಗಳಿಗೆ ಶರಣಾಗುತ್ತಾಳೆ. ಅದೇ ಕಾಳಿಯಾದಾಗ ಆಕ್ರಮಣಶೀಲೆಯಾಗುತ್ತಾಳೆ. ಪಿತೃಪ್ರಧಾನತೆಯ ಚಿಂತನೆಯಲ್ಲಿ ಗೌರಿಯು ವಿಶ್ವಶಾಂತಿಯ ಸಂಕೇತವಾದರೆ, ಕಾಳಿಯು ವಿನಾಶದ ಪ್ರತೀಕವಾಗುತ್ತಾಳೆ. ಅಂದರೆ ಅರ್ಥ, ವಿಶ್ವ ಎಂದರೆ ಗಂಡು, ಮತ್ತು ಅವನಿಗೆ ಹಿತವಾಗುವಂತೆ ಇದ್ದರೆ ಗೌರಿ, ಅವನಿಗೆ ಎದುರು ಬಿದ್ದರೆ ಕಾಳಿ ಎನ್ನಿಸುತ್ತಾಳೆ. ಸಾಹಿತ್ಯ ಕಥನಗಳಲ್ಲಿ ಹೆಣ್ಣಿನ ವಿರೋಧ, ಪ್ರತಿರೋಧ, ಪ್ರತಿಭಟನೆ ಎಂಬುದನ್ನು ತೋರುವ ಬೇಕಾದಷ್ಟು ಕೃತಿಗಳು ಇರುವಂತೆ ತೋರುತ್ತವಾದರೂ, ಅಲ್ಲೆಲ್ಲಾ ಕಾಣುವ ಹೆಣ್ಣಿನ ಯಾವುದೇ ಭಾವ ವರ್ತನೆಗಳನ್ನೂ ಪ್ರಜ್ಞಾಪೂರ್ವಕ ಪ್ರತಿಕ್ರಿಯೆಗಳು ಎನ್ನಲಾಗದು. ಏಕೆಂದರೆ, ಈ ಪ್ರಯತ್ನಗಳಲ್ಲಿ ಅವಳು ತನ್ನ ಬದುಕನ್ನು ಕಾಪಾಡಿಕೊಳ್ಳುವ, ಅಥವಾ ಮುಂದಿನ ಪರಿಣಾಮಗಳ ಬಗ್ಗೆ ಮುಂದಾಲೋಚನೆಯನ್ನು ಮಾಡುವ ಬಗೆಯ ಯಾವ ಲಕ್ಷಣಗಳೂ ಕಾಣುವುದಿಲ್ಲ. ಬದಲಿಗೆ ಅವಳು ತನ್ನ ಪ್ರಯತ್ನಗಳ ಕಾರಣವಾಗಿ, ಆತ್ಮಘಾತಕವೇ ಆದ ಹಾದಿಯಲ್ಲಿ ನಡೆದಿರುತ್ತಾಳೆ.

ಸಮಾಜವು ಹಾಕಿದ ನೈತಿಕ ಒತ್ತಾಯಗಳ ಗೆರೆಯನ್ನು ಕಾಳಿಯಾಗಿ ನಿಂತ ಹೆಣ್ಣು ದಾಟಿದಳಲ್ಲವೇ ಎನಿಸಬಹುದು. ಆದರೆ, ಅವಳ ಪ್ರತಿರೋಧವು ಮುಂದಾಲೋಚನೆಯನ್ನು

ಹೊಂದಿಲ್ಲ. ಅದು ಕೇವಲ ಜೀವಸಹಜವಾದ ಉಳಿವಿನ ಪ್ರಯತ್ನವಾಗಿ ಅವಳು ತೋರಿದ Instinctive ಪ್ರತಿಕ್ರಿಯೆ ಮಾತ್ರವೇ ಆಗಿರುತ್ತದೆ. ಈ ಪ್ರತಿಕ್ರಿಯೆಯು, ಯಾವುದೋ ಕುತಂತ್ರದಿಂದಾಗಿ ಬಂಧನಕ್ಕೆ ಒಳಗಾಗಿರುವ ಅವಳಿಗೆ ಅಗತ್ಯವಾದ ಬಿಡುಗಡೆ, ಸ್ವಾತಂತ್ರ್ಯಗಳನ್ನು ಒದಗಿಸುವುದಿಲ್ಲ. ತನ್ನನ್ನು ತಾನು ಸಂಭಾಳಿಸಿಕೊಳ್ಳುವ ಚೈತನ್ಯವನ್ನೂ ಅದು ಕೊಡುವುದಿಲ್ಲ. ಬದಲಿಗೆ, ಅವಳನ್ನು ಸುತ್ತುವರೆದು ಇನ್ನಷ್ಟು ಬಿಗಿಗೊಂಡು, ಅವಳನ್ನು ಶಿಕ್ಷಿಸುತ್ತವೆ. ಯಾವುದರ ವಿರುದ್ಧ ಸೆಟೆದು ನಿಂತಳೋ, ಆ ದಾಳಿಯು ಮಾತ್ರ ಇನ್ನಷ್ಟು ಕ್ರೌರ್ಯ, ಹಿಂಸೆ, ಹಾಗೂ ದೌರ್ಜನ್ಯಗಳನ್ನು ಆವಾಹಿಸಿಕೊಳ್ಳುತ್ತದೆ. ಒಟ್ಟಿನಲ್ಲಿ ಗೌರಿಯಾಗಲೀ, ಕಾಳಿಯಾಗಲೀ ಸುತ್ತಲಿನ ಸಾಮಾಜಿಕ ಪರಿಸ್ಥಿತಿಗಳಿಗೆ ತೋರುವ ಸೌಮ್ಯ ಅಥವಾ ಸಿಟ್ಟಿನ ಪ್ರತಿಕ್ರಿಯೆಗಳು ಬೆದರಿದ, ಆತಂಕದ ವೇದನೆಗಳು ಎನ್ನಬಹುದೇ ಹೊರತು, ಹಿಂದು ಮುಂದಿನ ವಾಸ್ತವಗಳನ್ನು ಪರಿಗಣಿಸಿದ, ಅರ್ಥ ಮಾಡಿಕೊಂಡ ಸಂವೇದನೆಗಳು ಎನಿಸುವುದಿಲ್ಲ. ಇನ್ನೂ ಹೇಳಬೇಕೆಂದರೆ, ಪಿತೃಪ್ರಧಾನ ಸಮಾಜದಲ್ಲಿ ಇರುವ ಕಾರಣದಿಂದಾಗಿ, ಪ್ರಾಣಿಸಹಜವಾದ ಪ್ರತಿಕ್ರಿಯೆಯನ್ನೂ ತೋರಲಾರದ ಅವಳು, ತನ್ನ ನಡೆ, ನುಡಿ, ವರ್ತನೆಗಳಿಂದ ಯಾರೇನು ತಿಳಿಯುವರೋ, ಯಾರು ಹೇಗೆ ಪ್ರತಿಕ್ರಿಯಿಸುವರೋ ಎಂಬ ಆತಂಕದಲ್ಲಿ ಬೀಳುತ್ತಾಳೆ. ಪಿತೃಪ್ರಧಾನ ಚಿಂತನೆಯು ಇದನ್ನೇ ಹೆಣ್ಣಿನ ಸಹಜ ಹುಟ್ಟುಗುಣ ಎಂದು ವ್ಯಾಖ್ಯಾನಿಸುತ್ತದೆ. ಹೆಣ್ಣಿನ ನಡೆ, ನುಡಿ, ವರ್ತನೆಗಳು ಅವಳ ಸ್ವಂತದ ಆಯ್ಕೆಯೇನೂ ಆಗಿರುವುದಿಲ್ಲ ಎಂಬುದನ್ನು ಸಾಬೀತು ಮಾಡುವುದು ಸುಲಭವೇನೂ ಅಲ್ಲ. ಸ್ವ-ಅರಿವು ಮೂಡಿದ ಹೊರತು, ಸ್ವತಃ ಅವಳಿಗೂ ತನ್ನ ಯಾವ ನಡವಳಿಕೆಗಳೂ ತನ್ನವಲ್ಲ ಎಂದು ತಿಳಿಯುವುದಿಲ್ಲ.

ಈ ಮಾತನ್ನು ಪರೀಕ್ಷಿಸಲು, ನಮ್ಮ ಕನ್ನಡ ಸಾಹಿತ್ಯ ಕೃತಿಗಳಲ್ಲಿ ಕಾಣಬರುವ ಕೆಲವು ಕಥಾ ಪ್ರಸಂಗಗಳನ್ನು ಗಮನಿಸಬಹುದು. ಉದಾಹರಣೆಗೆ, ವಿವಾಹ ಕೇಂದ್ರಿತ ಮಹಿಳಾ ಸಮಸ್ಯೆಗಳನ್ನು ಕೇಂದ್ರವಾಗಿಸಿಕೊಂಡ ಕೆಲವು ಕನ್ನಡ ಕಾದಂಬರಿಗಳನ್ನು ನೋಡೋಣ. ಸಾಧಾರಣವಾಗಿ, ಇಂಥಾ ಕಥಾವಸ್ತುವನ್ನು 'ಮಹಿಳಾ ಕೇಂದ್ರಿತ' ಎಂದು ಹೇಳುವುದಿದೆ.

ಚದುರಂಗರ 'ಉಯ್ಯಾಲೆ' ಕಾದಂಬರಿಯಲ್ಲಿ, ನಾಯಕಿಯ ಜೀವನ ಸಂದರ್ಭದಲ್ಲಿ ಉಂಟಾದ ಒಂದು ಸಂದಿಗ್ಧದಲ್ಲಿ ಆಕೆಯು ಅನುಭವಿಸುವ ಹೊಯ್ದಾಟಗಳನ್ನು ಬಹಳ ಸೂಕ್ಷ್ಮಗಳಲ್ಲಿ ಚಿತ್ರಿಸಲಾಗಿದೆ. ನಾಯಕಿಯು ತನಗಿಂತಲೂ ತುಂಬಾ ವಯಸ್ಸಾದವನನ್ನು ವಿವಾಹವಾಗಿದ್ದಾಳೆ. ಒಂದು ಮಗುವೂ ಆಗಿದೆ. ಇಂಥಾ ವೈವಾಹಿಕ ಸಂದರ್ಭದಲ್ಲಿಯೂ, ಅವಳು ಶಾಂತವಾಗಿಯೇ ಇರುವಂತೆ ಕಾಣುತ್ತಾಳೆ. ವಿವಾಹ, ಕುಟುಂಬ ಎಂಬ ಚೌಕಟ್ಟಿನ ನೈತಿಕ ನಿಯಮಗಳಿಗೆ ಬದ್ಧವಾಗಿಯೇ ಬದುಕು ನಡೆಸುತ್ತಿದ್ದಾಳೆ. ಹೀಗಿರುವಾಗ ಪತಿಯ ಆಪ್ತ ಬಂಧುವೇ ಆದ ಒಬ್ಬ ಯುವಕ ಕುಟುಂಬದ ಅತಿಥಿಯಾಗಿ ಬರುತ್ತಾನೆ. ಕ್ರಮೇಣವಾಗಿ ನಾಯಕಿಗೆ ಈ ಅತಿಥಿಯ ಬಗ್ಗೆ ಮಧುರ ಭಾವನೆಗಳು ಬೆಳೆಯುತ್ತವೆ. ನೈತಿಕ ಒತ್ತಾಯಗಳಿಗೆ ಸಿಲುಕಿದ್ದ ಕಾರಣಕ್ಕೆ ಮಾತ್ರವೇ ಈವರೆಗೂ ಅವಳು ತನ್ನ ವೈವಾಹಿಕ ಪರಿಸ್ಥಿತಿಯನ್ನು

ಶಾಂತವಾಗಿ ಎಂಬಂತೆ ಎದುರುಗೊಂಡಿದ್ದಳೋ ಏನೋ. ಮನೆಗೆ ಬಂದಿರುವ ಯುವಕನು ಕೂಡಾ ಸಾಮಾಜಿಕ ನೈತಿಕ ಕಟ್ಟುಪಾಡುಗಳನ್ನು ಪಾಲಿಸುವ ಸಜ್ಜನನೇ. ಈ ಚೌಕಟ್ಟನ್ನು ದಾಟಿ ಅವನು ಅವಳನ್ನು ಎಂದೂ ನೋಡಿದ್ದೇನೂ ಇಲ್ಲ. ಆದರೂ ನಾಯಕಿಯ ಮನಸ್ಸು ನೈತಿಕತೆಯ ಚೌಕಟ್ಟಿನ ಆಚೆಗೆ ಸರಿದು, ತರುಣನೂ, ಸಹೃದಯಿಯೂ ಆದ 'ಅನ್ಯ ಪುರುಷ'ನ ಕಡೆಗೆ ಆಕರ್ಷಿತವಾಗುತ್ತದೆ. ಸರಿಸುಮಾರಾಗಿ, 'ಎಡಕಲ್ಲು ಗುಡ್ಡದ ಮೇಲೆ' ಕಾದಂಬರಿಯಲ್ಲೂ ಇಂಥದೇ ಕಥಾ ಚೌಕಟ್ಟು ಕಾಣುತ್ತದೆ. ತ್ರಿವೇಣಿಯವರ ಎಲ್ಲ ಕತೆ, ಕಾದಂಬರಿಗಳೂ ವಿವಾಹ ಕೇಂದ್ರಿತವೇ ಆಗಿವೆ. ವಿವಾಹದ ಚೌಕಟ್ಟಿನಲ್ಲಿ ಸಿಲುಕುವ ಹೆಣ್ಣಿನ ಮನಸ್ಥಿತಿಯನ್ನು ಮನೋವೈಜ್ಞಾನಿಕತೆಯ ಅರಿವಿನಿಂದ ಚಿತ್ರಿಸುವುದೇ ತ್ರಿವೇಣಿಯವರ ಗುರಿಯಾಗಿದೆ. ಹೆಣ್ಣಿನ ಮಾನಸಿಕ ಗೊಂದಲಗಳನ್ನು ಎಷ್ಟೊಂದು ವಿವರಗಳಲ್ಲಿ ಚಿತ್ರಿಸಲಾಗಿದೆ ಎಂದು ಕೂಡಾ ತೋರುತ್ತದೆ.

ಆದರೆ ಈ ಯಾವ ಕತೆ ಕಾದಂಬರಿಗಳೂ ಹೆಣ್ಣಿನ ನಿಜ ಸಂವೇದನೆಗಳ ಇರವನ್ನು ಗುರುತಿಸುವ ಲಕ್ಷಣಗಳನ್ನು ತೋರುವುದಿಲ್ಲ. ಹೆಣ್ಣಿಗೆ, ತನ್ನ ನಿಜವಾದ ಮನಸ್ಸು ಏನು ಹೇಳುತ್ತದೆ ಎಂದು ಕೇಳಿಸಿಕೊಳ್ಳುವ ಎಚ್ಚರ ಇರುವುದೇ ಇಲ್ಲ. ಎಲ್ಲೋ ಒಮ್ಮೊಮ್ಮೆ ಇಂಥಾ ಎಚ್ಚರವಾದಂತೆ ಕಂಡರೂ, ಆ ನಿಜ ಸಂವೇದನೆಯನ್ನು ಗುರುತಿಸಲಾರದಷ್ಟು ವಿಸ್ಮೃತಿ ಅವಳನ್ನು ಆವರಿಸಿಬಿಡುತ್ತದೆ. ಹೆಣ್ಣಿನ ಈ ವಿಸ್ಮೃತಿಯನ್ನೇ 'ಸ್ತ್ರೀ ಸಂವೇದನೆ' ಎಂದು ಈ ಕತೆಕಾದಂಬರಿಗಳು ವ್ಯಾಖ್ಯಾನಿಸುತ್ತವೆ. ಇಂಥಾ ಕೃತಿಗಳ ಹೆಣ್ಣು ಪಾತ್ರಗಳಲ್ಲಿ ಸ್ತ್ರೀ ಸಂವೇದನೆಗಳನ್ನು ಕಾಣುತ್ತೇವೆ ಎಂಬ ಮಾತಿಗೆ ಅರ್ಥವೇ ಇರಲಾರದು. ಸಾಹಿತ್ಯ ಮೀಮಾಂಸೆಯ ಮಾನದಂಡದಲ್ಲಿ ಕೃತಿಯು ಎಷ್ಟೇ ಮಹತ್ತಾದ ಸ್ಥಾನವನ್ನು ಗಳಿಸಿರಬಹುದು. ಆದರೆ ಸಾಹಿತ್ಯದಲ್ಲಿ, ಸ್ತ್ರೀ ಕೇಂದ್ರಿತ, ಸ್ತ್ರೀ ಸಂವೇದನೆ ಎಂಬುದೇನೂ ಇರುವುದಿಲ್ಲ. ಇಲ್ಲಿನ ಎಲ್ಲ ಹೆಣ್ಣುಗಳೂ ಯಾವುದನ್ನು ತಮ್ಮ ಸೋಲು, ಅಥವಾ ಗೆಲುವು ಎಂದು ಎಂದು ತಿಳಿಯುತ್ತಾರೆ ಎಂಬುದನ್ನು ಗಮನಿಸಬೇಕು. ಹೆಣ್ಣಿನ ಸೋಲು ಗೆಲುವುಗಳು ಆಕೆಯು ಗಂಡನ್ನು ಪಡೆದ, ಅಥವಾ ಪಡೆಯಲಾಗದ ಸಂಗತಿಯನ್ನೇ ಆಧರಿಸುತ್ತದೆ. ಪಿತೃಪ್ರಧಾನತೆಯ ಮುಖ್ಯ ಚಿಂತನೆಯೂ ಇದೇ ಆಗಿದೆ. ಹೆಣ್ಣಿಗೆ ತನ್ನದೇ ಆದ ಯಾವ ಅಸ್ತಿತ್ವವೂ ಇರುವುದಿಲ್ಲ. ಅವಳ ಗಮ್ಯ, ಗತಿ, ಎಲ್ಲವೂ ಗಂಡೇ. ಅವನಿಲ್ಲದ ಬದುಕು ಎಂಬುದಕ್ಕೆ ಅರ್ಥವೇ ಇರುವುದಿಲ್ಲ ಎಂಬುದು. ಸಾಹಿತ್ಯ ವಲಯವು ಇದನ್ನೇ ಸ್ಥಿರೀಕರಿಸಿ, ಸಮರ್ಥಿಸುವ ಪ್ರವೃತ್ತಿಯದಾಗಿದೆ. ಇಲ್ಲಿ ಸ್ತ್ರೀ ಸಂವೇದನೆಯನ್ನು ಗುರುತಿಸುವ ಅಥವಾ ಅರ್ಥೈಸುವ ಪ್ರಯತ್ನವು, ಒಂದು ಬೌದ್ಧಿಕ ಕಸರತ್ತು ಮಾತ್ರವೇ ಆಗಿರುತ್ತದೆ.

ಏಕೆಂದರೆ, ಪಿತೃಪ್ರಧಾನತೆಯು ಹೆಣ್ಣನ್ನು ಭಾವನಾ ಜಗತ್ತಿನಲ್ಲೇ ಉಳಿಯುವಂತೆ ಒತ್ತಾಯಿಸುತ್ತದೆ; ಗಂಡಿಗೆ ಆ ಜಗತ್ತನ್ನು ನಿರಾಕರಿಸುತ್ತದೆ. ಜಗತ್ತನ್ನು ಕೇವಲ ಆರ್ಥಿಕ ಹಾಗೂ ಲೈಂಗಿಕ ಆಸಕ್ತಿಗಳ ನೆಲೆಯಲ್ಲಷ್ಟೇ ಗ್ರಹಿಸಲು ಅವನನ್ನು ಒತ್ತಾಯಿಸುತ್ತದೆ. ಇದರಿಂದಾಗಿ ಪುರುಷ ಚಿಂತನೆಯು ಬದುಕನ್ನು ನೋಡುವ ವಿಧಾನವೇ ಆರ್ಥಿಕ ಮತ್ತು ಲೈಂಗಿಕ ಸಂಗತಿಗಳ ಆವರಣದಲ್ಲಿ ಸಿಲುಕಿರುತ್ತದೆ. ಅವನನ್ನು ಲಾಭ ನಷ್ಟಗಳ

ಲೆಕ್ಕಾಚಾರದಲ್ಲಿ ಮುಳುಗಿಹೋಗುವಂತೆ ಮಾಡುತ್ತವೆ. ಅವನು ಸಂಬಂಧಗಳನ್ನೂ ಒಳಗೊಂಡಂತೆ, ಎಲ್ಲ ವಿಷಯಗಳನ್ನೂ ಕಾರಣ ಹಾಗೂ ಪರಿಣಾಮಗಳ ಪರಿಧಿಯಲ್ಲಿ ಮಾತ್ರವೇ ಚಿಂತಿಸುವಂತೆ ಮಾಡುತ್ತವೆ. ಪಿತೃಪ್ರಧಾನ ಸಮಾಜದಲ್ಲಿ ನೆಲೆಗೊಳಿಸಲಾಗಿರುವ ಜ್ಞಾನವಲಯಗಳೂ ಈ ಚೌಕಟ್ಟಿಗೇ ಬದ್ಧವಾಗಿ ವರ್ತಿಸುತ್ತವೆ. ಇದನ್ನೇ ಚಿತ್ತವೃತ್ತಿ (Sensibility) ಎಂದೂ ಮಾನವ ಜೀವಿಯ ಸಂವೇದನೆ ಎಂದೂ ವ್ಯಾಖ್ಯಾನಿಸಲಾಗುತ್ತಿದೆ. ಹೆಣ್ಣು 'ಊನಮಾನವ' ಜೀವಿ ಎಂದು ಗುರುತಾಗಿಬಿಟ್ಟಿದ್ದಾಳೆ. ಎಂದ ಮೇಲೆ ಚಿತ್ತವೃತ್ತಿ ಎನ್ನುವುದು ಅವಳಲ್ಲಿ ವ್ಯಕ್ತವಾಗುವುದೇ ಇಲ್ಲ ಎಂದೂ ಸಾರಿಬಿಡಬಹುದು. ಬದಲಿಗೆ ಅವಳು ಪಿತೃಪ್ರಧಾನತೆಯ ತರಬೇತಿಯಲ್ಲಿ ಕಲಿತಂತೆ, ಇತರರ ಅನಿಸಿಕೆಗಳ ಬಗ್ಗೆ ಸೂಕ್ಷ್ಮಗೊಳ್ಳುವುದನ್ನೇ (Sensitivity) ಅವಳ ಸಂವೇದನೆ ಎಂದು ಒಪ್ಪಿಸಲಾಗುತ್ತದೆ. ನಯ, ವಿನಯ, ಕಾಳಜಿ, ಆರೈಕೆ ಎಂಬ ಸೇವಾವಲಯದ ಹೆಣ್ಣುಗುಣಗಳನ್ನೇ ಸ್ತ್ರೀ ಸಂವೇದನೆ ಎಂದೂ, ಧೈರ್ಯ, ದೃಢತೆ, ಸಾಹಸ, ಆಕ್ರಮಣ ಎಂಬ ಗಂಡುಗುಣಗಳನ್ನು ಪುರುಷ ಸಂವೇದನೆ ಎಂದೂ ಗುರುತಿಸಲಾಗುತ್ತದೆ. ಸಾಧಾರಣವಾಗಿ ಸ್ತ್ರೀಯರೂ, ಪುರುಷರೂ ಇದನ್ನೇ ಒಪ್ಪಿ ಸ್ವೀಕರಿಸಿಬಿಟ್ಟಿರುತ್ತಾರೆ. ಆದರೆ ಬದುಕು ಎಂದರೆ ಇವೆರಡೂ ಪ್ರಕ್ರಿಯೆಗಳ ಅನುಸಂಧಾನದಲ್ಲಿ ಸಾಗಬೇಕಾದ ಮಹಾಯಾನ.

ಪುರುಷ ಜಗತ್ತಿನ ಎಲ್ಲ ಜ್ಞಾನವಲಯಗಳಂತೆಯೇ, ಸಾಹಿತ್ಯ, ಕಲೆ ಎಂಬ ಅಭಿವ್ಯಕ್ತಿಗಳು ಕೂಡಾ ಈ ಕಾರ್ಯಕಾರಣ ಮೀಮಾಂಸೆಯ ಚೌಕಟ್ಟಿನಲ್ಲಿಯೇ ಸುತ್ತುತ್ತವೆ. ಪುರುಷ ಸಾಹಿತ್ಯ ಮಾತ್ರವೇ ಅಲ್ಲ, ಈ ಮಾದರಿಯನ್ನೇ ಅನುಸರಿಸಿ ಹುಟ್ಟುವ ಮಹಿಳಾ ಸಾಹಿತ್ಯವು ಕೂಡಾ ಈ ಚೌಕಟ್ಟನ್ನು ಮೀರುವುದಿಲ್ಲ. ಸಾಹಿತ್ಯ ಕೃತಿಗಳು ಮಾನವರ ಭಾವನಾ ಜಗತ್ತನ್ನು ಅನಾವರಣ ಮಾಡುವ ಗುರಿಯಲ್ಲೇ ಹೊರಡುತ್ತವೆ. ಆದರೆ ಭಾವನಾ ಜಗತ್ತನ್ನೇ ಕಾರ್ಯಕಾರಣಗಳಿಗೆ ಬದ್ಧವಾಗಿಸಿಬಿಡುವ ವಾತಾವರಣವನ್ನು ಸೃಷ್ಟಿಸುತ್ತವೆ. ಈ ನಿಟ್ಟಿನಲ್ಲಿ ಚಿಂತಿಸಿದರೆ, ಸಾಹಿತ್ಯ ಕೃತಿಗಳ ಹೆಣ್ಣುಪಾತ್ರಗಳಲ್ಲಿ ಕಾಣಿಸುವ ಯಾವುದೇ ಪರಿಣಾಮಗಳನ್ನೂ ಸ್ತ್ರೀ ಪ್ರಜ್ಞೆಯ ಕೇಂದ್ರ ಎನ್ನಲಾಗದು. ವಾಸ್ತವದಲ್ಲಿ ಅವು ಪುರುಷ ಜಗತ್ತು ಹೆಣ್ಣು ಜಗತ್ತಿನಿಂದ ನಿರೀಕ್ಷಿಸುವ ಪ್ರತಿಕ್ರಿಯೆಗಳಷ್ಟೇ ಆಗಿರುತ್ತವೆ. ಹೆಣ್ಣು ಜಡವಾಗಿರುವುದೇನೂ ಅದಕ್ಕೆ ಇಷ್ಟವಿಲ್ಲ. ಹೆಣ್ಣು Sensitive ಆಗಿರಬೇಕು. ತನ್ನ ನಡವಳಿಕೆಗಳಿಂದ, ಭಾವನೆಗಳಿಂದ ಸುತ್ತಲಿನ ಯಾರಾದರೂ ನಲುಗುತ್ತಾರೇನೋ, – ಮುಖ್ಯವಾಗಿ ಈ ಪುರುಷ ಜಗತ್ತು– ಎಂಬುದು ಅವಳ ನಿರಂತರ ಆತಂಕವೆನಿಸಿ ಕಾಡಬೇಕು. ತನ್ನ ಬದುಕಿಗೆ, ತನಗೆ ಏನಾದೀತು ಎಂಬ ಯೋಚನೆಯೂ ಅವಳಿಗೆ ಬರಬಾರದು. ಅಷ್ಟರಮಟ್ಟಿಗೆ ಅವಳನ್ನು ಭಾವ ಜಗತ್ತಿಗೆ ಕಟ್ಟಿಹಾಕಲಾಗಿದೆ. ಅವಳು ಪ್ರೀತಿ, ಪ್ರೇಮ ಎಂಬುದನ್ನಾಗಲೀ, ರೋಷ, ಪ್ರತಿರೋಧ ಎಂಬುದನ್ನಾಗಲೀ ಅಭಿವ್ಯಕ್ತಿಸಬಹುದು. ಆದರೆ ಅವಳ ಬೌದ್ಧಿಕ ಸಾಮರ್ಥ್ಯಕ್ಕೆ ಅಲ್ಲಿ ಅವಕಾಶಗಳು ಇರುವುದಿಲ್ಲ ಅಷ್ಟೇ. ಅರಿವಿನ ಅಭಾವ ಅವಳನ್ನು ಕಾಡುವ ಸಂಗತಿಯಾಗಿರುತ್ತದೆ. ಸಾಹಿತ್ಯ ಕೃತಿಗಳು ಈ ಚಿಂತನೆಯಾಧಾರಿತ ಪಾತ್ರಗಳನ್ನೇ ಸೃಷ್ಟಿಸುತ್ತವೆ, ಮತ್ತು ಅವುಗಳ ಅಭಿವ್ಯಕ್ತಿಗೆ ಪೂರಕವಾಗುವ ಸಂದರ್ಭಗಳನ್ನೂ ಕಲ್ಪಿಸುತ್ತವೆ.

ಈ ಹೆಣ್ಣು ಭೈರಪ್ಪನವರ 'ವಂಶವೃಕ್ಷ' ಕಾದಂಬರಿಯ ಕಾತ್ಯಾಯನಿ ಇರಬಹುದು, ಅನಂತ ಮೂರ್ತಿಯವರ 'ಸಂಸ್ಕಾರ'ದ ಚಂದ್ರಿ ಇರಬಹುದು, ತೇಜಸ್ವಿಯವರ 'ಕಿರಗೂರಿನ ಗಯ್ಯಾಳಿಗಳು' ನೀಳ್ಗತೆಯ ದಾನಮ್ಮನೂ ಇರಬಹುದು. ಕಾತ್ಯಾಯನಿಯು ಮರುಮದುವೆ–ಯಾಗುತ್ತಾಳೆ. ಆದರೆ ಪಿತೃಪ್ರಧಾನತೆಯ ನೈತಿಕ ಚೌಕಟ್ಟನ್ನು ದಾಟಿದ ವಿಧವೆ ಹೆಣ್ಣಿನ ಗತಿ ಏನಾಗುತ್ತದೆ ಎಂಬ ಭಯವನ್ನು ಚಿತ್ರಿಸುವುದೇ ಲೇಖಕರ ಉದ್ದೇಶವೇನೋ ಎಂಬ ಅನುಮಾನ ಬರುತ್ತದೆ. ಮೊದಲ ವಿವಾಹದ ಒಪ್ಪಿತ ಚೌಕಟ್ಟಿನಲ್ಲಿ ಅವಳು ಒಬ್ಬ ಮಗನನ್ನು ಹೆತ್ತಿದ್ದಾಳೆ. ಆದರೆ ಮರುಮದುವೆಯಾಗಿ ಚೌಕಟ್ಟನ್ನು ದಾಟಿದ ವಿಧವೆಯು ಸ್ವತಃ ಅಪರಾಧೀ ಪ್ರಜ್ಞೆಗೆ ಒಳಗಾಗಿದ್ದಾಳೆ. ಇದು ನಿರಂತರ ಗರ್ಭಪಾತಗಳ ಸರಣಿಗೆ ಕಾರಣವಾಗುತ್ತದೆ ಎಂಬುದು ಕಾದಂಬರಿಯ ವ್ಯಾಖ್ಯಾನ. ಗಯ್ಯಾಳಿಯಾಗಿ ನಿಂತ ದಾನಮ್ಮ ತನ್ನ ಕಾಳಿಯ ಅವತಾರವನ್ನು ತೋರಿಸಿದಳೇನೋ ಹೌದು. ಅವಳ ಈ ಪ್ರತಿರೋಧವನ್ನು ಪ್ರಗತಿಪರ ಚಿಂತನೆಯ ಸಂಕೇತವಾಗಿ ನಿರೂಪಿಸಲಾಗಿದೆ ಎಂದು ಹೇಳಲಾಗುತ್ತದೆ. ಕಾದಂಬರಿಯ ಹೆಸರೇ ಹೇಳುವಂತೆ, ಗಯ್ಯಾಳಿಗಳನ್ನು ಪಿತೃಪ್ರಧಾನ ಸಮಾಜವು ಎಂದಿಗೂ ಸಹಿಸುವುದಿಲ್ಲ ಎಂಬ ಎಚ್ಚರಿಕೆಯನ್ನೇ ಕಾದಂಬರಿಯು ಸ್ಥಿರೀಕರಿಸುತ್ತದೆ. ಕುವೆಂಪು ಅವರ 'ಕಾನೂರು ಹೆಗ್ಗಡಿತಿ' ಕಾದಂಬರಿಯ ಸೀತೆಯಂತೂ ತನ್ನ ಇಡೀ ಬದುಕನ್ನು ಹೂವಯ್ಯನ ಹಂಬಲದಲ್ಲಿಯೇ ಸವೆಸುತ್ತಾಳೆ. ಅದಕ್ಕಾಗಿ ಎಲ್ಲವನ್ನೂ ಸಹಿಸುತ್ತಾಳೆ. ಬೇಡದ ಮದುವೆಯ ಬಂಧನವನ್ನೂ ಒಪ್ಪುತ್ತಾಳೆ. ಒಂದು ಹಂತದಲ್ಲಿ ಈ ಬಂಧನದ ಗೆರೆಯನ್ನು ದಾಟಿ ಹೂವಯ್ಯನಲ್ಲಿಗೆ ಬಂದುಬಿಡುವ ನಿರ್ಧಾರವನ್ನು ಮಾಡುವ ಗಟ್ಟಿಗಿತ್ತಿಯಾಗಿಯೂ ಕಾಣಿಸುತ್ತಾಳೆ. ಕೊನೆಗೆ ಆ ಹೂವಯ್ಯನೇ ತನ್ನನ್ನು ನಿರಾಕರಿಸಿ ಗುಡ್ಡವನ್ನೇರಿ ಕುಳಿತುಬಿಟ್ಟರೂ, ಅವನಿಗಾಗಿ ಹಂಬಲಿಸುವ ಅವಳ ಪರಿಯೇನೂ ಬದಲಾಗುವುದಿಲ್ಲ. ಅವನ ಧ್ಯಾನದಲ್ಲಿ ಉಳಿದುಬಿಡಲು ತಯಾರಿದ್ದಾಳೆ. ಅವಳ ಈ ಹಂಬಲವನ್ನು Instinctive ಎನ್ನಬೇಕೋ, ಅಥವಾ ಪ್ರಜ್ಞಾಪೂರ್ವಕವಾದ ಹೆಜ್ಜೆ ಎನ್ನಬೇಕೋ ಎಂಬುದು ಮಾತ್ರ ಪ್ರಶ್ನೆಯೇ.

ಅಲ್ಲಿಗೆ, ಹೆಣ್ಣಿನ ಸ್ವ–ಅರಿವಿನ ಬಿಂದುವು ಕೂಡಾ ಗಂಡುಕರುಣೆಯ ಫಲಿತವೇ ಆಗಿರುತ್ತದೆ ಎಂಬ ಪಿತೃಪ್ರಧಾನ ಕಥನವನ್ನೇ ಸಾಹಿತ್ಯ ಕೃತಿಗಳೂ ಸ್ಥಿರೀಕರಿಸುತ್ತವೆ. ಆದರೆ ಸಾಹಿತ್ಯ ಕೃತಿಗಳ ಒಳ ತಿರುಳನ್ನು ಗ್ರಹಿಸಿ ದಾಖಲಿಸುವ ಕೆಲಸಕ್ಕೆ ಹೊರಡುವ ಸಾಹಿತ್ಯ ವಿಮರ್ಶಕರು ಕೂಡಾ ಈ ಕಥನಗಳ ಚೌಕಟ್ಟನ್ನೇ ಸಮರ್ಥಿಸುತ್ತಾರೆಯೇ ಹೊರತು, ಆ ಚೌಕಟ್ಟಿನ ರಹಸ್ಯವನ್ನು ಭೇದಿಸಲು ಹೋಗುವುದಿಲ್ಲ. ವಿಮರ್ಶಕರು ಬೌದ್ಧಿಕ ನೆಲೆಯಲ್ಲಿ ಕೆಲಸ ಮಾಡುತ್ತಾರೆ ಎನ್ನಲಾಗುತ್ತದೆ. ಆದರೆ ವಿಮರ್ಶಕರೂ ಮಾರ್ಸ್ ಗ್ರಹದಿಂದ ಉದುರಿದವರೇ. ಅವರ ಚಿಂತನೆಯೂ ಪಿತೃಪ್ರಧಾನತೆಯ ಚೌಕಟ್ಟನ್ನು ದಾಟುವ ಲಕ್ಷಣಗಳನ್ನು ತೋರುವುದಿಲ್ಲ. ಅದೇ ನೈತಿಕ ಚೌಕಟ್ಟಿನ ವ್ಯಾಖ್ಯಾನಗಳನ್ನೇ ಮುಂದುವರೆಸುತ್ತಾರೆ. ಸ್ವತಃ ಸಾಹಿತ್ಯ ಕೃತಿಗಳನ್ನು ಪ್ರವೇಶಿಸುವ ಓದುಗರು ಕೂಡಾ ಹೆಣ್ಣು ಲೋಕವನ್ನು, ಸ್ತ್ರೀ ಸಂವೇದನೆಯನ್ನು ಈ ಚಿಂತನೆಯ ಚೌಕಟ್ಟಿನಾಚೆಗೆ ಕಲ್ಪಿಸಲಾರರು.

ಹೆಣ್ಣಿನಲ್ಲಿ ಉಂಟಾಗುವ ಎಚ್ಚರ, ಜಾಗೃತಿ ಎಂಬವನ್ನು ಕೂಡಾ ಗಂಡುಜಗತ್ತು ತನ್ನ ಅಗತ್ಯಕ್ಕೆ ತಕ್ಕಂತೆ ವ್ಯಾಖ್ಯಾನಿಸುವ ಮೂಲಕ, ಪಿತೃಪ್ರಧಾನತೆಯ ಚಿಂತನೆ ಮತ್ತು ಆಶಯಗಳನ್ನು ಸಮರ್ಥಿಸಿ ಸ್ಥಿರೀಕರಿಸುತ್ತದೆ. ಪಿತೃಪ್ರಧಾನತೆಯ ಯಾವುದೇ ಜ್ಞಾನವಲಯಗಳೂ ಬದುಕನ್ನು ಸುಗಮಗೊಳಿಸುವ ಹಾದಿಗಳನ್ನು ತೋರಿಸುವುದಿಲ್ಲ. ಹಾಗೆಯೇ, ಸಾಹಿತ್ಯ ಕೃತಿಗಳೂ, ವಿಮರ್ಶೆಗಳೂ ಕೂಡಿಯೇ ಓದುಗರನ್ನು ಹಾದಿ ತಪ್ಪಿಸುತ್ತವೆ. ಇದರಲ್ಲಿ ಯಾರನ್ನೂ ವೈಯಕ್ತಿಕವಾಗಿ ಆಕ್ಷೇಪಿಸಲು ಆಗುವುದಿಲ್ಲ. ಏಕೆಂದರೆ ಪಿತೃಪ್ರಧಾನ ಸಮಾಜದ ಎಲ್ಲರೂ ಅದರ ತರಬೇತಿಯ ಪಾಠಗಳಿಂದ ಹೊರಬರುವ ಅಪೇಕ್ಷೆಯನ್ನು ಹೊಂದಿರುವುದಿಲ್ಲ. ಅದಕ್ಕೆ ಅವಕಾಶಗಳು ಸಿಗುವುದೂ ಸುಲಭಸಾಧ್ಯವಲ್ಲ. ಈ ಅರ್ಥದಲ್ಲಿ ನಾವೆಲ್ಲರೂ ನಿಜ ಸಂವೇದನೆಗಳನ್ನು ಅರಿಯದವರೇ ಆಗಿದ್ದೇವೆ. ನಮ್ಮ ಪ್ರಜ್ಞೆಯು ವಿಸ್ಮೃತಿಯ ಆಳಕ್ಕೆ ಸರಿದಿರುವುದರ ಅರಿವನ್ನು ಗಳಿಸಲಾರದಷ್ಟು ಜಡತ್ವಕ್ಕೆ ನಾವು ಪಕ್ಕಾಗಿಬಿಟ್ಟಿದ್ದೇವೆ.

ಪಿತೃಪ್ರಧಾನತೆಯ ಚಿಂತನೆ, ಹಾಗೂ ತಂತ್ರಗಳಿಂದಾಗಿ, ಮಹಿಳೆಯರ ಬದುಕುಗಳು ಸ್ಥಗಿತಗೊಂಡಂತೆ ಆದವು ಎಂಬುದೇನೋ ಕಾಣುತ್ತದೆ. ಆದರೆ, ಪುರುಷರು ಕೂಡಾ ಈ ಅಪಾಯದ ಕೂಪದಲ್ಲಿಯೇ ಬಿದ್ದಿದ್ದಾರೆ. ಅವರಿಗೆ ದಿನನಿತ್ಯದಲ್ಲಿ ದೊರೆಯುವ ಕೆಲವು ಹೆಚ್ಚಿನ ಸೌಲಭ್ಯ ಸವಲತ್ತುಗಳಿಂದಾಗಿ ಅವರಿಗೆ ನೋವಿನ ಅನುಭವವೂ ತಟ್ಟದಷ್ಟು ಜಡರಾಗಿದ್ದಾರೆ ಅಷ್ಟೇ. ಪುರುಷರ ಕಾರ್ಯಾಚರಣೆಗೆ ಅನುಕೂಲಗಳನ್ನು ಒದಗಿಸಲೆಂದೇ ಅವರಿಗೆ ಈ ಸೌಲಭ್ಯಗಳನ್ನು ಒದಗಿಸಿರುವುದು. ಅದು ಬಿಟ್ಟರೆ, ಅವರು ಪಿತೃಪ್ರಧಾನ ಸಾಮಾಜಿಕ ಸಂಸ್ಥೆಗಳಲ್ಲಿ ದುಡಿಯುವುದಕ್ಕೆ ನೇಮಕಗೊಂಡಿರುವ ಕಾರ್ಯಕರ್ತರು ಅಷ್ಟೇ. ಆದರೆ ಅವರಿಗೆ ಇದರ ಅರಿವು ಬರುವುದಿಲ್ಲ. ತಮ್ಮದೇ ಯಜಮಾನಿಕೆಯ ದರ್ಬಾರು ಎಂದು ತಿಳಿದು ಮೆರೆಯುತ್ತಾರೆ. ಅವರಿಗೆ ಹೆಣ್ಣಿನ ಮೇಲೆ ಯಜಮಾನಿಕೆಯನ್ನು ಸ್ಥಾಪಿಸುವ ಕುರಿತು ತರಬೇತಿಯನ್ನು ಕೊಡಲಾಗಿದೆ. ಈ ಪಾಠಗಳನ್ನು ಅವರು ತಮ್ಮ ಹುಟ್ಟುಗುಣಗಳೋ ಎಂಬಂತೆ ಆವಾಹಿಸಿಕೊಂಡಿದ್ದಾರೆ. ಹಾಗಾಗಿಯೇ ಅವರ ಎಲ್ಲ ಚಿಂತನೆಗಳೂ, ನಡವಳಿಕೆಗಳೂ ಹೆಣ್ಣನ್ನು ಆಳುವ ಗುರಿಯನ್ನಷ್ಟೇ ಹಿಂಬಾಲಿಸುತ್ತವೆ.

ಸಾಹಿತ್ಯ ವಲಯವು ಸೂಕ್ಷ್ಮವಾದ ಲೋಕಗ್ರಹಿಕೆಯನ್ನು ವ್ಯಕ್ತಪಡಿಸುತ್ತದೆ ಎಂದೂ, ಮನುಷ್ಯ ಸಂಬಂಧಗಳನ್ನು ಸೂಕ್ತವಾಗಿ ಅರ್ಥ ಮಾಡಿಕೊಳ್ಳುವ ಸೃಜನಶೀಲತೆಯನ್ನು ಹೊಂದಿರುತ್ತದೆ ಎಂದೂ ನಂಬಲಾಗಿದೆ. ಸಾಹಿತ್ಯ ಚರಿತ್ರೆಯ ಒಂದು ಹಂತದಲ್ಲಿ, ಸಾಹಿತ್ಯವನ್ನು 'ಸಮಾಜದ ಕನ್ನಡಿ' ಎಂದು ವ್ಯಾಖ್ಯಾನಿಸುವುದಿತ್ತು. ನಮ್ಮ ಭಾವನಾಲೋಕವನ್ನು ಅರಿಯುವ ಸಾಧನ ಎಂದೂ ತಿಳಿಯಲಾಗಿತ್ತು. ಕಾಲಕ್ರಮದಲ್ಲಿ ಪ್ರಗತಿಪರತೆ, ವೈಚಾರಿಕತೆ, ಸಾಮಾಜಿಕ ಸಮಾನತೆಯ ಚಿಂತನೆಗಳ ಕಡೆಗೂ ಅದು ಚಲಿಸಿತು. ವೈಯಕ್ತಿಕವೆನಿಸಿ ಉಳಿದಿದ್ದ ಸಾಹಿತ್ಯವು ಸಾಮಾಜಿಕ ಹೊಣೆಗಾರಿಕೆಯನ್ನು ವಹಿಸಿಕೊಳ್ಳುವ ಸಮುದಾಯ ಪ್ರಜ್ಞೆಯಾಗಿ ಬೆಳೆಯಿತು ಎಂಬಂತೆ ಕೂಡಾ ತೋರಿತು. ಆದರೆ, ಈ ಸಮಾನತೆ, ಸಮುದಾಯ ಪ್ರಜ್ಞೆ ಎಂಬವು ಇನ್ನೂವರೆಗೂ ಲಿಂಗತ್ವ ಸಮಾನತೆಯ ಮಾತನ್ನು ಒಳಗೊಂಡೇ ಇಲ್ಲ.

ಇನ್ನೂ ಕೂಡಾ ಲೈಂಗಿಕತಾವಾದೀ ಸಾಮಾಜೀಕರಣದ ಪಾಠಗಳನ್ನೇ ಒಪ್ಪಿಸುತ್ತಿವೆ. ಈ ನಿಟ್ಟಿನಲ್ಲಿ ನೋಡಿದರೆ, ಸಾಹಿತ್ಯ ವಲಯವು ಗಂಡುಜಗತ್ತಿನ ಚಿಂತನೆಗಳಿಂದಾಚೆಗೆ ಸರಿದೇ ಇಲ್ಲ. ಮಹಿಳೆಯರು ಕೂಡಾ ಓದುಗರಾಗಿ, ಬರಹಗಾರರಾಗಿ, ವಿಮರ್ಶಕರಾಗಿ ಸಾಹಿತ್ಯ ವಲಯವನ್ನು ಪ್ರವೇಶಿಸಿದ್ದಾರೆ ಎಂದೇನೋ ಕಾಣಿಸುತ್ತಿದೆ. ಆದರೆ ಅವರು ಗಂಡುಜಗತ್ತಿನ ನಕಲುಗಳೋ ಎಂಬಂತೆ ಆ ಚಿಂತನೆಗಳನ್ನೇ ತಮ್ಮ ಸ್ವಂತದ್ದು ಎಂದು ಭಾವಿಸಿಕೊಂಡಿದ್ದಾರೆ. ಅಲ್ಲಿ ಹೊಸದಾಗಿ ಸೇರ್ಪಡೆಗೊಂಡ ಕಾರ್ಯಕರ್ತರೋ ಎಂಬಂತೆಯೇ ವರ್ತಿಸುತ್ತಿದ್ದಾರೆ. ಈ ಮಾತಿಗೆ ಬೇಕಾದಷ್ಟು ಉದಾಹರಣೆಗಳನ್ನು ಕೊಡಬಹುದು. ಹೆಣ್ಣುಬದುಕಿನ ವೈಯಕ್ತಿಕ ಸಂಗತಿಗಳನ್ನು, ಹೆಣ್ಣುದೇಹ, ಬುದ್ಧಿ, ಹಾಗೂ ಮನಸ್ಸುಗಳ ಬಗೆಗಿನ ಅನುಭವಗಳನ್ನು ಕುರಿತು ಎಲ್ಲ ಸೃಜನಶೀಲ ಅಭಿವ್ಯಕ್ತಿಗಳೂ ಮಾತಾಡುತ್ತವೆ. ಆದರೆ ಈ ಎಲ್ಲ ಮಾತುಗಳೂ ಅವಳ ಹೆಣ್ಣುತನ, ಶೀಲ, ತಾಯ್ತನ, ಲೈಂಗಿಕ ಆಸಕ್ತಿಯ ಬಗೆಗಳು ಎಂಬುದರ ಸುತ್ತಲೇ ಸುತ್ತುತ್ತವೆ; ಅಷ್ಟೇ ಅಲ್ಲದೆ, ಅವಳ ಬದುಕಿನ ಹಕ್ಕುಗಳು ಮತ್ತು ಹೊಣೆಗಾರಿಕೆಗಳನ್ನು ಕುರಿತು ಕೂಡಾ ಬೇಕಾದಷ್ಟು ಮಾತಾಡುತ್ತವೆ. ಆದರೆ ಈ ಮಾತುಗಳು ಪಿತೃಪ್ರಧಾನತೆಯ ಪಾಠಗಳನ್ನೇ, ಅದು ನೆಲೆಗೊಳಿಸಿದ ಮಿಥ್‌ಗಳನ್ನೇ ಯಥಾವತ್ತಾಗಿ ಒಪ್ಪಿಸುತ್ತವೆ. ಕೊನೆಗೆ ಅವಳ ಭಾವನೆ, ಸಂವೇದನೆ ಎಂಬವನ್ನೂ ಗಂಡಿನ ಅಗತ್ಯಗಳಿಗೆ ತಕ್ಕಂತೆ ಗ್ರಹಿಸುತ್ತವೆ. ಉದಾಹರಣೆಗೆ, ಹೆಣ್ಣಿನ ತಾಯ್ತನವನ್ನು ಕುರಿತ ಮಾತುಗಳು. ಹೌದು. ತಾಯ್ತನ ಎಂಬುದು ಜೈವಿಕವಾಗಿ ಹೆಣ್ಣಿನ ಸಹಜ ಹೊಣೆಗಾರಿಕೆಯೇ ಆಗಿದೆ. ಆದರೆ ಶಿಶುವಿನ ಲಾಲನೆ, ಪಾಲನೆ, ಪೋಷಣೆ, ಪೊರೆಯುವಿಕೆ ಎಂಬವೂ ಅವಳಿಗೆ ಮಾತ್ರವೇ ಸೀಮಿತವಾದ ಹೊಣೆ ಎನಿಸಬೇಕಿಲ್ಲ. ಇದನ್ನು ಪುರುಷರೂ ವಹಿಸಿಕೊಳ್ಳಬಹುದು. ನಿಜ ಹೇಳಬೇಕೆಂದರೆ, ಇದು ಸಮಾಜದ ಹೊಣೆಗಾರಿಕೆ ಎನಿಸಬೇಕು. ಆದರೆ, ತಾಯ್ತನದ ಜೊತೆಗೇ ಶಿಶುವಿನ ಎಲ್ಲ ಕೆಲಸಗಳನ್ನೂ ಬೆರೆಸಿ, ಹೆಣ್ಣು ತನ್ನ ಮಗುವಿಗೆ ಮಾತ್ರವೇ ಅಲ್ಲ, ಈ ಲೋಕಕ್ಕೆಲ್ಲಾ ತಾಯಿ ಎಂದೆಲ್ಲಾ ಹೊಗಳುತ್ತಾ ಅವಳನ್ನು ಸೇವಾವಲಯಕ್ಕೆ ಕಟ್ಟಿಹಾಕುವ ಕುತಂತ್ರವು ನಡೆಯುತ್ತದೆ. ಈ ಧಾರಣಾಶಕ್ತಿಯನ್ನು ಇಡೀ ಮಹಿಳಾ ಸಮುದಾಯಕ್ಕೇ ವಿಶಿಷ್ಟವಾದ ಹುಟ್ಟುಗುಣ ಎಂಬಂತೆ ಆರೋಪಿಸಲಾಗುತ್ತದೆ. ಅಲ್ಲಿಗೆ ಹೆಣ್ಣು ಎನಿಸಿದವಳು, ಮಗುವನ್ನು ಹೆರಲಿ ಬಿಡಲಿ, ಹೆಣ್ಣಾಗಿ ಹುಟ್ಟಿದ ಕಾರಣಕ್ಕೇ, ತನ್ನ ಬಾಲ್ಯದ ಹಂತದಿಂದಲೇ ತಾಯಿಯ ಪಟ್ಟವನ್ನು ಪಡೆದು ಲೋಕಸೇವೆಗೆ ಮೀಸಲಾಗುತ್ತಾಳೆ.

ಮುಖ್ಯವಾಗಿ ಇಲ್ಲಿ ನಡೆಯುವ ರಾಜಕಾರಣದ ತಂತ್ರವು, ಜೀವದ ಉಳಿವಿಗಾಗಿ ಮಾತ್ರವೇ ಪ್ರಕಟಿಸುವ ಪ್ರಾಣಿಸಹಜ ಭಾವಸೂಕ್ಷ್ಮತೆಯನ್ನು ಹೆಣ್ಣಿಗೆ ಆರೋಪಿಸುತ್ತದೆ. ಮಾನವ ಸಮಾಜದಲ್ಲಿ ಯಾರ ಹಂಗಿಗೂ ಬೀಳದಂತೆ ಸ್ವತಂತ್ರವಾಗಿ ಬದುಕಲು, ಬುದ್ಧಿಯು ಕೂಡಾ ಕೆಲಸ ಮಾಡಬೇಕಾಗುತ್ತದೆ. ಪಿತೃಪ್ರಧಾನ ಸಮಾಜವು ಹೆಣ್ಣಿನ ಬುದ್ಧಿಸೂಕ್ಷ್ಮತೆಯು ಕಾರ್ಯಪ್ರವೃತ್ತವಾಗುವುದನ್ನು ಬಯಸುವುದಿಲ್ಲ. ಹಾಗಾಗಿಯೇ ಅವಳ ಭಾವಸೂಕ್ಷ್ಮತೆಯನ್ನೇ ಅವಳ ನಿಜ ಸಂವೇದನೆ ಎಂದು ಹೇಳುತ್ತದೆ; ಅವಳ ಈ Sensitivityಯನ್ನು ವೈಭವೀಕರಿಸುತ್ತದೆ. ಅವಳಿಗೆ ತನ್ನ ಹಿತಕ್ಕಿಂತಲೂ ಸುತ್ತಲಿನವರ ಬಗೆಗಿನ ಕಾಳಜಿಯೇ

ಮುಖ್ಯ ಎಂದು ವ್ಯಾಖ್ಯಾನಿಸುತ್ತಾ, ಇದನ್ನು ಅವಳು ನಂಬುವಂತೆ ತರಬೇತಿಯನ್ನು ನೀಡಲಾಗುತ್ತದೆ. ಪುರುಷರಲ್ಲೂ ಜೀವಸಹಜವಾದ ಭಾವಸೂಕ್ಷ್ಮತೆ ಇದ್ದೇ ಇರುತ್ತದೆ. ಆದರೆ, ಅವರಿಗೆ ದೊರೆಯುವ ತರಬೇತಿಯಲ್ಲಿ ಅವರ ಭಾವಸೂಕ್ಷ್ಮತೆಯು ಮಸುಕಾಗುತ್ತಾ, ಬುದ್ಧಿಯ ಸೂಕ್ಷ್ಮತೆಯು ವಿಕಸನಗೊಳ್ಳುವಂತೆ ನೋಡಿಕೊಳ್ಳಲಾಗುತ್ತದೆ. ಈಗ ಭಾವಸೂಕ್ಷ್ಮತೆಯನ್ನು ಹಾಗೂ ಅದನ್ನೇ ಪ್ರಧಾನವಾಗಿ ಅಭಿವ್ಯಕ್ತಿಸುವುದನ್ನೂ 'ಸ್ತ್ರೀ ಸಂವೇದನೆ' ಎಂದೂ, ಬುದ್ಧಿಸೂಕ್ಷ್ಮತೆಯನ್ನು ಹಾಗೂ ಅದನ್ನೇ ಪ್ರಧಾನವಾಗಿ ಅಭಿವ್ಯಕ್ತಿಸುವುದನ್ನು 'ಪುರುಷ ಸಂವೇದನೆ' ಎಂದೂ ಪ್ರತ್ಯೇಕಿಸಿ ನೋಡುವುದು ಸಹಜವೇ ಆಗಿಬಿಡುತ್ತದೆ.

ಒಂದು ಕಾಲಕ್ಕೆ ಸ್ತ್ರೀಸಂವೇದನೆಗಳನ್ನು ತೋರುವ ಗಂಡಸರನ್ನೂ, ಪುರುಷ ಸಂವೇದನೆಗಳನ್ನು ತೋರುವ ಹೆಂಗಸರನ್ನೂ ಗೇಲಿ ಮಾಡಿ, ಅವಮಾನಿಸಿ ಕಳಂಕಿತರು ಎಂಬಂತೆ ನೋಡಲಾಗುತ್ತಿತ್ತು. ಆದರೆ ಪ್ರಗತಿಪರ ಚಿಂತನೆ, ಸಾಮಾಜಿಕ ಸಮಾನತೆ ಎನ್ನುತ್ತಿರುವ ಈ ಕಾಲಕ್ಕೆ, ಇಂಥವರನ್ನು ವಿಶೇಷ ವ್ಯಕ್ತಿಗಳು ಎಂದು ಗುರುತಿಸುವುದಿದೆ. ಆದರೆ 'ಹೆಂಗರುಳಿನ, ತಾಯಿಗುಣದ ಗಂಡಸು' ಎಂಬ ಮಾತಾಗಲೀ, 'ಹತ್ತುಜನ ಗಂಡಸರು ನಿಭಾಯಿಸುವ ಕೆಲಸವನ್ನು ಒಬ್ಬಳೇ ನಿಭಾಯಿಸುವ ಹೆಂಗಸು' ಎಂಬ ಹೊಗಳಿಕೆಯಾಗಲೀ ಅವರಿಬ್ಬರ ವರ್ತನೆಗಳು ಸಹಜವಾದವು ಎಂಬ ಒಪ್ಪಿಗೆಯ ಸೂಚನೆಯಂತೂ ಅಲ್ಲ. ಅಪವಾದಗಳಷ್ಟೇ ಎನಿಸುವ ಇವರು ಜನಸಾಮಾನ್ಯರೇ ಅಲ್ಲ. ಲಿಂಗತ್ವ ಸಮಾನತೆಯನ್ನು ಸಹಜ ಎಂದು ಹೇಳದಿರುವ, ಅದನ್ನು ಒಳಗೊಳ್ಳದಿರುವ ಧಾಟಿಯನ್ನು, ಸಮಾಜದ ಹಿತವನ್ನು ಬಯಸುವ ಪ್ರಗತಿಪರ ಚಿಂತನೆಗಳು ಎನ್ನಬಹುದೇ?

ಸ್ತ್ರೀವಾದಿಗಳು ಸಮಾನತೆಯ ನಿಜವಾದ ಲಕ್ಷಣಗಳನ್ನು ನಿರೂಪಿಸುವ ಒಂದು ಪ್ರಯೋಗವನ್ನು ಕೈಗೊಳ್ಳಲು ಸೂಚಿಸುತ್ತಾರೆ. ವಾಸ್ತವ ಬದುಕಿನಲ್ಲಿ ಸಮಾನತೆಯನ್ನು ನಂಬಿದ್ದೇವೆ ಎನ್ನುವ ಪುರುಷರು ಹಾಗೂ ಮಹಿಳೆಯರು ಈ ಪರೀಕ್ಷೆಯಲ್ಲಿ ಭಾಗವಹಿಸಬೇಕು. ಅಂದರೆ, ತಮ್ಮ ಸುತ್ತಲಿನವರನ್ನು ನಿಗಾ ಇಟ್ಟು ಗಮನಿಸುವ ಕೆಲಸ. ಸ್ತ್ರೀವಾದ, ಪ್ರಗತಿಪರತೆ, ಸಮಾನತೆ ಎಂಬ ಪರಿಕಲ್ಪನೆಗಳನ್ನೂ ತಿಳಿಯದ ಎಷ್ಟೋ ಪುರುಷರೂ ಸ್ತ್ರೀ ಸಂವೇದನೆಯ ಹೆಗ್ಗುರುತುಗಳು ಎನ್ನಲಾದ ಪೊರೆಯುವಿಕೆ, ಕಾಳಜಿ, ಆರೈಕೆ, ಸ್ನೇಹ, ತ್ಯಾಗ, ಪರಾನುಭೂತಿ ಎಂಬ ಲಕ್ಷಣಗಳನ್ನು ತೋರುವುದಿದೆ. ಹಾಗೆಯೇ ಈ ಯಾವ ಪರಿಕಲ್ಪನೆಗಳ ತಿಳಿವೂ ಇಲ್ಲದ ಎಷ್ಟೋ ಮಹಿಳೆಯರು ಧೈರ್ಯ, ಸಾಹಸ, ತರ್ಕ, ಮುನ್ನುಗ್ಗುವಿಕೆ, ಆಕ್ರಮಣಶೀಲತೆ, ಅಹಮಿಕೆ ಎಂಬ ಪುರುಷ ಸಂವೇದನೆಗಳನ್ನು ತೋರುವುದಿದೆ. ಸ್ತ್ರೀವಾದೀ ಚಿಂತನೆಗಳ, ಹೋರಾಟಗಳ ಭಾಗವಾಗಿ ನಿಂತು ಲಿಂಗತ್ವ ಸಮಾನತೆಯನ್ನು ಬೆಂಬಲಿಸಿದ ಪುರುಷರೂ ಇದ್ದಾರೆ. ಈ ಪುರುಷರು, ಸಾರ್ವಜನಿಕ ವಲಯದ ಸಂಗತಿಗಳಾದ ದುಡಿಮೆಯ ವಲಯದಲ್ಲಿ ಸಮಾನ ಅವಕಾಶಗಳು, ಸಮಾನ ವೇತನ, ಶಿಶುಪಾಲನೆಯ ಅಗತ್ಯಗಳಿಗಾಗಿ ತಾಯಂದಿರಿಗೆ ಹೆರಿಗೆ, ಬಾಣಂತಿತನದ ಅವಧಿಗೆ ರಜೆ, ಮುಂತಾದ ಕಾರಣಗಳಿಗಾಗಿ ಸ್ತ್ರೀವಾದಿಗಳು ನಡೆಸಿದ ಹೋರಾಟಗಳಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದೂ ನಿಜವೇ. ಇನ್ನೂ

ಮುಂದುವರೆದು ಮಹಿಳಾ ಸ್ವಾತಂತ್ರ್ಯ, ಮಹಿಳಾ ಹಕ್ಕುಗಳು ಎಂಬ ಹೋರಾಟಗಳನ್ನೂ ಪ್ರಾಮಾಣಿಕವಾಗಿ ಬೆಂಬಲಿಸಿದ್ದಾರೆ. ಈ ಗಂಡಸರು ತಮ್ಮ ಮನೆಗಳಲ್ಲೂ ಮನೆಗೆಲಸ, ಅಡಿಗೆ ಮಾಡುವ, ಪಾತ್ರೆ ತೊಳೆಯುವ, ಬಟ್ಟೆಬರೆ ಒಗೆದು ಸ್ವಚ್ಛ ಮಾಡುವ ಕೆಲಸಗಳನ್ನು ವಹಿಸಿಕೊಂಡಿದ್ದಾರೆ. ಮಾತ್ರವಲ್ಲ ಹೆಣ್ಣಿಗಷ್ಟೇ ಸೀಮಿತ ಎನಿಸುವ ಶಿಶುಪಾಲನೆಯಲ್ಲೂ ನೆರವಾಗುತ್ತಾರೆ. ಅಗತ್ಯ ಬಿದ್ದರೆ ಇಷ್ಟೆಲ್ಲ ಕೆಲಸವನ್ನೂ ಒಬ್ಬರೇ ವಹಿಸಿಕೊಂಡು, ಹೆಂಡತಿಯ ವೃತ್ತಿಪರತೆಗೆ ಬೆಂಬಲವಾಗಿ ನಿಂತವರೂ ಇದ್ದಾರೆ. ಹೌಸ್ ವೈಫ್ ಜಾಗದಲ್ಲಿ ಹೌಸ್ ಹಸ್ಬೆಂಡ್ ಎನಿಸುವುದನ್ನು ಸ್ವೀಕರಿಸಿದವರಿದ್ದಾರೆ.

ಆದರೆ, ಮಹಿಳಾ ಸಮಾನತೆಗೆ ಅವರ ಬೆಂಬಲ ಇಷ್ಟಕ್ಕೆ ನಿಲುಗಡೆಗೊಳ್ಳುತ್ತದೆ. ಅವಳು ಇದರಿಂದಾಚೆಗೂ ಒಂದು ಮುಖ್ಯ ಸಮಸ್ಯೆಯಲ್ಲಿ ಇದ್ದಾಳೆ. ಅವಳಿಗೆ ಲೈಂಗಿಕ ಸ್ವಾತಂತ್ರ್ಯದ ಅಗತ್ಯವಿದೆ. ಅವಳು ಈಗಿರುವಂತೆ ಲೈಂಗಿಕವಾಗಿ ಸಕ್ರಿಯವಾಗಿಲ್ಲ. ಬದಲಿಗೆ ಪುರುಷನ ಲೈಂಗಿಕ ಅಗತ್ಯಕ್ಕೆ ಒದಗಿಬರುವ ಆಟಿಕೆಯಾಗಿ ಉಳಿದಿದ್ದಾಳೆ. ಹಾಗಾಗಿ, ಅವಳ ಅಗತ್ಯಗಳು, ಆಸೆಗಳು ಎಂದೂ ಪೂರೈಕೆಗೊಳ್ಳಲಾರವು. ಸ್ತ್ರೀವಾದವು ಹೆಣ್ಣಿನ ಈ ಮೂಲಭೂತ ಸ್ವಾತಂತ್ರ್ಯಕ್ಕಾಗಿ ಹೋರಾಟವನ್ನೇ ಕೈಗೊಳ್ಳಬೇಕಾಯಿತು. ಆದರೆ, ಸಾಮಾನ್ಯ ಉದಾರವಾದೀ ಪುರುಷರೇ ಆಗಲಿ, ಅಥವಾ ಸ್ತ್ರೀವಾದವನ್ನು ಬೆಂಬಲಿಸುವ ಪುರುಷರೇ ಆಗಲಿ, ಹೆಣ್ಣಿನ ಲೈಂಗಿಕ ಸ್ವಾತಂತ್ರ್ಯದ ಮಾತಿಗೆ ಒಪ್ಪಿಗೆ ಕೊಡುವುದಿಲ್ಲ. ಲೈಂಗಿಕ ಸ್ವಾತಂತ್ರ್ಯಕ್ಕಾಗಿ ಸ್ತ್ರೀವಾದಿಗಳು ಹೋರಾಟಗಳನ್ನು ರೂಪಿಸಿದರು. ಈವರೆಗೂ ಅವರಿಗೆ ಬೆಂಲವಾಗಿಯೇ ಇದ್ದ ಪುರುಷರಿಗೆ ಇದು ಇಷ್ಟವಾಗಲಿಲ್ಲ. ಆ ಸಮಯದಲ್ಲಿ ಈ ಪುರುಷರು ಹೇಗೆ ನಡೆದುಕೊಂಡರು ಎಂಬುದನ್ನು ದಾಖಲಿಸಿರುವ ಸ್ತ್ರೀವಾದೀ ಅನುಭವ ಕಥನಗಳು ಸಾಕಷ್ಟು ಇವೆ. ಭಿನ್ನಲಿಂಗೀ ಲೈಂಗಿಕತೆಯ ಸಂಬಂಧಗಳಲ್ಲಿ ಮಾತ್ರವೇ ಅಲ್ಲ, ಲೆಸ್ಬಿಯಾನ್ ಸಂಬಂಧಗಳಲ್ಲಿಯೂ ಹೆಣ್ಣಿನ ಲೈಂಗಿಕ ಸ್ವಾತಂತ್ರ್ಯವನ್ನು ಒಪ್ಪುವುದಿಲ್ಲ. ಪುರುಷರು ತಮ್ಮ ಮಲಗು ಕೋಣೆಗಳಲ್ಲಿ ಹೆಣ್ಣನ್ನು ಆಕ್ರಮಿಸಿ ಆಳದಿದ್ದರೆ ತಮ್ಮ ಗಂಡಸುತನಕ್ಕೇ ಅವಮಾನ ಎಂದು ತಿಳಿಯಬೇಕು ಎಂದು ಹೇಳುವ ಪಿತೃಪ್ರಧಾನತೆಯ ಪಾಠವನ್ನು ಮರೆಯಲಾರದೆ ಉಳಿದಿದ್ದಾರೆ. ಅಲ್ಲಿ ಸ್ವಾತಂತ್ರ್ಯದ ವ್ಯಾಖ್ಯಾನವೇ ಬೇರೆಯಾಗುತ್ತದೆ. 'ಸುಖೀ ಸಂಸಾರ' ಎಂಬ ದಾಂಪತ್ಯಗಳಲ್ಲಿಯೂ ಆಕ್ರಮಣವು ಸೌಮ್ಯ ವೇಷವನ್ನು ಧರಿಸಿ ಮೆರೆಯುತ್ತದೆ. ಈ ಪಾಠಕ್ಕೆ ಮಹಿಳೆಯರೇ ಎಷ್ಟುಮಟ್ಟಿಗೆ ಒಗ್ಗಿಹೋಗಿದ್ದಾರೆ ಎಂದರೆ, ಆಕ್ರಮಣ ಮಾಡದ ಗಂಡಸನ್ನು ಕೈಲಾಗದವನು ಎಂದುಕೊಳ್ಳುತ್ತಾರೆ. ಇನ್ನೂ ವಿಚಿತ್ರವೆಂದರೆ ತಮ್ಮ ಮೇಲಿನ ಆಕ್ರಮಣವನ್ನೇ ತಮ್ಮ ಲೈಂಗಿಕ ಸಂತೃಪ್ತಿ ಎಂದು ಭ್ರಮಿಸಿ, ಅದಕ್ಕೆ ಸಹಕರಿಸುತ್ತಾ ಆನಂದವನ್ನು ನಟಿಸುತ್ತಾರೆ. ಹೆಣ್ಣು ಗಂಡುಗಳ ಲೈಂಗಿಕ ಅಗತ್ಯಗಳಲ್ಲಿ ಯಾರದಕ್ಕೆ ಪ್ರಾಧಾನ್ಯತೆ, ಪ್ರಾಶಸ್ತ್ಯ ದೊರೆಯುತ್ತದೆ ಎಂಬುದನ್ನು ಗಮನಿಸಿ. ಅವನ ಆಳುವಿಕೆಗೆ ಅವಳ ಸಹಕಾರ ಎಂಬುದೇ ಇಬ್ಬರ ಪಾಲಿಗೂ ಸಂವೇದನೆಯ ಸಂತೃಪ್ತಿ, ಆನಂದ ಎಂದು ತೀರ್ಮಾನವಾಗುತ್ತದೆ.

ಹೆಣ್ಣು ಜೀವಗಳು, 'ಸ್ತ್ರೀ ಸಂವೇದನೆಯ' ನಿಜವಾದ ಅರ್ಥವನ್ನು, ಅದರ ಅನುಭವವನ್ನು ಗುರುತಿಸುವ ಸಾಮರ್ಥ್ಯವನ್ನೇ ಕಳೆದುಕೊಂಡಿದ್ದಾರೆ. ಅವರ ಭಾವನಾ ಲೋಕವು ಗೊಂದಲಗಳಲ್ಲಿ ಸಿಲುಕಿ ತೊಳಲಾಡುತ್ತಿದೆ. ಸಂಬಂಧಗಳಲ್ಲಿ ತಮ್ಮ ತೃಪ್ತಿ, ಆನಂದಗಳನ್ನು ಕಾಣಲು ಅವರಿಗೆ ಸಾಧ್ಯವೇ ಆಗಿಲ್ಲ. ತನ್ನನ್ನು ಕಾಪಾಡುವ ಗಂಡ, ಮುದ್ದಾದ ಮಕ್ಕಳು, ಅನುಕೂಲವಾದ ಮನೆ ಎಂಬ ಎಲ್ಲವೂ ಇದ್ದರೂ ಗೃಹಿಣಿಯು ಯಾವುದೋ ಗುರುತಿಸಲಾಗದ ರೋಗಲಕ್ಷಣಗಳಿಗೆ ತುತ್ತಾಗುತ್ತಾಳೆ ಎಂದು ಹೆಸರಾಂತ ಸ್ತ್ರೀವಾದಿ ಜೆರಾಲ್ಡಿನ್ ಫೋರ್ಬ್ಸ್ ಹೇಳಿದ್ದು (Feminine Mystique ಎಂಬ ಕೃತಿ) ಇದನ್ನೇ. ಮಹಿಳೆಯರು ತಮ್ಮ ಈ ರೋಗಲಕ್ಷಣಗಳನ್ನು ಗುರುತಿಸಿಕೊಳ್ಳಲು, ಸೂಕ್ತ ಪರಿಹಾರವನ್ನು ಶೋಧಿಸಿಕೊಳ್ಳುವ ಅಗತ್ಯವಿದೆ. ನಿಜ ಸಂವೇದನೆಗಳನ್ನು ಅನುಭವಿಸುವ ಸಾಮರ್ಥ್ಯವನ್ನು ಕೂಡಿಸಿಕೊಳ್ಳಲು ಇದು ಮಾತ್ರವೇ ದಾರಿಯನ್ನು ತೋರಿಸಬಲ್ಲುದು. ಇದಕ್ಕಾಗಿ ಸ್ತ್ರೀವಾದಿಗಳು ಸ್ತ್ರೀ ಸಂವೇದನೆ ಎಂಬ ಪರಿಕಲ್ಪನೆಯನ್ನೇ ಹೊಸ ಬಗೆಯಲ್ಲಿ ವ್ಯಾಖ್ಯಾನ ಮಾಡುತ್ತಾರೆ. ನಮ್ಮ ಸಂವೇದನೆಯ ನಿಜ ಸ್ವರೂಪವನ್ನು ಗುರುತಿಸುವ ಹಾದಿಯನ್ನೂ ತೋರಿಸುತ್ತಾರೆ.

ಸ್ವ-ಅರಿವು, ಸ್ವ-ಪ್ರೀತಿ ಇಲ್ಲದ ಹೆಣ್ಣಿನ ಸ್ಪಂದನೆಗಳು, ವರ್ತನೆಗಳು ಅವಳನ್ನು ಆಹುತಿ ತೆಗೆದುಕೊಳ್ಳುತ್ತವೆ. ಈ ಸ್ಪಂದನೆಯು ಗೌರಿಯ ಅವತಾರದ್ದೇ ಆದರೂ, ಅಥವಾ ಕಾಳಿಯ ಅವತಾರದ್ದೇ ಆದರೂ, ಅದು ಆತ್ಮಘಾತಕವೇ ಆಗಿ ಪರಿಣಮಿಸುತ್ತದೆ. ಅವಳ ಗೌರಿಯ ವರ್ತನೆಯನ್ನು ಗಂಡುಜಗತ್ತು ಮೆಚ್ಚಿ ಸನ್ಮಾನಿಸುತ್ತದೆ. ಆದರೆ ಅದರಿಂದ ಅವಳಿಗೆ ಅಧೀನತೆಯ ನೆಲೆಯಿಂದ ಬಿಡುಗಡೆ ಸಿಗುತ್ತದೆ ಎಂದೇನಲ್ಲ. ಯಜಮಾನಿಕೆಯು ಔದಾರ್ಯ, ಕರುಣೆಯನ್ನು ತೋರಿಸುತ್ತದೆ ಅಷ್ಟೇ. ಇನ್ನು ಕಾಳಿಯಾಗಿ ನಿಂತವಳನ್ನು ಕುಟುಂಬನಾಶಿನಿ, ಸೂಳೆ, ಮಾಟಗಾತಿ ಎಂದೆಲ್ಲಾ ವಿಕೃತಿಗಳನ್ನೂ ಆರೋಪಿಸಿ ಶಿಕ್ಷಿಸಲಾಗುತ್ತದೆ. ಹಾಗಾದರೆ ಕುಟುಂಬ ಎಂಬುದು ಅವಳದಲ್ಲ ಎಂದಾಯಿತು. ಒಂದು ವೇಳೆ ಈ ಶಿಕ್ಷೆಗೂ ಬಗ್ಗದೆ ಉಳಿಯುವ ಪ್ರಯತ್ನದಲ್ಲಿ ಹೆಣ್ಣು, 'ಹೌದು ನಾನು ಕುಟುಂಬನಾಶಿನಿಯೇ, ನಾನು ಸೂಳೆಯೇ ಏನೀಗ?' ಎಂದು ಸೆಟೆದು ನಿಂತರೆ, ವ್ಯವಸ್ಥೆಯ ತಂತ್ರದಲ್ಲಿ ಅವಳು ಸಮಾಜಬಾಹಿರಳಾಗಿ, ಮಾಟಗಾತಿ, ವಿಚ್ ಎನಿಸಿ ನೀರುನಿಡಿಗೂ ಗತಿ ಇಲ್ಲದೆ ನಾಶವಾಗುತ್ತಾಳೆ.

ಉದಾಹರಣೆಗೆ, ತ್ರಿವೇಣಿಯವರ 'ಕಾಶಿಯಾತ್ರೆ' ಕಾದಂಬರಿಯ ಬಾಲ ವಿಧವೆ ಅಜ್ಜಿಯು ಎಂದಾದರೂ ಒಮ್ಮೆ ಕಾಶೀಯಾತ್ರೆ ಮಾಡಬೇಕು ಎಂದು ಜೀವಮಾನವಿಡೀ ಕೂಡಿಟ್ಟ ಹಣವನ್ನು, ಒಬ್ಬ ಬಡ ಹುಡುಗಿಯ ಮದುವೆಗಾಗಿ ದಾನ ಮಾಡಿಬಿಡುತ್ತಾಳೆ. ಅಜ್ಜಿಯ ಈ ಔದಾರ್ಯವನ್ನು 'ಹೆಣ್ಣಿನ ಸಹಜ ತಾಯಿಗುಣ' ಎಂದು ಹೇಳುತ್ತಾ ಸಮಾಜವು ಮೆಚ್ಚಿ ಹೊಗಳುತ್ತದೆ. ಆದರೆ, ಈ ತಾಯಿಗುಣದ ತ್ಯಾಗವು, ಅಜ್ಜಿಗೆ ಕೊಟ್ಟದ್ದೇನು? ಬದುಕಿನುದ್ದಕ್ಕೂ ಯಾವುದೊಂದು ಸುಖವನ್ನೂ ಕಾಣದ ಅವಳು ಕಂಡಿದ್ದ ಸಣ್ಣದೊಂದು ಆಸೆಯನ್ನು ಕೂಡಾ ಬಿಟ್ಟುಕೊಡಲು ಅವಳನ್ನು ಒತ್ತಾಯಿಸುತ್ತದೆ. ಅವಳ ಯಾವ

ತಪ್ಪಿಗಾಗಿ ಅವಳಿಗೆ ಈ ಶಿಕ್ಷೆ? ಎಂ. ಕೆ. ಇಂದಿರಾ ಅವರ ಫಣಿಯಮ್ಮ ಕಾದಂಬರಿಯ ಬಾಲವಿಧವೆ ಫಣಿಯಮ್ಮ. ಎಂಟು ವರ್ಷದ ಎಳೆಯ ಬಾಲಕಿ. ಕೇಶಮುಂಡನ, ಬಿಳಿಸೀರೆ, ಪೂಜೆ ವ್ರತನಿಯಮಗಳಿಗೆ ಎದುರಾಡುವ ಮಾತೇ ಇಲ್ಲ. ಆದರೆ ಬೆಳೆಯುತ್ತಾ ಅವಳಿಗೂ, ಈ ಲೋಕದಲ್ಲಿ ಪುರುಷರಿಗೊಂದು, ಮಹಿಳೆಯರಿಗೊಂದು ಎಂಬ ನ್ಯಾಯವೇ ಇರುವುದು ಎಂಬುದು ಕಾಣುತ್ತಿದೆ. ಈ ಹೊಸ ತಿಳಿವಿಗೆ ತಕ್ಕಂತೆ ಅವಳೀಗ, ತನಗಿಂತಲೂ ಕಿರಿಯ ಹೆಣ್ಣುಗಳಿಗೆ ಕೈಲಾದ ಸಹಾಯ ಮಾಡುತ್ತಾಳೆ, ಸಮಾಜವು ಹೇರಿರುವ ನೈತಿಕ ಕಟ್ಟುಪಾಡುಗಳನ್ನು ಮೀರುವ ಧೈರ್ಯದ ದಾಕ್ಷಾಯಣಿಯ ಪರವಾಗಿ ಮಾತಾಡುತ್ತಾಳೆ. ಅವಳ ಕೇಶಮುಂಡನದ ಸಂದರ್ಭದಲ್ಲಿ, ಮೈದುನನೊಂದಿಗೆ ಸಂಬಂಧದಿಂದಾಗಿ ಆದ ಬಸಿರನ್ನು ಉಳಿಸಿಕೊಳ್ಳುವ ಅವಳ ನಿಲುವನ್ನು ಸಮರ್ಥಿಸಿ ಮಾತಾಡುತ್ತಾಳೆ. ಅಷ್ಟೇ ಹೊರತು ತನ್ನದೇ ಬದುಕಿನ ಬಗ್ಗೆ ಇಂಥಾ ಯಾವುದೇ ನಿರ್ಣಾಯಕವೂ, ಸಕಾರಾತ್ಮಕವೂ ಆದ ಕ್ರಿಯಾಶೀಲತೆಯನ್ನು ತೋರುವುದಿಲ್ಲ. ಒಂಟಿ ಬದುಕನ್ನು ಒಂಟಿಯಾಗಿಯೇ ಮುಗಿಸುತ್ತಾಳೆ. ಕಾಶೀಯಾತ್ರೆಯ ಅಜ್ಜಿಯ ಭಾವನೆ ವರ್ತನೆಗಳನ್ನಾಗಲೀ, ಫಣಿಯಮ್ಮನ ಭಾವನೆ ವರ್ತನೆಗಳನ್ನಾಗಲೀ ಗೌರಿಯ ಅಥವಾ ಕಾಳಿಯ ಗುಣಗಳು ಎಂದು ವಿಂಗಡಿಸಲಾದೀತೇ? ಅವರ ನಿಜ ಸಂವೇದನೆಗಳು ಯಾವುವು? ನೈತಿಕ ಚೌಕಟ್ಟನ್ನೇ ತಮ್ಮ ಸಂವೇದನೆಗಳು ಎಂದು ಅವರು ತಿಳಿಯಬೇಕೇ? ವಾಸ್ತವದ ಮಾತೆಂದರೆ, ಅಜ್ಜಿಯಾಗಲೀ, ಫಣಿಯಮ್ಮನಾಗಲೀ ತಮ್ಮ ನಿಜದ ಸಂವೇದನೆಗಳಿಗೆ ಕಿವಿ ಕೊಡುವುದನ್ನು ಕಲಿತೇ ಇಲ್ಲ. ಅವರಿಗೆ ಹಾಗೊಂದು ಸಂಗತಿ ಇರುತ್ತದೆ ಎಂಬ ಅರಿವು ಕೂಡಾ ಇಲ್ಲ. ಅವರ ವರ್ತನೆಗಳು ಆಯಾ ಕ್ಷಣದಲ್ಲಿ ಉಂಟಾದ ಭಾವತೀವ್ರತೆಗೆ ಅವರು ತೋರಿದ ಪ್ರತಿಕ್ರಿಯೆಗಳು ಮಾತ್ರವೇ ಆಗಿವೆ. ಅದಕ್ಕೆ ಹಿಂದುಮುಂದಿನ ಆಲೋಚನೆಗಳೇನೂ ಇಲ್ಲ. ಹೆಣ್ಣಿನ ಸ್ಥಿರಮಾದರಿ ಪಾತ್ರಗಳಿಂದ ಗಂಡು ಸಮಾಜವು ನಿರೀಕ್ಷಿಸುವುದೂ ಇದನ್ನೇ.

ನಿಜ ಹೇಳಬೇಕೆಂದರೆ, ಹೆಣ್ಣಿನ ನಿಜವಾದ ಭಾವನೆಗಳನ್ನು, ಸ್ಪಂದನೆಗಳನ್ನು, ಪ್ರತಿಕ್ರಿಯೆಗಳನ್ನು ಈ ಪಿತೃಪ್ರಧಾನ ಸಮಾಜವು ತಡೆಹಿಡಿಯುತ್ತದೆ. ಬದಲಿಗೆ ಗಂಡುಜಗತ್ತಿಗೆ, ಅಗತ್ಯಗಳಿಗೆ ಪೂರಕವಾಗಿ ಮಾತ್ರವೇ ಅವು ವರ್ತಿಸಬೇಕು ಎಂಬ ನಿರ್ಬಂಧಗಳನ್ನು ಹಾಕುತ್ತದೆ. ವಿಸ್ಮೃತಿಯಲ್ಲಿ ಉಳಿದುಹೋದ ಹೆಣ್ಣುಗಳು ಇವನ್ನೇ ತಮ್ಮ ಸ್ವಂತದ ಸಂವೇದನೆ ವರ್ತನೆಗಳು ಎಂದು ನಂಬುತ್ತಾರೆ. ಈ ಕಾರಣಗಳಿಂದಾಗಿ ಹೆಣ್ಣಿನ ಭಾವನೆಗಳು, ಸಂವೇದನೆಗಳ ಹಂತಕ್ಕೆ ವಿಕಾಸವನ್ನೇ ಹೊಂದುವುದಿಲ್ಲ. ಬೌದ್ಧಿಕ ಸಾಮರ್ಥ್ಯವನ್ನು ಸ್ಥಗಿತಗೊಳಿಸಿರುವುದರಿಂದ ಈ ಪ್ರಕ್ರಿಯೆಗೆ ಅವಕಾಶವೇ ದೊರೆಯುವುದಿಲ್ಲ. ಅವು ಸಂವೇದನೆಗಳೇ ಇಲ್ಲ ಎಂಬಂತೆ ಉಳಿದುಹೋಗಬಹುದು. ಹಾಗೂ ಒಂದು ವೇಳೆ ಯಾವುದೋ ಸಂದರ್ಭ ಕಾರಣಗಳಲ್ಲಿ ಹೆಣ್ಣಿಗೆ ತನ್ನ ಸಂವೇದನೆಗಳ ಅರಿವು ಬಂದಾಗಲೂ, ಅವನ್ನು ಅಭಿವ್ಯಕ್ತಿಸುವ ಅವಕಾಶವಾಗಲೀ, ಧೈರ್ಯವಾಗಲೀ ಅವಳಿಗೆ ಬರುವುದಿಲ್ಲ. ಮೂರನೆಯ ಒಂದು ಹಂತವೂ ಇದೆ. ಅವಳ ನಿರಂತರ ಪರಿಶ್ರಮದ ಫಲಿತವಾಗಿ ಅವಳು ಅವಕಾಶಗಳನ್ನು ಕಂಡುಕೊಳ್ಳಲು ಸಾಧ್ಯವಾಗಬಹುದು.

ಈ ಮೂರೂ ಹಂತಗಳಲ್ಲಿ, ಅವಳ ಸಂವೇದನೆಗಳ ಅಭಿವ್ಯಕ್ತಿಯು ಭಿನ್ನ ಬಗೆಯವೇ ಆಗಿರುತ್ತವೆ. ಮೊದಲಿನದು ವಿಸ್ಮೃತಿಯ ಹಂತ. ಇಲ್ಲಿ ಅವಳು ಕೇವಲ ಕೀಲಿಕೊಟ್ಟ ಗೊಂಬೆಯಂತೆ ವರ್ತಿಸುತ್ತಾಳೆ. ಎರಡನೆಯದರಲ್ಲಿ, ಅವಳಿಗೆ ತನ್ನ ಪರಿಸ್ಥಿತಿಯ ಅರಿವು ಬಂದರೂ, ಅದನ್ನು ಸೂಕ್ತವಾಗಿ ಅಭಿವ್ಯಕ್ತಿಸುವ ದಾರಿ ತಿಳಿಯದೆ, ಆ ಕ್ಷಣದ ಯಾವುದೋ ಹೊರೆಯನ್ನು ಇಳಿಸಿಕೊಳ್ಳುವ ವರ್ತನೆಗಳನ್ನು ತೋರುತ್ತಾಳೆ. ಹೆಂಗಸರ ಮೌನ, ಅಥವಾ ವಾಚಾಳಿತನ, ಬಿಡುವೇ ಇಲ್ಲದಂತೆ ದುಡಿಯುತ್ತಲೇ ಇದ್ದು ದಣಿಯುವುದು, ಅಥವಾ ಸೋಮಾರಿ ಎಂಬಂತೆ ಯಾವುದರ ಕಡೆಗೂ ಗಮನ ಹರಿಸದೆ ನಿರ್ಲಕ್ಷ್ಯವನ್ನು ತೋರುವುದು, ಎದುರುಬೀಳುವುದು ಎಂದರೆ ಗಯ್ಯಾಳಿಯಾಗಬೇಕು ಎಂದು ತಿಳಿಯುವುದು, ತೀರದ ಕೋಪ, ಅಸಹನೆ, ಆಕ್ರಮಣಕಾರಿ ವರ್ತನೆಗಳನ್ನು ತೋರುವುದು, ಅಲಂಕಾರ, ಮನೆಯ ಒಪ್ಪಓರಣಗಳನ್ನೇ ಗೀಳಾಗಿಸಿಕೊಳ್ಳುವುದು, ಮಾನಸಿಕ ಅಸ್ವಸ್ಥತೆಗೆ ಒಳಗಾಗುವುದು ಮುಂತಾಗಿ ವ್ಯಕ್ತವಾಗುತ್ತವೆ. ಇವೆಲ್ಲವೂ ಒಳಗಿನ ಸಂವೇದನೆಗಳನ್ನು ಅರಿಯದ, ಹುದುಗಿಹೋದ ಆ ಸಂವೇದನೆಗಳಿಗೆ ಹೊರಬರಲು ದಾರಿಗಳಿಲ್ಲದ ಅಸಹಾಯಕತೆಯ ಸಂದರ್ಭಗಳೇ ಆಗಿವೆ. ಸಾಧಾರಣವಾಗಿ ಹೆಂಗಸರು ಹೇಳಲಾಗದ ಒತ್ತಡಗಳಿಗೆ ಸಿಲುಕಿದರೆ, ಅಳುತ್ತಾರೆ, ಅದೇ ಗಂಡಸರು ಇಂಥಾ ಅಸಹಾಯಕತೆಯ ಒತ್ತಡಗಳಲ್ಲಿ ಸಿಕ್ಕಾಗ ಸಿಟ್ಟು, ಆಕ್ರಮಣಗಳನ್ನು ತೋರುತ್ತಾರೆ. ಇಬ್ಬರನ್ನು ಕಾಡುತ್ತಿರುವುದೂ ಪಿತೃಪ್ರಧಾನತೆಯ ತರಬೇತಿಯ ಪಾಠಗಳೇ.

ತನ್ನನ್ನು ತಾನು ಗುರುತಿಸಿಕೊಂಡು, ತನ್ನ ಸಾಮರ್ಥ್ಯಗಳನ್ನು ಒಗ್ಗೂಡಿಸಿಕೊಂಡು, ತನ್ನ ಸಾಧನೆಗೆ ಗೊತ್ತುಗುರಿಗಳನ್ನು ನಿರ್ಧರಿಸುವ ಚೈತನ್ಯವು ಕೂಡದ ಹೊರತು, ಹೆಣ್ಣು ತನ್ನನ್ನು ಆವರಿಸಿರುವ ಈ ಸಾಮಾಜಿಕ ಜಾಲವನ್ನು ಭೇದಿಸಿ ಹೊರಗೆ ಬರಲಾರಳು. ಈ ಚೈತನ್ಯವು ಸ್ವ-ಅರಿವು, ಸ್ವ-ಪ್ರೀತಿಗಳ ಬಲವಿದ್ದಾಗ ಮಾತ್ರವೇ ಗರಿಗೆದರುತ್ತದೆ. ಸ್ವ-ಅರಿವು, ಸ್ವ-ಪ್ರೀತಿಗಳನ್ನು ಜಾಗ್ರತಗೊಳಿಸಬೇಕಾದ ಅಗತ್ಯ, ಅದಕ್ಕೆ ಇರುವ ದಾರಿ, ಹಾಗೂ ತೆಗೆದುಕೊಳ್ಳಬೇಕಾದ ಹೊಣೆಗಾರಿಕೆ... ಎಂಬ ಹಲವು ಸಂಗತಿಗಳನ್ನು ಕಪ್ಪು ಸ್ತ್ರೀವಾದಿ ಬೆಲ್ ಹುಕ್ಸ್ ತನ್ನ Communion: The Female Search for Love ಎಂಬ ಕೃತಿಯಲ್ಲಿ ದೀರ್ಘವಾಗಿ ಚರ್ಚಿಸಿದ್ದಾಳೆ.

ಸಾಧನೆ ಮಾಡುವ ಹೆಣ್ಣಿನ ವಿರುದ್ಧ ಗಂಡುಜಗತ್ತು ಕೆರಳಿ ನಿಲ್ಲುತ್ತದೆ ಎಂಬುದು ನಿರೀಕ್ಷಿತವೇ. ಈ ಆಕ್ರಮಣಕ್ಕೆ ಹೆಣ್ಣು ಸೋಲಬಹುದು, ಹೆದರಿ ಮುಂಚಿನ ಹೊಂದಾಣಿಕೆಯ ಬದುಕಿಗೇ ಮರಳಬಹುದು, ಅಥವಾ ತನ್ನ ಸ್ವಂತಿಕೆಯನ್ನು ಬಿಟ್ಟುಕೊಡದೆ ಪ್ರತಿಭಟಿಸಲೂಬಹುದು. ಆದರೆ ಈ ಪ್ರತಿಭಟನೆಯಿಂದ ಅವಳಿಗೆ ಸಹಜವಾದ ಸಾಮಾಜಿಕ ನ್ಯಾಯ ಸಿಗುತ್ತದೆ ಎಂದೇನೂ ನಿರೀಕ್ಷಿಸಲಾಗದು. ಈ ಸಾಧನೆಗಳಿಗೆ ತೊಡಗಿದ ಹೆಣ್ಣು ಈ ಸಮಾಜದ ಪಾಲಿಗೆ, Sandra Gilbert ಹೇಳುವಂತೆ ಅಟ್ಟವನ್ನೇರಿ ಕುಳಿತ ಹುಚ್ಚಿಯಂತೆ (Mad woman in the Attic) ಕಾಣುತ್ತಾಳೆ. ಅಂದರೆ, ಪ್ರಜ್ಞಾವಂತ ಮಹಿಳೆಯನ್ನು ತಡೆದುಕೊಳ್ಳಲು ಈ ಗಂಡುಜಗತ್ತು ಸಿದ್ಧವಿಲ್ಲ ಎಂಬುದೇ ನಮ್ಮ ಇಂದಿನ ವಾಸ್ತವ. ಈ ಜಗತ್ತಿನಲ್ಲಿ ವಿಸ್ಮೃತಿಯಲ್ಲಿ ಉಳಿಯಲಾರೆ ಎನ್ನುವ ಹೆಣ್ಣು ಹುಚ್ಚಿಯೇ ಆದರೂ ಆಶ್ಚರ್ಯವಿಲ್ಲ.

ಆದರೆ ಮಹಿಳೆಯರ ಈ ಸಮಸ್ಯೆಗೆ ಸೂಕ್ತವಾದ ಒಂದು ಸಲಹೆಯನ್ನು ಬೆಲ್ ಹುಕ್ಸ್ ನೀಡುತ್ತಾಳೆ. ಪಿತೃಪ್ರಧಾನತೆಯ ತಂತ್ರದಲ್ಲಿ ಪುರುಷರಲ್ಲಿ ಸ್ತ್ರೀ ದ್ವೇಷವನ್ನು ಬಿತ್ತಲಾಯಿತು. ಪುರುಷನನ್ನು ಪಡೆಯುವುದೇ ದುಸ್ತರ ಎಂಬ ಸ್ಥಿತಿಯನ್ನು ಮಹಿಳೆಯರಿಗೆ ಕಲಿಸಿಟ್ಟಿದೆ. ಒಬ್ಬ ಪುರುಷನನ್ನು ಪಡೆಯಲು ಹೆಣ್ಣು ಹೆಣ್ಣುಗಳೇ ಪೈಪೋಟಿಗೆ ಬೀಳಬೇಕಾದ ಪರಿಸ್ಥಿತಿಯನ್ನೂ ಸೃಷ್ಟಿಸಿದೆ. ಈ ಮೂಲಕ, ಸ್ತ್ರೀದ್ವೇಷ ಎಂಬುದು ಹೆಣ್ಣು-ಹೆಣ್ಣುಗಳ ನಡುವೆಯೂ ವ್ಯಾಪಿಸುವಂತಹ ತಂತ್ರಗಾರಿಕೆಯನ್ನು ಈ ಸಮಾಜವು ಹೆಣೆದಿಟ್ಟಿದೆ. ಇದರ ಪರಿಣಾಮದಲ್ಲಿ, ಮಹಿಳೆಯರು ಒಂಟಿಯಾಗಿ, ಏಕಾಂಗಿಗಳಾಗಿ ನಿಂತಿದ್ದಾರೆ. ವಾಸ್ತವದಲ್ಲಿ ಇದೇ ನಮ್ಮ ಎಲ್ಲ ಸಮಸ್ಯೆಗಳಿಗೂ ಮೂಲಕಾರಣವಾಗಿದೆ ಎಂದರೂ ಸರಿಯೇ. ನಾವೀಗ ಮೊದಲಿಗೆ ಒಗ್ಗೂಡಿ ನಿಂತು, ಈ ತಂತ್ರಗಾರಿಕೆಯ ಎಳೆಯನ್ನು ಕತ್ತರಿಸಿಹಾಕಬೇಕು. ಒಂದು ಮಹಿಳಾ ಸಮುದಾಯವೆನಿಸಿ ನಿಲ್ಲುವ ಹಾದಿಗಳನ್ನು ಕಂಡುಕೊಳ್ಳಬೇಕು. ಒಂಟಿಯಾಗಿರುವಾಗ ಸಂಘರ್ಷಗಳನ್ನು ಎದುರಿಸುವುದು ಅಸಾಧ್ಯವಾಗುತ್ತದೆ. ಒಗ್ಗೂಡಿ ನಿಂತಾಗ, ಪರಸ್ಪರರ ನೆರವಿಗೆ ಒದಗುತ್ತಾ ಸಂಘರ್ಷಗಳನ್ನು ಎದುರಿಸುವ ಚೈತನ್ಯವು ಕೂಡಿಕೊಳ್ಳುತ್ತದೆ. ಅಲ್ಲಿ ಸೋಲು ಗೆಲುವುಗಳನ್ನು, ಕಷ್ಟ ಸುಖಗಳನ್ನು ಒಟ್ಟುಗೂಡಿಯೇ ಎದುರುಗೊಳ್ಳಬಹುದು. ಇದರಿಂದ ಬದುಕನ್ನು ಎದುರಿಸುವ ಧೈರ್ಯವಷ್ಟೇ ಅಲ್ಲ, ಅದನ್ನು ಸಂಭ್ರಮಿಸುವ ಸಾಧ್ಯತೆಗಳೂ ತೆರೆದುಕೊಳ್ಳುತ್ತವೆ.

ಸ್ತ್ರೀ ಸಂವೇದನೆಯನ್ನು ಕುರಿತ ಇಂದಿನ ಸಂವಾದಗಳು ಮೂಡಿಸಬಹುದಾದ ಅರಿವು, ಮಹಿಳೆಯರಲ್ಲಿ ಮಾತ್ರವೇ ಅಲ್ಲ, ಪುರುಷರಲ್ಲೂ ತಮ್ಮ ನಿಜ ಸಂವೇದನೆಗಳನ್ನು ಗುರುತಿಸಿಕೊಳ್ಳಲು ನೆರವಾಗಲಿ ಎಂದು ಆಶಿಸುತ್ತೇನೆ. ಈ ಅರಿವು ಇಬ್ಬರಲ್ಲೂ ಮೂಡಿದಾಗ, ಇಬ್ಬರ ಅಗೋಚರ ಸಂಕಟಗಳೂ ಕೊನೆಗೊಳ್ಳುತ್ತವೆ. ಪಿತೃಪ್ರಧಾನತೆಯ ರಾಜಕಾರಣದ ಆಟದಲ್ಲಿ, ಮಹಿಳೆಯರೂ, ಪುರುಷರೂ ಪರಸ್ಪರ ಶತ್ರುಗಳೆನಿಸಿ ನಿಂತಿದ್ದಾರೆ. ಆದರೂ, ಇಬ್ಬರೂ ಕೂಡಿಯೇ ಒಂದೆಡೆ ಬದುಕಬೇಕಾದ ಅನಿವಾರ್ಯವಂತೂ ಇಬ್ಬರಿಗೂ ಇದೆ. ಈ ಸಂದಿಗ್ಧದ ಬದುಕು ಇಬ್ಬರಿಗೂ ಬೇಡ. ಪ್ರೀತಿಯ ನಿಜವಾದ ಅರ್ಥವನ್ನು ತಿಳಿದು ಬದುಕುವ ಆನಂದ ಎಲ್ಲರದೂ ಆಗಲಿ ಎಂದು ಹಾರೈಸೋಣ. ಇಂಥಾ ಸಂವೇದನೆಗಳು ನಮ್ಮನ್ನು, ಮುಖ್ಯವಾಗಿ, ನಮ್ಮ ಕಿರಿಯ ತಲೆಮಾರನ್ನು ಪೊರೆಯಲಿ ಎಂದು ಆಶಿಸುತ್ತೇನೆ. ನನ್ನೊಳಗಿನ ಈ ಮಾತುಗಳನ್ನು ಹಂಚಿಕೊಳ್ಳಲು ಅವಕಾಶವನ್ನು ಕಲ್ಪಿಸಿದ ಕನ್ನಡ ಸಾಹಿತ್ಯ ರಂಗದ ಎಲ್ಲ ಬಂಧುಗಳಿಗೂ ನಮಸ್ಕಾರ. ತಾಳ್ಮೆಯಿಂದ ಕೇಳಿಸಿಕೊಂಡ ಎಲ್ಲರಿಗೂ ನನ್ನ ಪ್ರೀತಿಯ ನಮಸ್ಕಾರ. ನಿಮ್ಮೊಂದಿಗಿನ ಸಂವಾದಗಳಲ್ಲಿ, ನಮಗೆ ಈ ವಿಷಯವನ್ನು ಕುರಿತಂತೆ ಇನ್ನಷ್ಟು ಸ್ಪಷ್ಟತೆ ದೊರೆಯುತ್ತದೆ ಎಂದು ನಿರೀಕ್ಷಿಸುತ್ತಾ ಕಾಯುತ್ತೇನೆ.

* * *

# ಬರೆಯಲಾಗದ ಕತೆ

**ಕಾವ್ಯಾ ಕಡಮೆ ನಾಗರಕಟ್ಟೆ**
Bridgewater, New Jersey

*

ಸಂಪಾದಕರು ಕತೆ ಕೇಳಿದ್ದಾರೆ. ಏನಿದು? ದೀಪಾವಳಿಯೇ ಯುಗಾದಿಯೇ? ಇತ್ತೀಚೆಗೆ ಸಂಕ್ರಾಂತಿಯ ವಿಶೇಷ ಸಂಚಿಕೆಯನ್ನೂ ತಯಾರು ಮಾಡುವ ಹುಕಿ ಬಂದಿದೆಯಲ್ಲವೇ ಪತ್ರಿಕೆಯವರಿಗೆ! ಪಾಪ ಅವರ ಕಷ್ಟ ಅವರಿಗೆ. ಸಾಲದ್ದಕ್ಕೆ ಎರಡು ದಿನಗಳ ಡೆಡ್‌ಲೈನು ಬೇರೆ ನೀಡಿದ್ದಾರೆ. ಎರಡು ದಿನಗಳಲ್ಲಿ ಕತೆಯೊಂದನ್ನು ಬರೆಯಬಹುದೇ?

"ಒಂದು ಕತೆ ತಲೆಯಲ್ಲಿದೆ. ಬರೆದು ಕಳಿಸೋದಷ್ಟೇ. ನಿಮಗೆ ಚಿಂತೆ ಬೇಡ" ಅಂತ ಇಮೇಲ್ ಬರೆದು ಮಾತು ಮುಗಿಸಿದೆ. ಸಂಪಾದಕರು ಪ್ರಸನ್ನರಾದರು. ಈಗ ನನಗೆ ಎರಡು ದಿನಗಳ ಗಡುವು ಹೊಸದೇನನ್ನಾದರೂ ಹುಟ್ಟಿಸಲು.

ನನಗೆ ಕತೆ ಬರೆಯುವುದೆಂದರೆ ಥೆರಪಿಯ ಹಾಗೆ. ನ್ಯೂ ಯಾರ್ಕ್ ಹೊರವಲಯದಲ್ಲಿರುವ ಒಂದು ಸಾಫ್ಟ್‌ವೇರ್ ಕಂಪನಿಯಲ್ಲಿ ನಾನು ಕೆಲಸ ಮಾಡುತ್ತೇನೆ. ಕೆಲಸದ ಸುಸ್ತನ್ನೂ ಟ್ರಾಫಿಕ್ ಗದ್ದಲವನ್ನೂ ಹತ್ತಿರದ ಸ್ನೇಹಿತರ್ಯಾರೂ ಇಲ್ಲದಂತೆ ಕಟ್ಟಿಕೊಂಡಿರುವ ನನ್ನಾಳದ ಒಂಟಿತನವನ್ನೂ ದಾಟಲು ನನಗೆ ದಕ್ಕಿರುವ ಹಾಯಿದೋಣಿ ಇದೊಂದೇ.

ತಡರಾತ್ರಿಯ ನೀರವದಲ್ಲಿ ನಾನು ಸದ್ದಾಗದ ಹಾಗೆ ಕಿಟಕಿಯ ಪರದೆ ಮುಚ್ಚಬೇಕು. ಕಿಚನ್ನಿನಿಂದ ಥರ್ಮ್ಸಿನಲ್ಲಿ ತಂದ ಕಾಫಿಯನ್ನು ನಿಧನಿಧಾನಕ್ಕೆ ಪುಟ್ಟ ಕಪ್ಪಿನಲ್ಲಿ ಆರಿಸಿಕೊಳ್ಳಬೇಕು. ಆಗ ನನ್ನ ಕೋಣೆ ಕಾಫಿಯ ಘಮವನ್ನು ತೆಳುವಾಗಿ ಹೊದ್ದುಕೊಳ್ಳುತ್ತದೆ. ನಾನು ಬಹಳ

ಅರ್ಜೆಂಟಿದ್ದರೆ ಕಂಪ್ಯೂಟರನ್ನು ತೆರೆದೋ, ಇಲ್ಲದಿದ್ದರೆ ಎ-ಫೋರ್ ಹಾಳೆಗಳನ್ನು ಪೇರಿಸಿಟ್ಟುಕೊಂಡೋ ಬಾವಿಯ ಜಾರುಗಲ್ಲುಗಳನ್ನು ಅಂಟಂಟು ಕಾಲ್ಗಳಲ್ಲಿ ಮುತುವರ್ಜಿಯಿಂದ ಇಳಿಯುತ್ತಾರಲ್ಲ ಹಾಗೆ ಕಾಫಿಯ ಘಮಲಿನ ಜೊತೆಗೆ ನಿಧನಿಧಾನಕ್ಕೆ ಈ ಅಕ್ಷರಲೋಕದಲ್ಲಿ ಇಳಿಯಬೇಕು. ಖಾಲಿ ಕಾಗದದ ಮುಂದೆ ದೈನ್ಯಳಾಗಿ ಕುಳಿತು, "ನೀನು ಕೊಟ್ಟಷ್ಟನ್ನು ತೆಗೆದುಕೊಳ್ಳುತ್ತೇನೆ" ಅಂತ ಅರಿಕೆ ಮಾಡಿಕೊಳ್ಳಬೇಕು. ಮತ್ತು ಇದನ್ನೆಲ್ಲ ನನ್ನ ಅರಿ ಮಲಗಿದ ಮೇಲೆ ಮಾಡಬೇಕು.

ಅರಿ ನನ್ನ ಇಪ್ಪತ್ತು ವರ್ಷದ ಕೂಸು. ಅವನನ್ನು ಕೂಸು ಎನ್ನದೇ ಇನ್ಹೇಗೆ ಕರೆದರೂ ಸೂಕ್ತವಲ್ಲ ಅಂತಲೇ ನನಗನ್ನಿಸುವುದು. ಈಗ ನಾನು ತೊಟ್ಟಿರುವ ವಸ್ತ್ರದ ಹೆಗಲ ಭಾಗಕ್ಕೆ ಮೂಗಿಟ್ಟರೂ ಅವನ ಬೇಬಿ ಲೋಷನ್ನಿನ ಸಿಹಿ ವಾಸನೆ ಕಾಫಿಯ ಪರಿಮಳವನ್ನೂ ಮೀರಿ ನನ್ನ ಜೀವವನ್ನಾವರಿಸುತ್ತದೆ.

ಅರಿಗೆ ಇಪ್ಪತ್ತು ತುಂಬಿದ್ದರೂ ಈಗಲೂ ನಾನು ಅದೇ ಗುಲಾಬಿ ಬಣ್ಣದ ಶೀಷೆಯಲ್ಲಿ ಬರುವ ಜಾನ್ಸನ್ ಬೇಬಿ ಲೋಷನ್ನನ್ನು ತಡಕಾಡಿಕೊಂಡು ತರುವುದಕ್ಕೂ ಒಂದು ಕಾರಣವಿದೆ. ಮೊದಲ ಬಾರಿಗೆ ಅವನ ಇರವನ್ನು ನನ್ನ ಸ್ಮೃತಿಪಟಲದಲ್ಲಿ ದಾಖಲಿಸಿದ ಪರಿಮಳವದು.

ಅವನು ಹುಟ್ಟಿದ ತಕ್ಷಣ ದಾದಿ ಅವನ ತೂಕವನ್ನು ಪರೀಕ್ಷಿಸಿ, ಕಣ್ಣಿಗೆ ಆಂಟಿಬಯಾಟಿಕ್ ದ್ರವ್ಯವನ್ನು ಲೇಪಿಸಿ ನನ್ನ ಎದೆಯ ಮೇಲಿರಿಸಿದ್ದರೂ ಹೆರಿಗೆಯ ಸುಸ್ತಿನಿಂದ ಆ ಹೊತ್ತು ನನಗೆ ಯಾವ ಅನುಭವವನ್ನೂ ಒಳಗೆಳೆದುಕೊಳ್ಳಲಾಗಿರಲಿಲ್ಲ. ಆದರೆ ಮರುದಿನ ನಾನು ನಿದ್ದೆ ಕಳೆದೆದ್ದ ಮೇಲೆ ನರ್ಸ್ ಆಗಷ್ಟೇ ಸ್ನಾನ ಮಾಡಿಸಿದ ಬೆಚ್ಚಗಿನ ಮಗುವನ್ನು ಸ್ವಾಡಲ್ ಮಡಿಕೆಯ ತಿಳಿನೀಲಿ ವಸ್ತ್ರದಲ್ಲಿ ತಂದು ಮತ್ತೆ ನನ್ನ ಎದೆಗೊರಗಿಸಿದ್ದಳು.

ನಾನಾಗ ಪುಟ್ಟ ಅರಿಯ ನೆತ್ತಿ ಮೂಸಿ "ವ್ಹಾಟ್ ಸ್ಮೆಲ್ಸ್ ಸೋ ಗುಡ್?" ಅಂದಿದ್ದೆ.

"ನಿನ್ನ ಹಾರ್ಮೋನುಗಳ ಪ್ರಭಾವ ಅದು. ಮಗುವನ್ನು ಎತ್ತಿಕೊಳ್ಳಬೇಕು, ಹಾಲೂಡಿಸಬೇಕು ಅಂತ ತಾಯಿಗೆ ಅನ್ನಿಸುವ ಹಾಗೆ ಪ್ರಕೃತಿಯೇ ಆ ಸಿಹಿ ವಾಸನೆಯನ್ನು ತಾಯಿಯ ಮೂಗಿಗೂ, ಮಗುವಿನ ನೆತ್ತಿಗೂ ತಳುಕು ಹಾಕಿರುತ್ತದೆಯಂತೆ."

"ರಿಯಲೀ?"

ಮತ್ತೆ ಮತ್ತೆ ಹಸುಳೆಯ ನೆತ್ತಿ ಮೂಸಿದ್ದೆ. ಹಾ! ಎನ್ನುವಂಥ ದಿವ್ಯ ಪರಿಮಳ. ತೆಂಗಿನೆಣ್ಣೆಯಲ್ಲಿ ಗುಲಾಬಿಯ ಎಸಳುಗಳನ್ನು ನುರಿದು ಗಂಧದೆಣ್ಣೆ ಸೇರಿಸಿ, ಒಂದು ಹನಿ ವೆನಿಲ್ಲಾ ಹನಿಸಿ ತಯಾರಿಸಿದ ಯಾವುದೋ ತೈಲವನ್ನು ಮಗುವಿನ ಮೈಗೆಲ್ಲ ಲೇಪಿಸಿದ ಹಾಗಿತ್ತು. ಅರಿಯ ಮೃದು ಮಧುರ ಬೆರಳುಗಳನ್ನೂ, ಮಾಟವಾದ ದುಂಡುದುಂಡು ಪಾದಗಳನ್ನೂ ಎಳೆದೆಳೆದು ಮೂಸಿದ್ದೆ.

ಅಂದು ಡ್ಯೂಟಿಯ ಮೇಲಿದ್ದ ನರ್ಸ್, "ಇದೇನು ಬೆಕ್ಕು ತನ್ನ ಮರಿಗಳನ್ನ ಮೂಸಿದ ಹಾಗೆ ಮೂಸುತ್ತಿದ್ದೀಯಲ್ಲ. ನಾನು ಅತ್ತ ಹೋದೊಡನೆ ಮಗುವನ್ನು ನೆಕ್ಕಲು ಶುರು ಮಾಡಿದರೂ ಮಾಡುವವಳೇ ನೀನು!" ಅಂತ ಕಿಸಕ್ಕನೆ ನಕ್ಕಿದ್ದಳು. ಜೊತೆಗೆ ಇದೇ

ಪಿಂಕ್ ಬಣ್ಣದ ಬೇಬಿ ಲೋಷನ್ನಿನ ಪುಟ್ಟ ಶೀಷೆಯೊಂದನ್ನು ನನ್ನ ಕೈಗೆ ವರ್ಗಾಯಿಸಿ ಕಣ್ಣು ಮಿಟುಕಿಸಿದ್ದಳು.

ಇಪ್ಪತ್ತು ವರ್ಷಗಳೇ ಕಳೆದಿವೆ ಇದೆಲ್ಲ ಸರಿದು ಹೋಗಿ. ಅರಿ ಮೂರು ತಿಂಗಳಿಗೆ ನನ್ನ ಮುಖ ಗುರುತಿಸಲಿಲ್ಲ, ಆರು ತಿಂಗಳಿಗೆ ಬೆನ್ನ ಮೇಲೆ ಮಗುಚಿ ಬೀಳಲಿಲ್ಲ, ಎಂಟಕ್ಕೆ ಅಂಬೆಗಾಲಿಕ್ಕಿ ಹತ್ತು ತಿಂಗಳಿಗೆ ಸಟಸಟನೆ ಹೆಜ್ಜೆ ಹಾಕಲಿಲ್ಲ. ಒಂದು ದಿನವೂ ಮೊಲೆಯನ್ನು ಜಗ್ಗಿ ಜಗ್ಗಿ ಹಾಲು ಕುಡಿಯಲಿಲ್ಲ ಅವನು. ಹುಟ್ಟಿ ಇಪ್ಪತ್ನಾಲ್ಕು ಘಂಟೆಗಳಾದರೂ ಅವನು ಒಂಚೂರೂ ಹಸಿವಿನ ಲಕ್ಷಣವನ್ನು ತೋರ್ಪಡಿಸದಿದ್ದಾಗ ಚೆಕ್-ಅಪ್‌ಗೆ ಬಂದ ಡಾಕ್ಟರರು ನಗೆಯಾಡಿದ್ದರು.

"ಕೆಲವು ಮಕ್ಕಳು ಹಾಗೇ, ಬುದ್ಧನ ಸಂತೃಪ್ತಿಯನ್ನು ಧರಿಸಿಯೇ ಹುಟ್ಟಿರುತ್ತವೆ. ಹಸಿವೆಯೂ ಇಲ್ಲ, ಎಂಥದೂ ಇಲ್ಲ. ಇಲ್ಲೇ ಪಕ್ಕದ ವಾರ್ಡಿನಲ್ಲಿ ನೋಡಬೇಕಿತ್ತು ನೀವು. ಎತ್ತಿ ತಾಯಿಯ ಎದೆಗೆ ಆನಿಸಿದೊಡನೆ ನವಜಾತ ಶಿಶು ಮಾಡಿದ ಮೊದಲ ಕೆಲಸವೆಂದರೆ ತಾಯಿಯ ನಿಪ್ಪಲ್ ಹುಡುಕಿದ್ದು. ನೀವೇನೂ ಚಿಂತೆ ಮಾಡಬೇಡಿ. ಮೊದಲು ಸ್ವಲ್ಪ ದಿನ ಹಾಲನ್ನು ಪಂಪ್ ಮಾಡಿ ಬಾಟಲಿಯಲ್ಲಿ ಕೊಡಿ" ಅಂತ ಸಮಾಧಾನಿಸಿದ್ದರು.

ತೂಕದಲ್ಲೂ ಎತ್ತರದಲ್ಲೂ ತಲೆಯ ಸುತ್ತಳತೆಯಲ್ಲೂ ಸಹಜವಾಗಿದ್ದ ಅರಿ ಏನು ಮಾಡಿದರೂ ಹಾಲನ್ನೊಂದು ಕುಡಿಯಲೊಲ್ಲನಾಗಿದ್ದ, ಬಾಟಲಿಯನ್ನು ಬಾಯಿಗಿಟ್ಟರೂ. ಕಡೆಗೆ ಅವನ ಮುಖವನ್ನು ನಲವತ್ತೆಂಟು ಡಿಗ್ರಿ ಕೋನದಲ್ಲಿ ಹಿಡಿದು ಒಂದೊಂದೇ ಹನಿಯನ್ನು ಬಟ್ಟೆಗಂಟಿಸಿ ಹಿಂಡಿ ಗಂಟಲಿನೊಳಗೆ ಹನಿಸಬೇಕಾಯ್ತು. ಆಗಲೂ, "ಆಹಾ, ಇವನ ಧಿಮಾಕು ನೋಡು. ಮಾಡಿಸಿಕೋ ಮಾಡಿಸಿಕೋ ನಿಮ್ಮಮ್ಮನ ಹತ್ತಿರ ಸೇವೆ" ಅಂತ ಮೂರೂ ಶಿಫ್ಟುಗಳಲ್ಲಿ ಬರುವ ನರ್ಸುಗಳು ಅವನಿಗೆ ಮುದ್ದು ಮಾಡುವವರೇ.

ಮೊದಮೊದಲ ತಿಂಗಳುಗಳಲ್ಲಿ ವೈದ್ಯಕೀಯವಾಗಿ ಗುರುತಿಸುವ ಮೈಲುಗಲ್ಲುಗಳನ್ನು ಅರಿ ಕಾಲಕಾಲಕ್ಕೆ ದಾಟದಿದ್ದಾಗಲೂ ಡಾಕ್ಟರುಗಳು ಧೈರ್ಯವನ್ನೇ ತುಂಬಿದ್ದರು.

"ತಾಳ್ಮೆಯಿರಲಿ. ಎಲ್ಲ ಮಕ್ಕಳೂ ಅವರವರದೇ ವೇಗದಲ್ಲಿ ಬೆಳೆಯುತ್ತಾರೆ. ಅವರದೇ ಸಿಹಿ ಸಮಯವನ್ನು ತೆಗೆದುಕೊಳ್ತಾರೆ. ನೀವು ನಿಶ್ಚಿಂತೆಯಿಂದಿರಿ. ಎಂಜಾಯ್ ವೈಲ್ ಇಟ್ ಲಾಸ್ಟ್ಸ್. ಕಣ್ಣು ಮುಚ್ಚಿ ತೆರೆಯುವುದರಲ್ಲಿ ಹೈಸ್ಕೂಲು ಮುಗಿಸಿಬಿಟ್ಟಿರ್ತಾರೆ ಅವರು" ಅಂತ ಭರವಸೆ ನೀಡಿದ್ದರು.

ಆದರೆ ಏಳು ತಿಂಗಳಾದರೂ ಅರಿ ಗೋಣು ಎತ್ತದಿದ್ದಾಗ, ಗಾಢ ಬಣ್ಣಗಳನ್ನು ಮುಖಕ್ಕೆ ಹಿಡಿದರೂ ದಿಟ್ಟಿಸಿ ನೋಡದೇ ತಲೆ ಅಡ್ಡ ಹಾಕಿ ಎತ್ತಲೋ ನೋಡುವಾಗ ಡಾಕ್ಟರರು ಎಚ್ಚೆತ್ತುಕೊಂಡರು. ಸಣ್ಣಾಸ್ಪತ್ರೆಯಿಂದ ದೊಡ್ಡಾಸ್ಪತ್ರೆಗೆ ಹೋಗಬೇಕಾಯಿತು. ಪೀಡಿಯಾಟ್ರಿಶಿಯನ್‌ಗಳಿಂದ ತೇರ್ಗಡೆ ಹೊಂದಿ ಸ್ಪೆಷಲಿಸ್ಟುಗಳನ್ನು ಕಾಣಬೇಕಾಯ್ತು. ಹತ್ತಾರು ಟೆಸ್ಟ್‌ಗಳು, ಬ್ಲಡ್ ರಿಪೋರ್ಟುಗಳು, ಎಂಆರ್‌ಐ ಸ್ಕ್ಯಾನುಗಳೆಂಬ ಹಿಂಸೆಯನ್ನು ಹಾಯ್ದು ಬರಬೇಕಾಯ್ತು. ಡಾಕ್ಟರುಗಳೇ ಸೇರಿ ನಡೆಸುವ ಮೀಟಿಂಗುಗಳಲ್ಲೂ ಕೂರಬೇಕಾಯ್ತು.

ಅರಿ ದೈಹಿಕವಾಗಿ ಆರೋಗ್ಯವಾಗಿಯೇ ಇದ್ದ. ಆದರೆ ಯಾವುದಕ್ಕೂ ಪ್ರತಿಕ್ರಿಯಿಸುತ್ತಿರಲಿಲ್ಲ. ಮೊದಲ ಸಲ ನನ್ನ ಎದೆಯ ಮೇಲೆ ಇರಿಸಿದಾಗ ಹೇಗೆ ನಿರ್ಲಿಪ್ತನಾಗಿದ್ದನೋ, ಒಂದು ವರ್ಷ ತುಂಬಿದ ಮೇಲೆಯೂ ಹಾಗೇ, ಎರಡು ವರ್ಷಕ್ಕೂ ಹಾಗೇ. ಎಲ್ಲ ಆಹಾರವನ್ನೂ ದ್ರವ ರೂಪದಲ್ಲಿಯೇ ಅರೆದು ಅವನ ಗಂಟಲೊಳಗೆ ಸುರಿಯಬೇಕಿತ್ತು. ಒಮ್ಮೊಮ್ಮೆ ನನಗೆ ಗೊತ್ತಾಗದೇ ಹೆಚ್ಚು ತಿನ್ನಿಸಿದಾಗ ತಿಂದದ್ದೆಲ್ಲವನ್ನೂ ಕಕ್ಕಿಬಿಡುತ್ತಿದ್ದ. ಎಷ್ಟನ್ನು ತಿನ್ನಬೇಕು, ಎಲ್ಲಿಗೆ ಸಾಕು ಮಾಡಬೇಕು ಎಂಬ ಸಹಜ ಅರಿವು ಮೂಡಿರಲಿಲ್ಲ. ದವಡೆಗಳ ಮೇಲೆಯೂ ಹಿಡಿತ ಬಂದಿರಲಿಲ್ಲ.

"ಈ ಕೇಸು ಆಟಿಸಂ ಸ್ಪೆಕ್ಟ್ರಂನಲ್ಲಿ ಬರಬಹುದೇ?" ಎಂಬ ಡಾಕ್ಟರೊಬ್ಬರ ಪ್ರಶ್ನೆಗೆ ಇನ್ನೊಬ್ಬ ಡಾಕ್ಟರರು ತಲೆಯಾಡಿಸಿದ್ದರು.

"ಅನುವಂಶಿಕತೆಯೇ ಮೂಲವಾಗಿದ್ದರೂ ಆಟಿಸಂ ಮುಖ್ಯವಾಗಿ ನರಮಂಡಲದ ಬೆಳವಣಿಗೆಯಲ್ಲಿನ ನ್ಯೂನತೆ. ಆಟಿಸಂನ ಪರಿಣಾಮದಿಂದ ಪೇಷಂಟಿನ ನಡವಳಿಕೆಯಲ್ಲಿ ವಿವಿಧ ರೀತಿಯ ವ್ಯತ್ಯಾಸಗಳು ಕಂಡುಬರುತ್ತವೆ. ಆದರೆ ಈ ಮಗುವಿನ ಕೇಸಿನಲ್ಲಿ ಹೆಚ್ಚಿನದ್ದೇನೋ ಇದೆ ಅಂತ ನನಗನ್ನಿಸೋದು."

ಅವರು ಮಾತನಾಡುತ್ತಿರುವಾಗಲೇ ನನ್ನ ಮಡಿಲಲ್ಲಿದ್ದ ಅರಿ ಗೋಣು ಅಡ್ಡ ಹಾಕಿ ಸ್ವಾಧೀನ ತಪ್ಪಿಬಿಟ್ಟ. ತಕ್ಷಣ ಅವನನ್ನು ತುರ್ತು ಘಟಕಕ್ಕೆ ದಾಖಲಿಸಲಾಯಿತು, ಇಸಿಜಿ ಟೆಸ್ಟಿಗೆ ಅಣಿಗೊಳಿಸಲಾಯಿತು. ಆಗ ತಿಳಿದಿದ್ದೆಂದರೆ ಘಂಟೆಗೆರಡು ಸಾರಿ ಹೃದಯದಿಂದ ಮಿದುಳಿಗೆ ರಕ್ತ ಸಂಚಲನ ನಿಂತು ಅವನಿಗೆ ಅಪಸ್ಮಾರ ಸಂಭವಿಸುತ್ತಿತ್ತು. ಕಣ್ರೆಪ್ಪೆಗಳನ್ನು ಕ್ಷಣ ತಟಸ್ಥಗೊಳಿಸುವ ಐ–ಸೀಜರ್‌ಗಳು ಆಗಾಗ ಘಟಿಸುತ್ತಿದ್ದವು. ಡಾಕ್ಟರರು ಇದನ್ನು ಎಪಿಲೆಪ್ಸಿ ಎಂದು ಕರೆದರು.

ಕೂಡಲೆ ಒಂದಿಷ್ಟು ಜೆನೆಟಿಕ್ ಪರೀಕ್ಷೆಗಳನ್ನು ಕೈಗೊಳ್ಳಲಾಯಿತು. ಅಲ್ಲಿ ಉತ್ತರವಿತ್ತು. ಆದರೆ ಆ ಉತ್ತರಕ್ಕೊಂದು ಸಮರ್ಪಕತೆ ಇರಲಿಲ್ಲ.

"ನಮ್ಮ ದೇಹದಲ್ಲಿ ಸಹಸ್ರ ಕೋಟಿ ಜೀವಕಣಗಳಿವೆ. ಪ್ರತೀ ಜೀವಕಣದ ಕೇಂದ್ರದಲ್ಲಿ ಒಂದು ಬೀಜಕಣ. ಆ ಬೀಜಕಣದ ಒಳಗೆ ಇಪತ್ಮೂರು ಜೊತೆ ಕ್ರೋಮೋಜೋಮ್‌ಗಳು. ಅಲ್ಲಿ ಸಂಯುಕ್ತವಾಗಿ ವ್ಯವಸ್ಥಿತಗೊಂಡಿರುವ, ನಾವು ಡಿಎನ್‌ಎ ಎಂದು ಕರೆಯುವ ವಂಶವಾಹಿನಿ ಸಾಮಗ್ರಿ. ಈ ಡಿಎನ್‌ಎ ತಂತುಗಳು ಜೀನ್‌ಗಳೆಂಬ ಸಹಸ್ರಾರು ತುಣುಕುಗಳಿಂದ ಮಾಡಲ್ಪಟ್ಟಿರುತ್ತವೆ. ಜೀನ್‌ಗಳ ಕೆಲಸ ನಮ್ಮ ಜೀವ ಕಾರ್ಯ ನಿರ್ವಹಿಸಲು ಬೇಕಾದ ಪ್ರೋಟೀನ್‌ಗಳನ್ನು ತಯಾರಿಸುವುದು. ಈ ರಿಪೋರ್ಟಿನ ಪ್ರಕಾರ, ನಿಮ್ಮ ಮಗನ ಜೀವಕೋಶದಲ್ಲಿರುವ ಆರನೆಯ ಕ್ರೋಮೋಜೋಮ್‌ನಲ್ಲಿ ಅಗತ್ಯವಿರುವಷ್ಟು ಪ್ರೋಟೀನ್‌ಗಳು ಉತ್ಪತ್ತಿಯಾಗುತ್ತಿಲ್ಲ. ಈ ವ್ಯತ್ಯಾಸದಿಂದ ನರತಂತುಗಳ ನಡುವೆ ಸರಿಯಾದ ಸಂವಹನ ಸಾಧ್ಯವಾಗದೇ ಈ ನ್ಯೂನತೆ ಉಂಟಾಗಿದೆ. ಸರಳವಾದ ಪದಗಳಲ್ಲಿ ಹೇಳಬೇಕಾದರೆ, ಇದೊಂದು ಅಪರೂಪದ ಜೆನೆಟಿಕ್ ಡಿಸ್‌ಆರ್ಡರ್" ಅಂದರು.

"ಅಪರೂಪದ್ದು ಎಂದರೆ? ಎಷ್ಟು ಅಪರೂಪದ್ದು?"

"ಆ ಕುರಿತು ಇನ್ನೂ ಸಂಶೋಧನೆ ನಡೆಯಬೇಕಿದೆ. ಒಂದು ಮಾಹಿತಿಯ ಪ್ರಕಾರ ಸುಮಾರು ಹದಿನಾರು ಸಾವಿರದಲ್ಲಿ ಒಂದು ಮಗು ಹೀಗೆ ಜನಿಸುತ್ತದೆ ಅಂತ ಹೇಳಬಹುದು."

"ಅದು ಅಪರೂಪ ಹೇಗಾಗುತ್ತದೆ ಡಾಕ್?"

"ಇದನ್ನು ನಾವು ಸ್ಪೆಕ್ಟ್ರಂ ಡಿಸ್‌ಆರ್ಡರ್ ಅಂತ ಕರೆಯುತ್ತೇವೆ. ಅಂದರೆ ಒಂದು ಕೇಸಿನಿಂದ ಇನ್ನೊಂದು ಕೇಸಿಗೆ ವಿಕಲತೆಯ ಸ್ವರೂಪ ಒಂದೇ ಆಗಿದ್ದರೂ ತೀವ್ರತೆ ಬೇರೆಬೇರೆಯಾಗಿರುತ್ತದೆ. ಹೀಗಾಗಿ ಎಷ್ಟೋ ಕೇಸುಗಳು ರಿಪೋರ್ಟ್ ಆಗದೇ ಹೋಗುವ ಸಾಧ್ಯತೆಯೇ ಹೆಚ್ಚು. ಮೊದಲೇ ಹೇಳಿದ ಹಾಗೆ ಈ ಕುರಿತು ಇನ್ನೂ ಸಂಶೋಧನೆ ನಡೆಯಬೇಕಿದೆ" ಅಂದಿದ್ದರು.

ಸಂಶೋಧನೆ ನಡೆಯಿತು. ನಡೆಯುತ್ತಿದೆ. ಅರಿಯ ಈ ಸ್ಥಿತಿಯನ್ನು 'ಸಿನ್‌ಗ್ಯಾಪ್ ಒನ್' ಎಂಬ ಹೆಸರಿನಿಂದ ವೈದ್ಯಲೋಕ ಕರೆದಾಗಿದೆ. ಎಂದಿನಿಂದಲೂ ತಿರುಗುತ್ತಿರುವ ಗ್ರಹಗಳನ್ನು ಇದು ಬುಧ, ಇದು ಗುರು ಎಂದ ಹಾಗೆ; ಭೂಮಿಯನ್ನೆಲ್ಲ ಸುತ್ತುವರೆದ ಒಂದೇ ಸಮುದ್ರವನ್ನು ಇದು ಪೆಸಿಫಿಕ್, ಇದು ಅಟ್ಲಾಂಟಿಕ್ ಎಂದು ಹೆಸರು ಕೊಟ್ಟ ಹಾಗೆ; ಮನುಷ್ಯ ಲೋಕದ ಅಂತರ್ನದಿಯಲ್ಲಿ ಹರಿಯುತ್ತಿರುವ ಒಂದೇ ದುಃಖವನ್ನು ಬೇರೆ ಬೇರೆ ಹೆಸರಿನಲ್ಲಿ ಕರೆದ ಹಾಗೆಯೇ ಇದೆ– ಅರಿಯ ಈ ವ್ಯಾಧಿಗೊಂದು ನಾಮ ಕೊಟ್ಟಿರುವುದು.

ನಾನು ಮತ್ತು ನನ್ನ ಅರಿ ಹಾಯ್ದು ಬಂದ ಈ ಇಪ್ಪತ್ತೂ ವರ್ಷಗಳನ್ನು ರೈಲಿನ ಬೋಗಿಗಳ ಮುನ್ನಡೆಸುವ ಇಂಜಿನ್ನಿನಂತೆ ಬೇಬಿ ಲೋಷನ್ನಿನ ಈ ವಾಸನೆ ತನ್ನೊಳಗಿಟ್ಟುಕೊಂಡು ಸಲಹುತ್ತಿದೆ, ನಮ್ಮಿಬ್ಬರನ್ನೂ ಮುನ್ನಡೆಸುತ್ತಿದೆ ಅಂತ ಆಳವಾಗಿ ನಂಬಿದ್ದೇನೆ. ಅರಿಯನ್ನು ಅವನ ಕೋಣೆಯಲ್ಲಿ ಮಲಗಿಸಿ ಬಂದ ಅಷ್ಟೂ ದಿನವೂ ನನ್ನ ಹಸ್ತಗಳ ಮೇಲೆ ಈ ಪರಿಮಳವ ಹೊತ್ತು ನಿಂತಿದ್ದೇನೆ.

ಒಮ್ಮೆ ಎರಡೂ ಹಸ್ತಗಳನ್ನು ಕಣ್ಣೊತ್ತಿಕೊಂಡು ದೀರ್ಘವಾಗಿ ಉಸಿರೆಳೆದುಕೊಂಡೆ. ಅದಕ್ಕೆ ಪ್ರತಿಕ್ರಿಯೆಯೆಂಬಂತೆ ಅರಿಯ ಕೋಣೆಯಿಂದ ಕಿಟಾರನೆ ಕಿರುಚಿದ ಸದ್ದು ಬಂತು.

ಸಮಯ ನೋಡಿದರೆ ರಾತ್ರಿ ಒಂದು ಘಂಟೆ. ತಕ್ಷಣ ಎದ್ದು ಓಡುವ ಧಾವಂತವಿದ್ದರೂ ಕ್ಷಣ ಹಾಗೆಯೇ ಕುಳಿತೆ. ಅವನ ಡಾಕ್ಟರ್ ಕೊಟ್ಟ ಸಲಹೆ ಅದು.

ಹತ್ತು ನಿಮಿಷವಾದರೂ ಅಳು ನಿಲ್ಲಿಸದೇ ನಾನೇ ಹೋಗಬೇಕಾಯ್ತು.

"ಏನಾಯ್ತು ಪುಟ್ಟ, ನಿದ್ದೆ ಬರಲಿಲ್ಲೇನು?" ಎನ್ನುತ್ತ ಬಾಗಿಲು ಸರಿಸಿದಾಗಲೇ ಒಳಗೇನು ನಡೆದಿದೆ ಅಂತ ಗೊತ್ತಾಯ್ತು ನನಗೆ. ಆಡುತ್ತಿದ್ದ ಉಸಿರನ್ನು ಗಪ್ಪನೆ ನಿಲ್ಲಿಸಿ, "ಅಯ್ಯೋ ಪೂಪ್ ಮಾಡಿದಿಯೇನು?" ಎಂಬ ಶಬ್ದಗಳು ನನ್ನ ನಾಲಗೆಯಲ್ಲಿ ಮೂಡಿದವು.

ಅರಿ ಎರಡು ದಿನಗಳಿಂದ ಪಾಯಿಖಾನೆಗೆ ಹೋಗಿರಲಿಲ್ಲ. ಅವನದ್ದು ಒಂದೇ ಹಟ. ಕಮೋಡಿನ ಮೇಲೆ ಕೂತು ಮಾಡುವುದಿಲ್ಲ, ಎಂದಿನಂತೆ ಡೈಪರಿನಲ್ಲೇ ಮಾಡುತ್ತೇನೆ ಎಂಬುದು. ಅವನಮ್ಮ ನಾನು. ನನ್ನದೂ ಒಂದೇ ಹಟ. ಡೈಪರ್ ಇರುವುದು ರಾತ್ರಿಗೆ

ಮಾತ್ರ, ಬೆಳಗಿನ ಹೊತ್ತು ಕಮೋಡಿನಲ್ಲೇ ಮಾಡಬೇಕು ಎಂಬುದು. ಅವನೆಷ್ಟು "ಅಫ್... ಅಫ್... ಮ್‌ಮ್ಮಾ..." ಅಂತ ನನ್ನ ಕತ್ತು ಬಳಸಿ ಗೋಗರೆದರೂ ಈ ಬಾರಿ ನಾನು ಕರಗಿರಲಿಲ್ಲ.

"ಏಕೆ ಅಫ್ರೈಡ್ ಆಗುತ್ತದೆ ಪುಟ್ಟಾ? ಅದರಲ್ಲಿ ಭಯಪಡುವಂಥದೇನಿದೆ? ನೋಡು ಬಿಗ್ ಬಾಯ್ ಥರ ಟಾಯ್ಲೆಟ್ಟಿನಲ್ಲೇ ಮಾಡಬೇಕು ಅಲ್ಲೇನು? ಹೊಸಾ ಟಾಯ್ ಕೊಡ್ತೀನಿ ಹಾಗೆ ಮಾಡಿದರೆ" ಅಂತ ಎಷ್ಟೇ ಸಮಾಧಾನ ಹೇಳಿದರೂ ಕಮೋಡಿನ ಗೋಲವನ್ನು ಕಂಡವನೇ ಕಾಲು ಬಡಿಯುತ್ತ ಕುತ್ತಿಗೆಯನ್ನು ಅಡ್ಡಡ್ಡ ಅಲ್ಲಾಡಿಸಿಬಿಟ್ಟಿದ್ದ.

ಈಗ ನೋಡಿದರೆ ನೈಟ್ ಡೈಪರಿನಲ್ಲಿ ಮಾಡಿಕೊಂಡು ಹೀಗೆ ಮೊರೆಯಿಡುತ್ತಿದ್ದಾನೆ.

ಇದು ಎಷ್ಟನೆಯ ಸಾರಿಯೋ ಟಾಯ್ಲೆಟ್ ಟ್ರೇನಿಂಗಿನಲ್ಲಿ ನಪಾಸಾಗಿದ್ದು ನಾವು. "ಗಿವ್ ಹಿಮ್ ಟೈಮ್. ಅವನೇ ತಯಾರಾಗುವತನಕ ತಾಳ್ಮೆಯಿಂದ ಕಾಯಬೇಕು ನೀವು" ಎನ್ನುವ ಬಲ್ಲವರ ಸಲಹೆ ಮೀರಿ ಅಷ್ಟಷ್ಟು ದಿನಕ್ಕೆ ನನಗೆ ಎಲ್ಲಿಲ್ಲದ ಉಮೇದು ಬಂದು ಬಿಡುತ್ತದೆ. ಈ ಬಾರಿ ರೂಢಿ ಮಾಡಿಸಿಯೇ ತೀರುತ್ತೇನೆ ಎಂದು. ಅದು ಪ್ರತಿ ಬಾರಿಯೂ ಇಂಥ ಪ್ರಮಾದದಲ್ಲಿ ಕೊನೆಯಾಗುತ್ತದೆ.

ಅರಿ ಇನ್ನೂ ಗಾಢ ನಿದ್ರೆಯಲ್ಲಿಯೇ ಇದ್ದ. ಮಲಗಿದ್ದಲ್ಲಿಯೇ ಇರುಸುಮುರುಸಾಗಿ ಆಗಾಗ ಚೀರುತ್ತಿದ್ದ. ನಿದ್ರೆಯಲ್ಲಿ ಹಿಡಿತ ತಪ್ಪಿದ ಅವನ ಕೆಳ ದವಡೆಗಳನ್ನೂ, ಹುಬ್ಬೇರಿಸಿ ಮುಚ್ಚಿದ ಅವನ ಕಣ್ಣುಗಳನ್ನೂ, ತುಸು ಚಪ್ಪಟೆಯಾಗಿ ಎದ್ದು ನಿಂತಂತಿರುವ ಅವನ ಕಪೋಲಗಳನ್ನೂ ಕಂಡು ಕೋಣೆಯನ್ನೆಲ್ಲ ಅಡರಿದ ಘಾಟು ವಾಸನೆ ಮೀರಿ ಮುದ್ದು ಉಕ್ಕಿ ಬಂತು. ಗಂಟಲಿನಾಳದಿಂದ "ಇ... ಇ..." ಎಂಬ ಸ್ವರ ಹೊರಡಿಸುತ್ತಿದ್ದ.

"ದ್ಯಾಟ್ಸ್ ಓಕೆ ಪುಟ್ಟಾ. ಈಗ ಕ್ಲೀನ್ ಮಾಡಿಬಿಡ್ತೀನಿ" ಎಂದವಳೇ ಹೊಸ ಅಡಲ್ಟ್ ಡೈಪರನ್ನೂ, ವೆಟ್ ವೈಪ್‌ಗಳನ್ನೂ, ಈ ಕಾರಣಕ್ಕಾಗಿಯೇ ಕೊಂಡ ಘಮಘಮ ಲೇಪಿತ ಡೈಪರ್ ಬ್ಯಾಗ್‌ಗಳನ್ನೂ ತಂದು ಅರಿಯ ಪಜಾಮವನ್ನು ಸಡಿಲಿಸಿದೆ. ಪುಣ್ಯಕ್ಕೆ ಡೈಪರಿನಿಂದ ಆಚೆಗೇನೂ ಬಂದಿರಲಿಲ್ಲ.

ಈಗ ಮೊದಲಿನ ಹಾಗೆ ಸುಲಭವಾಗಿ ಅರಿಯ ಕಾಲುಗಳನ್ನು ಹಿಡಿದೆತ್ತಿ ಸೊಂಟವನ್ನೆಲ್ಲ ಕ್ಲೀನ್ ಮಾಡಲು ಆಗುವುದಿಲ್ಲ ನನಗೆ. ಭಾರವಾಗುತ್ತದೆ. "ಪ್ಲೀಸ್ ಹೆಲ್ಪ್ ಮೀ ಹಿಯರ್ ಅರಿ. ಸೊಂಟ ಸ್ವಲ್ಪ ಎತ್ತು" ಎಂದರೂ ಮತ್ತೆ "ಇ... ಇ..." ಎಂದು ಅಸಮಾಧಾನ ವ್ಯಕ್ತಪಡಿಸಿದ.

ಇರುವುದರಲ್ಲಿಯೇ ಸಾಧ್ಯವಾದಷ್ಟು ಸ್ವಚ್ಛಗೊಳಿಸಿ, ರ‍್ಯಾಶ್ ಆಗದಿರಲು ಡೈಪರ್ ಕ್ರೀಮ್ ಹಾಕಿ ಡೈಪರ್ ತೊಡಿಸಿದೆ. ಮುಂಜಾನೆ ಕ್ಯಾರಲ್ ಬರುವ ಮೊದಲು ಇವನಿಗೆ ಸ್ನಾನ ಮಾಡಿಸಿಯೇ ಆಫೀಸಿಗೆ ಹೋದರಾಯ್ತು ಅಂದುಕೊಂಡೆ.

ಇಪ್ಪತ್ತು ವರ್ಷದ ಯುವಕನ ದೇಹವೇ ಇದು? ಹೈಪೊಟೋನಿಯಾದಿಂದ ದುರ್ಬಲವಾದ ಸ್ನಾಯುಗಳು ಯುವಕನಿಗಿರಬೇಕಾದ ಸಹಜ ದೇಹದಾರ್ಢ್ಯವನ್ನು ಮುಚ್ಚಿಹಾಕಿದ್ದವು. "ಸಿನ್‌ಗ್ಯಾಪ್‌ಒನ್ ಇರುವವರಲ್ಲಿ ಪ್ಯೂಬರ್ಟಿ ಕೂಡ ಬಹು ತಡವಾಗಿ

ಚಿಗುರುತ್ತದೆ. ಯಾವಾಗ ಅಂತ ನಿಖರವಾಗಿ ಹೇಳುವುದು ಕಷ್ಟ" ಎಂದಿದ್ದರು ಅವನ ವೈದ್ಯರು. ಇಪ್ಪತ್ತರ ಹುಡುಗನ ಸಪೂರ ಕೈ ಕಾಲುಗಳನ್ನೂ, ಸೂರ್ಯನನ್ನು ಅಷ್ಟಾಗಿ ಕಾಣದೇ ಬಿಳಿಚಿದ ಮೈಯನ್ನೂ, ರೋಮ ಮೂಡದ ಮೃದು ಚರ್ಮವನ್ನೂ ಒಮ್ಮೆ ನೇವರಿಸುತ್ತೇನೆ. ಅರಿ ಈಗ ಸ್ವಲ್ಪ ಆರಾಮವಾಗಿ ನಿದ್ರಿಸುತ್ತಿದ್ದಾನೆ. "ಗುಡ್ ನೈಟ್ ಬೇಬಿ" ಅಂತ ಅವನ ಹಣೆಗೆ ಮುತ್ತಿಟ್ಟಾಗ, "ಹೂಂ..." ಎಂದವನು ಸಣ್ಣಕೆ ಉಸುರಿ ಹುಬ್ಬನ್ನು ಮತ್ತಷ್ಟು ಮೇಲೇರಿಸಿ ನನ್ನನ್ನು ಬೀಳ್ಕೊಟ್ಟಿದ್ದಾನೆ. ಅವನ ಮೊಗದ ಗೆರೆಗಳು ಪ್ರಶಾಂತವಾಗಿವೆ.

ಯಾಕೋ ಮಲಗಿದನಲ್ಲ ಅನ್ನಿಸಿತು. ಒಮ್ಮೊಮ್ಮೆ ಹೀಗೆ ರಾತ್ರಿ ಎದ್ದು ನಾಲ್ಕಾರು ತಾಸು ಜಾಗರಣೆ ಮಾಡಿಸಿದ್ದೂ ಇದೆ ಅವನು. ಏನು ಮಾಡಿದರೂ ಊಹೂಂ, ನಿದ್ದೆಯೊಂದನ್ನು ಮಾಡುವುದಿಲ್ಲ. ಆಗೆಲ್ಲ ಕಾಲ ಮೇಲೆ ಮಲಗಿಸಿಕೊಂಡು, "ಅಲ್ಲಿ ಒಂದೂರಿದೆ ಅಲ್ಲಿ ದೊರೆಯ ಹಾಗಿರುವೆಯೋ ಕಂದ/ ಹಾದಿಯೊಂದಿದೆ ಅಲ್ಲಿ ಹೂಗಳೇ ಹಾಸಿವೆ ಕಂದ" ಎಂದು ಲಾಲಿ ಹಾಡುತ್ತೇನೆ. "ನೀನು ಚಿಕ್ಕವನಿರುವಾಗ ಏನೆನ್ನುತ್ತಿದ್ದೀ ಗೊತ್ತೇನು? ದೆದ್ದೆದ್ದೆದ್ದೆ ಎನ್ನುತ್ತಿದ್ದೀ" ಹೀಗೆ ಹೀಗೆ ಅಂತ ಯಾವುದೋ ಕಾಲದಲ್ಲಿ ಅವನು ದೈಹಿಕವಾಗಿಯೂ ಮಗುವಾಗಿದ್ದ ದಿನಗಳನ್ನು ನೆನಪಿಸುತ್ತೇನೆ. ಅವನೂ ಅದನ್ನೇ ಅನುಸರಿಸುತ್ತ, ಮಂಡಿಯಲ್ಲಿ ಅಂಬೆಗಾಲಿಕ್ಕಿ ನಡೆದಂತೆ ಆಟವಾಡಿ ತೋರಿಸುತ್ತಾನೆ. ಇದು ಈಗಿರುವುದಕ್ಕಿಂಥ ಚಿಕ್ಕವನ ಹಾಗೆ ನಟನೆ ಮಾಡಿ ನನ್ನನ್ನು ನಗಿಸುವ ಪ್ರಯತ್ನ ಅವನದು. ನಾನೂ ನಕ್ಕು ನಕ್ಕು, "ಏನೋ ಪುಟ್ಟಣ್ಣ ಅದು?" ಎನ್ನುತ್ತೇನೆ. "ಚಿಕ್ಕವನಿದ್ದಾಗ ಎಷ್ಟು ಗುಂಡಗುಂಡಗಿದ್ದೀ ಗೊತ್ತೇನು? ಈಗಲೂ ಚೆನ್ನಾಗಿ ತಿನ್ನಬೇಕಲ್ಲೇನು? ಅಮ್ಮನ್ನ ನೋಡು?" ಅಂದರೆ "ಮೆಮ್ಮೆಮ್ಮೆಮ್ಮೆ" ಅಂತ ನಗುತ್ತ ನನ್ನ ಮುಖಕ್ಕೆ ತಲೆ ಒತ್ತುತ್ತಾನೆ. ಅವನ ಧ್ವನಿ ಇತ್ತೀಚೆಗಷ್ಟೇ ಒಡೆದು ತಾರಕದಿಂದ ಮಂದ್ರಸ್ಥಾಯಿಗೆ ಹೊರಳುತ್ತಿರುವುದನ್ನು ಸಂಭ್ರಮದಿಂದಲೂ, ಆತಂಕದಿಂದಲೂ ಗಮನಿಸುತ್ತೇನೆ.

ನಾನು ಚೂಡಿದಾರ ತೊಟ್ಟರೆ ಬಹಳ ಖುಷಿ ಅವನಿಗೆ. ನನ್ನ ದಾವಣಿಯನ್ನು ತಲೆಯ ಸುತ್ತ ತೊಟ್ಟುಕೊಂಡು ಅಡ್ಡಡ್ಡಕೆ ತೂಗುತ್ತಾನೆ. ನನ್ನ ಹಣೆಯ ಮೇಲೆ ಸಣ್ಣ ಬಿಂದಿಯಿದ್ದರಂತೂ ತೆಗೆದು ತನ್ನ ಹಣೆಗೆ ಹಚ್ಚಿಕೊಳ್ಳುತ್ತಾನೆ. "ಏನೋ ಮರೀ ಅದು ನಿನ್ನ ಕೊಂಗಾಟ?" ಎಂದು ಮುದ್ದು ಮಾಡಿದರೆ ಕೋಣೆಯ ಮೂಲೆಯಲ್ಲಿಟ್ಟ ತನ್ನ ಶೂಗಳನ್ನು ಬೊಟ್ಟು ಮಾಡಿ ತೋರಿಸುತ್ತಾನೆ. ನಡೆಯುವಾಗ ಸೊಂಟ ಮತ್ತು ಮಂಡಿಯ ಎಲುಬುಗಳನ್ನು ಬ್ಯಾಲೆನ್ಸ್ ಮಾಡಲು ಎರಡೂ ಕೈಗಳನ್ನು ಕಿವಿಗಳ ತನಕ ಎತ್ತಿಯೇ ನಡೆಯುತ್ತಾನೆ. ಆಗ ಪುಟಾಣಿ ಕಾಂಗರೂ ಮರಿಯ ಹಾಗೆ ಕಾಣುತ್ತಾನೆ. ಅವನ ಶೂಗಳು ಕೂಡ ಅವನ ನಡಿಗೆಯನ್ನು ಸುಲಭಗೊಳಿಸುವಂತೆ ವಿಶೇಷ ಗ್ರಿಪ್ ಹೊಂದಿವೆ.

"ಮಧ್ಯ ರಾತ್ರಿ ಈಗ. ಈಗೆಲ್ಲಿ ಹೊರಗೆ ಹೋಗುವವನು ನೀನು?" ಅಂದರೆ ತಿರುಗಾಡಲು ಪಾರ್ಕಿಗೆ ಹೋಗೋಣ ಅಂತ ಸನ್ನೆ ಮಾಡುತ್ತಾನೆ. "ಸರಿ, ಮುಂಜಾನೆ ಬೇಗ ಎದ್ದು ಹೋಗೋಣಂತೆ. ಈಗ ಮಲಗು ನೀನು" ಅಂದರೆ ಇಲ್ಲ ನಾನು ಹೋಗುವವನೇ, ಹೋಗುವವನೇ ಎನ್ನುವಂತೆ ತಲೆಯ ಸುತ್ತ ಒಮ್ಮೆ ಕೈ ತಿರುಗಿಸಿ ಸನ್ನೆ ಮಾಡುತ್ತಾನೆ.

ಆಗ, ಆ ಅರೆಕ್ಷಣದಲ್ಲೆಲ್ಲೋ ಅವನ ಹಾವ ಭಾವ ಹಿಂದೆಂದೋ ಬಾಲ್ಯದಲ್ಲಿ ಮಾತ್ರ ಕಂಡ ನನ್ನ ಅಜ್ಜನಂತಿರುವುದು. ಆಗೆಲ್ಲ ಅರಿಯನ್ನು ಸೂಕ್ಷ್ಮವಾಗಿ ಪರಿಶೀಲಿಸಿ ಅರಿಯ ಮೂಗಿನ ಚೂಪು ನನ್ನಮ್ಮನಂತಲ್ಲವೇ, ಹುಬ್ಬಿನ ಗೆರೆ ದೂರದ ಮೌಶಿಯ ಹಾಗೆ ಅಲ್ಲವೇ ಅಂತ ಗಮನಿಸತೊಡಗುತ್ತೇನೆ. ಅಮ್ಮನ ಪ್ರೀತಿಯ ನೋಟವನ್ನು ಗುರುತಿಸಿದ ಅರಿ ಮರಳಿ ಬಂದು ಮಡಿಲಲ್ಲಿ ಮಲಗುತ್ತಾನೆ. ರೈಮ್ಸ್ ಓದಿ ಹೇಳೆಂದು ಪುಟಾಣಿ ಪುಸ್ತಕ ತೋರಿಸುತ್ತಾನೆ. ಮ್...ಮ್ಮಾ ಅಂದು ಕೆನ್ನೆಗೆ ಮುತ್ತಿಡುತ್ತಾನೆ. ನಾನು ರೈಮ್ಸ್‌ಗೆ ತಕ್ಕಂತೆ ಚುಕ್ಕು ತಟ್ಟುತ್ತ ಒಂದೊಂದೇ ಸಾಲು ಓದಿ ಹೇಳುತ್ತೇನೆ.

ಆದರೆ ಇದು ಎಂದಿನಿಂದಲೂ ಹೀಗೆಯೇ ಏನೂ ಇರಲಿಲ್ಲ.

*

ಅರಿ ನನ್ನ ಬದುಕಿನಲ್ಲಿ ಬರುವ ಮೊದಲು ಲೋಕ ತರ್ಕಬದ್ಧವಾಗಿದೆ ಅಂತಲೇ ಭ್ರಮಿಸಿದ್ದೆ. ಓದಿನಲ್ಲಿ ಮುಂದಿದ್ದು ಇಂಜಿನಿಯರಿಂಗ್ ಮುಗಿಸಿದ್ದು, ನಂತರ ಕ್ಯಾಂಪಸ್ಸಿನಲ್ಲಿ ಸೆಲೆಕ್ಟ್ ಆದ ನಾಲ್ಕು ಕಂಪನಿಗಳಲ್ಲಿ ಅತಿ ದೊಡ್ಡ ಸಂಬಳ ತರುವ ನೌಕರಿಯನ್ನು ಆಯ್ದುಕೊಂಡಿದ್ದು, ಕೊಂಕಿಲ್ಲದ ಅಪ್ರೈಸಲ್‌ಗಳು, ಆನ್‌ಸೈಟಿಗಾಗಿ ನ್ಯೂಯಾರ್ಕಿಗೆ ಬಂದು ಇಲ್ಲಿಯೇ ಕೆಲಸ ಬದಲಿಸಿ ನೆಲೆ ನಿಂತಿದ್ದು, ಅಜ್ಞಾತ ಊರಿನಲ್ಲಿ ದೊರಕುವ ಸ್ವಚ್ಛಂದವನ್ನು ಮನಸಾರೆ ಸವಿದಿದ್ದು... ಅಕಾಲದಲ್ಲಿ ಈ ಬಸುರಿನ ಬಗ್ಗೆ ಗೊತ್ತಾದಾಗಲೂ ಅದು ಅಸಹಜ ಅಂತ ಅನ್ನಿಸಿರಲಿಲ್ಲ. ಆ ಅವನು, "ನೀನಂದ್ರೆ ಇಷ್ಟವೇ. ಆದ್ರೆ ಇಷ್ಟು ಬೇಗ ನನಗೆ ತಂದೆಯಾಗಲು ಇಷ್ಟವಿಲ್ಲ" ಅಂತ ಅತ್ತಿದ್ದ. ಆಯ್ಕೆ ಅಂತ ಬಂದಾಗ ಅವನನ್ನೇ ಬಿಡುವುದು ಕೂಡ ತರ್ಕಬದ್ಧವೇ ಆಗಿತ್ತು.

"ಬರೋದೇ ಆದ್ರೆ ಮದುವೆಯಾಗಿ ಬಾ. ಇಂಥ ಮೂಗು ಕುಯ್ಯೋ ಕೆಲಸ ಮಾಡಿಕೊಂಡು ನಿನ್ನ ಮುಖ ತೋರಿಸೋದೇ ಬೇಡ. ನೀನಲ್ಲೇ ಸತ್ತೆ ಅಂದುಕೋತೀವಿ" ಎಂಬ ಮಾತುಗಳಿಂದ ತವರಿನ ಋಣವೂ ಹರಿದುಹೋಗಿತ್ತು.

ಅರಿ ಹೀಗೆ ಅಂತ ಮೊದಲು ಗೊತ್ತಾದಾಗ ಅದರಲ್ಲೂ ತರ್ಕ ಹುಡುಕಲು ಪ್ರಯತ್ನಿಸಿದ್ದೆ. ನನ್ನ ವಾಟರ್ ಬ್ರೇಕ್ ಆಗಿ ಇಪ್ಪತ್ತು ತಾಸುಗಳ ನಂತರ ಹೊರಬಂದವನು ಅವನು. ಅದು ಕಾರಣವಿರಬಹುದೇ? ಬಸಿರಿನ ಮೊದಮೊದಲ ದಿನಗಳಲ್ಲಿ ಗೊತ್ತಾಗದೇ ಸ್ಮೋಕ್ ಮಾಡಿದ್ದನೇ? ವೈನ್ ಕುಡಿದಿದ್ದನೇ? ಆ ಅವನನ್ನು ಹುಡುಕಿಕೊಂಡು ಹೋಗಿ ಕೇಳಿದ್ದೆ. ಅವನ ಕುಟುಂಬದಲ್ಲಿ ಯಾರಿಗಾದರೂ ಹೀಗಿತ್ತೇ ಎಂದು. ಅವನೂ ಇಲ್ಲವೆಂದಿದ್ದ. ಜೊತೆಗೆ ತನ್ನ ಸಂತಾಪವನ್ನೂ ಸೂಚಿಸಿದ್ದ. ಏನಾದರೂ ಕಾರಣ ಇರಲೇಬೇಕಲ್ಲ. ಏನು, ಕಾರಣವೇನು ಅಂತ ಅರಿಯ ವೈದ್ಯರ ಬಳಿ ಅಲವತ್ತುಕೊಂಡಿದ್ದೆ.

"ಗರ್ಭದಲ್ಲಿ ಮೊದಲ ಬಾರಿ ಅಂಡಾಣು ವೀರ್ಯಾಣು ಸೇರಿದಾಗಲೇ ಜೆನೆಟಿಕ್ ಕೋಡ್ ಹಂಚಿಕೆಯಾಗಿಬಿಟ್ಟಿರುತ್ತದೆ. ಇಟ್ ಈಸ್ ಜಸ್ಟ್ ಅ ಮ್ಯಾಟರ್ ಆಫ್ ಚಾನ್ಸ್. ಒಂದು ಸರಳವಾದ ಆಕಸ್ಮಿಕ ಇದು. ಇದಷ್ಟೇ ಏಕೆ, ಆರೋಗ್ಯವಂತ ಮಕ್ಕಳು ಹುಟ್ಟುವುದೂ

ಪ್ಯೂರ್ ಕೋ–ಇನ್ಸಿಡೆನ್ಸ್. ನಿಮಗೆ ನೀವು ಇಷ್ಟು ಹಿಂಸೆ ಕೊಟ್ಟುಕೊಳ್ಳಬೇಡಿ. ಮಗುವನ್ನು ಚೆನ್ನಾಗಿ ಸಾಕಬೇಕಾದರೆ ಇಂಥ ಗಿಲ್ಟ್‌ನೆಲ್ಲ ಬಿಟ್ಟುಬಿಡಬೇಕು ನೀವು" ಅಂತ ಸಮಾಧಾನ ಹೇಳಿದ್ದರು.

"ಆದರೂ ಡಾಕ್, ಏನೂ ಕಾರಣವಿಲ್ಲದೇ ಇಂಥದ್ದು ನಡೆಯುತ್ತದೆಯೇ? ಹೇಗೆ ಇದು?"

ಹಿರಿಯರಾದ ಅವರು ತುಸು ಬಗ್ಗಿ ಕುಳಿತು, "ಇನ್ನೇನು ನೀವೇ ಕಾರಣ ಅಂತ ಹುಡುಕಿಕೊಂಡು ಹೋಗಬೇಕಷ್ಟೇ. ಸಮಾಧಾನ ತಂದುಕೊಳ್ಳಿ. ಬೇಕಿದ್ದರೆ ಮನೋವೈದ್ಯರ ಬಳಿಗೆ ಕೌನ್ಸಿಲಿಂಗ್ ಹೋಗಿ. ಛಲದಿಂದ ಇದನ್ನು ಎದುರಿಸಲು ಧೈರ್ಯ ತಂದುಕೊಳ್ಳಿ. ಪರರ ಬಳಿ ಸಹಾಯ ಕೇಳಲು ಹಿಂಜರಿಯಬೇಡಿ. ಇಂಥ ಮಕ್ಕಳನ್ನು ಕೇರ್ ಮಾಡುವ ಪಾಲಕರದ್ದೇ ಒಂದು ಕಮ್ಯುನಿಟಿ ಇದೆ. ಅವರ ಪರಿಚಯ ಮಾಡಿಕೊಳ್ಳಿ. ಹೋಗುತ್ತ ಹೋಗುತ್ತ ಎಲ್ಲ ಸಹನೀಯವಾಗುತ್ತದೆ" ಎಂದಿದ್ದರು.

ಅರಿ ಸಣ್ಣವನಿರುವಾಗ ಮ್ಯಾನೇಜ್ ಮಾಡುವುದು ಅಷ್ಟೇನೂ ಕಷ್ಟವಾಗಿರಲಿಲ್ಲ. ಮೊದಲೆರಡು ವರ್ಷಗಳಂತೂ ಎಲ್ಲ ಮಕ್ಕಳೂ ಹೋಗುವ ಡೇ ಕೇರ್‌ಗೇ ಹೋಗುತ್ತಿದ್ದನಲ್ಲ! ನಂತರ ಸ್ಪೆಷಲ್ ಡೇ ಕೇರ್‌ಗೆ ಕಳಿಸಬೇಕಾಯಿತು. ಆ ನಂತರ ಸ್ಪೆಷಲ್ ಶಾಲೆಗೆ. ಅವನು ಎಂಟು ವರ್ಷ ತಲುಪುವ ವೇಳೆಗೆ ಮನೆಯಲ್ಲಿಟ್ಟುಕೊಂಡು ನಿರ್ವಹಿಸುವುದು ನನಗೆ ಸಾಧ್ಯವೇ ಇಲ್ಲ ಅನ್ನಿಸಿಬಿಟ್ಟಿತ್ತು. ಎಂಟು ವರ್ಷದ ಹುಡುಗನನ್ನು ಸುಲಭವಾಗಿ ಎತ್ತಿಕೊಳ್ಳಲೂ ಕಷ್ಟವಾಗುತ್ತಿತ್ತು. ಹೀಗಾಗಿ ಸ್ವಲ್ಪ ದಿನ ಒಂದು ಕೇರ್ ಫೆಸಿಲಿಟಿ ಹೋಮ್‌ನಲ್ಲಿಟ್ಟಿದ್ದೆ.

ಒಂದು ವಾರ ಬಿಟ್ಟು ಕೇರ್ ಫೆಸಿಲಿಟಿಗೆ ಅರಿಯನ್ನು ನೋಡಲು ಹೋದ ದಿನ ನನ್ನ ಬದುಕಿನ ಗತಿಯನ್ನೇ ಬದಲಿಸಿದ ದಿನ. ಅಲ್ಲಿನ ಒಂದು ಬಗೆಯ ಆಸ್ಪತ್ರೆಯ ವಾಸನೆ, ಅದನ್ನು ಹೊಡೆದುಹಾಕಲು ಹಾಕಿದ್ದ ರೂಮ್ ಫ್ರೆಷ್‌ನರ್ ಘಾಟು, ಕಿವಿಗೆ ರಾಚುವ ನಿರ್ವಿಕಾರ ಮೌನವನ್ನು ದಾಟಿ "ಅರೀ..." ಎಂದು ಕೋಣೆಯ ಬಾಗಿಲು ತೆರೆದೊಡನೆಯೇ ಅರಿ, "ಮ್‌ಮ್ಮಾ..." ಎಂದು ಅಳಲು ಶುರುಮಾಡಿದ್ದ. "ಅರೀ, ಡೋಂಟ್ ಕ್ರೈ ಬೇಬಿ" ಅಂತ ಅಪ್ಪಿಕೊಂಡರೆ ಅವನ ತೋಳಿನ ಮೇಲೆ ಅವನದ್ದೇ ಹಲ್ಲಿನ ಗುರುತುಗಳು ಕಂಡಿದ್ದವು. ಕೋಪ ಬಂದಾಗ, ತಾನು ಹೇಳಿದ್ದು ಎದುರಿನವರಿಗೆ ಸಮರ್ಥವಾಗಿ ತಿಳಿಸಲು ಸಾಧ್ಯವಾಗದಾಗ ಅರಿ ಹೀಗೆ ತೋಳನ್ನು ಕಚ್ಚಿಕೊಳ್ಳುತ್ತಿದ್ದ. ಒಂದು ವಾರದಲ್ಲಿ ಇನ್ನಷ್ಟು ಸೊರಗಿದಂತೆ ಕಂಡ.

"ಏನಾಯ್ತು ಅರಿ. ಅಳಬಾರದು ಹಾಗೆ. ಅಮ್ಮ ಬರ್ತಿನಲ್ಲ ಪ್ರತೀ ವಾರವೂ" ಅಂತ ಅವನನ್ನು ಸಂತೈಸಿದೆ.

"ಮ್‌ಮ್ಮಾ... ಡ್ಡಾ... ಲೀ...ವ್ ಹಿಯ್ಯಾ... ಮ್ಮಾ" ಎಂದು ದೊಡ್ಡಕೆ ಅತ್ತುಬಿಟ್ಟ.

ಅವನು ಏನು ಹೇಳುತ್ತಿದ್ದಾನೆ ಎಂದು ತಿಳಿಯಲು ಎರಡು ಮೂರು ಸಾರಿ ಅದನ್ನು ಸ್ಪಷ್ಟವಾಗಿ ಕೇಳಬೇಕಾಯಿತು.

ಕೊನೆಗೆ ತಿಳಿಯಿತು. ಡೋಂಟ್ ಲೀವ್ ಮೀ ಹಿಯರ್ ಅಮ್ಮಾ. ನನ್ನನ್ನು ಇಲ್ಲಿ ಬಿಡಬೇಡ ಅಮ್ಮಾ ಎನ್ನುತ್ತಿದ್ದಾನೆ. ಅವನು ಹಾಗೆ ಹೇಳಿದನೋ ಇಲ್ಲವೋ. ಎಂಟನೆಯ ವಯಸ್ಸಿಗೆ ಅಷ್ಟು ಮಾತನಾಡುವ ಶಕ್ತಿ ಬಂದಿರಲಿಲ್ಲ ಅವನಿಗೆ. ಆದರೂ... ಯಾರಿಗೆ ಗೊತ್ತು? ನರಮಂಡಲದ ಒಗಟುಗಳನ್ನು ಬಿಡಿಸಿದವರ್‍ಯಾರು? ಹಾಗೆಯೇ ಹೇಳಿದ್ದರೂ ಹೇಳಿದ್ದಾನು. ನನಗಂತೂ ಹಾಗೇ ಕೇಳಿಸಿತು.

ಅದು, ಆ ಕ್ಷಣ, ನನ್ನ ಇಡೀ ಬದುಕು ಆ ಒಂದು ಕ್ಷಣಕ್ಕೆ ಬಂದು ನಿಂತು ತಟಸ್ಥವಾಗಿಬಿಟ್ಟಿತು. ಇದು ನನ್ನ ಮಗು, ನಾನು ಇವನ ಅಮ್ಮ. ಈ ವಾರೆ ನೋಟಗಳು, ಚಿಕಿತ್ಸೆಗಳು, ಸುಖ ಎಂಬುದರ ಕಲ್ಪನೆ, ಸಹಜವೇನು ಅಸಹಜವೇನು ಎಂಬ ಭ್ರಮೆ, ಸಮಾಜ ಮತ್ತದರ ಕಟ್ಟುಪಾಡುಗಳು, ಹಣ ಮತ್ತದರಲ್ಲಿ ಹುಡುಕಿಕೊಳ್ಳುವ ಅರ್ಥ, ಸ್ವಾತಂತ್ರ್ಯ, ಕುಟುಂಬ, ಸ್ಪೆಲ್ಲಿಂಗ್ ಬೀ ಸ್ಪರ್ಧೆಗಳು, ಬ್ಯೂಟಿ ಪಾರ್ಲರುಗಳು... ಎಲ್ಲವೂ ನಂತರ ಹುಟ್ಟಿಕೊಂಡಿದ್ದು. ವೃತ್ತದ ಕೇಂದ್ರದಲ್ಲಿ ಅಚಲವಾಗಿ ನಿಂತ ಒಬ್ಬ ತಾಯಿ ಮತ್ತಾಕೆಯ ಮಗುವಿನ ಸುತ್ತ ಹಬ್ಬಿಕೊಂಡಿದ್ದು ಉಳಿದದ್ದೆಲ್ಲವೂ ಅಂತನ್ನಿಸಿಬಿಟ್ಟಿತು. ಅರಿಯ ವಸ್ತುಗಳನ್ನೆಲ್ಲ ಪ್ಯಾಕ್ ಮಾಡಿಕೊಂಡು ಅವನನ್ನು ಮನೆಗೆ ಕರೆತಂದುಬಿಟ್ಟೆ.

ಸ್ಟಿಯರಿಂಗ್ ವ್ಹೀಲನ್ನು ಗರ್‍ರನೆ ತಿರುಗಿಸಿ ಯೂ ಟರ್ನ್ ತೆಗೆದುಕೊಂಡ ಹಾಗೆ ತಿಂಗಳೊಳಗೆ ಕೆಲಸ ಬದಲಿಸಿದೆ. ಸಮಯವನ್ನು ಫ್ಲೆಕ್ಸಿಬಲ್ ಆಗಿರಿಸಿಕೊಂಡೆ. ಮೆಟ್ಟಿಲಿಲ್ಲದ ಮನೆ ಹುಡುಕಿಕೊಂಡೆ. ಅರಿಯನ್ನು ನನ್ನ ಲೋಕಕ್ಕೆ ಎಳೆದು ತರುವ ಸಾಹಸ ಬಿಟ್ಟು ನಾನೇ ಅವನ ಲೋಕದ ಹತ್ತಿರ ಹೋದೆ. ಅವನ ಅಪಸ್ಮಾರವನ್ನು ಕಡಿಮೆ ಮಾಡಲು ಕೀಟೋಜೆನಿಕ್ ಊಟವನ್ನು ತಯಾರಿಸುವುದ ಕಲಿತುಕೊಂಡೆ. ಲೆಕ್ಕವಿಟ್ಟು ಹಣ ಖರ್ಚು ಮಾಡಿದೆ. ಮುಂದೆಂದೋ ನಾನು ಇಲ್ಲವಾದಾಗ ಕೇರ್ ಫೆಸಿಲಿಟಿಗೆ ಮರಳುತ್ತಾನೋ ಏನೋ ಅವನು. ಹಾಗಾಗದೆಯೂ ಇರಬಹುದು. ನಮ್ಮಿಬ್ಬರ ಅದೃಷ್ಟ ಸರಿಯಾಗಿದ್ದರೆ ಅವನೇ ಮೊದಲು ಎದ್ದು ನಡೆಯಬಹುದು. ಆದರೆ ನನ್ನ ಉಸಿರಿರುವ ತನಕ ನಾನು ಸಲಹುತ್ತೇನೆ ಅವನನ್ನು, ನಂತರ ನನ್ನ ಸೇವಿಂಗ್ಸ್ ನೋಡಿಕೊಳ್ಳುತ್ತದೆ ಎಂಬ ಪ್ರತಿಜ್ಞೆ ಮಾಡಿಕೊಂಡೆ.

ಆದರೂ... ಒಮ್ಮೊಮ್ಮೆ ಮಾತ್ರ ಇದೆಲ್ಲ ಈಗಲೇ, ಈ ದಿನವೇ ಮುಗಿದುಹೋಗಲಿ ಅನ್ನಿಸುತ್ತದೆ. ಇನ್ನು ಏಳಲೇ ಸಾಧ್ಯವಿಲ್ಲ ಅಂತನ್ನುವಷ್ಟು ಸುಸ್ತಾದಾಗ, ಅದೇ ಅದೇ ದಿನಚರಿಯನ್ನು ಪುನಃ ಪುನಃ ಜೀವಿಸಿ ಜೀವ ಹೇಸಿ ಹೋಗುವಾಗ, ನನ್ನ ಬದುಕೊಂದು ಸರಳ ರೇಖೆಯಂತಿರದೇ ಮುಚ್ಚಿಕೊಂಡ ಗೋಲದ ಹಾಗಿರುವುದು ಮನವರಿಕೆಯಾದಾಗ ದೇವರನ್ನಾದರೂ ನಂಬಲು ಸಾಧ್ಯವಾಗಿದ್ದರೆ ಇದೆಲ್ಲ ಸ್ವಲ್ಪವಾದರೂ ಸುಲಭವಾಗುತ್ತಿತ್ತೇ ಅಂತ ಘಾತವಾಗುತ್ತದೆ.

ಅರಿಗೆ ಹದಿನೆಂಟು ತುಂಬುವತನಕ ಅವನು ಸ್ಪೆಷಲ್ ಶಾಲೆಗೆ ಹೋಗುತ್ತಿದ್ದ. ಅಲ್ಲಿ ಸಂಜ್ಞೆಯ ಭಾಷೆಯನ್ನು ಸ್ವಲ್ಪ ಕಲಿತಿದ್ದಾನೆ. ಅವನ ಸ್ಥಿತಿಯ ಕಾರಣಕ್ಕಾಗಿ ಎಷ್ಟೋ ವಿವರಗಳು ಅವನಿಗೆ ಮರೆತು ಹೋಗಿವೆ. ಸ್ಪೀಚ್ ರೀಡಿಂಗ್‌ಗಾಗಿ ಅಪರೂಪಕ್ಕೆ ಮಷಿನ್

ಒಂದನ್ನು ಉಪಯೋಗಿಸಿದರೂ ಅದು ಬೇರೆಯವರ ಬಳಿ ಮಾತ್ರ. ನನಗೆ ರೂಢಿಯಿಂದಲೋ ಏನೋ, ಅವನು ಏನು ಹೇಳುತ್ತಿದ್ದಾನೆ ಎಂಬುದು ಸುಲಭವಾಗಿ ಅರ್ಥವಾಗುತ್ತದೆ.

ಆಫೀಸಿನಲ್ಲಿ ನನ್ನ ಕಲೀಗುಗಳಿಂದ ಹಿಡಿದು ಪಾರ್ಕಿನಲ್ಲಿ ಸಿಗುವ ಆಗಂತುಕರ ತನಕ ನಾನು ಬಹು ದುಃಖದಲ್ಲಿದ್ದೇನೆ ಎನ್ನುವಂತೆ ನನ್ನನ್ನು ಕಾಣುವಾಗ ಕಿರಿಕಿರಿಯಾಗುವುದು. ಚೂರೇ ಚೂರು ಸ್ನೇಹ ಸಂಪಾದಿಸಿಕೊಂಡವರೂ, "ಯೂ ಆರ್ ಸೋ ಬ್ರೇವ್. ಆದರೂ ಮೊದಲೇ ಗೊತ್ತಿದ್ದರೂ ಇವನನ್ನು ಉಳಿಸಿಕೊಳ್ಳುತ್ತಿದ್ದಿರೇ" ಎಂಬಂಥ ಕ್ರೂರ ಪ್ರಶ್ನೆ ಕೇಳುವಾಗ ಮೊದಲೆಲ್ಲ, "ಖಂಡಿತ ಉಳಿಸಿಕೊಳ್ಳುತ್ತಿದ್ದೆ" ಎಂದು ನಿರೂಪಿಸಲು ನಿಲ್ಲುತ್ತಿದ್ದೆ. ಆ ಪ್ರಶ್ನೆಗೆ ಮತ್ತ್ಹೇಗೆ ಉತ್ತರಿಸಬೇಕು? ನಾನು ಹೇಳುತ್ತಿರುವುದು ಸತ್ಯ. ಇದು ಈ ಕ್ಷಣದ ಸತ್ಯ ಎಂಬುದು ನನ್ನ ಲೋಕದ ಅರಿವಿಲ್ಲದ ಅವರಿಗೆ ಹೇಗೆ ತಿಳಿಸಿ ಹೇಳಬೇಕು? ಆಗೆಲ್ಲ ಅವರು ಹೌದೌದು ಎನ್ನುವಂತೆ ತಲೆಯಾಡಿಸಿ ನನಗಿಂಥ ಹೆಚ್ಚು ಬದುಕನ್ನು ತಿಳಿದುಕೊಂಡವರಂತೆ ತುಟಿಯಲ್ಲೇ ಕಿರುನಕ್ಕು ಸರಿದುಹೋಗುವಾಗ ಸಂಕಟವಾಗುತ್ತಿತ್ತು. ಈಗ ಯಾರನ್ನೂ ಅಂಥ ಪ್ರಶ್ನೆ ಕೇಳುವಷ್ಟು ಒಳಬಿಟ್ಟುಕೊಳ್ಳುವುದಿಲ್ಲ.

ವಾರಕ್ಕೆ ನಾಲ್ಕು ದಿನ ನಾನು ಆಫೀಸಿಗೆ ಅರ್ಧ ದಿನ ಹೋಗಲೇಬೇಕಾಗುತ್ತದೆ. ಆಗ ಕೇರ್ ಏಜೆನ್ಸಿಯಿಂದ ಕ್ಯಾರಲ್ ಹೆಸರಿನ ಸಹಾಯಕಿಯೊಬ್ಬರು ಬಂದು ಅರಿಯನ್ನು ನೋಡಿಕೊಳ್ಳುತ್ತಾರೆ. ಅವನೇನಾದರೂ ಕೀಟಲೆ ಮಾಡಿದಾಗ, "ನೋಡಿ, ಇವನನ್ನ ನಾರ್ಮಲ್ ಅಲ್ಲ ಅನ್ನುತ್ತದಲ್ಲ ಈ ಪ್ರಪಂಚ! ಬಹುಶಃ ಹೊರಗಿದ್ದಾರಲ್ಲ ಅವರೆಲ್ಲ ಇಪ್ಪತ್ತರ ಹರೆಯದವರು, ಅವರೇ ಅಬ್ನಾರ್ಮಲ್ ಇರಬಹುದೇನೋ. ಅವರೆಲ್ಲ ಹೆಚ್ಚೆಚ್ಚು ನಮ್ಮ ಅರಿಯ ಹಾಗೆಯೇ ಇರುವುದ ಕಲಿಯಬೇಕೇನೋ. ಯಾವ ವಯದವರಿಗೆ ಯಾವುದು ನಾರ್ಮಲ್ ಅಂತ ನಿರ್ಧರಿಸಲು ನಾವ್ಯಾರು ಹೇಳಿ?" ಅಂತ ನಗುತ್ತಾರೆ.

ಬದುಕಿನ ನಗ್ನ ಸತ್ಯಗಳಿಗೆ ಒಮ್ಮೆ ಮುಖಾಮುಖಿಯಾದ ಮೇಲೆ ಯಾವ ಮೇಲ್ಹೊದಿಕೆಗಳ ಅವಶ್ಯಕತೆಯೇ ಇಲ್ಲದೇ ಬದುಕು ಸಹನೀಯವಾಗುತ್ತದೆ. ಅರಿಹಂತ ಎಂದರೆ ಶತ್ರುಗಳನ್ನು ಹತ ಮಾಡುವವನು ಅಂತ ಅರ್ಥವಂತೆ. ಶತ್ರು ಎಂಬ ಪದ ಗ್ರಹಿಕೆಗೇ ಸಿಗದಷ್ಟು ಎತ್ತರದಲ್ಲಿರುವ ಈ ಮಗು ನನ್ನನ್ನೂ ಉಳಿಸಿದೆ. ನಾನು ಅರಿಯನ್ನು ಕಾಯ್ದುಕೊಂಡೆ ಅನ್ನಿಸಬಹುದು ಕಾಣುವವರಿಗೆ. ಆದರೆ ಅರಿಯೇ ನನ್ನನ್ನು ಬದುಕಿಸಿಕೊಂಡಿದ್ದಾನೆ. ಅವನ ಸ್ಪರ್ಶದ ಮೂಲಕ. "ಮ್ಮ್ಮಾ..." ಎಂಬ ಅವನ ಸವಿದನಿಯ ಮೂಲಕ. ಅವನ ಅಪ್ಪುಗೆಯ ಮೂಲಕ. ಚೂರೇ ಖುಷಿಯಾದರೂ "ಕಿ...ಸ್ಸ್ಸೀ... ಕಿ...ಸ್ಸೀ..." ಎಂದು ಮುತ್ತಿನ ಸುರಿಮಳೆಗೈವ ಅವನ ಲೀಲೆಗಳ ಮೂಲಕ.

*

ನಿದ್ದೆಗೆಟ್ಟಿದ್ದಕ್ಕೋ ಏನೋ, ಮುಂಜಾನೆ ಡೋರ್ ಬೆಲ್ ಹೊಡೆದುಕೊಳ್ಳುವತನಕ ಎಚ್ಚರವೇ ಆಗಲಿಲ್ಲ. ಕ್ಯಾರಲ್ ಬೇಗ ಬಂದಳೇ ಇವತ್ತು ಅಂತ ಸಮಯ ನೋಡಿದರೆ ಆಗಲೇ ಎಂಟು ಗಂಟೆ. ರಾತ್ರಿಯ ಪೂಪ್ ಎಪಿಸೋಡಿನ ನಂತರ ಅವಸರದಲ್ಲಿ ಅಲಾರಂ

ಇಡುವುದನ್ನೂ ಮರೆತು ಮಲಗಿಬಿಟ್ಟಿದ್ದೆ. ನೈಟ್ ಪಜಾಮದಲ್ಲಿಯೇ ಹೋಗಿ ಬಾಗಿಲು ತೆರೆದರೆ ಕ್ಯಾರಲ್‌ಳ ಬದಲು ತರುಣನೊಬ್ಬ ನಿಂತಿದ್ದ. "ಹೆಲೋ, ಐಮ್ ಜಾನಥನ್" ಅಂತ ಪರಿಚಯಿಸಿಕೊಂಡ.

"ಕ್ಯಾರಲ್ ಎಲ್ಲಿ?"

"ಕಡೆಯ ಕ್ಷಣದಲ್ಲಿ ಕ್ಯಾರಲ್ ಇವತ್ತು ಸಿಕ್-ಲೀವ್ ತೊಗೊಂಡಿದ್ದಾಳೆ. ಏಜೆನ್ಸಿಯವರು ಇವತ್ತು ಇಲ್ಲಿನ ಡ್ಯೂಟಿಯನ್ನು ನನಗೆ ಅಸೈನ್ ಮಾಡಿದ್ದಾರೆ" ಅಂತ ತನ್ನ ಐಡಿ ತೋರಿಸಿದ.

"ಓಹ್... ಓಹ್ ನೋ. ಇಷ್ಟು ಲಾಸ್ಟ್ ಮಿನಿಟ್‌ನಲ್ಲಿಯೇ? ನಾನೂ ಬಹಳ ಗಡಿಬಿಡಿಯಲ್ಲಿದ್ದೇನೆ. ಅರಿಯ ಕಂಡೀಷನ್ನನ್ನೂ, ತೆಗೆದುಕೊಳ್ಳಬೇಕಾದ ಮಾತ್ರೆಗಳನ್ನೂ, ಎಮರ್ಜೆನ್ಸಿ ಪ್ರೊಸೀಜರುಗಳನ್ನೂ ವಿವರಿಸುತ್ತ ಕೂಡಲು ಸಮಯವಿಲ್ಲ ನನ್ನ ಬಳಿ. ಇನ್ನರ್ಧ ಗಂಟೆಯಲ್ಲಿ ನಾನು ಡ್ರೈವ್ ಮಾಡಲು ಶುರುಮಾಡಬೇಕು" ಅಂತೆಲ್ಲ ಕಿರಿಕಿರಿ ಮಾಡಿಕೊಂಡೆ.

ಜಾನಥನ್ ನಸುನಗುತ್ತಲೇ ಇದ್ದ. "ಏನೇನೂ ಟೆನ್ಶನ್ ಬೇಡ ನಿಮಗೆ ಮಿಸ್. ನನ್ನ ಬಳಿ ಇರುವ ಫೈಲಿನಲ್ಲಿ ಎಲ್ಲ ಮಾಹಿತಿಯೂ ಇದೆ. ನೀವು ನಿಶ್ಚಿಂತೆಯಿಂದ ಹೋಗಿ ಬನ್ನಿ" ಎಂದ.

ಯೋಚಿಸುತ್ತ ಕೂರಲು ನನ್ನ ಬಳಿ ಅಷ್ಟು ಸಮಯವೂ ಇರಲಿಲ್ಲ. ಅವನಿಗೊಂದು ಥ್ಯಾಂಕ್ಸ್ ಹೇಳಿ, ರಾತ್ರಿಯ ಎಪಿಸೋಡಿನ ಬಗ್ಗೆ ಹೇಳಿ, ಹೀಗ್ಹೀಗೆ ಸ್ನಾನ ಮಾಡಿಸಿಯೇ ಹೊರಡೋಣ ಅಂದುಕೊಂಡಿದ್ದೆ. ತಡವಾಗಿಹೋಗಿದೆ. ಸಂಜೆ ನಾನೇ ಮಾಡಿಸುತ್ತೇನೆ. ಅವನಿಗೆ ಇನ್ಯಾರ ಬಳಿಯಲ್ಲೂ ಸ್ನಾನ ಹಾಕಿಸಿಕೊಂಡು ಅಭ್ಯಾಸವಿಲ್ಲ" ಅಂತ ಶಾವರ್ ತೆಗೆದುಕೊಳ್ಳಲು ನಡೆದೆ.

ಜಾನಥನ್, "ಆಸ್ ಯೂ ಸೇ ಮಿಸ್" ಅಂದ.

ಹತ್ತೇ ನಿಮಿಷದಲ್ಲಿ ತಯಾರಾಗಿ ಬಂದಾಗಲೂ ಅರಿ ಎದ್ದಿರಲಿಲ್ಲ. ಹೊಸಬರನ್ನು ಕಂಡೊಡನೆ ಅವನು ಒಮ್ಮೆಲೇ ಹೆದರಿಕೊಳ್ಳುತ್ತಾನೆ. ಸ್ವಲ್ಪ ಸಮಯವಿದ್ದರೆ ನಾನೇ ಜಾನಥನ್ನನ್ನು ಅರಿಗೆ ಪರಿಚಯ ಮಾಡಿಸಿಕೊಟ್ಟು ತೆರಳಬಹುದಿತ್ತು. ಆಗಲೂ ಅವನು ನನ್ನನ್ನು ಸುಲಭಕ್ಕೆ ಹೋಗಗೊಡುತ್ತಾನೆ ಅಂತ ಹೇಳಲಾಗದು. ನೋಡಿದರೆ ಆ ಹೊಸ ಕ್ಲಯಂಟುಗಳು ಇಂದೇ ವಿಸಿಟ್ ಮಾಡುವವರಿದ್ದಾರೆ. ಆ ಮೀಟಿಂಗಿನಲ್ಲಿ ನಾನು ಹಾಜರಿರಲೇ ಬೇಕು. ಹೀಗಾಗಿ ಅರಿಯನ್ನು ಕೊನೇ ಕ್ಷಣದಲ್ಲಿ ಎಬ್ಬಿಸುವ ರಿಸ್ಕ್ ತೊಗೊಳ್ಳಲಾರದೇ ಜಾನಥನ್ನನಿಗೆ ಏನು ತಿಳಿಯದಿದ್ದರೂ ಕರೆ ಮಾಡೆಂದು ತಿಳಿಸಿ ಕಾರ್‌ನ ಕೀಲಿ ತಿರುವಿದೆ.

ಆಫೀಸು ತಲುಪಿ ಒಂದು ಘಂಟೆ ಕಳೆಯುವಷ್ಟರಲ್ಲಿ ನನಗೆ ನಿರಾಳವಾಗುವ ಹಾಗೆ ಜಾನಥನ್ ಸಂದೇಶ ಕಳಿಸಿದ್ದ. "ಮೊದಲು ಎದ್ದಾಗ ಅರಿ ಭಯಪಟ್ಟುಕೊಂಡ. ಕ್ಯಾರಲ್‌ಳಿಗಾಗಿಯೇ ಕೇಳಿದ. ನಾನೇ ನಿಧಾನಕ್ಕೆ ಅವನ ರೈಮ್‌ಗಳನ್ನೆಲ್ಲ ಓದಿ ಹೇಳಿದೆ. ಸ್ವಲ್ಪ ಹೊತ್ತು ಟೀವಿಯಲ್ಲಿ ಅವನಿಷ್ಟದ ಪೆಪ್ಪಾ ಪಿಗ್ ಹಾಕಿಕೊಟ್ಟೆ. ನಂತರ ಲೆಗೋ ಆಟಿಕೆಗಳ ಜೊತೆಗೆ ಆಟವಾಡತೊಡಗಿದೆ. ಅರಿ ನಿಧಾನಕ್ಕೆ ಸರಿದುಬಂದು ನನ್ನ ಜೊತೆ

ಸ್ನೇಹದಿಂದ ಆಟವಾಡತೊಡಗಿದ. ಈಗ ಅವನಿಗೆ ಬ್ರೇಕ್‌ಫಾಸ್ಟ್ ತಿನ್ನಿಸುತ್ತಿದ್ದೇನೆ. ಬೆಳಗಿನ ಡೈಪರ್ ಕ್ಲೀನಿಂಗ್ ಕೂಡ ಮುಗಿದಿದೆ" ಎಂದಿದ್ದ. ನಾನೂ ನಿರಾಳವಾಗಿ ಕ್ಲಯಂಟ್ ಮೀಟಿಂಗಿಗೆ ತೆರಳಿದೆ.

ಮಧ್ಯಾಹ್ನ ಲಂಚ್ ಮೀಟಿಂಗ್ ಮುಗಿಸಿ ಬಂದಾಗಲೇ ನನಗೆ ಆಘಾತ ಕಾದಿತ್ತು. ಜಾನಥನ್ ಹತ್ತು ಬಾರಿ ಕರೆ ಮಾಡಿದ್ದ. ಎರಡು ಮೆಸೇಜುಗಳನ್ನೂ ಬಿಟ್ಟಿದ್ದ. ನಡುಗುವ ಕೈಗಳಿಂದ ತೆರೆದು ನೋಡಿದರೆ ಒಂದರಲ್ಲಿ "ದಯವಿಟ್ಟು ಬೇಗ ಬನ್ನಿ" ಅಂದಿತ್ತು. ಅರ್ಧ ಗಂಟೆ ನಂತರ ಕಳಿಸಿದ ಇನ್ನೊಂದು ಮೆಸೇಜಿನಲ್ಲಿ, "ಯಾರ ಜೀವಕ್ಕೂ ಯಾವ ಧಾಡಿಯೂ ಆಗಿಲ್ಲ. ಚಿಂತೆ ಬೇಡ. ಈ ಮೆಸೇಜ್ ನೋಡಿದ ತಕ್ಷಣ ಬನ್ನಿ" ಎಂದಿತ್ತು. ಕರೆ ಮಾಡಿದರೆ ಅತ್ತ ರಿಸೀವ್ ಮಾಡಲಿಲ್ಲ. ಒಂಚೂರೂ ಜವಾಬ್ದಾರಿಯಿಂದ ವರ್ತಿಸದ ಈ ತಿಳಿಗೇಡಿ ಹೊಸ ಹುಡುಗನ ಮೇಲೆ ನನಗೆ ಕೋಪವೇ ಬಂತು. ಅರ್ಧ ಗಂಟೆ ಡ್ರೈವ್ ಮಾಡಿ ಬೆವರಿಳಿಸುತ್ತ ಬಾಗಿಲು ನೂಕಿದೆ. "ಅರೀ... ಎಲ್ಲಿ ಅರಿ?" ಅಂದೆ.

ಜಾನಥನ್ ಸೋಫಾದ ಮೇಲೆ ಪವಡಿಸಿದ್ದ. ಅವನ ಕಣ್ಣುಗಳು ಕೋಪದಿಂದ ಉರಿಯುತ್ತಿದ್ದವು. ನಾನು "ಅರೀ..." ಎನ್ನುತ್ತ ಅರಿಯ ಕೋಣೆಯ ಬಾಗಿಲಿಗೆ ಓಡಿದೆ.

ಜಾನಥನ್ ಮೈ ಮೇಲೆ ಬಂದವರ ಹಾಗೆ, "ಏನ್ರೀ, ತರಡಿಗೇ ಕೈ ಹಾಕ್ತಾನೆ ನಿಮ್ಮ ಮಗ" ಎಂದರಚಿದ.

"ಏನು?"

"ಏಕೆ ಹೇಳಿದ್ದು ಕೇಳಲಿಲ್ಲವಾ? ಮಗನ ಹಾಗೆ ನಿನಗೂ ಬಿಡಿಸಿ ಬಿಡಿಸಿ ಹೇಳಬೇಕಾ?"

ಕೆನ್ನೆಗೆ ಛಟೀರನೆ ಬಾರಿಸಿದಂತಾಯಿತು. "ಏನೇ, ಅಲ್ಲಿಗೇ ಕೈ ಹಾಕ್ತೀಯಲ್ಲೇ ರಂಡೆ" ಅಂತ ಅವನು ನನಗೇ ಹೇಳಿದ ಹಾಗೆ ವಿಚಲಿತಗೊಂಡೆ.

"ಎಲ್ಲಿದ್ದಾನೆ ಅರಿ, ಏನು ಮಾಡಿದೆ ಅವನಿಗೆ?"

"ಅವನಿಗೇನೂ ಧಾಡಿಯಾಗಿಲ್ಲ. ಕೋಣೆಯಲ್ಲೇ ಇದ್ದಾನೆ" ಎನ್ನುತ್ತ ನಾನು ಬಾಗಿಲು ದಾಟಿ ಅರಿಯನ್ನು ನೋಡದಂತೆ ನನ್ನನ್ನು ತಡೆಗಟ್ಟಿ ಅರಚತೊಡಗಿದ. ಇವನು ಕತೆ ಓದಿ ಹೇಳುತ್ತಿದ್ದನಂತೆ, ಅರಿ ಹತ್ತಿರ ಬಂದು ಇವನ ಮಗ್ಗುಲಲ್ಲೇ ಕುಳಿತನಂತೆ. ಅಲ್ಲಿಗೇ ಕೈ ಹಾಕಿದನಂತೆ. ಇವನೆಷ್ಟು ಬಿಡಿಸಿಕೊಂಡರೂ ಕೇಳಲಿಲ್ಲವಂತೆ. ಮುತ್ತಿಡಲೇ ಬಂದನಂತೆ... ಇನ್ನೂ ಏನೇನೋ.

"ಐ ವಾಂಟ್ ಟು ಸೀ ಮೈ ಸನ್. ದಾರಿ ಬಿಡು ನನಗೆ" ಎಂದರೂ ಕೇಳದೇ ಮತ್ತೆ ಮತ್ತೆ ಅದನ್ನೇ ಮೊದಲಿನಿಂದ ಹೇಳಲು ಶುರುಮಾಡಿದ. "ಇಂಥವರನ್ನೆಲ್ಲ ಕೇರ್ ಫೆಸಿಲಿಟಿಯಲ್ಲಿಡಬೇಕು, ಮನೆಯಲ್ಲಲ್ಲ. ಕೈ ಕಾಲು ಕಟ್ಟಿಹಾಕ್ತಾರೆ ಅಲ್ಲಿ" ಅಂದ. ಮತ್ತೆ ಮತ್ತೆ ಮಧ್ಯಾಹ್ನ ಏನೇನಾಯ್ತು ಅಂತ ಮರುಕಳಿಸಿ ಹೇಳತೊಡಗಿದ.

"ಯೂ..." ಈ ಬಾರಿ ನನ್ನ ಧ್ವನಿ ಕೀರಲಾಯ್ತು. "ಔಟ್ ಆಫ್ ಮೈ ಹೌಸ್. ಹೀ ಈಸ್ ಎ ಚೈಲ್ಡ್. ಔಟ್ ಆಫ್ ಮೈ ಹೌಸ್" ಎಂದರಚಿದೆ. "ಔಟ್..." ಎಂದು

ಇನ್ನೊಮ್ಮೆ ತಾರಕಸ್ವರದಲ್ಲಿ ಅರಚಿದ ಮೇಲೆ ನನ್ನ ಬದಿಗೊಂದು ಉದಾಸೀನದ ಕೊಂಕನ್ನೆಸೆದು, ಧಡಾರನೆ ಬಾಗಿಲು ಹಾಕಿ ಅವನು ಹೊರಟುಹೋದ.

ನನ್ನ ದೊಡ್ಡ ಧ್ವನಿಗೆ ಭಯಪಟ್ಟು ಅರಿ "ಇ... ಇ..." ಎಂದು ಅಳತೊಡಗಿದ್ದ. ನನ್ನನ್ನು ಕಂಡವನೇ "ಮ್‌ಮ್ಮಾ..." ಎಂದು ಅವನ ದುಃಖದ ಕಟ್ಟೆಯೊಡೆಯಿತು. ಮರುಕ್ಷಣವೇ ತನ್ನ ಎಡತೋಳನ್ನು ಬಾಯಿಗೆ ತಂದು ಜೋರಾಗಿ ಕಚ್ಚಿಕೊಂಡ. ಆ ನೋವಿಗೆ ಇನ್ನಷ್ಟು ಚೀರಿ ಅತ್ತ. "ಅಯ್ಯೋ ಪುಟ್ಟ. ಹಾಗೆ ಮಾಡಬಾರದು ಪುಟ್ಟ. ದ್ಯಾಟ್ಸ್ ಓಕೆ ಬೇಬಿ. ದ್ಯಾಟ್ಸ್ ಓಕೆ. ಬಾ ಇಲ್ಲಿ" ಅಂತ ಮಂಚದ ಮೇಲೆ ಅವನ ಪಕ್ಕ ಕುಳಿತು ಅವನನ್ನಪ್ಪಿಕೊಂಡೆ. ತೋಳು ನೋಡಿದರೆ ಈಗಾಗಲೇ ಎರಡು ಬಾರಿ ಅವನು ಹತಾಶೆಯಿಂದ ಕಚ್ಚಿಕೊಂಡ ಕುರುಹುಗಳಿದ್ದವು. ನಾನು ಫಸ್ಟ್ ಏಯ್ಡ್ ಬಾಕ್ಸನ್ನು ತರುತ್ತೇನೆ ಇರು ಅಂದರೂ ನನ್ನನ್ನು ಏಳಲು ಬಿಡದಷ್ಟು ಗಟ್ಟಿಯಾಗಿ ಅಪ್ಪಿಕೊಂಡಿದ್ದ.

ನನ್ನೊಳಗೆ ಗಾಢವಾದುದೊಂದು ಮೌನವಿದೆ. ಇಷ್ಟು ವರ್ಷ ತಾಳ್ಮೆಯಿಂದ, ಅರಿವಿನಿಂದ, ಅನುಭವದಿಂದ ಸಿದ್ಧಿಸಿಕೊಂಡದ್ದು ಅದು. ಹಾಗೆಲ್ಲ ಸುಲಭವಾಗಿ ಕಲಕುವುದಿಲ್ಲ. ಆದರೆ ಇಂದೇಕೋ ಅರಿಯ ಕಣ್ಣೀರಿನ ಜೊತೆ ನನ್ನ ಕಣ್ಣೀರೂ ಸೇರಿ ನನ್ನ ಶರ್ಟನ್ನು ತೊಯ್ಯಿಸಿತು. ಅರಿಯನ್ನು ಇನ್ನಷ್ಟು ಮತ್ತಷ್ಟು ಬಿಗಿದಪ್ಪಿ ಹಿಡಿದೆ. ನಮ್ಮಿಬ್ಬರ ಚರ್ಮಗಳು ಕರಗಿಹೋದ ಹಾಗೆ, ರಕ್ತ ಮಾಂಸ ಬೆರೆತು ನಾವಿಬ್ಬರೂ ಒಂದೇ ಆಗಿಬಿಟ್ಟ ಹಾಗೆ, ಹಿಂದೊಂದು ಕಾಲದಲ್ಲಿದ್ದಂತೆ ಅವನನ್ನು ನನ್ನೊಡಲಲ್ಲಿ ಹುದುಗಿಸಿಟ್ಟು ಹೊರ ಲೋಕದಿಂದ ಅವನನ್ನು ಸದಾ ಕಾಲ ಕಾಪಾಡಬಲ್ಲ ಹಾಗೆ ಕಲ್ಪಿಸಿಕೊಂಡೆ. ಸಂಜೆ ಎಷ್ಟೋ ಹೊತ್ತಿನ ತನಕ ಅವನ ಮೃದು ಅಂಗೈಗಳನ್ನು ಸವರುತ್ತ ಕುಳಿತೆ.

ಕೇರ್ ಏಜೆನ್ಸಿಯವರ ಕರೆಗಳು, ಇ-ಮೇಲ್‌ಗಳು ಬರುತ್ತಲೇ ಇದ್ದವು. "ಅವನು ಹೊಸ ಹುಡುಗ. ಅವನು ಮಾಡಿದ ತಪ್ಪಿನ ಜವಾಬ್ದಾರಿಯನ್ನು ನಾವು ಹೊತ್ತು ಕ್ಷಮೆ ಕೇಳುತ್ತಿದ್ದೇವೆ" ಎಂಬ ಒಕ್ಕಣಿಕೆಯಿರುವ ಇ-ಮೇಲನ್ನು ಪೂರ್ತಿ ಓದದೇ ಹಾಗೇ ಮುಚ್ಚಿದೆ. ಕ್ಯಾರಲ್ ಕೂಡ ಮೆಸೇಜಿನಲ್ಲಿ ಸಾರಿ ಕೇಳಿದ್ದಳು. ಅದ್ಯಾಕೋ ಯಾರಿಗೂ ಮರು ಸಂದೇಶ ಬರೆಯುವ ಉತ್ಸಾಹವೇ ಇರಲಿಲ್ಲ.

*

ಬದುಕು ಕಷ್ಟದ್ದೋ ಬರವಣಿಗೆಯೋ ಎಂಬ ಚರ್ಚೆ ಏಳುತ್ತದೆ ಸಾಹಿತ್ಯಲೋಕದಲ್ಲಿ ಆಗಾಗ. ಅಬ್ಬಬ್ಬಾ ಬರವಣಿಗೆ ಎಷ್ಟೊಂದು ಕಷ್ಟ ಅಂತ ಅಲವತ್ತುಕೊಳ್ಳುವವರಿಗೆ ಕೇಳುವುದಿದೆ ನಾನು. ಹೌದೇ? ಬರವಣಿಗೆ ಎಂಥ ಸವಾಲುಗಳನ್ನು ಎಸೆದಿದೆ ನಿಮ್ಮ ಮುಂದೆ? ಹೇಳಿ, ಅದಕ್ಕೆ ಉತ್ತರ ಕಂಡುಕೊಳ್ಳುವ ಆಯ್ಕೆ ಇರುತ್ತದೆಯೇ ನಿಮ್ಮ ಮುಂದೆ?

ಎಲ್ಲಿ ಇದು? ಬಹು ದೂರ. ಒಂದು ಕಡಲು, ಕಡಲ ದಂಡೆ ಕಣ್ಣ ಮುಂದೆ ಬರುತ್ತಿದೆ. ಅಲ್ಲೊಬ್ಬರು ಇಲ್ಲೊಬ್ಬರು ಜೋಡಿಗಳಲ್ಲಿ, ಒಂಟಿಯಾಗಿ ಕಾಣಿಸುತ್ತಿದ್ದಾರೆ. ಗುಂಪು ಗದ್ದಲವಿಲ್ಲದ ಪ್ರಶಾಂತ ತೀರ. ಸಂಜೆ? ಹೌದು. ಬಾಲ್ಯದಲ್ಲಿ ಕಂಡು ಅನುಭವಿಸಿದ

ಅದೇ ಸಂಜೆಯ ಸೊಬಗು. ಸೂರ್ಯ ಇನ್ನೇನು ಮುಳುಗುವ ಸನ್ನಾಹದಲ್ಲಿದ್ದಾನೆ. ಟಾರು ರಸ್ತೆ ಮಣ್ಣಿನ ರಸ್ತೆಯಾಗಿ, ಮಣ್ಣು ಮರಳ ಜೊತೆ ಸೇರುತ್ತ ಸೇರುತ್ತಲೇ ದಾರಿ ಯಾವುದು, ತೀರ ಯಾವುದು ಎಂದೇ ಗೊತ್ತಾಗದ ಹಾದಿಯಲ್ಲಿ ಅವನೊಬ್ಬ ನಿಂತಿದ್ದಾನೆ, ಪಾದಗಳು ಮೆಲುವಾಗಿ ಹುಗಿಯುವ ಹೊಯಿಗೆ ರಾಸಿಯಲ್ಲಿ ಜೀವದಾಯಿನಿಯಂಥ ಎಳನೀರು ಮಾರುತ್ತ.

ಯಾರವನು? ಆ ಎತ್ತರವ ನಾನು ಬಲ್ಲೆ. ತಗ್ಗಿಸಿದ ತಲೆಯನ್ನವನು ನಿಧಾನಕ್ಕೆ ಎತ್ತಿದ್ದಾನೆ. ಎರಡೂ ಕೈಗಳಲ್ಲಿ ಎಳನೀರನ್ನು ಹಿಡಿದು ನನ್ನ ದಿಕ್ಕಿನಲ್ಲೇ ನೋಡುತ್ತ ತಲೆಯನ್ನು ಚೂರು ಹಿಂದಕ್ಕಾನಿಸಿ ಕಣ್ಣು ಮುಚ್ಚಿ ಹುಬ್ಬುಗಳನ್ನು ಎತ್ತರಿಸಿದ್ದಾನೆ. "ಹ್ಯ್ಯಾ... ಹ್ಯ್ಯಾ..." ಎಂದು ಸಂತಸದಲ್ಲಿ ತೇಲುತ್ತಿದ್ದಾನೆ.

"ಏಯ್ ಪುಟ್ಟಾ!" ಅಂತ ಅಚ್ಚರಿಗೊಂಡಿದ್ದೇನೆ ನಾನು. ಇಲ್ಲೆಲ್ಲಿ ಬಂದ ಇವನು! ಬೊಂಡ ಕೆತ್ತುವುದನ್ನು ಹೇಗೆ ಕಲಿತುಕೊಂಡ? ಹಸಿರು ಎಲೆಎಲೆಯಿರುವ ಈ ಶರ್ಟನ್ನು ಎಂದು, ಎಲ್ಲಿ ಕೊಂಡ? ದೊಡ್ಡ ಮನುಷ್ಯರ ಹಾಗೆ ಬಣ್ಣದ ಬರ್ಮುಡಾ ಧರಿಸಿದ್ದಾನೆ. "ಅರೀ..." ಅಂತ ಹತ್ತಿರ ಹೋಗಲೆತ್ನಿಸುತ್ತೇನೆ ನಾನು.

ನನ್ನ ದಿಕ್ಕಿನಲ್ಲೇ ಕಣ್ಣು ನೆಟ್ಟಿದ್ದರೂ ಅರಿ ನನ್ನನ್ನು ನೋಡುತ್ತಿಲ್ಲ ಅಂತ ಕ್ರಮೇಣ ಗೊತ್ತಾಗುತ್ತಿದೆ. ಅವನ ದೃಷ್ಟಿ ನನ್ನನ್ನು ದಾಟಿ ಇನ್ನೆಲ್ಲೋ ನೆಟ್ಟಿದೆ. ತಕ್ಷಣ ಹಿಂತಿರುಗಿ ನೋಡಿದ್ದೇನೆ ನಾನು. ಅಲ್ಲಿ ಬರುತ್ತಿದ್ದಾನೆ ಆ ಇನ್ನೊಬ್ಬ, ಮುಗುಳ್ನಗುತ್ತ. ಈ ಸ್ಫುರದ್ರೂಪಿ ಯುವಕನನ್ನು ಹಿಂದೆಲ್ಲೂ ಕಂಡಿಲ್ಲ ನಾನು, ಇದೇ ಮೊದಲ ಬಾರಿ ಕಾಣುತ್ತಿದ್ದೇನೆ. ನನ್ನನ್ನು ಮೀರಿ ಅರಿಗೆ ಇವ ಎಲ್ಲಿ ಸಿಕ್ಕ? ಹೇಗೆ ಪರಿಚಯವಾದ?

ಅರಿ ಮತ್ತೆ "ದ್ದಾ... ದ್ದಾ?" ಎಂದು ಎಲ್ಲಿಗೆ ಹೋಗಿದ್ದೆ ಅಂತ ಕೇಳುತ್ತಾನೆ.

"ಯಾಕೋ? ಮಳೆ ಬರಬಹುದು ಅಂದಿದ್ದೆಯಲ್ಲ. ಕೊಡೆ ತರೋದಕ್ಕೂ ಹೋಗಬಾರದೇನೋ?" ಅಂತ ಮರು ನುಡಿಯುತ್ತಾನೆ ಆ ಆತ. ನನ್ನನ್ನು ಇಬ್ಬರೂ ಕಾಣದ ಹಾಗಿದ್ದಾರೆ. ಹತ್ತಿರವಾಗುತ್ತಲೇ ಇಬ್ಬರೂ ಚುಂಬಿಸಿಕೊಳ್ಳುತ್ತಾರೆ.

ಒಬ್ಬ ಬೊಂಡ ಹಿಡಿದು, ಇನ್ನೊಬ್ಬ ಇನ್ನೂ ಬಿಚ್ಚದ ಕೊಡೆ ಹಿಡಿದು ಕಡಲ ತೀರಕ್ಕೆ ನಡೆದು ಹೋಗುತ್ತಾರೆ. ಒಣ ಮರಳಲ್ಲಿ ಹೆಜ್ಜೆ ಮೂಡಿಸದ ಅವರ ಪಾದಗಳು ಒದ್ದೆ ರೇವೆಯಲ್ಲಿ ಸ್ಪಷ್ಟ ಗುರುತುಗಳನ್ನು ಮೂಡಿಸುತ್ತಿವೆ. ಎರಡೂ ಜೊತೆ ಪಾದದ ಗುರುತುಗಳು ಹತ್ತಿರ ಹತ್ತಿರವಾಗುತ್ತ ಕಡೆಗೊಮ್ಮೆ ಒಂದೇ ಎನ್ನಿಸುವಷ್ಟು ಹತ್ತಿರ ಬಂದಿವೆ. ಸುತ್ತ ಸಂಜೆಯ ಸೊಬಗು.

ಒಮ್ಮೆ ಕಣ್ರೆಪ್ಪೆ ಬಡಿದರೂ, ಚೂರು ದೃಷ್ಟಿ ಸರಿಸಿದರೂ ಈ ಕ್ಷಣ ಎಲ್ಲಿ ಚದುರಿ ಹೋಗಿಬಿಡಬಹುದೋ ಎಂದು ನಾನು ಅದೇ ಜಾಗದಲ್ಲಿ ಬಹಳ ಹೊತ್ತಿನಿಂದ ನಿಂತೇ, ನಿಂತೇ ಉಳಿದಿದ್ದೇನೆ. ಹೀಗೆ.



# ಅನೀಟಳ ಹೋಳಿಗೆಗಳು

ಗುರುಪ್ರಸಾದ ಕಾಗಿನೆಲೆ
Rochester, Minnesota.

*

ಅನೀಟ ಬಹಳ ಸಂಭ್ರಮದಿಂದ ಬಂದು ಹೇಳಿದ್ದಳು. 'ಡಾಕ್. ನನ್ನ ಡೈವೋರ್ಸ್ ಸೆಟಲ್ ಆಯಿತು. ಜ್ಯಾಕಿ ನಾಳೆಯೇ ನನ್ನ ಜತೆಗೆ ನನ್ನ ಮನೆಯಲ್ಲೇ ಬಂದಿರ್ತಾ ಇದಾಳೆ. ನಾವಿಬ್ಬರೂ ಜತೆಯಲ್ಲಿರುವುದು ಎಂದು ನಿರ್ಧರಿಸಿದ್ದೇವೆ.'

ಅನೀಟ ನನ್ನ ಜತೆ ಕೆಲಸಮಾಡುವ ನರ್ಸ್.

'ಬಹಳ ಖುಷಿ ಅನೀಟ. ಗುಡ್‌ಲಕ್. ಎಲ್ಲ ಒಳ್ಳೆಯದಾಗಲಿ' ಎಂದಿದ್ದೆ.

ಇತ್ತೀಚೆಗೆ ಮನುಷ್ಯರ ನೈಜ ಸಂತಸಕ್ಕೂ ಪ್ರಾಮಾಣಿಕವಾಗಿ ಖುಷಿಪಡುವುದಕ್ಕೆ ನನಗೆ ಹೆದರಿಕೆಯಾಗುತ್ತದೆ. ಅನೀಟಳ ಡೈವೋರ್ಸ್ ಎಲ್ಲ ಪೂರ ಸೆಟಲ್ ಆಯಿತು ಎಂದರೆ ನಾನು ಆಕೆಗೆ 'ಕಂಗ್ರಾಟ್ಸ್' ಹೇಳಬಹುದೇ ಬೇಡವೇ. ಆಕೆ ಜ್ಯಾಕಿ ಎನ್ನುವ ಇನ್ನೊಬ್ಬ ಹೆಂಗಸಿನ ಜತೆ ತನ್ನ ಮುಂದಿನ ಬದುಕನ್ನು ಕಳೆಯುತ್ತೇನೆಂದು ಹೇಳಿದರೆ, ಬಹಳ ಸಂತೋಷ, ಸುಖವಾಗಿರು ಎಂದು ಹೇಳಬಹುದೇ ಎಂದು ಗೊಂದಲವಾಗುತ್ತದೆ. ಕೊಂಚ ದಿಗಿಲಾಗುತ್ತದೆ.

ಎರಡು ಜೀವಗಳು ಒಟ್ಟಿಗೇ ಸುಖವಾಗಿ ಬದುಕಬಹುದೆನ್ನುವ ವಿಷಯದ ಬಗ್ಗೆಯೇ ನನಗೆ ಇತ್ತೀಚೆಗೆ ನಂಬಿಕೆ ಹೋಗಿಬಿಟ್ಟಿದೆ. ಇವತ್ತು ಮದುವೆಯ ಬೆಳ್ಳಿಹಬ್ಬವನ್ನು ನಗುನಗುತ್ತಾ ಮಾಡಿಕೊಂಡವರು, ಮಾಚು ಪೀಚುವಿನ ಹಿನ್ನೆಲೆಯಲ್ಲಿ ನಗುನಗುತ್ತಾ ಫೋಟೋ ತೆಗೆಸಿಕೊಂಡು ಇನ್ಸ್ಟಾಗ್ರಾಮಿಗೆ ಹಾಕಿದವರು ನಾಳೆ ಸಿಂಗಲ್ ಎಂದು ಅದೇ

ಇನ್ಸ್ಟಾಗ್ರಾಮಿನಲ್ಲಿ ಪ್ರೊಫೈಲನ್ನು ಅಪ್‌ಡೇಟ್ ಮಾಡುವುದನ್ನು ನೋಡಿದಾಗ ನನ್ನ ಒಂಟಿ ಜೀವನದ ಬಗ್ಗೆ ಕೊಂಚ ಸಮಾಧಾನವಾಗುತ್ತದೆ. ಆದರೂ ಐವತ್ತಾದರೂ ಮದುವೆಯಾಗದೇ, ಸಹಬಾಳ್ವೆಯಿಲ್ಲದೇ ಒಬ್ಬಂಟಿಯಾಗಿಯೇ ಬದುಕಿರುವ ನಾನು ಈ ವಿಷಯದ ಬಗ್ಗೆ ಎಲ್ಲ ಗೊತ್ತಿರುವಂತೆ ಹೇಳಲಾರೆ.

ಎಮರ್ಜೆನ್ಸಿ ಡಿಪಾರ್ಟ್ಮೆಂಟಿನಲ್ಲಿ ಕಳೆದ ಇಪ್ಪತ್ತೆರಡು ವರ್ಷದಿಂದ ರಾತ್ರಿಪಾಳಿಯನ್ನು ಮಾತ್ರ ಮಾಡಿರುವ ನನಗೆ ಸಂಸಾರದ ರಾತ್ರಿಗುಟ್ಟುಗಳು ಬೇಡವಾದರೂ ಗೊತ್ತಾಗುತ್ತದೆ. ಪ್ರೇಮದ, ಕಾಮದ ಕೇಳಿ ರಕ್ತವನ್ನೂ ಸುರಿಸುತ್ತದೆ, ಮೂಳೆಯನ್ನೂ ಮುರಿಯುತ್ತದೆ ಎಂಬುದನ್ನು ಪ್ರತ್ಯಕ್ಷ ನೋಡಿದ್ದೇನೆ. ಪ್ರೀತಿ ಬಿಟ್ಟುಳಿಸುವ ಮೊಹರುಗಳನ್ನು ಅರೆರಾತ್ರಿಯಲ್ಲಿ ಕಲೆಯಿರದಂತೆ ಹೊಲೆದಿದ್ದೇನೆ. ಇದು ಫಲಿಸದ ರಾತ್ರಿಗೆ ಪ್ರೇಮಿಗಳು ಪರಸ್ಪರ ಕೊಟ್ಟುಕೊಳ್ಳುವ ಶಿಕ್ಷೆಯಷ್ಟೇ ಅಲ್ಲ ಎಂದು ಮತ್ತೆ ಮತ್ತೆ ನನಗೆ ವಿದಿತವಾಗಿದೆ.

ಆದರೆ, ಆಶ್ಚರ್ಯವೆನ್ನಿಸುವುದೆಂದರೆ ದಾಂಪತ್ಯ, ಸಾಂಗತ್ಯವೆಂಬುದು ಗಂಡು, ಹೆಣ್ಣು ಎಂಬ ಎರಡು ಲಿಂಗಗಳ ನಡುವಿನ ಸಂಬಂಧ ಮಾತ್ರವಾಗಿರದ ಈ ಮಿಲೇನಿಯಮ್ಮಿನಲ್ಲಿಯೂ ನಾನು ಈ ದಾಂಪತ್ಯಕಲಹದಿಂದಾಗುವ ಗಾಯಗಳನ್ನು ರಿಪೇರಿ ಮಾಡಿರುವುದು ಹೆಚ್ಚು ಹೆಣ್ಣಿನ ಮೈಮೇಲೇ. ಸಲಿಂಗಿ ಸಂಬಂಧಗಳ ಕಲಹಗಳಲ್ಲಿಯೂ ನನ್ನ ರಿಪೇರಿಗಳು ಆಗಿರುವುದು 'ಕೆಳಗಿ'ನವರಿಗೇ. ನಾನು ನೋಡುವ ಪೇಶೆಂಟುಗಳು ಮಿಡ್‌ವೆಸ್ಟಿನ ಒಂದು 'ಹೊರ' ಸ್ಯಾಂಪಲ್ಲು ಅನ್ನುವ ನನ್ನ ಅನುಮಾನವನ್ನು ಸೆಕೆಂಡುಗಳಲ್ಲಿಯೇ ಸುಳ್ಳುಮಾಡುತ್ತದೆ, ಕನಿಷ್ಟ ಗೂಗಲ್ ಸರ್ಚು. ಇಡೀ ಉತ್ತರ ಅಮೆರಿಕಾಕ್ಕೆ ಸಲ್ಲುತ್ತದೆ, ನನ್ನ ಈ ಲೋಕಲ್ ಅಂಕಿ-ಅಂಶ.

ಈ ಎಲ್ಲ ರಿಪೇರಿ ಕಾರ್ಯಗಳಲ್ಲೂ ನನಗೆ ಸಹಾಯ ಮಾಡುವಾಗ, ಅನೀಟಾ ಪ್ರತಿ ಹೆಂಗಸಿನ ಕೈ ಹಿಡಿದು 'ಐ ನೋ ವಾಟ್ ಯು ಆರ್ ಗೋಯಿಂಗ್ ಥ್ರು' ಎಂದು ಸಂತೈಸುತ್ತಿದ್ದಳು. ಪೊಲೀಸರಿಗೆ ದೂರು ಕೊಡೆಂದು ಪ್ರೋತ್ಸಾಹಿಸುತ್ತಿದ್ದಳು. ಅವಳ ಪರವಾಗಿ ವಕಾಲತ್ತು ಮಾಡಬಲ್ಲ ಅಡ್ವಕಸಿ ಗುಂಪುಗಳನ್ನು ಹೇಗೆ ಸಂಪರ್ಕ ಮಾಡಬೇಕು ಎಂದು ತಿಳಿಸುತ್ತಿದ್ದಳು. ಇವ್ಯಾವುದಕ್ಕೂ ಒಪ್ಪದೇ ಮತ್ತೆ ಅದೇ ಗೆಳೆಯನ, ಇನಿಯನ ಜತೆ ನಗುನಗುತ್ತಾ ವಾಪಸ್ಸು ಹೋಗುವ ಹೆಂಗಸರನ್ನು ನೆನೆದು 'ಅಯ್ಯೋ, ನಿಮ್ಮಂಥವರಿಗೆ ಹೇಳಿ ಏನುಪಯೋಗ?' ಎಂದು ಹಳಿದುಕೊಂಡು ತೀರ ಬೇಸತ್ತು ದೇಹದ ರಿಪೇರಿ ಮಾಡಿದ ರಕ್ತಸಿಕ್ತ ಸಲಕರಣೆಗಳನ್ನು ಸ್ವಚ್ಛಗೊಳಿಸಿ ತೆಗೆದಿಡುವಾಗ 'ಈ ಕತ್ತರಿ, ಚಾಕುಗಳನ್ನಾದರೂ ಕೊಟ್ಟು ಕಳಿಸಬೇಕಾಗಿತ್ತು, ಆ ಹುಡುಗಿಗೆ. ಇನ್ನೂ ಹೀಗೇ ಹೊಡೆತ ತಿಂದು ಒಂದು ದಿನ ಮನಸ್ಸು ರೋಸಿಹೋದಾಗ ಹೊಡೆಯಕ್ಕೆ ಬರುವವನ ಬೀಜ ಕತ್ತರಿಸಿಬಿಟ್ಟರೆ ಸರಿಹೋಗುತ್ತದೇನೋ. ಈ ಟೆಸ್ಟಾಸ್ಟೀರಾನೇನಾದರೂ ಗಂಡಸರನ್ನು ಹೆಚ್ಚು ಆಕ್ರಮಣಶೀಲರನ್ನಾಗಿ ಮಾಡುತ್ತದಾ ಡಾಕ್? ಅಥವಾ ಈ ಗಂಡುಜಾತಿಯೇ ಹೀಗೋ?' ಎಂದು ನಗುತ್ತಾ ನನ್ನನ್ನು ಕೇಳುತ್ತಿದ್ದಳು. ನಂತರ ನನ್ನ ಮನಸ್ಸಿಗೆ ಬೇಸರವಾಯಿತೇನೋ ಅನ್ನುವಂತೆ 'ನೀನೂ ಎಲ್ಲರ ತರ ಜತೆಗೊಂದು ಜೀವದ ಜತೆ ಇದ್ದಿದ್ದರೆ ಗೊತ್ತಾಗುತ್ತಿತ್ತು.

ಬರೇ ಒಂಟಿಬಡುಕ, ನಿನ್ನನ್ನು ಕೇಳಿದರೆ ಏನು ಗೊತ್ತಾಗುತ್ತದೆ?' ಎಂದು ನಿಡುಸುಯ್ಯುತ್ತಿದ್ದಳು.

ನಲವತ್ತರ ಅನೀಟ ನನ್ನ ಜತೆಗೇ ಕೆಲಸಮಾಡುತ್ತಾ ಹತ್ತು ವರ್ಷವಾಗಿದೆ. ಈಗ ಆಕೆಯ ಗಂಡ ಟೋನಿಯನ್ನು ಬಿಟ್ಟು ನಮ್ಮಾಸ್ಪತ್ರೆಯ ರೇಡಿಯಾಲಜಿ ಡಿಪಾರ್ಟ್‌ಮೆಂಟಿನಲ್ಲಿ ಕೆಲಸ ಮಾಡುವ ಆಕೆಗಿಂತ ಎಂಟು ವರ್ಷ ಚಿಕ್ಕವಳಾದ ಜ್ಯಾಕಿ ಎನ್ನುವವಳ ಜತೆ ತನ್ನ ಮುಂದಿನ ಬದುಕನ್ನು ಕಳೆಯುವ ನಿರ್ಧಾರ ಮಾಡಿದ್ದಾಳೆ. 'ತಪ್ಪು ತಿಳಿಯದಿದ್ದರೆ ಒಂದು ಪ್ರಶ್ನೆ ಕೇಳಬಹುದಾ ಅನೀಟಾ?' ಎಂಬ ಪೀಠಿಕೆಯೊಂದಿಗೇ ಕೇಳಿದ್ದೆ. ಆಕೆ ಕೂಡ 'ಹೂ' ಎನ್ನುವಂತೆ ನನ್ನ ಮುಖ ನೋಡಿದ್ದಳು.

'ನಲವತ್ತರ ಹರಯದಲ್ಲಿ ಈ ತಂಡ ಬದಲಾವಣೆ ಹೇಗೆ ಸಾಧ್ಯ? ನಮ್ಮೆಲ್ಲರ ಲೈಂಗಿಕ ಒಲವು, ಆಸಕ್ತಿ ಹದಿಹರಯದಲ್ಲಿ ನಿರ್ಧರಿತವಾಗುವುದಲ್ಲವೇ? ಹಿಂಗೆ ಯಾವಾಗ ಬೇಕಾದರೆ ಹಂಗೆ ಯಾರ ಜತೆಯಲ್ಲಾದರೂ ಇರುವುದಕ್ಕೆ ಸಾಧ್ಯವೇ?' ಎಂದು ಬಹಳ ಹಿಂಜರಿದುಕೊಂಡೇ ಕೇಳಿದ್ದೆ. ಈ ಪ್ರಶ್ನೆಯ ಅಪ್ರಸ್ತುತತೆ ಮತ್ತು ರಾಜಕೀಯ ಅಸಮರ್ಪಕತೆ ಬಹಳ ಪದರುಗಳವು ಎಂದು ನನಗರಿವಿತ್ತು.

'ಡಾಕ್, ನಿಜ. ಸೆಕ್ಷುಯಾಲಿಟಿಯೆನ್ನುವುದು ಪ್ರದರ್ಶನಕ್ಕೆ ಇಡುವ ವಸ್ತುವಲ್ಲ. ನನ್ನ ಲೈಂಗಿಕ ಆಸಕ್ತಿಯ ಬಗ್ಗೆ ನಿನಗೆ ಏನು ಗೊತ್ತಿದೆ? ಟೋನಿಯ ಜತೆ ಮದುವೆಯಾಗಿ ಮಕ್ಕಳಾದದ್ದೇ ತಡ ನನಗೆ ಗರ್ಲ್‌ಫ್ರೆಂಡ್ ಇರಬಾರದು ಅಂತಲಾ? ನನಗೆ ಟೋನಿಯಷ್ಟೇ ಟೀನ, ಮೋನಾ, ಲೀನ ಎಲ್ಲರೂ ಇಷ್ಟ. ಈಗ ಜ್ಯಾಕಿಗೆ ಸೆಟಲ್ ಆಗುತ್ತಿದ್ದೀನಿ. ನಿನ್ನ ಒಪ್ಪಿಗೆಯಿದೆಯೇ?' ಎಂದು ನಾಟಕೀಯವಾಗಿ ಕೇಳಿದ್ದಳು.

ಇಬ್ಬರು ಮಕ್ಕಳ ಪೂರಾ ಕಸ್ಟಡಿ ಆಕೆಗೇ ಸಿಕ್ಕಿದೆಯಂತೆ. ಅದನ್ನೂ ಒಂಥರಾ ತೇಲಿಸಿಯೇ ಹೇಳಿದ್ದಳು. 'ಡಾಕ್, ನಾನು ಇದುವರೆವಿಗೂ ಒಳ್ಳೆಯ ಅಮ್ಮನಾಗಿರಲಿಲ್ಲ. ಇನ್ನು ಮುಂದೆ ಜ್ಯಾಕಿಯ ಸಹವಾಸದಿಂದ ನಾನು ನನ್ನ ಮಕ್ಕಳಿಗೆ ಒಳ್ಳೆಯ ಅಮ್ಮನಾಗಲು ಪ್ರಯತ್ನಿಸುವೆ. ನಿಜ ಹೇಳಬೇಕೆಂದರೆ ಅಮ್ಮನಾಗಬೇಕೆನ್ನುವ ಹಂಬಲವೂ ನನಗಿರಲಿಲ್ಲ. ಆದರೇನು ಮಾಡುವುದು, ಒಬ್ಬ ಗಂಡಸಿನ ಜತೆ ಇದ್ದ ಮೇಲೆ ಮಕ್ಕಳಾಗದೇ ಇರುವುದು ಹೇಗೆ? ಅದೂ ನಾನು ಮತ್ತು ಟೋನಿ ಇಬ್ಬರೂ ಕ್ಯಾಥಲಿಕ್ಕು' ಎಂದು ಆಕೆಯ ಬಸಿರುಗಳಿಗೆ ಆಕೆಯ ಧರ್ಮವನ್ನು ಹೊಣೆ ಮಾಡಿದ್ದಳು.

ಅನೀಟಾ ಮತ್ತು ಟೋನಿಯ ನಡುವೆ ಎಲ್ಲವೂ ಸರಿಯಾಗಿಲ್ಲ ಎಂದು ನನಗೆ ಆಕೆ ನಮ್ಮ ಎಮರ್ಜೆನ್ಸಿ ರೂಮಿಗೆ ಬರುವ ಹೆಣ್ಣುಮಕ್ಕಳಿಗೆ ಅವರ ಪ್ರಿಯಕರರ ಬೀಜ ಕತ್ತರಿಸುವ ಯೋಜನೆಯನ್ನು ಹೇಳಿಕೊಡಬೇಕು ಎಂದು ಹೇಳಿದಾಗಲೇ ಗೊತ್ತಾಗಬೇಕಾಗಿತ್ತು. ಆದರೆ ನನಗೆ ಅರಿವಾದದ್ದು ತೀರ ಇತ್ತೀಚೆಗೆ. ಎರಡು ವರ್ಷಗಳ ಹಿಂದಿರಬೇಕು. ಅದೂ ತಕ್ಷಣಕ್ಕೆ ಗೊತ್ತಾಗಿರಲಿಲ್ಲ.

ಒಂದು ದಿನ ಆಕೆ ಕೆಲಸಕ್ಕೆ ತಡವಾಗಿ ಬಂದಿದ್ದಳು. ಯಾವತ್ತೂ ತನ್ನ ಹೊಂಗೂದಲನ್ನು ಚಿಮ್ಮಿಸುತ್ತಾ ಓಡಾಡುವ ಅನೀಟ ಅಂದು ಎಂದಿಗಿಂತ ಹೆಚ್ಚು ಮೇಕಪ್ ಮಾಡಿಕೊಂಡು

ತಲೆಗೆ ಬಾಂಡಾನಾ ಕಟ್ಟಿಕೊಂಡು ಕೆಲಸಕ್ಕೆ ಬಂದಿದ್ದಳು. ನನ್ನನ್ನು ನೋಡಿದವಳೇ 'ಡಾಕ್, ಒಂದು ಪ್ರೈವೇಟ್ ಕನ್ಸಲ್ಟೇಶನ್ ಮಾಡಬೇಕಿತ್ತು. ಮತ್ತೆ ಪೇಶೆಂಟಾಗಿ ರೆಜಿಸ್ಟರ್ ಮಾಡಿಸಿಕೊಂಡು ಬಾ ಎಂದು ಹೇಳಬೇಡ. ನಮ್ಮ ಆಸ್ಪತ್ರೆಯವರು ಹೆಂಗೆ ಅಂದರೆ ನಾನು ಇಲ್ಲಿ ಕೆಲಸ ಮಾಡ್ತೀನಿ ಅಂತ ಗೊತ್ತಿದ್ದರೂ ಕೇರ್ ಮಾಡಲ್ಲ. ಮನಸ್ಸಿಗೆ ಬಂದಂತೆ ಬಿಲ್ ಹಾಕುತ್ತಾರೆ. ಮೇಲಾಗಿ ನಾನು ಈ ಎಮರ್ಜೆನ್ಸಿ ರೂಮಿಗೆ ಪೇಶೇಂಟಾಗಿ ದಾಖಲಾದರೆ ನನ್ನ ಕೆಲಸ ಮಾಡೋರ್ಯಾರು?' ಎಂದು ನನ್ನನ್ನು ಪಕ್ಕದ ಪರೀಕ್ಷಾ ಕೊಠಡಿಗೆ ಕರಕೊಂಡು ಹೋಗಿ ತನ್ನ ಬಾಂಡಾನಾ ಬಿಚ್ಚಿದಳು.

ಆಕೆಯ ತಲೆಯಲ್ಲಿ ಸುಮಾರು ನಾಲ್ಕಿಂಚು ಉದ್ದದ ಗಾಯವಾಗಿತ್ತು. ಹಣೆ ನೀಲಿಗಟ್ಟಿತ್ತು. ಆಕೆಯ ಹೊಂಗೂದಲನ್ನು ಆಚೀಚೆ ಸರಿಸಿ ಪರೀಕ್ಷೆ ಮಾಡಿದಾಗ ಅಲ್ಲಿ ಕೂಡ ಮೂರು ನಾಲ್ಕು ಸಣ್ಣ ಗಾಲ್ಫ್ ಬಾಲ್ ಸೈಜಿನ ಜಜ್ಜುಗಾಯ. ನೋವಿನಿಂದ ಆಕೆಯ ಕಣ್ಣಲ್ಲಿ ನೀರು ಬಂತು. ನಾನು 'ಸಾರಿ' ಎಂದು ಪ್ರಶ್ನಾರ್ಥಕವಾಗಿ ಆಕೆಯ ಮುಖ ನೋಡಿದ್ದೆ. 'ನಿನ್ನೆ ಸ್ವಲ್ಪ ಜಾಸ್ತಿಯಾಗಿತ್ತು, ಡಾಕ್. ಜತೆಗೆ ಟೋನಿಯ ಹುಟ್ಟುಹಬ್ಬ ಬೇರೆ. ಅವನಿಗೆ ಅಂತಲೇ ವಿಶೇಷವಾಗಿ ಕೇಕ್ ಮಾಡಿದ್ದೆ. ಅದನ್ನು ಮಕ್ಕಳಿಗೆ ಕೊಟ್ಟು, ನಾನು ಟೋನಿ ಇಬ್ಬರೂ ಮನೆಯ ಹಿಂಭಾಗದ ಡೆಕ್ಕಿನಲ್ಲಿ ಕೂತು ಒಂದು ಜಾಯಿಂಟ್ ಹಚ್ಚಿಕೊಂಡೆವು. ಅದೇನಿತ್ತೋ ಅದರಲ್ಲಿ ತಲೆಯೆಲ್ಲ ತಿರುಗಿ, ಕಣ್ಣು ಕತ್ತಲು ಬಂತು. ನೀರು ಕುಡಿಯೋಣ ಅಂತ ಎದ್ದು ನಿಂತಿದ್ದಷ್ಟೇ ನೆನಪು. ನಂತರ ಡೆಕ್ಕಿನಿಂದ ಹದಿನೈದು ಮೆಟ್ಟಿಲು ಕೆಳಗೆ ಉರುಳಿ ಬಿದ್ದಿದ್ದೆ. ತಲೆಕೆಳಗಾಗಿ ಬಿದ್ದಿದ್ದೆನಂತೆ. ಟೋನಿಯೂ ಕುಡಿದಿದ್ದ. ಇಬ್ಬರೂ ಹಾಗೆಯೇ ಸಾವರಿಸಿಕೊಂಡು ಮೇಲೆ ರೂಮಿಗೆ ಹೋಗಿ ಮಲಗಿಬಿಟ್ಟೆವು. ಬೆಳಿಗ್ಗೆ ಎಚ್ಚರವಾದಾಗ ಸಿಕ್ಕಾಪಟ್ಟೆ ತಲೆನೋವು. ಕನ್ನಡಿಯಲ್ಲಿ ಮುಖ ನೋಡಿಕೊಂಡರೆ ಮುಖವೆಲ್ಲ ರಕ್ತ. ಇದುವರೆಗೂ ಆರಾಮಾಗಿದ್ದೀನೆಂದರೆ ನನ್ನ ಬುರುಡೆ ಗಟ್ಟಿ ಅಂತಲೇ ಅಲ್ವಾ? ನಾನು ಗಾಯವನ್ನೆಲ್ಲಾ ಕ್ಲೀನ್ ಮಾಡಿಕೊಂಡಿದ್ದೀನಿ. ಹೊಲಿಗೆ ಬೇಡ ಅನ್ನಿಸುತ್ತೆ. ಸ್ಟೇಪ್ಲರಲ್ಲಿ ನಾಲ್ಕು ಪಿನ್ ಹಾಕಿದರೆ ಸಾಕು ಅನ್ನಿಸುತ್ತೆ. ನೀನು ಹೊಲಿಗೆ ಬೇಕು ಅಂತ ಹೇಳಿದರೆ ನಾನೇನು ಬೇಡ ಅಂತ ಗಲಾಟೆ ಮಾಡಲ್ಲ. ನಾನು ಬಹಳ ಒಳ್ಳೆ ಪೇಶೆಂಟ್' ಎಂದು ಕಣ್ಣು ಹೊಡೆದಿದ್ದಳು.

ತಾನು ಪ್ರತಿ ರಾತ್ರಿ ನೋಡುವ ಹೆಂಗಸರ ಕಥೆಗಳನ್ನೆಲ್ಲಾ ಸೇರಿಸಿ ತನ್ನ ಕಥೆ ಹೆಣೆಯುತ್ತಿದ್ದಾಳೆ ಎಂದು ನನಗೆ ಅಂದು ಹೇಗೆ ಹೊಳೆಯಲಿಲ್ಲ ಎಂದು ನನ್ನನ್ನು ನಾನು ನಂತರದ ದಿನಗಳಲ್ಲಿ ಬಹಳ ಹಳಿದುಕೊಂಡಿದ್ದೇನೆ. ಆದರೆ, ಅನೀಟಾ ತೊಂದರೆಯಲ್ಲಿದ್ದಾಳೆ ಎಂದು ನಾನು ಯೋಚಿಸುವುದಕ್ಕೆ ಯಾವ ಕಾರಣವೂ ಇರಲಿಲ್ಲ. ದಿನಬೆಳಗಾದರೆ ಇನ್ಸ್ಟಾಗ್ರಾಮಿನಲ್ಲಿ ತನ್ನ ಮತ್ತು ತನ್ನ ಸಂಸಾರದ ಚಿತ್ರಗಳನ್ನು ಹಾಕುವ, ತಿಂಗಳಿಗೆ ನಾಲ್ಕು ಬಾರಿ ಮಕ್ಕಳನ್ನು ಅವಳಮ್ಮನ ಮನೆಯಲ್ಲಿ ಬಿಟ್ಟು ಟೋನಿಯ ಜತೆ ಮೀನು ಹಿಡಿಯಲು, ಜಿಂಕೆ ಬೇಟೆಯಾಡಲು, ಕುದುರೆ ಸವಾರಿ ಮಾಡಲು, ಬೆಟ್ಟ ಹತ್ತಲು ಊರೂರು

ತಿರುಗುವ ಈಕೆಗೆ ಟೋನಿ ಹೀಗೆ ಮುಖಾಮೂತಿ ನೋಡದೇ ಹೊಡೆಯಬಹುದು ಎಂದು ನಾನು ಊಹಿಸಿರಲಿಲ್ಲ.

ಆಕೆ ಕುಡಿದು, ಗಾಂಜಾ ಸೇದಿ ಮೆಟ್ಟಿಲು ಜಾರಿ ಬಿದ್ದ ಕತೆಯನ್ನೇ ನಂಬಿ ನಾಲ್ಕು ಸ್ಟೇಪ್ಲರ್ ಪಿನ್‌ಗಳನ್ನು ಹಾಕಿದ್ದೆ. ನಂತರ ಆಕೆ ತನ್ನ ಪಾಳಿಯನ್ನು ಮಾಡಿ ಮುಗಿಸಿದ್ದಳು.

ನಂತರದ ದಿನಗಳಲ್ಲಿ ಆಕೆ ಪ್ರತಿದಿನವೂ ಒಂದಲ್ಲ ಒಂದು ಗಾಯ ಮಾಡಿಕೊಂಡು ಬರುತ್ತಿದ್ದಾಗ ಇವೆಲ್ಲವೂ ಸಣ್ಣ ಪುಟ್ಟ ಅಪಘಾತಗಳಿಂದಾದದ್ದಲ್ಲ ಎಂದು ನನಗೆ ಗೊತ್ತಾಗಿತ್ತು. ಆಕೆಯೂ ನನ್ನನ್ನು ನಂಬಿಸಲು ಪ್ರಯತ್ನಪಡುತ್ತಿರಲಿಲ್ಲ. ಟೋನಿ ಹೊಡೆಯುತ್ತಿದ್ದ, ಹೊಡೆಯುತ್ತಿದ್ದಾನೆ, ಹೊಡೆಯುತ್ತಲೇ ಇರುತ್ತಾನೆ ಎಂದು ಆಕೆ ಹೇಳಿದಾಗ ಆಕೆಯನ್ನು ನೀನು ಇದನ್ನು ಯಾಕೆ ರಿಪೋರ್ಟ್ ಮಾಡಬಾರದು ಎಂದು ನಾನು ಕೇಳಿದ್ದೆ. ಒಮ್ಮೆಯಂತೂ ಒತ್ತಾಯದಿಂದ ನಾನೇ ರಿಪೋರ್ಟ್ ಬರೆದು ಸಹಿ ಹಾಕಿಕೊಡು ಎಂದು ಬಲವಂತ ಮಾಡಿದಾಗ 'ಡಾಕ್, ನೀನು ಗೆಳೆಯ ಅಂತ ಆಗಾಗ್ಗೆ ಸಣ್ಣ ಪುಟ್ಟ ಸಹಾಯ ಕೇಳ್ತೀನಿ. ನಿನಗೆ ಆಗದಿದ್ದರೆ ಹೇಳು. ನನಗೆ ನಿನ್ನ ಥರದವರು ಬೇರೆ ಗೆಳೆಯ, ಗೆಳತಿಯರೂ ಇದ್ದಾರೆ. ಟೋನಿಯಂಥವರನ್ನು ಹೇಗೆ ನಿಭಾಯಿಸಬೇಕು ಎನ್ನುವುದು ನನಗೂ ಗೊತ್ತಿದೆ' ಎಂದು ಕೊಂಚ ಗದರಿದ ಹಾಗೆ ಹೇಳಿದ್ದಳು.

ಇದಾಗಿ ಕೆಲದಿನಗಳ ನಂತರ ನಾನು ಕೆಲಸ ಮಾಡದೇ ಮನೆಯಲ್ಲಿದ್ದ ಒಂದು ರಾತ್ರಿ ನನ್ನ ಮನೆಯ ಬಾಗಿಲಲ್ಲಿ ಅನೀಟಾ ನಿಂತಿದ್ದಳು. ಮನೆಯ ಬೆಲ್ಲನ್ನು ಒಂದೇ ಸಮನೆ ಬಾರಿಸುತ್ತಿದ್ದಳು. ಮಾರನೆಯ ದಿನವೂ ಕೆಲಸವಿಲ್ಲದುದರಿಂದ ನನ್ನ ದೈನಿಕ ಡೋಸಾದ ಎರಡು ಲಾರ್ಜಿಗಿಂತ ಹೆಚ್ಚಿನ ಗ್ಲೆನ್‌ಫಿಡಿಚ್ ನನ್ನ ಹೊಟ್ಟೆ ಸೇರಿ ಮೈಮೇಲೆ ಎಚ್ಚರವಿಲ್ಲದೇ ಮಲಗಿದ್ದೆ ಅನಿಸುತ್ತದೆ. ಆಕೆ ಬಾಗಿಲ ಬಳಿ ಬಂದು ಒಂದೇ ಸಮ ಬೆಲ್ ಮಾಡಿದಾಗಲೇ ಎಚ್ಚರ. ಬಾಗಿಲು ತೆರೆದು ಒಳಗೆ ಕರಕೊಂಡು ಬಂದೆ. ಆಕೆಯೂ ಕುಡಿದಿದ್ದಾಳೆ ಅನ್ನಿಸಿತು. ಆಕೆಯ ಮಾತು ತೊದಲುತ್ತಿತ್ತು. 'ಡಾಕ್, ಆಸ್ಪತ್ರೆಗೇ ಹೋಗುತ್ತಿದ್ದೆ. ನನ್ನ ಈ ಸ್ಥಿತಿಯಲ್ಲಿ ಹೋಗೋದು ಬೇಡ ಅಂತನ್ನಿಸಿತು. ನನ್ನ ಈ ಮುಂಗೈಯನ್ನು ನೋಡು. ಮಡಿಸುವುದಕ್ಕೆ ಆಗುತ್ತಿಲ್ಲ. ನೀನು ಎಕ್ಸ್-ರೇ ಮಾಡಿಸು ಎಂದರೆ ನಾಳೆ ಹೋಗಿ ಮಾಡಿಸುತ್ತೇನೆ. ಸದ್ಯಕ್ಕೆ ಈ ನನ್ನ ಎಡಭುಜದ ಮೇಲಿನ ಈ ಗಾಯ ನನಗೆ ಸರಿಯಾಗಿ ಕಾಣಿಸುತ್ತಿಲ್ಲ. ನೀನೇ ನೋಡಿ ಹೇಳು. ಹೊಲಿಗೆ ಏನಾದರೂ ಹಾಕಬೇಕಾ ಅಂತ' ಎಂದು ಹಾಕಿದ್ದ ಬ್ಲೌಸನ್ನು ತೆಗೆದು ಬರೇ ಬ್ರಾದಲ್ಲಿ ನಿಂತಳು.

ನಾನು ಇನ್ನೂ ನಶೆಯಿಂದ ಹೊರಗೆ ಬಂದಿರಲಿಲ್ಲ ಅನಿಸುತ್ತೆ. ಆಕೆಗೆ ಯಾವ ಮಟ್ಟದ ಎಚ್ಚರವಿತ್ತು ಎನ್ನುವುದು ನನಗೆ ಇನ್ನೂ ಗೊತ್ತಿಲ್ಲ. ನಾನು ಸಾವರಿಸಿಕೊಂಡು ಆಕೆಯ ಮುಂಗೈಯನ್ನು ಮುಟ್ಟಿ ನೋಡಿದೆ. ನೋಯುತ್ತಿದ್ದರೂ ಕೈಯನ್ನು ಮಡಿಸಲು ಆಕೆಗೆ ಸಾಧ್ಯವಾಗುತ್ತಿತ್ತು. ಸ್ವಲ್ಪ ಊತವೂ ಇತ್ತು. ಮೊದಲ ಪರೀಕ್ಷೆಗೆ ಕೈ ಮುರಿದಿರಲಾರದು ಅನಿಸಿತ್ತು. ಒಂದು ಏಸ್ ಬ್ಯಾಂಡೇಜ್ ಕಟ್ಟಿ, ಬೆನ್ನಿಗಾಗಿದ್ದ ಗಾಯವನ್ನು ನೋಡಿದೆ. ಆಳವಾಗಿ ಕಚ್ಚಿದ ಗುರುತಿತ್ತು. ಮನೆಯಲ್ಲಿದ್ದ ಆಂಟಿಸೆಪ್ಟಿಕ್ ದ್ರಾವಣದಲ್ಲಿ ಗಾಯವನ್ನು

ಶುಚಿಗೊಳಿಸಿ, ಬ್ಯಾಂಡೇಡ್ ಹಾಕಿದೆ. 'ಕೈ ಮುರಿದ ಹಾಗಿಲ್ಲ. ಆದರೆ ನಾಳೆ ಎಕ್ಸ್-ರೇ ಮಾಡಿಸಿಕೊಂಡರೆ ಒಳ್ಳೆಯದೇನೋ ಅನ್ನಿಸುತ್ತದೆ' ಎಂದು ನಾನು ನಿರ್ಭಾವುಕವಾಗಿ ಹೇಳಿದೆ. ಟೋನಿಯ ಹೆಸರನ್ನು ಪ್ರಸ್ತಾಪ ಮಾಡಿದರೆ ಮತ್ತೆ ಸಿಡಿದುಬೀಳುತ್ತಾಳೇನೋ ಎಂಬ ಹೆದರಿಕೆಯಿತ್ತು.

ಇದ್ದಕ್ಕಿದ್ದಂತೆ ಅನೀಟಾ ನನ್ನನ್ನು ತಬ್ಬಿಕೊಂಡು ಅಳಹತ್ತಿದಳು. 'ಡಾಕ್, ನೀನು ಏನು ಯೋಚನೆ ಮಾಡುತ್ತಿದ್ದೀಯ ಅಂತ ನನಗೆ ಗೊತ್ತಿದೆ. ಆಯಿತು. ಇನ್ನು ಅನುಭವಿಸುವುದಿಲ್ಲ. ನಾನು, ಟೋನಿ ಇಬ್ಬರೂ ಡೈವೋರ್ಸಿಗೆ ಅರ್ಜಿ ಹಾಕಿದ್ದೀವಿ. ಇನ್ನು ನನಗೆ ತಡೆಯಲಾಗದು, ಡಾಕ್. ಏನೋ ನೀನಿದ್ದೀಯ ಎಂದು ನಾನು ಉಳಕೊಂಡಿದ್ದೀನಿ. ನಿನ್ನ ಈ ಅನಧಿಕೃತ ಸೇವೆಗೆ ಥ್ಯಾಂಕ್ಸ್' ಎಂದು ಜೋರಾಗಿ ಅತ್ತಳು. 'ಡಾಕ್, ಇವತ್ತು ನಿನ್ನ ಮನೆಯಲ್ಲಿ ಉಳಕೊಳ್ಳಬಹುದಾ? ಡೋಂಟ್ ವರಿ. ನಾನೇನು ನಿನ್ನನ್ನು ತಿಂದುಹಾಕಿಬಿಡುವುದಿಲ್ಲ' ಎಂದು ಅಲ್ಲಿಯೇ ಇದ್ದ ಸೋಫಾದ ಮೇಲೆ ಧಪ್ ಎಂದು ಕೂತು 'ಡಾಕ್, ನೋವಿಗೆ ನಿನ್ನ ಹತ್ತಿರ ಸ್ಟ್ರಾಂಗಾಗಿರೋದೇನಾದರೂ ಇದೆಯಾ?' ಎಂದು ಕಣ್ಣು ಹೊಡೆದಳು. ನಾನು ಮಾತಾಡದೇ ಅಲ್ಲಿಯೇ ಬಾಟಲಲ್ಲಿದ್ದ ಗ್ಲೆನ್‌ಫಿಡಿಚ್ ಅನ್ನು ಒಂದು ಗ್ಲಾಸಿಗೆ ಬಗ್ಗಿಸಿ ಕೊಟ್ಟೆ. ಒಂದೇ ಗುಟುಕಿಗೆ ಕುಡಿದು ನನ್ನನ್ನು ಒರಗಿಕೊಂಡೇ ಕೂತಳು.

ನಾನು ಒಬ್ಬಂಟಿಯೇ ಹೊರತು ಬ್ರಹ್ಮಚಾರಿಯೇನಲ್ಲ. ಒಂದಾನೊಂದು ಕಾಲದಲ್ಲಿ ಒಂದು ವರ್ಷ ಸಂಸಾರ ಮಾಡಿದ್ದೆ. ಈಗಲೂ ಟಿಂಡರ್ ಪ್ರೊಫೈಲಲ್ಲಿ 'ಒಂಟಿ ಡಾಕ್ಟರು, ನೇರಾನೇರ, ಕ್ಯಾಶ್ಯುಯಲ್ ಸಂಬಂಧದ ಹುಡುಕಾಟದಲ್ಲಿ' ಎಂದು ಹದಿನಾರಿಂಚಿನ ನನ್ನ ಬೈಸೆಪ್ಪುಗಳನ್ನು ಪ್ರದರ್ಶಿಸುತ್ತಿರುವ ನನ್ನ ಚಿತ್ರವನ್ನು ಮೊನ್ನೆ ತಾನೇ ಅಪ್‌ಲೋಡ್ ಮಾಡಿದ್ದೇನೆ. ಆದರೆ ನನ್ನ ಡೇಟಿಂಗ್ ಬದುಕನ್ನು ನನ್ನ ಕೆಲಸದಿಂದ ಪೂರಾ ಬೇರೆಯಾಗಿಟ್ಟಿದ್ದೇನೆ. ಜತೆಯಾಗಿ ರಾತ್ರಿ ಕಳೆದವರ ಸಂಗಡ ಮಾರನೆಯ ದಿನ ಕೆಲಸ ಮಾಡುವುದು ಕಷ್ಟವೆನ್ನುವುದು ಒಂದು ಕಾರಣವಾದರೂ ನಾನು ಇದುವರೆಗೆ ಕೆಲಸ ಮಾಡಿರುವ ಆಸ್ಪತ್ರೆಗಳ ಎಚ್. ಆರ್.ಗಳು ಒಂದೇ ವಿಭಾಗದಲ್ಲಿ ಶ್ರೇಣೀಕೃತ ಕೆಲಸಗಳನ್ನು ಪರಸ್ಪರ ಸಂಬಂಧವಿರುವವರು ಮಾಡುವುದಕ್ಕೆ ಅನುಮತಿ ಕೊಡುವುದಿಲ್ಲ ಎನ್ನುವುದು ಅಧಿಕೃತ ಕಾರಣ. ಗಂಡ, ಹೆಂಡತಿ ಇಬ್ಬರೂ ಡಾಕ್ಟರಾದರೆ ಒಂದೇ ವಿಭಾಗದಲ್ಲಿ ಕೆಲಸ ಮಾಡಬಹುದು. ಗಂಡ ವೈದ್ಯನಾಗಿ, ಹೆಂಡತಿ ನರ್ಸಾಗಿದ್ದರೆ ಅಥವಾ ವೈಸ್‌ವರ್ಸ ಆದರೆ, ನರ್ಸುಗಳಿಗೆ ತಾವು ಕೆಲಸ ಮಾಡುವ ಡಿಪಾರ್ಟ್‌ಮೆಂಟನ್ನು ಬದಲಿಸಲು ಆದೇಶ ಕೊಡಲಾಗುತ್ತದೆ. ಏಕೆಂದರೆ ಡಾಕ್ಟರುಗಳು ಒಂದೇ ಸ್ಪೆಷಾಲಿಟಿಯಲ್ಲಿ ಮಾತ್ರ ಪರಿಣತರು ತಾನೇ. ಹೃದಯತಜ್ಞಳೊಬ್ಬಳು ತನ್ನ ಗಂಡು ಅಥವಾ ಹೆಣ್ಣು ನರ್ಸಿನ ಜತೆ ಹೊಸದಾಗಿ ಡೇಟ್ ಮಾಡಲು ಶುರುಮಾಡಿದರೆ ಡಾಕ್ಟರಾದ ಆಕೆಯನ್ನು ಆಂಕಾಲಜಿ ವಿಭಾಗದಲ್ಲಿ ಕೆಲಸ ಮಾಡು ಎಂದು ಹೇಳಲಾಗುವುದಿಲ್ಲವಲ್ಲ. ಆದರೆ ನರ್ಸುಗಳು ಯಾವ ಡಿಪಾರ್ಟ್‌ಮೆಂಟುಗಳಿಗಾದರೂ 'ಫ್ಲೋಟ್' ಆಗಬಹುದು.

ನಾನು ಬಯಸುವುದು ಕ್ಯಾಶುಯಲ್ ಸಂಬಂಧವಾದರೂ ಒಮ್ಮೆ ಈ ಇಂಟರ್ನೆಟ್ ಸೈಟುಗಳಿಂದ ಶುರುವಾದ ಸಂಬಂಧ ಇಷ್ಟೇ ದಿನ ಆದಮೇಲೆ ಇಷ್ಟೇ ಕ್ಯಾಶುಯಲ್ ಆಗಿ ಮುಗಿಯಬೇಕು ಎನ್ನುವ ನಿಯಮವೇನಿಲ್ಲವಲ್ಲ. ಕೆಲವೊಮ್ಮೆ ಮೂರು ನಾಲ್ಕು ಡೇಟು, ಇನ್ನೂ ಕೆಲವೊಮ್ಮೆ ನಿನ್ನ ಬಿಟ್ಟು ಬದುಕಿರಲಾರೆ ಎನ್ನುವ ಮಟ್ಟಕ್ಕೆ ಕೂಡ ಹೋಗಿದೆ.

ಇಷ್ಟೆಲ್ಲಾ ಆದರೂ ನಾನು ಒಂಟಿಯಾಗಿರುವುದು ನನ್ನ ಇಷ್ಟಾರ್ಥ. ಒಂಟಿತನ ಉಳಿಸಿಕೊಳ್ಳಲು ನಾನು ಮಾಡುವ ಪ್ರಯತ್ನಗಳನ್ನು ಹೇಳಲು ಹೊರಟರೆ ಅದೇ ಇನ್ನೊಂದು ಕತೆಯಾದೀತು.

ಒಟ್ಟು ಏನೆಂದರೆ ಎಮರ್ಜನ್ಸಿ ರೂಮಿನ ಡಾಕ್ಟರಾದ ನನಗೆ ನಮ್ಮ ಆಸ್ಪತ್ರೆಯಲ್ಲಿ ಡೇಟಿಂಗ್ ಅವಕಾಶಗಳು ಬಹಳ ಕಮ್ಮಿ. ಒಮ್ಮೆ ಹೀಗೇ ಟಿಂಡರಿನಲ್ಲಿ ಪ್ರೊಫೈಲನ್ನು ಸರಿಯಾಗಿ ನೋಡಿಕೊಳ್ಳದೇ ಸಂಜೆ ಊಟಕ್ಕೆ ಸಿಗೋಣ ಎಂದು ಪರಸ್ಪರ ಆಹ್ವಾನಿಸಿಕೊಂಡು ರೆಸ್ಟುರೆಂಟಿಗೆ ಹೋದಾಗ ಸಿಕ್ಕ ಗೆಳತಿ ನಮ್ಮದೇ ಆಸ್ಪತ್ರೆಯ ಫಾರ್ಮಸಿ ವಿಭಾಗದಲ್ಲಿ ಕೆಲಸ ಮಾಡುತ್ತಿದ್ದಾಳೆಂದು ಊಟ ಮಾಡುವ ಸಮಯದಲ್ಲಿ ಇಬ್ಬರಿಗೂ ಗೊತ್ತಾಗಿತ್ತು. ಗೊತ್ತಾದ ತಕ್ಷಣ ನಮ್ಮ ಡೇಟನ್ನು ಅರ್ಧ ಊಟಕ್ಕೇ ಮುಗಿಸಿ, ಬೇರೆ ಬೇರೆ ಬಿಲ್ಲು ಹಾಕಿಸಿ ವಾಪಸ್ಸು ಮನೆಗೆ ಬಂದಿದ್ದೆವು. ಅಂದಿನಿಂದ ನಾನು ರಿಸ್ಕೇ ಬೇಡ ಎಂದು ಯಾವುದೇ ಡೇಟಿನ ಮುಂಚೆ ನಾಲ್ಕೈದು ಬಾರಿ ಫೋನು ಮಾಡಿ ಪೂರ್ವಾಪರ ಎಲ್ಲ ವಿಚಾರಿಸಿಕೊಂಡು ನರ್ಸು, ಡಾಕ್ಟರು, ಫಾರ್ಮಸಿಸ್ಟ್, ಎಕ್ಸ್-ರೇ ಟೆಕ್ನಿಶಿಯನ್, ಫಿಸಿಯೋತೆರಪಿಸ್ಟ್, ಹೀಗೆ ಇಡೀ ಹೆಲ್ತ್ ಕೇರ್ ಇಂಡಸ್ಟ್ರಿಯನ್ನೇ ನನ್ನ ಡೇಟಿಂಗ್ ಪೂಲಿನಿಂದ ಹೊರಗಿಟ್ಟಿರುವೆ. ಎಮರ್ಜನ್ಸಿ ಡಾಕ್ಟರಾದ ನನಗೆ ಎಲ್ಲ ವಿಭಾಗಗಳ ಜತೆಗೂ ಬಹಳ ಹತ್ತಿರದ ಸಂಬಂಧವಿದ್ದೇ ಇದ್ದುದರಿಂದ ನಾನು ಆಸ್ಪತ್ರೆಯಲ್ಲಿ ಎಲ್ಲರಿಗೂ ಬೇಕಾಗಿದ್ದ ಡಾಕ್ಟರಾಗಿದ್ದರೂ ಆಸ್ಪತ್ರೆಯ ಎಲ್ಲ ಒಂಟಿ ಹೆಂಗಸರಿಗೂ ಅನ್‌ಡೇಟಬಲ್ ಆಗಿಯೇ ಉಳಿದಿದ್ದೆ.

ಆದರೆ, ಇಂದು ನನ್ನ ಜತೆಯಲ್ಲಿಯೇ ದಿನಾ ಕೆಲಸ ಮಾಡುವ ನರ್ಸ್ ಅನೀಟಾ ಗಂಡನಿಂದ ಹೊಡೆತ ತಿಂದು ಆತನಿಗೆ ಡೈವೋರ್ಸು ಕೊಡುತ್ತೇನೆಂದು ಹೇಳಿ ಅರೆಪ್ರಜ್ಞಾವಸ್ಥೆಯಲ್ಲಿ ನನ್ನನ್ನು ಒರಗಿ ಕೂತಿದ್ದಾಳೆ. ಆಗಾಗ ಮೆಲ್ಲಗೆ ಮುಲುಗುತ್ತಾಳೆ. ಇಲ್ಲಿ ನನ್ನಿಂದ ಒಂದು ತಪ್ಪು ನಡೆದಲ್ಲಿ ಮುಂದೆ ನನ್ನ ಕೆಲಸ, ಕೆರಿಯರುಗಳು ಹಿಡಿಯಬಹುದಾದ ಪಾತಳಿಯನ್ನು ನೆನೆನೆನೆದು ನನ್ನ ಪುರುಷಾಕಾರವು ಶೇಪಿಲ್ಲದ ಅಮೀಬಾದಂತೆ ಪಸರಿಸಿಕೊಂಡು ಬಳಲಿತ್ತು. ನನ್ನಲ್ಲಿದ್ದ ಗಂಡಸು ನನ್ನ ಕೆಲಸದ ಪ್ರೋಟೋಕಾಲುಗಳು, ನಿಯಮಗಳ ಮುಂದೆ ಮೆತ್ತಗಾಗಿದ್ದ.

ಆಕೆಯನ್ನು ಸೋಫಾದ ಮೇಲೇ ಮಲಗಿಸಿ ನಾನು ನನ್ನ ರೂಮಿಗೆ ಹೋದೆ. ಹೋಗುವ ಮೊದಲು ಬಾಟಲಿನಿಂದೆಯೇ ಗ್ಲೆನ್‌ಫಿಡಿಚ್ಚನ್ನು ನಿಧಾನವಾಗಿ ಗುಟುಕರಿಸಿದೆ. ನನ್ನ ರೂಮಿಗೆ ಹೋಗಿ ಮಲಗಿದೆ. ಮಲಗಿದ್ದಷ್ಟೇ ನೆನಪು. ಗಡದ್ದು ನಿದ್ದೆ.

ಎದ್ದಾಗ ಅನೀಟಾ ಫ್ರಿಜ್ಜಿನಿಂದ ಕಿತ್ತಳೆರಸ ಬಗ್ಗಿಸಿಕೊಂಡು ಡೈನಿಂಗ್ ರೂಮಿನಲ್ಲಿ ಕುಡಿಯುತ್ತಾ ಕೂತಿದ್ದಳು.

ನನ್ನ ನೋಡಿ 'ಡಾಕ್, ನಾನು ಮನೆಗೆ ಹೊರಡಬೇಕು. ನಿನ್ನೆ ರಾತ್ರಿ ಇಲ್ಲಿ ಉಳಕೊಳ್ಳಕ್ಕೆ ಅನುಕೂಲ ಮಾಡಿಕೊಟ್ಟಿದ್ದಕ್ಕೆ ಥ್ಯಾಂಕ್ಸ್. ಮಕ್ಕಳನ್ನು ಸ್ಕೂಲಿಗೆ ರೆಡಿಮಾಡಬೇಕು. ಟೋನಿಗೆ ಹೇಳಿಯಾಗಿದೆ. ಸದ್ಯದಲ್ಲಿಯೇ ಆತ ಬೇರೆ ಮನೆಗೆ ಹೋಗುತ್ತಾ ಇದ್ದಾನೆ. ನಾನು ಹೊರಡುತ್ತೇನೆ. ಮುಂದಿನ ಬುಧವಾರದತನಕ ನನಗೆ ಕೆಲಸ ಇಲ್ಲ. ಕ್ಯಾಲೆಂಡರ್ ನೋಡಿದೆ. ನೀನೂ ಅಂದು ಕೆಲಸ ಮಾಡುತ್ತಿದ್ದೀಯ. ಸಿಗಲಾ?' ಎಂದು ಹೇಳಿ ಹೊರಟುಬಿಟ್ಟಳು.

ಹೋಗುವ ಮುನ್ನ 'ಡಾಕ್, ಆ ಎಕ್ಸ್-ರೇ ಟೆಕ್ನಿಶಿಯನ್ ಜ್ಯಾಕಿ ಇದ್ದಾಳಲ್ಲ. ಅವಳ ಬಗ್ಗೆ ನಿನಗೇನನ್ನಿಸುತ್ತೆ?' ಕೇಳಿದಳು.

ಹಿಂದೆಮುಂದೆ ಗೊತ್ತಿಲ್ಲದೆ ನಾನು ಇಂಥ ಪ್ರಶ್ನೆಗೆ ಹೇಗೆ ಉತ್ತರಿಸುವುದು? ನಾನು ತಬ್ಬಿಬ್ಬಾಗಿ ಆಕೆಯ ಮುಖ ನೋಡಿದೆ.

'ಹೆಣ್ಣುಮಕ್ಕಳಿಗೆ ಅವರ ಗೆಳೆಯರ ಬೀಜ ಕತ್ತರಿಸಿಬಿಡಿ ಎಂದು ಹೇಳಿಕೊಡುವ ಯೋಜನೆಯಿದ್ದ ನನಗೇ ಇವೆಲ್ಲ ಗೊತ್ತಾಗಲಿಲ್ಲವಾ ಅನಿಸಬಹುದಲ್ಲ. ನಾನೂ ನನಗೆ ಟೋನಿ ಹೊಡೆಯುತ್ತಿದ್ದಾಗ ಇದರ ಬಗ್ಗೆ ಬಹಳ ಯೋಚನೆ ಮಾಡುತ್ತಿದ್ದೆ. ಕೆಲಸ ಬೇರೆ, ಮನೆ ಬೇರೆ ಡಾಕ್. ಕೆಲಸದಲ್ಲಿ ನಾನು ಒಬ್ಬಳು ಒಳ್ಳೆ ನರ್ಸಾಗಿ ನನ್ನ ಕೆಲಸ ಮಾಡುತ್ತಿದ್ದೆ. ಮನೆಯಲ್ಲಿ ಕೂಡ ನಾನು ಒಳ್ಳೆಯ ಹೆಂಡತಿಯಾಗೋ ಪ್ರಯತ್ನ ಮಾಡುತ್ತಾ ಇದ್ದೆ ಅಂದುಕೊಂಡಿದ್ದೆ. ಒಟ್ಟೇನು ಗೊತ್ತಾ, ಡಾಕ್. ನನಗೂ ಗಂಡಸರಿಗೂ ಸರಿಹೋಗಲ್ಲ. ಟೋನಿಯೇನು ನನ್ನ ಮೊದಲ ಗಂಡನಲ್ಲ. ಹೆಂಗಸರ ಸಹವಾಸವೂ ನನಗೆ ಹೊಸದೇನಲ್ಲ. ನಾನು ತುಂಬಾ ತುಂಬಾ ಹೆಣ್ಣು ಅನಿಸುತ್ತದೆ. ಐ ಆಮ್ ಟೂ ಮಚ್ ಆಫ್ ಅ ವುಮನ್. ನನ್ನನ್ನು ನನ್ನ ಗಂಡಸರು ಅಡ್ವಾಂಟೇಜ್ ತೆಗೆದುಕೊಳ್ಳುತ್ತಾ ಇದ್ದಾರೆ ಎಂದು ನನಗೆ ಅರಿವಾಗುವುದಕ್ಕೆ ಬಹಳ ಸಮಯ ಬೇಕಾಗುತ್ತದೆ' ಎಂದಳು.

ಅನೀಟಾ ಮಾತಾಡುತ್ತಿದ್ದಳು 'ನಾನು ಹಳೆಯ ಕಾಲದವಳೇನೋ, ಡಾಕ್. ಈಗಲೂ ಬೆಳಿಗ್ಗೆ ಟೋನಿಗೆ ಹಾಸಿಗೆಗೇ ಕಾಫಿ ತೆಗೆದುಕೊಂಡು ಹೋಗಿ ಕೊಡುತ್ತೀನಿ. ಬೆಳೆಯುತ್ತಿದ್ದಾಗ ನನಗೆ ಐದು ಜನ ತಂಗಿಯರಿದ್ದರು, ಅಪ್ಪ ಕೂಡ ಅಮ್ಮನಿಗೆ ಮತ್ತು ನಮ್ಮೆಲ್ಲರಿಗೂ ಹೊಡೆಯುತ್ತಿದ್ದ. ಗಂಡಸರಿಂದ ಹೊಡೆಸಿಕೊಳ್ಳುವುದು ತೀರ ಸಹಜವಾದ ಕ್ರಿಯೆ ಎಂತಲೇ ತಿಳಕೊಂಡು ಬೆಳೆದದ್ದು. ಹಾಗಾಗಿ ಟೋನಿ ಹೊಡೆಯುತ್ತಿದ್ದಾಗ ನನಗೆ ಎಲ್ಲ ಸರಿಹೋಗುತ್ತದೆ, ನೀನು ಪ್ರತಿಬಾರಿ ಕಂಪ್ಲೇಂಟ್ ಕೊಡು ಎಂದು ಬಲವಂತ ಮಾಡುತ್ತಿದ್ದಾಗ ಇವನಿಗ್ಯಾಕೆ ಇಲ್ಲದ ಉಸಾಬರಿ ಎಂದು ಸಿಟ್ಟು ಬರುತ್ತಿತ್ತು. ಆದರೆ, ನೀನು ಹೇಳಿದಾಗಲೆಲ್ಲ ಆ ವಿಷಯದ ಬಗ್ಗೆ ಬಹಳ ಯೋಚಿಸುತ್ತಿದ್ದೆ. ಹಾಗಾಗೇ ಡೈವೋರ್ಸ್ ಮಾಡಲು ಧೈರ್ಯ ಬಂದದ್ದು. ನಿನ್ನೆ ನಾನು ಟೋನಿ ಇಬ್ಬರೂ ನಮ್ಮ ಡೈವೋರ್ಸ್ ಪೇಪರಿಗೆ ಸಹಿ ಹಾಕಿ ಬಂದ ಮೇಲೆ ಮತ್ತೆ ಇನ್ನು ಅವಕಾಶವೇ ಸಿಗುವುದಿಲ್ಲವೇನೋ ಅನ್ನುವ ಹಾಗೆ ನನಗೆ ಹೊಡೆಯುತ್ತಾ ಹೋದ. ಯಾಕೋ ಏನೋ ಮೊದಲ ಬಾರಿ ಹೊಡೆಯುತ್ತ ಇದ್ದಾನೇನೋ ಎಂಬಂತೆ ಆತನ ಕಣ್ಣನ್ನು ನೋಡಿದೆ, ಡಾಕ್. ರಾಕ್ಷಸನಂತೆ ಕಂಡ. ಇಷ್ಟು ದಿನ ಆತನ ಜತೆ ಹೇಗಿದ್ದೆ ಎಂದು ನನಗೆ ಅನ್ನಿಸಿತು. ನನ್ನ ಪೆದ್ದುತನಕ್ಕೆ ಯಾರನ್ನು ಹೊಣೆಮಾಡೋದು?

ಅದಕ್ಕೇ ಈ ಗಂಡಸರ ಸಹವಾಸವೇ ಬೇಡ ಅಂತ ಬಿಟ್ಟುಬಿಡ್ತಾ ಇದೀನಿ. ಆಗಾಗ ಮೋಜಿಗೆ ಅಂತ ಕೂಡುತ್ತಿದ್ದ ಜ್ಯಾಕಿಯ ಜತೆ ಇರಲು ಪ್ರಯತ್ನ ಮಾಡುತ್ತೇನೆ. ಮತ್ತೆ ಇದೇನು ಈ ವಯಸ್ಸಿನಲ್ಲಿ ಅಂತ ಕೇಳಬೇಡ. ನಾನು ಯಾವಾಗಲೂ ಎರಡೂ ಟೀಮಿಗೆ ಆಟವಾಡಿಕೊಂಡೇ ಬಂದಿದ್ದೇನೆ. ಆದರೆ ಕದ್ದು. ಐ ವಾಂಟೆಡ್ ಟು ಬಿ ಫ್ಲಾಂಬೊಯೆಂಟ್ಲೀ ಬೈಸೆಕ್ಷುಯಲ್. ಆದರೆ, ನಾನು ಬೆಳೆದ ವಾತಾವರಣ, ಅಕ್ಕತಂಗಿಯರು, ಹೊಡೆಯುವ ನಮ್ಮಪ್ಪ–ಈ ಎಲ್ಲದರ ನಡುವೆ ಅವಕಾಶ ಸಿಗಲಿಲ್ಲ. ಮದುವೆ, ಸಂಸಾರ ಅಂತ ಬಂದಾಗ ಈ ತರ ಮುಖವಾಡ ಹಾಕ್ಕೊಂಡು ಬದುಕಬೇಕಾಗುತ್ತದೆ. ಈಗ ನೋಡೋಣ. ಇದು ಇನ್ನೊಂದು ಮುಖವಾಡವಾಗುತ್ತದೋ ಅಥವಾ ಇದೇ ನನ್ನ ನಿಜವಾದ ಬದುಕಾಗುತ್ತದೋ ಡಾಕ್, ಥ್ಯಾಂಕ್ಸ್ ಎಗೇನ್' ಎಂದು ಹೊರಟೇಬಿಟ್ಟಳು.

ಟೋನಿ, ಅನೀಟಾಳ ಡೈವೋರ್ಸೂ ಪಕ್ಕಾ ಆಯಿತು. ಜ್ಯಾಕಿ ತನ್ನ ಮಾಜಿ ಗೆಳತಿಯನ್ನು ಬಿಟ್ಟು ಅನೀಟಾಳ ಮನೆಗೇ ಬಂದು ಇದ್ದುಬಿಟ್ಟಳು. ಮಕ್ಕಳಿಬ್ಬರೂ ಜ್ಯಾಕಿ ಮತ್ತು ಅನೀಟಾ ಜತೆಗೇ ಇದ್ದರು. ಟೋನಿ ಅನೀಟಾಳ ಜತೆ ಸಂಸಾರ ಮಾಡಿದ್ದು ನೆನಪೂ ಇಲ್ಲದಹಾಗೆ ಊರು ಬಿಟ್ಟು ಹೋಗಿದ್ದ.

ಅನೀಟಾ ಹೊಸ ಸಂಸಾರಕ್ಕೆ ಹೊಂದಿಕೊಳ್ಳುವಂತೆ ಕಾಣಿಸಿತ್ತು. ಆಕೆ ಮತ್ತು ಜ್ಯಾಕಿ ಬಹಳವೇ ಚೆನ್ನಾಗಿದ್ದರು ಎಂದು ನನಗೆ ಅನಿಸುತ್ತಿತ್ತು. ಹ್ಯಾಲೋವೀನಿನಲ್ಲಿ ಒಬ್ಬಳು ಬಾನಿಯಾದರೆ ಇನ್ನೊಬ್ಬಳು ಕ್ಲೈಡ್ ಆಗುತ್ತಿದ್ದಳು. ಸೇಂಟ್ ಪ್ಯಾಟ್ರಿಕ್ಸ್ ಡೇ ಅಲ್ಲಿ ಜ್ಯಾಕಿ ಕೂದಲಿಗೆ ಹಸಿರು ಬಣ್ಣ ಹಚ್ಚಿದರೆ ಅನೀಟಾ ಹಸಿರು ಕೋಕು ಕುಡಿಯುತ್ತಾ ಒಟ್ಟೊಟ್ಟಿಗೆ ಒಂದೇ ಮೋಟಾರುಸೈಕಲ್ಲಿನಲ್ಲಿ ಕೆಲಸಕ್ಕೆ ಬರುತ್ತಿದ್ದರು. ಸ್ವಾತಂತ್ರ್ಯ ದಿನದಂದು ಅನೀಟಾ ಕೆಂಪು, ನೀಲಿ, ಬಿಳಿಯ ಟೋಪಿ ಹಾಕಿಕೊಂಡರೆ ಜ್ಯಾಕಿ ಟಿ–ಶರ್ಟು ಧರಿಸಿ ಮನೆಯ ಹಿಂದಿನ ಲಾನಿನಲ್ಲಿ ಬಾರ್ಬಿಕ್ಯು ಮಾಡುತ್ತಿದ್ದರು. ಕ್ರಿಸ್‌ಮಸ್ಸಿಗೆ ಜ್ಯಾಕಿ ಸ್ಯಾಂಟಾ ಆದರೆ ಅನೀಟಾ ರೈನ್‌ಡೀರಾಗಿ ಪಾರ್ಟಿ ಕೊಡುತ್ತಿದ್ದರು. ಟೋನಿಯ ಜತೆಗಿನ ತನ್ನ ದಾಂಪತ್ಯದ ವೈಫಲ್ಯಕ್ಕೆ ರೀಬೌಂಡ್ ಎನ್ನುವಂತೆ ಹೊಸ ಸಖಿಯೊಂದಿನ ಸಾಂಗತ್ಯವನ್ನು ಅನೀಟಾ ಪ್ರತಿ ಕ್ಷಣವೂ ಅನುಭವಿಸುತ್ತಿದ್ದೇನೆ ಎಂದು ಸಾರ್ವಜನಿಕವಾಗಿ ಪ್ರಚುರಪಡಿಸುವಂತೆ ಅನುಭವಿಸುತ್ತಿದ್ದಳು. ತಾನು ಒಂದು ಹೆಣ್ಣಿನ ಜತೆ ಶಾಶ್ವತವಾಗಿ ಸುಖವಾಗಿರಬಲ್ಲೆನೆಂದು ಅರಿತುಕೊಳ್ಳಲು ಅನೀಟಾಳಿಗೆ ಒಂದೆರಡು ಮದುವೆ, ಟೋನಿಯಂತ ಗಂಡ, ಎರಡು ಮಕ್ಕಳು ಮತ್ತು ಕಿರುಕುಳ ಈ ಎಲ್ಲವೂ ಬೇಕಾಯಿತೇ ಎಂದು ನನಗೆ ಕೆಲವೊಮ್ಮೆ ಆಶ್ಚರ್ಯವಾಗುತ್ತದೆ. ಐ ವಾಂಟೆಡ್ ಟು ಬಿ ಫ್ಲಾಂಬೊಯೆಂಟ್ಲಿ ಬೈಸೆಕ್ಷುಯಲ್ ಎಂದು ಹೇಳುತ್ತಾಳಲ್ಲ ಅನೀಟಾ. ನಲವತ್ತರವರೆಗೆ ಟೋನಿಯಂಥ ಗಂಡನ ಜತೆ ಜೀವನ ಸಾಗಿಸುವುದು ಏತಕ್ಕೆ? ಮದುವೆ, ಮಕ್ಕಳು, ಸಂಸಾರ ಎನ್ನುವ ಲಾಗಾಯ್ತಿನಿಂದ ಬಂದ ಸಂಪ್ರದಾಯಕ್ಕೆ ಅಮೆರಿಕಾದ ಮುಕ್ತ ಹೆಣ್ಣುಗಳು ಕೂಡ ತಮ್ಮ ಜೀವನವನ್ನು ಬಲಿ ಕೊಡುತ್ತಾರಾ?

ಬದುಕು ಯಾವುದೇ ಸ್ಪೀಡ್‌ಬಂಪುಗಳಿಲ್ಲದ ಹೆದ್ದಾರಿಯಲ್ಲಿ ಚಲಿಸುವ ಜರ್ಮನ್ ಕಾರಿನಂತೆ ವೇಗವಾಗಿ ಮುನ್ನಡೆಯುತ್ತಿತ್ತು.

ಆದರೆ, ಯಾವುದೇ ಹೆದ್ದಾರಿ ಎಕ್ಸಿಟ್ಟು, ವಿಶ್ರಾಮ ತಾಣ ಸಿಕ್ಕಿದರೆ ಕಾರು ಕೂಡ ನಿಧಾನಿಸುವಂತೆ, ಬೇರೆ ಹಾದಿಯನ್ನು ತೆಗೆದುಕೊಳ್ಳುವಂತೆ ಅನೀಟಾಳ ಬದುಕೂ ಕೂಡ ತನ್ನ ವೇಗಕ್ಕೆ ತಾನೇ ಒಂದು ತಿರುವನ್ನು, ಇರವನ್ನು ಮತ್ತು ಹೊಸ ಅರಿವನ್ನು ಪಡೆದಿತ್ತು.

ಅದು ಜ್ಯಾಕಿ ತಾನು ಗಂಡಾಗಲು ಎಲ್ಲ ಚಿಕಿತ್ಸೆಗಳನ್ನೂ ಪಡೆದುಕೊಳ್ಳುತ್ತಿದ್ದಾಳೆ ಎಂದು ಅನೀಟ ನನಗೆ ಹೇಳಿದ್ದ ದಿನ.

ಸಲಿಂಗಿ ಸಂಬಂಧಗಳಲ್ಲಿ ಯಾರ‍್ಯಾರ ಪಾತ್ರ ಏನು ಎಂದು ನನಗೆ ಸರಿಯಾದ ಅರಿವಿಲ್ಲ. ಆದರೆ ಎಂಥ ಸಂಬಂಧವಾದರೂ ಅದರಲ್ಲಿ ಗಂಡು, ಹೆಣ್ಣು ಎಂಬ ಎರಡು ಪಾತ್ರಗಳಿರುತ್ತವೆ ಎಂಬುದನ್ನು ಸಾಮಾನ್ಯ ಜ್ಞಾನವೆಂಬಂತೆ ನಾನು ಊಹಿಸಿಕೊಂಡಿದ್ದೆ. ಕ್ಲೈಡ್ ಪೋಷಾಕು ಧರಿಸುವ, ಸ್ವಾತಂತ್ರ್ಯದ ದಿನದಂದು ಬಾರ್ಬಿಕ್ಯು ಮಾಡುವ, ಮೋಟಾರು ಬೈಕು ನಡೆಸುವ ಜ್ಯಾಕಿ ಈ ಸಂಬಂಧದಲ್ಲಿ ಬುಚ್ ಇರಬಹುದೆಂದು ನಾನು ಊಹಿಸಿದ್ದೆ. ಜ್ಯಾಕಿಯ ಸಣ್ಣಕ್ಕೆ ಕತ್ತರಿಸಿದ್ದ ತಲೆಗೂದಲು, ಯಾವತ್ತೂ ಧರಿಸುತ್ತಿದ್ದ ಫ್ಲಾನೆಲ್ ಶರ್ಟುಗಳು ಮತ್ತು ನೀಲಿ ಜೀನ್ಸು, ಕಾರ್ಗೋ ಪ್ಯಾಂಟುಗಳು ನನ್ನ ಈ ಊಹೆಯನ್ನು ಇನ್ನೂ ಪುಷ್ಟೀಕರಿಸಿದ್ದವು. ಆದರೆ ಆಕೆಯ ಹೊರಪೋಷಾಕು ಕೂಡ ನಮ್ಮ ಲಿಂಗದಂತೆ ಸೊನ್ನೆ ಮತ್ತು ಒಂದು ಮಾತ್ರವಲ್ಲ ಎಂದು ನನ್ನ ಕೆಲಸದಲ್ಲಿ ನೋಡಿ ಕಲಿತಿದ್ದ ನಾನು ಇಲ್ಲಿ ಮಾತ್ರ ಊಹಿಸಿರಲಿಲ್ಲ. ಜ್ಯಾಕಿಯ ಈ ಬುಚ್ ಲೆಸ್ಬಿಯನ್ ಪಾತ್ರ ಕೂಡ ಆಕೆ ಹುಡುಕಿಕೊಳ್ಳುತ್ತಿರುವ ಲಿಂಗದ, ಸರ್ವನಾಮದ ಪ್ರಕ್ರಿಯೆಯಲ್ಲಿ ಒಂದು ಘಟ್ಟವೋ?

ಮೇಲಾಗಿ ಜ್ಯಾಕಿ ತನ್ನ ಈ ಲಿಂಗ ಪರಿವರ್ತನೆಯನ್ನು ಬಹಳವೇ ಸಾರ್ವಜನಿಕವಾಗಿ ತೆರೆದಿಟ್ಟಿದ್ದಳು. ಇನ್ಸ್ಟಾಗ್ರಾಮಿನಲ್ಲಿ ಆಕೆಯ ತಲೆಗೂದಲುಗಳು ಬೇರೆಬೇರೆ ರೂಪದ ಚಿತ್ರಗಳು ದಿನವೂ ಕಾಣಿಸಿಕೊಳ್ಳುತ್ತಿದ್ದವು. ಟೀ-ಶರ್ಟುಗಳ ವಿವಿಧ ವಿನ್ಯಾಸಗಳು, ಬಣ್ಣಗಳು ಟ್ರಾನ್ಸ್ ಸ್ಥಿತಿಯ ವಿವಿಧ ಹಂತಗಳನ್ನು ಪ್ರತಿನಿಧಿಸುತ್ತಿದ್ದವಂತೆ ಕಾಣುತ್ತಿದ್ದವು. ಪ್ರೈಡ್ ಪೆರೇಡಲ್ಲಿ ಒಂದು ತೆರೆದ ಕಾರಿನಲ್ಲಿ ಕಾಮನಬಿಲ್ಲಿನ ಬಣ್ಣದ ಬಾವುಟವನ್ನು ಕೈಯಲ್ಲಿ ಹೆಮ್ಮೆಯಿಂದ ಹಿಡಿದು ನಿಂತಿದ್ದಳು. ನಾಲ್ಕೈದು ಎಲ್‌ಜಿಬಿಟಿಕ್ಯು ಐ ಅಡ್ವಕಸಿ ಗುಂಪಿಗೆ ಸ್ವಯಂಸೇವಕಿಯಾಗಿ ಸಹಾಯ ಮಾಡುತ್ತಿದ್ದಳು. ನಮ್ಮ ರಾಜ್ಯದಲ್ಲಿ ಸಲಿಂಗಿ, ಟ್ರಾನ್ಸ್‌ಗಳ ಮದುವೆ ಇನ್ನೂ ಕಾನೂನುಬದ್ಧವಾಗಿಲ್ಲದುದರಿಂದ ಅದರ ಪರವಾಗಿನ ಅಭಿಯಾನದ ಮುಂಚೂಣಿಯಲ್ಲಿದ್ದಳು.

ಜ್ಯಾಕಿ ಈ ಸಂಕ್ರಮಣ ಸ್ಥಿತಿಯಲ್ಲಿದ್ದಾಗ ಒಮ್ಮೆ ಎಮರ್ಜೆನ್ಸಿ ರೂಮಿಗೆ ಬಂದಿದ್ದಳು. ಆಕೆ ಗರ್ಭಾಶಯ, ಅಂಡಾಶಯಗಳೆಲ್ಲ ಇಲ್ಲದೇ ಖಾಲಿಯಾಗಿದ್ದಳು. ಗಂಡು ಹಾರ್ಮೋನುಗಳ ಪ್ರಭಾವ ಆಕೆಯ ಹೊಟ್ಟೆಯ ಕೆಳಭಾಗದಲ್ಲಿ ಎದೆಯ ಮೇಲೆ ಮತ್ತು ಮುಖದಲ್ಲಿ ಕೊಂಚ ಹೆಚ್ಚೇ ಅನ್ನುವಷ್ಟು ಕೂದಲಿತ್ತು. ಎದೆಯ ಸಪಾಟನ್ನು ಸರ್ಜರಿ

ಮತ್ತು ಏಸ್ ಬ್ಯಾಂಡೇಜು ಸರಿಸಮವಾಗಿ ನಿಭಾಯಿಸುತ್ತಿದ್ದವು. ಸರ್ಜರಿಯ ಗಾಯ ನಂಜಾಗಿರಬಹುದೆಂಬ ಅನುಮಾನದಿಂದ ಆಕೆ ಆಸ್ಪತ್ರೆಗೆ ಬಂದಿದ್ದಳು. ಜ್ಯಾಕಿಯ ಹೆಸರು ಕೂಡ ಜ್ಯಾಕ್ ಎಂದು ಆಸ್ಪತ್ರೆಯ ದಾಖಲೆಗಳಲ್ಲಿ ಬದಲಾಗಿತ್ತು. ತನ್ನನ್ನು 'ಗಂಡು' ಎಂದೇ ಗುರುತಿಸಿಕೊಳ್ಳುತ್ತಿದ್ದ, ಜ್ಯಾಕ್.

ತನ್ನ ದಾಖಲೆಗಳನ್ನು ಸಮರ್ಥಿಸುವಂತೆ ಜ್ಯಾಕ್ 'ನೋ ಡಾಕ್, ಅದು ಹಾಗಲ್ಲ. ನನಗೆ ನನ್ನ ಗಂಡಂದಿರುಗಳು ಯಾವತ್ತೂ ಸರಿಹೋಗಲೇ ಇಲ್ಲ. ಅವರಿಂದ ನನಗೇನು ಸಿಗಬೇಕೋ ಅದು ನನಗೆ ಸಿಗಲೇ ಇಲ್ಲ. ನಾನು ಕೊಡಲು ಹೋದರೆ ಅದು ಅವರಿಗೆ ನನ್ನಂಥ ವ್ಯಕ್ತಿಯಿಂದ ಸಿಗುವುದೆಂತದ್ದು, ಅವರು ಪಡಕೊಳ್ಳಲು ಪ್ರಯತ್ನಿಸುವುದಾದರೂ ಎಂಥದು ಎಂದು ಅವರಿಗೆ ಅರ್ಥವಾಗಲೂ ಇಲ್ಲ. ಈಗಲಾದರೂ ನಾನು ಯಾರು, ನನ್ನಿಂದ ಕೊಡು–ಕೊಳ್ಳುವದೆಂಥದ್ದು ಎಂಬ ಸಂಗತಿಯನ್ನರಿತ ಸಂಗಾತಿ ಸಿಕ್ಕಳಲ್ಲ, ಅದಕ್ಕೆ ನಾನು ಋಣಿ' ಎಂದ. ನಾನು ಗಾಯ ನಂಜಾಗಿದೆಯೋ ಇಲ್ಲವೋ ಎಂದು ಮಾತ್ರ ನೋಡುತ್ತಲಿದ್ದೆ.

ಅನೀಟಾ 'ಡಾಕ್, ಗಾಯ ನಂಜಾಗದಂತೆ ಆಂಟಿಬಯಾಟಿಕ್ ಕೊಡಲಾಗುತ್ತದಾ? ಇದು ನಂಜಾದಲ್ಲಿ ಮುಂದಿನ ಎಲ್ಲ ಸರ್ಜರಿಗಳೂ ನಿಂತುಹೋಗುತ್ತವೆ. ಮತ್ತೆ ನಾನು ಬೇರೆ ಎಮರ್ಜನ್ಸಿ ರೂಮಿಗೆ ಕರಕೊಂಡು ಹೋಗಲಾರೆ' ಎಂದಳು.

'ಅನೀಟ, ಒಂದು ನಿಮಿಷ, ಇಲ್ಲಿ ಒಳಗೆ ಬಾ' ಎಂದು ಕರಕೊಂಡು ಹೋಗಿ 'ನೀನು ಸುಖವಾಗಿದ್ದೀಯಾ?' ಎಂದು ಕೇಳಿದೆ. 'ನೀನು ನಿನ್ನ ಸಂಗಾತಿಯಲ್ಲಿ ಬಯಸಿದ್ದು ಇದೇನಾ?' ಎಂದು ಕೇಳಿದೆ.

'ಡಾಕ್, ಈಗ ನನಗೆ ಬಹಳ ಮುಖ್ಯ ಎಂದರೆ ಜ್ಯಾಕಿಯಿಂದ ಜ್ಯಾಕ್‌ಗೆ ಟ್ರಾನ್ಸಿಶನ್ ಸುಗಮವಾಗಿ ಆಗಬೇಕು. ನಾನು ಗಂಡು ಹೆಣ್ಣು ಇಬ್ಬರನ್ನೂ ಇಷ್ಟಪಟ್ಟರೂ ಅವರುಗಳನ್ನು ಪೂರ್ಣವಾಗಿ ಇಷ್ಟಪಡುತ್ತೇನೆ. ಗಂಡು ಹೆಣ್ಣು ಎಂಬ ಎರಡು ಎಕ್ಸ್‌ಕ್ಲುಸೀವ್ ಆದ ಲಿಂಗಗಳು ಎಂದು ನಾನು ಬಲವಾಗಿ ನಂಬಿದ್ದೇನೆ. ದೇವರು ಯಾವ ರೂಪದಲ್ಲಿ ನಮ್ಮನ್ನು ಈ ಜಗತ್ತಿಗೆ ತಂದಿದ್ದಾನೋ ಅದೇ ರೂಪದಲ್ಲಿ ಬದುಕಬೇಕಲ್ವ, ಡಾಕ್. ನನ್ನ ನಂಬಿಕೆ, ನನ್ನ ನಂಬಿಕೆ ಮಾತ್ರ. ಆದರೆ ನಾನು 21ನೆಯ ಶತಮಾನದಲ್ಲಿ ಬದುಕುತ್ತಿದ್ದೇನೆಂಬ ಅರಿವೂ ಚೆನ್ನಾಗಿಯೇ ಇದೆ. ಆದ್ದರಿಂದ ಒಬ್ಬ ವ್ಯಕ್ತಿ ತಾನು ಬಯಸಿದ ಲಿಂಗವನ್ನು ಪಡಕೊಳ್ಳೋ ಸ್ವಾತಂತ್ರ್ಯವಿರುವ ಈ ಕಾಲದಲ್ಲಿ ಜ್ಯಾಕಿ, ಜ್ಯಾಕಾಗುತ್ತಾನೋ, ಜ್ಯಾಕ್ ಜ್ಯಾಕಿಯಾಗುತ್ತಾಳೋ ನನಗೆ ಬೇಕಾಗಿಲ್ಲ. ಐ ವಾಂಟ್ ಒನ್ ಹೋಲ್ ಪರ್ಸನ್. ಐ ಡೋಂಟ್ ವಾಂಟ್ ಟು ಬಿ ವಿತ್ ಅ ಗರ್ಲ್ ವಿತ್ ಅ ಪೀನಿಸ್ ಆರ್ ಅ ಮ್ಯಾನ್ ವಿಥ್ ಅ ಪೇರ್ ಆಫ್ ಬ್ರೆಸ್ಟ್ಸ್. ನಾನು ಇಲ್ಲಿ ಪೊಲಿಟಿಕಲಿ ಕರೆಕ್ಟ್ ಆಗಿರುವುದಕ್ಕೆ ನೋಡುತ್ತಿಲ್ಲ. ನನ್ನ ನಂಬಿಕೆಯನ್ನು ಮಾತ್ರ ಹೇಳುತ್ತಿದ್ದೇನೆ' ಎಂದಳು.

ನಾನು ಸುಮ್ಮನೇ ಬಾಯಿ ಬಿಟ್ಟುಕೊಂಡು ನೋಡುತ್ತಿದ್ದೆ. ಗಂಡಿನ ಜತೆಗೂ ಹೆಣ್ಣಿನ ಜತೆಗೂ ಸುರತಕ್ಕೆ ಒಪ್ಪಿಗೆಯಿರುವ ಅನೀಟಳಿಗೆ ಲಿಂಗ ಮಾತ್ರ ಪೂರ್ಣವಾಗಿರಬೇಕು.

'ಆದ್ದರಿಂದ ಜ್ಯಾಕ್‌ಗೆ ಮುಂದಿನ ಸರ್ಜರಿ ಅಂದರೆ ಆತನಿಗೆ ಶಿಶ್ನವನ್ನು ಜೋಡಿಸುವ ಮೊದಲು ಈ ಹಳೆಯ ಗಾಯಗಳು ನಂಜಾಗದಂತೆ ನೋಡಿಕೊಳ್ಳುವುದು ನಿನ್ನ ಕರ್ತವ್ಯ. ಆತನನ್ನು ಪೂರ್ಣಗೊಳಿಸುವುದರಲ್ಲಿ ನಿನ್ನ ಜವಾಬ್ದಾರಿಯೂ ಇದೆ' ಎಂದು ನನ್ನ ಕೆನ್ನೆ ತಟ್ಟಿ ಹೋಗಿದ್ದಳು.

ನಾನು ಜ್ಯಾಕ್‌ಗೆ ಆಂಟಿಬಯಾಟಿಕ್ ಬರೆಯಲು ಕಂಪ್ಯೂಟರ್ ಸ್ಕ್ರೀನಿನ ಮುಂದೆ ಕೂತಿದ್ದಾಗ ಅನೀಟಾ ಬಂದು 'ಡಾಕ್. ನಿಜ ಹೇಳಲಾ? ನಾನು ಬಹಳ ಮುಂಚಿನಿಂದಲೂ ಈ ಎಲ್ ಜಿ ಬಿ ಟಿ ಕ್ಯು ಐ, ಎಲ್ ಜಿ ಬಿ ಗೆ ನಿಲ್ಲಬೇಕು ಅನ್ನುವ ನಿಲುವ ಹೊಂದಿರುವವಳು. ಮನುಷ್ಯನ ಲೈಂಗಿಕ ಆಸಕ್ತಿ ಸಹಜವಾಗಿ ನಿರ್ಧಾರವಾಗುತ್ತೆ. ನಾನು, ಗೇನೋ, ಸ್ಟ್ರೇಟೋ, ಬೈನೋ ಅನ್ನೋದು ನನ್ನ ಆಯ್ಕೆ ಅಲ್ಲ. ಆದರೆ ನಾನು ಹೆಣ್ಣು ಅನ್ನುವ ಬಗ್ಗೆ ನನಗೆ ಯಾವ ಗೊಂದಲವೂ ಇಲ್ಲ. ಯಾಕೆಂದರೆ ನಾನು ಯಾವ ಲಿಂಗದಲ್ಲಿ ಇಡೀ ಜನ್ಮ ಸಾಗಿಸಬೇಕು ಎಂದು ದೇವರೋ, ಪ್ರಕೃತಿಯೋ ನಿರ್ಧರಿಸಿಯಾಗಿದೆ. ಆ ಪ್ರಕೃತಿ ಕೊಟ್ಟ ದೇಹದಲ್ಲಿಯೇ ಬದುಕಬೇಕು. ಅದು ಬಿಟ್ಟು ನನ್ನ ದೇಹ ಬೇರೆ, ಲಿಂಗ ಬೇರೆ. ನನ್ನ ಮನಸ್ಸು ಬೇರೆಯೇ ಆದ ದೇಹದಲ್ಲಿ ಸೇರಿಕೊಂಡುಬಿಟ್ಟಿದೆ ಎಂದರೆ ಹೇಗೆ? ಮೇಲಾಗಿ ವಾಟ್ ಈಸ್ ದ ಪಾಯಿಂಟ್?

'ಅಂದರೆ?' ಜ್ಯಾಕಿ ಜ್ಯಾಕ್ ಆಗುತ್ತಿರುವ ಈ ಪ್ರಕ್ರಿಯೆಯಲ್ಲಿ ಅನೀಟ ಮನಃಪೂರ್ವಕವಾಗಿ ತೊಡಗಿಸಿಕೊಂಡಿದ್ದಾಳೆ ಎಂದುಕೊಂಡಿದ್ದ ನನಗೆ ಈಕೆ ವಾಟ್ ಈಸ್ ದ ಪಾಯಿಂಟ್ ಎಂದರೆ ಅದರರ್ಥ ಏನು ಎಂದು ಕೊಂಚ ಜಿಜ್ಞಾಸೆಗೆ ಬಿದ್ದೆ.

'ಡಾಕ್, ಫೈನ್. ಗೇ, ಸ್ಟ್ರೇಟು, ಬೈ ಅನ್ನೋದು ಆಯ್ಕೆ ಅಲ್ಲ ಅನ್ನುವ ನಾನು ಅವನು, ಅವಳು, ಅವರು ಅನ್ನೋದು ಆಯ್ಕೆ ಆಗಬಾರದು ಅನ್ನೋದು ಆಷಾಢಭೂತಿತನ ಅನ್ನಿಸಬಹುದು. ನಾನು ಹೇಳಿದ ಹಾಗೆ ಒಬ್ಬ ಮನುಷ್ಯ ತಾನು ತಪ್ಪು ದೇಹದಲ್ಲಿ ಸಿಕ್ಕಿಹಾಕಿಕೊಂಡಿದ್ದೇನೆ ಎಂದು ತನ್ನಾಯ್ಕೆಯ ಲಿಂಗಕ್ಕೆ ಪೂರ ಪರಿವರ್ತನೆಗೊಳ್ಳಬೇಕೆಂದರೆ ಸರಿ, ಈಗ ವೈದ್ಯಶಾಸ್ತ್ರ ಮುಂದುವರೆದಿದೆ, ಸಹಾಯ ಮಾಡೋಣ. ಆದರೆ ಮೇಲೆ ಒಂದು ಲಿಂಗ, ಕೆಳಗೆ ಒಂದು ಲಿಂಗ, ಬೆಳಿಗ್ಗೆ ಒಂದು ಲಿಂಗ, ಸಂಜೆ ಒಂದು ಲಿಂಗ– ನಾನು ಜೆಂಡರ್ ಫ್ಲುಇಡ್ ಎಂದರೆ ಹೇಗೆ? ಮೊನ್ನೆ ಜ್ಯಾಕ್ ಜತೆ ಒಂದು ಪಾರ್ಟಿಗೆ ಹೋಗಿದ್ದೆ. ಅಲ್ಲಿ ಒಬ್ಬ ಟ್ರಾನ್ಸ್ ಹೆಂಗಸು ಅರ್ಜೆಂಟಾಗಿ ಕಾಂಡೋಮು ಬೇಕು ಎಂದು ಹುಡುಕುತ್ತಿದ್ದಳು. ನನಗೆ ಈಕೆ ಬಸಿರಾಗಲು ಹೇಗೆ ಸಾಧ್ಯ? ಈಕೆ ಕಾಂಡೋಮು ಏಕೆ ಹುಡುಕುತ್ತಿದ್ದಾಳೆ ಎಂದು ಅನುಮಾನ ಬಂದು ನೇರವಾಗಿ ಕೇಳಿದೆ. ಆಕೆ ನಕ್ಕು ನಾನು ಬಸಿರಾಗಲು ಸಾಧ್ಯವಿಲ್ಲ. ಆದರೆ ನನ್ನ ಗೆಳೆಯ ಆಗಬಹುದಲ್ಲ ಎಂದಳು. ಈಕೆಯ ಗೆಳೆಯ ಕೂಡ ಟ್ರಾನ್ಸ್. ಅಂದರೆ ಹುಟ್ಟಿದಾಗ ಹೆಣ್ಣು ಅವಯವಗಳನ್ನು ಹೊಂದಿದ್ದ. ಈಗ ಗಂಡು ಹಾರ್ಮೋನು ಟೆಸ್ಟಾಸ್ಟೆರಾನ್ ತೆಗೆದುಕೊಂಡರೂ ಆತ ಓವುಲೇಟ್ ಮಾಡಬಹುದಂತೆ. ಮ್ಯಾಸ್ಟೆಕ್ಟಮಿ ಮಾಡಿಸಿಕೊಂಡು ಕೆಳಗೆ ಯುಟೆರಸ್ಸು, ಓವರಿಗಳನ್ನು ಉಳಿಸಿಕೊಂಡಿದ್ದಾನೆ. ಈಕೆ ಪುಶ್ ಅಪ್ ಬ್ರಾಗಳನ್ನು ಹಾಕಿಕೊಂಡು ಓಡಾಡುತ್ತಾಳೆ.

ಹಾಗಾಗಿ ಇಲ್ಲಿ ತನ್ನನ್ನು ಹೆಣ್ಣು ಎಂದು ಕರೆದುಕೊಳ್ಳುವ ವ್ಯಕ್ತಿ ಇನ್ನೊಂದು ಗಂಡನ್ನು ಬಸಿರು ಮಾಡಬಹುದೆನ್ನುವ ಸಾಧ್ಯತೆಯಿದೆ ಎನ್ನುವುದನ್ನು ಹೇಗೆ ಒಪ್ಪಿಕೊಳ್ಳುವುದು, ಡಾಕ್? ಗಂಡಸು ಬರ್ತ್ ಕಂಟ್ರೋಲ್ ಮಾತ್ರೆ ತೆಗೆದುಕೊಳ್ಳಬೇಕು. ಹೆಂಗಸರು ಕಾಂಡೋಮು ಹಾಕಬೇಕು. ಇದು ಹೇಗೆ ಸಾಧ್ಯ? ಪ್ರಕೃತಿಯಲ್ಲಿ ಹೀಗೆ ಇರಲು ಸಾಧ್ಯವೇ? ಯಾವ ಪ್ರಾಣಿ ಹೀಗೆ ಇರಲು ಸಾಧ್ಯ?' ಎಂದಳು.

ಈ ಲಿಂಗವೆಂಬ ಕಾಮನಬಿಲ್ಲಿನ ಬಣ್ಣಗಳಲ್ಲಿ ಅಕ್ಕಪಕ್ಕದಲ್ಲಿರುವ, ತೀರ ಅಂಚಿನಲ್ಲಿರುವ, ಯಾವುದೇ ಎರಡು ಬಣ್ಣಗಳು ಒಂದಾಗಿ ಕದಡಿದಾಗಲೂ, ಹದವಾಗಿ ಮಿಳಿತವಾದಾಗಲೂ ಮಿಶ್ರಣ ಕಣ್ಣು ತಂಪು ಮಾಡಲೇ ಇರುವುದು ಎಂದು ಹಲವಾರು ಕಾರಣಗಳಿಂದ ನಾನು ನಂಬುವಂತೆ ಮಾಡಿದ್ದು ನನ್ನ ಕೆಲಸ. ನಾನು ಗಂಡು ಹೆಣ್ಣುಗಳ ಜೈವಿಕ ಲಿಂಗವನ್ನು ಕೇಳುತ್ತಿದ್ದುದು ಕೇವಲ ನನ್ನ ಕೆಲಸವನ್ನು ಸರಿಯಾಗಿ ಮಾಡುವುದಕ್ಕೆ ಮಾತ್ರ. ನಾನು ಯಾರದ್ದೇ ಪೋಷಾಕನ್ನು ನೋಡಿ ಮೊಸಹೋಗಿಲ್ಲ. ನನ್ನ ಪೇಷೆಂಟು ತನ್ನ ಸರ್ವನಾಮವನ್ನು ಹೇಗೇ ಗುರುತಿಸಿಕೊಂಡರೂ ನನಗೆ ಬೇಕಾಗಿದ್ದು ನನ್ನ ರೋಗಿ ಬಸುರಾಗಬಲ್ಲಳೋ ಇಲ್ಲವೋ ಎಂಬ ಸತ್ಯ ಮಾತ್ರ. ಮೀಸೆ ಗಡ್ಡವಿರುವ ಗಂಡಸು ಬಂದು ನನಗೆ ಗರ್ಭಾಶಯ ಇದೆ, ನಾನು ಬಸುರಾಗಿರುವ ಶಕ್ಯವಿದೆ ಎಂದು ಹೇಳಿದಲ್ಲಿ ನಾನು ವಿನಯದಿಂದ ಆತನಿಗೆ ಪ್ರೆಗ್ನೆಂಸಿ ಟೆಸ್ಟ್ ಮಾಡುತ್ತೇನೆ. ನೋಡಲು ಪಕ್ಕಾ ಹುಡುಗಿಯಂತಿರುವವಳು ನನ್ನ ವೃಷಣ ತಿರುಚಿದೆ ಎಂದು ಹೇಳಿಕೊಂಡು ಬಂದರೆ ಆಕೆಗೆ ವೃಷಣದ ಅಲ್ಟ್ರಾಸೌಂಡು ಮಾಡಿಸುತ್ತೇನೆ. ವೈದ್ಯನಾದ ನನಗೆ ಒಬ್ಬ ವ್ಯಕ್ತಿಯ ಹೇಳಿಕೊಳ್ಳುವ ಲಿಂಗಕ್ಕಿಂತ ಆ ವ್ಯಕ್ತಿಯಲ್ಲಿ ಉಳಿದಿರುವ ಗಂಡು ಅಥವಾ ಹೆಣ್ಣು ಅಂಗಾಂಗಗಳು ಯಾವುದಿದೆ ಎನ್ನುವುದು ಮಾತ್ರ ಮುಖ್ಯ. ತಾನು ಗಂಡು ಎಂದು ಗುರುತಿಸಿಕೊಳ್ಳುವ ವ್ಯಕ್ತಿ ಬಸಿರಾಗಿರುವ ಶಕ್ಯವಿಲ್ಲ ಎಂದು ಹೊಟ್ಟೆ ಕಿಬ್ಬೊಟ್ಟೆಯ ಸೀಟಿ ಸ್ಕ್ಯಾನು ಮಾಡಿಸಿ ಸೀಟಿ ಸ್ಕ್ಯಾನಿನಲ್ಲಿ ಆರು ವಾರದ ಮಗುವನ್ನು ನೋಡಿ ತಬ್ಬಿಬ್ಬಾಗಿದ್ದೇನೆ. ತಾನು ಹೆಣ್ಣು ಎಂದು ಹೇಳಿ ಬರುವ ಪೇಶೆಂಟುಗಳನ್ನು ಸರಿಯಾಗಿ ಮೇಲಿಂದ ಕೆಳಗೆ ಪರೀಕ್ಷಿಸದೇ ವೃಷಣ ತಿರುಚಿ ಗ್ಯಾಂಗ್ರೀನು ಆಗುವವರೆಗೂ ಕಾಂಪ್ಲಿಕೇಶನ್ ಅಗಿದೆ. ಆದ್ದರಿಂದ ಪ್ರೊನೌನು ಬದಲಿಸುತ್ತಿರುವ ವ್ಯಕ್ತಿಗೆ ನಾನು ಕೇಳುವುದು ಒಂದೇ ಪ್ರಶ್ನೆ. ನೀನು ಗಂಡೋ ಹೆಣ್ಣೋ ನಿನ್ನನ್ನು ಹೇಗೆ ಗುರುತಿಸಿಕೊಂಡರೂ ಪರವಾಗಿಲ್ಲ– ನಿನಗೆ ಶಿಶ್ನ, ವೃಷಣಗಳಿವೆಯಾ? ಇಲ್ಲದಿದ್ದಲ್ಲಿ ಅಂಡಾಶಯ, ಗರ್ಭಕೋಶ ಇವೆಯಾ? ಇದ್ದಲ್ಲಿ ನೀನು ಬಸಿರಾಗಿರುವ ಶಕ್ಯವೇನಾದರೂ ಇದೆಯಾ?

ನನ್ನ ಕೆಲಸಕ್ಕೆ ಈ ಜೈವಿಕ ಧಾತುಗಳು, ಅಂಗಾಂಗಗಳು, ದೇಹದ ಸ್ವರೂಪಗಳು ಇವು ಮುಖ್ಯವೇ ಅಲ್ಲ. ಗಂಡು, ಹೆಣ್ಣು/ ಸಲಿಂಗಿ, ದ್ವಿಲಿಂಗಿ, ಉಭಯಲಿಂಗಿ, ಅಲಿಂಗಿ ಎಂದು ಏನೇ ಹೇಳಿಕೊಂಡರೂ ನನ್ನ ಕೆಲಸಕ್ಕೆ ಬೇಕಾಗಿರುವುದು ಒಬ್ಬ ವ್ಯಕ್ತಿ ಬಸುರಾಗಿರುವುದಕ್ಕೆ ಸಾಧ್ಯವಿದೆಯೋ ಇಲ್ಲವೋ ಅನ್ನುವ ಮುಖ್ಯ ಅಂಶ ಮಾತ್ರ. ಅನೀಟಾಗೆ ಗಂಡಿನ ಜತೆಗಿನ ಬದುಕಿಗಿಂತ ಹೆಣ್ಣಿನ ಸಾಂಗತ್ಯ ಲೇಸೆಂದು ನಂಬಿಸಿ ಪೂರಾ ವಿರುದ್ಧ ಧ್ರುವಕ್ಕೆ

ಆಕರ್ಷಿತವಾಗುವಂತೆ ಮಾಡಿದ ಜ್ಯಾಕಿ ಈಗ ಲಿಂಗದ ಸ್ಪೆಕ್ಟ್ರಮಿನ ಬಣ್ಣಗಳನ್ನು ನೇರಿಳೆಯಿಂದ ಕಿತ್ತಳೆಯವರೆಗೆ ದಾಟುವ ಈ ಪ್ರಕ್ರಿಯೆಯಲ್ಲಿ ನಡುವೆ ಹಳದಿಯೋ, ಹಸಿರೋ ಬಣ್ಣ ದಾಟಲು ಕಷ್ಟಪಡುತ್ತಿರುವಾಗ ಈಗ ಬಯಸುವುದು ಸಂಗಾತಿಯಿಂದ ಕೊಂಚ ಸಾಂತ್ವನವನ್ನು, ಸಹಾನುಭೂತಿಯನ್ನು. ಈಗ ಅನೀಟಾಳಿಗೆ ಹಿಂಜರಿಕೆಯೇ?

'ಅನೀಟಾ, ನೀನು ಜ್ಯಾಕಿಯೊಂದಿಗೆ ಸಾರಿ ಜ್ಯಾಕ್‌ನೊಂದಿಗೆ ಡೇಟ್ ಮಾಡುತ್ತಿದ್ದ ಮೊದಲದಿನಗಳಲ್ಲಿ ನಿನಗೆ ಜ್ಯಾಕಿ ಜ್ಯಾಕ್ ಆಗಬಹುದು ಎಂದು ಅನಿಸಿರಲಿಲ್ಲವಾ?'

'ಡಾಕ್, ನಾನು ಆಕೆಯ ಗಡಸುತನ, ಗಂಡಸಿನ ವೇಷಭೂಷಣ ಎಲ್ಲವನ್ನೂ ನೋಡಿ ಇಷ್ಟಪಟ್ಟಿದ್ದೆ. ಟೋನಿ ಹೊಡೆಯುವ ಗಂಡಾಗಿದ್ದರೆ ಜ್ಯಾಕಿ ನನಗೆಷ್ಟು ಬೇಕೋ ಅಷ್ಟು ಮಾತ್ರ ಗಂಡಸಿನಂಶ ಹೊಂದಿದ ಹೆಣ್ಣಾಗಿದ್ದಳು ಎಂದು ತಿಳಕೊಂಡಿದ್ದೆ. ಅದು ನನಗೆ ಹಿತವಾಗಿತ್ತು ಕೂಡ. ಆದರೆ, ಆಕೆ ಈ ಟ್ರಾನ್ಸಿಷನ್‌ನಲ್ಲಿದ್ದ ಹೆಣ್ಣು ಎಂದು ನನಗೆ ಗೊತ್ತಾಗಿರಲಿಲ್ಲ. ಡಾಕ್, ಇರಲಿ. ಇಷ್ಟು ವರ್ಷ ಟೋನಿಯ ಜತೆ ಇದ್ದನಲ್ಲ. ಈಗ ಮತ್ತಿನ್ನೊಂದು ಗಂಡಸಿನ ಜತೆ ಬಾಳಬೇಕು ಎಂದು ಇದ್ದಲ್ಲಿ ಅದೇ ಆಗಲಿ. ನನಗೆ ಹೆಂಗಸರ ಜತೆ ಏಗುವ ಅದೃಷ್ಟವಿಲ್ಲ ಎನಿಸುತ್ತದೆ' ಎಂದು ಕಣ್ಣು ಹೊಡೆದು ನಕ್ಕಳು.

ನಾನು ಆಂಟಿಬಯಾಟಿಕ್ ಬರೆದ ಪ್ರಿಸ್ಕ್ರಿಪ್ಷನ್ ಅನ್ನು ಪ್ರಿಂಟ್ ಮಾಡಿ ಅದನ್ನು ಜ್ಯಾಕ್‌ಗೆ ಕೊಡಬೇಕೆಂದು ಎದ್ದೆ.

'ಡಾಕ್, ನನಗೆ ಇತ್ತೀಚೆಗೆ ಏನನಿಸುತ್ತೆ ಗೊತ್ತಾ. ನಾವು ಪ್ರೀತಿಸುವುದು ಒಂದು ಹೃದಯವನ್ನು, ಜೀವವನ್ನು, ಮನಸ್ಸನ್ನು. ಜ್ಯಾಕಿಯ ಈ ಬದಲಾವಣೆಯ ಪ್ರಕ್ರಿಯೆಯಲ್ಲಿ ವಿವಿಧ ಘಟ್ಟದಲ್ಲಿರುವ ಆಕೆಯ ದೇಹವನ್ನು ನೋಡಿದ್ದೇನೆ. ಕೆಲವೊಮ್ಮೆ ಇರುವ ಅಂಗಗಳನ್ನು ಕಳಕೊಂಡಿದ್ದಾಳೆ. ಕೆಲವೊಮ್ಮೆ ಹೊಸ ಅಂಗಗಳನ್ನು ಪಡಕೊಂಡಿದ್ದಾಳೆ. ಪ್ರತಿ ಘಟ್ಟದಲ್ಲಿಯೂ ನಾವು ಪರಸ್ಪರರನ್ನು ಪ್ರೀತಿಸಿದ್ದೇವೆ. ಅದೊಂದು ಬದಲಾಗದಿದ್ದರೆ ಸಾಕು' ಎಂದಳು.

ನಾನು ಜ್ಯಾಕ್‌ಗೆ ಆ ಪ್ರಿಸ್ಕ್ರಿಪ್ಷನ್ ಕೊಟ್ಟು 'ಇದರ ಜತೆ ಆಲ್ಕೋಹಾಲು ಕುಡಿಯುವ ಹಾಗಿಲ್ಲ. ಮತ್ತೆ ಗಾಯವನ್ನು ದಿನಾ ಮೂರು ಬಾರಿ ಡ್ರೆಸ್ಸಿಂಗ್ ಮಾಡಬೇಕು. ನಿನ್ನ ನೋಡಿದರೆ ನಿನ್ನ ಗಾಯವನ್ನು ನೀನು ಚೆನ್ನಾಗಿ ತೊಳೆದು ಡ್ರೆಸ್ಸಿಂಗ್ ಮಾಡುತ್ತಿಲ್ಲ ಅನಿಸುತ್ತದೆ' ಎಂದೆ. ಜ್ಯಾಕ್ ಮತ್ತು ಅನೀಟ ನನ್ನ ಧ್ವನಿ ಕೊಂಚ ಗಡಸಾಗಿದ್ದನ್ನು ನೋಡಿ ವಿಚಿತ್ರವಾಗಿ ನನ್ನ ನೋಡಿದರು.

ಅವರಿಬ್ಬರು ಹೋದ ಮೇಲೆ ನಾನು ಯೋಚಿಸುತ್ತಾ ಇದ್ದೆ. ನಾನು ಇದ್ದಕ್ಕಿದ್ದಂತೆ ಗಡಸಾದದ್ದು ಏಕೆ? ಟೋನಿಯನ್ನು ನಾನು ಅನೀಟಾಳಿಗೆ ಹೊಡೆಯುತ್ತಾನೆಂದು ದ್ವೇಷಿಸಿದ್ದೆ. ಈಗ ಜ್ಯಾಕ್‌ನ ಮೇಲೆ ಏಕೆ ನನಗೆ ಅಕಾರಣ ಮುಜುಗರ?

ಕೆಲಸ ಮಾಡುವಾಗ ಒಮ್ಮೆಯೂ ಯಾರ ಲಿಂಗ, ಲೈಂಗಿಕ ಆಸಕ್ತಿ, ಬಣ್ಣ, ಜಾತಿ ಯಾವುದನ್ನೂ ಪ್ರಜ್ಞಾಪೂರ್ವಕವಾಗಿ ನೋಡದೆ ಇದ್ದ, ಆಸ್ಪತ್ರೆಯ 'ಡೈವರ್ಸಿಟಿ ಕಮಿಟಿ'ಯ ಚಾಂಪಿಯನ್ ಆದ ನನಗೆ ಈ ಒಬ್ಬ ಜ್ಯಾಕ್‌ನ ಮೇಲೇಕೆ ಮಿಜಿಮಿಜಿ? ಅನೀಟ ಒಂದು

ಹೆಣ್ಣಿನ ಜತೆ ಜೀವನ ಸಾಗಿಸಬಹುದಾಗಿದ್ದು ಸಹ್ಯವಾಗಿದ್ದ ನನಗೆ ಆಕೆ ಇನ್ನೊಬ್ಬ ಗಂಡಿನೊಂದಿಗೆ ಸಂಸಾರ ಮಾಡಬಲ್ಲಳು ಎಂಬುದನ್ನು ಏಕೆ ಸೈರಿಸಿಕೊಳ್ಳಲಾರೆ?

ನಾನು ನಾನಂದುಕೊಂಡಷ್ಟು ಡೈವರ್ಸಿಟಿ ಚಾಂಪಿಯನ್ ಅಲ್ಲವೇ? ಅಥವಾ ಈ ಚಾಂಪಿಯನ್‌ಶಿಪ್ಪು ಕೆಲಸ ಭದ್ರ ಮಾಡಿಕೊಳ್ಳಲು ನನ್ನ ಅಸ್ಮಿತೆಯನ್ನು ಉಳಿಸಿಕೊಳ್ಳಲು ಮಾತ್ರವೇ?

ಅಥವಾ ನನಗೆ ಅನೀಟಾಳ ಬಗ್ಗೆ ಕೊಂಚ ಮೃದುವಾದ ಭಾವನೆಗಳಿದ್ದಾವೆಯೇ? ಅಂದು ನನ್ನ ಮನೆಗೆ ಬಂದಾಗ ಆಕೆಯ ಜತೆಗೆ ನಾನು ಅಷ್ಟು ಸಂಯಮದಿಂದ ನಡೆದುಕೊಳ್ಳದೇ ಇದ್ದಿದ್ದರೆ ಏನಾಗಬಹುದಿತ್ತು? ನನ್ನ ಸದಾಚಾರ ಬರೀ ಆಸ್ಪತ್ರೆಯ ನಿಯಮಾವಳಿಗಳಿಗೆ ಹೆದರಿ ಬಂದದ್ದೇ? ನಾನು ಟೋನಿಗಿಂತ ಮೃದು, ಜ್ಯಾಕ್‌ಗಿಂತ ಕಠಿಣವಾದ ಗಂಡೇ?

ಈ ಪ್ರಶ್ನೆಗಳಿಗೆ ನನಗೆ ಉತ್ತರ ಕೆಲವೇ ದಿನಗಳಲ್ಲಿ ಸಿಕ್ಕಿತ್ತು.

ಮೂರು ತಿಂಗಳ ನಂತರ ಒಂದು ರಾತ್ರಿ ನನ್ನ ಮನೆಯ ಮುಂಬಾಗಿಲ ಬೆಲ್ಲು ಮತ್ತೆ ಬಾರಿಸಿತು. ನಾನು ಎಂದಿನಂತೆ ನನ್ನ ಎರಡು ಲಾರ್ಜ್ ಮುಗಿಸಿ ಊಟಕ್ಕೆ ಸಿದ್ಧ ಮಾಡಿಕೊಳ್ಳುತ್ತಿದ್ದೆ. ಅನೀಟ ನನ್ನ ಮನೆಯ ಬಾಗಿಲಿನಲ್ಲಿ ನಿಂತಿದ್ದಳು. ತಲೆಯಿಂದ ಧಾರಾಕಾರವಾಗಿ ರಕ್ತ ಬರುತ್ತಿತ್ತು 'ನಿನ್ನ ಪ್ರೈವೇಟಾಗಿ ಕನ್ಸಲ್ಟ್ ಮಾಡಬೇಕು' ಎಂದು ಬಿಕ್ಕಿದಳು. ಆಕೆಯ ಹೊಂಗೂದಲ ನಡುವೆಯಲ್ಲಿದ್ದ ಸೀಳಿದ ಗಾಯವನ್ನು ತೋರಿಸಿ 'ಇದಕ್ಕೊಂದು ಹೊಲಿಗೆ ಹಾಕು, ಪ್ಲೀಸ್. ನಾನು ಲೋಕಲ್ ಅನೆಸ್ಥೆಶಿಯಾ, ಹೊಲಿಗೆ ದಾರ ಎಲ್ಲವನ್ನೂ ತಂದಿದ್ದೇನೆ' ಎಂದು ನೇರ ನನ್ನ ಬಾತ್‌ರೂಮಿಗೆ ಹೋದಳು.

ನಾನು ಮಾತಾಡದೇ ಸುಮ್ಮನೇ ಈಕೆಗೆ ಹೊಲಿಗೆ ಹಾಕಿ ಮನೆಗೆ ಕಳಿಸಲು ಸಿದ್ಧನಿರಲಿಲ್ಲ. 'ಮತ್ತೆ ಟೋನಿ ಬಂದಿದ್ದನಾ?' ಕೇಳಿದೆ.

'ಡಾಕ್, ಕೆನ್ ಯು ಪ್ಲೀಸ್ ಲೀವ್ ಮಿ ಅಲೋನ್?' ಎಂದು ಅಳಲಾರಂಭಿಸಿದಳು.

'ಸಾಧ್ಯವೇ ಇಲ್ಲ. ಇಲ್ಲಿಗೆ ನಾನು ನಿನಗೆ ನೀಡುವ ಪ್ರೈವೇಟ್ ಕನ್ಸಲ್ಟೇಷನ್ ಮುಗಿಯಿತು. ನೀನು ಮತ್ತೆ ಬೇರೆ ಯಾರನ್ನಾದರೂ ಹುಡುಕಿಕೋ. ಆ ಟೋನಿ ನಿನ್ನ ಮನೆಗೆ ಬಂದು ನಿನ್ನ ಮೇಲೆ ಅಟ್ಯಾಕ್ ಮಾಡಿದ್ದಾನೆ ಎಂದರೆ ಆತನಿಗೆ ಎಷ್ಟು ಧೈರ್ಯವಿರಬೇಕು. ಪಾಪ, ನೀವಿಬ್ಬರೇ ಹೆಂಗಸರು ಮನೆಯಲ್ಲಿರುತ್ತೀರ. ಮಕ್ಕಳು ಬೇರೆ ಚಿಕ್ಕವು.' ನಾನು ಹೇಳುತ್ತಿದ್ದಾಗ ಆಕೆಯ ತಲೆಯಿಂದ ಒಂದೇ ಸಮನೆ ಜಿನುಗುತ್ತಿದ್ದ ರಕ್ತಕ್ಕೆ ಒಂದಿಷ್ಟು ಪ್ಯಾಡ್ ಒತ್ತಿ ಹಿಡಿದೆ. ಆಕೆ ನನ್ನ ಭುಜದ ಮೇಲೆ ಒರಗಿ ಕುಸಿದಳು. ನಾನು ಆಂಬುಲೆನ್ಸ್ ಕರೆಯಲು ಹೋದೆ.

'ನೋ ಆಂಬುಲೆನ್ಸ್, ಡಾಕ್. ಸಣ್ಣ ಗಾಯ ಅಷ್ಟೇ. ಸರಿಹೋಗುತ್ತದೆ. ಸ್ವಲ್ಪ ಕೂತುಕೊಳ್ಳುತ್ತೇನೆ' ಎಂದು ಕೂತಳು.

ಸ್ವಲ್ಪ ಸಮಯದ ನಂತರ ಸುಧಾರಿಸಿಕೊಂಡಳು. ನಾನು ಮತ್ತೆ ಕೇಳಿದೆ. 'ಟೋನಿಗೆ ಒಂದು ರಿಸ್ಟ್ರೇನಿಂಗ್ ಆರ್ಡರ್ ಹಾಕಿಸು. ನಾನೇ ಸಾಕ್ಷಿ ಹಾಕುತ್ತೇನೆ' ಎಂದು ಆಕೆಯ ಭುಜ ಸವರುತ್ತಾ ಹೇಳಿದೆ.

'ಡಾಕ್, ಟೋನಿ ನನ್ನ ಮನೆಗೆ ಬಂದಿಲ್ಲ, ಡಾಕ್. ಆತ ಈ ಊರಿನಲ್ಲಿಯೇ ಇಲ್ಲ. ಆದರೂ ನಿನ್ನ ಕಾಳಜಿಗೆ ಥ್ಯಾಂಕ್ಸ್. ಇಂದು ರಾತ್ರಿ ಜ್ಯಾಕ್ ತನ್ನ ಹೊಚ್ಚ ಹೊಸ ಶಿಶ್ನದಿಂದ ನನ್ನ ಕೂಡಲು ಪ್ರಯತ್ನಿಸಿದ. ಗಾಳಿ ಊದಿ ಬಲೂನಂತೆ ಊದಿದ ಶಿಶ್ನ ಅವನ ವೈದ್ಯರು ಭರವಸಿಸಿದ ತುರೀಯವನ್ನು ಕೊಡಲಿಲ್ಲವಂತೆ. ನನಗೇನಾಗುತ್ತಿದೆ ಎಂದು ಕೇಳಲೂ ಇಲ್ಲ, ಜ್ಯಾಕ್. ಒಂದೇ ಸಮನೆ ನಲವತ್ತೈದು ನಿಮಿಷ ಗುದ್ದಾಡಿದ ನಂತರ ನಾನೇ ಸಹಕರಿಸುತ್ತಿಲ್ಲ ಎಂದು ಹೊಡೆಯಲಾರಂಭಿಸಿದ' ಮತ್ತೆ ಅಳಲು ತೊಡಗಿಕೊಂಡಳು.

ನಾನು ಮಾತಾಡದೇ ಆಕೆಯ ಬೆನ್ನನ್ನು ಸವರುತ್ತಾ ಇದ್ದೆ. 'ಡಾಕ್, ಗಂಡಾಗಿ ಬದಲಾಗುವುದು ಅಂದರೆ ಗಂಡಸು ಜಾತಿಗೆ ಆರೋಪಿಸಿರುವ ಎಲ್ಲ ಗುಣಗಳನ್ನೂ ಮೈಮೇಲೆ ಆವಾಹಿಸಿಕೊಳ್ಳುವುದು ಎಂದರ್ಥವಾ? ಒಂದು ಹೊಸಾ ದೇಹ ಒಬ್ಬ ವ್ಯಕ್ತಿಯನ್ನು ಇಷ್ಟರಮಟ್ಟಿಗೆ ಬದಲಾಯಿಸಬಲ್ಲದೇ? ಜ್ಯಾಕ್ ನನ್ನ ಹೊಡೆಯಬೇಕೆಂದು ಗಂಡಾದನೋ? ಗಂಡಾದ ಮೇಲೆ ನನಗೆ ಹೊಡೆಯಬೇಕು ಅನ್ನಿಸಿತೋ?' ಅನೀಟಾ ತನ್ನ ಮುಖದ ಮೇಲಿನ ಮೂಗುಪೆಟ್ಟುಗಳಿಗೆ ಬರ್ಫದ ಬ್ಯಾಗುಗಳನ್ನು ಇಟ್ಟುಕೊಳುತ್ತಾ ಕೇಳಿದಳು

'ಡಾಕ್, ಒಂದು ಸಮಾಧಾನದ ಸಂಗತಿ ಏನು ಗೊತ್ತಾ. ಆತ ನನ್ನಂತೆ ಒಮ್ಮೆ ಹೆಣ್ಣಾಗಿದ್ದ ಎನ್ನುವ ಅಂಶ ನನ್ನ ಮನಸ್ಸಿನಲ್ಲಿ ಉಳಿದುಕೊಂಡಿತ್ತೇನೋ ನಾನೂ ಸುಮ್ಮನೆ ಬಿಡಲಿಲ್ಲ. ಬಿಯರ್ ಬಾಟಲನ್ನು ಆಕೆಯ ತಲೆಗೆ ಅಪ್ಪಳಿಸಿದೆ. ಜ್ಯಾಕ್ ಕೂಡ ತಲೆ ತುಂಬ ರಕ್ತ ತುಂಬಿಕೊಂಡು ಕೂತಿದ್ದ' ಎಂದಳು.

ನಾನು ಆಕೆಯ ತಲೆಯ ಗಾಯವನ್ನು ಹೊಲೆಯತೊಡಗಿದೆ.



# ತಲಾಂತರ-ತಿಳಿವಿನಂತರ

**ಜಯಶ್ರೀ ಮತ್ತು ಅರ್ಚನಾ ಮೂರ್ತಿ**
Dallas, Texas

*

ಸ್ನೇಹಿತೆ ವಿದ್ಯಾಳ ಮಗನ ಮದುವೆಯ ಕರೆಯೋಲೆಯ ಇ-ನೆನಪೋಲೆಯನ್ನು ಓದುತ್ತಿದ್ದ ಗೀತಾ ತನ್ನ ಮಗಳನ್ನು ಕೂಗಿ ಕರೆದಳು "ಅಮಿತಾ.. ಮುಂದಿನ ವಾರವೇ ವಿವೇಕ-ಅಂಜಲಿಯರ ಮದುವೆ. ನೀನಿನ್ನೂ ಬ್ಯೂಟಿ ಪಾರ್ಲರ್ ಅಪ್ಪೋಯಿಂಟ್ಮೆಂಟ್ ತಗೊಂಡಿಲ್ಲ. ರಿಸೆಪ್ಷನ್ಗೆ ಗೌನ್ ಖರೀದಿಸಿಲ್ಲ. ಯಾವಾಗ ಇವೆಲ್ಲ ಮಾಡೋದು ನೀನು? ತಡವಾಗುತ್ತಿದೆಯಲ್ಲಾ!" ಇನ್ನೂ ಹಾಸಿಗೆಯ ಮೇಲೆ ನಿದ್ದೆಯ ಜೊಂಪಿನಲ್ಲಿದ್ದ ಅಮಿತಾ ಸಿಡುಕಿದಳು "ನಾನ್ಯಾಕೆ ಬ್ಯೂಟಿ ಪಾರ್ಲರ್ಗೆ ಹೋಗ್ಬೇಕು, ಅಮ್ಮ? I'm fine the way I am". ಗೀತಾ ಕೂತಿದ್ದ ಕಡೆಯೇ ಅಸಹನೆಯಿಂದ ಮಿಸುಕಿದಳು. ಇಂತಹ ನೂರಾರು ಸಂಭಾಷಣೆಗಳು, ಘರ್ಷಣೆಗಳು ತಾಯಿ-ಮಗಳ ಮಧ್ಯದಲ್ಲಿ ನಡೆದಿದ್ದವು. ಹೆಜ್ಜೆ-ಹೆಜ್ಜೆಗೂ ಸಾಮಾನ್ಯ ವಿಷಯಗಳ ಬಗ್ಗೆಗೂ ಮಗಳೊಡನೆ ವಾಗ್ವಾದ ನಡೆಸಬೇಕಾಗಿದ್ದರಿಂದ ತಾಯಿ ರೋಸಿಟ್ಟಿದ್ದಳು.

ಅನಾದಿಕಾಲದಿಂದಲೂ ಹೆಣ್ಣಿನ ಮೇಲೆ ಹೇರಿರುವ "ಸೌಂದರ್ಯ" ಮಾಪನವು ನ್ಯಾಯವಾದದ್ದೇನೂ ಅಲ್ಲ. ಕಾಳಿದಾಸನ ಶಾಕುಂತಲೆಯ ಸೌಂದರ್ಯದ ಆರಾಧನೆಯೇ ಇರಬಹುದು, Shakespeareನ Cleopatraಳ ಶ್ಲಾಘನೆಯೇ ಇರಬಹುದು, ಮಿರ್ಜಾ ಸಾಹೇಬರ ಉಮ್ರಾವ್ ಜಾನಳ ಬಗೆಗಿನ ಮೆಚ್ಚುಗೆಯ ಬರಹವೇ ಇರಬಹುದು, Papparazziಯು Princess Dianaಳನ್ನು ಬೆನ್ನಟ್ಟಿ ಗೀಳಿಟ್ಟ ರೀತಿಯೇ ಇರಬಹುದು, ಈಗಿನ ವರದಿಗಾರರು ಚಿತ್ರನಟಿಯರನ್ನು ವರ್ಣಿಸುವ ರೀತಿಯೇ ಇರಬಹುದು- ಇವೆಲ್ಲದರ

ಹಿಂದೆ "ಹೆಣ್ಣು ಮಾದಕವಾಗಿರಬೇಕೆಂಬ ಸೂಚ್ಯ ಭಾವ" – ಇದನ್ನು ನಿಜವಾಗಿಸಲು ಹಾತೊರೆಯುತ್ತಿರುವ ಹಾಗೂ ಇದರ ಲಾಭ ಪಡೆಯುತ್ತಿರುವ ಅಗಾಧ "ಸೌಂದರ್ಯ ಉದ್ಯಮ ವಲಯ"!! ಇನ್ನು ಸಾಂಪ್ರದಾಯಿಕ ಮನೆಗಳಲ್ಲೂ ಸಹ "ಹೆಣ್ಣು ಮಕ್ಕಳು ಸದಾ ಕಳೆ–ಕಳೆಯಾಗಿ ಇರಬೇಕು" ಎಂದು ಸೂಚಿಸುವ ಮನೆಹಿರಿಯರು. "ಅಮ್ಮಂಗೆ ಬೇಕು ಪೌಡರ್ ಡಬ್ಬಿ" ಅಂತ ಶಿಶುಗೀತೆಗಳನ್ನು ಹೇಳಿಕೊಡುವ ಅಜ್ಜಿ–ತಾತಂದಿರು. ಈ ತರಹದ ಪೂರ್ವಗ್ರಹಗಳು ಒಂದೇ ಎರಡೇ!! ಇಂತಹ ಎಲ್ಲಾ ಪೂರ್ವಾಭಿಪ್ರಾಯಗಳನ್ನು ಪ್ರಶ್ನಿಸುವ ದಿಟ್ಟ ತರುಣಿ ಅಮಿತಾ. ಅವಳ ನಿಖರವಾದ ಅಭಿಪ್ರಾಯಗಳನ್ನು ಕೇಳಿ ಗೀತಾಳ ಎದೆ ಬೀಗಿದ್ದೂ ಉಂಟು. ಆದರೂ, ಅವಳ ಮಾತೃಹೃದಯಕ್ಕೆ, ಮಗಳನ್ನು ತನ್ನ ಸುಭದ್ರತೆಯ ಕವಚದಲ್ಲಿಟ್ಟುಕೊಳ್ಳುವ ತವಕ. "ಬೇರೆ ಹುಡುಗಿಯರಂತೆ ನೀನೂ ಮೇಕಪ್ ಮಾಡಿಕೊಂಡು ಓಡಾಡಬಾರದೇ? ಈ ಒಣ ಆದರ್ಶಗಳಿಂದ ಏನು ಪ್ರಯೋಜನ? ನಮ್ಮನ್ನು ನಾವೇ ಹಳ್ಳಕ್ಕೆ ತಳ್ಳಿಕೊಳ್ಳುವುದು ಮೂರ್ಖತನ" ಎಂದು ಗೀತಾಳ ಅಹವಾಲು. ಖಡಾಖಂಡಿತವಾಗಿ ಮಾತನಾಡುವುದರಲ್ಲಿ ಅವಳೇನು ಮಗಳಿಗಿಂತ ಕಡಿಮೆ ಇರಲಿಲ್ಲವೆನ್ನಬಹುದು.

ಅಂತೂ ಇಂತೂ ಮದುವೆಯ ದಿನ ತಾಯಿ–ಮಗಳು ಇಬ್ಬರೂ ಅಚ್ಚುಕಟ್ಟಾಗಿ ಅಲಂಕಾರ ಮಾಡಿಕೊಂಡು ಮದುವೆಮನೆಯಲ್ಲಿ ಉಪಸ್ಥಿತರಿದ್ದರು. ವಧೂ–ವರರಿಬ್ಬರೂ ಸಂಪ್ರದಾಯಸ್ಥ ಕುಟುಂಬದವರಾದ್ದರಿಂದ, ವಿವಾಹ ಶಾಸ್ತ್ರಗಳು ವಿಧಿವತ್ತಾಗಿ ನಡೆಯುತ್ತಿದ್ದವು. ವರಪೂಜೆ, ಕಾಶೀಯಾತ್ರೆ, ಅಂತಃಪಟ, ಕನ್ಯಾದಾನ ಇತ್ಯಾದಿ. ಎಲ್ಲಾ ಶಾಸ್ತ್ರಗಳನ್ನೂ ಪುರೋಹಿತರು ಹರಕು–ಮುರುಕು ಇಂಗ್ಲೀಷಿನಲ್ಲಿ, ಆದರೆ ಉತ್ಸಾಹದಿಂದ ವಿವರಿಸುತ್ತಿದ್ದರು. ಆ ಶಾಸ್ತ್ರಗಳ ಬಗ್ಗೆ ತಿಳಿದಷ್ಟೂ ಅಮಿತಾಳಿಗೆ ಅಸಹನೆ ಹೆಚ್ಚತೊಡಗಿತು. "ಓಹೋ, ಮದುಮಗ ಕಾಶಿಗೆ ಹೋಗಬೇಕಂತೋ? ಹೋಗಲಿ ಬಿಡು. ಇದೇನು ಹುಚ್ಚಾಟ? ವಧುವಿನ ತಂದೆಯೇಕೆ ಅವನನ್ನು ದುಂಬಾಲು ಬಿದ್ದು, ಅವನ ಕಾಲು ತೊಳೆದು, ತನ್ನ ಮಗಳನ್ನು ಧಾರೆಯೆರೆಯುವೆನೆನ್ನಬೇಕು? ಇಷ್ಟಕ್ಕೂ "ದಾನ" ಮಾಡುವುದಕ್ಕೆ ವಧುವೇನು ವಸ್ತುವೇ? ದ್ರವ್ಯವೇ? ಅಥವಾ ಆಸ್ತಿಯೇ? ಸಂಪ್ರದಾಯದ ಹೆಸರಿನಲ್ಲಿ ಈಗಿನ ಕಾಲದಲ್ಲೂ ಇಂಥಾ ಅಸಮಂಜಸ ಶಾಸ್ತ್ರಗಳೇಕೆ ನಡೆಯುತ್ತಿವೆ?" ಅಮಿತಾ ಗೊಣಗುತ್ತಲೇ ಇದ್ದಳು.

ಗೀತಾಳ ಮನಸ್ಸು 30 ವರ್ಷಗಳ ಹಿಂದೆ ನಡೆದಿದ್ದ ತನ್ನ ಮದುವೆಯ ದಿನದತ್ತ ಓಡಿತು. ಆ ದಿನ ಅವಳ ಸ್ಮೃತಿಪಟಲದಲ್ಲಿ ಇನ್ನೂ ಹಚ್ಚಹಸುರಾಗಿಯೇ ಇತ್ತು. ಅಂದು ಅವಳ ಮನದಲ್ಲಿ ವಿವಾಹ ಕಾರ್ಯಕ್ರಮವು ಸಾಂಗವಾಗಿ ನೆರವೇರಿದರೆ ಸಾಕೆಂಬ ಆತಂಕವಿತ್ತೇ ವಿನಹ, ಈ ಮಟ್ಟಕ್ಕೆ ವಿವಾಹ ವಿಧಿಗಳನ್ನಾಗಲಿ, ವಿವಾಹವನ್ನೇ ಆಗಲಿ, ವರನ ಬಗ್ಗೆಯಾಗಲಿ ವಿಚಾರ ಮಾಡಿರಲಿಲ್ಲ ಅವಳು. ಮದುವೆಯಾಗಲೇಬೇಕೆಂಬ ಉತ್ಕಟ ಹಂಬಲವಿಲ್ಲದಿದ್ದರೂ, ಪ್ರಾಪ್ತವಯಸ್ಸಿನಲ್ಲಿ ಮದುವೆಯಾಗದೆ ಉಳಿದರೆ, ತಂದೆ–ತಾಯಿಗಳಿಗೆ ಆಗಬಹುದಾದ ಚಿಂತೆ, ನಾಲ್ಕಾರು ಜನರು ಅವಿವಾಹಿತ ಹುಡುಗಿಯರನ್ನು 'ಸೋತವರು' ಎಂಬಂತೆ ನೋಡುವ ದೃಷ್ಟಿಕೋನ – ಇವೆಲ್ಲದರಿಂದ ಪಾರಾದ ನೆಮ್ಮದಿ

ಆ ದಿನ. ನೆನಪಿನ ಸರಪಳಿಯಿಂದ ಹೊರಬಂದು ಮೈಗೊಡವಿದ ಗೀತಾ, ಮಗಳ ಹರಿತವಾದ ಯೋಚನಾಲಹರಿಯ ಬಗ್ಗೆ ಆತಂಕಗೊಂಡಳು. ಸಮಾಧಾನ ಮಾಡುವ ತೆರದಿ ಅವಳು "ಇವೆಲ್ಲಾ ಹಳೆಯ ಸಂಪ್ರದಾಯಗಳು. ಈ ವೈದಿಕ ವಿಧಿಗಳಲ್ಲಿ ಈಗಿನ ವಧೂ-ವರರು ಉತ್ಸಾಹದಿಂದ ಪಾಲ್ಗೊಂಡರೆ ಹಿರಿಯರಿಗೂ ಸಂತೋಷವಾಗುತ್ತದೆ. ಸಾಕಿ ಸಲಹಿದ ತಂದೆ-ತಾಯಂದಿರು ಸಂತಸದಿಂದಿರುವುದು ನಿಮ್ಮಂತಹ ಯುವಕ-ಯುವತಿಯರಿಗೂ ಖುಷಿಯೇ ಅಲ್ಲವೇ?" ಎಂದಳು. "ನಾವು ಹೆತ್ತವರು- ನಮ್ಮ ಆಶಯವನ್ನು ವಿಧೇಯತೆಯಿಂದ ಪಾಲಿಸಿದರೆ ಮಾತ್ರ ನಮಗೆ ಸಮಾಧಾನ" ಎನ್ನುವ ರೀತಿಯಲ್ಲಿ ಗೀತಾ ಮಾತನಾಡಿದರೂ, ಆ ಮಾತಿನ ಟೊಳ್ಳುತನದ ಅರಿವು ಅವಳಲ್ಲಿ ಸ್ಪಷ್ಟವಾಗಿತ್ತು! ಮಗಳ ಈಟಿಯಂತಹ ಮಾತುಗಳು ತನ್ನ ಯೌವನದ ಯೋಚನಾಲಹರಿಯನ್ನು ಮರುಚೇತನಗೊಳಿಸುತ್ತಿರುವಂತೆ ಭಾಸವಾಗತೊಡಗಿತು. ಆದರೂ, ಯಾವ ಪಾರಿವಾರಿಕ ನೆಮ್ಮದಿಗಾಗಿ ತನ್ನತನದ ಈ ಎಳೆಗಳನ್ನು ಅದುಮಿಟ್ಟಿದ್ದಳೋ, ಅದೇ ಸಂಸಾರ ಸುಖ-ಶಾಂತಿ ತನ್ನ ಮಗಳ ಬಾಳಿನಲ್ಲೂ ಅತಿ ಅವಶ್ಯವೆಂಬ ದಿಟ್ಟಸತ್ಯ ಅವಳ ಮನಸ್ಸಿನಲ್ಲಿ ನಿಶ್ಚಲವಾಗಿತ್ತು.

ಇವರಿಬ್ಬರ ಮಾತಿನ ಚಕಾಚಕಿಯನ್ನು ಮೊಟಕುಗೊಳಿಸಿದ್ದು ಗಟ್ಟಿ ಮೇಳದ ಆರ್ಭಟ ಹಾಗೂ ಮಾಂಗಲ್ಯ ಧಾರಣೆಯ ಸಂಭ್ರಮ. ಧಾರೆಯ ನಂತರ ಸಾಂಪ್ರದಾಯಿಕ ಬಾಳೆಯೆಲೆಯ ಊಟದ ವ್ಯವಸ್ಥೆಯಿತ್ತು. ಉಪಚಾರದ ಮಾತುಗಳೊಂದಿಗೆ ಒಬ್ಬಟ್ಟಿನ ಅಚ್ಚುಕಟ್ಟಾದ ಊಟ ಮುಗಿಸಿ ಎಲ್ಲರೂ ಎಲೆ-ಅಡಿಕೆ ಇಟ್ಟಿದ್ದ ಕಡೆ ಸೇರಿದರು. ವರನ ತಾಯಿ ವಿದ್ಯಾ ಸಂಭ್ರಮದಿಂದ ಎಲ್ಲರನ್ನೂ ಮಾತನಾಡಿಸುತ್ತಿದ್ದಳು.

Selfie photoಗಳ ಕಾರ್ಯಕ್ರಮ ಯಥಾಪ್ರಕಾರ ಭರದಿಂದ ನಡೆದಿತ್ತು. ವಧೂ-ವರರು ಮಧುಚಂದ್ರಕ್ಕೆ ಯಾವ ಊರಿಗೆ ಹೋಗುವರೆಂಬ ವಿಷಯದತ್ತ ಮಾತು ತಿರುಗಿತು. ವರನ ತಾಯಿ "ಅಂಜಲಿ ಹೊಸ ಕೆಲಸ ಶುರು ಮಾಡಿರುವ ಕಾರಣ ಜಾಸ್ತಿ ರಜೆಯಿಲ್ಲ. ಆದ್ದರಿಂದ ಅವರು ಮೊದಲು ಅಂದುಕೊಂಡಿದ್ದಂತೆ Europeಗೆ ಹೋಗಲಾಗುತ್ತಿಲ್ಲ" ಎಂದಳು. "ಹೌದೇ" ಎಂದು ಎಲ್ಲರೂ ಉದ್ಗರಿಸಿದರೆ, ಅಮಿತಾ "ಅದೇಕೆ ಆಂಟಿ, ಅಂಜಲಿ Googleನಂತಹ ಒಳ್ಳೆ ಕಂಪನಿಯನ್ನು ಬಿಟ್ಟಿದ್ದು?" ಎಂದು ಕೇಳಿದಳು. "ಓಹ್ ನಮ್ಮ ವಿವೇಕನಿಗೆ South Dakotaಗೆ ವರ್ಗಾವಣೆಯಾಯಿತು. ಹಾಗಾಗಿ ಅಂಜಲಿ ತನ್ನ ಕೆಲಸಕ್ಕೆ ರಾಜೀನಾಮೆ ನೀಡಿ ಅವನ ಊರಿನಲ್ಲೇ ಹೊಸ ಕೆಲಸಕ್ಕೆ ಸೇರಿದಳು" ಎಂದು ಸಹಜವಾಗಿ ವಿವರಿಸಿದಳು ವರನ ತಾಯಿ ವಿದ್ಯಾ. "ಓಹ್ ಹೌದೇ? ಒಳ್ಳೆಯದಾಯಿತು" ಎಂದು ಅಕ್ಕಪಕ್ಕದಲ್ಲಿದ್ದವರೆಲ್ಲಾ ಸಾಮಾನ್ಯ ವಿಷಯವೆಂಬಂತೆ ಪ್ರತಿಕ್ರಿಯಿಸಿದ್ದನ್ನು ಕಂಡು ಅಮಿತಾಳಿಗೆ ಅಂತರಂಗದಲ್ಲಿ ಬಹಳ ಕಸಿವಿಸಿಯಾಯಿತು. ಅಂಜಲಿ ಉತ್ತಮ ವಿದ್ಯಾರ್ಥಿನಿ ಎಂದು ಅವಳಿಗೆ ಗೊತ್ತಿತ್ತು. ಅವಳು ಶಾಲಾ-ಕಾಲೇಜುಗಳಲ್ಲಿ ಹಲವಾರು ಪಾರಿತೋಷಕ-ಗಳನ್ನು ಗೆದ್ದಿದ್ದ ಮೇಧಾವಿ. ಅಂತೆಯೇ ಅವಳಿಗೆ ಉತ್ತಮ ನೌಕರಿ ನಿರಾಯಾಸವಾಗಿ ದಕ್ಕಿತ್ತು. ವಿವೇಕ ಸಾಮಾನ್ಯ ವಿದ್ಯಾರ್ಥಿಯಾಗಿದ್ದು, ಈಗಾಗಲೇ ಒಂದೆರಡು ವರ್ಷ ಅತಿ

ಸಾಮಾನ್ಯ ಸಂಸ್ಥೆಯೊಂದರಲ್ಲಿ ಕೆಲಸ ಮಾಡಿ, ಈಗ ಸಣ್ಣ ಊರಿನಲ್ಲಿ ಮತ್ತೊಂದು ಕೆಲಸ ಹಿಡಿದಿದ್ದ. "Compromise to THIS extent is NOT what I will do" ಎಂದು ಅಮಿತಾ ಮನಸ್ಸಿನಲ್ಲೀ ಶಪಥ ಮಾಡಿದಳು. ಒಡವೆಗಳನ್ನು ಹೇರಿಕೊಂಡು ನಗುನಗುತ್ತಾ ಮಾತನಾಡುತ್ತಿದ್ದ ಆಂಟಿಗಳ ಬಗ್ಗೆ ಆದ ಜುಗುಪ್ಸೆಯನ್ನು ಮುಚ್ಚಿಡುವಂತೆ ಕೃತಕ ನಗೆ ಸೂಸಿದಳು.

ಕಾರಿನ A.C. ಒಂದೇ ಸಮನೆ ತಣ್ಣನೆಯ ಗಾಳಿಯನ್ನು ನೂಕುತ್ತಿದ್ದರೂ ಮಧ್ಯಾಹ್ನದ ಬಿಸಿಲು ಪ್ರಖರವಾಗಿತ್ತು. ತನ್ನ ಸೀಟಿನಲ್ಲೇ ತೂಕಡಿಸುತ್ತಿದ್ದ ಅಮಿತಾ ತನ್ನ ಫೋನಿನ "ಪಿಂಗ್" ಶಬ್ದಕ್ಕೆ ಎದ್ದು ತನ್ನ ಮೆಸ್ಸೇಜುಗಳತ್ತ ಕಣ್ಣು ಹಾಯಿಸಿದಳು. ಒಡನೆಯೇ "ಒಹ್, Gina got into a car crash" ಎಂದು ಉದ್ಗರಿಸಿದಳು. ಡ್ರೈವ್ ಮಾಡುತ್ತಿದ್ದ ಗೀತಾ ಕಾಳಜಿಯಿಂದ "Hope she is not hurt" ಎಂದಳು. "They are safe as the airbag got deployed" ಫೋನಿನಿಂದ ಕಣ್ತೆಗೆಯದೇ ಅಮಿತಾ ಹೇಳಿದಳು. "ಇನ್ನೂ ಯಾರು ಯಾರು ಇದ್ದರು?" ಗೀತಾಳ ಪ್ರಶ್ನೆ. "They were alone" ಎಂದು ಬಂದಿತು ಉತ್ತರ. ತುಸು ಕ್ಷಣಗಳ ಗೊಂದಲದ ನಂತರ, ಅವಳ ಕಾಲೇಜಿನ Ginaಳ ಬಗ್ಗೆ ಅಮಿತಾ ಹೇಳಿದ್ದ ವಿಷಯ ನೆನಪಿಗೆ ಬಂದು, ಎಲ್ಲವೂ ಅರ್ಥವಾದಂತಾಯಿತು ಗೀತಾಳಿಗೆ. Gina ಹುಡುಗಿಯಾಗಿ ಹುಟ್ಟಿದ್ದರೂ ಅವಳು ಬೆಳೆದಂತೆಲ್ಲಾ ತಾನು ಹುಡುಗನೋ ಹುಡುಗಿಯೋ ಎಂಬ ಗೊಂದಲಕ್ಕೆ ಬಿದ್ದು, ಕೊನೆಗೆ ತಾನು ಹುಡುಗಿಯಲ್ಲವೆಂಬ ತೀರ್ಮಾನಕ್ಕೆ ಅವಳೇ ಬಂದಿದ್ದಳು. ಗೀತಾ ಎಷ್ಟೇ ಈ ಲೈಂಗಿಕ ವಿಷಯಗಳ ಬಗ್ಗೆ ಓದಿದರೂ, ಎಷ್ಟೇ ವಿಶಾಲ ದೃಷ್ಟಿಕೋನ ಬೆಳೆಸಿಕೊಳ್ಳಬೇಕೆಂದು ಪ್ರಯತ್ನಿಸಿದರೂ, ಅವಳಲ್ಲಿ ಈ "ನವಧೋರಣೆ"ಗಳೆಲ್ಲಾ ತೀರಾ ಅಸಹಜ ಹಾಗೂ ಪ್ರಕೃತಿ ವಿರೋಧವಾದವು ಎಂಬ ತತ್ತ್ವ ಆಳವಾಗಿ ಬೇರೂರಿತ್ತು. ಹಲವಾರು ಸರ್ತಿ ಮಗಳೊಡನೆ ಘರ್ಷಣೆಗಳಿಗೂ ಈ ವಿಷಯವೇ ಕಾರಣವಾಗಿತ್ತು. "ತೀರಾ ಸಂಕುಚಿತ ಮನೋಭಾವದವಳು ನೀನು, ನಿರ್ದಯಿ ನೀನು" ಎಂದೆಲ್ಲಾ ಮಗಳಿಂದ ಮೂದಲಿಸಿಕೊಂಡಿದ್ದಳೂ ಸಹ. ಆದರೆ ಸಂದರ್ಭ ಸಿಕ್ಕಾಗಲೆಲ್ಲಾ ಅವಳೂ ಸಹ, ಮುಲಾಜಿಲ್ಲದೆ, ತನ್ನ ತತ್ತ್ವವನ್ನು ಅರೆದು ಮೆತ್ತುತ್ತಿದ್ದಳು. "ನೋಡಿದೆಯಾ, ಜೀವನದಲ್ಲಿ ಇಂತಹ ತೊಂದರೆಗಳು ಯಾವಾಗ ಬೇಕಾದರೂ ಬರಬಹುದು. ಅದಕ್ಕಾಗಿ ಒಂದು ಗಂಡು–ಹೆಣ್ಣು, ಪುರುಷ–ಪ್ರಕೃತಿಯ ತೆರನಾಗಿ ಒಂದಾಗಿ, ಅನ್ಯೋನ್ಯವಾಗಿ ಸಂಸಾರ ಹೂಡಿ, ಒಂದು ಸುರಕ್ಷಣಾ ಗೂಡನ್ನು ಕಟ್ಟಿಕೊಳ್ಳುವುದು ಅತ್ಯವಶ್ಯಕ. ಅದಕ್ಕೆ ಪೂರಕವಾಗಿ ನಮ್ಮ ಪರಂಪರೆಯಲ್ಲಿ ಹಾಗೂ ಪ್ರಪಂಚದ ಎಲ್ಲಾ ಪ್ರಾಚೀನ ಪರಂಪರೆಗಳಲ್ಲೂ ಸಹ, ಪುರುಷ–ಸ್ತ್ರೀಯರಿಗೆ ಬೇರೆ ಬೇರೆ ಪಾತ್ರಗಳನ್ನು ನಿರ್ಮಿಸಿದ್ದಾರೆ. 'ಲಿಂಗ ಸಮಾನತೆ'ಯನ್ನು ಅಕ್ಷರಶಃ ಪಾಲಿಸಹೋದರೆ ಎಡವಟ್ಟಾಗುತ್ತದೆ" ಎಂಬ ಗೀತಾಳ ಮಾತಿಗೆ ಬ್ರೇಕ್ ಬಿದ್ದದ್ದು "ಧಡ್" ಎಂದು ದಿಗ್ಭ್ರಮೆಗೊಳಿಸುವಂಥ ಸದ್ದು. ಗೀತಾ ಕೈಯಲ್ಲಿ ಹಿಡಿದಿದ್ದ steering wheel ಸಮತೋಲನ ತಪ್ಪಿದಂತಾಯಿತು. ತಾಯಿ–ಮಗಳಿಬ್ಬರೂ ಗಾಬರಿಯಾದರು. ನಡುಗುತ್ತಿದ್ದ ಕೈಗಳಿಂದಲೇ ಗಾಡಿಯನ್ನು ಮೆತ್ತಗೆ ಚಲಾಯಿಸಿ ಬದಿಗೆ ನಿಲ್ಲಿಸಿದಳು ಗೀತಾ.

ಇಬ್ಬರೂ ಗಾಡಿಯಿಂದಿಳಿದು ನೋಡಲು ಮುಂದಿನ ಟೈರ್ ಮೇಲಿನ ಸೀಳು ದೊಡ್ಡದಾಗಿ ಕಂಡಿತು. ವಾಪಸ್ ಕಾರೊಳಕ್ಕೆ ಕುಳಿತು ಗಂಡನಿಗೆ ಫೋನಾಯಿಸಿದಳು ಗೀತಾ. ಆ ಕಡೆಯಿಂದ ಬಂದ ಕಾಳಜಿ ದನಿ "ಕಾರನ್ನು ಲಾಕ್ ಮಾಡಿ ಇಬ್ಬರೂ ಒಳಗೇ ಕುಳಿತುಕೊಳ್ಳಿ. ಹೊರಗಿಳಿಯಬೇಡಿ. ಆ ಸುತ್ತಮುತ್ತಲು ಅಷ್ಟೇನೂ ಸುರಕ್ಷಿತವಲ್ಲ. ಇಗೋ ನಾನು ಹೊರಟು ಬಂದೆ". ಅರ್ಧ ಗಂಟೆಯಲ್ಲೇ ಧಾವಿಸಿ ಬಂದ ಭಾಸ್ಕರ ತಾನು ಬಂದಿದ್ದ ಕಾರಿನ ಕೀಯನ್ನು ಗೀತಾಳ ಕೈಗಿಟ್ಟು "ನೀವು ಹೊರಟಿರಿ. ನಾನು ಹೊಸ ಟೈರನ್ನು ಹಾಕಿಸಿಕೊಂಡು ಬರುವೆ' ಎಂದ. ಮನೆಗೆ ಮರಳಿದ ಅಮಿತಾ ತನ್ನ ರೂಮು ಸೇರಿ Ginaಳಿಗೆ ಫೋನು ಹಚ್ಚಿದಳು. ಗೀತಾ ತನ್ನ ಮನೆಯುಡುಪನ್ನು ಧರಿಸಿ, ರೇಷ್ಮೆ ಸೀರೆಯನ್ನು ಮಡಿಸಿಟ್ಟು, ಇನ್ನೇನು ಟಿ.ವಿ. ಚಲಾಯಿಸಬೇಕೆನ್ನುವಷ್ಟರಲ್ಲೇ ಭಾಸ್ಕರನ ಟೆಕ್ಸ್ಟ್ ಸಂದೇಶ ಫೋನಿನಲ್ಲಿ ಮಿಂಚಿತು "ಇಲ್ಲಿ ರಿಪೇರಿ ಬೇಗನೇ ಮುಗಿಯಿತು. ಮನೆಗೆ ಬರುತ್ತಿರುವೆ. ಚಹಾದ ಜೊತೆ ಭೇಲ್ ಪುರಿ ತಯಾರಿಸುತ್ತೀಯಾ?" ಒಬ್ಬಟ್ಟಿನ ತುಪ್ಪದ ಘಮ ಕೈಯಲ್ಲಿ ಇನ್ನೂ ಇದ್ದರೂ ಸಹ ಅಡುಗೆ ಮನೆಗೆ ಹೋಗಿ ಈರುಳ್ಳಿ ಹೆಚ್ಚತೊಡಗಿದಳು ಗೀತಾ. ಸಣ್ಣಗೆ ಹೆಚ್ಚಿದ ಈರುಳ್ಳಿಯನ್ನು ಬಟ್ಟಲಿಗೆ ಎತ್ತಿಟ್ಟು ಅದರಿಂದಾದ ಕಣ್ಣೀರನ್ನು ಒರೆಸುವಷ್ಟರಲ್ಲಿ ಅಮಿತಾ ರೂಮಿನಿಂದ ಹೊರಗೆ ಬಂದು, "ಅಮ್ಮಾ, I ordered two items on Amazon - Emergency Tire Repair Kit and Emergency Self Defense Kit - both highly recommended by Gina" ಎಂದಳು. ಏನೋ ಹೇಳಲು ಬಾಯಿ ತೆರೆಯುವಷ್ಟರಲ್ಲೇ, "ಭೇಲ್ ಪುರಿ ರೆಡೀನಾ?" ಎನ್ನುತ್ತಲೇ ಭಾಸ್ಕರ ಮನೆಗೆ ಕಾಲಿಟ್ಟ. ಗೀತಾ ಲಗುಬಗನೆ ಬುಟ್ಟಿಯಿಂದ ಟೊಮ್ಯಾಟೋಗಳನ್ನು ತೆಗೆದು ಹೆಚ್ಚತೊಡಗಿದಳು.

❑

# ಅಹಲ್ಯಾ... ದ್ರೌಪದೀ... ತಾರಾ...

ಮೈ. ಶ್ರೀ. ನಟರಾಜ
Potomac, Maryland

*

'ನಾನು ಮದುವೆಯಾದ ಹುಡುಗಿ ಇವಳೇನೇ?' ಎಂಬ ಅನುಮಾನ ಆಗಾಗ್ಗೆ ಕಾಡುತ್ತೆ. ಆಗ ಅವಳಿಗೆ ಇನ್ನೂ ಇಪ್ಪತ್ತೂ ತುಂಬಿತ್ತೋ ಇಲ್ಲವೋ. ಅವಳ ಊರನ್ನು ನಾವು ಕಾನಕಾನಹಳ್ಳಿ ಎಂದೇ ಕರೆದು ಅವಳ ಅಸಮಾಧಾನಕ್ಕೆ ಕಾರಣರಾಗುತ್ತಿದ್ದೆವು. ಆ ಸಣ್ಣ ಊರನ್ನು ಬೆಂಗಳೂರಿನಲ್ಲಿ ಹಳ್ಳಿಯೆಂದು ಒಪ್ಪಿಕೊಳ್ಳಲು ಇಷ್ಟಪಡದೇ ಅದರ ಹೆಸರನ್ನು ಕನಕಪುರವೆಂದು ಬದಲಾಯಿಸಿದ್ದರು. ಸದ್ಗೃಹಸ್ಥ ಕುಟುಂಬದಲ್ಲಿ ಸಭ್ಯಳಾಗಿ ಬೆಳೆದಿದ್ದವಳು, ಅವರ ನೆಂಟರ ಮನೆಯಲ್ಲಿದ್ದುಕೊಂಡು ಬಿಎಸ್ಸಿ ಮುಗಿಸಿದ್ದಳು. ನನ್ನ ಹತ್ತು ಮಾತಿಗೆ ಅವಳು ಒಂದು ಮಾತಾಡಿದರೆ ಅದೇ ಹೆಚ್ಚು. ನಮ್ಮ ಮನೆಯವರಿಗೆ ಹಿಗ್ಗೋ ಹಿಗ್ಗು. ಅಹಾ ಎಂಥ ಗಾಂಭೀರ್ಯ, ಹೆಣ್ಣು ಮಕ್ಕಳೆಂದರೆ ಹೀಗೇ ಇರಬೇಕು. ಚೆಲ್ಲುಚೆಲ್ಲಾಗಿ ಆಡುವ, ಮನಸ್ಸಿಗೆ ಬಂದಂತೆ ಮಾತಾಡುವ ಹೆಣ್ಣುಮಕ್ಕಳನ್ನು ಕಂಡರೆ ಅಮ್ಮನಿಗೆ ಆಗುತ್ತಿರಲಿಲ್ಲ. ಹೆಣ್ಣು ನೋಡಲು ಮುಂಬೈನಿಂದ ರಜೆಗೆ ಬಂದ ನಾನು, ಅಮ್ಮ ಅಪ್ಪ ಮತ್ತು – ಮೂರು ಜನರಾಗಕೂಡದೆಂದು – ನನ್ನ ತಂಗಿಯನ್ನೂ ಕರೆದುಕೊಂಡು ಹೆಣ್ಣು ನೋಡಲು ಹೋಗಿದ್ದು ಒಂದು ಸವಿ ನೆನಪು. ಬಸ್ಸಿನಿಂದ ಇಳಿದ ತಕ್ಷಣ ಹಳೆಯ ನೆನಪುಗಳು ಮರುಕಳಿಸಿದವು. ಕಾನಕಾನಹಳ್ಳಿಯ – ಕ್ಷಮಿಸಿ, ಕನಕಪುರದ ಪ್ರೌಢಶಾಲೆ ನಡೆಸುತ್ತಿದ್ದ ಅಂತರ ಪ್ರೌಢಶಾಲಾ ಚರ್ಚಾಸ್ಪರ್ಧೆಗೆ ನಾನು ಮತ್ತು ಗೆಳೆಯ ಸೀತಾರಾಮು ಹಾಸನದ ಪ್ರೌಢಶಾಲೆಯ ಪ್ರತಿನಿಧಿಗಳಾಗಿ ಹೋಗಿದ್ದು ನೆನಪಾಯಿತು.

"ಬುದ್ಧ, ಕ್ರಿಸ್ತ ಮತ್ತು ಗಾಂಧಿ ಇವರ ತತ್ವಗಳಿಗೆ ಕಿವಿಗೊಟ್ಟು ನಾವೆಲ್ಲಾ ಇಂದು ನಿರ್ವೀರ್ಯರಾಗಿದ್ದೇವೆ" ಎಂಬುದು ಚರ್ಚೆಯ ವಿಷಯವಾಗಿತ್ತು. ಜೊತೆಗೆ ಬಂದಿದ್ದ ನಮ್ಮ ಕನ್ನಡ ಪಂಡಿತರು ನಮ್ಮನ್ನು ಅರ್ಕಾವತಿ ನದಿಯ ದಂಡೆಯಲ್ಲಿ ಕೂರಿಸಿಕೊಂಡು ಪರ ಮತ್ತು ವಿರೋಧವಾಗಿ ಮಾತಾಡಲು ಬೇಕಾದ ಅಂಶಗಳನ್ನು ಸೂಚಿಸಿ ತಯಾರಿ ಕೊಟ್ಟಿದ್ದರು. ಅಂದು ಸಂಜೆ, ನಾನು, ಸೀತಾರಾಮು ಭರ್ಜರಿಯಾಗಿ ವಾದ ಮಂಡಿಸಿ/ ವಿರೋಧಿಸಿ, ನಮ್ಮ ಶಾಲೆ ರೋಲಿಂಗ್ ಶೀಲ್ಡ್ ಜೊತೆಗೆ ನಾನು ಪ್ರಥಮ ಮತ್ತು ಸೀತಾರಾಮು ನಾಲ್ಕನೇ ಬಹುಮಾನವನ್ನು ಗಿಟ್ಟಿಸಿಕೊಂಡಿದ್ದು ನೆನಪಾಗಿ ಮೈ ಪುಳಕಗೊಂಡಿತು. ಆದರೆ ಅದಕ್ಕಿಂತಲೂ ಹೆಚ್ಚಿನ ಪುಳಕವಾಗಿದ್ದು, ನಾವು ಹೆಣ್ಣು ನೋಡಲು ಹೋಗಿದ್ದ ಮನೆಯ ಯಜಮಾನರು ಅಲ್ಲಿಯ ಶಾಲೆಯ ಮುಖ್ಯೋಪಾಧ್ಯಾಯರಾಗಿದ್ದರು ಎಂದು ತಿಳಿದಾಗ. ಹಾಗೂ ನಮ್ಮ ಶಾಲೆ ಗಳಿಸಿಕೊಂಡ ಪಾರಿತೋಷಕದ ಬಗ್ಗೆ ಅವರು ಇನ್ನೂ ನೆನಪಿಟ್ಟುಕೊಂಡಿದ್ದುದು ತಿಳಿದಾಗ. ಮುಂದೊಂದು ದಿನ, ನನ್ನ ಮಡದಿಯೂ ಸಹ ಆ ಸಭೆಯಲ್ಲಿ ಹಾಜರಿದ್ದಳೆಂದು ತಿಳಿಯಿತು. "ಸಿಲ್ಕಿನ ಲಂಗ ಹಾಕಿಕೊಂಡು ಮುಂದಿನ ಸಾಲಿನಲ್ಲೇ ಕುಳಿತಿದ್ದನ್ನು ನೀವೂ ಗಮನಿಸಿರಬಹುದು" ಎಂದು ತಿಳಿಸಿದ್ದಳು.

ನಮ್ಮಮ್ಮನ ಖುಶಿಗೆ ಮಿತಿಯೇ ಇರಲಿಲ್ಲ. 'ನಮ್ಮ ಪುಟ್ಟಕೃಷ್ಣನಿಗೆ ಇವಳಿಗಿಂತ ದಿವ್ಯವಾದ ಹುಡುಗಿ ಇನ್ನೆಲ್ಲೂ ಸಿಕ್ಕುತ್ತಿರಲಿಲ್ಲ'ವೆಂದು ಕಿಟಕಿ ಮೂಲಕ ಪಕ್ಕದ ಮನೆ ಶಾರದಮ್ಮನೋರಿಗೆ ಹೇಳಿದ್ದನ್ನು ಮುಖಕ್ಷೌರ ಮಾಡಿಕೊಳ್ಳುತ್ತಿದ್ದ ನಾನು ಕಿವಿಯಾರೆ ಕೇಳಿಸಿಕೊಂಡಿದ್ದೆ. ಗಂಡುಮಕ್ಕಳ ಪೈಕಿ ಎಲ್ಲರಿಗಿಂತ ಕಿರಿಯನಾಗಿದ್ದ ನನ್ನ ಹೆಸರು ಕೃಷ್ಣಮೂರ್ತಿಯಾದರೂ ಮನೆಯವರಿಗೆ ನಾನು ಪುಟ್ಟಕೃಷ್ಣ. ಎಷ್ಟೊಂದು ಹೆಣ್ಣುಗಳನ್ನು ಯಾವುದೋ ಸಣ್ಣಪುಟ್ಟ ಕುಂದುಗಳನ್ನು ನೆವ ಮಾಡಿಕೊಂಡು, ಇವಳ ಎತ್ತರ ಸಾಲದು, ಇವಳು ಓದಿದ್ದು ಸಾಲದು, ಇವಳು ತುಂಬಾ ಓದಿಬಿಟ್ಟಿದ್ದಾಳೆ, ಮುಂತಾಗಿ ಪ್ರತಿ ಬಾರಿ ರಜೆಗೆ ಬಂದಾಗಲೂ ಮದುವೆ ಮುಂದೂಡಿ ಹಿಂದಿರುಗುತ್ತಿದ್ದ, ಸದ್ಯ! ದೇವರು ಈ ಸಾರಿ ಅವನಿಗೆ ಒಳ್ಳೆ ಬುದ್ಧಿ ಕೊಟ್ಟ, ಶಾರದಮ್ಮ! ಹುಡುಗ ಹುಡುಗೀನ ನಂಜನಗೂಡಿಗೆ ಕರ್ಕೊಂಡು ಹೋಗಿ ಒಂದು ಅಭಿಷೇಕ ಮಾಡಿಸ್ಬಿಟ್ರೆ ನನ್ನ ಜನ್ಮ ಸಾರ್ಥಕ' ಅಂತ ಅಮ್ಮ ತನ್ನ ಪುಣ್ಯಕ್ಕೆ ಎಣೆಯೇಯಿಲ್ಲವೆಂದಿದ್ದಳು. ದೇವರ ದರ್ಶನದ ಹರಕೆ ಮುಗಿದ ನಂತರವೇ ನಮ್ಮಿಬ್ಬರನ್ನೂ ಅಲ್ಲೀ ಇಲ್ಲೀ ಓಡಾಡಿ ಬರಲು ಅಪ್ಪಣೆ ಕೊಟ್ಟದ್ದು. ಕೊಡಗಿನ ಬೆಡಗನ್ನು ನಡೆದೇ ನೋಡಬೇಕೆಂದು ನಾನೂ ನನ್ನ ಮಡದಿಯೂ ಕೊಡಗಿನ ಮೂಲೆ ಮೂಲೆಗಳನ್ನು ಸುತ್ತಿದೆವು. ದಾರಿಯುದ್ದಕ್ಕೂ ನಾನು ಮಾತಾಡಿದೆ, ಅವಳು ಕೇಳಿಸಿಕೊಂಡು ಸುಖಿಸಿದಳು. ಜೋಕುಗಳನ್ನು ಕೇಳಿ ಒಂದಷ್ಟು ನಕ್ಕಳು, ನಡೆದೂ ನಡೆದೂ ಸುಸ್ತಾದಾಗ ಒಂದೆರಡು ಬಾರಿ ಅತ್ತಳೂ ಸಹ. ಮಡಿಕೇರಿ ಗುಡ್ಡದ ಮೇಲೆ ರಾಜಾಸೀಟಿನಲ್ಲಿ ಕೂರಿಸಿಕೊಂಡು ಅವಳ ಕಾಲುಗಳನ್ನೊತ್ತಿ ಪಾದಸೇವೆ ಮಾಡಿದಾಗ ಮೌನವಾಗಿಯೇ 'ಸಹಿಸಿ'ಕೊಂಡು ಖುಶಿಪಟ್ಟಿದ್ದಳು. ನವವಿವಾಹಿತರಿಗೆಂದೇ ತೆರೆದಿದ್ದ ಕೊಡಗಿನ ಒಂದು ತೋಟದ ಮನೆ ಹೋಟೆಲಿನಲ್ಲಿ ನಾವಿಬ್ಬರೂ ಮಧುಚಂದ್ರ ಮಾಡಿ ಒಂದಾದೆವು! ಅವಳ ಹೆಸರು ರಾಧೆ.

ನನ್ನ ಹೆಸರು ಕೃಷ್ಣ, ಕೇಳಬೇಕೇ? ಆದರೂ ನಾನವಳಿಗೆ 'ರಾಣಿ' ಎಂದು ಹೊಸ ನಾಮಕರಣ ಮಾಡಿದ್ದೆ. ಅವಳು ಮಾತ್ರ ನನ್ನನ್ನು ರಾಜ ಎಂದು ಕರೆಯಲು ನಿರಾಕರಿಸಿದ್ದಳು.

ಬೆಂಗಳೂರಿನಲ್ಲಿ ಸಂಸಾರ ಹೂಡುವ ಪ್ರಮೇಯವೇ ಬರಲಿಲ್ಲ. ಅವಳು ಮುಂಬೈಗೆ ಬಂದು ನನ್ನ ಜೊತೆ ಸಂಸಾರ ಹೂಡಿದಾಗಲೇ ನನಗೆ ಗೊತ್ತಾಗಿದ್ದು, ಅವಳೂ ಮಾತಾಡಬಲ್ಲಳು ಎಂದು. ಭಾನುವಾರ ಬಂದರೆ ಸರಿ, ನಾವಿಬ್ಬರೂ ಲೋಕಲ್ ಟ್ರೈನ್ ಹತ್ತಿ ಮುಂಬೈ ಸುತ್ತಲು ಹೊರಡುತ್ತಿದ್ದೆವು. ಎಲಿಫೆಂಟಾ ಗುಹೆಗಳು, ಜಹಾಂಗೀರನ ಆರ್ಟ್ ಗ್ಯಾಲರಿ, ವಜ್ರೇಶ್ವರಿಯ ಸುಡು-ಚಿಲುಮೆ, ಜುಹು, ಚೌಪಾಟಿ ಬೀಚ್‌ಗಳನ್ನೆಲ್ಲಾ ಸುತ್ತಾಡಿ ಸುಸ್ತಾದೆವು. ನನಗೆ ಅಮೆರಿಕಾದ ವಿಶ್ವವಿದ್ಯಾಲಯದಲ್ಲಿ ಪಿಎಚ್ಡಿ ಮಾಡಲು ಅವಕಾಶ ಸಿಕ್ಕಿತು. ಕೆಲಸಕ್ಕೆ ರಾಜೀನಾಮೆಯಿತ್ತು, ಇಬ್ಬರೂ ಒಟ್ಟಾಗಿಯೇ ಅಮೆರಿಕಕ್ಕೆ ಹಾರಿದೆವು. ನಂತರ ಕಾರ್ಪಣ್ಯದ ವಿದ್ಯಾರ್ಥಿ ಜೀವನ. ಅದಾದ ನಂತರ ಕೆಲಸ ಹಿಡಿದು ಎರಡು ಮಕ್ಕಳ ತಾಯ್ತಂದೆಯರಾಗಿ, ಇಪ್ಪತ್ತು ವರ್ಷಗಳು ಉರುಳಿದ್ದು ಗೊತ್ತಾಗಲೇ ಇಲ್ಲ. ಇಬ್ಬರು ಹೆಣ್ಣು ಮಕ್ಕಳೂ ಕಾಲೇಜು ಸೇರುವ ಹೊತ್ತಿಗೆ ನಾವಿಬ್ಬರೂ ಹಣ್ಣುಗಾಯಿ ನೀರುಗಾಯಿ ಆಗಿದ್ದೆವು.

ಮಕ್ಕಳಿಗೆ ಉತ್ತಮ ಸಂಸ್ಕಾರಗಳನ್ನು ಕಲಿಸಿ ಹತ್ತಿರದ ವಿಶ್ವವಿದ್ಯಾಲಯದಲ್ಲೇ ಕಾಲೇಜಿಗೆ ಸೇರಿಸಿದ್ದೆವು. ಕಾಲೇಜಿನಲ್ಲಿ ಮಕ್ಕಳು ಏನು ಮಾಡುತ್ತಿದ್ದಾರೆ, ಯಾರ ಸ್ನೇಹ ಮಾಡುತ್ತಾರೆ, ಹೇಗೆ ಓದುತ್ತಿರಬಹುದು, ಅವರ ಭವಿಷ್ಯ ಹೇಗಿದ್ದೀತು ಮುಂತಾಗಿ ನಾನು ತಲೆ ಕೆಡಿಸಿಕೊಂಡಿದ್ದೆನಾದರೂ ರಾಣಿ ವಿಚಲಿತಳಾಗಿರಲಿಲ್ಲವೆಂದೇ ಹೇಳಬೇಕು. ಆ ದಿನಗಳಲ್ಲಿ ನಮ್ಮಿಬ್ಬರ ನಡುವೆ ನಡೆಯುತ್ತಿದ್ದ ಸಂಭಾಷಣೆಯ ಸಾರಾಂಶ ಹೆಚ್ಚುಕಮ್ಮಿ ಹೀಗಿರುತ್ತಿತ್ತು:

'ರಾಣಿ, ನಿಂಗೇನನ್ನಿಸ್ತೆ? ಮಕ್ಕಳು ಡೇಟ್ ಮಾಡುತ್ತಿದ್ದಾರಾ?'

'ಮಾಡುತ್ತಿರಬಹುದು, ಏನೀಗ?'

'ಅದರ ಬಗ್ಗೆ ನಿನ್ನ ಜೊತೆ ಮಾತಾಡುತ್ತಾರಾ?'

'ಇಲ್ಲ. ನಾನು ಕೇಳೋದೂ ಇಲ್ಲ, ಅವು ಹೇಳೋದೂ ಇಲ್ಲ.'

'ಯಾಕೆ ಕೇಳಲ್ಲ?'

'ಕೇಳೋದಕ್ಕೇನಿದೆ? ಹದಿನೆಂಟು ತುಂಬಿದ ಮೇಲೆ ಅವರು ವಯಸ್ಕರು. ಇದು ಸ್ವತಂತ್ರ ದೇಶ.'

'ಕೊನೇ ಪಕ್ಷ, ನಮ್ಮ ದೇಶದ ಹುಡುಗರ ಜೊತೆ ಸ್ನೇಹ ಬೆಳೆಸಿ ಅಂತ ಹೇಳಬಾರದೇ? ನಮ್ಮ ಭಾಷೆ ಮಾತಾಡುವವರಾದರೆ ಇನ್ನೂ ಉತ್ತಮ.'

'ಸದ್ಯ, ನಮ್ಮ ಜಾತಿ ಹುಡುಗರನ್ನೇ ಹುಡುಕೊಂತ ಹೇಳಲಿಲ್ವಲ್ಲ. ಅಲ್ರೀ, ನಮ್ಮ ದೇಶ ಅಂದ್ರೆ ಯಾವುದು? ನಾವು-ನೀವೂ ಬೆಳೆದ ಭಾರತವೋ? ಬದಲಾಗುತ್ತಿರುವ ಇಂದಿನ ಭಾರತವೋ? ಅಥವಾ ನಾವು ಆಯ್ದುಕೊಂಡಿರುವ ಅಮೇರಿಕವೋ? ನಮ್ಮ ಮಕ್ಕಳು ಇಲ್ಲೇ ಹುಟ್ಟಿ ಇಲ್ಲೇ ಬೆಳೆದವರು, ಅವರಿಗೆ 'ನಮ್ಮ ದೇಶ' ಅಂದ್ರೆ ಇದೇ ಅಲ್ಲವೇ? 'ನಮ್ಮ ಭಾಷೆ' ಅಂದ್ರೆ ಇಂಗ್ಲಿಷ್ ಅಲ್ಲವೇ? ಯಾವ ದೇಶದ ಮೂಲದವರಾದ್ರೂ,

ಇಲ್ಲಿನ ಎಲ್ಲಾ ಮಕ್ಕಳೂ ಇಂಗ್ಲಿಷ್ ತಾನೆ ಆಡುತ್ತಾರೆ? ಅವರೊಂದಿಗೆ ಡೇಟ್ ಮಾಡಿದರೆ ತಪ್ಪೇನು? ನಿಮ್ಮ ಆಪ್ತಮಿತ್ರ ಶ್ರೀನಿವಾಸ ಭಟ್ಟರ ಮಕ್ಕಳು ಅಮೆರಿಕನ್ ಹುಡುಗಿಯರನ್ನು ಡೇಟ್ ಮಾಡಿ, ಇಷ್ಟಪಟ್ಟು ಮದುವೆಯೂ ಆಗಿಲ್ಲವೇ?'

'ಗಂಡು ಮಕ್ಕಳ ವಿಷಯವೇ ಬೇರೆ...'

'ಏನಂದ್ರಿ? ಏನು ಹಾಗಂದ್ರೆ?'

ಕಾನಕಾನಹಳ್ಳಿಯಲ್ಲಿ ಹುಟ್ಟಿ ಕನಕಪುರದಲ್ಲಿ ಬೆಳೆದು, ಬೆಂಗಳೂರಿನಲ್ಲಿ ಓದಿ, ಮುಂಬೈನಲ್ಲಿ ಮುಂದುವರೆದು, ಅಮೆರಿಕದಲ್ಲಿ 'ವಿಮೋಚಿತೆ'ಯಾದ ವೀರಮಹಿಳೆಯೊಂದಿಗೆ ಚರ್ಚೆಗಿಳಿಯುವುದು ಹುಡುಗಾಟದ ಮಾತಲ್ಲ. ಬಾಯಿಂದ ಮಾತು ಬಂದಾಗಿತ್ತು. ಬಿಟ್ಟ ಬಾಣವನ್ನು ಹಿಂತೆಗೆದುಕೊಳ್ಳಲಾದೀತೆ?

'ಅಲ್ಲಾ ರಾಣಿ, ಹೆಚ್ಚು-ಕಮ್ಮಿ ಆದರೆ ಗಂಡು ಮಕ್ಕಳು ಕೈತೊಳೆದುಕೊಳ್ಳುತ್ತಾರೆ, ಆದ್ರೆ ಹೆಣ್ಣುಮಕ್ಕಳ ಗತಿ ಏನು? ಪರಿಣಾಮ ಭಯಂಕರವಲ್ಲವೇ?'

'ಓಹೋ, ಹಾಗೋ? ದೇವರ ದಯದಿಂದ ನಿಮಗೆ ಗಂಡುಮಕ್ಕಳಾಗಲಿಲ್ಲ. ಹಾಗೇನಾದ್ರೂ ನಿಮಗೆ ಗಂಡು ಮಕ್ಕಳಾಗಿ ಅವರು ಕಾಲೇಜಿನಲ್ಲಿದ್ದಿದ್ರೆ, ಗೂಳಿಗಳ ಥರ ಬಿಟ್ಬಿಡ್ತಾ ಇದ್ರಿ ಅನ್ಸತ್ತೆ. ಅವಕ್ಕೆ ಏನೂ ಪರಿಣಾಮ ಆಗಲ್ವಲ್ಲ. ನಿಮ್ಮ ಪ್ರಕಾರ.'

'ಗಂಡು ಮಕ್ಳನ್ನ ಗೂಳಿಗಳ ಥರ ಬಿಡೋದು ತಪ್ಪು. ಅದೇ ಲಾಜಿಕ್ಕಿನ ಪ್ರಕಾರ, ಹೆಣ್ಣು ಮಕ್ಕಳನ್ನ ಪೋಲಿ ಹಸು ಥರ ಎಲ್ಲಿ ಅಂದ್ರೆ ಅಲ್ಲಿ ಮೇಯ್ಕೋ ಹೋಗು ಅಂತ ಬಿಟ್ಬಿಡಬಾರದು, ಅಲ್ವಾ?'

'ಅಲ್ರೀ, ಸ್ವಾಮೀ, ನೀವು ಯಾವ ಜಮಾನಾದಲ್ಲಿದೀರಿ? ಗಂಡಸರಿಗೊಂದು ನಿಯಮ, ಹೆಂಗಸರಿಗೊಂದು, ಇಲ್ಲಿ ನಡೆಯೋದಿಲ್ಲ, ಗೊತ್ತಲ್ಲ.'

'ಸರಿ ಬಿಡು, ಈ ವರ್ಷ, ಯುಗಾದಿ-ರಾಮನವಮಿ ಸಮಯದಲ್ಲಿ ಮನೆಗೆ ಬಂದಾಗ ನಾನೂ ನೀನೂ ಒಟ್ಟಿಗೆ ಒಂದು ಸೆಷನ್ ಹಾಕೋಣ. ಕೊನೇ ಪಕ್ಷ, ಅವುಗಳ ಮನಸ್ಸಿನಲ್ಲಿ ಏನು ನಡೀತಾ ಇದೆ ಅಂತಾನಾದ್ರೂ ಗೊತ್ತಾಗತ್ತೆ.'

'ಯುಗಾದಿಗೆ ಬರ್ತಾರೋ ಇಲ್ವೋ ಗೊತ್ತಿಲ್ಲ, ಆದ್ರೆ ರಾಮನವಮಿಗಂತೂ ಖಂಡಿತಾ ಬರೊಲ್ಲ.'

'ಯಾಕೆ?'

'ರಾಮ ಒಬ್ಬ ಮಿಸಾಜಿನಿಸ್ಟ್ ಅಂತೆ, ಅವ್ನನ್ನ ದೇವರೂ ಅಂತ ಪೂಜೆ ಮಾಡೋದು ಒಂದು ಘೋರ ಅಪರಾಧ ಅಂತೆ.'

'ತಲೆ ಚಚ್ಚಿಕೋಬೇಕು! ರಾಮನ್ನ ಕುರಿತ ನಲ್ವತ್ತೈದು ನಿಮಿಷಗಳ ವರ್ಣ ಪ್ರದರ್ಶಿಸಿದ್ರಲ್ಲ ರಂಗಪ್ರವೇಶಕ್ಕೆ. ಈಗೇನಾಯ್ತು?'

'ಅದೆಲ್ಲಾ ಹೈಸ್ಕೂಲಿನಲ್ಲಿದ್ದಾಗಿನ ಕಥೆ. ಕಾಲೇಜಿನಲ್ಲಿ ಭಾರತೀಯ ಮೂಲದ ವಿದ್ಯಾರ್ಥಿಗಳೆಲ್ಲ ಸೇರ್ಕೊಂಡು ಸಂಘ ಮಾಡಿಕೊಂಡಿದ್ದಾರೆ. ಅಲ್ಲಿ ಭಾಂಗರಾ ಬಿಟ್ರೆ ಇನ್ನಾವ ನೃತ್ಯಕ್ಕೂ ಅವಕಾಶವಿಲ್ಲ. ರಾಮ, ಸೀತೆಯ ಶೀಲನ ಶಂಕಿಸಿ ಅಗ್ನಿಪ್ರವೇಶ

ಮಾಡಿಸಿದವನು. ಅಗಸನ ಮಾತು ಕೇಳಿ ಗರ್ಭಿಣಿ ಹೆಂಡತೀನ ಕಾಡಿಗಟ್ಟಿದವನು. ಅವನೆಂಥ ಗಂಡ್ಸು? ಅವನೆಂಥ ಗಂಡ? ಅಂತ ಒಬ್ಳು ಇಂಡಿಯನ್ ಕ್ರಿಶ್ಚಿಯನ್ ಹುಡುಗಿ ವಾದಿಸಿದಳಂತೆ. ಅದಾದ ಮೇಲೆ, ಯಾವ ಹಿಂದೂ ಹುಡುಗೀನೂ ರಾಮನವಮಿ ಸುದ್ದಿ ಎತ್ತಲ್ಲ ಅಂತ ತಿಳೀತು.'

'ಅವರೇನೋ ತಿಳಿಯದ ಮಕ್ಕಳು, ನೀನಾದ್ರೂ ಬುದ್ಧಿ ಹೇಳ್ಬಾರ್ದಾ? ರಾಮ ಹೆಂಡತೀನ ಹುಡುಕ್ಕೊಂಡು ಉತ್ತರದಿಂದ ದಕ್ಷಿಣಕ್ಕೆ ಕಾಲ್ನಡಿಗೇಲೇ ಹೋಗಿ, ಸಮುದ್ರದ ಮೇಲೆ ಸೇತುವೆ ಕಟ್ಟಿ, ರಾವಣನ್ನ ಯುದ್ಧದಲ್ಲಿ ಕೊಂದು, ಸೀತೇನ ರಕ್ಷಿಸಲಿಲ್ವಾ? ಏಕಪತ್ನೀವ್ರತಸ್ಥ, ಆ ರಾಮ. ಅವನನ್ನೇ ಹೀಗನ್ನೋವ್ರು, ಇನ್ನು ಹದಿನಾರು ಸಾವಿರ ಗೋಪಿಕಾ ಸ್ತ್ರೀಯರ ಜೊತೆ ಚೆಲ್ಲಾಡೋ ಕೃಷ್ಣನ್ನ ಬಿಡ್ತಾರ? ಮಸಣವಾಸೀ ಶಿವನ್ನ ಬಿಡ್ತಾರಾ? ಅಷ್ಟಕ್ಕೂ ಹಿಂದೂ ದೇವರುಗಳ ಬಗ್ಗೆ ಮಾತಾಡೋಕೆ ಆ ಕ್ರಿಶ್ಚಿಯನ್ ಹುಡುಗೀಗೆ ಯಾರು ಅಧಿಕಾರ ಕೊಟ್ರು? ಹೀಗಾದ್ರೆ ನಮ್ಮಕ್ಳು ಹಿಂದೂ ಹುಡುಗರನ್ನ ಮದುವೆ ಆಗ್ತಾರಾ?'

'ಯಾರನ್ನಾದ್ರೂ ಮಾಡ್ಕೊಳ್ಳಲಿ, ಬಿಡಿ. ನಿಮಗೇನು ಕಷ್ಟ? ಯಾರನ್ನ ಕಂಡ್ರೆ ಅವರಿಗೆ ಇಷ್ಟ ಆಗತ್ತೋ ಅವ್ರನ್ನ ಮದುವೆ ಆಗ್ಲಿ. ತಪ್ಪು ಮಾಡಿದ್ರೆ ಅನುಭವಿಸ್ಲಿ. ತಡ್ಕೊಳಕ್ಕಾಗದಿದ್ರೆ, ವಿಚ್ಛೇದನ ಇದ್ದೇ ಇದೆ.'

'ಇದೇನ್ ರಾಣಿ ಹೀಗಂತೀ? ಊರಲ್ಲಿ ನಮ್ಮ ತಂದೆ-ತಾಯಿಗಳೂ, ನೆಂಟ್ರು ಇಷ್ಟರೂ ಏನಂತಾರೆ? ಈ ಥರಾ ಥಿಂಕಿಂಗ್ ತಪ್ಪು ಅಂತ ಹೇಳ್ಬೇಡ್ವಾ?'

'ಊರಲ್ಲಿರೋ ನಮ್ಮ ನೆಂಟರಿಷ್ಟರ ಮನೆಗಳಲ್ಲಿ ಯಾರ್ಗೂ ಡಿವೋರ್ಸೇ ಆಗಿಲ್ಲ ಅನ್ನೋ ಹಾಗೆ ಮಾತಾಡ್ತೀರಲ್ರೀ. ಮದುವೆ ಮುರಿದ ವಿಷಯ ಸುದ್ದೀನೇ ಅಲ್ಲ ಅನ್ನೋ ಅಷ್ಟು ಮುಂದುವರಿದಿದ್ದಾರೆ ಅಲ್ಲೀ ಜನ. ನೀವ್ ನೋಡಿದ್ರೆ ಕೃತ-ತ್ರೇತಾ-ದ್ವಾಪರಯುಗದಲ್ಲೇ ಇರೋಹಾಗೇ ಕಾಣ್ತೀರಾ. ಕಾಲ ದೇಶಕ್ಕೆ ತಕ್ಕಂತೆ ಬದಲಾಗಬೇಕೋ ಬೇಡ್ವೋ?'

'ಸರಿ ಬಿಡು, ನೀನು ಕಲಿಯುಗದ ಕಣ್ಮಣಿ. ಈ ಕಾಲ ದೇಶಕ್ಕೆ ತಕ್ಕ ಹಾಗೆ ಜೀವನ ಸಂಗಾತಿಗಳನ್ನು ಹುಡುಕ್ಕೊಳಕ್ಕೆ ಮಾರ್ಗದರ್ಶನ ಮಾಡು, ಮತ್ತೆ.'

'ಅಲ್ರೀ, ಈಜು ಕಲೀ ಬೇಕಾದ್ರೆ ನೀರೊಳಕ್ಕೆ ಧುಮುಕಬೇಕೋ ಬೇಡ್ವೋ? ನೀರೊಳಕ್ಕೇ ಇಳೀಬೇಡ ಅಂದ್ರೆ ಹೇಗೆ? ಧುಮುಕ್ಲಿ, ಕೈ-ಕಾಲ್ ಬಡೀಲಿ, ಮುಳುಗ್ಲಿ ಇಲ್ಲ ತೇಲಲಿ.'

ಇಂಥಾ ಅನೇಕ ಸಂಭಾಷಣೆಗಳು ನಡೆಯುತ್ತಲೇ ಇದ್ವು, ಮಕ್ಳು ಯಾವ ಕೊಳದಲ್ಲಿ ಧುಮುಕಿದ್ರೋ, ಎಷ್ಟು ಸರ್ತಿ ಮುಳುಗಿ ಡುಬ್ಕಿ ಹೊಡದ್ರೋ, ತೇಲೋದು ಕಲಿತ್ರೋ ಬಿಟ್ರೋ, ಈಸಿದ್ರೋ, ಜಯಿಸಿದ್ರೋ, ತಿಳ್ಕೊಳೋದು ಹೇಗೆ ಅಂತ ಮಾತ್ರ ಗೊತ್ತಾಗ್ಲೇ ಇಲ್ಲ.

ಮಕ್ಕಳು ತಮ್ಮಷ್ಟಕ್ಕೆ ತಾವು ಸ್ವತಂತ್ರವಾಗಿರ್ತಾರೆ ಅಂತ ಖಾತ್ರಿ ಮಾಡ್ಕೊಂಡು, ಒಂದಿನ ಇದ್ದಕ್ಕಿದ್ದಂತೆ, ರಾಣಿ ತನ್ನ ಒಂದು ಬೇಡಿಕೆಯನ್ನು ಮಂಡಿಸಿದಳು. ಬೇಡಿಕೆ ಅನ್ನೋಕ್ಕಿಂತ ನಿರ್ಧಾರ ಅಂತ್ಲೇ ಹೇಳಬಹುದು.

'ನಾನು ಕಮ್ಯೂನಿಟಿ ಕಾಲೇಜ್ ಸೇರಬೇಕೂಂತ ನಿರ್ಧರಿಸಿದೀನಿ.'

'ಓ? ಕಮ್ಯೂನಿಟಿ ಕಾಲೇಜ್ ಯಾಕೆ? ಯೂನಿವರ್ಸಿಟೀಗೆ ಸೇರ್ಕೊಬಹುದಲ್ಲ?'

'ರೀ ಸ್ವಾಮಿ, ಮರ್ತುಹೋಗಿದೀರ ಅನ್ಸತ್ತೆ. ಬಿಎಸ್ಸಿ ಮುಗಿದ ತಕ್ಷಣ ಮದುವೆ, ಅಲ್ಲಿಂದ ಬೆಂಗ್ಳೂರಲ್ಲಿ ಕಾಲೂರಕ್ಕೆ ಮೊದ್ಲೇ ಮುಂಬೈಗೆ ಓಟ. ಅಲ್ಲಿ ಕಾಲೂರಕ್ಕೆ ಮುಂಚೆ ಅಮೇರಿಕಾ ಯಾತ್ರೆ. ಆಮೇಲೆ ನಿಮ್ಮ ಪಿಎಚ್ಡಿ ಹೋರಾಟ. ನಿಮಗೇನೋ ಅದೊಂಥರ ತಪಸ್ಸಾಗಿತ್ತು, ಆದ್ರೆ ಅದು ನಂಗೆ ಜೈಲು ಸೆಂಟೆನ್ಸ್ ಥರ ಇತ್ತು. ನೀವು ಲ್ಯಾಬಿಂದ ಹಿಂದಿರುಗೋದನ್ನೆ ಕಾಯ್ತ, ಅಡುಗೆ ಮಾಡ್ತಾ, ಟೀವೀ ನೋಡ್ತಾ ನಾಲ್ಕು ವರ್ಷ ವನವಾಸ ಕಳೆದೆ. ಆಮೇಲೆ ಒಂದರ ಮೇಲೊಂದು ಎರಡು ಮಕ್ಳು. ಅವರನ್ನ ಬೆಳೆಸಿ, ಡ್ಯಾನ್ಸ್ ಕ್ಲ್ಯಾಸು, ಮ್ಯೂಸಿಕ್ ಕ್ಲ್ಯಾಸು, ಹೋಮ್ವರ್ಕ್ ಪ್ರಾಜೆಕ್ಟು, ಲೈಬ್ರರೀ ಯಾತ್ರೆ, ಒಂದಾ ಎರಡಾ? ನೀವೇನೋ ನಿಮ್ಮ ಆಸೆಗಳನ್ನ ಪೂರೈಸಿಕೊಂಡ್ರಿ, ಒಳ್ಳೆ ಕೆರಿಯರ್ರೂ ಸಂಪಾದಿಸ್ಕೊಂಡ್ರಿ. ನನಗೇನ್ ಬಂತು ಲಾಭ?'

'ಅದಕ್ಕೆ ಕಮ್ಯೂನಿಟಿ ಕಾಲೇಜ್ ಸೇರಕ್ ಹೊರಟಿದ್ದೀಯಾ?'

'ನೋಡಿ, ಈ ವಯಸ್ಸಿನಲ್ಲಿ ನಾನು ಡಿಫ಼ರೆನ್ಷಿಯೇಶನ್ನು, ಇಂಟೆಗ್ರೇಷನ್ನು ಅಂತ ಮ್ಯಾಥ್ಸು, ಸೈನ್ಸು ಓದಕ್ಕೆ ತಯಾರಿಲ್ಲ. ಹೈಸ್ಕೂಲಲ್ಲಿ ಮಕ್ಕಳಿಗೆ ಹೋಂವರ್ಕ್ ಹೆಲ್ಪ್ ಮಾಡೋಕೇ ತಿಣುಕಿ, ಅಪ್ಪನ್ನೇ ಕೇಳೀಂತ ನಿಮ್ಹತ್ರ ಕಳಿಸ್ತಿದ್ದೆ, ಜ್ಞಾಪಕ ಇಲ್ವಾ? ಅವೆಲ್ಲ ಮರೆತುಹೋಗಿದೆ. ಮೊದ್ಲು ಕಮ್ಯೂನಿಟಿ ಕಾಲೇಜಿನಲ್ಲಿ ಅಸೋಸಿಯೇಟ್ ಡಿಗ್ರಿ ತೊಗೊಂಡು, ನಂತರ ಯೂನಿವರ್ಸಿಟಿ ಸೇರ್ಕೋತೀನಿ.'

'ಹಾಗಾದ್ರೆ, ಏನ್ ಸಬ್ಜೆಕ್ಟ್ ತೊಗೋತಿಯಾ? "ಹೆಲ್" ಕಾಂಬಿನೇಷನ್ ತೊಗೋತೀಯಾ?'

'ಏನ್ರೀ ಹಾಗಂದ್ರೆ?'

'ಅದೇ, ಎಚ್-ಇ-ಎಲ್. ಅಂದ್ರೆ, ಹಿಸ್ಟ್ರಿ, ಎಕನಾಮಿಕ್ಸ್, ಲಾಜಿಕ್. ನಮ್ಮೂರಿನ ಹುಡಿಗೀರ್ಗೆಲ್ಲ ಫ಼ೇವರೆಟ್ ಕಾಂಬಿನೇಷನ್ನಾಗಿತ್ತು.

'ಸ್ವಾಮೀ, ಸ್ವಲ್ಪ ಮುಂದುವರೀರಿ. ಈ ದೇಶದಲ್ಲಿ ಅದನ್ನೇ ಲಿಬರಲ್ ಆರ್ಟ್ಸ್ ಅಂತಾರೆ. ನನಗೆ ಒಂದಿಷ್ಟು ಅಡ್ವಾನ್ಸ್ ಕ್ರೆಡಿಟ್‌ಗಳು ಸಿಕ್ಕುತ್ವೆ. ಒಂದು ವರ್ಷದಲ್ಲಿ ಅಸೋಸಿಯೇಟ್ ಡಿಗ್ರಿ ಸಿಕ್ಕತ್ತೆ, ನಾನೀಗಾಗ್ಲೆ ಕಾಲೇಜಿನವರ ಹತ್ರ ಮಾತಾಡಿದ್ದೀನಿ.'

'ಅಂದ್ರೆ ಎಲ್ಲ ಯೋಜನೆ ಮಾಡೇ ತಿಳಿಸ್ತಾ ಇದೀಯಾ ಅನ್ನು. ಆಮೇಲೆ?'

'ಆಮೇಲೇನು, ಯೂನಿವರ್ಸಿಟಿನಲ್ಲಿ ವಿಮೆನ್'ಸ್ ಸ್ಟಡೀಸ್ ಮೇಜರ್ ತೊಗೊಂಡು ಮುಂದುವರೀತೀನಿ. ಮಾಸ್ಟರ್ಸ್ ಅಂತೂ ಖಂಡಿತ, ಪಿಎಚ್ಡಿ ಮಾಡಿದ್ರೂ ಮಾಡ್ಬಹುದು. ನನ್ನ ಥೀಸೀಸ್ ವಿಷಯ ಕೂಡ ಯೋಚಿಸಿದೀನಿ.'

'ವಾವ್! ಸುಮಾರು ದಿನಗಳಿಂದ ಲೆಕ್ಕಾಚಾರ ಮಾಡಿದ ಹಾಗೆ ಕಾಣ್ಸತ್ತೆ. ಸೋ, ಮಾಡು. ಈ ವಿಷಯದಲ್ಲಿ ನಾನೇನು ಮಾಡ್ಬೇಕೂ?'

'ನೀವಾ? ಹೇಳ್ತೀನ್ ಕೇಳಿ. ಮುಂದಿನ ನಾಲ್ಕೈದು ವರ್ಷ, ನಾನು ಫುಲ್ ಟೈಮ್ ಸ್ಟೂಡೆಂಟ್ ಆಗಿರ್ತೀನಿ. ಮನೇ ಜವಾಬ್ದಾರೀಲಿ ಹೆಚ್ಚು ಪಾಲು ನಿಂ ತಲೇಮೇಲೆ ಬೀಳತ್ತೆ. ಲಾಂಡ್ರಿ ನೀವೇ ಮಾಡ್ಕೋಬೇಕು, ಮನೇ ಕ್ಲೀನಿಂಗು, ಅಡುಗೇ, ಅನೇಕ ಸರ್ತಿ ನಿಮ್ಮ ಮೇಲೆ ಬೀಳತ್ತೆ ... ಒಂದು ರೀತೀಲಿ, ಸಿಂಪಲ್ಲಾಗಿ ಹೇಳಬೇಕೂಂದ್ರೆ, ನೀವು ಪಿಎಚ್ಡಿ ಮಾಡ್ತಿದ್ದಾಗ ನಾನು ಏನೇನು ಮಾಡ್ತಿದ್ನೋ ಅದನ್ನೆಲ್ಲಾ ನೀವ್ ಮಾಡ್ಬೇಕೂಂತ ಹೇಳಬಹುದು. ನೀವು ಲ್ಯಾಬಿಂದ ರಾತ್ರಿ ಹತ್ತುಗಂಟೇಗೆ ಎಷ್ಟೋ ಸಲಿ ಬರ್ತಾ ಇದ್ದಹಾಗೆ, ನಾನೂ ಲೈಬ್ರರಿಯಿಂದ ಲೇಟಾಗಿ ಹಿಂದಿರುಗ್ತೀನಿ. ವೀಕೆಂಡ್ಸ್ ನಾವು ಯಾವ ಪಾರ್ಟೀಗೂ ಅಥವಾ ಫಂಕ್ಷನ್ನಿಗೂ ಹೋಗೋಕ್ಕಾಗಲ್ಲ. ಎಟ್ಸೆಟ್ರ. ಎಟ್ಸೆಟ್ರ.'

'.............'

'ಯಾಕ್ರೀ ಸ್ವಾಮೀ, ಮೌನ? ನೀವೇ ಹೇಳ್ತಿದ್ರಲ್ಲ, ಈ ದೇಶದಲ್ಲಿ ಗ್ರ್ಯಾಜುಯೇಟ್ ಸ್ಟೂಡೆಂಟ್ಸ್ ಮದುವೆ ಆಗಿರ್ತಾರೆ, ಮೆಡಿಕಲ್ ಸ್ಟೂಡೆಂಟ್ಸು ನರ್ಸಗಳನ್ನ ಮದುವೆ ಆಗಿರ್ತಾರೆ, ಯಾಕೆ ಅಂದ್ರೆ ಅವರು ಕೆಲಸ ಮಾಡ್ಕೊಂಡು ಗಂಡಂದ್ರನ್ನ ಸಪೋರ್ಟ್ ಮಾಡ್ತಾರೆ, ಆಮೇಲೆ ರೋಲ್ ರಿವರ್ಸ್ ಆಗತ್ತೆ ಅಂತ. ನಾನು ನಿಮ್ಮ ಪ್ರಯಾರಿಟೀಸನ್ನೂ ಮಕ್ಕಳ ಜವಾಬ್ದಾರೀನೂ ಮುಗಿಸಿ ಈಗ ನನ್ನ ಮೇಲೆ ಕೊಂಚ ಗಮನ ಕೊಡಬೇಕೂಂತ ಹೊರಟಿದೀನಿ. ಸಪೋರ್ಟ್ ಮಾಡ್ತೀರಿ ತಾನೆ?'

'ರಾಣಿ, ದಿಢೀರ್ ಅಂತ ಇಷ್ಟು ದೊಡ್ಡ ವಿಷಯನ ಅನೌನ್ಸ್ ಮಾಡಿ, ತಕ್ಷಣ ಪ್ರತಿಕ್ರಿಯೆ ಕೇಳ್ಬಿಟ್ರೆ ಹೇಗೆ? ಈ ವಿಷಯ ಕುರಿತು ಇಬ್ಬರೂ ಚೆನ್ನಾಗಿ ಯೋಚಿಸ್ಬೇಕಾಗಿದೆ, ಹಾಗೆ ನೀನೊಬ್ಳೆ ತೀರ್ಮಾನ ಮಾಡೋ ಅಂಥ ವಿಚಾರಾನೇ ಇದು?'

'ರೀ ಸ್ವಾಮಿ, ನೀವು ಬೆಂಗ್ಳೂರ್ ಬಿಟ್ಟು ಮುಂಬೈಗೆ ಹೋದಾಗ, ಅಮೇರಿಕಾಗೆ ಓದಕ್ಕೆ ಹೋಗಬೇಕೂ ಅಂತ ತೀರ್ಮಾನಿಸಿದಾಗ, ಪಿಎಚ್ಡಿ ಮಾಡ್ಬೇಕೂ ಅಂತ ವಿದ್ಯಾರ್ಥಿ ಜೀವನ ಮುಂದುವರೆಸಿದಾಗ, ನಮ್ಮಿಬ್ರ ನಡುವೆ ಯಾವ ದೀರ್ಘವಾದ ಚರ್ಚೆಗಳೂ ನಡೆದಂತೆ ನೆನಪಿಲ್ಲ. ನೀವು ತೀರ್ಮಾನಿಸಿದ್ರಿ, ನಾನು ಅನುಸರಿಸಿದೆ. ನೋಡಿ, ನನ್ನ ಸ್ವಂತ ಓದು, ಅನುಭವ ಎಲ್ಲದರ ಸಹಾಯದಿಂದ ನಾನು ಸಾಕಷ್ಟು ಜ್ಞಾನ ಸಂಪಾದಿಸಿದ್ದೀನಿ. ವೈಚಾರಿಕತೆಯಲ್ಲಿ ಮುಂದುವರೆದಿದ್ದೀನಿ. ನನ್ನ ಮಕ್ಕಳು ತಮ್ಮ ತಮ್ಮ ಭವಿಷ್ಯಾನ ತಾವೇ ರೂಪಿಸಿಕೊಳ್ಳುತ್ತಿದ್ದಾರೆ. ನಾನ್ಯಾಕೆ ನನ್ನ ಬಗ್ಗೆ ಯೋಚಿಸ್ಬಾರ್ದು?'

'ಅಲ್ಲಾ ರಾಣಿ, ನಿನ್ನ ಭವಿಷ್ಯ ನನ್ನ ಭವಿಷ್ಯ ಒಂದೇ ನಾಣ್ಯದ ಎರಡು ಮುಖಗಳಲ್ವಾ? ನಿನಗೇನು ಕಮ್ಮಿ ಆಗಿದೆ ಅಂತ ಪುನಃ ಕಾಲೇಜಿಗೆ ಹೋಗಬೇಕು? ಇನ್ನೊಂದು ಡಿಗ್ರೀ ಪಡೆದು ಏನು ಕಡೀಬೇಕಾಗಿದೆ? ಎಷ್ಟು ಬೇಕಾದ್ರೂ ಓದು, ಮನೇಲೆ ಇದ್ದು ಜ್ಞಾನಾರ್ಜನೆ ಮಾಡಕ್ಕೆ ಯಾರಡ್ಡಿ ಇದೆ ಹೇಳು.'

'ಅಂದ್ರೆ, ಏನು? – ನಿಮ್ಮ ದಿನಚರಿಯಲ್ಲಿ ಒಂದು ಚೂರೂ ವ್ಯತ್ಯಾಸ ಆಗಕೂಡದು, ಹೊತ್ತು ಹೊತ್ತಿಗೆ ಹೊಟ್ಟೆಗೆ ಯಾರೋ ಕೂಳು ಬೇಯಿಸಿ ಸಿದ್ಧಮಾಡಿರಬೇಕು. ನಿಮ್ಮ ಬಟ್ಟೆ ಮಡಿ ಮಾಡಿಟ್ಟಿರಬೇಕು. ನೀವು ಕೆಲಸದಿಂದ ಹಿಂದಿರುಗಿದ ವೇಳೆ, ಮೈತುಂಬ

ಸೀರೆ ಉಟ್ಟು, ಸ್ನೋ-ಪೌಡರ್ ಹಚ್ಚಿಕೊಂಡು, ನಗ್ನಗ್ತಾ ನಿಮಗೆ ಬಾಗಿಲು ತೆರೆದು ಸ್ವಾಗತಿಸ್ಬೇಕು ತಾನೇ? ಅಲ್ರೀ, ನಾನು ನಿಮಗೋಸ್ಕರ ದುಡಿದ ಹಾಗೆ ನನಗೋಸ್ಕರ ನೀವು ದುಡಿಯೋದು ಯಾವಾಗ? ಮುಂದಿನ ಜನುಮದಲ್ಲಾ?'

'ನೀನು ಈ ವಿಷಯದಲ್ಲಿ ಸಾಕಷ್ಟು ಮುಂದಾಲೋಚನೆ ಮಾಡಿದಂತಿದೆ. ಪಿಎಚ್ಡಿ ಥೀಸೀಸ್ ಟಾಪಿಕ್ಕನ್ನು ಆಗ್ಲೇ ಯೋಚಿಸ್ಬಿಟ್ಟಿದ್ದೀಯ ಅನ್ಸತ್ತೆ.'

'ಅಫ್ ಕೋರ್ಸ್! ನೀವಂತೂ ನಿಮ್ಮ ಸಬ್ಜೆಕ್ಟ್ ಬಿಟ್ಟು ಒಂದು ಜೆನರಲ್ ಬುಕ್ಕನ್ನೂ ಓದಲ್ಲ. ನಾನು ಓದೋ ಪುಸ್ತಕಗಳ ಟೈಟಲ್‌ಗಳನ್ನ ಓದಿದ್ರೂ ಸಾಕಾಗ್ತಿತ್ತು, ನನ್ನ ಇಂಟರೆಸ್ಟ್ ಏನು ಅಂತ ನಿಮಗೆ ಗೊತ್ತಾಗ್ತಿತ್ತು. ಕೇಳಿ ಸ್ವಾಮಿಗಳೇ. ನನ್ನ ರಿಸರ್ಚಿನ ವಸ್ತು ಕೂಡ ತೀರ್ಮಾನಿಸಿದ್ದಾಗಿದೆ. ಇನ್ನೇನು ಶರವೇಗದಲ್ಲಿ ನನ್ನ ಉದ್ದೇಶಗಳನ್ನು ಪೂರೈಸಿಕೊಳ್ಳೋ-ದೊಂದೇ ಬಾಕಿ.'

'ಅಬ್ಬ! ಕಾನ್ಫಿಡೆನ್ಸ್ ಅಂದ್ರೆ ಹೀಗಿರಬೇಕು, ರಾಣಿ. ಏನ್ ವಿಷಯ ಕುರಿತು ರಿಸರ್ಚ್ ಮಾಡ್ತೀ? ಅಹಲ್ಯೆನೋ? ದ್ರೌಪದೀನೋ? ತಾರೇನೋ? ಸೀತೇನೋ? ಅಥವಾ ಮಂಡೋದರೀನೋ?'

'ಛೇ ಛೇ. ಅಷ್ಟು ಹಿಂದಿನ ಕಾಲಕ್ಕೆ ಯಾಕ್ರೀ ಹೋಗಬೇಕು? ನನ್ನ ಮಹಾ ಪ್ರಬಂಧದ ವಸ್ತು, "ಟ್ರೀಟ್ಮೆಂಟ್ ಆಫ್ ವಿಮೆನ್ ಬೈ ಇಂಡಿಯನ್ ಮೆನ್ ಇನ್ ಇಂಡಿಯ ಎಂಡ್ ಇನ್ ಅಮೆರಿಕ –ಎ ಕಂಪ್ಯಾರೆಟಿವ್ ಸ್ಟಡಿ." ಕೋರ್ಸ್ ವರ್ಕ್ ಮುಗಿಯುವ ಮೊದಲೇ ನನ್ನ ಪ್ರಬಂಧ ಸಿದ್ಧವಾಗಿರತ್ತೆ. ಸುಮಾರು ಮುನ್ನೂರು ಪುಟಕ್ಕಾಗೋ ಅಷ್ಟು ವಸ್ತು ನನ್ನ ತಲೇ ತುಂಬ ತುಂಬಿಕೊಂಡಿದೆ. ಪ್ರೊಫ್ಯೂಸ್ ಆಗಿ ನೋಟ್ಸ್ ಮಾಡ್ಕೊಂಡಿದೀನಿ. ವೆಂಡೀ ಡಾನಿಗರ್ ಹೆಸರು ಕೇಳಿರಬಹುದು ನೀವು. ನಾನು ಆಕೆ ಜೊತೆ ಪತ್ರವ್ಯವಹಾರ ಶುರು ಮಾಡ್ತಾ ಇದೀನಿ. ನನ್ನ ಐಡಿಯಾಸ್ನ ಆಕೆ ಜೊತೆ ಚರ್ಚಿಸಿ ಥೀಸಿಸ್‌ಗೆ ಗೈಡೆನ್ಸ್ ಕೇಳೋಣ ಅಂತ ಅಂದ್ಕೊಂಡಿದೀನಿ. ನಮ್ಮೂರಿನ ಯೂನಿವರ್ಸಿಟೀಲಿ ಭಾರತದ ಮೂಲದವರು – ಕನ್ನಡದವರು, ಮಂಗಳೂರಿನವರು – ಒಬ್ಬಾಕೆ, ಲಿಬರಲ್ ಆರ್ಟ್ಸ್ ಫ್ಯಾಕಲ್ಟಿ ಸೇರ್ಕೊಂಡಿದಾರೆ – ಸಿಂಥಿಯಾ ಕೊಲ್ಯಾಸೋ ಪಿಂಟೋ ಅಂತ.' ಕೊಲ್ಯಾಸೋ ತಂದೆ ಹೆಸರು, ಪಿಂಟೋ ಗಂಡನ ಹೆಸ್ರು ಅಂತ ಕಾಣ್ಸತ್ತೆ. ಆಕೇನ ಕಾಂಟ್ಯಾಕ್ಟ್ ಮಾಡಿದೀನಿ......ಬಹಳ ಪ್ರೋತ್ಸಾಹಕರವಾಗಿ ಮಾತಾಡಿದ್ದಾರೆ!'

ಐದು ವರ್ಷಗಳ ತರುವಾಯ...

ಇಪ್ಪತ್ತೈದು ವರ್ಷಗಳ ಸೇವೆಯ ನಂತರ ನಾನು ಅರ್ಲಿ ರಿಟೈರ್ಮೆಂಟ್ ತೆಗೆದುಕೊಂಡು ಮನೆಯಲ್ಲಿ ಕುಳಿತಿದ್ದೇನೆ. ಮಜ್ಜಿಗೆಹುಳಿ, ಗೊಜ್ಜು, ತೌವೆಯಿಂದ ಹಿಡಿದು ಸಾಗು, ಎಣ್ಣೆಗಾಯಿ, ಬದನೇಕಾಯಿ ಭರ್ತ, ಮುಂತಾದ ಥರಾವರಿ ಅಡುಗೆಗಳಲ್ಲಿ ನಿಪುಣತೆಯನ್ನು ಪಡೆದಿದ್ದೇನೆ. ರಾಣಿ ತನ್ನ ಪ್ರಬಂಧವನ್ನು ಮಂಡಿಸಿ ಪದವಿಯನ್ನು ಪಡೆದುಕೊಂಡಿದ್ದಲ್ಲದೇ ತನ್ನದೇ ಡಿಪಾರ್ಟ್‌ಮೆಂಟಿನಲ್ಲಿ ಪೋಸ್ಟ್‌ಡಾಕ್ ಕೆಲಸವನ್ನೂ ಗಿಟ್ಟಿಸಿಕೊಂಡಿದ್ದಾಳೆ. ಅವಳ ಪ್ರಬಂಧವನ್ನು ಪೆಂಗ್ವಿನ್ ಸಂಸ್ಥೆಯವರು ಪುಸ್ತಕರೂಪದಲ್ಲಿ

ಪ್ರಕಟಿಸಿದ್ದಾರೆ. ಪ್ರಬಂಧದ ನಿರ್ದೇಶಕಿ, ಪಿಂಟೋ ಅವಳ ಸಹ-ಲೇಖಕಿ. ಪುಸ್ತಕ ಬಿಸಿ ದೋಸೆಗಳಂತೆ ಖರ್ಚಾಗುತ್ತಿದೆ ಎಂದು ಅವಳೇ ಹೇಳಿದಳು. ನಾನಿನ್ನೂ ಓದಿಲ್ಲ. ಪ್ರತಿ ವಾರವೂ ಒಂದಲ್ಲ ಒಂದು ಟೀವಿ ಕಾರ್ಯಕ್ರಮದಲ್ಲಿ ಪಿಂಟೋ ಜೊತೆ ರಾಣಿಯೂ ಹಾಜರಾಗುತ್ತಾಳೆ. ರಾಣಿಯೊಂದಿಗಿನ ಸಂದರ್ಶನಗಳು ದಿನಪತ್ರಿಕೆ ಮತ್ತಿತರ ನಿಯತಕಾಲಿಕಗಳಲ್ಲಿ ಆಗಾಗ್ಗೆ ಅಚ್ಚಾಗುತ್ತವೆ. ರಾಣಿಯ ಸುಂದರವಾದ ನೀಳ ಕೇಶರಾಶಿ ತುಂಡಾಗಿ ಎರಡು ಮೂರು ವರ್ಷಗಳೇ ಕಳೆದಿವೆ. ಅವಳು ಸೀರೆ ಉಡುವುದನ್ನು ಬಿಟ್ಟಿದ್ದಾಳೆಂದೇ ಹೇಳಬಹುದು. ಅಕೆಡೆಮಿಕ್ ವೃತ್ತಿಗೆ ಅನುಗುಣವಾಗಿ ಅವಳ ಮಾತುಗಳು, ಚರ್ಯೆಗಳು ಮಾರ್ಪಾಟಾಗಿವೆ. ಕುಸುಮಬಾಲೆಯಂತಿದ್ದ ಅವಳ ಯೌವನದ ವೇಷ ಮತ್ತು ಕೇಶವನ್ನು ನಾನು ತುಂಬಾ ಮಿಸ್ ಮಾಡಿಕೊಳ್ಳುತ್ತಿದ್ದೇನೆ. ನನ್ನೊಡನೆ ಮಾತಾಡುವಾಗಲೂ ಇತ್ತೀಚೆಗೆ, ಅವಳು ಕೊಂಚ ನಾಟಕೀಯವಾಗೇ ಮಾತಾಡುತ್ತಿದ್ದಾಳೆ. ಕನ್ನಡದಲ್ಲೇ ಪ್ರಾರಂಭಿಸಿದರೂ ಸಂಭಾಷಣೆ ಇಂಗ್ಲೀಷಿಗೇ ಥಟ್ಟೆಂದು ತಿರುಗುತ್ತದೆ. 'ನಾಟ್ ಬ್ಯಾಡ್, ಯುವರ್ ಸಾರು ಹ್ಯಾಸ್ ಇಂಪ್ರೂವ್ಡ್ ಇನ್ ಟೇಸ್ಟ್ ಸಿಗ್ನಿಫ಼ಿಕೆಂಟ್ಲಿ' ಎಂದು ಹೊಗಳಿದಾಗ ನನಗೆ ಸಂತಸಕ್ಕಿಂತ ಕಿರಿಕಿರಿಯೇ ಹೆಚ್ಚಾಗುತ್ತದೆ. ಅವಳು ಮಾಡುತ್ತಿದ್ದ ಅಮೋಘವಾದ ಅಡುಗೆಗಳನ್ನು ನಾನು ಒಂದು ಹೊಗಳಿಕೆಯ ಮಾತನ್ನೂ ಆಡದೇ ತಿಂದು ತೇಗಿ ಏಳುತ್ತಿದ್ದ ದಿನಗಳು ನೆನಪಾಗಿ ಹೊಟ್ಟೆ ಚುರ್ರೆನ್ನುತ್ತದೆ. ಕೊನೇ ಪಕ್ಷ, ಅವಳು ಒಂದಿಷ್ಟು ಕಾಂಪ್ಲಿಮೆಂಟ್ಸ್ ಆದರೂ ಕೊಡುತ್ತಾಳಲ್ಲ ಎಂಬ ಸಮಾಧಾನವೂ ಆಗುತ್ತದೆ. ಅಪರೂಪಕ್ಕೆ ಮಕ್ಕಳು ಮನೆಗೆ ಭೇಟಿಕೊಟ್ಟಾಗ, ನನ್ನ ಅಡುಗೆಯನ್ನು ತಿಂದು, 'ಯುವರ್ ಸಾರು ಕೆನ್ ನೆವರ್ ಮ್ಯಾಚ್ ಮಾಮ್ಸ್' ಎಂದಾಗ ಪಿಚ್ಚೆನಿಸುತ್ತದೆ. 'ಡ್ಯಾಡ್, ಯು ಆರ್ ಸಚ್ ಎ ವಂಡರ್ಫ಼ುಲ್ ಹಸ್ಬೆಂಡ್. ರಿಯಲಿ, ಡ್ಯಾಡ್. ದಿ ವೇ ಇನ್ ವಿಚ್ ಯು ಆರ್ ಸಪೋರ್ಟಿಂಗ್ ಮಾಮ್ ಇನ್ ಹರ್ ಡಾಕ್ಟೋರಲ್ ಸ್ಟಡೀಸ್ ಈಸ್ ಎಕ್ಸೆಂಪ್ಲರಿ' ಎಂದು ದೊಡ್ಡವಳು ಶಹಭಾಷ್‌ಗಿರಿ ಕೊಟ್ಟರೆ, ಕಿರಿಯಳು, 'ಅದೇನು ಅಂಥಾ ದೊಡ್ಡ ವಿಷಯವಲ್ಲ, ಹಿ ಇಸ್ ಓನ್ಲಿ ರಿಟರ್ನಿಂಗ್ ದಿ ಫ಼್ಲೇವರ್' ಅನ್ನುತ್ತಾಳೆ. ನಾನು 'ಸುಖ-ದುಃಖೇ ಸಮೇಕೃತ್ವಾ' ಪ್ರಕಾರ, ಸುಮ್ಮನೆ ತುಸು ನಕ್ಕು ಗಂಭೀರನಾಗುತ್ತೇನೆ.

ನಾನು ಕೆರಿಯರ್‌ನಲ್ಲಿದ್ದಾಗ, ಕಾನ್ಫರೆನ್ಸು, ಮೀಟಿಂಗು ಎಂದು ದೇಶ ಸುತ್ತುತ್ತಿದ್ದೆ, ವಿದೇಶಕ್ಕೂ ಹೋಗುತ್ತಿದ್ದೆ. ರಾಣಿ ಕಂ-ಕಿಂ ಎನ್ನದೇ ನನ್ನನ್ನು ಕಳಿಸಿಕೊಡುತ್ತಿದ್ದಳು. ಹಿಂದಿರುಗುವುದನ್ನೇ ಮೂವರೂ ಎದುರು ನೋಡುತ್ತಿದ್ದರು. ಹಿಂದಿರುಗಿದಾಗ ಮನೆಯಲ್ಲಿ ಇದ್ದಕ್ಕಿದ್ದಂತೆ ಖುಶಿಯ ಕಲರವ ಉಂಟಾಗುತ್ತಿತ್ತು. ಈಗ, ಅವಳು ಕಾನ್ಫರೆನ್ಸ್ ಮೀಟಿಂಗ್ ಎನ್ನುತ್ತಾ ಬೇರೆ ಬೇರೆ ಊರುಗಳನ್ನು ಸುತ್ತುತ್ತಾಳೆ. ಅವಳು ಹಿಂದಿರುಗಿದಾಗ ನಾನೊಬ್ಬನೇ ಇರುವುದರಿಂದ ಯಾವ ಸಂಭ್ರಮದ ವಾತಾವರಣವನ್ನೂ ಉಂಟುಮಾಡಲಾಗದಿದ್ದರೂ, ಅವಳ ಹಿಂದಿರುಗುವಿಕೆಯಿಂದ ಒಂದಿಷ್ಟು ಸಮಾಧಾನಪಟ್ಟರೂ, ಉತ್ತೇಜಿತನಾಗುತ್ತಿಲ್ಲ. ಅವಳಿಲ್ಲದಾಗ, ಊಟಕ್ಕೆ ಹೊರಗೆ ಹೋಗುವುದೇ ಹೆಚ್ಚು. ಆಫೀಸಿನ ಕೆಲವು ಹಳೇ ದೋಸ್ತಿಗಳನ್ನು ಕರೆದು ಅವರೊಡನೆ ಗಾಲ್ಫ್ ಆಟಕ್ಕೆ ವ್ಯವಸ್ಥೆ ಮಾಡಿಕೊಳ್ಳುತ್ತೇನೆ. ಕೆಲವೊಮ್ಮೆ

ಯಾವುದಾದರೂ ಸಿನಿಮಾಕ್ಕೆ ಹೋಗುವುದೂ ಉಂಟು. ಜನರಲ್ ಬುಕ್ಸನ್ನು ಓದುವುದು ಮಾತ್ರ ನನಗೆ ಆಗುತ್ತಿಲ್ಲ. ಪುಸ್ತಕದಂಗಡಿಗೆ ಅಪರೂಪಕ್ಕೆ ಭೇಟಿ ಕೊಟ್ಟರೆ, ಇನ್ನೂರು ಪುಟಗಳನ್ನು ಮೀರಿದ ಪುಸ್ತಕಗಳನ್ನು ಕಂಡರೆ ಬೆದರಿ, ದೂರದಿಂದ ಟೈಟಲ್ ಓದಿ ಕೈಮುಗಿಯುತ್ತೇನೆ.

ಅಪರೂಪಕ್ಕೆ ಮಕ್ಕಳು ಮನೆಗೆ ಬಂದಾಗ, 'ಏನು ಮಕ್ಕಳೇ, ಯಾರಾದರೂ ಬಾಯ್‌ಫ್ರೆಂಡ್ಸ್ ಗೀಯ್‌ಫ್ರೆಂಡ್ಸ್ ಮಾಡಿಕೊಂಡಿದ್ದೀರಾ? ಮದುವೆ-ಗಿದುವೆ...?' ಎಂದು ಕೇಳಿದರೆ, 'ಬಾಯ್‌ಫ್ರೆಂಡ್ಸಿಗೇನು ಡ್ಯಾಡಿ, ಬರುತ್ತಾರೆ, ಹೋಗುತ್ತಾರೆ. ನಿಮ್ಮ ಕಾಲದಹಾಗೆ ನಾವು ರ್ಯಾಂಡಮ್ ಹುಡುಗರನ್ನು ದಿಢೀರ್ ಅಂತ ಮದುವೆ ಆಗಲು ಸಾಧ್ಯವಾ? ಒಂದೆರಡು ವರ್ಷ ಜೊತೆಯಲ್ಲಿದ್ದು ಒಬ್ಬರಿಗೊಬ್ಬರು ಹೊಂದಾಣಿಕೆಯಿಂದ ಬಾಳಲು ಸಾಧ್ಯವೆಂದು ಖಾತ್ರಿಯಾದ ಹೊರತು ಮದುವೆ ವಿಷಯವೇ ಇಲ್ಲ. ಗ್ರ್ಯಾಜುಯೆಟ್ ಸ್ಕೂಲ್ ಮುಗಿಯಲಿ, ನೋಡೋಣ' ಎನ್ನುತ್ತಾರೆ. 'ಮಮ್ಮಿ ಬರೆದ ಪುಸ್ತಕವನ್ನು ಓದಿದ್ದೀರಾ?' ಎಂದು ಅವರನ್ನು ಕೇಳಿದಾಗ, 'ಪ್ರೊಫೆಸರ್ ಪಿಂಟೋ ಕೊಡುವ ಒಂದು ಕೋರ್ಸ್ ತೆಗೆದುಕೊಂಡವರು ಅಮ್ಮನ ಪುಸ್ತಕ ಓದುವ ಅಗತ್ಯವೇ ಇಲ್ಲ. ಪಿಂಟೋ ಮ್ಯಾಮ್‌ಗೆ ಗಂಡಸರನ್ನು ಕಂಡರೆ ಆಗುವುದಿಲ್ಲ ಅನಿಸುತ್ತೆ. ಆಕೆ ಪ್ರಕಾರ, ಎಲ್ಲಾ ಗಂಡಸರೂ ಖದೀಮರೇ, ಎಲ್ಲರೂ ಹೆಣ್ಣನ್ನು ತುಳಿಯುವುದರಲ್ಲೇ ಮಗ್ನರಾಗಿರುತ್ತಾರೆ. ಹೆಣ್ಣನ್ನು ಭೋಗವಸ್ತುವೆಂದು ಕಾಣುವ ಗಂಡಸರೇ ಹೆಚ್ಚು' ಮುಂತಾಗಿ ಅಭಿವ್ಯಕ್ತಗೊಳಿಸುವ ಪಿಂಟೋ ಅಭಿಪ್ರಾಯಗಳನ್ನು ಹಿರಿಯಳು ಹೆಚ್ಚು-ಕಮ್ಮಿ ಒಪ್ಪುತ್ತಾಳೆ ಅನ್ನಿಸಿತು. ಆದರೆ, ಕಿರಿಯಳು ಮಾತ್ರ ಅಕ್ಕನ ವಾದಸರಣಿಯನ್ನು ಒಪ್ಪಲಾರಳು. 'ಹಾಗೇನಿಲ್ಲ, ಡ್ಯಾಡ್, ಪಿಂಟೋ ಸ್ತ್ರೀವಾದಿ ಇರಬಹುದು, ಆದರೆ ಅವರು ಹೇಳುವ ಮಾತುಗಳನ್ನು ಯೋಚಿಸಿಯೇ ಹೇಳುತ್ತಾರೆ. ತಮ್ಮ ವಾದಗಳಿಗೆ ತಕ್ಕ ತರ್ಕವನ್ನೂ ಕೊಡುತ್ತಾರೆ, ಅಂಕಿ-ಅಂಶಗಳ ಸಹಿತ ವಾದಿಸುತ್ತಾರೆ. ಭಾರತದ ಪಶ್ಚಿಮ ಕರಾವಳಿಯ ಸ್ತ್ರೀಯರ ಕುರಿತು ಸಾಕಷ್ಟು ಸಂಶೋಧನೆ ನಡೆಸಿದ್ದಾರೆ. ಮಾಮ್ ಬರೆದ ಪುಸ್ತಕದಲ್ಲಿ ಅವುಗಳ ಉಲ್ಲೇಖ ಸಾಕಷ್ಟಿದೆ. ಆದರೆ, ಮಾಮ್ ಪುಸ್ತಕದಲ್ಲಿರುವಂತೆ, ಭಾರತದಲ್ಲಿರುವ ಭಾರತೀಯ ಗಂಡಸರು ಹೆಂಗಸರನ್ನು ತುಂಬಾ ತುಚ್ಛವಾಗಿ ಕಾಣುತ್ತಾರೆ ಎಂಬ ಮಾತನ್ನಾಗಲೀ ಅಥವಾ, ಅಮೆರಿಕದಲ್ಲಿರುವ ಭಾರತೀಯ ಗಂಡಸರು ಅಮೆರಿಕದಲ್ಲಿರುವ ಭಾರತೀಯ ಹೆಂಗಸರನ್ನು ಅವರಿಗಿಂತ ಇನ್ನೂ ಕೆಟ್ಟದಾಗಿ ನಡೆಸಿಕೊಳ್ಳುವರೆಂಬ ಮಾಮ್ ಅಥವಾ ಪಿಂಟೋ ಅವರ ವಾದಗಳನ್ನು ಸಾರಾಸಗಟಾಗಿ ಒಪ್ಪುವುದು ಕಷ್ಟ. ಪಿಂಟೋ ಮ್ಯಾಮ್ ಸಾಧ್ಯವಾದಲ್ಲೆಲ್ಲ ಕ್ರಿಶ್ಚಿಯನ್ ಮತ್ತು ಇಸ್ಲಾಂ ವಿಷಯಗಳನ್ನು ತುರುಕಿ, ಸ್ತ್ರೀವಾದ ಮತ್ತು ಧಾರ್ಮಿಕ ವಿಚಾರಗಳನ್ನು ಮಿಕ್ಸ್ ಅಪ್ ಮಾಡಿ ಗೊಂದಲ ಉಂಟುಮಾಡುತ್ತಾರೆ ಎಂದು ನನಗನಿಸಿದೆ. ಇದರ ನಡುವೆ, ಭಾರತೀಯ ಇತಿಹಾಸ ಮತ್ತು ಹಿಂದೂ ಧಾರ್ಮಿಕ ವಿಚಾರಗಳನ್ನು ಅತಿ ಸರಳಗೊಳಿಸಿ- ಕೊಂಚ ವಿಕೃತಗೊಳಿಸಿ ಸಹ – ವೆಂಡಿ ಡಾನಿಗರ್ ಮುಂತಾದವರು ತಮ್ಮದೇ ಬೇಳೆಯನ್ನು ಬೇಯಿಸಿಕೊಳ್ಳುತ್ತಿರುವ ವಿಷಯಗಳ ಅರಿವಿದ್ದೂ ಪಿಂಟೋ ಮೊದಲಾದವರು ಅಂಥವರ

ವಾದಗಳಿಗೆ ಮಾರುಹೋಗಿಯೋ ಅಥವಾ ಅಮೆರಿಕದಲ್ಲಿ ತಮ್ಮ ಕೆರಿಯರ್ರಿಗೆ ಅನುಕೂಲವಾಗಲೆಂದೋ ಹಿಪೋಕ್ರೆಟ್ಸ್ ಆಗಿರುವುದನ್ನು ಕಂಡರೆ ಬೇಸರವಾಗುತ್ತೆ. ಮತ್ತೊಂದು ತಮಾಷೆ ವಿಷಯವೆಂದರೆ ಇವರೆಲ್ಲ ಫ್ರಾಯ್ಡನ ಒಂದೋ ಎರಡೋ ವಿಚಾರಧಾರೆಗಳನ್ನು ಅರ್ಥಂಬರ್ಥ ಗ್ರಹಿಸಿ, ಪ್ರತಿಯೊಂದು ಮಾನಸಿಕ ಸಮಸ್ಯೆಯನ್ನೂ ಲೈಂಗಿಕತೆಗೆ ಜೋಡಿಸಿ ಕಂಡುಕೊಳ್ಳುವ ಸುಲಭ ಪರಿಹಾರಗಳು! ಭಾರತೀಯ ಮಹಿಳೆಯರು ಇತರರ ವಾದಗಳಿಗೆ ಗಂಟುಬೀಳುವ ಬದಲು ತಮ್ಮ ಅನುಭವಕ್ಕೆ ಹೆಚ್ಚಿನ ಗಮನ ಕೊಟ್ಟರೆ ಒಳ್ಳೆಯದೇನೋ ಎನಿಸುತ್ತೆ. ಅಮೆರಿಕದ ಗಂಡಸರು ಅಮೆರಿಕದ ಮಹಿಳೆಯರನ್ನು ಹೇಗೆ ನಡೆಸಿಕೊಳ್ಳುತ್ತಾರೆ ಎಂಬುದನ್ನೂ ಅಧ್ಯಯನ ಮಾಡದಿದ್ದರೆ ಮಾಮ್‌ನಂಥ ಸಂಶೋಧಕರಿಗೆ ಸತ್ಯದ ಅರಿವಾಗುವುದು ಕಷ್ಟ. 'ಸಾರಿ ಫಾರ್ ದಿ ಲಾಂಗ್ ರಿಯಾಕ್ಷನ್ ಟು ಮಾಮ್'ಸ್ ವರ್ಕ್. ಇನ್ ಎನಿ ಕೇಸ್, ಎಟ್ ಹರ್ ಏಜ್, ವಾಟ್ ಶಿ ಹ್ಯಾಸ್ ಡನ್ ಈಸ್ ರಿಮಾರ್ಕಬಲ್. ರಿಗಾರ್ಡ್ಲೆಸ್. ಡ್ಯಾಡ್, ನೀವು ಅಮ್ಮನ ಪುಸ್ತಕವನ್ನು ಓದಬೇಕು, ಖಂಡಿತ.' ನಾನು ಯಾರನ್ನು ಪುಟ್ಟ ಹುಡುಗಿ ಅಂದುಕೊಂಡಿದ್ದೆನೋ ಅವಳ ನುರಿತ ವಾದಸರಣಿ ಮತ್ತು ಅದನ್ನು ಮಂಡಿಸುವ ಅವಳ ಆತ್ಮವಿಶ್ವಾಸ – ಇವುಗಳಿಂದ ನನಗೆ ಹೆಮ್ಮೆಯಾಯಿತು. ನಮ್ಮ ತಂದೆ–ತಾಯಿಗಳ ಮುಂದೆ ಈ ರೀತಿ ಮಾತಾಡಿದ ನೆನಪೇ ಇಲ್ಲ ಎಂಬ ಸಂಗತಿಯೂ ನೆನಪಾಯಿತು.

ರಾಣಿ ಥೀಸೀಸ್ ಬರೆಯುವ ಕೊನೆಯ ದಿನಗಳಿಂದ ಹಿಡಿದು, ನಮ್ಮ ಲೈಂಗಿಕ ಜೀವನಕ್ಕೆ ಪ್ರಬಲವಾದ ಪೆಟ್ಟು ಬಿದ್ದಿದೆ. ಹಾಸಿಗೆಯಲ್ಲಿ ನನ್ನೊಡನೆ ಅವಳು ಯಾವ ಉತ್ಸಾಹವೂ ಇಲ್ಲದೇ ಒಮ್ಮೊಮ್ಮೆ ನನಗೋಸ್ಕರ ಮಾತ್ರ ಭಾಗವಹಿಸುತ್ತಾಳೆ. ಅನೇಕ ವೇಳೆ, 'ಸುಸ್ತಾಗಿದೆ, ಪ್ಲೀಸ್, ಇವತ್ತು ಬೇಡ' ಎಂದು ನನ್ನ ಉತ್ಸಾಹಕ್ಕೆ ತಣ್ಣೀರೆರಚುತ್ತಾಳೆ. ನಾನೂ ಮುಂಚಿನಂತೆ ಪಾಶವೀ ಪ್ರವೃತ್ತಿಯ ಪ್ರದರ್ಶನ ಮಾಡಲಾರದೇ ಆಸಕ್ತಿಯನ್ನೇ ಕಳೆದುಕೊಳ್ಳುತ್ತಿದ್ದೇನೋ ಎಂಬ ಅನುಮಾನ ಬರುತ್ತದೆ. ಆದರೆ, ಮೊನ್ನೆ ಇದ್ದಕ್ಕಿದ್ದಂತೆ, ಅವಳು ತೋರಿದ ಉತ್ಸಾಹ ನನಗೆ ಭಯವನ್ನುಂಟುಮಾಡಿತ್ತು. ಹಿಂದೆಲ್ಲಾ ಅವಳು ಸಮರ್ಪಣೆಯಲ್ಲೇ ಹೆಚ್ಚಿನ ಸುಖ ಕಾಣುತ್ತಿದ್ದಳೆಂಬುದು ನನ್ನ ವರ್ಷಗಟ್ಟಲೆಯ ಅನುಭವ. ಆದರೆ, ಇದ್ದಕ್ಕಿದ್ದಂತೆ ಅವಳು ನನ್ನನ್ನು ಅಧೀನಪಡಿಸಿಕೊಳ್ಳಲು ಯತ್ನಿಸಿದಾಗ, ಹಿಂದೆಂದೂ ನಡೆಯದ ಅವಳ ಆಕ್ರಮಣಕಾರೀ ಪ್ರವೃತ್ತಿಯಿಂದ ನಾನು ಸಮತೋಲನ ಕಳೆದುಕೊಂಡೆ. ಆಕ್ರಮಣದ ಸಂದರ್ಭದಲ್ಲಿ ಸಹ ಅವಳು ಆಡುತ್ತಿದ್ದ ಮಾತುಗಳು ನನಗೆ ವಿಚಿತ್ರವೆನಿಸಿದವು. 'ಯಾವ ವಿರೋಧವನ್ನೂ ಪ್ರದರ್ಶಿಸದೇ ಒಡ್ಡಿಕೊಳ್ಳುವ ಸೊ–ಕಾಲ್ಡ್ 'ಅಬಲೆ'ಯರನ್ನು ಸ್ವಾಧೀನಪಡಿಸಿಕೊಳ್ಳುವ ಪುರುಷ–ಪಶುಗಳಿಗೆ, ಒಂದಿಷ್ಟು ಎದುರಾಳಿತನ ಕಂಡೊಡನೆ ಎಂಥಾ ಅಭದ್ರತೆ ಮೆಟ್ಟಿಕೊಳ್ಳುತ್ತೆ' ಎನ್ನುತ್ತಾ ವಿಜಯ ಸಾಧಿಸಲು ಯತ್ನಿಸಿದಾಗ ನಾನು ಅಸಹಾಯಕನಾಗಿ ಯಾವ ಸುಖವನ್ನೂ ಪಡೆದುಕೊಳ್ಳದೇ, ಯಾವ ಸುಖವನ್ನೂ ಕೊಡಲಾಗದೇ ತಣ್ಣಗಾಗಿ ಬಿದ್ದುಕೊಂಡ ಪ್ರಸಂಗವನ್ನು ನೆನೆದರೆ ನನ್ನ ಮೇಲೆ ನನಗೇ ನಾಚಿಕೆಗಿಂತ ಹೆಚ್ಚು ಮರುಕವಾಗುತ್ತದೆ. ಆ ದಾರುಣ ಪರಿಣಾಮಕ್ಕೆ ಅವಳಾಡಿದ ಮಾತುಗಳೇ

ಕಾರಣವಾಗಿದ್ದಿರಬಹುದೆ? ಅಥವಾ ಅಂದು ನಡೆದ ಮತ್ತೊಂದು ವಿಷಯವೂ ಹಿನ್ನೆಲೆಯಿದ್ದಿತೋ ಏನೋ?

ಅಂದು ಸಂಜೆ ಊಟವಾಗಿ, ಕೆಲಕಾಲ ನಾವು ಟೀವಿ ನೋಡುತ್ತಿದ್ದಾಗ, ತೆರೆಯ ಮೇಲೆ, ವರ್ಷಗಟ್ಟಳೆ ವ್ಯಾಯಾಮ ಮಾಡಿ ದೇಹದ ಮಾಂಸಖಂಡಗಳನ್ನು ಬೆಳೆಸಿದ್ದ ತರುಣಿಯರನ್ನು ತೋರಿಸುತ್ತಿದ್ದರು. ಉಬ್ಬಿದ ತೋಳ್ಬಂಡಗಳ, ಬಿಗಿದ ಸ್ನಾಯುಗಳ, ಎದೆ ಮತ್ತು ತೊಡೆಗಳ ಮೇಲೆ ಎಣ್ಣೆ ಹಚ್ಚಿಕೊಂಡು ಮಾಂಸಖಂಡಗಳನ್ನು ಕುಣಿಸುತ್ತಿದ್ದ ಆ ಹೆಣ್ಣುಗಳನ್ನು ಕಂಡು ನನ್ನ ಮನಸ್ಸಿಗೆ ಮುಜುಗರದ ಜೊತೆಗೆ ಕೊಂಚ ಹೇಸಿಗೆಯೂ ಆಗಿತ್ತು. 'ಕೋಮಲ ಹೆಣ್ಣಿನ ದೇಹಕ್ಕೆ ಇದೆಂಥಾ ಶಿಕ್ಷೆ' ಎಂದು ಉದ್ಗಾರ ತೆಗೆದುಬಿಟ್ಟಿದ್ದೆ. ರಾಣಿ ಕೆಂಡಾಮಂಡಲವಾಗಿದ್ದಳು. 'ಗಂಡಸರು ಮಾಡಿದರೆ ಓಕೆ, ಹೆಂಗಸರು ಮಾಡಿದರೆ ವಾಕರಿಕೆ ಬರುತ್ತಾ? ಕ್ರಿಕೆಟ್, ಹಾಕಿ, ಸಾಕರ್, ಕುಸ್ತಿ, ಯಾವ ಆಟದಲ್ಲಿಲ್ಲ, ಹೆಣ್ಣು? ಭೂ-ಸೇನೆ, ವಾಯು-ಸೇನೆ, ಜಲ-ಸೇನೆ, ಗಗನಯಾತ್ರೆ, ಸಂಶೋಧನೆ, ಹೀಗೆ ಎಲ್ಲದರಲ್ಲೂ ಪುರುಷರಿಗಿಂತ ತಾವೇನೂ ಕಮ್ಮಿಯಿಲ್ಲವೆಂದು ತೋರಿಸಿಕೊಟ್ಟಮೇಲೂ, ಸ್ತ್ರೀಯರಿಗೆ ಸಮಾನತೆ ಸಿಗಲೊಲ್ಲದೇಕೆ?' ಎಂದು ಕಿರುಚಿ ಎದ್ದು ಹೋಗಿದ್ದಳು. ಸಮಾಧಾನಮಾಡಲು ಸಾಕಷ್ಟು ಕಷ್ಟಪಟ್ಟಿದ್ದಾಯಿತು. ಈಗ ಅವಳ ಒಪ್ಪಿಗೆ ಪಡೆಯದೇ ಯಾವ ಪ್ರಣಯದ ಹೆಜ್ಜೆಗಳಿಗೂ ಅವಕಾಶವಿಲ್ಲವಾಗಿ, ಸಮಯಸ್ಫೂರ್ತಿಯಿಂದ ಥಟ್ಟೆಂದು ಉದ್ಭವಿಸುವ ಸ್ಪಾಂಟೆನೇಯಿಟಿ ಎಂಬುದೇ ಮಾಯವಾಗಿದೆ. ರತಿಕ್ರೀಡೆಯಲ್ಲಿನ ಕ್ರೀಡೆ ಮಾತ್ರ ಉಳಿದು ರತಿ ಮಾಯವಾಗಿದೆ, ಒಂದು ರೀತಿಯಲ್ಲಿ ಸೆಕ್ಸ್ ಎಂಬುದು ಒಂದು ಚೋರ್ ಅಥವಾ ರಸಹೀನ ಕಸರತ್ತಾಗಿದೆ. ಮಾತೆತ್ತಿದರೆ, 'ನೀವು ಜಿಮ್ ಕಡೆ ಕಾಲಿಟ್ಟು ಎಷ್ಟು ಯುಗವಾಯಿತು?' ಎಂದು ಛೇಡಿಸುತ್ತಾಳೆ.

ಕೆಲ ದಿನಗಳಾದ ನಂತರ, 'ಇನ್ನೇನು, ನಿನ್ನ ಪಿಎಚ್ಡಿ ಮುಗಿದಾಯಿತಲ್ಲ, ಕೆಲಸವೂ ಸಿಕ್ಕಾಯ್ತಲ್ಲ, ಒಂದಷ್ಟು ದಿನ ಬ್ರೇಕ್ ತೆಗೆದುಕೊಳ್ಳಬಹುದಲ್ಲ? ಯಾವುದಾದರೂ ಉತ್ಕೃಷ್ಟವಾದ ಸ್ಥಳಕ್ಕೆ ವೆಕೇಶನ್ ಹೋಗೋಣವೇ?' ಎಂದು ಒಂದು ಪ್ರಸ್ತಾಪವೆತ್ತಿದಾಗ, 'ಇದೇ ತಾನೇ ಕೆಲಸ ಶುರುಮಾಡಿದ್ದೇನೆ, ನನ್ನ ಪ್ರಬಂಧದಿಂದ ಮುಂದುವರೆಯಬಹುದಾದ ಕೆಲ ವಾದಗಳನ್ನು ಸಿಂಥಿಯಾ ಮ್ಯಾಮ್ ಜೊತೆ ಚರ್ಚಿಸಿ, ಮುಂದಿನ ಪಿಎಚ್ಡಿ ಕ್ಯಾಂಡಿಡೇಟುಗಳನ್ನು ಆಕರ್ಷಿಸಿ, ಒಂದಿಷ್ಟು ಗ್ರ್ಯಾಂಟುಗಳನ್ನು ಹೊಂದಿಸಬೇಕಾಗಿದೆ. ಸಾರಿ. ನನ್ನ ಮಾತಿನಿಂದ ನಿಮಗೆ ನಿರಾಸೆಯಾಗುವುದರಲ್ಲಿ ಸಂದೇಹವಿಲ್ಲ. ಬೇಕಾದರೆ, ನೀವೊಬ್ಬರೇ ಎಲ್ಲಿಗಾದರೂ ಹೋಗಲು ನನ್ನದೇನೂ ಅಡ್ಡಿ ಇಲ್ಲ. ಅದೂ ಅಲ್ಲದೇ, ಸೆಮೆಸ್ಟರ್ ಬ್ರೇಕ್‌ನಲ್ಲಿ ನಾನು ಮತ್ತು ಸಿಂಥಿಯಾ ಮ್ಯಾಮ್ ಜೊತೆಯಾಗಿ ಭಾರತ ಮತ್ತು ಶ್ರೀಲಂಕಾಗೆ ಭೇಟಿಕೊಡಲು ಯೋಜನೆ ಹಾಕುತ್ತಿದ್ದೇವೆ' ಎಂದುಬಿಟ್ಟಳು. ಅವಳು ಯೂನಿವರ್ಸಿಟಿಗೆ ಹೋದ ನಂತರ ನನ್ನ ಬಳಿ ಇರುವ ವಿಕಲ್ಪಗಳೇನೆಂದು ಯೋಚಿಸಲು ಕೂತೆ.

ನಾನೀಗ ಏನು ಮಾಡಬೇಕು? ಪುನಃ ಯಾವುದಾದರೂ ಕೆಲಸ ಹುಡುಕಿ ಮತ್ತೊಮ್ಮೆ ಇಲ್ಲಿ ಪಂದ್ಯಕ್ಕಿಳಿಯಲೇ? ದೇವರ ದಯದಿಂದ ಹಣದ ಅಗತ್ಯ ಅಷ್ಟಾಗಿ ಇಲ್ಲ. ಮತ್ತೊಮ್ಮೆ ಬೆಳಗಾಗೆದ್ದು ಮುಖಕ್ಷೌರ ಮಾಡಿಕೊಂಡು, ರಸ್ತೆಗಿಳಿದು ಹೋರಾಡುವುದರಲ್ಲಿ ಯಾವ ಆಕರ್ಷಣೆಯೂ ಕಾಣುತ್ತಿಲ್ಲ. ಪ್ರಪಂಚ ಪರ್ಯಟನೆಗೆ ಹೊರಟರೆ ಹೇಗೆ? ಅಯ್ಯೋ, ಎಷ್ಟೊಂದು ದೇಶಗಳನ್ನು ನೋಡಿದ್ದಾಯಿತು? ಪ್ರಯಾಣದಲ್ಲಿ ಉತ್ಸಾಹವಿಲ್ಲ. ಇತ್ತೀಚಿನ ಯಾನ ಒಂದು ಚಿತ್ರಹಿಂಸೆಗಿಂತ ಕಡಿಮೆಯಲ್ಲ. ಹೊಸ ಜಾಗಗಳನ್ನು ನೋಡುವ ಆಸಕ್ತಿ ಕಮ್ಮಿಯಾಗಿ ಯಾವುದೋ ಯುಗವಾಯಿತು. ಅದೂ ಒಬ್ಬನೇ ಹೋದರೆ ಎಷ್ಟು ಬೋರಾಗಬಹುದು? ಮಕ್ಕಳನ್ನು ಜೊತೆಗೆ ಬನ್ನಿ ಎಂದರೆ? ಉಹ್ಞು, ಅವರು ನನ್ನೊಡನೆ ಬರುವರೇ? ಝೀರೋ ಚ್ಯಾನ್ಸ್. ಹೊಸ ಹಾಬಿ ಏನಾದರೂ ಇರಬಹುದೇ? ತೋಟಗಾರಿಕೆ? ಹೌದು, ಅನೇಕರು ಹೇಳುವ ಪ್ರಕಾರ, ಹೂವು, ಹಣ್ಣು, ತರಕಾರಿಗಳನ್ನು ಬೆಳೆದು ಹಂಚಿ ತಿನ್ನುವುದು ದೇಹಕ್ಕೂ ಮನಸ್ಸಿಗೂ ತುಂಬಾ ಆರೋಗ್ಯಕಾರಿ! ನಮ್ಮ ವಿವಾಹಿತ ಜೀವನದಲ್ಲಿ ರಾಣಿಯ ಮನಸ್ಸಿನಲ್ಲೂ ಈಗ ನನ್ನನ್ನು ಕಾಡುತ್ತಿರುವ ಪ್ರಶ್ನೆಗಳು ಎದ್ದು ಅವಳನ್ನೂ ಕಾಡಿರಬಹುದೇ? ಪಾಪ, ಎರಡು ಮಕ್ಕಳನ್ನು ಹೈಸ್ಕೂಲ್ ದಾಟಿಸುವ ಹೊತ್ತಿಗೆ ಅವಳು ಎಷ್ಟು ಸೊರಗಿದ್ದಿರಬಹುದು. ಕೆರಿಯರ್ ಬಿಟ್ಟರೆ ನನಗೆ ಬೇರೇನೂ ಗೊತ್ತೇ ಇರಲಿಲ್ಲ. ಯಾವತ್ತೂ ಅವಳು ನನ್ನ ಸಮಯ ಅಥವಾ ಗಮನ ಒಂದನ್ನೂ ಅಪೇಕ್ಷಿಸದೇ, ದುಡಿದದ್ದು ನನ್ನ ಗಮನಕ್ಕೆ ಬಾರದೇ ಹೋಯಿತೇ? ಮೇಜಿನ ಮೇಲೆ ಊಟ ತಂದುಹಾಕುತ್ತಿದ್ದೇನೆಂದು ನಾನು ಭ್ರಮಿಸುತ್ತಿದ್ದೆನೇ? ಹಣದ ದುಡಿಮೆಯ ಜವಾಬ್ದಾರಿ ನನ್ನೊಬ್ಬನ ಮೇಲೇ ಬಿದ್ದಿದ್ದುದು ನಿಜ. ಆದರೆ, ಸಾಮಾನು ಸರಂಜಾಮು ತರುತ್ತಿದ್ದವಳು ರಾಣಿಯೇ. ಅಡುಗೆ ಮಾಡಿ ಬಡಿಸುತ್ತಿದ್ದವಳೂ ಅವಳೇ. ನಾನು ಮೇಜಿನ ಮೇಲೆ ಕುಳಿತು ಉಣ್ಣುತ್ತಿದ್ದೆನಷ್ಟೆ! ಹೆಣ್ಣುಮಕ್ಕಳ ಜೊತೆ ಅದೂ ಇದೂ ವಾದಿಸುತ್ತ, ತಿಂದ ತಟ್ಟೆಯನ್ನೂ ತೊಳೆಯದೇ ಎದ್ದು ಹೋಗುತ್ತಿದ್ದೆ. ಮಕ್ಕಳು ನನ್ನನ್ನು ಎಂಸಿಪಿ–'ಮೇಲ್ ಶೋವಿನಿಸ್ಟಿಕ್ ಪಿಗ್' ಎಂದು ಕರೆದಾಗ, ಅದೇನೋ ಒಂದು ದೊಡ್ಡ ಬಿರುದು ಎಂದುಕೊಳ್ಳುತ್ತಿದ್ದೆ, ನನ್ನ ದಪ್ಪ ಚರ್ಮಕ್ಕೆ ಏನೂ ಅನಿಸುತ್ತಲೇ ಇರಲಿಲ್ಲವೇಕೆ? ಯೋಚಿಸಿದಷ್ಟೂ ನನಗೆ ರಾಣಿಯ ಮೇಲೆ ಇದ್ದ ಕೋಪ ತಣ್ಣಗಾಗುತ್ತಿತ್ತು. ಅನುಕಂಪ ಹೆಚ್ಚಾಗುತ್ತ ಬಂತು. ನನ್ನ ಬಗ್ಗೆ ಅವಳು ತೋರಿದಷ್ಟು ಕಾಳಜಿಯಲ್ಲಿ ಒಂದು ಭಾಗವನ್ನಾದರೂ ನಾನು ಅವಳಿಗೆ ತೋರಿಸಬೇಕು ಇಲ್ಲದಿದ್ದರೆ ನಾನೊಬ್ಬ ಮನುಷ್ಯನೇ ಅಲ್ಲ ಎಂಬ ತೀರ್ಮಾನಕ್ಕೆ ಬಂದು ಒಂದು ಕ್ಷಣ ಏನು ಮಾಡಲೂ ತೋಚದೇ ಮೌನಕ್ಕೆ ಶರಣಾದೆ. ತಕ್ಷಣ ಏನೋ ಹೊಳೆದಂತಾಗಿ, ಅವಳ ಪುಸ್ತಕಗಳ ಬೀರುವಿಗೆ ಹೋಗಿ ಅವಳ ಪ್ರಬಂಧದ ಪುಸ್ತಕವನ್ನು ಕೈಗೆತ್ತಿಕೊಂಡೆ.

ಬಣ್ಣ ಬಣ್ಣದ ಆಕರ್ಷಕ ರಕ್ಷಾಕವಚ! ಕರೀ ಕುದುರೆಯ ಮೇಲೆ ತೆಳ್ಳನೆಯ ಶ್ವೇತವಸ್ತ್ರಗಳನ್ನು ಧರಿಸಿ ಕುಳಿತ ಹೆಣ್ಣಿನ ಒಂದು ಕೈಯಲ್ಲಿ ತ್ರಿಶೂಲ, ಮತ್ತೊಂದರಲ್ಲಿ ಬಂದೂಕು. ಬಿಳಿ ಮೋಡದ ನಡುವೆ ನಾಗಾಲೋಟದಲ್ಲಿರುವ ಕುದುರೆ ಮತ್ತು ಹೆಣ್ಣು

ಕೇವಲ ಊಹೆಗೆ ಮಾತ್ರ ಎಟುಕುವ ಅಸ್ಪಷ್ಟ ಆಕೃತಿಗಳು. ಹಿಂದಿನಿಂದ ತೆಗೆದ ಭಾವಚಿತ್ರದಂತೆ ಕಾಣುವ ಈ ವಿನ್ಯಾಸ ಕುತೂಹಲಕಾರಿಯಾಗಿದೆ ಅನ್ನಿಸಿತು! ಮುಖ ಕಾಣುತ್ತಿಲ್ಲ.

ಮೊದಲ ಪುಟದಲ್ಲಿ ಕಂಡದ್ದು ಕೃತಜ್ಞತಾ ಘೋಷಣೆ, ಹೀಗಿತ್ತು:

"ಪ್ರತಿಯೊಬ್ಬ ಜಯಶೀಲ ಪುರುಷನ ಹಿಂದೆ ಒಬ್ಬಳು ಮಹಿಳೆ ಇರುವಂತೆ ನನ್ನ ಹಿಂದೆಯೂ ಒಬ್ಬ ಪುರುಷನಿದ್ದಾನೆ. ಈ ಪಂಚವಾರ್ಷಿಕ ಯೋಜನೆಯಲ್ಲಿ ಅತ್ಯಂತ ಸಹನೆ ಮತ್ತು ಸಹಕಾರವನ್ನು ಪ್ರದರ್ಶಿಸಿದ ನನ್ನ ಜೀವನಸಂಗಾತಿಗೆ ಹೇಗೆ ಕೃತಜ್ಞತೆ ಅರ್ಪಿಸಬೇಕೋ ತಿಳಿಯದಾಗಿದೆ!"

ನನ್ನ ಪಿಎಚ್ಡಿ ಪ್ರಬಂಧದ ಮೊದಲ ಪುಟದ ಕೃತಜ್ಞತಾ ಘೋಷಣೆಯೂ ಹೆಚ್ಚೂ ಕಮ್ಮಿ ಹೀಗೇ ಇದ್ದಿತು ಎಂಬ ಮಾತು ನೆನಪಾಗಿ ನನ್ನ ಕಣ್ಣು ತೇವಗೊಂಡಿತು.

ಇಡೀ ಪುಸ್ತಕದ ಪುಟಗಳನ್ನು ಒಮ್ಮೆ ಪರಪರನೆ ಬಿಡಿಸುತ್ತಿದ್ದಾಗ ಕೈಬರಹದ ಮಡಿಸಿಟ್ಟಿದ್ದ ಎರಡು ಹಳೇ ಹಾಳೆಗಳು ಕೆಳಗೆ ಬಿದ್ದವು. ಕುತೂಹಲದಿಂದ ಕೈಗೆತ್ತಿಕೊಂಡೆ. ಗುಂಡಾದ ಅಕ್ಷರಗಳು ರಾಣಿಯದೇ ಎನ್ನುವುದರಲ್ಲಿ ಸಂಶಯವಿರಲಿಲ್ಲ. ಮದುವೆಯಾದ ಹೊಸತರಲ್ಲಿ ಶೃಂಗಾರಮಯವಾದ ಪತ್ರಗಳನ್ನು ವಿನಿಮಯ ಮಾಡಿಕೊಂಡದ್ದರಿಂದ ಅವಳ ಅಕ್ಷರ ಮತ್ತು ಶೈಲಿಯ ಪರಿಚಯ ನನಗಿತ್ತು. ಮೊದಲ ಹಾಳೆಯನ್ನು ಬಿಡಿಸಿದೆ, ಅದರಲ್ಲಿ ಹೀಗೊಂದು ಕವನ:

**ದೇವರೇ ಗತಿ!**

**'ಹರಕಥೆ'ಯಲ್ಲಿ ಕಾಣುವಳು ಯಜ್ಞಕುಂಡಕೆ ಧುಮುಕಿದ ದಾಕ್ಷಾಯಿಣಿ ಪಾರ್ವತಿ**
**'ಹರಿಕಥೆ'ಯಲ್ಲಿ ಕಾಣುವಳು ಪತಿಯೊಂದಿಗೆ ಮುನಿದು ಬುವಿಗಿಳಿದ ಪದ್ಮಾವತಿ**
**'ಬೊಮ್ಮಕಥೆ'ಯಲಿ ಗೊಂದಲ, ತಾನವನ ಸೃಷ್ಟಿಯೋ ಸತಿಯೋ ಎಂಬ ಸರಸ್ವತಿ**
**ದೇವತೆಗಳೇ ಇಂತಾದರೆ ಹುಲುಮಾನವರ ಗತಿ ಏನು ಓ ಭೂಪತಿ? ದೇವರೇ ಗತಿ!**

ಎರಡನೆಯ ಹಾಳೆಯನ್ನು ಬಿಡಿಸಿದರೆ ಅದರಲ್ಲೂ ಒಂದು ಕವಿತೆ:

**ಸಮರ್ಪಣೆ**

**ವಯಸ್ಸಾದ ಋಷಿ ಗೌತಮ ಒಂದೆಡೆ**
**ಚಿರಯೌವನದ ದೇವೇಂದ್ರ ಮತ್ತೊಂದೆಡೆ**
**ಈರ್ವರ ನಡುವೆ ವಂಚಿತಳಾಗಬೇಕಾದ 'ಅಹಲ್ಯೆ'**

**ಮಹಾಶೂರವೀರ ಪತಿಗಳೈವರಿದ್ದರೂ**
**ಶ್ರೀಕೃಷ್ಣನ ತಂಗಿಯೆನಿಸಿಕೊಂಡಿದ್ದರೂ**
**ಮಾನಭಂಗಕ್ಕೊಳಗಾಗಬೇಕಾದ 'ದ್ರೌಪದಿ'**

ವೀರ–ವಾಲಿ ಸತ್ತನೆಂದೇ ನಂಬಿದವಳು
ಪಟ್ಟವೇರಿದ ಸುಗ್ರೀವ ಮೈದುನನಾದರೂನೂ
ಕಾಯ್ವಗಂಡಿಗೆ ಜೊತೆಗಾರ್ತಿಯಾಗಬೇಕಾದ 'ತಾರೆ'

ಸ್ವರ್ಣಮೃಗದಾಸೆಯಲಿ ಮೋಹಕೊಳಗಾಗಿ
ಲಕ್ಷ್ಮಣ–ರೇಖೆಯನು ದಾಟಿ ಬಲೆಗೆ ಬಿದ್ದು
ರಾವಣನ ದಾಹಕೆ ಗುರಿಯಾಗಬೇಕಾದ 'ಸೀತೆ'

ರಕ್ಕಸ–ವೀರನ ವರಿಸಿ ಲಂಕೆಯರಸಿಯಾಗಿ
ದಾರಿತಪ್ಪಿದ ಪತಿರಾಯನಿಗೆ ಸನ್ಮಾರ್ಗದರ್ಶಿಯಾಗಿ
ಮಹಾಪತಿವ್ರತೆಯೆನಿಸಿಕೊಂಡ 'ಮಂಡೋದರಿ'

ಈ 'ಪಂಚ–ಕನ್ಯೆ'ಯರ ಪರವಾಗಿ ಒಬ್ಬ ಮಹಿಳೆ
ಈ ಮಹಾಪ್ರಬಂಧವನ್ನು ಮಂಡಿಸುತ್ತಿರುವಳು
ಸಂವೇದನಾಶೀಲರೆಲ್ಲರೂ ಓದಬಹುದೆಂದು

ತನ್ನ ಮಹಾಪ್ರಬಂಧದ ಅರ್ಪಣೆಗಾಗಿ ಬರೆದದ್ದು, ಆದರೆ ಕನ್ನಡದಲ್ಲಿರುವುದರಿಂದ ಪುಸ್ತಕದ ಭಾಗವಾಗಿರಲಿಲ್ಲವೆಂದು ಊಹಿಸಿದೆ.

ಪುಸ್ತಕದ ಸಮರ್ಪಣೆ ಮೊದಲ ಪುಟದಲ್ಲೇ ಇತ್ತು, ಒಂದು ಆಂಗ್ಲ ಕವಿತೆಯ ರೂಪದಲ್ಲಿ:

**I submit**

*To all those goddesses framed and hung on worship-room walls*
*brightened twice daily with burning camphor and deafening bells*
*Covered with smudged glasses browned by years of incense ashes*
*I bring my hands together and prostrate chanting Samskrit verses*
*To all those females born to be protected, ruled, and controlled*
*By fathers, brothers, husbands and sons and every male around*
*To those millions who never felt equal nor knew ever to be free*
*I submit my thesis of my own free will, do not care if you disagree!*

ನಾನು ಕೊಂಚ ತಬ್ಬಿಬ್ಬಾದೆ. ಬಿಡಿ ಹಾಳೆಗಳಲ್ಲಿ ಸಿಕ್ಕ ಮೊದಲ ಎರಡು ಕವಿತೆಗಳಲ್ಲಿ ಎಷ್ಟೊಂದು ಸಾಂದ್ರತೆ! ಅರ್ಪಣೆಯ ಆಂಗ್ಲ ಕವಿತೆಯೂ ಶಕ್ತಿಶಾಲಿ!! ಏನೆಲ್ಲ ವಿಷಯಗಳನ್ನು ಹೊತ್ತು ತಿರುಗುತ್ತಿತ್ತೋ ಈ ಮಹಿಳೆಯ ತಲೆ ಎಂದು ನನಗೆ ದಿಗ್ಭ್ರಮೆಯಾಯಿತು.

ಅದುಮಿಟ್ಟಿದ್ದ ಭಾವನೆಗಳೆಲ್ಲಾ ಒಟ್ಟಿಗೇ ಸ್ಫೋಟಗೊಂಡಂತೆ ಭಾಸವಾಯಿತು. ನಾನು ಪ್ರಬಂಧವನ್ನು ಓದುವ ಮೊದಲು ಈ ಮೂರೂ ಕವಿತೆಗಳ ತಿರುಳನ್ನು ಅರಿತುಕೊಳ್ಳದೇ ಹೋದರೆ ನನ್ನ ಓದು ಕಾಲಹರಣವಾಗಬಹುದು ಎನ್ನಿಸಿ, ಯೋಚನೆಯಲ್ಲಿ ಮಗ್ನನಾದೆ. ಕಣ್ಮುಚ್ಚಿ ಧ್ಯಾನಸ್ಥನಾದೆ. ಹತ್ತು ಅಧ್ಯಾಯಗಳನ್ನು ದಿನಕ್ಕೊಂದರಂತೆ ಓದಬೇಕು ಎಂದು ತೀರ್ಮಾನಿಸಿದೆ. ಹೇಗಿದ್ದರೂ ನಾನು ಎಲ್ಲಿಗೆ ಬೇಕಾದರೂ ಹೋಗಬಹುದೆಂದು 'ನೋ ಅಬ್ಜೆಕ್ಷನ್ ಸರ್ಟಿಫಿಕೇಟ್' ಕೊಟ್ಟಿದ್ದಾಳಲ್ಲ, ಅದನ್ನು ಸದುಪಯೋಗಪಡಿಸಿಕೊಳ್ಳಬೇಕೆಂದು ಮನಸ್ಸಿನಲ್ಲೇ ಮಂಡಿಗೆ ತಿನ್ನುತ್ತಿದ್ದಾಗ ಯಾವ ಮಾಯದಲ್ಲಿ ನಿದ್ರೆ ಹತ್ತಿತೋ! ರಾಣಿ ಬಂದು ಪುಸ್ತಕವನ್ನು ನನ್ನ ಕೈಯಿಂದ ಬಿಡಿಸಿದಾಗಲೇ ನನಗೆ ಎಚ್ಚರವಾದದ್ದು.

* * *

ಖ್ಯಾತ ಚಲನಚಿತ್ರ ನಿರ್ದೇಶಕನಾಗಿರುವ ನನ್ನ ಮಿತ್ರನೊಬ್ಬನ ಕೋರಿಕೆಯಂತೆ ಮೇಲಿನ ಕಥೆಯನ್ನೇನೋ ಬರೆದುಬಿಟ್ಟೆ. ಆದರೆ, ಕಥೆಯ ಅಂತ್ಯ ಹೇಗಾಗಬೇಕೆಂಬುದು ನನ್ನ ಮನಸ್ಸಿನಲ್ಲಿ ಹೆಪ್ಪುಗಟ್ಟಿರಲಿಲ್ಲ, ಕಥೆಯ ಹಸಿ ಹಸಿ ಕರಡನ್ನು ಸಾಹಿತ್ಯ ವಲಯದ ಕೆಲವು ಮಿತ್ರರಿಗೆ ಕಳಿಸಿ ಅವರ ಸಹಾಯ ಕೇಳಿದೆ. ಬಂದ ಹಲವು ಪ್ರತಿಕ್ರಿಯೆಗಳಲ್ಲಿ ಕೆಲವನ್ನು ಮಾತ್ರ ನನ್ನ ನಿರ್ದೇಶಕ ಮಿತ್ರನೊಂದಿಗೆ ಹಂಚಿಕೊಂಡು, ಸಿನಿಮಾವನ್ನು ಹೇಗೆ ಬೇಕೋ ಹಾಗೇ ಮುಗಿಸಿಕೊಳ್ಳಲಿ ಎಂದುಕೊಂಡಿರುವೆ. ಪ್ರತಿಕ್ರಿಯೆಗಳು ಇಂತಿವೆ:

(1) ಈ ಕಥೆಯು ಒಂದು ಸುದೀರ್ಘ ಕಾದಂಬರಿಯಾಗಬಹುದಿತ್ತು. ಈಗಲಾದರೂ ಒಂದು ಕಾದಂಬರಿ ಬರೆಯುವಿರೇನೋ ಎಂದುಕೊಂಡಿದ್ದೆ. ನಿರಾಸೆ ಮಾಡಿಬಿಟ್ಟಿರಿ.

(2) ಎಲ್ಲಾ ಬಿಟ್ಟು ಇಂಥಾ ವಿವಾದಾಸ್ಪದ ವಿಷಯಕ್ಕೆ ನೀವು ಈ ವಯಸ್ಸಿನಲ್ಲಿ ಕೈಹಾಕಬಾರದಿತ್ತು.

(3) ಪೂರ್ವಾರ್ಧದಲ್ಲಿ ರಾಣಿ ತನ್ನ ಕರ್ತವ್ಯವನ್ನು ನಿಭಾಯಿಸಿ ಉತ್ತರಾರ್ಧದಲ್ಲಿ ತನ್ನ ಹಕ್ಕಿಗಾಗಿ ಹೋರಾಡುವ ವೀರಮಹಿಳೆ. ಪ್ರೊಟಾಗನಿಸ್ಟನು ಮಿಕ್ಕ ಜೀವನವನ್ನು ತನ್ನ ಮಡದಿಯ ಪುರೋಭಿವೃದ್ಧಿಗಾಗಿ ಮುಡಿಪಾಗಿಡಲಿ. ಅದೇ ಸರಿಯಾದ ಅಂತ್ಯ.

(4) ದೇವರು ಕೊಟ್ಟ ಸುಖ-ಸಂಸಾರ, ಒಳ್ಳೆಯ ಗಂಡ ಮತ್ತು ಬುದ್ಧಿವಂತ ಮಕ್ಕಳು, ಎಲ್ಲಾ ಇದ್ದಾಗ್ಯೂ ಏನನ್ನು ಸಾಧಿಸಲು ಹೊರಟಿದ್ದಾಳೆ ಈ ನಿಮ್ಮ ರಾಣಿ? ಹೆಣ್ಣು ತನ್ನ ಶಾಂತಿಯನ್ನು ಕೆಡಿಸಿಕೊಳ್ಳುವುದರ ಜೊತೆಗೆ ಸಂಸಾರದ ಶಾಂತಿಯನ್ನೂ ಕದಡುತ್ತಿರುವುದು ದುರದೃಷ್ಟಕರ. ನಾಯಕ ಅವಳಿಂದ ದೂರಾಗುವುದೇ ನಿಮ್ಮ ಕಥೆಗೆ ಸರಿಯಾದ ಅಂತ್ಯ.

(5) ನೀವು ಈಗ ನಿಲ್ಲಿಸಿರುವ ಸಾಲೇ ಕೊನೆಯ ಸಾಲಾಗಲಿ, ಇಂಥಾ ಕಥೆಗಳಿಗೆ ಅಂತ್ಯವೆಲ್ಲಿದೆ?

ನಿಜವಾಗಿ ನನ್ನ ಕಥೆ ಸಿನಿಮಾ ಕಥೆಯಾಗಿ ಸ್ವೀಕೃತವಾದಲ್ಲಿ ತಿಳಿಸುವೆ. ನಮಸ್ಕಾರಗಳು!

❑

# ಕಥನ ಬಿತ್ತಿ ಇತಿಹಾಸ ಬೆಳೆದ ಕವಿ ಪಂಪಕಂಪನಾ

**ಪ್ರಕಾಶ್ ನಾಯಕ್**
Cupertino, California

*

**ಕಟ್ಟುಕಥೆಯನ್ನು ಓದುವ ಮೊದಲು...**

ಇತಿಹಾಸವನ್ನು ಆಧರಿಸಿದ ಸಲ್ಮಾನ್ ರಷ್ದಿಯವರ ಇತ್ತೀಚಿನ 'Victory City' ಕಾದಂಬರಿಯು ಸ್ತ್ರೀ ಸಂವೇದನೆಯ ಹೊಸ ಅಲೆಗಳನ್ನು ಹುಟ್ಟುಹಾಕಿದೆ. ಈ ಕಾದಂಬರಿಯ ಕಥಾನಾಯಕಿ 'ಪಂಪಕಂಪನಾ' ಓದಿ ಮುಗಿಸಿದ ನಂತರವೂ ನಮ್ಮೊಡನೆ ಉಳಿದು, ಬೆಳೆಯುವ, ಆಪ್ತವಾಗುವ ಪಾತ್ರ. ನಗರದೇವತೆ ಪಂಪಾದೇವಿ ಕೊಟ್ಟ ವರದಿಂದ ತಾನೇ ಅಕ್ಷರಶಃ ಬೀಜ ಬಿತ್ತಿ ಬೆಳೆಸಿದ ವಿಜಯನಗರ ಸಾಮ್ರಾಜ್ಯದಲ್ಲಿ ಎರಡುನೂರಾ ನಲವತ್ತೇಳು ವರ್ಷಗಳ ಕಾಲ, ಹಲವು ತಲೆಮಾರಿನ ರಾಜರಿಗೆ ರಾಣಿಯಾಗಿ ಬದುಕುವ ಪಂಪಕಂಪನಾ ಅಸದೃಶ ವ್ಯಕ್ತಿ–ಶಕ್ತಿ. ಕಾದಂಬರಿಯಲ್ಲಿ ಬಳಸಿರುವ magic realism ಕಥನತಂತ್ರ ಅವಳ ಪಾತ್ರವನ್ನು ಸಹಜವೆನ್ನಿಸುವಂತೆ ಚಿತ್ರಿಸಲು ಸಹಾಯಕಾರಿಯಾಗಿದೆ. ಮಾಂತ್ರಿಕಶಕ್ತಿಯ ಈ ಪಂಪಕಂಪನಾ ಕವಿಯೂ ಹೌದು. ವಿಜಯನಗರ ಸಾಮ್ರಾಜ್ಯದ ಹುಟ್ಟು, ಬೆಳವಣಿಗೆ ಮತ್ತು ಪತನವನ್ನು ದಾಖಲಿಸಲು ಅವಳು ಬರೆದ 'ಜಯಾಪರಾಜಯ' ಮಹಾಕಾವ್ಯದ ಸಾರಾಂಶವನ್ನು ಅನಾಮಧೇಯ ನಿರೂಪಕ ನಮಗೆ ತಿಳಿಸುವುದು ಈ ಕಾದಂಬರಿಯ ವಿನ್ಯಾಸ. ವಿಜಯನಗರ ಸಾಮ್ರಾಜ್ಯದ ಹುಟ್ಟಿಗೆ ಲಿಂಗಸಮಾನತೆಯ ಆಶಯವೇ ಕಾರಣವಾಯಿತು, ಮಹಿಳಾ ಸಬಲೀಕರಣ ಅದನ್ನು ಉಚ್ಛ್ರಾಯ ಸ್ಥಿತಿಗೆ ಕೊಂಡೊಯ್ದಿತು

ಮತ್ತು ಹೆಂಗಸರು ರಾಜ್ಯ ಆಳಲು ಅರ್ಹರಲ್ಲ ಎನ್ನುವ ನಿಲುವು ಅದರ ಪತನಕ್ಕೆ ಕಾರಣವಾಯಿತು ಎನ್ನುವ ಪ್ರತಿಪಾದನೆ, ಆ ದಿಸೆಯಲ್ಲಿ ಕಾದಂಬರಿ ಚಿತ್ರಿಸುವ ವಿವರಗಳು, ಎತ್ತುವ ಪ್ರಶ್ನೆಗಳು ಅದನ್ನು ಇತಿಹಾಸದ ಹಿಡಿತದಿಂದ ಬಿಡಿಸಿಕೊಂಡು ಸಾಮಾಜಿಕ ನೆಲೆಗೆ ಕರೆದುತರುತ್ತವೆ; ಈ ಐತಿಹಾಸಿಕ ಕಾದಂಬರಿಯನ್ನು ಸ್ತ್ರೀ ಸಂವೇದನೆಯ, ಲಿಂಗಸಮಾನತೆಯ ಕೈಹೊತ್ತಗೆಯನ್ನಾಗಿ ಮಾಡುತ್ತವೆ. ಸ್ತ್ರೀ ಮಾಡಲಾಗದ, ಮಾಡಬಾರದ ಯಾವ ಕೆಲಸವೂ ಇಲ್ಲವೆನ್ನುವ ವಾದವನ್ನು ಕಾದಂಬರಿಯ ಉದ್ದಕ್ಕೂ ಪ್ರತಿಪಾದಿಸಿಕೊಂಡು ಬರಲಾಗಿದೆ. ಪಂಪಕಂಪನಾಳ ನಿಲುವಿಗೆ ಜೊತೆಕೊಡುವ, ವಿರುದ್ಧ ಸಂಚು ಹೂಡುವ ಹಲವು ಪೋಷಕ ಪಾತ್ರಗಳು ಅಧ್ಯಯನಯೋಗ್ಯವಾಗಿವೆ. ಕಾದಂಬರಿಯ ಹಿಂದಿನ ಐತಿಹಾಸಿಕ ಸತ್ಯಾಸತ್ಯತೆ ಏನೇ ಇರಲಿ, ಸ್ತ್ರೀ ಸಂವೇದನೆಯ ಆಯಾಮಗಳನ್ನು ಪರಿಕಿಸಿ ನೋಡಲು ರಷ್ದಿಯವರ ಈ ಕಾದಂಬರಿ ಉತ್ತಮ ಭೂಮಿಕೆಯನ್ನು, ಅದಲ್ಲದಿದ್ದರೆ ತಳ್ಳಿಹಾಕಲಾಗದ ಕಾರಣವನ್ನು ಖಂಡಿತ ಒದಗಿಸುತ್ತದೆ.

ಸ್ತ್ರೀ ಸಂವೇದನೆಯ ಜೊತೆಜೊತೆಯಲ್ಲಿಯೇ, ನಿತ್ಯ ಜೀವನದಲ್ಲಿ ಸಹಬಾಳ್ವೆಯ ಆಶಯ ಮರೆತು, ಯಾರು ಯಾರನ್ನು ಆಳಬೇಕೆಂದು ನಿರ್ಧರಿಸುವಲ್ಲಿ ಕಥನಗಳ ಮಹತ್ವವನ್ನು ಈ ಕಾದಂಬರಿ ಹೇಳುತ್ತದೆ. ಕಾದಂಬರಿ ಕೊನೆಯಾಗುವ ರೀತಿಯೇ ಕಥನಗಳ ಮಹತ್ವವನ್ನು ಸಾರುತ್ತದೆ.

**"ಬದುಕಿದ್ದಾಗ ಅವರು ಗೆದ್ದವರು, ಯಾ ಸೋತವರು,**
**ಒಮ್ಮೊಮ್ಮೆ ಗೆದ್ದು ಸೋತವರು ಯಾ ಸೋತು ಗೆದ್ದವರು**
**ಈಗವರು ಅವಾವುದೂ ಅಲ್ಲ**
**ಉಳಿದು ಗೆದ್ದದ್ದು ಕಥನವೊಂದೇ."**

ಸ್ತ್ರೀ ಸಂವೇದನೆಯ ಹಿನ್ನೆಲೆಯಲ್ಲಿ ಕಥನದ ಮಹತ್ವವನ್ನು ಚರ್ಚಿಸುವ ಈ ಕಥೆ 'Victory City' ಕಾದಂಬರಿಯ ಪಾತ್ರಗಳಿಗೆ ಋಣಿಯಾಗಿದೆ; ಈ ಕಥೆಯಲ್ಲಿ ಹೆಸರಿಸಿರುವ ಎಲ್ಲ ಪಾತ್ರಗಳೂ ಅಲ್ಲಿಂದಲೇ ಒದಗಿಬಂದಿವೆ. ಅಲ್ಲಿನ ತಮ್ಮ ಹುಟ್ಟುಗುಣವನ್ನು ಇಲ್ಲಿನ ಕಥೆಗೆ ಒಗ್ಗಿಸಿಕೊಂಡಿವೆ. ಈ ಕಥೆಯನ್ನು ಕಾದಂಬರಿಗೆ ಸೃಜನಶೀಲ ಪ್ರತಿಕ್ರಿಯೆಯಾಗಿ ಓದಬಹುದು ಅಥವಾ ಒಂದು ಬಿಡಿ ಕಥೆಯಾಗಿಯೂ ಓದಬಹುದು.

**–1–**

"ನಮಸ್ಕಾರ, ಹೌದು, ಹೌದು. ಇದು ನೀವು ಹುಡುಕಿಕೊಂಡು ಬಂದಿರುವ 'ಮಹಾಕವಿ ಪಂಪಕಂಪನಾ – ಒಂದು ಮುಖಾಮುಖಿ' ಕಾರ್ಯಕ್ರಮವೇ. ನಾನೇ ಆ ಪಂಪಕಂಪನಾ. ಯಾಕೆ? ಬೇರೆ ಯಾರನ್ನೋ – ಬಹುಶಃ ಮಹಾಕವಿ ಅಂದ ಕೂಡಲೇ ಖಾದಿ ಜುಬ್ಬ ಧರಿಸಿದ ಮಹಾನುಭಾವರನ್ನು ನಿರೀಕ್ಷಿಸಿದ್ದೀರಿ, ಅಲ್ವಾ? ಉಳಿದ ಸಂಗತಿಗಳ ಹಾಗೆ ಮಹಾಕವಿಗಳೂ ಹಲವು ಬಣ್ಣ, ರೂಪ, ಆಕಾರಗಳ ಜೊತೆಗೆ ವಿಭಿನ್ನ ಲಿಂಗಗಳಲ್ಲಿ

ಕಾಣಿಸಿಕೊಳ್ಳುತ್ತಾರೆ. ಆ ದಂತಕತೆಯ ನಾಯಕಿ ಕೂಡಾ ನಾನೇ. ಅವಳಷ್ಟೇ ಅಲ್ಲ, ತಂದೆಯ ಪ್ರತೀಕಾರದ ಯಜ್ಞದಲ್ಲಿ ಹುಟ್ಟಿದ ದ್ರೌಪದಿ, ಪತಿಯ ಅಗ್ನಿಪರೀಕ್ಷೆಯ ಉರಿಯನ್ನು ಹಾದುಬಂದ ಸೀತೆ, ತಾನೇ ಹಾಕಿದ ಸೇಡಿನ ಬೆಂಕಿಯಲ್ಲಿ ಧುಮುಕಿದ ಅಂಬೆ, ಕಾಳ್ಗಿಚ್ಚಿನಲ್ಲಿ ದಹಿಸಿ ಕರಕಲಾದ ಗಾಂಧಾರಿ–ಕುಂತಿಯರು.. ಬೆಂಕಿಯೊಡನೆ ಒಡನಾಡಿದ ಮಹಾಕಾವ್ಯಗಳ ಕನ್ಯೆಯರು.. ಅವರೆಲ್ಲರೂ ಒಂದು ದೃಷ್ಟಿಯಲ್ಲಿ ನಾನೇ. ಈ ಪಂಪಕಂಪನಾ ಜಯಪರಾಜಯದ ಕವಿ ಕೂಡಾ ಹೌದು; ತನ್ನ ಕಥೆಯನ್ನು ಹೇಳಲು ಅವಕಾಶ ಸಿಕ್ಕಿರುವುದು ಅವಳ ಹೆಗ್ಗಳಿಕೆ.

ಎಲ್ಲರೂ ಒಬ್ಬರೇ ಆಗೋದು ಹೇಗೆ ಸಾಧ್ಯ ಅಂದ್ರಾ? ಕನಸು–ಎಚ್ಚರಗಳ ನಡುವೆ ಕಂಗೆಟ್ಟು ನಿಂತ ಜನಕರಾಜನಿಗೆ ಅಷ್ಟಾವಕ್ರ ಮುನಿ, 'ಓ ರಾಜಾ, ಕನಸಿನಲ್ಲಾಗ ಅಳುತ್ತಿದ್ದವನೂ ನೀನಲ್ಲ, ಎಚ್ಚರದಲ್ಲೀಗ ಆಳುತ್ತಿರುವವನೂ ನೀನಲ್ಲ, ಅವೆರಡನ್ನೂ ಅನುಭವಿಸುವ ಆತ್ಮ ನೀನು' ಅಂತ ಹೇಳಿದನಂತೆ. ಎಂತಹ ಮಾತು! ಅನುಭವವೇ ಅಸ್ತಿತ್ವ, ಕನಸು–ನನಸಿನ ಅನುಭವವೇ ಆತ್ಮದ ಪರಿಚಯವೂ ಕೂಡ. ಅಲ್ವಾ? ಅಂತಹ ಅನುಭವಗಳ ಮೂಲಕವೇ ನಾನು ಬರೆದ ಜಯಾಪರಾಜಯದಲ್ಲಿ ಗೆಳತಿಯರೊಡನೆ ಸಾಮೂಹಿಕ ಸತಿಹೋದ ತಾಯಿ ರಾಧಾಕಂಪನಾನೂ ನಾನೆ; ಅದಕ್ಕೆ ಸಾಕ್ಷಿಯಾದ ಮಗಳು ಪಂಪಕಂಪನಾನೂ ನಾನೆ; ಹೆಣ್ಮಕ್ಕಳ ಸಿಂಹಾಸನದ ಹಕ್ಕಿಗೆ ಹೋರಾಡಿದ ರಾಣಿಯೂ ನಾನೆ; ಸಾಮರ್ಥ್ಯವಿದ್ದರೂ ಕಾಡುಪಾಲಾದ ಅವಳ ಮೂರು ರಾಜಕುಮಾರಿಯರೂ ನಾನೆ. ನಂತರ ಅದನ್ನು ಜಯಪರಾಜಯದಲ್ಲಿ ದಾಖಲಿಸಿದ ಕವಿಯೂ ನಾನೆ. ಹಾಗೆ ನೋಡಿದರೆ ಈ ಜಯಪರಾಜಯ ನಿಮ್ಮದೂ ಕೂಡ. ನಾನು ಹೇಳಿದ ಕಥೆ ನಿಮ್ಮ ಅನುಭವಕ್ಕೆ ಬಂದರೆ.. ಅಥವಾ ಅಂತಹ ನಿಮ್ಮದೇ ಒಂದು ಕಥೆ ನೆನಪಾದರೆ.. ನಿಮ್ಮಲ್ಲಿಯೂ ಒಂದು ಕಂಪನವನ್ನು ಹುಟ್ಟುಹಾಕಿದರೆ.. ಆಗ ಮಾತ್ರ.. ನೀವೂ ಇದನ್ನು 'ಅದೂ ನಾನೆ, ಇದೂ ನಾನೆ' ಅಂತ ಅಂದ್ಕೋಬಹುದು. ನಿಮ್ಮದೇ ಜಯಪರಾಜಯದ ಕಾವ್ಯವೂ ಹುಟ್ಟಬಹುದು. ನಿಜ ಹೇಳಲಾ, ಹಾಗೆ ಆದರೆ ಮಾತ್ರ ಒಂದು ಕಾವ್ಯ, ಒಂದು ಕತೆ ನಿಮ್ಮದಾಗೋದು. ಕತೆಯಷ್ಟೇ ಅಲ್ಲ, ಮನುಷ್ಯರೂ ನಿಮ್ಮವರಾಗೋದು ಅಂತಹ ಸಂವೇದನೆಯ ಮೂಲಕವೇ.

ಬರೀ ಕತೆ ಅಂದ್ರಾ? ಅದೂ ಸರಿ ಅನ್ನಿ, ಅಂತಹ ಸಂವೇದನೆ ಇಲ್ಲದೆ ಹೋದರೆ ಎಲ್ಲವೂ ಬರೀ ಕತೆಯೇ. ಕತೆ ಹೇಳ್ ಕತೆ ಹೇಳ್ ಕಾನ್‌ಬೆಟ್ಟಾ.. ನಾನೇನ್ ಹೇಳ್ಲೆ ಮಣ್ಣಹೆಟ್ಟೆ.

ಆಂ! 'ಅನುಭವದಿಂದ ಕಥನವೋ, ಕಥನದಿಂದ ಅನುಭವವೋ?' ಕೇಳಿದವರು ಯಾರು? ಹಾಂ, ನೀವಾ? ಅದು ಮಹತ್ವದ ಪ್ರಶ್ನೆ. ಉತ್ತರ ನನಗೂ ತಿಳಿದಿಲ್ಲ. ಬೀಜವೃಕ್ಷ ನ್ಯಾಯ ಅಂದ್ಕೋಬಹುದೇನೋ! ಹಿನ್ನೆಲೆ ತಿಳಿಯದಿದ್ದರೆ ವಿಸ್ಮಯವೊಂದೇ ಅನುಭವ, ತಿಳಿದರೆ ಆ ಹಿನ್ನೆಲೆಯೇ ಅನುಭವದ ಜನನಿ. ಹಿನ್ನೆಲೆ ಅಂದರೆ ಮತ್ತೆ ಯಾರದ್ದೋ ಅನುಭವದ ಕಥನ.

ನೀವು ನಕ್ಕಿದ್ದೇಕೆ ಅಂತ ನನಗೆ ಗೊತ್ತು. ಪಂಪಕಂಪನಾ ಕವಿ ಅನ್ನೋದು ಸರಿ. ಕಾವ್ಯದ ಕಥಾನಾಯಕಿಯೂ ಇರಬಹುದು. ಅವಳ ಹೆಸರು ಹೇಳಿಕೊಂಡು ನಿಮ್ಮ ಮುಂದೆ ನಿಂತಿರೋ ನಾನು ಯಾರು ಅಂತ ಕೇಳಿದರೆ ಇದೇನು ರಾಮಾಯಣ, ಅಂದ್ರಾ, ಆಯ್ತು, ಕವಿ ಪರಿಚಯದಿಂದಲೇ ಶುರು ಮಾಡೋಣ. ನೀವು ಆ ಜಯಪರಾಜಯ ಮಹಾಕಾವ್ಯವನ್ನು ಓದಿರಲಿಕ್ಕಿಲ್ಲ, ಹೆಸರು ಹೇಳದೆ ಒಬ್ಬ ಅಥವಾ.. ಯಾಕೆ ಯಾವಾಗಲೂ ಒಬ್ಬನನ್ನು ದೂರೋದು, ಒಬ್ಬಳು ಬಹಿರಂಗಪಡಿಸಿದ ಆ ಸಾರಾಂಶವನ್ನೂ ಪೂರ್ತಿಯಾಗಿ ಓದಿರಲಿಕ್ಕಿಲ್ಲ; ಆದರೆ ವದಂತಿಗಳನ್ನು ಕೇಳಿರ್ತೀರಿ; ಕಾವ್ಯದಲ್ಲಿ ಇರುವ, ಇಲ್ಲದಿರುವ ರೋಚಕ ವಿಷಯಗಳನ್ನು ಕೇಳಿರ್ತೀರಿ; ಅಜ್ಞಾನ, ಅಥವಾ ಅರೆಬರೆ ಜ್ಞಾನ ವದಂತಿಗಳನ್ನೇ ನಿಜವೆಂದು ನಂಬುವಂತೆ ಮಾಡುತ್ತವೆ ಎನ್ನುವ ಹಿನ್ನೆಲೆಯಲ್ಲಿ, ನನ್ನನ್ನು ಪರಿಚಯಿಸಿಕೊಳ್ಳುವ ಕೆಲಸವನ್ನು ಮಾಡಲೇಬೇಕಿದೆ. ರಕ್ತ–ಮಾಂಸ–ಮಜ್ಜೆಗಳ ಸಮೇತ ನಿಮ್ಮ ಮುಂದೆ ನಿಂತಿರುವ ನನ್ನ ಹೆಸರು ಡಾ. ಗಂಗಾದೇವಿ. ಉಳಿದೆಲ್ಲವೂ ಇಲ್ಲಿಯವರೆಗೆ ವದಂತಿಗಳೇ. ಪಂಪಕಂಪನಾ ನನ್ನ ಕಾವ್ಯನಾಮ.

ನೀವು ಕೇಳಿರೋ ವದಂತಿಗಳಲ್ಲಿ ಕೆಲವು ನಿಜ. ನಾನು ಓದಿರೋದು ಇದೇ ಮಂಡನ ಯುನಿವರ್ಸಿಟಿಯಲ್ಲಿ. 1996ರ ಬಯೋಟೆಕ್ ಬ್ಯಾಚ್. ಅಗೋ.. ಅಲ್ಲಿ.. ಬಾಲ್ಕನಿಯಲ್ಲಿ ಕುಳಿತಿರೋ ಕೆಲವರು ಕೈಯೆತ್ತಿ 'ನಮಗೆ ಪರಿಚಯ ಇದೆ' ಎಂದು ಕೂಗಿ ಹೇಳ್ತಿದಾರೆ ನೋಡಿ. ನಾನು ಹೇಳಿದ್ದು ಕಟ್ಟುಕಥೆಯಲ್ಲ ಎನ್ನುವುದಕ್ಕೆ ಅವರೇ ಸಾಕ್ಷಿ. ಈ ಗಂಗಾದೇವಿ ಅವರಿಗೆ ಮರೆತುಹೋಗಲು ಸಾಧ್ಯವೇ ಇಲ್ಲ. ಇಪ್ಪತ್ತು ಜನರ ಕ್ಲಾಸಿನಲ್ಲಿ ನಾನೊಬ್ಬಳೇ ಹೆಣ್ಣು. ಯಾರಿಗೆ ನೆನಪಿರೋದಿಲ್ಲ? ಆಗಷ್ಟೇ ತಮ್ಮ ಸಂಶೋಧನೆಗಳಿಂದ ಹೆಸರು ಗಳಿಸುತ್ತಿದ್ದ ಪ್ರೊ. ವಿದ್ಯಾಸಾಗರರ ಅಚ್ಚುಮೆಚ್ಚಿನ ವಿದ್ಯಾರ್ಥಿ ನಾನು.

ಓಹ್, ನೀವು.. ನೀವೂ ವಿದ್ಯಾಸಾಗರರ ಸ್ಟುಡೆಂಟಾ? ಇದ್ದಿರಬಹುದು. ಅದೇ ವರ್ಷ? ಆಗ ನಿಮ್ಮನ್ನು ನೋಡಿದ ನೆನಪಿಲ್ಲ. ಅಥವಾ ನೆನಪಿನ ಉಗ್ರಾಣದಲ್ಲಿ ಅಡಗಿರಬಹುದು. ಅಲ್ಲೀಗ ಇಣುಕಿನೋಡಲಿಕ್ಕೆ ಭಯ. ನಿಜವಾಗ್ಲೂ. ನನ್ನನ್ನು ನಂಬಿ. ಪ್ರೊ. ವಿದ್ಯಾಸಾಗರರನ್ನು ಕಂಡರೆ ನಿಮಗಿಂತ್ಲೂ ಹೆಚ್ಚು ಭಯ ನನಗೆ ಇತ್ತು. ಅವರ ಬುದ್ಧಿ ಚುರುಕು; ಜೊತೆಗೆ ಕಣ್ಣು, ಕೈ.. ಎಲ್ಲವೂ. ನಿಮ್ಮ ನಗೆ ಅರ್ಥ ಆಗ್ತಿದೆ. ನೀವು ಆಗ ಕೇಳಿದ, ಈಗ ಹೇಳದ ವದಂತಿಗಳೂ ನಿಜವೇ ಇರಬಹುದು. ನನ್ನ ಕಂಡರೆ ನಿಮಗೆ ಆಗ ಇದ್ದ ಸಿಟ್ಟು, ಮತ್ಸರವೂ ನೆನಪಿಗೆ ಬರ್ತಾ ಇದೆಯಾ? ನಿಮ್ಮ ನಗು ನೋಡಿದರೆ ಹಾಗೆಯೇ ಅನ್ನಿಸ್ತಿದೆ. ಈ ಪ್ರೊಫೆಸರ್ ಯಾಕೆ ಎಲ್ಲದಕ್ಕೂ ಅವಳಿಗೇ ಮಣೆ ಹಾಕ್ತಾರೆ? ಇನ್ನೂ ಏನೇನೋ ಹೇಳ್ಕೊಂಡಿರ್ತೀರಾ ಬಿಡಿ. ಅಲ್ವಾ ಸರ್! ತಮಾಷೆ ಮಾಡ್ದೆ, ಅಷ್ಟೆ. ಮತ್ಸರ ಆಗ ಇದ್ದರೂ ಈಗ ನೆನಪಿರಬೇಕು ಅಂತಿಲ್ಲ.

ಮುಂದೆ ಕುಳಿತ ಇವರಿಗೆ.. ಹೆಸರು ಏನು ಹೇಳಿದಿರಿ ಸರ್? ಓಹ್, ನೀವು ಪ್ರೊ. ವಿದ್ಯಾಸಾಗರರ ದೊಡ್ಡ ಅಭಿಮಾನಿಗಳು ಅಂತ ಕಾಣಿಸ್ತದೆ. ನೀವು ಹೇಳೋದು ನೂರಕ್ಕೆ ನೂರು ನಿಜ, ಪ್ರೊ. ವಿದ್ಯಾಸಾಗರರು ಒಳ್ಳೆಯ ವಿಜ್ಞಾನಿಗಳು, ಅವರು ಒಳ್ಳೆಯ ಗೈಡ್

ಕೂಡಾ ಹೌದು. ಇಲ್ಲಾ ಅನ್ನಲಿಕ್ಕೆ ಸಾಧ್ಯವೇ ಇಲ್ಲ. ಹೌದು, ಫಿಲಾಸಫಿ ಅವರಿಗೆ ಬಹಳ ಇಷ್ಟ

'ಸಂಸ್ಕಾರಿ?' ಹ್ಞ. ಅದೂ ನಿಜ ಇರಬಹುದು. ಬಹಿರಂಗದಲ್ಲಿ ಆಡುವ ಶಾಂತಿಮಂತ್ರಗಳು ಏಕಾಂತದಲ್ಲಿ ವಾಂಛೆಮಂತ್ರಗಳಾಗುತ್ತಿದ್ದವು ಎನ್ನೋದೂ ನಿಜ. ಉಳಿದವರಿಗೆ ಪಾಸಾಗಲು ಸಂಶೋಧನೆಯ ನಾಲ್ಕು ಪ್ರಕಟಣೆಗಳು ಸಾಕಾದ್ರೆ ನನಗೆ ಎಂಟು ಬೇಕಾಯ್ತು; ಎರಡು ವರ್ಷ ಹೆಚ್ಚಿಗೆ ಬೇಕಾಯ್ತು. ಇದು ಇರೋ ವಿಷಯ. ನನ್ನ ನಂತರದ ವಿದ್ಯಾರ್ಥಿನಿಯರನ್ನೂ ಕೇಳಿ ಬೇಕಿದ್ರೆ. ಬೆಳಕಿಗೆ ಬಹಿಷ್ಕಾರ ಬೇಡ; ಆದರೆ ಜ್ಞಾನಿಗಳ ಖ್ಯಾತಿ ಮುಕ್ಕಾಗದಂತೆ ಬೆಳಗಿಸಲು ಉರಿದು ಕರಕಲಾದ ಎಣ್ಣೆ-ಬತ್ತಿಗಳ ಲೆಕ್ಕ ಬೇಡ ಎಂದರೆ ಹೇಗೆ?

ಒಂದು ಮಾತು ನೆನಪಿರಲಿ, ಆ ಅನಾಮಧೇಯ ವ್ಯಕ್ತಿ ಬಹಿರಂಗಪಡಿಸಿದ್ದು ಮಹಾಕಾವ್ಯದ ಒಂದು ಭಾಗ ಮಾತ್ರ. ನೀವು ಪೂರ್ತಿ ಓದಿದ ನಂತರ ಹೇಳಿ. ಈ ಮಹಾಕಾವ್ಯ ಬರೆದದ್ದೇ ಅಡಗಿರುವ ಗುಟ್ಟುಗಳು ಹೊರಬರಲಿ, ಕರಕಲಾದ ಎಣ್ಣೆ-ಬತ್ತಿಗಳ ಲೆಕ್ಕ ಸಿಗಲಿ ಎನ್ನುವ ಕಾರಣದಿಂದ. ಕಾವ್ಯದಲ್ಲಿ ಪಂಪಕಂಪನಾ ಬಿತ್ತಿದ್ದ ಬೀಜಗಳೂ ಇಂಥವೇ. ಮರವಾಗುವುದು ಬೀಜದ ಮಹಾತ್ವಾಕಾಂಕ್ಷೆ. ನಿಮ್ಮ ಅನುಭವ ಲೋಕಾಂತವಾಗಲು ಚುಟುಕುಗಳಾದರೂ ಸಾಕು. ಈಗ 'ಜಯಪರಾಜಯ' ಬಂದ ಮೇಲೆ ಹೊರಬಂದಿರೋ, ಇನ್ನೂ ಹೊರಗೆ ಬರ್ತಿರೋ ಪ್ರಕರಣಗಳನ್ನು, ದಾರುಣ ಕತೆಗಳನ್ನು ನೋಡಿದರೆ, ಜಯಪರಾಜಯಕ್ಕೆ ಸೀಕ್ವೆಲ್ ಬೇಕಂತ ಅನ್ನಿಸ್ತಿದೆ.

ಹಾಗೇನಿಲ್ಲ. ಈ ಪಂಪಕಂಪನಾ, ವಿದ್ಯಾಸಾಗರರು ಬರೀ ಹೆಸರುಗಳು, ಬಿತ್ತಿದ್ದ ಬೀಜಗಳಂತೆ ಪ್ರತಿಮೆಗಳು – ಮೆಟಾಫರ್ ಮಾತ್ರ. ನೀವು ನಿಮ್ಮ ಅನುಭವಕ್ಕೆ ತಕ್ಕ ಹೆಸರು ಸೇರಿಸಿಕೊಳ್ಳಬಹುದು. ನನ್ನ ಜಯಪರಾಜಯದ ಹಾಗೆ ನಿಮ್ಮದೂ ಬರಲಿ.

ಮುಂದೆ ಕುಳಿತ ಇವರಿಗೆ ಏನೋ ಸಮಸ್ಯೆ. ಏನು ಮ್ಯಾಡಮ್? ಗಟ್ಟಿಯಾಗಿ ಕೇಳಿ, ಸಂಕೋಚ ಬೇಡವೇ ಬೇಡ. ನಾವೆಲ್ಲರೂ ಇಲ್ಲಿ ಸಮಾನರು. ಪಂಪಕಂಪನಾ ನಿಮ್ಮದೇ ಪ್ರತಿಬಿಂಬ. ಹೇಳಿ.

ಓಹ್, ನೀವು ಹೇಳೋದೂ ನಿಜ. ನಾನ್ಯಾಕೆ ಕಾಂಪ್ರಮೈಸ್ ಮಾಡ್ಕೋಬೇಕಿತ್ತು? ಹಾಗೆ ಮಾಡಿಕೊಂಡದ್ದು ನಂದೇ ಆಯ್ಕೆ ಅಂತ. ಈ ಮಾತು ಮೊದಲೂ ಕೇಳಿದ್ದೆ – ಕಾಂಪ್ರಮೈಸ್ ಆಯ್ಕೆಯಾಗೋದು ಹೇಗೆ ಮ್ಯಾಡಮ್? ಸರಿ, ನೀವು ಹೇಳಿದಂತೆ, ನನಗೆ ಆಗ ಇದ್ದ "ಆಯ್ಕೆ"ಗಳನ್ನೇ ನೋಡೋಣ – ಪ್ರೊಫೆಸರ್ ಮೇಲೆ ಕಂಪ್ಲೇಂಟ್ ಮಾಡಬಹುದಿತ್ತು, ಇಲ್ಲಾ ಪಿಎಚ್‌ಡಿಯನ್ನು ಅರ್ಧಕ್ಕೇ ನಿಲ್ಲಿಸಿ ಹೋಗಬಹುದಿತ್ತು. ಗಲಾಟೆ ಮಾಡಬಹುದಿತ್ತು. ಆತ್ಮಹತ್ಯೆ ಮಾಡಿಕೊಳ್ಳಬಹುದಿತ್ತು. ಅವರನ್ನು ಕತ್ತು ಹಿಸುಕಿ ಸಾಯಿಸಲೂಬಹುದಿತ್ತು... ಇನ್ನೂ ಹಲವು. ನೀವು ನಂಬಿ ಅಥವಾ ಬಿಡಿ, ಈ ಎಲ್ಲ ಆಯ್ಕೆಗಳೂ ಜಯಪರಾಜಯದಲ್ಲಿ ಕಾಣಿಸಿಕೊಂಡಿವೆ. ಏಕಕಾಲದಲ್ಲಿ ಎಲ್ಲ ಆಯ್ಕೆಗಳನ್ನು ಒಬ್ಬ ವ್ಯಕ್ತಿ ಮಾಡಲಿಕ್ಕೆ ಆಗದಿದ್ರೂ ಯಾರೂ ಮಾಡದ ಆಯ್ಕೆಗಳಿಲ್ಲ. ಅವು ಕಥಾನಾಯಕಿ

ಪಂಪಕಂಪನಾಳ ಆಯ್ಕೆಯಲ್ಲ. ಆದರೆ ಉಳಿದ ಪಾತ್ರಗಳೂ ನಾನೇ ಆಗಿರುವುದರಿಂದ ಆ ಆಯ್ಕೆಗಳು ನನ್ನ ಅನುಭವಕ್ಕೂ ಬಂದಿವೆ.

ಹಾಗೇನಿಲ್ಲ, ಹೆಣ್ಣಿಗೆ ಆಗುತ್ತಿರುವ ಅನ್ಯಾಯದ ವಿರುದ್ಧ ದನಿ ಎತ್ತುವ, ನನ್ನ ಕಾವ್ಯವನ್ನು ಸುಡಲು ಸಿದ್ಧನಾದ ರಾಜನೆದುರು, 'ಪಂಪಕಂಪನಾಳ ಇಡೀ ಕಾವ್ಯ ನನ್ನ ಕಂಠಸ್ಥವಾಗಿದೆ, ಕತ್ತರಿಸು ನನ್ನ ಕಂಠ' ಎಂದ ಸಾಹಸಿ ಮಾಧವಾಚಾರ್ಯರದೂ ಆಯ್ಕೆಯೇ; ಅವರೂ ಮಂಡನ ಮಠದಲ್ಲಿ ಗುರು ವಿದ್ಯಾಸಾಗರರ ಉತ್ತರಾಧಿಕಾರಿಗಳೇ. 'ಹೆಂಗಸು ಮುಕುಟ ಧರಿಸಿದರೆ ದೇವರು ನಮ್ಮನ್ನು ಶಿಕ್ಷಿಸುತ್ತಾನೆ' ಎಂದ ಮೂರು ಗಂಡುಮಕ್ಕಳನ್ನು ರಾಜ್ಯದಿಂದ ಹೊರಗಟ್ಟುವ ಬುಕ್ಕರಾಯನದ್ದೂ ಆಯ್ಕೆಯೇ. ಒಳ್ಳೆಯದನ್ನೂ ಇಂತಹ ತಂಪು ಹೊತ್ತಿನಲ್ಲಿ ನೆನಸಿಕೊಳ್ಳಬೇಕು, ಅಲ್ಲವಾ? ಆಯ್ಕೆಗಳು ಎಲ್ಲರಿಗೂ, ಎಲ್ಲ ಕಾಲದಲ್ಲೂ ಇವೆ. ಜಯಪರಾಜಯ ಎಲ್ಲವನ್ನು ದಾಖಲಿಸುತ್ತದೆ. ಕೆಲವೊಂದು ಆಯ್ಕೆಗಳು ಅಸಹಾಯಕತೆಯನ್ನು, ಅಮಾನುಷತೆಯನ್ನು, ಬರ್ಬರತೆಯನ್ನು ಎತ್ತಿತೋರಿಸುತ್ತವೆ. ಹಾಗಾಗಿ ಅವುಗಳನ್ನು ಆಯ್ಕೆ ಎನ್ನುವುದಕ್ಕೆ ನಾಚಿಕೆಯಾಗುತ್ತದೆ.

ಮೌನವನ್ನು ಒಪ್ಪಿಗೆ ಎಂದ ಮಹಾನುಭಾವರು ಯಾರು? ನೀವಾ ಸರ್? ಅಲ್ಲವಾ? ಇರಲಿ ಬಿಡಿ. ಮೌನ ಕೆಲವೊಮ್ಮೆ ಅರಚಲೂ ಆಗದ ಅಸಹಾಯಕತೆಯ ಲಕ್ಷಣ, ಬೀಭತ್ಸ ಸ್ಥಿತಿಯ ಮೊದಲ ಹಂತ. ಅಥವಾ ಪ್ರತಿಭಟನೆಯ ಮೊದಲ ಹೆಜ್ಜೆ. ಅಲ್ಲವಾದರೆ.. ನೀವೀಗ ಮೌನವಾಗಿರೋದೂ ಒಪ್ಪಿಗೆಯೇ ಅಂತ ಆಯ್ತು. ಅಲ್ಲವಾ?

ಮ್ಯಾಡಮ್, ಮತ್ತೆ ನಿಮ್ಮ ಪ್ರಶ್ನೆಗೆ ಬಂದೆ. ಇಪ್ಪತ್ತು ವಿದ್ಯಾರ್ಥಿಗಳಲ್ಲಿ ಒಬ್ಬಳೇ ಹುಡುಗಿ ಇದ್ದದ್ದೇ ಹಲವರ ಇಂತಹ ಅನಿವಾರ್ಯ "ಆಯ್ಕೆ"ಗಳ ಕಾರಣದಿಂದ. ಈಗ ಹೇಳಿ ಮ್ಯಾಡಂ, ನೀವು ಹೇಳ್ತಿದ್ದುದು, ಅಥವಾ ನಿಮ್ಮ ಮನಸ್ಸಿನಲ್ಲಿ ಬಂದಿದ್ದು ಆಯ್ಕೆಯಾ? ನನ್ನ ಅನುಭವ ಮತ್ತು ಕಾವ್ಯದ ಉದ್ದೇಶವನ್ನು, ನನ್ನನ್ನು ಮತ್ತು ಕಾವ್ಯದ ಪಾತ್ರಗಳನ್ನು ಒಟ್ಟಿಗೆ ಕೂಡಿಸಿ ನಿಮ್ಮನ್ನು ಗೊಂದಲದಲ್ಲಿ ಕೆಡವಿದೆನಾ ಅಂತ.. ಒಂದು ಅರ್ಥವಾದರೆ ಇನ್ನೊಂದೂ ಅರ್ಥವಾಗುವುದು ಸುಲಭ ಅಂತ. ಅಷ್ಟೆ.

## –2–

ಕ್ಷಮಿಸಿ ಸರ್, ಕೆಲವು ಸಲಹೆಗಳು ನಮ್ಮನ್ನು ಭಾವುಕರನ್ನಾಗಿ ಮಾಡುತ್ತವೆ. ಈ ಮುಖಾಮುಖಿಯನ್ನು ಮತ್ತೆ ಹಳಿಹತ್ತಿಸಿದ್ದಕ್ಕೆ ಥ್ಯಾಂಕ್ಸ್. ನಿಮ್ಮ ಪ್ರಶ್ನೆ ತುಂಬ ಮಹತ್ವದ್ದು. ಯಾಕೆ ಈ ಮಹಾಕಾವ್ಯ? ಕಥನಗಳಿಗೆ, ಕಾವ್ಯಗಳಿಗೆ ಈ ಕಾಲದಲ್ಲಿ ನಿಜಕ್ಕೂ ಅಷ್ಟು ಮಹತ್ವವಿದೆಯೆ? ದೊಡ್ಡ ಪ್ರಶ್ನೆ ಅದು. ಉತ್ತರ ನಿಮಗೂ ಗೊತ್ತಿರುವಂಥದ್ದೇ.

"You are what you eat" ಅಂತಾರಲ್ಲ, ಅದು ದೇಹಕ್ಕೆ. You are what you read ಅನ್ನೋಳು ನಾನು. ನಮ್ಮ ದಿನನಿತ್ಯದ ನಡವಳಿಕೆಗಳನ್ನು.. ಕೆಲವೊಮ್ಮೆ ನಾವು ಏನು ತಿನ್ನಬೇಕು ಎಂದು ನಿರ್ಧರಿಸೋದೂ ಇಂತಹ ಕಥನಗಳೇ ಸರ್. ಯಾವುದು ತಪ್ಪು ಯಾವುದು ಸರಿ, ಆಳುವವರು ಯಾರು ಆಳಿಸಿಕೊಳ್ಳುವವರು ಯಾರು? ನಾವು

ಬಳಸುವ ಶಬ್ದ, ಉಪಮೆ, ಅಲಂಕಾರಗಳು; ನಮ್ಮ ನಂಬಿಕೆ, ದೇವರು; ನಾವು ಪ್ರಾಣ ಕೊಡಲು ಸಿದ್ಧರಾಗುವ ಸಿದ್ಧಾಂತ–ಇತಿಹಾಸ.. ರಾಜನಿಷ್ಠೆ, ದೇಶಭಕ್ತಿ.. ಇವೆಲ್ಲ ಬಂದಿರೋದು ಕಥನಗಳಿಂದಲೇ ಅಲ್ವಾ? ಅದಕ್ಕಾಗಿಯೇ ರಾಜರುಗಳು, ಈಗ ರಾಜಕೀಯ ಪಕ್ಷಗಳು, ಖಾಸಗಿ ಕಂಪನಿಗಳು ಕೂಡ right narrativeಗಾಗಿ ಅಷ್ಟು ಹಣ ಖರ್ಚುಮಾಡ್ತಿರೋದು.

ನೀವೇ ವಿಚಾರಮಾಡಿ ಸರ್, ಮಹಾಕಾವ್ಯಗಳನ್ನು ಮಹಿಳೆಯರೇ ಬರೆದಿದ್ದರೆ.. ಕಥೆ ಅದೇ ಇದ್ದರೂ, narrative ಹೇಗಿರಬಹುದಿತ್ತು? ಜಯಪರಾಜಯವನ್ನು ಗುರು ವಿದ್ಯಾಸಾಗರರೇ ಬರೆದಿದ್ದರೆ ಏನಾಗುತ್ತಿತ್ತು. ಉದಾಹರಣೆಗಳು ನಿಮಗೆ ತಿಳಿದೇ ಇವೆ. ಉಳಿದೆಲ್ಲ ಆದರ್ಶಗಳಂತೆ ಸಮಾನತೆಯೂ ನಿತ್ಯದ ಆಚರಣೆಯಲ್ಲಿ ಬರೋ ಮೊದಲು ಅದನ್ನು ಒಪ್ಪಿಕೊಳ್ಳುವ narrativeನ ಅಗತ್ಯ ಇದೆ. ಆಗದಿದ್ರೆ ಬದಲಿಸುವ ಜವಾಬ್ದಾರಿಯೂ ನಮ್ಮ ಮೇಲೆಯೇ ಇದೆ.

ಏನಂದ್ರಿ? ಸಂವಿಧಾನ.. ಹ್ಹಾಂ.. ಅದು ಕೋರ್ಟು ಕಚೇರಿಗೆ ಸರಿ ಸರ್; ನಮ್ಮ ಮನಸ್ಸಿನಲ್ಲಿ ಇರುವ narrativeಗೆ ಸಂವಿಧಾನ ಸರಿಹೊಂದದೇ ಹೋದರೆ? ಕಾನೂನುಗಳು ತೀರ ಅಗತ್ಯವಿದ್ದುದನ್ನು ಮಾತ್ರ ಹೇಳುತ್ತವೆ. ಬಳಕೆಯ ಹಾದಿಯನ್ನು ಬಿಡೋದು.. ಅದು ಸರಿಯಲ್ಲ ಅಂತ ತಿಳಿದರೂ.. ಕಷ್ಟ. ಪ್ರತಿ ಹೆಜ್ಜೆಗೂ ಸಂಶಯ, ಹೆದರಿಕೆ ಕಾಡುತ್ತದೆ. "ಕಾನೂನು ವಿಧಿಸಿದ ಎಚ್ಚರಿಕೆ"ಗಿಂತಲೂ ಅರೆ ನಿಮಿಷದ ಜಾಹಿರಾತುಗಳು ಮನಸ್ಸಿನಲ್ಲಿ ಉಳಿದು, ಬೆಳೆಯುತ್ತವೆ. ನನ್ನ ಕಾವ್ಯವೂ ಅದೇ ಸಂಗತಿಯನ್ನು – ಸರಿಯಾದ narrative ಇಲ್ಲದೆ ಸೊರಗಿ ಅಲ್ಪಾಯುವಾದ ಸ್ತ್ರೀ ಸಮಾನತೆಯನ್ನು ಹೇಳ್ತದೆ. ಪೂರ್ತಿಯಾಗಿ ಸೋತಿದೆ ಅಂತ ಹೇಳಲಾಗದು, ಆದರೂ..

ಸರ್, ಈ ವದಂತಿಗಳು ವೈರಸ್ ಇದ್ದ ಹಾಗೆ ಅಂದ್ರಾ? ತಮ್ಮಷ್ಟಕ್ಕೆ ತಾವು ಬೇಕುಬೇಕಾದ ಹಾಗೆ ಬದಲಾಗುತ್ತವೆ ಅಂತಾನಾ? ಓಹ್, ಕಂಪ್ಯೂಟರ್ ವೈರಸ್ಸಾ? ಹಾಗಾದರೆ ಮಹಾಕಾವ್ಯಗಳ ಈ narrative ಅನ್ನೋದು ಆಪರೇಟಿಂಗ್ ಸಿಸ್ಟಮ್ ಇದ್ದ ಹಾಗೆ ಸರ್, ದೇಹ ಎನ್ನುವ ಈ ಹಾರ್ಡ್‌ವೇರಿಗೆ ಏನು ಹೇಳೋದಿದ್ರೂ.. ಯಾವ ಸಂವೇದನೆಯನ್ನು ಕಲಿಸುವುದಿದ್ದರೂ.. ಕಥನಗಳ ಮೂಲಕವೇ ಆಗಬೇಕು. ಅವುಗಳ ಸಾರ ಆಳದಲ್ಲಿ ಇಂಗಬೇಕು. ಅಲ್ಲಿಯವರೆಗೆ ಜಯಪರಾಜಯಗಳು ಬರುತ್ತಲೇ ಇರಬೇಕು. narrative ಬದಲಾಗುವವರೆಗೆ ಸಮಾನತೆ ತೋರಿಕೆಗೆ ಮಾತ್ರ. ವದಂತಿಗಳು ಹಬ್ಬೋದೂ, ಅದಕ್ಕೆ ನಾವು ಪ್ರತಿಕ್ರಿಯಿಸೋದೂ ಈ ಕಥನಗಳ ಹಿನ್ನೆಲೆಯಲ್ಲೇ.

ನಿಮ್ಮ ಅಪನಂಬಿಕೆ ಬಹಳ ಆಳವಾದದ್ದು ಸರ್. ಈಗ, ಇಷ್ಟು ದೊಡ್ಡ ಕಾವ್ಯವನ್ನು ಜನ ಓದ್ತಾರೆಯೇ ಅಂತ ಕೇಳ್ತಿದೀರಿ. ನಿಜ ಹೇಳಬೇಕೆಂದರೆ ಅದರ ಕಾಳಜಿ ನನಗಿಲ್ಲ. ಯಾವ ಕಥನಕಾರನಿಗೂ, ಕಥನಕಾರಳಿಗೂ ಅದು ಇರಬಾರದು ಅಂತೀನಿ. ಇವೂ ಒಂಥರಾ ಮಂತ್ರದ ಬೀಜಗಳೇ. ಕೆಲವೊಂದು ಬೀಜಗಳು ವ್ಯರ್ಥವಾಗಿ ಹೋಗುತ್ತವೆ ಅಂದಮಾತ್ರಕ್ಕೆ ಅವುಗಳ ಜೀವಂತಿಕೆ ಕಡಿಮೆಯಾಗಿದೆ ಅಂತ ಅಲ್ಲ. ಒಂದಲ್ಲ ಒಂದು ದಿನ.. ಒಂದಲ್ಲ ಒಂದು ಬೀಜ.. ಮೊಳೆಯುತ್ತದೆ ಎನ್ನುವ ಭರವಸೆ ನನ್ನದು.

ಇರಲಿ ಬಿಡಿ. ಎಷ್ಟು ಜನ ಇಲ್ಲಿಯವರೆಗಿನ ಮಹಾಕಾವ್ಯಗಳನ್ನು ಇಡಿಯಾಗಿ ಓದಿದಾರೆ ಸರ್? ಮಹಾಕಾವ್ಯಗಳನ್ನೂ ಸಂವಿಧಾನದ ನಿಯಮಗಳಂತೆ, ಅನುಕೂಲಕ್ಕೆ ತಕ್ಕಂತೆ, ಎಷ್ಟು ಬೇಕೋ ಅಷ್ಟನ್ನು ಓದಿ, ಬಳಸಿಕೊಳ್ಳಲಿ.

ಹೌದು, ನೀವು ಹೇಳೋದು ನಿಜ. ಒಂದು ಮಹಾಕಾವ್ಯವನ್ನು ಜೀವಂತವಾಗಿಡೋದಕ್ಕೆ ಯಾರೋ ಓದಿಹೇಳಿದ ತುಂಡುತುಂಡು ಮಾತುಗಳೇ ಸಾಕು. ಇಂತಹ ತುಂಡುತುಂಡು ಮಾತುಗಳೇ ಹೆಚ್ಚು ದೂರ ಸಾಗೋದು. 'ಯುದ್ಧ ಮಾಡಿ ನಿನ್ನವರೆಲ್ಲ ಹಾಳಾಗಿಹೋದರು.' ಎಂದು ಹೇಳಲು ಹುಟ್ಟಿದ ಮಹಾಕಾವ್ಯ, 'ನೀನು ಯುದ್ಧ ಮಾಡು, ಎಲ್ಲದಕ್ಕೂ ನಾನಿದ್ದೇನೆ' ಎಂದು ಭರವಸೆ ಕೊಡುವವರೆಗೆ ಹೋಗಿದೆಯಲ್ಲ ಸರ್. ಹಾಗೆಯೇ ಇದು. ಅದು ದುರಾದೃಷ್ಟವೂ ಹೌದು, ಕೆಲವರ ಸ್ವಾರ್ಥವೂ ಹೌದು. ನಿಮ್ಮ ಕಾಳಜಿ ನನ್ನದೂ. ಈಗ ಈ ಮಹಾಕಾವ್ಯದ ಸಾರಾಂಶ, ಅನಾಮಧೇಯವಾಗಿ.. ತುಂಡುತುಂಡಾಗಿ.. ಬೀದಿಬದಿಯ ಭಾಷೆಯಲ್ಲಿ ಯಾಕೆ ಬಿಡುಗಡೆ ಆಯಿತು ಎನ್ನುವ ಪ್ರಶ್ನೆಗೂ ಉತ್ತರ ಸಿಕ್ಕಿರಬಹುದಲ್ವಾ?

ಹ್ಹ.. ಹ್ಹ.. ಇಲ್ಲ ಸರ್, ಗಿಮಿಕ್‌ಗಾಗಿ ಅಲ್ಲ. ಆಧಾರಕ್ಕಾಗಿ ಕಾವ್ಯ; ಸಂವಹನಕ್ಕಾಗಿ ಆಡುಭಾಷೆಯಲ್ಲಿ ಸಾರಾಂಶ, ತುಣುಕುಗಳು. ಕುತೂಹಲ ಹುಟ್ಟಿ ಓದಲಿ ಅಂತ.

–3–

ಹ್ಞಾಂ. ಮತ್ತೆ ನನ್ನ ವಿಷಯಕ್ಕೆ.. ಅದೇ.. ಯಾರು ಈ ಗಂಗಾದೇವಿ ಎನ್ನುವ ವಿಷಯಕ್ಕೆ.. ಬಂದೆ. ವಿಷಯಾಂತರಕ್ಕೆ ಕ್ಷಮೆ ಇರಲಿ.

ಹಾಗೆ, ಪಿಎಚ್‌ಡಿ ಮುಗಿಸಿದ ನಂತರ ನನ್ನ ಸಂಶೋಧನೆಯನ್ನು ಆಧರಿಸಿ ಹುಟ್ಟುಹಾಕಿದ ಕಂಪನಿ ಬಿಜ್ನಾಗ್ ಬಯೋಟೆಕ್ನಾಲಜೀಸ್. ಯಾರಿದೀರಾ ಇಲ್ಲಿ? ಒಂದು, ಎರಡು, ಮೂರು.. ಅಯ್ಯೋ, ಇಷ್ಟು ಜನ. ಏನು, ಆಫೀಸಿಗೆ ರಜಾನಾ ಇವತ್ತು? ಥ್ಯಾಂಕ್ಸ್, ನಿಮ್ಮ ಉಳಿದೆಲ್ಲ ಜಂಜಾಟಗಳ ನಡುವೆ ಈ ಗಂಗಾದೇವಿಯ ಕತೆ ತಿಳಿದುಕೊಳ್ಳುವುದಕ್ಕೆ ಇಲ್ಲಿಗೆ ಬಂದಿದ್ದೀರಿ ಅಂದ್ರೆ ನನಗೆ ತುಂಬಾ ಹೆಮ್ಮೆ. ಮೂರು ಜನರು – ನಾನು, HK ಮತ್ತು BK ಕಟ್ಟಿದ ಕಂಪನಿ ಬೆಳೆದು ಮೂರು ಸಾವಿರ ಜನರ ಕಂಪನಿ.. ಅಲ್ಲಿ ನಾನು ಯಾವಾಗಲೂ ನಂಬರ್ 2, ಅಂದರೆ COO, Chief Operating Officer.

ಆಗ ಅದಕ್ಕೂ ಎಷ್ಟೊಂದು ಜನರ ತಕರಾರು.. 24/7 ಕೆಲಸ ಮಾಡಿದರೂ.. ಹೆಣ್ಣುಹೆಂಗಸು COO ಯಾಕೆ? ಒಬ್ಬ ಮಹಾನುಭಾವರ ಮಾತು– 'COO ಸ್ಥಾನವನ್ನು ಹೆಂಗಸಿಗೇ ಮೀಸಲಿಡಬೇಕು. ಅವರಿಗೆ ಮನೆ ನಿಭಾಯಿಸಿ ಗೊತ್ತು. CEOನಂತೆ ಉತ್ಸವ ಮೂರ್ತಿಗಳಲ್ಲ.' ಪ್ರೋತ್ಸಾಹವೋ, ಕೊಂಕು ನುಡಿಯೋ ತಿಳಿಯದಂತಹ ಮಾತು.. ಇನ್ನೂ ಶೂಲದಂತೆ ತಿವಿಯುತ್ತಿದೆ. ರಾತ್ರಿಯ ಔತಣಕೂಟಗಳಿಗೆ ಹೋಗದಿದ್ದರೆ ಒಂದು ಮಾತು, ಹೋದರೆ ಇನ್ನೊಂದು. ಏನೇನೋ ಅಡ್ಡ ಹೆಸರುಗಳು;

ಗಟ್ಟಿಯಾಗಿ ಹೇಳಿ – ಹೌದು – 'ಸೂಪರ್ ವುಮನ್', ಮತ್ತೆ .. `she-EO.!', 'ನಿರ್ದೇಶಕ ಮಂಡಳಿಯಲ್ಲಿ ಇರುವ ಒಂದೇ ಗಂಡು'.

ನನಗೆ ಗೊತ್ತು.. ಇನ್ನೂ ಇವೆ, ಅದನ್ನು ನೀವಿಲ್ಲಿ ಹೇಳೋದಿಲ್ಲ ಅಂತ. ನಾನೂ ಹೇಳಲಿಕ್ಕೆ ಹೋಗುವುದಿಲ್ಲ. ಇವುಗಳಿಗೆ ಏನು ಅರ್ಥ ಎಂದು ವಿವರಿಸುವುದಕ್ಕೂ ಹೋಗುವುದಿಲ್ಲ. ಕೆಲವೊಂದನ್ನು ಕೇಳಿಸಿಕೊಳ್ಳದ ಹಾಗಿರಬೇಕು ಅಂತ ಅರ್ಥ ಆಗಿದ್ದೇ ಆವಾಗ. ನನ್ನ ನಿರ್ಧಾರಗಳು ಸೋತರೆ, ಕಾರಣ ಅದೇ ಇರ್ತಿತ್ತು. ಗಾಜಿನ ಛಾವಣಿ ದಾಟಿ ಇನ್ನೂ ಮೇಲೇರೋದಕ್ಕೆ ಸಾಧ್ಯ ಆಗದು ಎನ್ನುವುದಕ್ಕಿಂತ ಅದನ್ನು ಕಟ್ಟಿರೋ narrativeನ್ನು ಸರಿಮಾಡಬೇಕು, ವ್ಯಾಧಿಯ ಮೂಲಕ್ಕೇ ಮದ್ದರೆಯಬೇಕು ಎನ್ನುವ ನನ್ನೊಳಗಿನ ಪಂಪಕಂಪನಾ ಗೊಣಗತೊಡಗಿದ್ದರಿಂದ, ಇಲ್ಲಿಗೆ.. ಎಲ್ಲ ಶುರುವಾದ ಗ್ರೌಂಡ್ ಝೀರೋ.. ಅದೇ ಮಂಡನ ವಿಶ್ವವಿದ್ಯಾಲಯಕ್ಕೆ ಬರುವ ತೀರ್ಮಾನ ಮಾಡಿದೆ; ಉಳಿದದ್ದೆಲ್ಲಾ ಇತಿಹಾಸ.. ಇತಿಹಾಸ ಮಾಡಿದ ಕಾವ್ಯ.. ಕಾಲದ ಹರಿವನ್ನು ಬದಲಾಯಿಸಿದ ಕತೆ. ಜಯಪರಾಜಯ ಹುಟ್ಟಿದ್ದು ಹೀಗೆ.

ಹ್ಹ..ಹ್ಹ.. ಹ್ಹಾ.. ನಿಮ್ಮ ಊಹೆ ನೂರಕ್ಕೆ ನೂರು ನಿಜ. ಕಾವ್ಯದ ಪಂಪಕಂಪನಾ ಬದುಕಿದ 247 ಸಂಖ್ಯೆ 24/7 COOನಿಂದಲೇ ಬಂದಿದ್ದು. ಕವಿ ಪಂಪಕಂಪನಾ ಇಡೀ ದಿನ ಎಚ್ಚರವಿದ್ದಳು ಎನ್ನೋದಕ್ಕೆ ಅದು ಸಂಕೇತ. ಹಾಗಂತ HK ಮತ್ತು BK ಅಂದರೆ ಹುಕ್ಕ ರಾಯ ಮತ್ತು ಬುಕ್ಕ ರಾಯ.. ಛೆ.. ಛೆ.. ಅದು ಉದ್ದೇಶ ಅಲ್ಲ. ಅದು.. ಹಾಂ.. ಓದುಗರ ನಿರ್ಧಾರಕ್ಕೆ ಬಿಟ್ಟಿದ್ದು.

ಮತ್ತೇನಾದರೂ ಪ್ರಶ್ನೆ? ನಾನು ಹೇಳಬೇಕಾದುದೆಲ್ಲವೂ ಜಯಪರಾಜಯದಲ್ಲಿವೆ. ಈಗ.. ನಿಮ್ಮ ಪ್ರಶ್ನೆಗೆ ಉತ್ತರ ಮಾತ್ರ,

ಓಹ್, ಅದು ಮುಖ್ಯ ಪ್ರಶ್ನೆ. ಮನಸ್ಸಿನಲ್ಲಿ ಇಟ್ಟುಕೊಳ್ಳದೇ ಅದನ್ನು ಕೇಳಿದ್ದಕ್ಕೆ ಥ್ಯಾಂಕ್ಸ್. ಪ್ರಶ್ನೆ ಕೇಳದೆ ಜ್ಞಾನ ಹುಟ್ಟುವುದಾದರೂ ಹೇಗೆ? 'ಹೆಣ್ಣು-ಗಂಡು ಒಂದೇ ಏನು' ಎಂತಹ ಪ್ರಶ್ನೆ. ಈ ಕಾವ್ಯದಲ್ಲಿ ಬರುವ ಮುಖ್ಯ ಮಾತನ್ನು ಪ್ರಶ್ನಿಸಿದ್ದಕ್ಕೆ. ಯಾರೂ ಯಾವ ಕೆಲಸವನ್ನೂ ಮಾಡಬಹುದು. ಗಂಡಿಗೆ ಮೀಸಲಾದ ಕೆಲಸ ಅಂತೇನಿಲ್ಲ ಎಂದು ಪಂಪಕಂಪನಾ ಹೇಳುವುದಿದೆ. ಬರೀ ಹೇಳುವುದಲ್ಲ, ಇಡೀ ಜಯಪರಾಜಯದ ಮಂತ್ರ ಅದು. ಅಲ್ಲಿಂದಲೇ ಬಂತಲ್ವಾ ನಿಮ್ಮ ಪ್ರಶ್ನೆ? ಇಡೀ ಕಾವ್ಯವನ್ನು ನಾಲ್ಕು ಶಬ್ದಗಳಲ್ಲಿ ನೀವು ಪ್ರಶ್ನಿಸುತ್ತಿರುವುದನ್ನು ನೋಡಿದರೆ, ಅದು ನಿಮ್ಮ ಕಿವಿಯಲ್ಲಿ ಪ್ರತಿಮಂತ್ರದಂತೆ ಗುಣುಗುಣಿಸುತ್ತಿರಬೇಕು, ಅಲ್ವಾ ಸರ್?

ಹೆಣ್ಣು, ಗಂಡು ಶಬ್ದಗಳು ಹುಟ್ಟಿಕೊಂಡ ಕ್ಷಣವೇ ಅವೆರಡೂ ಒಂದಲ್ಲ, ಎರಡಕ್ಕೂ ಅವುಗಳದ್ದೇ ಆದ ಅಸ್ತಿತ್ವ ಇದೆ ಎನ್ನುವ ತೀರ್ಮಾನ ಆಗಿಹೋಗಿದೆ. ಇಲ್ಲಿಯ ಪ್ರಶ್ನೆ ಅವುಗಳ ಅಭಿನ್ನತೆಯಲ್ಲ. ಬೇರೆಬೇರೆ ಎಂದರೆ ಊಟ ಮಾಡೋದಕ್ಕೆ ಒಬ್ಬರು ಎಡಗೈ, ಇನ್ನೊಬ್ಬರು ಬಲಗೈ ಉಪಯೋಗಿಸಬೇಕು ಅಂತ ಹೇಳೋದಿಲ್ಲ ಅಲ್ವಾ? ಹಾಗೆಯೇ

ಯಾರು ಏನನ್ನು ಮಾಡಬೇಕು, ಮಾಡಬಾರದು ಎನ್ನೋದನ್ನು ಅವರವರೇ ನಿರ್ಧರಿಸ್ಕೋಬಹುದು. ಅಲ್ಲವೆ? ಉದಾಹರಣೆಗೆ – ನಿಮ್ಮ ಹೆಸರು ಏನು ಹೇಳಿದಿರಿ.. ನೀವು ಮತ್ತು ನಿಮ್ಮ ಪಕ್ಕದಲ್ಲಿ ಕುಳಿತ ಅವರು.. ನಿಮ್ಮ ಹೆಸರು.. ನೀವಿಬ್ಬರು ಅಪರಿಚಿತರು.. ಉದ್ಯೋಗವೂ.. ಓಹ್.. how nice it can be. ಈಗ.. ಎತ್ತರ ಇರುವ ಅವರು ಮರಹತ್ತಲಿಕ್ಕೇ, ಕುಳ್ಳಗಿರುವ ನೀವು ಮುಸುರೆ ತಿಕ್ಕಲಿಕ್ಕೇ ಲಾಯಕ್ಕು ಅಂತ ನಾನು ಹೇಳಿದರೆ.. ಸಂವಿಧಾನದಲ್ಲಿಯೋ, ಕಾವ್ಯದಲ್ಲಿಯೋ ಸೇರಿಸಿದರೆ? ಪ್ರಯತ್ನಿಸಿ ಸಫಲರಾಗುವುದು.. ಸ್ವಭಾವ, ಅನುಕೂಲತೆಗೆ ತಕ್ಕಂತೆ ನೀವೇ ಸ್ಪರ್ಧಿಸುವುದು ಬೇರೆ. ಇನ್ನೊಬ್ಬರಿಗೆ ಪ್ರಯತ್ನಿಸಲಿಕ್ಕೆ ಕೊಡದಿರುವದು ಬೇರೆ. ಹಾರುವ ಮೀನುಗಳಿವೆ, ತೆವಳುವ ಹಕ್ಕಿಗಳಿವೆ. ಹಾರಬೇಕೋ, ತೆವಳಬೇಕೋ ಎಂದು ಬೇರೆಯವರು ತೀರ್ಮಾನ ಮಾಡುವುದು ಸರಿಯೇ?

ಕ್ಷಮಿಸಿ, ಇಲ್ಲ, ನನ್ನ ಅನಿಸಿಕೆ ಅದಲ್ಲ.

ನನಗೂ ಮಂಡನ ವಿಶ್ವವಿದ್ಯಾಲಯದ ಬಗ್ಗೆ, ಇಲ್ಲಿನ ವಿದ್ಯಾಸಾಗರರನ್ನು ಕಂಡರೆ ಆದರವಿದೆ, ಅದಕ್ಕಾಗಿಯೇ ಬಂದಿದ್ದೇನೆ. ಹೆಸರು ಕೆಡಿಸಲಿಕ್ಕೆ ಖಂಡಿತ ಅಲ್ಲ ಸ್ವಾಮಿ.

ಇಲ್ಲಿನ ಸಂಶೋಧನೆಯ ಬಗ್ಗೆ, ಇಲ್ಲಿನ ವಿದ್ಯಾರ್ಥಿಗಳ ಬಗ್ಗೆ, ಮುಖ್ಯವಾಗಿ ನನ್ನಲ್ಲಿ ಆಸಕ್ತಿಯಿಂದ ಕಲಿಯುತ್ತಿರುವ ವಿದ್ಯಾರ್ಥಿನಿಯರ ಭವಿಷ್ಯದ ಬಗ್ಗೆ ಆಸೆಯಿದೆ, ಭರವಸೆ ಇದೆ.

ಖಂಡಿತಾ ಇಲ್ಲ. ಇಲ್ಲೊಂದು 'ಮೀ ಟೂ' ಚಳವಳಿ ಮಾಡಿ, ಶಾಂತಿಗೆ ಭಂಗ ತರುವ ಉದ್ದೇಶ ಸ್ವಲ್ಪವೂ ಇಲ್ಲ. ತುಂಬಿದ ಕೀವು ಹೊರಬರಬೇಕು ಎನ್ನುವ ಸದಾಶಯ ಅಷ್ಟೇ.

ತಾಳ್ಮೆ ಇರ್ಲಿ. ಹೌದು, ಹೀಗೆ ಮಾಡುವುದು ಯಾವ ಸೀಮೆಯ ನ್ಯಾಯ? ಮಾತುಕತೆಗೆ ಅವಕಾಶ ಕೊಡಿ.

ವಾಲಂಟೀಯರ್ಸ್.. ಸೆಕ್ಯೂರಿಟಿ... ಸ್ವಲ್ಪ ಆ ಕಡೆ ಹೋಗಿ ನೋಡಿ. ಗಲಾಟೆ ಮಾಡುವವರನ್ನು ಹೊರಗೆ ಹಾಕಿ..

**–4–**

ಬನ್ನಿ ಸರ್, ನಿಮ್ಮನ್ನು ಮತ್ತೆ.. ಅದೂ ಮಂಡನ ವಿಶ್ವವಿದ್ಯಾಲಯದ ನನ್ನ ಈ ಆಫೀಸಿನಲ್ಲಿ ಭೇಟಿಯಾಗಲಿಕ್ಕೆ ಬಹಳ ಸಂತೋಷ. ನನ್ನೊಳಗಿನ ಪಂಪಕಂಪನಾ ಯಾರು ಅಂತ ಕೇಳಿದಿರಿ. ಆ ದಿನದ ಸಭೆಯಲ್ಲಿ ಹೇಳಲು ಆಗಲೇ ಇಲ್ಲ. ಅವಳನ್ನು ಪರಿಚಯಿಸುವ ಮೊದಲೇ ಗದ್ದಲ, ಗಲಾಟೆ ಶುರುವಾಯ್ತು. ಕಥನ ಕುತೂಹಲ ಹೋಗಿ ಕದನ ಕೋಲಾಹಲವೇ ಆಯ್ತು.. ವಿದ್ಯಾಸಾಗರರ ಹೆಸರು ಹೇಳಿದ್ದೇ ಕೆಲವರ ಪಿತ್ಥ ಕೆರಳಿಬಿಟ್ಟಿತು. ನನ್ನ ಉದ್ದೇಶ ಅದಾಗಿರಲಿಲ್ಲ. ನೀವಾಗಿಯೇ ಬಂದಿರಲ್ಲ, ಅದಕ್ಕೆ ಖುಷಿಯಾಗಿದೆ.

ಇಲ್ಲ, ಇದು ಕಾಟಾಚಾರಕ್ಕೋ, ಶಿಷ್ಟಾಚಾರಕ್ಕೋ ಅಲ್ಲ. ನನಗೆ ಅನಿಸಿದ್ದನ್ನು ಹೇಳದೇ ಹೋದರೆ.. ಮತ್ತೆ ಅವಕಾಶ ಸಿಗ್ತದೋ, ಇಲ್ವೋ ಯಾರಿಗೆ ಗೊತ್ತು? ನಿಜಕ್ಕೂ ಖುಷಿಯಾಗಿದೆ.

ಹೌದು, ಇದು ವಿದ್ಯಾಸಾಗರರ ಫೋಟೋ. ಪದವಿಪ್ರದಾನ ಸಮಯದಲ್ಲಿ ತೆಗೆದಿದ್ದು ಇನ್ನೂ ಇದೆ ನೋಡಿ.

ಬಯೋಟೆಕ್ ಫೀಲ್ಡಿಗೆ ಅವರು ಕೊಟ್ಟ ಕಾಣಿಕೆಯ ಬಗ್ಗೆ ತಕರಾರೇ ಇಲ್ಲ. He is a living legend. ಆದರೆ.. ಇರಲಿ ಬಿಡಿ, ಮತ್ತೆ ಅವರದೇ ಸುದ್ದಿ ಬೇಡ. ಕಾಫಿ ತರಿಸಲೇ? ಸರಿ.

ಓಹ್, ವಿದ್ಯಾರ್ಥಿಯಾಗಿದ್ದಾಗ 'ಪಂಪಕಂಪನಾ' ಹೆಸರಿನಲ್ಲಿ ನಾನು ಬರೆದ ಕವನಗಳನ್ನು ಓದಿದ್ದೀರಾ! ಬಹುಶಃ ಈ ಸಂದರ್ಶನಕ್ಕಾಗಿ ಓದಿರಬಹುದು.

ಹೌದಾ? ಅದು ನಿಜಕ್ಕೂ ಆಶ್ಚರ್ಯವೇ. ಹಾಗೆ ಗೀಚಿದ ಕವನಗಳಿಗೆ ಇನ್ನೂ ಓದುಗರಿದ್ದಾರೆ ಅನ್ನುವುದರಿಂದ ಜಯಪರಾಜಯಕ್ಕೆ ಭವಿಷ್ಯ ಇದೆ ಎಂದು ಆಗುವ ಖುಷಿಯ ಒಟ್ಟಿಗೆ, ಒಮ್ಮೆ ಗೀಚಿದ್ದು ಇನ್ನೂ ಉಳಿದುಬಿಟ್ಟಿದೆ ಎಂಬ ನಾಚಿಕೆಯೂ ಆಗುತ್ತಿದೆ. ಇದು ಕಥನದ ಸಮಸ್ಯೆಯೂ ಹೌದು. ಒಮ್ಮೆ ಬಯಲಾದರೆ ಅಡಗಿಕೊಳ್ಳುವುದು ಸುಲಭವಲ್ಲ.

ನಿಜ, ಕಾವ್ಯಕ್ಕೆ ಹುಟ್ಟು ಮಾತ್ರ ಇರೋದು.

ಸಮಕಾಲೀನ ಜೀವನವನ್ನು ಇತಿಹಾಸದಲ್ಲಿ ಯಾಕೆ ತುರುಕಬೇಕು? ನಿಮ್ಮ ತಕರಾರು ನನ್ನದೂ– ಹಾಗೆಯೇ ಇತಿಹಾಸ ನಮ್ಮ ನಡುವೆ ಮೂಗು ತೂರಿಸಬೇಕೇ? ಜನರಿಗೆ.. ನನಗೆ.. ನಿಮಗೆ.. ಇತಿಹಾಸದ ಬಗ್ಗೆ ಪ್ರೀತಿ ಇದೆ. ಸಿಟ್ಟೂ ಇದೆ. ನಮ್ಮನ್ನು ಈ ಸ್ಥಿತಿಗೆ ತಂದಿದೆ ಎನ್ನುವ ಕಾರಣದಿಂದ. ಯಾರಾದರೂ ಲಭ್ಯವಿರುವ ಎರಡು ಚುಕ್ಕಿಗಳನ್ನು ಬಳಸಿ ನಮಗೆ ಖುಷಿಕೊಡುವ ಚಿಟ್ಟೆ ಬಿಡಿಸಿದರೆ ಮಂತ್ರಮುಗ್ಧರಾಗುತ್ತೇವೆ. ಹಾಗೆ ಬರೆದ ಚಿತ್ರ ಇರುವ narrativeಗೆ ಸ್ವಲ್ಪ ಘಾಸಿ ಮಾಡಿದರೆ ಸಿಟ್ಟು ಬರುತ್ತದೆ.

ಮುಖ್ಯವಾಗಿ ನಮಗೆ ಇತಿಹಾಸ ಗುರಾಣಿಯಾಗಿ.. ನಮ್ಮ ಅಹಂ ಹೆಚ್ಚಿಸಿಕೊಳ್ಳಲು.. ಬೇಕು, ಇನ್ನೊಬ್ಬರ ಕೈಯಲ್ಲಿ ಶಸ್ತ್ರವಾಗಿ, ಅದು ನಮ್ಮದೇ ಚಿಕಿತ್ಸೆಗಾಗಿಯಾದರೂ ಬೇಡ, ಅಲ್ಲವಾ?

ಮತ್ತೆ ಅದೇ ಹೇಳ್ತೀರಾ. ಸಾವಿರ ಸಂಖ್ಯೆಯಲ್ಲಿ ರಾಣಿಯರನ್ನು ಹೊಂದಿದ ಕಥೆ ಕೇಳಿದರೆ ಸುಮ್ಮನಾಗುವ ಭಾವನೆಗಳು.. ಕೆಲವೊಮ್ಮೆ ಅದನ್ನೇ ಪ್ರೇಮಕಾವ್ಯವಾಗಿ ಒಪ್ಪುವ ಭಾವನೆಗಳು.. 'ಸಾವಿರ ರಾಣಿಯರ ಗಂಡ' ಎಂದು ಮುದಗೊಳ್ಳುವ ಭಾವನೆಗಳು.. ರಾಣಿಗೆ ಪ್ರಿಯಕರನಿದ್ದ ಎಂದರೆ ಘಾಸಿಗೊಳ್ಳುತ್ತವೆ. ಅದು ಹಾದರವಾಗಿ ಕಾಣುತ್ತದೆ. ಹೇಗೆ ಸರ್?

ಅದೂ ನಿಜ, ಆದರೆ ಐದು ಗಂಡರಿದ್ದ ದ್ರೌಪದಿಯ ಬೆಂಬಲಕ್ಕೆ ಎಷ್ಟು ವಿಧದ ಶಾಪದ ಕತೆಗಳು.. Narrative is everything.

ಸಮಕಾಲೀನ ಜೀವನವನ್ನು ಪ್ರಭಾವಿಸುವ ಎಲ್ಲ ಸಂಗತಿಗಳನ್ನು.. ಇತಿಹಾಸವೋ, ಮಹಾಕಾವ್ಯವೋ.. ಕೆದಕುವ ಅವಶ್ಯಕತೆ ಇದೆ ಸರ್. ಸಾಮಾಜಿಕ ಸ್ವಾಸ್ಥ್ಯಕ್ಕಾಗಿ ಸುಳ್ಳು ಹೇಳಿದರೂ ತಪ್ಪಲ್ಲ, ಹಾಗಿರುವಾಗ ಸತ್ಯ ಅಂತ ನಮಗನಿಸಿದ ಮೇಲೂ ಹೇಳದಿದ್ರೆ?

ನಿಮಗೆ ಸಂಸ್ಕೃತಿಯ ಬಗ್ಗೆ ಆದರವಿದೆ. ಗೊತ್ತು. ಆದರೆ ಅದು ಸರಿಯಿಲ್ಲ ಅನಿಸಿದರೆ ಬದಲಿಸಬೇಕು. ಅಲ್ವಾ?

ಇಲ್ಲ ಸರ್, ನನಗೆ ಗೊಂದಲಗಳಿಲ್ಲ. ಪಂಪಕಂಪನಾಗೆ ಈ ಗಂಗಾದೇವಿಯ ವ್ಯಾವಹಾರಿಕ ಜಗತ್ತಿನ ಮಿತಿಯಲ್ಲ. ನನ್ನಂತಹ ನೂರಾರು ಜನರ ಆಸೆ-ಆಕಾಂಕ್ಷೆಗಳಿಗೆ, ನೋವುನಲಿವುಗಳಿಗೆ ಮಿಡಿಯುವ ಕವಿಮನಸ್ಸು ಪಂಪಕಂಪನಾಳದ್ದು. ನನ್ನ ಆಶೋತ್ತರಗಳನ್ನು ಇತಿಹಾಸದ ಆಳಕ್ಕೆ ಕೊಂಡೊಯ್ದು ಅಲ್ಲಿಯ ಸುಟ್ಟು ಕರಕಲಾದ ಆತ್ಮಗಳಿಗೂ ಸಾಂತ್ವನ ಹೇಳಲು ಅವಳಿಗೆ ಮಾತ್ರ ಸಾಧ್ಯ. ಶತಮಾನಗಳ ಆಚೀಚೆ ಸುಲಭದಲ್ಲಿ ಹೋಗಿಬರುತ್ತಾಳೆ. ಮೂರು ರಾಜರಿಗೆ ರಾಣಿಯಾಗಿ, ಪ್ರಿಯಕರನನ್ನೂ ಹೊಂದುತ್ತಾಳೆ. ಪಂಪಕಂಪನಾ ಕಾಣುವ ವಿಜಯನಗರ ಎಂದೂ ಇರದ ಮಾದರಿ ಲೋಕ, ಅದೊಂದು ಹೆಂಗಳೆಯರ ಫ್ಯಾಂಟಸಿ ಎಂದರೆ ನನಗೇನೂ ಬೇಸರವಿಲ್ಲ. ಹೆಚ್ಚಿನ ಸುವರ್ಣಯುಗಗಳು ಫ್ಯಾಂಟಸಿಯೇ. ಅವುಗಳೊಟ್ಟಿಗೆ ಇದೂ ಸೇರಲಿ ಎನ್ನುವುದೇ ನನ್ನ ಆಶಯ. ಫ್ಯಾಂಟಸಿಯೇ ಆದ್ರೂ ಸರಿ. ಅದೂ ಅನುಭವವೇ. ಒಂದಲ್ಲ ಒಂದು ದಿನ.. ಈಗ ಬಿತ್ತಿದ ಫ್ಯಾಂಟಸಿಯ ಬೀಜಗಳು ಮೊಳಕೆಯೊಡೆದು ಹೆಮ್ಮರವಾಗಲಿ, ಸಮಾನತೆಯ ನೆರಳು ಕೊಡಲಿ. ಅದು ಆಶಯ.

## –5–

ಡೊಮಿಂಗೋ, ನಿಜ ಹೇಳಬೇಕೆಂದರೆ ಈ ಜಯಪರಾಜಯ ನೀನೇ ಬರೀಬೇಕಿತ್ತು ಕಣೋ. ಆಗ ಲಿಂಗಸಮಾನತೆ ಎನ್ನುವುದು ಬರೀ ಹೆಣ್ಣಿನ ಫ್ಯಾಂಟಸಿಯಲ್ಲ, ಗಂಡು ಮಾಡುವ ಎಲ್ಲ ಕೆಲಸಗಳನ್ನು ಹೆಣ್ಣು ಮಾಡುವ ಹಾಗೆ, ಹೆಣ್ಣು ಮಾಡುವ ಎಲ್ಲ ಕೆಲಸಗಳನ್ನು ಗಂಡೂ ಮಾಡಬಲ್ಲ ಅಂತ ಹೇಳ್ಕೋಬಹುದಿತ್ತು. ಅವುಗಳಿಂದ ಅವನಿಗೂ ಲಾಭವಿದೆ ಎಂದು ಮನಗಾಣಿಸಬಹುದಿತ್ತು. ಯಾಕೋ ನೀನು ಮನಸ್ಸು ಮಾಡದೇ ಹೋದೆ. ಸತ್ಯ ಹೇಳಬಲ್ಲ ಜನ ಹೆಚ್ಚುಹೆಚ್ಚು ಬರೀಬೇಕು. ಅವರು ಹಿಂಜರಿದರೆ ಸುಳ್ಳು ಕಥನ ಜಗತ್ತನ್ನು ಆಳುತ್ತದೆ.

ಪೂರ್ತಿ ಸಂತೃಪ್ತರೂ ಬರೆಯೋದಿಲ್ಲ, ಪೂರ್ತಿ ನಿರಾಶಾವಾದಿಗಳೂ ಬರೆಯೋದಿಲ್ಲ ಅನ್ನೋದೂ ಸರಿಯೆ. ನೀನು ಸಿಕ್ಕೆ, ನನ್ನ ನಿರಾಶೆ ಮರೆಯಾಯಿತು. ನಿಜ ಹೇಳಲೆ? ನೀನು ಮತ್ತು ನಿನ್ನ ಮಾತುಗಾರ ಕುಡುಕ ಗೆಳೆಯ.. ಅರೆಬರೆ ಆದರ್ಶಗಳ ಬುದ್ಧಿಜೀವಿ ಹಳೇಕೋಟೆ.. ನೀವಿರದೆ ಹದಿನಾರನೆಯ ಶತಮಾನದ ಆ ಗಂಡಸರ ನಡುವೆ ಬದುಕುವುದೂ.. ಅದು ಕಲ್ಪನೆಯ ಕಥೆಯಲ್ಲಿಯೇ ಆಗಿದ್ದರೂ.. ಅಸಹ್ಯವೇ ಆಗುತ್ತಿತ್ತು. ನೀವಿಬ್ಬರೂ ಸೇರಿ ಶತಮಾನಗಳನ್ನು ಸರಾಗವಾಗಿ ದಾಟಲು ಸಹಾಯ ಮಾಡಿದಿರಿ.

ನೀನೇನೇ ಹೇಳು, ಜಯಪರಾಜಯದಲ್ಲಿ ಜಯದ ಒಂದು ಮುಖ ನೀನು. ಬಿಜ್ನಾಗ್ ಆಫೀಸಲ್ಲಿ ನಾನು COO ಆಗಿದ್ರೂ ನಮ್ಮ ಮನೇಲಿ ನೀನೇ COO. ನಾನು ಹೆತ್ತದ್ದೊಂದೇ ಖರೆ. ನಾನು ಒಳ್ಳೆಯ ತಾಯಿ ಆಗಲೇ ಇಲ್ಲ ಎನ್ನುವ ಕೊರಗು ನನಗೆ ಯಾವಾಗಲೂ ಇತ್ತು, ಈಗ್ಲೂ ಇದೆ. ನೀನಿಲ್ಲದಿದ್ರೆ ಅವೇನು ಆಗ್ತಿದ್ವೋ! ನೀನಾದ್ರೂ ಸಿಗದೆ ಇದ್ರೆ.. ನಾನು ಆ ವಿದ್ಯಾಸಾಗರನನ್ನು.. ಕಾವ್ಯದಲ್ಲೂ, ಬದುಕಿನಲ್ಲೂ ಹೇಗೆ ಕಾಡುತ್ತಿದ್ದೆನೋ ನನಗೆ ತಿಳಿಯದು! ನೀನು ಹೇಳಿದ ಹಾಗೆಯೇ ಅವನೂ ದಾರಿಗೆ ಬಂದ ನೋಡು. ಆಗಿನ ಕೋಪವನ್ನು ತಂಪಾಗಿಸಿದವನೆ ನೀನು. ಈ ಗಂಗಾವತರಣದ ಶಿವ ನೀನು. ಅನುಭವ ಭಯಾನಕವಾದರೂ ಕಾವ್ಯ ಹರಳುಗಟ್ಟಿದ್ದು ಆ ಸಹನೆಯಿಂದಲೇ. Thanks for everything ಡೊಮಿಂಗೋ.

ಖಂಡಿತ, ಜಯಪರಾಜಯದ ಬಿಡುಗಡೆಯ ಈ ಅಧ್ಯಾಯ ಮುಗೀಲಿ. ಈ ರಜೆಯಲ್ಲಿ ನೀನು ಹೇಳಿದ ಹಾಗೆಯೆ ಜಗತ್ತು ಸುತ್ತೋದೇ."



# ಧ್ವನಿ

**ಮಂಗಳಾ ಕುಮಾರ್**
Bay Area, California

*

"ಕಿಕ್ಕಿರಿದ ಸಭಾಂಗಣದಲ್ಲಿ ಒಂದು ಇರುವೆಗೂ ಜಾಗವಿಲ್ಲದ ಹಾಗೆ ನಿನ್ನೆ ಪ್ರೇಕ್ಷಕರು ಸೇರಿದ್ದರು. 'ಸಂವಾದ' ಪುಸ್ತಕದ ಲೇಖಕಿ ಪ್ರಾಂಜಲಿ ಅವರನ್ನು ಸಂದರ್ಶಿಸಿ, ಮೂರು ತಿಂಗಳ ಹಿಂದೆ ನಾನು ಅವರ ಪುಸ್ತಕದ ಹಿನ್ನೆಲೆ, ವಸ್ತು, ಉದ್ದೇಶ, ಮುಂತಾದವುಗಳನ್ನು ಒಂದು ಲೇಖನದಲ್ಲಿ ಪ್ರಸ್ತಾಪಿಸಿದ್ದೆ. ಅಂದಿನಿಂದ 'ಸಂವಾದ'ವನ್ನು ಅತೀವ ಉತ್ಸಾಹದಿಂದ ಎದುರು ನೋಡುತ್ತಿದ್ದ ಅಭಿಮಾನಿಗಳು, ಪುಸ್ತಕದ ಮಾರಾಟ ಶುರುವಾದದ್ದೇ ತಡ ಅದರ ಎಲ್ಲ ಪ್ರತಿಗಳನ್ನೂ ಕೊಂಡು, ಅಂಗಡಿಗಳಲ್ಲಿ ಒಂದು ಪ್ರತಿಯೂ ಸಿಗದ ಹಾಗೆ ಮಾಡಿದ್ದಾರೆ. ಹಾಗೇ, ನಿನ್ನೆ ಸಭಾಂಗಣದಲ್ಲಿ ಒಂದು ಖುರ್ಚಿಯೂ ಖಾಲಿ ಇರದ ಹಾಗೆ ತುಂಬಿದ್ದರು. ಕಳೆದ ಸುಮಾರು ಒಂದು ವರ್ಷದಿಂದ ಪ್ರಾಂಜಲಿಯವರು ಯಾವುದೇ ಸಾರ್ವಜನಿಕ ಸಭೆ, ಸಮಾರಂಭಗಳಲ್ಲಿ ಭಾಗವಹಿಸಿರಲಿಲ್ಲ. ಅವರನ್ನು ಕೊಲ್ಲುವ ಪ್ರಯತ್ನವೊಂದು ನಡೆದು, ಅವರಿಗೆ ತೀವ್ರ ಆಘಾತವಾಗಿ, ಚೇತರಿಸಿಕೊಳ್ಳಲು ಈ ಒಂದು ವರ್ಷ ಮಾತ್ರವಲ್ಲ, ಜೀವನಪರ್ಯಂತ ಅವರು ಹಲವು ರೀತಿಯ ಚಿಕಿತ್ಸೆಗಳನ್ನು ಪಡೆಯಬೇಕಾಗಿರುವ ವಿಷಾದನೀಯ ಸಂಗತಿ ಎಲ್ಲರಿಗೂ ಗೊತ್ತಿರುವುದೇ. ಆ ದುರ್ಘಟನೆಯ ನಂತರ, ನಿನ್ನೆ ಅವರು ಸಾರ್ವಜನಿಕವಾಗಿ ಒಂದು ಸಭೆಯಲ್ಲಿ ಭಾಗವಹಿಸಿದ ಮೊದಲ ದಿನ. ಪುಸ್ತಕವನ್ನು ಬಿಡುಗಡೆ ಮಾಡಿದ ಮುಕುಂದ್ ಶಾಸ್ತ್ರಿ ಅವರು ಹೇಳಿದ ಹಾಗೆ – 'ಕಳೆದ ವರ್ಷವಿಡೀ ಏನೇ ದೈಹಿಕ ನೋವು, ಮಾನಸಿಕ ಯಾತನೆಗಳಿದ್ದರೂ

ಸಹ, ಪ್ರಾಂಜಲಿಯವರ ಕ್ರಿಯಾಶೀಲತೆ ಸುಪ್ತವಾಗಿ, ಸ್ತಬ್ಧವಾಗಿ ಕೂತಿರಲಿಲ್ಲ. 'ಸಂವಾದ' ಅವರ ಅದಮ್ಯ ಚೇತನದ ಕೂಸಾಗಿ ಇಂದು ಹೊರಬಂದಿದೆ'. ಶುರುವಿನಿಂದ ಸೂಜಿ ಬಿದ್ದರೂ ಕೇಳಬಹುದು ಎನ್ನುವ ಹಾಗೆ ಮೌನದಿಂದ ಕುಳಿತಿದ್ದ ಸಭಿಕರು, ಅಂತ್ಯದಲ್ಲಿ ಎದ್ದು ನಿಂತು ಸುಮಾರು ಐದು ನಿಮಿಷಗಳ ಕಾಲ ಚಪ್ಪಾಳೆಯ ಸುರಿಮಳೆ ಸುರಿಸಿ ತಮ್ಮ ಪ್ರಶಂಸೆಯನ್ನು ವ್ಯಕ್ತಪಡಿಸಿದರು. 'ಲೇಖಕಿ ಪ್ರಾಂಜಲಿಯವರು ನಮ್ಮ ನಿರೀಕ್ಷೆಗೂ ಮೀರಿದ ಉತ್ತಮ ಕೊಡುಗೆಯನ್ನು ನೀಡಿ, ಇಂದು ಅವರ ಜೊತೆ ಕಳೆದ ಈ ದಿನವು ಮರೆಯಲಾಗದ, ಒಂದು ಅನಿರ್ವಚನೀಯ ಅನುಭವ ಎನ್ನುವ ಭಾವನೆಯನ್ನು ನಮ್ಮ ಹೃದಯದಲ್ಲಿ ತುಂಬಿದ್ದಾರೆ ಎಂದರೆ ಅದು ಅತಿಶಯೋಕ್ತಿಯಲ್ಲ' ಎಂದು ಮುಖ್ಯ ಅತಿಥಿಗಳಲ್ಲಿ ಒಬ್ಬರಾಗಿ ಆಗಮಿಸಿದ್ದ ಹಿರಿಯ ರಂಗ ಕಲಾವಿದೆ ನಿರ್ಮಲಾ ನಾಯಕ್ ಅವರು ಹೇಳಿದರು.

ಹಿಂದಿನ ದಿನ 'ಸಂವಾದ'ದ ಬಗ್ಗೆ ಸಂದರ್ಶನ ಮುಗಿದಾಗ ರಾತ್ರಿ ಹತ್ತರ ಮೇಲೆ ಆಗಿತ್ತು. ದಿನವೆಲ್ಲ ಹೊರಗೆ ಕಳೆದಿದ್ದ ಸುಸ್ತಿನಿಂದ ಮೇಲಿನ ರಿಪೋರ್ಟನ್ನು ಮಾತ್ರ ಬರೆದು ಆರತಿ ಮಲಗಿಬಿಟ್ಟಿದ್ದಳು. ಬರೆಯುವುದು ಬೇಕಾದಷ್ಟಿದೆ, ನಾಳೆ ಕಾಫ಼ಿ, ತಿಂಡಿ ಮುಗಿಸಿ ಮತ್ತೆ ಲೇಖನವನ್ನು ಕೈಗೆತ್ತಿಕೊಂಡು ಮುಗಿಸಿದರಾಯಿತು ಎಂದು ಮಲಗಿದ ಆರತಿಗೆ ಚೆನ್ನಾಗಿಯೇ ನಿದ್ದೆ ಬಂದಿತ್ತು.

ಬೆಳಗಾಗಿ ಎದ್ದ ತಕ್ಷಣ ಕಾಫ಼ಿ ಕುಡಿಯುತ್ತ 'ಸಂವಾದ'ದ ಬಗ್ಗೆ ಟ್ವಿಟ್ಟರ್, ಫ಼ೇಸ್ ಬುಕ್, ಇನ್ಸ್ಟಗ್ರಾಮ್, ಎಲ್ಲ ಸೋಷಿಯಲ್ ಮೀಡಿಯಾಗಳಲ್ಲಿ ಯಾವ ಚರ್ಚೆಗಳು ಹರಿದಾಡುತ್ತಿವೆ ಎಂದು ನೋಡಿದಳು. 'ಸಂವಾದ' ಪುಸ್ತಕದ ಲೇಖಕಿ ಪ್ರಾಂಜಲಿ ಬರಹ, ನಾಟಕ, ನಿರ್ದೇಶನ ಮತ್ತು ನಟನೆಗಳ ಪರಿಣತಿಯೊಂದಿಗೆ, ಅಸಾಧಾರಣ ಕ್ರಿಯಾಶೀಲತೆಗೆ ಹೆಸರಾಗಿದ್ದವಳು. ಕೇವಲ ಇಪ್ಪತ್ತೆಂಟೇ ವರ್ಷಗಳ ಅವಳ ಜೀವನ ಸಾಧನೆಗಳ ಸರಮಾಲೆಯೇ ಆಗಿತ್ತು. ಅವಳನ್ನು ಹಿಂಬಾಲಿಸಿ ಆರಾಧಿಸುತ್ತಿದ್ದ ಸಾವಿರಾರು ಜನಗಳು ಎಷ್ಟಿದ್ದರೋ ಅಷ್ಟೇ ದ್ವೇಷಿಸುತ್ತಿದ್ದವರೂ ಇದ್ದರು. ಅವಳು 'ಇಂದು ಬೆಳಗಿನ ಉಪಹಾರಕ್ಕೆ ಉಪ್ಪಿಟ್ಟು ತಿಂದೆ' ಎಂದರೂ ಸಾಕು, ಅದನ್ನು ಹೊಗಳುವ, ತೆಗಳುವ ಮಂದಿಗೆ ಅದು ಗ್ರಾಸ. ಪ್ರಸ್ತುತ ಪರಿಸ್ಥಿತಿಯೇ ಹಾಗಿದ್ದು, ಬೆಳಗಿನವರೆಗೆ ಕಾಯುವ ವ್ಯವಧಾನವೇ ಇರದ ಮಂದಿ, ಸಂದರ್ಶನ ಮುಗಿಯುವುದನ್ನೇ ಕಾಯುತ್ತಿದ್ದವರ ಹಾಗೆ 'ಸಂವಾದ'ದ ಬಗ್ಗೆ ಹಿಂದಿನ ರಾತ್ರಿಯೇ ಪರ–ವಿರೋಧ ಚರ್ಚೆಗಳಲ್ಲಿ ತೊಡಗಿದ್ದರು. ಅದರಲ್ಲಿ ಒಂದು ಸಂದೇಶವನ್ನು ಓದಿ, ಆರತಿ ಉದ್ವಿಗ್ನಳಾದಳು.

'ಜನಮನಗಳ ಪರಿವರ್ತನೆ ಮಾಡಿ ಹೊಸದೊಂದು ಜಗತ್ತನ್ನೇ ಸೃಷ್ಟಿಮಾಡುತ್ತೇವೆ ಎಂದು ಕೆಲವರು ತಮ್ಮನ್ನು ತಾವೇ ಪೀಠದ ಮೇಲೆ ಕುಳ್ಳಿರಿಸಿಕೊಂಡಿದ್ದಾರೆ. ಅವರಿಗೆ ಇರುವುದು ಒಂದೇ ಗುರಿ. ನಮ್ಮ ಸನಾತನ ಧರ್ಮವನ್ನು ಹೀಯಾಳಿಸುವುದು. ಸನಾತನ ಧರ್ಮದಲ್ಲಿರುವ ಹಾಗೆ, 'ಧರ್ಮ' ಎನ್ನುವ ಪದವಾಗಲೀ ಅದರ ಅರ್ಥವಾಗಲೀ ಜಗತ್ತಿನ ಬೇರೆ ಯಾವ ಸಂಸ್ಕೃತಿಯಲ್ಲೂ, ಯಾರಿಗೂ ಹೊಳೆದೇ ಇರಲಿಲ್ಲ. ಇಂದಿಗೂ 'ಧರ್ಮ' ಎನ್ನುವ ಪದಕ್ಕೆ ಸರಿಸಮನಾದ ಪದವೇ ಅವರ ಪದಕೋಶಗಳಲ್ಲಿ ಇಲ್ಲ.

ಹಾಗಿರುವಾಗ, ಸನಾತನ ಧರ್ಮವನ್ನು ಎತ್ತಿ ಹಿಡಿದು ಯುಗಯುಗಾಂತರಗಳಿಂದ ನಮಗೆ ಮಾರ್ಗದರ್ಶನ ನೀಡುತ್ತಿರುವ ನಮ್ಮ ಋಷಿಮುನಿಗಳಿಂದ ಹಿಡಿದು, ನಮ್ಮ ಆರಾಧ್ಯದೈವಗಳಾಗಿರುವ ರಾಮ, ಕೃಷ್ಣ, ಸೀತೆ, ಶಿವ, ಪಾರ್ವತಿಯವರೆಗೆ ಅವರನ್ನು ಟೀಕಿಸುವ ಯೋಗ್ಯತೆ ಯಾರಿಗೆ ಇದೆ? ವಾಕ್ಸ್ವಾತಂತ್ರ್ಯದ ಹೆಸರಿನಲ್ಲಿ ಏನೇನೋ ಬೊಗಳುತ್ತ, ಸನಾತನ ಧರ್ಮದ ಬಗ್ಗೆ ಕುಹಕವಾಗಿ ಮಾತನಾಡುತ್ತ ಅವರದೇ ಜಾತಿ-ಮತಗಳನ್ನು ಹೊಗಳುವ ಕುತಂತ್ರಿಗಳಿದ್ದಾರೆ. ಆದರೆ, ಸನಾತನಿಗಳು ಎಂದು ಹೇಳಿಕೊಳ್ಳುವ ಅಥವಾ ಹೆಸರಿಗೆ ಮಾತ್ರ ಸನಾತನಿಗಳಾಗಿರುವವರೂ ಸಹ ಹಾಗೇ ವರ್ತಿಸಿದರೆ ಅದು ಖಂಡನೀಯ. 'ಧರ್ಮೋ ರಕ್ಷತಿ ರಕ್ಷಿತಃ. ಧರ್ಮವನ್ನು ರಕ್ಷಿಸದ ಇಂತಹವರನ್ನು ಧರ್ಮವೇಕೆ ರಕ್ಷಿಸಬೇಕು?'

ಅದನ್ನೇ ಮತ್ತೆರಡು ಬಾರಿ ಓದಿ, ಏನಿದರ ಅರ್ಥ ಎಂದು ಅವಳಿಗೆ ಗೊಂದಲವಾಯಿತು. ಜೊತೆಗೆ, ನಿನ್ನೆ ಸಭಾಂಗಣದಲ್ಲಿ ನೋಡಿದ್ದ ತೋಳಗಳ ಚಿತ್ರ ಕಣ್ಣೆದುರು ಮೂಡಿ ಬಂತು.

ಪ್ರಾಂಜಲಿಯ ಸಂದರ್ಶನ ಎಲ್ಲೇ ನಡೆದರೂ, ಅವಳ ಹೇಳಿಕೆಗಳಲ್ಲಿ ಇಲ್ಲದ ಹುಳುಕುಗಳನ್ನು ಹುಡುಕಿ ಹೀಯಾಳಿಸುವುದನ್ನೇ ಜೀವನದ ಗುರಿಯಾಗಿ ಮಾಡಿಕೊಂಡಿದ್ದ ಕೆಲವು ಪತ್ರಕರ್ತರಿದ್ದರು. ಆರತಿ ಅವರನ್ನು ತೋಳಗಳು ಎಂದೇ ಕರೆಯುತ್ತಿದ್ದಳು. ಎಲ್ಲೆಲ್ಲೂ ಪತ್ರಕರ್ತರ ಫಲಕವೇರಿಸಿಕೊಂಡು ಬರುವ ಅದೇ ಮುಖಗಳನ್ನು ನಿನ್ನೆಯೂ ನೋಡಿ ಅವಳಿಗೆ ಯಾವ ಆಶ್ಚರ್ಯವೂ ಆಗಿರಲಿಲ್ಲ. ಆ ಮುಖಗಳಲ್ಲಿ ಅದೇನೋ ಭಾವೋದ್ವೇಗ. ಏನನ್ನೋ ಕಡಿದು, ಗುಡ್ಡೆ ಹಾಕಿ, ಸಾಧಿಸಲು ಹೊರಟಿದ್ದೇವೆ ಎನ್ನುವ ಅಹಂಕಾರದ ಕಳೆ. ಈ ತೋಳಗಳು ಈ ಜನ್ಮದಲ್ಲಿ ಬದಲಾಗುವುದಿಲ್ಲ. ಇವು ಕುರಿವೇಷದ ತೋಳಗಳು. ಯಾರೋ ಕೊಡುವ ಎಂಜಲು ಕಾಸಿಗೆ ಅವರು ಹೇಳಿದಂತೆ ಕುಣಿಯುವ ಇವುಗಳ ಯೋಗ್ಯತೆಗೆ, ಹೀನಬುದ್ಧಿಗೆ ಬೆಂಕಿ ಬೀಳಲಿ. ಈ ಮುಖಗಳು ಕಾಣಿಸಿಕೊಳ್ಳದೇ ಇದ್ದಿದ್ದರೆ ಸಂದರ್ಶನವನ್ನು ಮನಃಪೂರ್ತಿ ಆನಂದಿಸಬಹುದಿತ್ತು ಎಂದು ಅವಳು ಮನಸ್ಸಿನಲ್ಲೇ ಬೈದುಕೊಂಡಿದ್ದಳು. ಈ ತೋಳಗಳು ಪ್ರಾಂಜಲಿಯ ಬಗ್ಗೆ ಬರೆಯುತ್ತಿದ್ದುದು ಅವಳ ವೈಯಕ್ತಿಕ ಜೀವನದ ಬಗ್ಗೆ. ಇದು ಯಾವುದೋ ಹೊಸದೊಂದು ತೋಳದ ಬರಹ ಎಂದು ಅವಳಿಗೆ ಗೊಂದಲವಾಯಿತು.

'ನಿನ್ನ ಬರಹ ಹೇಗಿರಬೇಕು, ಯಾವ ದೃಷ್ಟಿಕೋನದಿಂದ ಬರೀಬೇಕು ಅಂತ ಚೆನ್ನಾಗಿ ಯೋಚಿಸಿ ಬರಿ. ನೀನು ಬಿಡೋ ಬಾಣಗಳು ಇನ್ನೊಂದ್ ಸಲ ಇವಳ ತಂಟೆಗೆ ಹೋಗಬಾರದು ಅನ್ನೋ ಹಾಗಿರಬೇಕು. ಎಷ್ಟೋ ದಿನಗಳು ಕಳೆದ್ರೂ ಸಹ ಮುಟ್ಟಿ ನೋಡ್ಕೋತಾ ಇರಬೇಕು ಹಾಗೆ ಗಾಯ ಮಾಡ್ಬೇಕು. ಸರಿಯಾದವರಿಗೆ, ಸರಿಯಾದ ಕಡೆ ಗುರಿ ಇಟ್ಟು ಹೊಡೀಬೇಕು. ನಿನ್ನ ವ್ಯಕ್ತಿತ್ವವನ್ನು ದುಡ್ಡಿಗೋ, ರಾಜಕೀಯ ಒತ್ತಡಕ್ಕೋ ಹೆದರಿ ಮಾರಿಕೊಂಡರೆ, ಪ್ರಜ್ಞಾವಂತ ಜನತೆ ನಿನ್ನನ್ನು ಕ್ಷಮಿಸೋದಿಲ್ಲ. ಒಮ್ಮೊಮ್ಮೆ ಸುವರ್ಣಾವಕಾಶಗಳು ಸಿಗುತ್ತವೆ. ಎಡವಟ್ಟು ಮಾಡಿಕೊಂಡರೆ ಮತ್ತೆ ಮತ್ತೆ ಆ ಅವಕಾಶಗಳು ಸಿಗೋದಿಲ್ಲ.' – ಜರ್ನಲಿಸಂ ಪ್ರೊಫೆಸರ್ ಮೈಥಿಲಿ ರಾಮಚಂದ್ರ ಅವರು ತನ್ನ

ಲೇಖನವೊಂದರ ಬಗ್ಗೆ ಹೇಳಿದ್ದ ಮಾತುಗಳು ಕಿವಿಯಲ್ಲಿ ಕೊರೆಯುತ್ತಿದ್ದವು. ಅದೇ ಜರ್ನಲಿಸಂ ಕ್ಲಾಸಿನಲ್ಲಿದ್ದ ಜೊತೆಗಾತಿ ಪ್ರಾಂಜಲಿ ಅಸಾಧಾರಣ ಪ್ರತಿಭೆಯಿಂದ ಹೆಸರಾಗಿದ್ದುದು ಹೆಮ್ಮೆಯ ವಿಷಯವೇ ಆಗಿತ್ತು. ಪ್ರಾಂಜಲಿ ಎಷ್ಟೇ ಖ್ಯಾತಿ ಪಡೆದರೂ ಅವಳ ಸ್ನೇಹಕ್ಕೆ ಅದು ಅಡ್ಡಿಯಾಗಿರಲಿಲ್ಲ. ಸ್ನೇಹಿತೆ ಎನ್ನುವ ಕಾರಣದಿಂದ, ಅವಳಿಂದ ಏನೋ ಲಾಭವಾಗಬಹುದು ಎನ್ನುವ ದೂರಾಲೋಚನೆಯಿಂದ ಪ್ರಾಂಜಲಿಯನ್ನು ಸುಮ್ಮನೇ ಹೊಗಳಿ ಬರೆಯುತ್ತಿದ್ದೇನೆಯೇ ಎಂದು ಆರತಿ ಯಾವಾಗಲೂ ಯೋಚಿಸುತ್ತಿದ್ದಳು. ಆದರೆ ಪ್ರಾಂಜಲಿಯ ಬಗ್ಗೆ ನಿಜವನ್ನು ಬರೆಯದೇ ಕೃತಕವಾಗಿ ಏನನ್ನೋ ಬರೆಯುವುದಾದರೂ ಏಕೆ? ತಲೆ ಎನ್ನುವುದು ಒಂದು ಕೆರಳಿದ ಜೇನುಗೂಡಿನ ಹಾಗೆ ಆಗಿ, ಆತುರದಲ್ಲಿ ಬರಹವನ್ನು ಮುಂದುವರೆಸುವ ಮುನ್ನ ಚೆನ್ನಾಗಿ ಯೋಚಿಸಿ ಬರೆಯಬೇಕು ಎಂದುಕೊಳ್ಳುತ್ತ ಸ್ನಾನಕ್ಕೆ ಹೋದಳು.

ಎರಡೆರಡು ಬಾರಿ ತಲೆಗೆ ಶಾಂಪೂ ಹಾಕಿಕೊಂಡು ಉಜ್ಜಿದ್ದು, ನಂತರ ಕಂಡಿಷನರ್ ಹಾಕಿಕೊಳ್ಳಲು ಮರೆತಿದ್ದು, ಯಾವುದರ ಗಮನವೂ ಇಲ್ಲದೆ ಸ್ನಾನ ಮುಗಿಸಿ ಹೊರಬಂದು, ಕೈಗೆ ಸಿಕ್ಕ ನೈಟಿಯೊಂದನ್ನು ಏರಿಸಿಕೊಂಡು ತನ್ನ ಬರಹದ ಮೇಲೆ ಕಣ್ಣಾಡಿಸುತ್ತ ಬರಹವನ್ನು ಮುಂದುವರೆಸಲು ಕುಳಿತಾಗ, ಕಳೆದ ವರ್ಷ ನಡೆದಿದ್ದ ಘಟನೆ ಮತ್ತೆ ಮತ್ತೆ ಮರುಕಳಿಸಿ ಬಂತು.

ಅಂದು ಭಾನುವಾರ. ಫೋನಿನ ಗಿಣಿಗಿಣಿತ ಕೇಳಿ ಆರತಿ ಅದನ್ನು ಕೈಗೆತ್ತಿಕೊಂಡು, 'ಸ್ವರಾಜ್ಯ ಟೀವೀಲಿ ಬ್ರೇಕಿಂಗ್ ನ್ಯೂಸ್ ಅಂತ ಬರ್ತಿದೆ. ಪ್ರಾಂಜಲಿ ಮೇಲೆ ಕಾರು ಓಡಿಸಿ ಯಾವನೋ ತಪ್ಪಿಸಿಕೊಂಡಿದಾನಂತೆ. ಆಸ್ಪತ್ರೆಗೆ ಸಾಗಿಸ್ತಾ ಇದಾರಂತೆ. ಸಾವು-ಬದುಕಿನ ಮಧ್ಯೆ ಇದಾಳೆ ಅಂತ ಹೇಳ್ತಾ ಇದಾರೆ' ಎಂದು ಸುಹಾಸ್ ಹೇಳಿದ್ದನ್ನು ಕೇಳಿ, ಯಾರೋ ಎದೆಗೆ ಒದ್ದ ಹಾಗೆ ಆರತಿ ಅಲ್ಲೇ ಕುಸಿದಿದ್ದಳು. 'ಅಯ್ಯೋ ದೇವರೆ, ಯಾವಾಗ? ಎಲ್ಲಿ?' ಒಂದು ಕೈಯಲ್ಲಿ ಫೋನು ಇನ್ನೊಂದು ಕೈಯಲ್ಲಿ ಟೀವಿಯ ರಿಮೋಟ್ ಹಿಡಿದು ಹೆಣಗಾಡುತ್ತ ಟೀವಿ ಹಾಕಿದರೆ, ಸ್ವರಾಜ್ಯ ಟೀವಿ ಚಾನೆಲ್ ಬ್ರೇಕಿಂಗ್ ನ್ಯೂಸ್ ಎಂದು ಪ್ರಸಾರ ನಡೆಸಿತ್ತು. 'ಈಗ ಒಂದು ಹದಿನೈದು-ಇಪ್ಪತ್ತು ನಿಮಿಷದ ಹಿಂದೆ ಆಗಿದ್ದಂತೆ. ಸ್ವರಾಜ್ಯದವರೇ ಇಂಟರ್ವ್ಯೂಗೆ ಅಂತ ಕರೆದಿದ್ದರಂತೆ. ಅಲ್ಲೇ ಅವರ ಸ್ಟುಡಿಯೋ ಹೊರಭಾಗದಲ್ಲೇ ಯಾವನೋ ಕಾರಿಂದ ಅವಳು ಇಳಿದು ಹೋಗ್ತಾ ಇರುವಾಗ ಗುದ್ದಿ ಓಡಿಹೋಗಿದಾನಂತೆ. ತಕ್ಷಣ ಪೋಲೀಸು, ಆಂಬ್ಯುಲೆನ್ಸ್ ಎಲ್ಲ ಅಲ್ಲಿ ಸೇರಿ ಈಗ ಆಸ್ಪತ್ರೆಗೆ ಕರಕೊಂಡು ಹೋಗ್ತಾ ಇರೋದನ್ನೂ ತೋರಿಸ್ತಾ ಇದಾರೆ'. ಫೋನಿನಲ್ಲಿ ಸುಹಾಸ್ ಹೇಳುತ್ತಿದ್ದ ಹಾಗೆ ಅದೇ ದೃಶ್ಯವನ್ನು ಟೀವಿಯಲ್ಲಿ ತೋರಿಸುತ್ತಿದ್ದರು. 'ಬೇಗ ರೆಡಿಯಾಗು. ನಾನು ಬರ್ತೀನಿ. ಇಬ್ಬರೂ ಆಸ್ಪತ್ರೆಗೆ ಹೋಗೋಣ' ಎಂದು ಹೇಳಿ ಸುಹಾಸ್ ಫೋನ್ ಕೆಳಗಿಟ್ಟಿದ್ದ. ತಲೆಗೆ ಸ್ನಾನ ಮಾಡಿ, ಕೂದಲಿಗೆ ಸುತ್ತಿದ್ದ ಒದ್ದೆ ಟವಲನ್ನು ಬಿಚ್ಚದೇ ಹಾಗೆ ಕೂತಿದ್ದವಳು ಓಡಿಹೋಗಿ ಕೈಗೆ ಸಿಕ್ಕ ಪ್ಯಾಂಟು, ಷರಟು ಧರಿಸಿ ಐದೇ ನಿಮಿಷಗಳಲ್ಲಿ ತಯಾರಾಗಿದ್ದಳು. ಇಂತಹ ಸಂದರ್ಭಗಳಲ್ಲಿ ಸಾರ್ವಜನಿಕರನ್ನು ತಡೆಯುವ ಪೋಲೀಸರು

‘ಪ್ರೆಸ್’ ಎನ್ನುವ ಫಲಕವಿದ್ದವರನ್ನು ತಡೆಯದೇ, ಅವರೆಲ್ಲ ಒಂದು ನಿರ್ದಿಷ್ಟ ಜಾಗದಲ್ಲಿ ನಿಲ್ಲಲು ಬಿಡುತ್ತಿದ್ದರು.

ಆ ಪ್ರಕರಣದ ನಾಲ್ಕು ತಿಂಗಳ ಮೊದಲು ಪ್ರಾಂಜಲಿಯ ಸಂದರ್ಶನದ ಒಂದು ಸರಣಿಯನ್ನು ಪ್ರಸರಿಸಲು ಸ್ವರಾಜ್ಯ ಟೀವಿ ಮುಂದಾಗಿತ್ತು. ಸರಣಿಯ ಶೀರ್ಷಿಕೆ ‘ನವಯುಗದಲ್ಲಿ ನಾರಿ’. ಮಹಿಳೆಯರ ಯೋಚನಾಲಹರಿ ಮತ್ತು ಜೀವನಶೈಲಿಯ ಬದಲಾವಣೆಗಳ ಅಗತ್ಯ, ಅಡಚಣೆಗಳು ಇವೆಲ್ಲದರ ಬಗ್ಗೆ ಚರ್ಚೆ ನಡೆಸುವ ಉದ್ದೇಶದಿಂದ ಶುರುವಾಗಿದ್ದ, ತಿಂಗಳಿಗೊಮ್ಮೆ ಪ್ರಸಾರವಾಗುತ್ತಿದ್ದ ಕಾರ್ಯಕ್ರಮದ ಮೊದಲನೆಯ ಕಂತಿನಲ್ಲಿ ಪ್ರಾಂಜಲಿಯ ಸಂದರ್ಶನ ನಡೆಸಿದ್ದ ಸುಧಾಕರ್ ‘ಇಂದಿನ ಸಮಾಜದಲ್ಲಿ ವಿವಾಹ ವಿಚ್ಛೇದನ ಎನ್ನುವುದು ಮನೆಮಾತು ಎನ್ನುವ ಹಾಗೆ ಆಗಿದೆ. ಕಾರಣ ಸಣ್ಣದೇ ಇರಬಹುದು, ದೊಡ್ಡದೇ ಇರಬಹುದು. ಕೆಲವು ಕಾರಣಗಳನ್ನು ಮಾತ್ರ ತಳ್ಳಿಹಾಕುವ ಹಾಗಿಲ್ಲ. ಪುರುಷರಷ್ಟೇ ಓದಿ, ಅವರಷ್ಟೇ ಸಂಪಾದಿಸುತ್ತ, ಅವರಂತೆಯೇ ಪ್ರತಿಷ್ಠಿತ ಹುದ್ದೆಗಳಲ್ಲಿ ಇರುವ ಮಹಿಳೆಯರಿಗೆ ಅತಿಯಾದ ಅಹಂಕಾರ ಒಂದು ಕಾರಣವಿರಬಹುದು. ಜೊತೆಗೆ, ಹಳೆಯ ಕಾಲದ ಸೀತೆಯ ಹಾಗೆ ಗಂಡನ ನೆರಳಾಗಿ ತಮ್ಮ ವ್ಯಕ್ತಿತ್ವವನ್ನು ತ್ಯಾಗ ಮಾಡುವುದು ಮೂರ್ಖತೆಯ ಪರಮಾವಧಿ ಎನ್ನುವ ನಿಲುವಿನಿಂದಲೇ ಅವರ ತಂದೆತಾಯಿಯರು ಬೆಳೆಸಿ, ಬೆಂಬಲ ನೀಡುತ್ತಾರೆ ಎನ್ನುವುದೂ ಕಾರಣವಿರಬಹುದು. ನಿಮ್ಮ ಅಭಿಪ್ರಾಯವೇನು?’

ಪ್ರಾಂಜಲಿ ಒಂದು ಕ್ಷಣ ಅವನನ್ನೇ ನೋಡಿ ನಸುನಕ್ಕಳು. ‘ಈ ವಿಷಯದ ಬಗ್ಗೆ ನನ್ನ ಅಭಿಪ್ರಾಯ ಕೇಳಿದಿರಿ. ಒಬ್ಬ ಹೆಣ್ಣಾಗಿ ನಾನು ನನ್ನ ಅಭಿಪ್ರಾಯವನ್ನು ತಿಳಿಸುವುದಿಲ್ಲ. ಆದರೆ, ಸಮಾಜದ ಹಿತವನ್ನು ಬಯಸುವ ಒಬ್ಬ ಪ್ರಜೆಯಾಗಿ ತಿಳಿಸುತ್ತೇನೆ. ಈ ಕಾರ್ಯಕ್ರಮದ ಶೀರ್ಷಿಕೆಯೇ ‘ನವಯುಗದಲ್ಲಿ ನಾರಿ’ ಎಂದಿದೆ. ಹಾಗಾಗಿ, ಹಿಂದಿನ ಯುಗಗಳಲ್ಲಿ ನಾರಿಯರು ಹೇಗಿದ್ದರು? ಅವರು ಬದುಕಿದ ರೀತಿ ಇಂದಿನ ನಾರಿಯರಿಗೆ ಪ್ರಸ್ತುತವೇ ಎನ್ನುವ ಪ್ರಶ್ನೆ ಸಹಜ. ಈ ಯುಗದ ವಿವಾಹ ವಿಚ್ಛೇದನೆ ಮತ್ತು ತ್ರೇತಾಯುಗದ ಸೀತೆ ಇಬ್ಬರನ್ನೂ ವಿಶ್ಲೇಷಿಸೋಣ’ ಎಂದು ಪೀಠಿಕೆ ಹಾಕಿದಳು.

’ತ್ರೇತಾಯುಗದ ಸೀತೆ ರಾಮನಲ್ಲಿ ಅವಳು ಕಂಡ ಗುಣಗಳಿಂದ ಅವನನ್ನು ಪ್ರೀತಿಸಿ, ಸಂಪೂರ್ಣವಾಗಿ ಅವನನ್ನು ನಂಬಿ, ಅವನ ನಿರ್ಧಾರಗಳನ್ನು ಪ್ರಶ್ನಿಸದೇ ನಡೆದುಕೊಂಡಳು ಎನ್ನುವುದು ಅವಳನ್ನು ಪೂಜನೀಯವಾಗಿ ಮಾಡಿದ ಗುಣಗಳು. ಅವಳ ಹಾಗೇ, ತ್ರೇತಾಯುಗದ ಇನ್ನೊಬ್ಬ ಸ್ತ್ರೀ ಕೈಕೇಯಿಯನ್ನು ಯಾರೂ ಪೂಜಿಸಿಲ್ಲ, ಪೂಜಿಸುವುದೂ ಇಲ್ಲ. ಹಾಗೆಂದು ಅವಳಿಗೆ ಒಳ್ಳೆಯ ಗುಣಗಳೇ ಇರಲಿಲ್ಲವೇ? ತನ್ನ ಮಗನನ್ನು ಚಕ್ರವರ್ತಿಯಾಗಿ ನೋಡಬಯಸಿದವಳ ಮಾತೃವಾತ್ಸಲ್ಯವು ಪೂಜನೀಯ ಗುಣವಲ್ಲವೇ...’. ಪ್ರಾಂಜಲಿ ಮಾತು ಮುಂದುವರೆಸುವ ಮುನ್ನವೇ ಸುಧಾಕರ್ ‘ಇದೇನು ಮೇಡಂ, ರಾತ್ರಿಯೆಲ್ಲ ರಾಮಾಯಣ ಕೇಳಿ ಬೆಳಗಾಗೆದ್ದು ರಾಮನಿಗೂ ಸೀತೆಗೂ ಏನು ಸಂಬಂಧ ಅಂತ ಕೇಳಿದರು ಅನ್ನೋ ಗಾದೆಯ ಹಾಗೆ, ಕೈಕೇಯಿಗೂ ವಿವಾಹ ವಿಚ್ಛೇದನಕ್ಕೂ

ಏನು ಸಂಬಂಧ ಕಲ್ಪಿಸೋದಕ್ಕೆ ನೋಡ್ತಿದೀರಿ?' ಎಂದು ಗಹಗಹಿಸಿ ನಕ್ಕ. ಅಲ್ಲೇ ಸ್ಟುಡಿಯೋದಲ್ಲಿ ಕುಳಿತಿದ್ದ ಪ್ರೇಕ್ಷಕರೂ ಜೋರಾಗಿ ನಕ್ಕರು.

ಪ್ರಾಂಜಲಿಯೂ ಅವರೊಂದಿಗೆ ನಕ್ಕು ಮಾತು ಮುಂದುವರೆಸಿದಳು. 'ಪೂರ್ತಿ ಕೇಳಿ. ಸೀತೆ ಹಲವಾರು ಕಾರಣಗಳಿಂದ ಪೂಜೆಗೆ ಅರ್ಹಳು ಎಂದು ಶತಮಾನಗಳಿಂದ ಅವಳನ್ನು ಪೂಜಿಸುತ್ತ ಬಂದಿರುವ ಜನ ಈಗಲೂ ಇದ್ದಾರೆ. ಅವಳೇನಾದರೂ ಈ ಕಲಿಯುಗದಲ್ಲಿ ಜನಿಸಿದ್ದರೆ, ಈ ಯುಗಕ್ಕೆ ತಕ್ಕ ಹಾಗೆ ಅವಳೂ ನಡೆದುಕೊಂಡಿರುತ್ತಿದ್ದಳೇ ಎನ್ನುವುದು ಪ್ರಶ್ನೆ. ನೀವು ಯಾವ ಯುಗವನ್ನು ತೆಗೆದುಕೊಂಡರೂ ಸರಿ. ಒಬ್ಬ ಹೆಣ್ಣು ತಾನು ಹುಟ್ಟಿದ ಮನೆಗೆ, ಸೇರಿದ ಮನೆಗೆ ಹೇಗೆ ಒಂದು ಜ್ಯೋತಿಯಾಗಿ ಬೆಳಗಬಲ್ಲಳೋ ಹಾಗೇ ಒಂದು ಜ್ವಾಲಾಮುಖಿಯಾಗಿ ದಹಿಸಲೂ ಬಲ್ಲಳು. ನೀವು ಹೇಳಿದ ಪುರುಷನಿಗೆ ಸರಿಸಮನಾಗಿ ಓದಿ, ಸಂಪಾದಿಸುವ ಇಂದಿನ ಮಹಿಳೆಯ ಬಗ್ಗೆ ನೋಡೋಣ. ಮನೆಯಲ್ಲಿ, ಕೆಲಸದಲ್ಲಿ, ಮಕ್ಕಳನ್ನು ಬೆಳೆಸುವುದರಲ್ಲಿ, ಮನೆಯ ಆಗುಹೋಗುಗಳನ್ನು ನೋಡಿಕೊಳ್ಳು-ವುದರಲ್ಲಿ ಇರುವ ಒತ್ತಡಗಳನ್ನು ನೋಡಿದರೆ, ಅವಳಿಗೆ ತನ್ನ ಗಂಡ, ಅತ್ತೆಮಾವಂದಿರು, ಮನೆಯ ಇತರರ ಸಹಕಾರ ಬೇಕು. ಸಬಲೆಯಾಗಿ ನಿಂತು, ಮನೆಯ ಜ್ಯೋತಿಯಾಗುವ ಸಾಮರ್ಥ್ಯವುಳ್ಳವಳು ತನ್ನ ಸುತ್ತ ಇರುವ ಸಂಸಾರದಿಂದ ಹಿಡಿದು, ಸಮಾಜಕ್ಕೆ, ದೇಶಕ್ಕೆ ಬೆಳಕಾಗಲು ಖಂಡಿತ ಸಾಧ್ಯ. ಆದರೆ, ಯಾವುದೇ ಒತ್ತಡಗಳು ಅವಳನ್ನು ಅಬಲೆಯಾಗಿ ನಿಲ್ಲದ ಹಾಗೆ ನೋಡಿಕೊಳ್ಳುವ ಜವಾಬ್ದಾರಿ ಇಡೀ ಸಮಾಜದ್ದು. ಇದರಲ್ಲಿ ಬರೀ ಗಂಡಸರ ಪಾತ್ರ ಮಾತ್ರವಲ್ಲ. ಹೆಂಗಸರ ಪಾತ್ರವೂ ಇದೆ. ಒಬ್ಬ ಹೆಣ್ಣಾಗಿ ನೀವು ಕೇವಲ ನಿಮ್ಮ ಸ್ವಾರ್ಥದೃಷ್ಟಿಯಿಂದ ಕೈಕೇಯಿಯಾಗಬೇಡಿ. ಮನೆಯ ಒಳ-ಹೊರಗನ್ನು ನಿಭಾಯಿಸುವ ನಿಮ್ಮ ಹೆಂಡತಿಗೆ ಗಂಡನಾಗಿ ಅವಳನ್ನು ಇನ್ನಿಲ್ಲದ ಪರೀಕ್ಷೆಗೆ ಗುರಿಪಡಿಸಬೇಡಿ. ಪರಸ್ತ್ರೀಯರಿಗೆ ಅಣ್ಣತಮ್ಮಂದಿರಾಗಿ, ಅವರನ್ನು ನಿಜವಾದ ಮೃಗಗಳಿಂದಲೇ ಅಲ್ಲ, ಮಾಯಾಮೃಗಗಳಿಂದಲೂ ರಕ್ಷಿಸಬೇಕೇ ಹೊರತು, ನೀವೇ ಮೃಗಗಳಾಗಬೇಡಿ. ಅತ್ತೆಯಾಗಿ ಅವಳ ಸಂಸಾರದಲ್ಲಿ ಹುಳಿಹಿಂಡುವ ಮಂಥರೆಯಾಗದೇ ತಾಯಿಯ ಸ್ಥಾನದಲ್ಲಿ ನಿಂತು ಪೋಷಿಸಿ.'

ಸುಧಾಕರ್ ಮತ್ತೆ ಮಧ್ಯೆ ಬಾಯಿ ಹಾಕಿದ – 'ಅಂದರೆ, ಒಬ್ಬ ಹೆಣ್ಣಿಗೆ ಇಷ್ಟೆಲ್ಲ ಸಹಾಯ ಮಾಡುವ ನೆಟ್‌ವರ್ಕ್ ಇರಬೇಕು ಅಂತ ಆಯಿತು. ಇದಕ್ಕೇ ಏನೋ 'ನ ಸ್ತ್ರೀ ಸ್ವಾತಂತ್ರ್ಯಮರ್ಹತಿ' ಅಂತ ಮನು ಹೇಳಿರಬಹುದಾ?' – ಅವನ ಧ್ವನಿಯಲ್ಲಿ ಕುಹಕವಿದೆಯೇ ಎಂದು ಪ್ರಾಂಜಲಿಗೆ ಅನುಮಾನ ಬಂದಿತು. 'ಮನು ಯಾವ ಉದ್ದೇಶದಿಂದ ಈ ಮಾತು ಹೇಳಿದ್ನೋ ನನಗೆ ಗೊತ್ತಿಲ್ಲ ಮತ್ತು ಈಗ ಅದನ್ನು ವಿಶ್ಲೇಷಿಸುವ ಅಗತ್ಯವೂ ಇಲ್ಲ. 'ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇ ತತ್ರ ದೇವತಾ' ಎನ್ನುವುದನ್ನೂ ಮನುವೇ ಹೇಳಿರಬೇಕಲ್ಲ. ಅವಳನ್ನು ಪೂಜಿಸಿ ಎಂದರೆ ಅದು ಪೀಠದಲ್ಲಿ ಕೂರಿಸಿ, ಹಾರ ಹಾಕಿ, ಪಾದಪೂಜೆ ಮಾಡಿ ಎಂದಲ್ಲ. ನಾರಿಯ ರಕ್ಷಣೆ ಮಾತ್ರ ಯಾವ ಕಾಲಕ್ಕೂ ಸಮಾಜದ ಜವಾಬ್ದಾರಿ. ಅವಳನ್ನು ಜ್ಯೋತಿಯಾಗಲು ಬಿಡಿ, ಜ್ವಾಲಾಮುಖಿಯನ್ನಾಗಿ ಮಾಡಬೇಡಿ ಎನ್ನುವುದು ನನ್ನ ಅಭಿಪ್ರಾಯ'.

ಪ್ರಾಂಜಲಿಯ ಎರಡನೆಯ ಸಂದರ್ಶನವು 'ಆಧುನಿಕ ಮಹಿಳೆಯರ ಪಾಶ್ಚಾತ್ಯ ಉಡುಪು-ತೊಡಪುಗಳು ಭಾರತೀಯ ಸಂಸ್ಕೃತಿಗೆ ಹೇಗೆ ಧಕ್ಕೆ ತರುತ್ತಿವೆ' ಎನ್ನುವ ಬಗ್ಗೆ ನಡೆದಿತ್ತು. ಹಳೆಬೀಡು, ಬೇಲೂರಿನ ಶಿಲಾಬಾಲಿಕೆಯರ ಉಡುಪು-ತೊಡಪುಗಳು, ಪುರಾಣ ಪುಣ್ಯಕಥೆಗಳಲ್ಲಿ ಅಪ್ಸರೆಯರ ವರ್ಣನೆ ಮತ್ತಿತರ ಉದಾಹರಣೆಗಳೊಂದಿಗೆ ಪ್ರಾಂಜಲಿ ಮಾತನಾಡಿ, ಸಭ್ಯತೆ ಮೀರಿ ನಡೆಯುವುದೇ ಗುರಿಯಾಗಿರುವ ಹೆಂಗಸರೇ ಆಗಲಿ, ಗಂಡಸರೇ ಆಗಲಿ, ಅವರಿಗೆ ಉಡುಪು-ತೊಡಪುಗಳ ಒಂದೇ ಕಾರಣ ಬೇಕಿಲ್ಲ ಅಥವಾ ಅದೊಂದೇ ಪ್ರದರ್ಶನಕ್ಕೆ ಮಾಧ್ಯಮವಾಗಬೇಕೆಂದಿಲ್ಲ, ಆದರೆ, ಪ್ರತಿಯೊಬ್ಬರಿಗೂ ಸಭ್ಯತೆಯ ಎಲ್ಲೆಗಳ ಪರಿಜ್ಞಾನವಿರಬೇಕು ಎಂದು ಮಾತಾಡಿದ್ದಳು:

ಮೂರನೆಯ ಸಂದರ್ಶನದ ವಿಷಯವು 'ಆಧುನಿಕ ಮಹಿಳೆಯರು ಸ್ವಚ್ಛಂದವಾಗಿ ಬಾರಿನಲ್ಲಿ ಕುಳಿತು ಕುಡಿಯುವ ಅಭ್ಯಾಸ ಬೆಳೆಸಿಕೊಂಡು ಸಮಾಜದ ಅವನತಿಗೆ ಕಾರಣರಾಗುತ್ತಿದ್ದಾರೆಯೇ?' ಎನ್ನುವುದಾಗಿತ್ತು. ಗಂಡಸರೇ ಆಗಲಿ, ಹೆಂಗಸರೇ ಆಗಲಿ, ಯಾರು ಮಿತಿಮೀರಿ ನಡೆದರೂ, ಸಮಾಜದ ಅವನತಿಗೆ ಮದ್ಯಪಾನ, ಧೂಮಪಾನದಂಥ ವ್ಯಸನಗಳು ಕಾರಣ ಎಂದು ಪ್ರಾಂಜಲಿ ಹೇಳಿದ್ದಳು.

'ನವಯುಗದಲ್ಲಿ ನಾರಿ' ಕಾರ್ಯಕ್ರಮದ ಪ್ರಾಯೋಜಕ ನಿಖಿಲ್ ಗೋಧ್ವಾನಿಗೆ ಪ್ರಾಂಜಲಿಯ ಸಂದರ್ಶನಗಳಿಂದ ಸಂತೋಷವಾಗಿರಲಿಲ್ಲ. ಅವನು ಈ ಕಾರ್ಯಕ್ರಮಕ್ಕೆ ಹಣವನ್ನು ಹೂಡಿಕೆ ಮಾಡುವ ಉದ್ದೇಶವೇ ಬೇರೆ ಇತ್ತು. ಆದಷ್ಟೂ ಹಿಂದೂ ಧರ್ಮದ ಹಳೆಯ ಸಂಪ್ರದಾಯಗಳು, ಪದ್ಧತಿಗಳು ಉಳಿಯಬೇಕು. ದೇಶವು ಪಾಶ್ಚಾತ್ಯರ ಆಳ್ವಿಕೆಯಿಂದ ಮುಕ್ತವಾಗಿ ಎಪ್ಪತ್ತೈದು ವರ್ಷಗಳು ಮೀರುತ್ತ ಬಂದರೂ ಪಾಶ್ಚಾತ್ಯರ ಪ್ರಭಾವ ದೇಶದ ಮೇಲೆ ಹಲವಾರು ರೀತಿಗಳಲ್ಲಿ ಜೀವಂತವಾಗಿದೆ. ಅದನ್ನು ಆದಷ್ಟು ಜನರಿಗೆ ಮನದಟ್ಟು ಮಾಡಬೇಕು ಎನ್ನುವುದು ಅವನ ಆಶಯ. ಆಸ್ಪತ್ರೆಗೆ ಅವನೂ ಬಂದು ನಿಂತಿದ್ದು, ಪ್ರಾಂಜಲಿಯ ಮೇಲೆ ಕಾರು ಹರಿಸಿ ಓಡಿಹೋದವನು ಎಲ್ಲಿದ್ದರೂ ಹಿಡಿದು ಜೈಲಿಗೆ ಹಾಕಿಸುತ್ತೇನೆ ಎಂದು ಹೇಳಿದ್ದ. ಸ್ಟುಡಿಯೋದ ಹೊರಭಾಗದಲ್ಲಿ ಅಳವಡಿಸಿದ್ದ ಎಲ್ಲ ಕ್ಯಾಮೆರಾಗಳನ್ನೂ ಪೊಲೀಸರಿಗೆ ಒಪ್ಪಿಸಿದ್ದರೂ, ಆ ವ್ಯಕ್ತಿಯ ಪತ್ತೆಯಾಗಿರಲಿಲ್ಲ. ಇದು ನಿಖಿಲ್ ಗೋಧ್ವಾನಿಯೇ ಮಾಡಿಸಿದ್ದ ಕೊಲೆ ಪ್ರಯತ್ನ ಎಂದು ಒಳಗೊಳಗೇ ಸ್ಟುಡಿಯೋದಲ್ಲಿ ಗುಸುಗುಸು ನಡೆದಿತ್ತು.

ಆರತಿ ಬರಹವನ್ನು ಮುಂದುವರೆಸಲು ಕುಳಿತಳು. 'ಪ್ರಾಂಜಲಿ ಸ್ತ್ರೀವಾದಿಯೋ ಅಲ್ಲವೋ ಎನ್ನುವ ಬಗ್ಗೆ ವಾದ-ವಿವಾದಗಳು ನಡೆದಿವೆ. ಆಧುನಿಕ ಮಹಿಳೆಯರ ವರ್ತನೆಗಳನ್ನು ದೃಢವಾಗಿ ಖಂಡಿಸುವ ಬದಲು, ಗಂಡಸರೂ ಅದೇ ತಪ್ಪುಗಳನ್ನು ಮಾಡುತ್ತಾರೆ ಎಂದು ಸಮರ್ಥನೆ ನೀಡುತ್ತ ಅಡ್ಡಗೋಡೆಯ ಮೇಲೆ ದೀಪವಿಡುವ ಹಾಗೆ ಹೇಳಿಬಿಡುತ್ತಾಳೆ ಎಂದು ಹಲವರ ಅಭಿಪ್ರಾಯ. ಅದು ನಿಜವಲ್ಲ, ಅವಳು ಸಮಾಜದ ಹಿತದೃಷ್ಟಿಯಿಂದ ಅನೈತಿಕ ನಡವಳಿಕೆ ಹೆಂಗಸರದೇ ಆಗಲಿ, ಗಂಡಸರದೇ ಆಗಲಿ, ಅದನ್ನು ಖಂಡಿಸಿ ತನ್ನ ಅಭಿಪ್ರಾಯಗಳನ್ನು ಮುಂದಿಡುತ್ತಾಳೆಯೇ ಹೊರತು

ಯಾವ ಸ್ತ್ರೀವಾದದ ಸಿದ್ಧಾಂತದ ಬೆನ್ನನ್ನೂ ಹಿಡಿದು ಪ್ರತಿಪಾದಿಸುವವಳಲ್ಲ. ಅದು ಹುರುಳಿಲ್ಲದ ವಾದ ಎಂದು ಹೇಳುವ ಅಭಿಮಾನಿಗಳೂ ಇದ್ದಾರೆ. 'ಸಂವಾದ'ವನ್ನು ಓದಿದ ನಂತರ ನನ್ನ ಅನಿಸಿಕೆ ಇಷ್ಟೇ. ಪ್ರಾಂಜಲಿಯದು ತನ್ನತನವನ್ನು ಯಾವತ್ತೂ ಬಿಟ್ಟುಕೊಡದ, ಯಾರಿಗೂ ಸೊಪ್ಪು ಹಾಕದ, ಯಾವತ್ತೂ ಮಾರಾಟಕ್ಕೆ ಸಿಗದ ದಿಟ್ಟ ವ್ಯಕ್ತಿತ್ವ. ಸಂವಾದದ ಒಂದು ಮುಖ್ಯ ಸಂದೇಶ ಹೀಗಿದೆ – 'ಊಳಿಡುವ ತೋಳಗಳಿರುವ ಸಮಾಜದಲ್ಲಿ ಹೆಣ್ಣುಮಕ್ಕಳು ತಮ್ಮ ಧ್ವನಿಯನ್ನು ತಾವು ಗುರುತಿಸಿಕೊಂಡು, ತಾರಕಕ್ಕೆ ಏರಿಸಬೇಕು. ಅಶಕ್ತ ಧ್ವನಿಗಳು ಹೊರಹೊಮ್ಮುವುದು ಕೇವಲ ಮಹಿಳೆಯರಿಂದ ಮಾತ್ರವಲ್ಲ. ಅಂಗವಿಕಲರು, ವೃದ್ಧರು, ಮಾನಸಿಕ ರೋಗಿಗಳು, ಮಾತುಬಾರದ ಮಕ್ಕಳು ಎಲ್ಲರದೂ ಅಶಕ್ತ ಧ್ವನಿಗಳೇ. ಗಂಡುಮಕ್ಕಳು ಊಳಿಡುವ ತೋಳಗಳಾಗದೇ ಸಮಾಜದ ಇತರ ಧ್ವನಿಗಳೂ ಕೇಳುವಂತೆ ಮಾಡಬೇಕು. ಅಲ್ಲಿಯವರೆಗೆ ಯಾವುದೇ ಯುಗದ ಸೀತೆ, ಸಾವಿತ್ರಿಯರನ್ನು ಪ್ರಶ್ನಿಸುವ ಅಧಿಕಾರ ಯಾರಿಗೂ ಇಲ್ಲ!'."



# ತೊಟ್ಟಿಲು

**ಮೀರಾ ಪಿ. ಆರ್.**
Edison, New Jersey

*

ಹಿಂದಿನ ದಿನ ಧಾರಾಕಾರವಾಗಿ ಸುರಿದ ಮಳೆಯ ನೀರು ಬೆಟ್ಟಿಯ ಮನೆಯ ಬೇಸ್ಮೆಂಟಿನಲ್ಲಿ ನುಗ್ಗಿದ್ದು, ಹಾಗೆ ಒಳ ಬಂದ ಹೆಚ್ಚುವರಿ ನೀರನ್ನು ಒತ್ತಿ ಹೊರತಳ್ಳಬೇಕಾಗಿದ್ದ ಅವಳ ಮನೆಯ ಸಂಪ್-ಪಂಪ್ ಕೆಟ್ಟುಹೋಗಿದ್ದು ಕಾರಣವಾಗಿ, ಅಲ್ಲಿ ನಡೆಯಬೇಕಿದ್ದ ಸಪೋರ್ಟ್ ಗ್ರೂಪಿನ ಮೀಟಿಂಗು, ನಮ್ಮ ಮನೆಯ ಬೇಸ್‌ಮೆಂಟಿಗೆ ವರ್ಗಾವಣೆಯಾಗಿತ್ತು. ಬೆಟ್ಟಿಯದ್ದು ನಮ್ಮ ಪಕ್ಕದ ಮನೆಯೇ. ಅವಳ ಮನೆಯ ಅಂದಿನ ಆ ಪರಿಸ್ಥಿತಿ ನಮ್ಮದೂ ಆಗಬಹುದಿತ್ತು, ಆಗಿರಲಿಲ್ಲವಾಗಿ ಬೇಸ್ಮೆಂಟಿನಲ್ಲಿ ಒದ್ದೆ ಇರಲಿಲ್ಲ.

ತಾನು ಹುಟ್ಟಿದ ಲಿಂಗಕ್ಕಿಂತ ಭಿನ್ನವಾಗಿ ತನ್ನ ಲಿಂಗವನ್ನು ಗುರುತಿಸಿಕೊಳ್ಳಲು ಇಚ್ಛಿಸುವ ಮತ್ತು ಲಿಂಗ ಬದಲಾವಣೆಯ ವಿವಿಧ ಹಂತಗಳಲ್ಲಿರುವ ಹದಿಹರೆಯದ 6 ಜನ ಮಕ್ಕಳ ಬೆಂಬಲಕ್ಕಾಗಿ ಎಂದೇ ಮಾಡಿದ ಸಪೋರ್ಟ್ ಗುಂಪು ಅದು. ಅವರೊಂದಿಗೆ, ಚಿಕ್ಕಂದಿನಿಂದಲೂ ಈ ಮಕ್ಕಳ ಜೊತೆಗೇ ಬೆಳೆಯುತ್ತಿರುವ 'ಸಿಸ್‌ಜೆಂಡರ್' ಅಂದರೆ ತಾವು ಹುಟ್ಟಿದ ಲಿಂಗದಲ್ಲೇ ತಮ್ಮನ್ನು ಗುರುತಿಸಿಕೊಳ್ಳಲು ಇಚ್ಛಿಸುವ ಮಕ್ಕಳು ಕೂಡ ಗುಂಪಿನಲ್ಲಿದ್ದರು. ಬೆಟ್ಟಿಯ ಮಗಳು ಜೋಸೆಫೀನಳ ಸಿಸ್‌ಜೆಂಡರ್ ಗೆಳೆಯರಲ್ಲೊಬ್ಬನಾಗಿ ನನ್ನ ಮಗ ನವೀನನೂ ಈ ಗುಂಪಿನಲ್ಲಿದ್ದ. ತಿಂಗಳಿಗೊಮ್ಮೆ ಸೇರುವ, ಒಟ್ಟು ಹನ್ನೊಂದು ಜನ ಮಕ್ಕಳಿದ್ದ ಈ ಗುಂಪಿನ ಮೀಟಿಂಗುಗಳಿಗೆ ಈ ಮಕ್ಕಳ ಅಪ್ಪ ಅಮ್ಮ, ಹಾಗೆಯೇ ಕೆಲವೊಮ್ಮೆ ಇದಕ್ಕೆ ಸಂಬಂಧಿಸಿದ ವಿಷಯತಜ್ಞರೂ ಕೂಡ ಸಾಧ್ಯವಾದಾಗಲೆಲ್ಲಾ ಬರುವುದಿತ್ತು. ಈ ವಿಷಯದಲ್ಲಿ ಆಸಕ್ತಿ, ಪ್ರಶ್ನೆ ಅಥವಾ ಸಹಾನುಭೂತಿ ಇರುವ ಯಾರು ಬೇಕಾದರೂ

ಮೊದಲೇ ತಿಳಿಸಿ, ಮೀಟಿಂಗಿಗೆ ಬರಬಹುದಿತ್ತು. ಗಂಡು ಹೆಣ್ಣೆಂಬ ಎರಡೇ ವಿಧದ ಸಾಂಪ್ರದಾಯಿಕ ಲಿಂಗಗಳನ್ನಷ್ಟೇ ಅಲ್ಲದೆ, ಹತ್ತು ಹಲವು ಬಗೆಯ ಲಿಂಗ ಮತ್ತು ಲೈಂಗಿಕ ವೈವಿಧ್ಯತೆಗೆ ಕಾರಣವಾಗುವ ದೈಹಿಕ, ಮಾನಸಿಕ ವಿಷಯಗಳ ಕುರಿತ ತಿಳಿವಳಿಕೆಯನ್ನು ಪ್ರಚುರಪಡಿಸುವುದು ಈ ಗುಂಪಿನ ಮುಖ್ಯ ಉದ್ದೇಶ.

ಹಾಗೆ ನೋಡಿದರೆ, ಈ ಸಪೋರ್ಟ್ ಗ್ರೂಪ್ ಅಸ್ತಿತ್ವಕ್ಕೆ ಬರುವ ಮುಂಚಿನಿಂದಲೂ ನವೀನನ ಅಪ್ಪ ಅಮ್ಮಂದಿರಾದ ನಾವು ಯಾವತ್ತೂ ಬೆಟ್ಟಿ ಮತ್ತವಳ ಗಂಡ ಕೆವಿನ್ ಜೊತೆಗೆ ಅವರ ಈ ಕಷ್ಟದಲ್ಲಿ ನೆರವಾಗುತ್ತಾ ನಿಂತವರು. ನಾವು ಮನೆಯನ್ನು ಕೊಂಡು, ಆಗ 4 ವರ್ಷದ ಮಗುವಾಗಿದ್ದ ನವೀನನೊಂದಿಗೆ ಬ್ರಿಡ್ಜ್ ಹೆವನ್ ಅನ್ನುವ ಈ ಊರಿಗೆ ಬಂದಾಗಿನಿಂದಲೂ ನೆರೆಹೊರೆಯವರಾಗಿ, ಒಂದೇ ವಯಸ್ಸಿನ ಮಕ್ಕಳ ಅಮ್ಮ ಅಪ್ಪಂದಿರಾಗಿ ಹತ್ತಿರವಾದವರು ನಾವು. ತನ್ನದೇ ವಯಸ್ಸಿನ ಮಗು ಜ್ಯೊನಾತನ್, ನವೀನನಿಗೆ ಆಡಲು ಸಿಕ್ಕ ಹೊಸ ಗೆಳೆಯನಾಗಿದ್ದ. ಮೊದಲ ಬಾರಿ ಬೆಟ್ಟಿಯ ಪರಿಚಯವಾದಾಗ ಅವಳು ತನ್ನ ಮಗುವನ್ನು ಗಂಡುಮಗು ಎಂದೇ ಪರಿಚಯಿಸಿದ್ದು. ಹುಟ್ಟಿದ ಮಗುವಿನ ದೇಹ ನಾವೀಗ ಅಂದುಕೊಂಡಿರುವ ಗಂಡಿನ ದೇಹದಲ್ಲಿಯೇ ಇದ್ದಾಗ ಹಾಗೆ ತಾನೇ ಎಲ್ಲರೂ ಅಂದುಕೊಳ್ಳುವುದು? ಜ್ಯೊನಾತನ್ ಮತ್ತು ನವೀನ ಎಷ್ಟು ಬೇಗ ಆಡುತ್ತಾ ಬೆಳೆಯುತ್ತಾ ಒಬ್ಬರನ್ನೊಬ್ಬರು ಬಿಟ್ಟಿರಲಾರದ ಗೆಳೆಯರಾದರು! ಜೋ ಜೊತೆಗೆ ಶಾಲೆ, ಜೋ ಜೊತೆಗೆ ಆಟ, ಜೋ ಜೊತೆಗೆ ಊಟ. ಪುಟ್ಟ ನವೀನನ ಪುಟ್ಟ ಗೆಳೆಯನಾಗಿ ಜೋ ನಮಗೂ ಅಚ್ಚುಮೆಚ್ಚಿನ ಮಗುವಾಗಿದ್ದವನು. ಬೇಬಿ ಸಿಟಿಂಗುಗಳು, ಸ್ಲೀಪ್ ಓವರ್ಗಳು, ಸಿನಿಮಾ, ಸಂಗೀತದ ಔಟಿಂಗುಗಳು ಹೀಗೆ ಈ ಇಬ್ಬರು ಮಕ್ಕಳನ್ನೂ ಅಲ್ಲಲ್ಲಿ ಕರೆದೊಯ್ಯುತ್ತಾ ನೆರೆಹೊರೆಯ ನಾವೂ ಒಬ್ಬರಿಗೊಬ್ಬರು ಹತ್ತಿರವಾದೆವು. ಮಕ್ಕಳಿಬ್ಬರೂ ಬೆಳೆಯುತ್ತಿದ್ದರು. ಅದು ಯಾವಾಗ ಜೋ ತನ್ನನ್ನು ತಾನು ಗಂಡಲ್ಲ ಎಂದು ಗುರುತಿಸಲು ಶುರು ಮಾಡಿದ್ದು? ಬೆಟ್ಟಿ ಹೇಳುವಂತೆ ಜೋಗೆ ಮೂರು ವರ್ಷವಿದ್ದಾಗಿನಿಂದಲೂ ಅವನು ಹ್ಯಾಲೋವೀನ್ ವೇಷಕ್ಕಾಗಿ ಆರಿಸುತ್ತಿದ್ದಿದ್ದು ಡಿಸ್ನಿ ರಾಜಕುಮಾರಿಯ ಬಟ್ಟೆಗಳನ್ನೇ. ಇನ್ನೇನೇ ಆಯ್ಕೆಯನ್ನು ಅವನ ಮುಂದಿಟ್ಟರೂ ತಾನು ಪ್ರಿನ್ಸೆಸ್ಸೇ ಆಗಬೇಕೆಂದು ಹಠ ಹಿಡಿಯುತ್ತಿದ್ದ ಮಗುವಿನ ಮನಸ್ಸಿನಲ್ಲಿ ಆಗಲೇ ತಾನು ಹೆಣ್ಣು ಮಗು ಎಂಬ ಭಾವ ಬೆಳೆದಿತ್ತೇನೋ ಎಂದು ಬೆಟ್ಟಿ ಈಗ ನೆನಪಿಸಿಕೊಳ್ಳುತ್ತಾಳೆ. ಪ್ರೈಮರಿ, ಇಂಟರ್ಮೀಡಿಯೆಟ್ ತರಗತಿಗಳನ್ನು ಮುಗಿಸಿ ಇನ್ನೇನು ಮಿಡ್ಲ್ ಸ್ಕೂಲಿಗೆ ಬರುವ ಹೊತ್ತಿಗಾಗಲೇ ಮಗು ಜೋ ತನ್ನನ್ನು ಇನ್ನು ಮುಂದೆ ಹೆಣ್ಣು ಮಗು ಎಂದು ತಿಳಿದುಕೊಳ್ಳಬೇಕೆಂದು, ತನ್ನನ್ನು ಜೋಸೆಫೀನ್ ಎಂದೇ ಕರೆಯಬೇಕೆಂದು ಅಪ್ಪ ಅಮ್ಮನಲ್ಲಿ ಕೇಳತೊಡಗಿದ್ದು.

ದಿನ ಕಳೆದಂತೆ, ಈ ವಿಷಯವನ್ನು ತಾವು ಹಗುರಾಗಿ ತೆಗೆದುಕೊಳ್ಳುವುದು ಸಾಧ್ಯವಿಲ್ಲವೆಂಬುದು ಬೆಟ್ಟಿ ಮತ್ತು ಕೆವಿನ್‌ಗೆ ಮನವರಿಕೆಯಾಗತೊಡಗಿತ್ತು. ಮಿಡಲ್‌ಸ್ಕೂಲು ಸೇರುವ ಮೊದಲೇ ಜೋ ಮಾಡಿದ ಮೊದಲ ಕೆಲಸವೆಂದರೆ ಅತ್ತೂ ಕರೆದು ಅಪ್ಪ-ಅಮ್ಮನನ್ನು ಒಪ್ಪಿಸಿ, ತನ್ನ ಹೆಸರನ್ನು ಬದಲಿಸಿಕೊಂಡಿದ್ದು. ಜ್ಯೊನಾತನ್ ಜೋಸೆಫಿನ್

ಆಗಿ ಬದಲಾದಾಗ, ಮಗುವನ್ನು ಮೊದಲಿನಂತೆ ಈಗಲೂ ಜೋ ಅಂತಲೇ ಕರೆಯಬಹುದಲ್ಲ ಎಂಬ ಕಾರಣಕ್ಕೆ ನನಗೆ ಚೂರು ನಿರಾಳವೆನಿಸಿದ್ದನ್ನ ನೆನಸಿಕೊಂಡರೆ ನಗು ಬರುತ್ತದೆ. ಹೆಸರಿನೊಟ್ಟಿಗೆ ಜೋ ತನ್ನ ವಾರ್ಡ್ರೋಬನ್ನೂ ನಿಧಾನವಾಗಿ ಬದಲಿಸಿಕೊಂಡಳು. ಹುಡುಗಿಯರಿಗೆಂದೇ ವಿಶೇಷವಾಗಿ ಸಿದ್ಧ ಮಾಡುವ ಬಣ್ಣ ವಿನ್ಯಾಸಗಳ ಉಡುಗೆ ತೊಡುಗೆಗಳನ್ನು ಧರಿಸಲಾರಂಭಿಸಿದಳು. ತನ್ನನ್ನು ಅವನು ಎಂದು ಕರೆಯದೆ ಅವಳು ಎನ್ನುವ ಸರ್ವನಾಮದಲ್ಲಿಯೇ ಗುರುತಿಸಬೇಕೆಂದು ಬಯಸಿ ಅದು ಕೂಡ ಬದಲಿಸಿಕೊಂಡಿದ್ದಾಗಿತ್ತು. ಇದೆಲ್ಲವನ್ನೂ ಬದಲಿಸಿಕೊಂಡ ಹಾಗೆ ಮುಂದೊಮ್ಮೆ ತನ್ನ ದೇಹವನ್ನೂ ಬದಲಿಸಿಕೊಂಡು ತನ್ನಿಷ್ಟದ ಹಾಗೆ 'ಹಿ' ಬದಲು ಸಂಪೂರ್ಣವಾಗಿ 'ಶಿ' ಆಗಿಯೇ ಬದಲಾಗುವುದು ಜೋ ಕನಸು. ತಾನು ಹೆಣ್ಣು ಎಂದೆನ್ನಿಸುವ ತನ್ನೊಳಗಿನ ನಿಲುವಿಗೆ, ತನ್ನ ದೇಹವೂ ಕೈಗೂಡಿಸಿದಾಗ ಮಾತ್ರ ತಾನು ಸಂಪೂರ್ಣವಾದಂತೆ ಅನಿಸುತ್ತದೆ, ಅದುವರೆಗೂ ತಾನು, ತನಗಿಷ್ಟವಿಲ್ಲದ ಇನ್ಯಾವುದೋ ಅಪರಿಚಿತ ಸ್ಥಳದಲ್ಲಿ ಬಲವಂತವಾಗಿ ಬಂಧಿಯಾಗಿರುವಂತೆ ಅನಿಸುತ್ತದೆ ಎಂದು ಹೇಳುತ್ತಾ ನಮ್ಮ ಸಪೋರ್ಟ್ ಗುಂಪಿನ ಎಷ್ಟೋ ಮೀಟಿಂಗುಗಳಲ್ಲಿ ಜೋ ಕಣ್ಣೀರಾಗುತ್ತಿದ್ದಳು.

ಮಗು ಸಣ್ಣದಿದ್ದಾಗ ತಾನು ಗಂಡಲ್ಲ ಹೆಣ್ಣು ಎಂದು ಹೇಳುತ್ತಿದ್ದಿದ್ದು ತಾವಂದುಕೊಂಡದ್ದಕ್ಕಿಂತ ಗಂಭೀರವಾದ ವಿಷಯವೆಂದು ನಂತರದಲ್ಲಿ ಬೆಟ್ಟಿಗೂ ಕೆವಿನ್‌ಗೂ ತಿಳಿದಿದ್ದರೂ ಅವರಿಬ್ಬರೂ ಅದನ್ನು ಸ್ವೀಕರಿಸಿದ ರೀತಿ ಮಾತ್ರ ಬೇರೆಯಾಗಿತ್ತು. ಈ ಹೊಸ ವಿದ್ಯಮಾನವನ್ನೂ ಅದು ತನಗೆ ಒದಗಿಸುತ್ತಿರುವ ಸರಣಿ ಸವಾಲುಗಳನ್ನೂ ಬೆಟ್ಟಿ ಆದಷ್ಟೂ ಅರ್ಥ ಮಾಡಿಕೊಳ್ಳಲು ಪ್ರಯತ್ನಿಸುತ್ತಿದ್ದಳು. ಜೋ ಜೊತೆಗೆ ಯಾವತ್ತಿನಂತೆಯೇ ಸ್ನೇಹ ಸಂಬಂಧ ಮುಂದುವರಿಸಿ ಜೊತೆಯಾಗಿರುವ ಅವಳ ಹಳೆಯ, ಹೊಸ ಗೆಳೆಯ ಗೆಳತಿಯರ ಒಂದು ಸಪೋರ್ಟ್ ಗುಂಪನ್ನು ಕೂಡಾ ಮಾಡಿ ಮುಕ್ತ ಮಾತುಕತೆ, ವಿಷಯ ವಿನಿಮಯದ ಮೂಲಕ ಈ ಅನಿವಾರ್ಯವನ್ನು ಸಹಜವೆಂದು ಸ್ವೀಕರಿಸಿ ಸಂಭಾಳಿಸುವ ಕೆಲಸ ಮಾಡುತ್ತಿದ್ದಳು. ಕೆವಿನ್ ಮಾತ್ರ ಸಾರಾ ಸಗಟಾಗಿ ಇಂಥದ್ದೊಂದು ಸ್ಥಿತಿ ಇರುವುದನ್ನೇ ನಿರಾಕರಿಸಿ, ಮಗುವಿನ ಮನಸ್ಸನ್ನು ಬದಲಿಸಲು ತನ್ನಿಂದಾದ ಎಲ್ಲವನ್ನೂ ಮಾಡುತ್ತಿದ್ದ. ಇದು ಈ ಮೂವರ ಸಂಬಂಧದಲ್ಲೂ ಹೊಸದೊಂದು ಬಿಕ್ಕಟ್ಟನ್ನು ಸೃಷ್ಟಿಸಿತ್ತು.

ಹಾಗೆ ನೋಡಿದರೆ ನಿಜವಾದ ಸಮಸ್ಯೆ ಶುರುವಾಗಿದ್ದು ಜೋ ಒಂಬತ್ತು ವರ್ಷದವಳಿದ್ದಾಗಲೇ. ವೈದ್ಯರು ತಿಳಿಸಿದಂತೆ, ಪ್ರೌಢಾವಸ್ಥೆಗೆ ಸಮೀಪ ಬರತೊಡಗಿದ ಕಾರಣ ಹುಟ್ಟಿನಿಂದ ಬಂದ ಅವಳ ಗಂಡು ದೇಹದಲ್ಲಿ ಗಂಡಿನ ಹಾರ್ಮೋನುಗಳ ಚಟುವಟಿಕೆ ಶುರುವಾಗಿ ಕ್ರಮೇಣ ಬೆಳೆದಂತೆಲ್ಲ ಜೋ ಸಂಪೂರ್ಣವಾಗಿ ಗಂಡಿನ ದೇಹದಲ್ಲಿಯೇ ಇರಬೇಕಾಗುತ್ತಿತ್ತು. ನಿನ್ನನ್ನು ನೀನು ಹೇಗೆ ಬೇಕಾದರೂ ಗುರುತಿಸಿಕೋ ಆದರೆ ದೇಹದಿಂದ ಮಾತ್ರ ನೀನು ಗಂಡಿನ ದೇಹವನ್ನೇ ಹೊಂದಿ ಬದುಕಬೇಕಾಗುತ್ತದೆ ಎಂಬುದನ್ನು ಒಪ್ಪಲು ಜೋ ತಯಾರಿರಲಿಲ್ಲ. ಟೆಸ್ಟಾಸ್ಟೆರಾನ್ ಹಾರ್ಮೋನುಗಳು ದಾಳಿಯಿಟ್ಟು ಇದುವರೆಗೂ ಸುಕೋಮಲವಾಗಿದ್ದ ತನ್ನ ದೇಹವನ್ನು ಗಡುಸಾಗಿ, ಪೆಡುಸಾಗಿ

ಒಟ್ಟಿನಲ್ಲಿ ಗಂಡಿನದಾಗಿ ಬದಲಾಯಿಸುವುದು ಜೋಗೆ ಬೇಡವಾಗಿತ್ತು. ಕಂಕುಳು, ಎದೆ, ಹೊಟ್ಟೆ, ಮುಖ, ಜನನಾಂಗಗಳಲ್ಲಿ ಕೂದಲು ಹುಟ್ಟುವುದು, ಗಂಟಲಲ್ಲಿ ಆಡಮ್ ಆಪಲ್ ಉಬ್ಬಿ ಬರುವುದು, ಧ್ವನಿ ಮಂದ್ರಕ್ಕಿಳಿದು ಗಡುಸಾಗುವುದು, ವೃಷಣಗಳು ದೊಡ್ಡದಾಗಿ, ತನ್ನ ದೇಹ ಗಂಡಾಗುವುದಷ್ಟೇ ಅಲ್ಲ, ಟೆಸ್ಟಾಸ್ಟೊರಾನ್ ಕಾರಣದಿಂದ ತನ್ನೊಳಗೆ ಹುಟ್ಟಿಬಿಡಬಹುದಾದ ತಾನಿನ್ನು ಗಂಡೆಂಬ ಭಾವವನ್ನು ಒಪ್ಪಲು ಜೋ ಸಿದ್ಧಳಿರಲಿಲ್ಲ. ಇದರ ಬದಲಿಗೆ ಈಸ್ಟ್ರೋಜೆನ್ ಹಾರ್ಮೋನನ್ನು ಹೊರಗಿನಿಂದ ಚುಚ್ಚಿಸಿಕೊಂಡು ತನ್ನ ದೇಹದ ಕಣ ಕಣವನ್ನೂ ತಾನು ಬಯಸಿದಂತೆ ಹೆಣ್ಣಾಗಿ ಪರಿವರ್ತಿಸಿಕೊಳ್ಳಬೇಕೆನ್ನುವುದು ಜೋ ಕನಸು. ಮಾತ್ರವಲ್ಲದೆ ಮುಂದೊಮ್ಮೆ ತನ್ನ ಜನನಾಂಗವನ್ನೂ ಬದಲಿಸಿಕೊಳ್ಳುವ ಆಸೆ. ಇದನ್ನು ವಿರೋಧಿಸಿದಷ್ಟೂ ಅವಳಲ್ಲಿ ಆತ್ಮಹತ್ಯಾ ಮನೋಭಾವ ಬಲಿತು ಬೆಳೆಯುತ್ತಿರುವುದನ್ನು ತಿಳಿದ ನಂತರ ಬೆಟ್ಟಿ ಮತ್ತು ಕೆವಿನ್ ಇಬ್ಬರೂ ಕಂಗಾಲಾಗಿ ಹೋಗಿದ್ದರು. ಹಾರ್ಮೋನ್ ಚಿಕಿತ್ಸೆಯ ಬಗ್ಗೆ ಹೆತ್ತವರಿಬ್ಬರೂ ಒಮ್ಮತಕ್ಕೆ ಬರಲಾಗದ ಕಾರಣ, ಸದ್ಯಕ್ಕೆ ನಿರ್ಬಂಧಕಗಳನ್ನು ಒಂಬತ್ತರ ಜೋ ದೇಹಕ್ಕೆ ಸೇರಿಸುತ್ತಾ ಅವಳು ಪ್ರೌಢಾವಸ್ಥೆಗೆ ಬರುವ ಹಂತವನ್ನೇ ಮುಂದೂಡಬಹುದಾದ ಸಾಧ್ಯತೆಯನ್ನು ಅವಳ ವೈದ್ಯರು ಇವರ ಮುಂದಿಟ್ಟಾಗ ಇದಕ್ಕೆ ಒಪ್ಪಲೇಬೇಕಾಯ್ತು. ಹಾಗೆ ಒಂಬತ್ತು ವರ್ಷವಿದ್ದಾಗಿನಿಂದಲೂ ಆರು ವಾರಕ್ಕೊಮ್ಮೆ ಪ್ಯುಬರ್ಟಿ ಬ್ಲಾಕರ್ಸ್‌ಗಳನ್ನು ತನ್ನ ದೇಹದೊಳಗೆ ಚುಚ್ಚಿ ಸೇರಿಸಿಕೊಳ್ಳುತ್ತಲೇ ಬಂದ ಜೋ ಈಗ 14ರ ಮಗು. ಆದಷ್ಟೂ ಬೇಗ ಈ ಬ್ಲಾಕರ್ಸ್‌ಗಳನ್ನು ನಿಲ್ಲಿಸಿ, ಹಾರ್ಮೋನ್ ಚಿಕಿತ್ಸೆಗೆ ಒಳಗಾಗಬೇಕೆಂದು ಹಾತೊರೆಯುತ್ತಿರುವ ಮಗು. ಈ ನಿರ್ಬಂಧಕಗಳ ಮತ್ತು ಹಾರ್ಮೋನ್ ಚಿಕಿತ್ಸೆಯ ಬಗ್ಗೆಯಾಗಲಿ ಅಥವಾ ಅದರಿಂದ ದೇಹಕ್ಕಾಗಬಹುದಾದ ಪಾರ್ಶ್ವ ಪರಿಣಾಮಗಳ ಬಗ್ಗೆ ಆಗಲಿ ಹೇಳಿಕೊಳ್ಳುವಂತಹಾ ಸಂಶೋಧನೆಗಳೇನೂ ಆಗಿಲ್ಲವೆಂಬುದು ಪೋಷಕರ ಗೊಂದಲವನ್ನು ಇನ್ನಷ್ಟು ಹೆಚ್ಚು ಮಾಡಿತ್ತು. ಇದೇ ಕಾರಣಕ್ಕೆ, ಈ ಐದು ವರ್ಷದಲ್ಲಿ ಬೆಟ್ಟಿ ಹೆಚ್ಚು ಹೆಚ್ಚು ತನ್ನ ಮಗುವಿನ ಆಯ್ಕೆಯ ಸಾಧ್ಯತೆ ಬಾಧ್ಯತೆಗಳನ್ನು ತಿಳಿದುಕೊಳ್ಳುತ್ತಾ ಅದರ ಕಷ್ಟಾನಿಷ್ಟಗಳನ್ನು ಅಳೆಯುತ್ತಾ ಒಮ್ಮೊಮ್ಮೆ ಹಗುರಾಗುತ್ತಾ ಒಮ್ಮೊಮ್ಮೆ ದುಃಖಿಯೂ ಆಗುತ್ತಾಳೆ. ಈ ವಿಷಯವಾಗಿ ಕೆವಿನ್ ಇನ್ನೂ ಜೋ ಜೊತೆಗೆ ಸಂಧಾನ ಮಾಡಲು ಹೆಣಗುತ್ತಲೇ ಇದ್ದಾನೆ. ಅವನ ಮುಖ್ಯ ವಾದವೆಂದರೆ, ಈಗ ಹೆಣ್ಣಾಗಿ ಬದಲಾಗುವ ಜೋಗೆ ಮುಂದೊಮ್ಮೆ ತನ್ನ ನಿರ್ಧಾರ ತಪ್ಪೆನಿಸಿ ಮತ್ತೆ ಪುನರ್ಲಿಂಗ ಬದಲಾವಣೆ ಮಾಡಿಸಿಕೊಳ್ಳಬೇಕೆನಿಸುವ ಸಾಧ್ಯತೆ ಇದೆಯಲ್ಲ ಎಂಬುದು. ಜೋ ಇದನ್ನು ಖಡಾಖಂಡಿತವಾಗಿ ನಿರಾಕರಿಸುತ್ತಿದ್ದಳು. 'ನಿನಗಿದು ಯಾಕೆ ತಿಳಿಯುತ್ತಿಲ್ಲ ಡ್ಯಾಡ್? ನನಗೆ ಒಪ್ಪಿಕೊಳ್ಳಲಿಕ್ಕೇ ಆಗದ ತಪ್ಪು ದೇಹದಲ್ಲಿ ಹುಟ್ಟಿಬಿಟ್ಟಿದೀನಿ ನಾನು. ಇದು ನೀನು ಹೇಳುವ ಹಾಗೆ, ಹದಿಹರೆಯದ ಸಮಯದ ಎಲ್ಲವನ್ನೂ ನಿರಾಕರಿಸುವ, ವಿರೋಧಿಸುವ ಮನಸ್ಥಿತಿಯಿಂದ ಬಂದಿದ್ದಲ್ಲ. ನಾನು ಪುಟ್ಟ ಮಗುವಿದ್ದಾಗಿನಿಂದಲೂ ಇರುವುದು ಹೀಗೇ ಎಂದು ನಿನಗೆ ಚೆನ್ನಾಗಿ ಗೊತ್ತಿದೆ' ಎಂದು ಅಪ್ಪನ ಜೊತೆಗೆ ವಾದಿಸುತ್ತಾ ಬಸವಳಿಯುತ್ತಿದ್ದಳು. 'ನಾನು ಟ್ರಾನ್ಸ್ ಅಲ್ಲ. ನನ್ನನ್ನು ಹಾಗೆ ಯಾರೂ

ಕರೆಯಬೇಡಿ. ಐಯಾಮ್ ಅ ಗರ್ಲ್, ಐಯಾಮ್ ಇನ್ ಅ ರಾಂಗ್ ಬಾಡಿ. ಹೆಲ್ಪ್ ಮೀ' ಎಂದು ಚೀರುವ ಮಗಳನ್ನು ಹೇಗೆ ಸಂತೈಸುವುದು ತಿಳಿಯದೆ ಕೆವಿನ್ ಹೈರಾಣಾಗುತ್ತಿದ್ದ. ಈ ನಿರ್ಬಂಧಕಗಳು, ನಂತರದ ಹಾರ್ಮೋನ್ ಚಿಕಿತ್ಸೆ, ಮುಂದೊಮ್ಮೆ ಚಾಕು ಕತ್ತರಿಗಳಿಂದ ಕತ್ತರಿಸಿ, ಕೆತ್ತಿ, ಹೊಲೆದು, ತನಗೆ ಬೇಕಾದ ದೇಹವನ್ನು ತಾನು ಪಡೆದುಕೊಳ್ಳುವೆ ಎನ್ನುವ ಮಗುವಿನ ಬಯಕೆಯ ತೀವ್ರತೆಯನ್ನು ಹೇಗೆ ಅರ್ಥ ಮಾಡಿಕೊಳ್ಳಬೇಕೆಂದೇ ತಿಳಿಯದೆ ಒದ್ದಾಡುತ್ತಿದ್ದ. ಬೆಟ್ಟಿ ಮಾತ್ರ ಗಟ್ಟಿಯಾಗಿ ನಿಂತು ಮಗಳ ಆಯ್ಕೆಯೇ ನನ್ನ ಆಯ್ಕೆ, ಅವಳು ಜೀವಂತವಾಗಿ ಸಂತೋಷವಾಗಿ ಇರುವುದಷ್ಟೇ ತನಗೆ ಮುಖ್ಯ ಎನ್ನುತ್ತಿದ್ದಳು. ಈ ಬಗ್ಗೆ ಸಮಾಜದಲ್ಲಿ ಹೆಚ್ಚು ತಿಳಿವಳಿಕೆ ಮೂಡಿಸಲು, ಮುಂದೊಮ್ಮೆ ಈ ಲೋಕವನ್ನು ಆ ಲಿಂಗ, ಈ ಲಿಂಗ, ಲಿಂಗರಹಿತ, ಲಿಂಗಾತೀತ ಎಂದೆಲ್ಲ ಬೇರೆ ಬೇರೆ ಹೆಸರಿನಲ್ಲಿ ಕರೆಸಿಕೊಳ್ಳುವ ಎಲ್ಲಾ ಜೀವಿಗಳನ್ನೂ ಸಮನಾಗಿ ಕಾಣುವ ಸಮ ಸಮಾಜವನ್ನು ಕಟ್ಟಲು ತನ್ನ ಅಳಿಲು ಸೇವೆಯೆಂದು ಈ ಸಪೋರ್ಟ್ ಗುಂಪನ್ನು ಕಟ್ಟಿ ಮಾತುಕತೆಯನ್ನು ಏರ್ಪಡಿಸುತ್ತಿದ್ದಳು.

ಇವತ್ತಿನ ಮಾತುಕತೆಗೆ ಈ ಗುಂಪಿಗೆ ಹೊಸದಾಗಿ ಸೇರ್ಪಡೆಯಾದ ಏಜೆ ಕೂಡ ಬಂದಿದ್ದರು. ಏಜೆ ಸಹಾ ನವೀನನ ಗೆಳೆಯ–ಗೆಳತಿಯರ ಗುಂಪಿನಲ್ಲೊಬ್ಬರು. ಅವನದೇ ವಯಸ್ಸಿನವರು. 'ಅವಳು' ಅಥವಾ 'ಅವನು' ಎಂದು ತನ್ನನ್ನು ಗುರುತಿಸಿಕೊಳ್ಳದೆ 'ಅವರು' ಎಂಬ ಸರ್ವನಾಮದಲ್ಲಿಯೇ ತನ್ನನ್ನು ಸಂಬೋಧಿಸಬೇಕೆಂದು ಬಯಸಿದ ಜೆಂಡರ್‌ನ್ಯೂಟ್ರಲ್ ಮಗು. ತನ್ನನ್ನು ತಾನು ಯಾಕೆ ಹೆಣ್ಣು ಎಂದಾಗಲಿ, ಗಂಡು ಎಂದಾಗಲಿ, ಟ್ರಾನ್ಸ್ ಎಂದಾಗಲಿ ಗುರುತಿಸಿಕೊಳ್ಳಲು ಇಚ್ಛಿಸುವುದಿಲ್ಲ ಎಂದು ಹೊಸದಾಗಿ ಗುಂಪಿಗೆ ಬಂದ ಏಜೆ ಹೇಳುತ್ತಿದ್ದಾಗ ಎಲ್ಲರೂ ಎಂದಿನಂತೆ ಗಂಭೀರವಾಗಿ ಅದನ್ನು ಕೇಳಿಸಿಕೊಂಡೆವು. ಏಜೆ ಆಡುತ್ತಿದ್ದ ಮಾತಿನಲ್ಲಿ ನಿಜವಿದ್ದರೂ ಅದು, ಹದಿನಾಲ್ಕರ ಹರೆಯದ ಎಳೆಯ ಮನಸ್ಸೊಂದು ಮಾತ್ರ ಮುಗ್ಧವಾಗಿಯೇ ಕಾಣಲಾಗುವ ಉಟೋಪಿಯಾದ ಕನಸಿನ ಮಾತು ಎಂದು ನನಗನ್ನಿಸುತ್ತಿತ್ತು.

'ಹೆಣ್ಣಾದರೆ ಹೀಗಿರಬೇಕು, ಗಂಡಾದರೆ ಹೀಗಿರಬೇಕು ಎಂದೆಲ್ಲಾ ಶತಶತಮಾನಗಳಿಂದ ನಮ್ಮ ತಲೆಯಲ್ಲಿ ತುಂಬುತ್ತಿರುವ ಕಸದ ಕಾರಣ ನಾವು ಒಳಗೊಳಗೇ ಕೊಳೆತುಹೋಗುತ್ತಿದ್ದೇವೆ. ನಮಗೊಪ್ಪಿಸಿದ ಪಾತ್ರಗಳನ್ನು ಇನ್ಯಾರಿಗೋಸ್ಕರವೋ ನಿರ್ವಹಿಸುವ ಬಳಲಿಕೆಯಲ್ಲಿ ನಿಜವಾಗಿಯೂ ನಾವೇನಾಗಿದ್ದೇವೆ, ನಮಗೇನು ಬೇಕು ಎನ್ನುವುದರ ಕಡೆಗೆ ಗಮನ ಹರಿಸಲು ಕೂಡ ಮರೆತಿದ್ದೇವೆ. ನಮಗಿರುವ ಒಂದೇ ದಾರಿ ಎಂದರೆ ಯಾವ ಹಣೆಪಟ್ಟಿಯನ್ನೂ ಕಟ್ಟಿಕೊಳ್ಳದೆ, ನಮ್ಮನ್ನು ನಾವು ಮನುಷ್ಯಜೀವಿಯೆಂದು ಗುರುತಿಸಿಕೊಳ್ಳುವುದು ಅಷ್ಟೇ. ಒಮ್ಮೆ ಪಾತ್ರಗಳ ಹೊರೆ ಕಳಚಿದರೆ ತಾನೇ ತಾನಾಗಿ ಸಮ ಸಮಾಜ ನಿರ್ಮಾಣವಾಗುತ್ತದೆ. ಯಾರೂ ಯಾರನ್ನೂ ದುರ್ಬಲರೆಂದೋ ಶಕ್ತರೆಂದೋ ಗುರುತಿಸುವ ಸುಳ್ಳುಗಳೇ ಆಗ ಇರುವುದಿಲ್ಲ...' ಎಂದು ಏಜೆ ಹೇಳುತ್ತಿರುವಾಗಲೇ ಜೋ ಧಡಕ್ಕನೆ ಎದ್ದು ನಿಂತು ಅಡ್ಡಡ್ಡ ತಲೆಯಾಡಿಸುತ್ತಾ,

'ಇಲ್ಲ ಇಲ್ಲಾ... ನಾನು ಹೆಣ್ಣು ಎಂಬ ಹಣೆಪಟ್ಟಿ ಕಟ್ಟಿಕೊಂಡಾಗಲೇ ನನಗೆ ಸಮಾಧಾನವಾಗೋದು. ನನ್ನ ಪಾತ್ರವನ್ನ ನಾನು ನನಗೆ ಬೇಕಾದಂತೆಯೇ ನಿರ್ವಹಿಸಲು ನನಗೆ ಆ ಹಣೆಪಟ್ಟಿಯೇ ಬೇಕು. ನನಗೆ ನಾನಷ್ಟೇ ಅಲ್ಲ, ಎಲ್ಲರೂ ನನ್ನನ್ನು ಹೆಣ್ಣು ಎಂದು ಒಪ್ಪಿಕೊಳ್ಳಲೇಬೇಕೆಂಬ ಆಸೆ ಇದೆ' ಎಂದಳು. ಇಷ್ಟು ಹೇಳುತ್ತಿರುವಾಗಲೇ ಅವಳ ಗಂಟಲು ಉಬ್ಬಿ ಕಣ್ಣಂಚು ಹನಿಗೂಡತೊಡಗಿತ್ತು. ತನ್ನನ್ನು ತಾನು ಸಂಭಾಳಿಸಿಕೊಳ್ಳುತ್ತಲೇ ಜೋ ಹೇಳಿದಳು,

'ಯು ನೋ ವಾಟ್ ಏಜೆ? ನನ್ನನ್ನು ಕಾಡುತ್ತಿರುವ ನಿಜವಾದ ವಿಷಯ ಅಂದರೆ, ಮುಂದೊಮ್ಮೆ ನಾನು ಈಗಿರುವ ನನ್ನ ದೇಹದ ಶಿಶ್ನ, ವೃಷಣಗಳನ್ನು ಕತ್ತರಿಸಿಕೊಂಡು ವಜೈನೋಪ್ಲಾಸ್ಟಿ ಮಾಡಿಸಿಕೊಳ್ಳಬಹುದು. ಇರುವಷ್ಟು ಚರ್ಮ ಸಾಲದಿದ್ದಲ್ಲಿ ಸ್ಕಿನ್‌ಗ್ರಾಫ್ಟಿಂಗ್ ಮೂಲಕ ಹೆಚ್ಚುವರಿ ತ್ವಚೆಯನ್ನೂ ಬಳಸಿಕೊಂಡು ಯೋನಿಯೊಂದನ್ನೂ ನಿರ್ಮಿಸಿಕೊಂಡು, ಬಾಹ್ಯದಲ್ಲಿ ಹೆಣ್ಣಿನ ದೇಹವನ್ನು ಹೊಂದಿಬಿಡಬಹುದು. ಬೇಕಿದ್ದಷ್ಟೂ ಕಾಲವೂ ನನ್ನ ದೇಹದೊಳಗೆ ಈಸ್ಟ್ರೋಜೆನ್ ಸೇರಿಸುತ್ತಾ ನಾನು ಹೆಣ್ಣೆಂದು ನನಗನ್ನಿಸುವ ಭಾವಕ್ಕೆ ನನ್ನೊಳಗಿನ ಹೆಣ್ಣು ಹಾರ್ಮೋನಿನ ಜೊತೆಯಿದೆ ಎಂದುಕೊಳ್ಳಬಹುದು. ಆದರೆ...' ಈಗ ಜೋ ಕಣ್ಣಿನಲ್ಲಿ ತುಂಬಿಕೊಳ್ಳುತ್ತಿದ್ದ ನೀರು ಧಳಕ್ಕನೆ ಹೊರಬಂದು ಕೆನ್ನೆಯ ಮೇಲೆ ಕೋಡಿ ಬಿತ್ತು.

'...ಆದರೆ ನಾನು ಏನೇ ಮಾಡಿದರೂ ಅಮ್ಮ ಆಗಲಾರೆ. ನನಗೆ ಗರ್ಭಕೋಶ, ಅಂಡಾಶಯಗಳನ್ನು ಸದ್ಯಕ್ಕಂತೂ ಯಾರೂ ಸೃಷ್ಟಿಸಿಕೊಡಲಾರರು. ನನ್ನೊಳಗೆ ಜೀವವೊಂದು ಅಂಕುರವಾಗುವ, ಬೆಳೆಯುವ ಯಾವ ಅನುಭವವನ್ನೂ ನಾನು ಪಡೆಯಲಾರೆ. ಮಗುವೊಂದನ್ನು ನಾನೇ ಹೊತ್ತು, ಹೆತ್ತು ಅಮ್ಮನಾಗುವುದು ನನಗೆ ಸಾಧ್ಯವೇ ಇಲ್ಲವಲ್ಲ ಅನ್ನುವ ದುಃಖ ನನ್ನದು' ಎಂದು ಅಳಲಾರಂಭಿಸಿದಳು.

ನಾವೆಲ್ಲಾ ಇದಕ್ಕೆ ಹೇಗೆ ಪ್ರತಿಕ್ರಿಯಿಸುವುದು ತಿಳಿಯದೆ ಸುಮ್ಮನೆ ಕುಳಿತೆವು. ಹೊತ್ತು ಹೆತ್ತು ಹಾಲೂಡಿಸಿದ ಮಾತ್ರಕ್ಕಷ್ಟೇ ಯಾರಾದರೂ ಅಮ್ಮನಾಗಿಬಿಡಬಹುದಾ? ಅಮ್ಮನಾಗುವುದು ಅಥವಾ ಆಗದೇ ಇರುವುದು, ಅಲಂಕಾರ ಮಾಡಿಕೊಳ್ಳುವುದು ಅಥವಾ ಬಿಡುವುದು, ಮನೆಯಲ್ಲಿ ಉಳಿಯುವುದು ಅಥವಾ ಹೊರಗೆ ದುಡಿಯುವುದೇ ಪರಮೋಚ್ಚ ಗುರಿಯಾಗುವುದು ಇತ್ಯಾದಿ ಇತ್ಯಾದಿ ಬೈನರಿಗಳೇ ಹೆಣ್ತನದ ನಿರ್ಣಾಯಕಗಳೆಂದು ಅಂದುಕೊಳ್ಳುವುದು ಕೂಡ ಕೌಟುಂಬಿಕ ಮತ್ತು ಸಾಮಾಜಿಕ ರಾಜಕೀಯದ ಹುನ್ನಾರಗಳಲ್ಲೊಂದು ಎಂಬುದನ್ನು ಜೋಗೆ ತಿಳಿಸಬೇಕಿತ್ತು. ಕಡೆಗೂ ನಾವೆಲ್ಲರೂ ಆದರ್ಶಗಳ ಸಿದ್ಧ ಮಾದರಿಗಳನ್ನು ಮೀರುತ್ತಾ ನಮಗೊದಗಿ ಬಂದಿರುವ ಈ ಬದುಕನ್ನು ನಮ್ಮಿಷ್ಟದಂತೆ ಬದುಕುವ ಹಂಬಲವನ್ನು ಹೊತ್ತವರು ಎಂದು ಹೇಳಬೇಕೆನ್ನಿಸಿತು. ಹೀಗೆಲ್ಲಾ ಅನಿಸುತ್ತಿರುವಾಗಲೇ ನನ್ನ ಮನಸ್ಸಲ್ಲಿ ಸುಳಿದವರು ಸುಬ್ಬಮ್ಮಜ್ಜಿ. ನನ್ನ ಅಜ್ಜಿ ವೆಂಕಟಲಕ್ಷಮ್ಮನ ಖಾಸಾ ಗೆಳತಿ ಸುಬ್ಬಮ್ಮಜ್ಜಿಯನ್ನು ಅವರ ಅತ್ತಿಗೆ ನಂಜಮ್ಮ, 'ಅಯ್ಯೋ, ಅವಳನ್ನು ಯಾವ ಅರ್ಥದಲ್ಲಿ ಹೆಣ್ಣು ಅನ್ನಬೇಕೋ ಕಾಣೆ' ಎನ್ನುತ್ತಿದ್ದರಲ್ಲ!

ಸುಬ್ಬಮ್ಮಜ್ಜಿಯ ಕತೆಯಾದರೂ ನನಗೆ ಬಿಡಿ ಬಿಡಿಯಾಗಿ ತಿಳಿದು ಬಂದಿದ್ದು ಸ್ವತಃ ಅವರ ಬಾಯಿಂದ ಅಷ್ಟೇ ಅಲ್ಲ, ನನ್ನಜ್ಜಿ ವೆಂಕಟಲಕ್ಷ್ಮಿ ಮತ್ತು ನಂಜಮ್ಮಜ್ಜಿಯರ ಬಾಯಿಂದ ಕೂಡ. ವರ್ಷಕ್ಕೊಮ್ಮೆ ಬೇಸಿಗೆಯಲ್ಲಿ, ರಜೆಗೆಂದು ಅಜ್ಜಿಯ ಮನೆಗೆ ಓಡುತ್ತಿದ್ದಾಗ ಕೇಳಿಸಿಕೊಳ್ಳುತ್ತಿದ್ದ ಕತೆಗಳಲ್ಲಿ ನನ್ನ ಮನಸ್ಸಿನಲ್ಲಿ ಅಚ್ಚಳಿಯದೇ ಉಳಿದಿರುವ ಕತೆ ಇದು.

* * *

ವೆಂಕಟಲಕ್ಷ್ಮಿಯ ದಿನ ಪ್ರಾರಂಭವಾಗುತ್ತಿದ್ದಿದ್ದೇ ಹೀಗೆ. ನಿತ್ಯವೂ ಅವಳು ನಸುಕಿನಲ್ಲೇ ಎದ್ದು ತಲೆಬಾಗಿಲು, ಮೆಟ್ಟಿಲು, ಜಗಲಿ, ಅಂಗಳವನ್ನು ಈಚಲ ಪೊರಕೆಯಿಂದ ಗುಡಿಸಿ ಸ್ವಚ್ಛಮಾಡಿ, ಕೊಟ್ಟಿಗೆಯಿಂದ ಸಗಣಿ ತೆಗೆದುಕೊಂಡು ಬಂದು ಮನೆಯ ಮುಂದಿನ ಅಂಗಳಕ್ಕೆ ಸಗಣಿ ನೀರು ಹಾಕಿ, ಅದನ್ನು ತೆಂಗಿನ ಕಡ್ಡಿಯ ಪೊರಕೆಯಿಂದ ಅಷ್ಟಷ್ಟೇ ತಳ್ಳಿ ಮಟ್ಟಸವಾಗಿಸಿ, ಈಗಷ್ಟೇ ಸಾರಿಸಿದ ಹಸಿಯಾದ ನೆಲದ ಮೇಲೆ ರಂಗೋಲಿ ಬಿಡುವುದು. ಇವಳು ಹಾಗೆ ಬಿಡಿಸುತ್ತಿದ್ದ ಬೆಳ್ಳನೆ ರಂಗೋಲಿಯನ್ನು ಕಂಡೇ ನಾಚಿದ ನಸುಕು ತಾನೂ ಮೆಲ್ಲನೆ ಬೆಳಗಲು ಮೊದಲಾಗುತ್ತಿತ್ತೇನೋ! ಆ ದಿನ ಕೂಡ ಹಾಸಿಗೆಯಿಂದೆದ್ದು ಬಂದು ಮುಂಬಾಗಿಲನ್ನು ತೆರೆದು ಹೊರಗೆ ಕಾಲಿಟ್ಟವಳ ಎದೆ ಯಾಕೊ ಧಸಕ್ಕೆಂದಿತು. ಸೂರ್ಯ ಹುಟ್ಟಲು ಇನ್ನೂ ಸಮಯವಿರುವ ಕಾರಣಕ್ಕೆ ಬೆಳಕಿರದೆ, ಮಂಜೂ ಮುಸುಕಿದ್ದ ಕಾರಣ ಆ ದಿನ ಮಾಮೂಲಿಗಿಂತಲೂ ಹೆಚ್ಚು ಮಬ್ಬು ಮಬ್ಬಾಗಿತ್ತು. ಬಾಗಿಲು ತೆರೆದು ಹೊರಗೆ ಕಾಲಿಟ್ಟ ವೆಂಕಟಲಕ್ಷ್ಮಿಗೆ ಯಾರದ್ದೋ ಹೆಜ್ಜೆ ಸಪ್ಪಳ ರಸ್ತೆಯಲ್ಲಿ ಹತ್ತಿರ ಹತ್ತಿರವಾಗುತ್ತಿರುವಂತೆ ಕೇಳಿತು. ಮನೆಯ ಮುಂದಿನ ಸಣ್ಣ ಅಂಗಳ ಇದ್ದಿದ್ದಾದರೂ ಐದೋ ಆರೋ ಅಡಿಯಷ್ಟು, ಅದೂ ಮುಂದಿನ ಪೇಟೆಬೀದಿಗೆ ಅಂಟಿಕೊಂಡೇ ಇದ್ದಿದ್ದು. ಇಡೀ ಪೇಟೆಬೀದಿ ಮುಸುಕು ಹೊದ್ದು ಮಲಗಿರುವ, ಕಾಲವೇ ಚಲಿಸದೆ ನಿಂತಿದೆಯೇನೋ ಅನಿಸುವಂತ, ಹಕ್ಕಿಗಳೂ ಇನ್ನೂ ನಿದ್ರಿಸುತ್ತಿರುವ ಈ ಸಮಯದ ನಿಶ್ಶಬ್ದವನ್ನು ದಿನವೂ ಮೊಟ್ಟಮೊದಲಿಗೆ ಕದಡುತ್ತಿದ್ದಿದ್ದು, ಪರಕೆಯಿಂದ ಅವಳು ಗುಡಿಸುವ ಶಬ್ದವೇ. ಆದರೆ ಈ ದಿನ ಕೇಳಿದ ಈ ಹೆಜ್ಜೆಸಪ್ಪಳ ಅದ್ಯಾವ ದಿಕ್ಕಿನಿಂದ ಬರುತ್ತಿದೆ ಎಂದು ತಿಳಿಯಲು ತೆರೆದ ತಲೆಬಾಗಿಲಲ್ಲೇ ನಿಂತು ಶಬ್ದ ಬರುತ್ತಿರುವತ್ತ ತಿರುಗಿ ನೋಡಿದ ವೆಂಕಟಲಕ್ಷ್ಮಿಯ ಜಂಘಾಬಲವೇ ಉಡುಗಿಹೋಯ್ತು. ಪೇಟೆಬೀದಿಯ ಕೊನೆಯ ಹನುಮಪ್ಪನ ಗುಡಿಯ ಕಡೆಯಿಂದ ಎತ್ತರದ ವಿಚಿತ್ರಾಕೃತಿಯೊಂದು ವಿಚಿತ್ರ ಬಗೆಯಲ್ಲಿ ತೂರಾಡುತ್ತಾ ಇತ್ತಲೇ ಬರುತ್ತಿದೆ. ಒಮ್ಮೆ ಬಲಗಡೆಗೆ ಮತ್ತೊಮ್ಮೆ ಎಡಗಡೆಗೆ ವಾಲಿಕೊಂಡು ಬರುತ್ತಿರುವ ಆ ಆಕಾರ ಮನುಷ್ಯನಂತೆಯೋ ಇಲ್ಲಾ ಪ್ರಾಣಿಯಂತೆಯೋ ಕಾಣುತ್ತಲೇ ಇಲ್ಲ. ತಲೆ ಇರಬೇಕಾದ ಜಾಗದಲ್ಲಿ ದೊಡ್ಡದೊಂದು ಸುತ್ತಿಗೆಯನ್ನು ಹೋಲುವ ಆಯತಾಕಾರವಿದೆ, ಕಡ್ಡಿಯಂತಹಾ ಎರಡು ಕೈಗಳಂಥವು ಅದನ್ನು ಹಿಡಿದುಕೊಂಡಿರುವ ಹಾಗಿದೆ ಅಥವಾ ಆ ಕಡ್ಡಿಗಳು ಆ ತಲೆಯಿಂದಲೇ ಹೊರಟು ಬಂದಂತಿವೆ. ತೂರಾಡುತ್ತಾ ಮುಗ್ಗರಿಸುವಂತೆ ಬರುತ್ತಿರುವ ಅದರ ಮುಂಡದ ಭಾಗ ಪೀಚಲು ಪೀಚಲಾಗಿದೆ. ತಲೆಗೂ ದೇಹಕ್ಕೂ ಸಂಬಂಧವೇ

ಇರದ ಆಕಾರ! ಇದನ್ನು ಕಂಡು ಒಂದು ಕ್ಷಣ ವೆಂಕಟಲಕ್ಷ್ಮಿಯ ಬಾಯೊಣಗಿ ಕೂಗಬೇಕೆಂದರೆ ದನಿಯೇ ಬಾರದಾಯ್ತು. ಹೆಜ್ಜೆ ಕಿತ್ತಿಡಲೂ ಆಗದೆ ನಿಂತಲ್ಲೇ ಮರಗಟ್ಟಿ ನಿಂತುಬಿಟ್ಟಳು. ಹಾಗೆ ನಿಂತವಳ ಮನಸ್ಸಿಗೆ ಮೊದಲಿಗೆ ಬಂದಿದ್ದೇ ಇದು ಚಕ್ರಮುನಿಯೋ ಬ್ರಹ್ಮರಾಕ್ಷಸನೋ ಇರಬಹುದಾ ಎಂಬ ಅನುಮಾನ. ಹನುಮಪ್ಪನ ಗುಡಿಯಿಂದ ಮಾರು ದೂರಕ್ಕಿರುವ ಹುಣಸೇ ಮರದಲ್ಲಿ ಈ ಎರಡೂ ಮನೆಮಾಡಿಕೊಂಡಿರುವ ವಿಷಯ ಊರಲ್ಲಿ ಎಲ್ಲರಿಗೂ ತಿಳಿದಿದ್ದೇ. ತನ್ನ ಪತಿ, ಸ್ವತಃ ಮುಕುಂದರಾಯ ಎಷ್ಟೋ ಬಾರಿ ಅತ್ತಲಿಂದ ಸಂಜೆ ಸರಿಹೊತ್ತಿನಲ್ಲಿ ಬರುವಾಗ ಚಕ್ರಮುನಿಯ ಕೈಗೆ ಸಿಕ್ಕಿಬಿದ್ದಿದ್ದ ಕತೆಯನ್ನು ಆಗಾಗ ಹೇಳುತ್ತಲೇ ಇರುತ್ತಾನೆ. ಅವನು ಹಾಗೆ ಮತ್ತೆ ಮತ್ತೆ ಹೇಳುವ ಕಾರಣಕ್ಕೇ ಅದು ಯಾರಿಗೂ ಮರೆಯದೆ ಮನದಾಳದಲ್ಲಿ ಉಳಿದುಹೋಗಿರುವ ಕತೆ. ಅವನು ಪ್ರತಿ ಬಾರಿ ಹೇಳುವಾಗಲೂ ಕತೆಯು ಅಷ್ಟಿಷ್ಟು ಬದಲಾಗುತ್ತಲೇ ಇರುತ್ತದೆ. ಒಮ್ಮೆ ಚಕ್ರಮುನಿ ಹೋತದ ರೂಪದಲ್ಲಿ ಇವನ ದಾರಿಗಡ್ಡ ಬಂದರೆ, ಇನ್ನೊಮ್ಮೆ ಬೆತ್ತಲೆಯಾಗಿ ಬಂದ ಸುಂದರ ಹೆಣ್ಣಾಗಿ, ಮತ್ತೊಮ್ಮೆ ದೊಡ್ಡ ಕೋಡುಗಳುಳ್ಳ ಕರೀ ಎಮ್ಮೆಯಾಗಿ, ಮಗದೊಮ್ಮೆ ನೆಲ ಮುಟ್ಟುವಷ್ಟು ಉದ್ದದ ಬಿಳೀ ಗಡ್ಡವುಳ್ಳ ಕುಳ್ಳ ಮುದುಕನಾಗಿ ಬರುತ್ತದೆ. ಈ ವ್ಯತ್ಯಾಸಕ್ಕೆ ಕಾರಣವೂ ಇದೆ. ಹೇಳಿ ಕೇಳಿ ಚಕ್ರಮುನಿಯೆಂಬುದು ಇಚ್ಛಾಧಾರಿ ದೆವ್ವ. ಅದು ಮುಕುಂದರಾಯನನ್ನು ಹೇಗಾದರೂ ಮುಗಿಸಿಬಿಡಲು ಅವನ ದಾರಿಗೆ ಅಡ್ಡಬಂದಾಗೆಲ್ಲ ಹೀಗೆ ಬೇರೆ ಬೇರೆ ರೂಪದಲ್ಲಿ ಪ್ರಕಟವಾಗಿ ಅವನನ್ನು ಹೆದರಿಸಲು ನೋಡಿದೆ. ಆದರೆ ಪ್ರತಿ ಬಾರಿಯೂ ಮುಕುಂದರಾಯ ತಪ್ಪದೆ ಮಾಡಿರುವುದು ಒಂದೇ ಕೆಲಸ. ಒಂದಿಷ್ಟೂ ಹೆದರದೆ, ಜನಿವಾರವನ್ನು ಬಲಗೈಲಿ ಹಿಡಿದು ಗಟ್ಟಿಯಾಗಿ ಗಾಯತ್ರಿ ಹೇಳಲು ತೊಡಗುವುದು. ತನ್ನನ್ನು ಕಂಡು ಹೆದರಿ ಓಡದೇ ನಿಂತ ಈ ಬ್ರಾಹ್ಮಣೋತ್ತಮನ ಧೈರ್ಯಕ್ಕೆ ಕಕ್ಕಾಬಿಕ್ಕಿಯಾಗಿ ನಿಂತ ಚಕ್ರಮುನಿಯ ಕಿವಿಗೆ ಗಾಯತ್ರಿ ಬಿದ್ದಿದ್ದೇ ಕಾದ ಸೀಸವೇ ಮೈಮೇಲೆ ಸುರಿದಂತಾಗಿ ಅದು ಬೊಬ್ಬೆ ಹೊಡೆಯುತ್ತಾ ಓಡಿಹೋಗುವುದು. ಹೀಗೆ ಬಾರಿ ಬಾರಿಗೂ ತನಗೆದುರಾದ ಚಕ್ರಮುನಿಯನ್ನೋ ಬ್ರಹ್ಮರಾಕ್ಷಸನನ್ನೋ ಗಾಯತ್ರಿ ಹೇಳಿ ಓಡಿಸಿದ ಕತೆಯನ್ನು ಮುಕುಂದರಾಯನಿಂದಲೇ ಬೇಕಾದಷ್ಟು ಸಲ ವೆಂಕಟಲಕ್ಷ್ಮಿಯೂ ಕೇಳಿ ತಿಳಿದಿದ್ದಾಳೆ. ಆದರೆ ಈಗ ತನಗೆದುರಾಗಿ ಬರುತ್ತಿರುವ ಈ ದೆವ್ವವನ್ನು ಓಡಿಸಲು ಅವಳ ಬಳಿ ಜನಿವಾರವಿಲ್ಲ. ಗಾಯತ್ರಿ ಗೊತ್ತಿದ್ದರೂ ಹೆಂಗಸಾದ ಕಾರಣಕ್ಕೆ ಆ ಮಂತ್ರವನ್ನು ಅವಳು ಹೇಳುವಂತೆಯೂ ಇಲ್ಲ. ಹೀಗಾಗಿ ಒಂದು ಕ್ಷಣ ದಿಕ್ಕು ತೋರದೆ ಮರಗಟ್ಟಿ ನಿಂತ ವೆಂಕಟಲಕ್ಷ್ಮಿ ಮರುಕ್ಷಣದಲ್ಲಿ ಯೋಚಿಸತೊಡಗಿದಳು. ತನ್ನ ದಿಕ್ಕಿನಲ್ಲೆ ನಡೆದು ಬರುತ್ತಿರುವ ಈ ದೆವ್ವ ತನ್ನನ್ನು ಏನು ಮಾಡಬಹುದು? ಚಿತ್ರ ವಿಚಿತ್ರ ರೀತಿಯಲ್ಲಿ ಹಿಂಸೆ ಕೊಟ್ಟು, ತನ್ನನ್ನು ಕಚ್ಚಿ ಕೊಂದು ರಕ್ತ ಹೀರಿ ಪ್ರಾಣ ತೆಗೆಯಬಹುದಾ? ಅಥವಾ ಇನ್ಯಾರೋ ಹೇಳಿದ್ದಂತೆ ತನ್ನ ಮುಂದೆ ಬರುತ್ತಿದ್ದಂತೆ ಸುಂದರ ಪುರುಷನ ರೂಪ ತಾಳಿ ತನ್ನನ್ನು ಆಕರ್ಷಿಸಿ, ಒಲಿಸಿ ಹೊತ್ತುಕೊಂಡು ಹೋಗಿ ಹುಣಸೇ ಮರದಲ್ಲೇ ಮನೆಮಾಡಿ ಅಲ್ಲಿ ತನ್ನನ್ನು ಇಟ್ಟುಕೊಂಡು ಸಂಸಾರ ಮಾಡಬಹುದಾ? ಹೀಗೆ ಕಲ್ಪನೆ ಹರಿಬಿಟ್ಟಂತೆಲ್ಲಾ

ವೆಂಕಟಲಕ್ಷ್ಮಿಯ ಭಯ ಇಷ್ಟಿಷ್ಟೇ ಕರಗುತ್ತಾ 'ಏನೋ ಒಂದು, ಆ ದೈವ ಬರೆದಿಟ್ಟ ಹಾಗಾಗಲಿ' ಎನ್ನಿಸಿ ಉಸಿರೂ ಎದೆಬಡಿತವೂ ಒಂದಿಷ್ಟು ತಹಬದಿಗೆ ಬಂತು. ಅದೇ ಸಮಯಕ್ಕೆ ಆಕಾರವಲ್ಲದ ಆ ಆಕಾರ ಅವಳಿಗೆ ಇನ್ನಷ್ಟು ಹತ್ತಿರವಾಯ್ತು. ವೆಂಕಟಲಕ್ಷ್ಮಿಗೂ ಈಗ ಧೈರ್ಯ ಬಂದು, ಸ್ವಲ್ಪ ಅನುಮಾನವೂ ಮೂಡಿ ಒಂದೆರಡು ಹೆಜ್ಜೆ ಮುಂದಿಟ್ಟು ಬಂದು ನೋಡಿದಾಗ ಅದು ದೆವ್ವವಲ್ಲ ತಲೆಯ ಮೇಲೆ ತೊಟ್ಟಿಲು ಹೊತ್ತ ಹೆಂಗಸು ಎಂದು ತಿಳಿದು ಅಚ್ಚರಿಯಾಯ್ತು.

'ಏನಮ್ಮಾ, ಯಾವೂರಾಯ್ತು ನಿಂದು? ಇಷ್ಟೊತ್ತಿನಲ್ಲಿ ತಲೆ ಮೇಲೆ ತೊಟ್ಟಿಲು ಹೊತ್ಕೊಂಡು ಅದೆಲ್ಲಿಗೆ ಹೊರಟೆ?' ಎಂದು ಆ ಹೆಂಗಸನ್ನು ಇವಳು ಕೇಳಿಯೇ ಬಿಟ್ಟಳು. ಪ್ರತಿ ಗುರುವಾರ ಸಂತೆಗೆಂದು ಇದೇ ಪೇಟೆಬೀದಿಯಲ್ಲಿ ತಲೆ ಮೇಲೆ ಬಿದಿರಿನ ದೊಡ್ಡ ಬುಟ್ಟಿಗಳ ತುಂಬಾ ತರಕಾರಿ, ದಿನಸಿ ಹೊತ್ತು ಮಾರಲು ಬರುವ ಅಕ್ಕಪಕ್ಕದ ಹಳ್ಳಿಗಳ ಹೆಂಗಸರನ್ನು ಮಾತನಾಡಿಸಿ ಊರೂರ ಕತೆಗಳನ್ನು ಅವರಿಂದ ಕೇಳಿ ತಿಳಿದುಕೊಳ್ಳುವುದು ವೆಂಕಟಲಕ್ಷ್ಮಿಗೆ ಪ್ರಿಯವಾದ ವಿಷಯ. ಅದರಲ್ಲಿ ಕೆಲವರು ಹಗೂರ ಮರದಿಂದಲೋ ಬೆತ್ತದಿಂದಲೋ ಮಾಡಿದ ಪೆಟ್ಟಿಗೆ, ತೊಟ್ಟಿಲುಗಳನ್ನೂ ಅಪರೂಪಕ್ಕೊಮ್ಮೆ ಮಾರಲು ಹೊತ್ತು ಬರುತ್ತಿದ್ದುದುಂಟು. ಆದರೆ ಈ ದಿನ ಗುರುವಾರವಲ್ಲ ಹೀಗಾಗಿ ಸಂತೆಯೂ ನಡೆಯುವುದಿಲ್ಲ. ಮತ್ತೆ ಈ ತೊಟ್ಟಿಲು ಹೊತ್ತ ಹೆಂಗಸಿನ ಕತೆಯಾದರೂ ಏನಿರಬಹುದೋ? ವೆಂಕಟಲಕ್ಷ್ಮಿಯ ಧ್ವನಿ ಕೇಳಿ ಮೊದಲು ಕೊಂಚ ಬೆಚ್ಚಿದ ಆಕೆಯಾದರೂ ಮಾತಾಡಿಸಿದವಳು ಹೆಂಗಸು ಎಂಬ ಧೈರ್ಯದಲ್ಲಿ ಅಳುಕಿಲ್ಲದೆ ಇವಳ ಹತ್ತಿರ ಬಂದು, 'ಗುಂಡ್ಲುಪೇಟೆಗೆಂದು ಹೊರಟುಬಂದೆ. ಇದು ಪೇಟೆ ಬೀದಿಯಲ್ವೆ? ನಮ್ ರಾಜಣ್ಣನ ಮನೆಗೆ ಹೋಗಬೇಕಿತ್ತು' ಎಂದಳು. ಹಾಗೆ ಹತ್ತಿರ ಬಂದು ಒಬ್ಬರಿಗೊಬ್ಬರ ಮುಖ ಕಂಡಿದ್ದೇ ಇಬ್ಬರಿಗೂ ಗುರುತು ಹತ್ತಿತು. ಆಗಲೇ ವೆಂಕಟಲಕ್ಷ್ಮಿ ಅಚ್ಚರಿಯಲ್ಲಿ ಕೇಳಿದ್ದು, 'ಅಯ್ಯೋ, ನೀನು ನಮ್ಮ ತೆರಕಣಾಂಬಿ ಸುಬ್ಬಮ್ಮನಲ್ವೇ? ಇದೇನು ನೀನು ಇಲ್ಲಿ, ಹೀಗೆ?' ಪಕ್ಕದ ಊರು ತೆರಕಣಾಂಬಿಯಲ್ಲಿ ವೆಂಕಟಲಕ್ಷ್ಮಿಗೂ ದೂರದ ಸಂಬಂಧಿಕರಿದ್ದಾರೆ. ಹಾಗೆ ಯಾವುದೋ ಮದುವೆಗೆ ಮುಂಜಿಗೆ ಎಂದೆಲ್ಲಾ ಒಂದೆರಡು ಬಾರಿ ತೆರಕಣಾಂಬಿಗೆ ಹೋಗಿದ್ದಾಗ ಸುಬ್ಬಮ್ಮನನ್ನೂ ಅಲ್ಲಿ ಎಷ್ಟೋ ಬಾರಿ ಕಂಡು ಮಾತನಾಡಿದ್ದಿದೆ. ಸುಬ್ಬಮ್ಮನಿಗಾದರೆ ತವರು, ಗಂಡನ ಮನೆ ಎರಡೂ ಇರುವುದು ತೆರಕಣಾಂಬಿಯಲ್ಲೇ. ವೆಂಕಟಲಕ್ಷ್ಮಿ ಕೈಕೊಟ್ಟು ಸುಬ್ಬಮ್ಮನ ತಲೆಯ ಮೇಲಿಂದ ತೊಟ್ಟಿಲನ್ನು ಮೆಲ್ಲಗೆ ಇಳಿಸಿ ಜಗಲಿ ಮೇಲೆ ಇಟ್ಟಿದ್ದಾಯ್ತು. ಹಾಗೆ ಇಳಿಸುವಾಗ ಅವಳಿಗೆ ಪೀಚಲು ದೇಹದ ಈ ಹೆಂಗಸು ಈ ಮಣಭಾರವನ್ನು ತಲೆಯ ಮೇಲೆ ಹೇಗೆ ಹೊತ್ತುಕೊಂಡು ಬಂದಳು ಎಂದು ಅಚ್ಚರಿಯಾಯ್ತು. ತೊಟ್ಟಿಲು ತಲೆಯಿಂದ ಇಳಿದಿದ್ದೇ ಜನ್ಮ ಜನ್ಮಾಂತರದ ಭಾರವೆಲ್ಲ ಕಳೆದುಕೊಂಡ ಹಾಗೆ ಒಮ್ಮೆಲೇ ಹಗುರಾಗಿ ಅಲ್ಲಿಯವರೆಗಿನ ಬಳಲಿಕೆಯೆಲ್ಲಾ ಒಟ್ಟಿಗೇ ಆವರಿಸಿಕೊಂಡು ಬಂದು, ಸುಬ್ಬಮ್ಮ ಹೇಗೋ ಕಷ್ಟಪಟ್ಟು ಜಗಲಿ ಏರಿದ್ದೇ ಅಲ್ಲಿಯೇ ಉದ್ದಕ್ಕೆ ಮೈಚೆಲ್ಲಿ ಕಣ್ಣು ಮುಚ್ಚಿಕೊಂಡು ಯಾವ ಪರಿವೆಯೂ ಇಲ್ಲದೆ ಮಲಗಿಬಿಟ್ಟಳು.

ತನ್ನ ಕಣ್ಣೆದುರಿಗೆ ನಡೆಯುತ್ತಿರುವ ಇದೆಲ್ಲವನ್ನೂ ಹೇಗೆ ಗ್ರಹಿಸಬೇಕೆಂದೇ ತಿಳಿಯಲಾಗದೆ ವೆಂಕಟಲಕ್ಷ್ಮಿ ತಳಮಳಿಸಿದಳು. ತೆರಕಣಾಂಬಿಯ ಸುಬ್ಬಮ್ಮ ಕಳೆದ ಮಾರ್ಗಶಿರದಲ್ಲೊ ಅದಕ್ಕೊಂದಿಷ್ಟು ದಿನ ಮುಂಚೆಯೋ ಗಂಡು ಮಗುವನ್ನು ಹೆತ್ತ ಸುದ್ದಿ ಕೂಡ ಅವಳಿಗೆ ತಿಳಿದಿತ್ತು. ಮಗುವಿಗೆ ಈಗ ಒಂಬತ್ತೋ ಹತ್ತೊ ತಿಂಗಳಾಗಿರಬೇಕು. ಆರೇಳು ತಿಂಗಳ ಬಾಣಂತನವನ್ನು ತವರಿನಲ್ಲಿ ಮುಗಿಸಿಕೊಂಡು ಈಗ ಗಂಡನ ಮನೆಯಲ್ಲಿ ಇರಬೇಕಿದ್ದವಳು, ಇದ್ಯಾಕೆ ಹೀಗೆ ಮಗುವನ್ನು ತೊಟ್ಟಿಲ ಸಮೇತ ಹೊತ್ತುಕೊಂಡು ಬಂದಿದ್ದಾಳೆ ಎಂಬ ಅಚ್ಚರಿಯಲ್ಲಿ, ಮಗುವನ್ನು ನೋಡಲು ತೊಟ್ಟಿಲಿನತ್ತ ಬಾಗಿದವಳಿಗೆ ಇನ್ನಷ್ಟು ಅಚ್ಚರಿ ಕಾದಿತ್ತು. ತೊಟ್ಟಿಲ ತುಂಬ ಬಟ್ಟೆಯ ಒಂದೆರಡು ಗಂಟುಗಳು, ಮಣ್ಣಿನ ಒಂದೆರಡು ಪಾತ್ರೆ, ಇನ್ನೊಂದೆರಡು ಸಣ್ಣ ಸಣ್ಣ ಬಟ್ಟೆಯದ್ದೇ ತುಂಡುಗಳು, ಒಂದು ಈಚಲು ಕಸಬರಿಕೆ ಇತ್ಯಾದಿ ಇತ್ಯಾದಿಗಳೇ ತುಂಬಿಕೊಂಡಿದ್ದವು. ಒಟ್ಟಿನಲ್ಲಿ, ಮಗುವೊಂದನ್ನುಳಿದು ಇಡೀ ಮನೆಯನ್ನೇ ತೊಟ್ಟಿಲಿಗೆ ತುಂಬಿಸಿರುವಂತೆ ಕಂಡಿತು. ಈಗಂತೂ ವೆಂಕಟಲಕ್ಷ್ಮಿಗೆ ಏನೇನೋ ಅನುಮಾನಗಳು ಮನಸ್ಸಲ್ಲಿ ಸುಳಿದು, ಏನು ಮಾಡಬೇಕೆಂದೇ ತಿಳಿಯದೆ ಮಲಗಿದ ಸುಬ್ಬಮ್ಮನ ಬಳಿಯೇ ಸ್ವಲ್ಪ ಹೊತ್ತು ದಿಙ್ಮೂಢಳಾಗಿ ಕೂತಳು. ಮರುಗಳಿಗೆಯಲ್ಲಿ, ಇವಳು ಇಲ್ಲಿ ಜಗಲಿಯ ಮೇಲೆ ಹೀಗೆ ಮಲಗಿರುವುದು ಸರಿಯಲ್ಲ ಎನಿಸಿ, ಇನ್ನು ಬೆಳಕು ಮೂಡುತ್ತಾ ಬಂದ ಹಾಗೆ ಊರವರ ಕಣ್ಣಿಗೆ ಹೀಗೆ ಉರುಳಿಕೊಂಡಿರುವ ಇವಳು ಬಿದ್ದರೆ ಏನು ಗತಿ ಎನ್ನಿಸಿ, ಅವಳನ್ನು ಎಬ್ಬಿಸತೊಡಗಿದಳು.

'ವೆಂಕಮ್ಮ ನನ್ನ ಭುಜ ಹಿಡಿದು ಅಲುಗಿಸಿ ಎಬ್ಬಿಸಲು ನೋಡಿದಳಂತೆ, ನನಗೋ ಇಹಪರದ ಅರಿವೂ ಇಲ್ಲದ ನಿದ್ದೆ! ಅಷ್ಟು ಸುಖವಾದ ನಿದ್ದೆ ನನಗೆ ಅಲ್ಲೀವರೆಗೂ ಬಂದಿದ್ದಿಲ್ಲ, ಆಮೇಲೂ ಇಲ್ಲೀವರೆಗೂ ಮತ್ಯಾವತ್ತೂ ಬರಲೇ ಇಲ್ಲ ನೋಡು..' ಸುಬ್ಬಮ್ಮಜ್ಜಿ ತಾವೇ ಹೇಳುತ್ತಿದ್ದ ತಮ್ಮ ಈ ಕತೆಯಲ್ಲಿ ಈ ಭಾಗಕ್ಕೆ ಬಂದಾಗಲೆಲ್ಲಾ ಕಣ್ಮುಚ್ಚಿ ಕುಳಿತುಕೊಳ್ಳುತ್ತಿದ್ದಳು. ಆಗೆಲ್ಲಾ ನನಗೆ, ನಲವತ್ತೈವತ್ತು ವರ್ಷಗಳಿಗೂ ಹಿಂದೊಮ್ಮೆ ಯಾರದೋ ಮನೆಯ ಜಗಲಿಯೊಂದರ ಮೇಲೆ ಮಲಗಿ ತಾನು ಮಾಡಿದ್ದ ನಿದ್ದೆಯೊಂದರ ಸುಖವನ್ನು ಮತ್ತೆ ಅನುಭವಿಸಲು ಸಾಧ್ಯವಾದೀತಾ ಎಂದು ಅವಳು ಪ್ರಯತ್ನಿಸುತ್ತಿದ್ದಳೇನೋ ಅನಿಸುತ್ತಿತ್ತು.

ಜಗಲಿಯ ಮೇಲೆ ದಿವಿನಾಗಿ ಮಲಗಿರುವ ಇವಳು ಹೀಗೆ ಈ ಹೊತ್ತಲ್ಲಿ ಇಲ್ಲಿ ಯಾಕೆ ಬಂದಳೊ ಅದೇನು ಕಥೆಯೋ ಒಂದೂ ತಿಳಿಯದೆ ವೆಂಕಟಲಕ್ಷ್ಮಿಗೆ ಅಯೋಮಯವಾದಂತಾಯ್ತು. ಅಂತೂ ಅವಳ ಮುಖಕ್ಕೆ ನೀರು ಚಿಮುಕಿಸಿ, ಕಣ್ಣು ಒರೆಸಿ, ಹರ ಸಾಹಸ ಮಾಡಿ ಮನೆಯ ಒಳಗೆ ಕರೆದುಕೊಂಡು ಬಂದಿದ್ದಾಯ್ತು. ಅರ್ಧ ಕಣ್ಣು ಮುಚ್ಚಿಕೊಂಡೇ ವಾಲಾಡುತ್ತಾ ನಡುಮನೆಗೆ ಬಂದ ಸುಬ್ಬಮ್ಮ, ಮತ್ತೆ ಅಲ್ಲಿ ಮಂದಲಿಗೆ ಕಂಡವಳೇ ಹೋಗಿ ಅದರ ಮೇಲೆ ಉರುಳಿಕೊಂಡು ನಿದ್ರೆಗೆ ಜಾರಿಬಿಟ್ಟಳು.

ಮಕ್ಕಳೆಲ್ಲಾ ಸಣ್ಣವರು. ನಡುಮನೆಯಲ್ಲಿ ಸಾಲಾಗಿ ಮಲಗಿವೆ. ಆ ಮಕ್ಕಳ ಸಾಲಿನ ಕೊನೆಯಲ್ಲೇ ಸುಬ್ಬಮ್ಮನೂ ಉರುಳಿಕೊಂಡಿದ್ದಾಳೆ. ಮುದುರಿಕೊಂಡು ಮಲಗಿರುವ

ಗುಬ್ಬಚ್ಚಿಯಷ್ಟು ಪುಟ್ಟ ದೇಹದ ಸುಬ್ಬಮ್ಮನೂ ಮಲಗಿರುವ ತನ್ನ ಮಕ್ಕಳಲ್ಲಿ ಒಬ್ಬಳೇನೋ ಎನ್ನುವಂತೆ ಕಂಡಿತು ವೆಂಕಟಲಕ್ಷ್ಮಿಗೆ. ಬರುವ ವೈಶಾಖ ಹುಣ್ಣಿಮೆಗೆ ತನಗೆ ಇಪ್ಪತ್ಮೂರು ತುಂಬುವುದು. ಇವಳು ತನಗಿಂತ ಮೂರೋ ನಾಲ್ಕೋ ವರ್ಷಕ್ಕೆ ಚಿಕ್ಕವಳು. ದೂರದ ಸಂಬಂಧಿ. ತನಗೆ ತಿಳಿದಿರುವಂತೆ ಗುಂಡ್ಲುಪೇಟೆಗೆ ಅವಳು ಹಿಂದೆಂದೂ ಕಾಲಿಟ್ಟವಳೇ ಅಲ್ಲ. ಇದ್ಯಾಕೆ ಯಾರೂ ಜೊತೆಯಿಲ್ಲದೆ, ಹೊತ್ತಲ್ಲದ ಹೊತ್ತಲ್ಲಿ ಒಬ್ಬಳೇ ಹೀಗೆ ಪ್ರತ್ಯಕ್ಷವಾಗಿದ್ದಾಳೆ? ಇನ್ನು ಇವಳೇ ಎದ್ದು ಬಾಯಿ ಬಿಡುವತನಕ ಏನೂ ತಿಳಿಯಲೊಲ್ಲದು ಅಂದುಕೊಂಡಳು.

ಸ್ವಲ್ಪ ಹೊತ್ತಿಗೆ ಮುಕುಂದರಾಯನೂ ಎದ್ದು ಬಂದು ವಿಷಯ ತಿಳಿದದ್ದೇ ಹೌಹಾರಿದ. ಹೆಂಡತಿಯಿಂದ ತಿಳಿದುಬಂದ ಒಂದು ವಿಷಯವೆಂದರೆ, ಸುಬ್ಬಮ್ಮ ತನ್ನ ದಾಯಾದಿ ರಾಜಣ್ಣನ ಮನೆ ಹುಡುಕಿಕೊಂಡು ಗುಂಡ್ಲುಪೇಟೆಗೆ ಬಂದಿದ್ದು ಎಂಬುದು. ಈಗ ಹೆಂಡತಿಯೇ ಹೇಳಿದಂತೆ ರಾಜಣ್ಣನ ಮನೆಗೆ ಹೋಗಿ ವಿಷಯ ತಿಳಿಸಿ, ಅವನನ್ನು ಕರೆದುಕೊಂಡು ಬರುವುದೇ ಸರಿ ಎನ್ನಿಸಿತು. ಇವಳಿಗೆ ಅದು ಹೇಗೋ ಇಂಥಾ ಇಕ್ಕಟ್ಟು ಬಿಕ್ಕಟ್ಟುಗಳಲ್ಲಿ ತಲೆ ಚೆನ್ನಾಗಿ ಓಡತ್ತೆ. ಆದರೂ ತಾನೇನೋ ಮಹಾ ಯುಕ್ತಿವಂತೆಯಂತೆ 'ಇಲ್ನೋಡಿ ಹೀಗ್ಮಾಡಿ ಈಗ..' ಎಂದು ಅವಳು ಹೇಳಹೊರಟರೆ ಇನ್ನಿಲ್ಲದಷ್ಟು ಸಿಟ್ಟು ಉಕ್ಕಿ, 'ನೀನೇನು ಹೆಣ್ಣು ಹೆಂಗ್ಸು ಹಾಗ್ಮಾಡಿ, ಹೀಗ್ಮಾಡಿ ಅಂತ ನನಗೆ ಬುದ್ಧಿ ಹೇಳೋದು' ಎಂದು ದಬಾಯಿಸಿ ನಂತರವೇ ಅವಳ ಪುಸಲಾವಣೆಗೆ ಒಪ್ಪಿದ ಹಾಗೆ ಮಾಡುವುದು ಅವನು. ಅಷ್ಟಕ್ಕೂ ರಾಜಣ್ಣನ ಮನೆ ಇರುವುದಾದರೂ ಎಲ್ಲಿ? ಎಡವಿಬಿದ್ದರೆ ಸಿಗುವ ಹಿಂದಿನ ಬೀದಿಯಲ್ಲೇ. ಹಲ್ಲುಜ್ಜಿದ ಬಳಿಕ ಅಲ್ಲಿಗೆ ಹೋಗುವುದಾಗಿ ಹೇಳಿ ಮುಕುಂದರಾಯ ಬಚ್ಚಲಿಗೆ ನಡೆದ. ಬಚ್ಚಲು ಮನೆಯಲ್ಲಿ ಕಲ್ಲಿನ ಪುಟ್ಟ ಮರಿಗೆಯಲ್ಲಿಟ್ಟಿದ್ದ ದೊರಗು ದೊರಗಾದ ಬೂದಿ ಬಣ್ಣದ ಹಲ್ಲುಪುಡಿಯನ್ನು ಎಡ ಅಂಗೈಗೆ ಉದುರಿಸಿಕೊಂಡು ಒದ್ದೆಯಾದ ಬಲಗೈ ತೋರುಬೆರಳನ್ನು ಆ ಪುಡಿಗೆ ಒತ್ತಿಸಿ ಹಚ್ಚಿಕೊಂಡು ಅದರಿಂದ ಹಲ್ಲುಜ್ಜತೊಡಗಿದ್ದೇ ತಾನು ಇವಳನ್ನು ಮದುವೆಯಾಗಿದ್ದು ಸಾರ್ಥಕವಾಯ್ತು ಎಂದು ಅದೆಷ್ಟನೆಯ ಬಾರಿಗೋ ಅವನಿಗನ್ನಿಸಿತು. ಅಡುಗೆ ಇರಲಿ, ಈ ಹಲ್ಲುಪುಡಿಯನ್ನೂ ಇವಳು ಎಷ್ಟು ರುಚಿ ರುಚಿಯಾಗಿ ಮಾಡುತ್ತಾಳಲ್ಲ ಎನಿಸಿ ಮನಸ್ಸು ಹಿಗ್ಗಿತು. ಬತ್ತದ ಹೊಟ್ಟಿನ ಬೂದಿಗೆ ನುಣ್ಣಗೆ ಅರೆದು ಜರಡಿಯಾಡಿಸಿದ ಇದ್ದಿಲ ಪುಡಿ ಬೆರೆಸಿ, ಅದಕ್ಕೆ ಉಪ್ಪು, ಪಚ್ಚ ಕರ್ಪೂರ, ಲವಂಗದೆಣ್ಣೆ, ಇನ್ನೂ ಎಂತೆಂತದೋ ಗಿಡಮೂಲಿಕೆ, ಮಣ್ಣು ಮಸಿ ಸೇರಿಸಿ ಮನೆಯಲ್ಲೇ ವೆಂಕಟಲಕ್ಷ್ಮಿ ತಯಾರಿಸುವ ಚೂರ್ಣ ಇದು. ಅವಳ ತವರಿನಲ್ಲಿ ಅಳಲೇಕಾಯಿ ಪಂಡಿತನಾದ ಅವಳ ಅಪ್ಪನೇ ಮಾಡುತ್ತಿದ್ದ ದಂತಚೂರ್ಣವಂತೆ ಇದು. ಮದುವೆಯಾಗಿ ಬಂದ ಮೇಲೆ ಮೊದಲ ಬಾರಿ ಅವಳು ಈ ಹಲ್ಲುಪುಡಿ ಮಾಡಿದ್ದಾಗ ಎಂಥಾ ರಾಮಾಯಣವೇ ನಡೆದುಹೋಯ್ತು ಮನೆಯಲ್ಲಿ! ಬೇವಿನ ಕಡ್ಡಿಯಲ್ಲೋ ಇಜ್ಜಲ ಪುಡಿಯಲ್ಲೊ ತಿಕ್ಕಿಕೊಂಡರೆ ಮುಗಿದುಹೋಗುವ ಕೆಲಸಕ್ಕೆ ಇಷ್ಟೆಲ್ಲಾ ಸಾಮಾನು ಹೊಂಚಿಕೊಂಡು ತಯಾರು ಮಾಡುವುದೇನಿದೆ ಎಂದು ಅಮ್ಮ

ಶುರುಮಾಡಿಬಿಟ್ಟಳಲ್ಲ! 'ಈ ಬಿನ್ನಾಣದ ಕೆಲಸವೆಲ್ಲಾ ನಿನ್ನ ಅಪ್ಪನ ಮನೆಗೇ ಇರಲಿ, ನಮ್ಗೆ ಹಂಡೆ ಒಲೆಯ ಬೂದಿಯೇ ಸಾಕು ಹಲ್ಲು ಉಜ್ಜೋಕೆ' ಎಂದು ಹರಿಹಾಯ್ದ ಅಮ್ಮನಿಗೂ ಕಡೆಗೆ ಈ ಚೂರ್ಣವಿಲ್ಲದೆ ಬೆಳಗಿನ ಹಲ್ಲುಜ್ಜುವ ಕಾರ್ಯ ಮುಗಿಯುತ್ತಿರಲಿಲ್ಲವಲ್ಲಾ ಅನಿಸಿತು. ಕಡೆಗೆ ಎರಡು ವರ್ಷದ ಹಿಂದೆ ವೈಕುಂಠವಾಸಿಯಾಗುವವರೆಗೂ ಅಮ್ಮ, ಸೊಸೆ ಮಾಡುತ್ತಿದ್ದ ಈ ದಂತಚೂರ್ಣದಿಂದಲೇ ಹಲ್ಲು ತಿಕ್ಕಿಕೊಂಡಳಲ್ಲ ಅನಿಸಿ ಮುಖದಲ್ಲೊಂದು ಕಿರುನಗು ಮೂಡಿತು. ಅಷ್ಟರಲ್ಲಿ ಹಲ್ಲಿನ ಪುಡಿಯಲ್ಲಿದ್ದ ಕರ್ಪೂರಕ್ಕೋ ಲವಂಗದೆಣ್ಣೆಗೋ ಬಾಯಿಯೊಳಗೆ ಎಲ್ಲೋ ಚುಳ್ ಎಂದು, ಮತ್ತೆಲ್ಲೋ ಸೊಕ್ಕಿ ಘಮಘಮಿಸಿ ಅವನನ್ನು ತನ್ನ ಯೋಚನೆಗಳಿಂದ ಬಿಡಿಸಿ ಮತ್ತೆ ಬಚ್ಚಲ ಮನೆಗೆ ಕರೆ ತಂದಿತು. ಈ ಬಡ್ಡಿಗಂಡಂದು ಅಭ್ಯಾಸವಾಗಿ ಹೋಗಿದೆ. ಮೊದಲಿನಂತೆ ಬೇವಿನ ಕಡ್ಡಿಯಲ್ಲೊ, ಇಜ್ಜಲ ಪುಡಿಯಲ್ಲೋ ಹಲ್ಲು ತಿಕ್ಕಿದರೆ ಈಗ ಸರಿಯೇ ಹೋಗದು. ದಿನವೆಲ್ಲಾ ಕಸಿವಿಸಿ. ಹಾಗೆಂದು ಇವಳನ್ನೊ, ಇವಳು ಮಾಡುವ ಕೆಲಸವನ್ನೋ ಹೊಗಳಿಬಿಟ್ರೆ ತಲೆ ಮೇಲೆಯೇ ಹತ್ತಿ ಕೂತುಬಿಡುತ್ತಾಳಿವಳು ಅನ್ನಿಸಿತು. ಈ ಹೆಂಗಸರನ್ನ ಎಲ್ಲಿಟ್ಟಿರಬೇಕೋ ಅಲ್ಲೇ ಇಟ್ಟಿರಬೇಕು ಎಂಬುದನ್ನ ಅಮ್ಮನಿಂದಲೇ ಕಲಿತ ಮುಕುಂದರಾಯ ಅದನ್ನು ಚಾಚೂ ತಪ್ಪದೆ ಪಾಲಿಸುತ್ತಿದ್ದ.

ಮುಕುಂದರಾಯ ಮನೆಗೆ ಬಂದು ಹೀಗಾಗಿದೆ ಎಂದಾಗ ರಾಜಣ್ಣನಿಗೆ ತನ್ನ ಕಿವಿಗಳನ್ನೇ ತಾನು ನಂಬಲಾಗಲಿಲ್ಲ. ಸುಬ್ಬಮ್ಮ ಒಡಹುಟ್ಟಿದ ತಂಗಿಯಲ್ಲದಿದ್ದರೂ ಭಾವದಲ್ಲಿ ಒಡಹುಟ್ಟಿದವಳಂತೆಯೇ. ತನ್ನ ಚಿಕ್ಕಪ್ಪನ ಮಗಳು. ತನಗಿಂತ ಐದಾರು ವರ್ಷಕ್ಕೆ ಚಿಕ್ಕವಳು. ತೆರಕಣಾಂಬಿಯ ತಾತನ ಮನೆಯಲ್ಲಿ ಇವಳನ್ನು ತೊಟ್ಟಿಲಿಗೆ ಹಾಕಿದಾಗ, ತಾತನೋ ಅಜ್ಜಿಯೋ ಪುಟ್ಟ ಹುಡುಗನಾಗಿದ್ದ ತನ್ನನ್ನು ಸೊಂಟದಲ್ಲಿ ಎತ್ತಿ ಕೂರಿಸಿಕೊಂಡು 'ನಿನ್ನ ತಂಗಿ ಕಣೋ ರಾಜಣ್ಣ, ನೋಡೋ' ಎಂದು ತೋರಿಸಿದಂದಿನಿಂದಲೂ ಇವಳ ಮೇಲೆ ತನಗೆ ಅದೇನೋ ಒಂದು ಬಗೆಯ ಅಕ್ಕರೆ, ವಾತ್ಸಲ್ಯ. ಚಿಕ್ಕಂದಿನಲ್ಲಿ ಗುಂಡ್ಲುಪೇಟೆಯಿಂದ ತೆರಕಣಾಂಬಿಗೆ ಅಜ್ಜಿಯ ಮನೆಗೆಂದು ಹೋದಾಗಲೆಲ್ಲಾ ಇವಳೊಟ್ಟಿಗೆ ಆಡುತ್ತಿದ್ದಿದ್ದನ್ನೂ ಒಟ್ಟೊಟ್ಟಿಗೇ ಬೆಳೆದು ದೊಡ್ಡವರಾಗಿದ್ದನ್ನೂ ನೆನೆಸಿಕೊಂಡು ಭಾವುಕನಾದ ರಾಜಣ್ಣ. ಎರಡು ವರ್ಷದ ಹಿಂದೆ ಸುಬ್ಬಮ್ಮನ ಮದುವೆಯಾಗಿ ತೆರಕಣಾಂಬಿಯಲ್ಲೇ ಇದ್ದ ಅತ್ತೆಮನೆಗೆ ಇವಳು ಹೊಕ್ಕಿದ್ದಾಯ್ತು ಆಮೇಲೆ ಕಂಡೇ ಇರಲಿಲ್ಲ. ಅವಳ ಅತ್ತೆ ಮನೆಯವರು ಅದೇ ಊರಿನಲ್ಲಿದ್ದ ತವರಿಗೂ ಕಳಿಸಿರಲಿಲ್ಲವಂತೆ, ಬಸಿರಾಗಿ ಸೀಮಂತವಾಗುವತನಕ. ಬಾಣಂತನಕ್ಕೆಂದು ತಾಯಿಯ ಮನೆಗೆ ಬಂದವಳು ಮತ್ತೆ ಮಗುವನ್ನೆತ್ತಿಕೊಂಡು ಅಳುತ್ತಳುತ್ತಲೇ ಗಂಡನ ಮನೆಗೆ ಹೋದಳು ಎಂದು ಸುದ್ದಿ ಬಂದಿತಲ್ಲ. ಅಲ್ಲಿಗೆ ಹೋಗುವುದೇ ಇಲ್ಲ, ತವರಲ್ಲೇ ಇರುವೆ ಎಂದು ಅತ್ತಳಂತೆ! 'ಕೊಟ್ಟ ಹೆಣ್ಣು ಕುಲಕ್ಕೆ ಹೊರಗು. ಪಾಲಿಗೆ ಬಂದದ್ದು ಪಂಚಾಮೃತ ಅಂದುಕೊಂಡು ಇರಬೇಕಮ್ಮ' ಎಂದು ಚಿಕ್ಕಮ್ಮ, ಚಿಕ್ಕಪ್ಪ ಬುದ್ಧಿ ಹೇಳಿ ಕಳಿಸಿದರಂತೆ. ಈಗ ನೋಡಿದರೆ ಇದೇನೋ ಹೊಸದೊಂದೇ ಕತೆ ಶುರುವಾಗಿರುವ ಹಾಗಿದೆಯಲ್ಲ? ಇವಳ್ಯಾಕೆ ನನ್ನ ಹುಡುಕಿಕೊಂಡು ಇಲ್ಲಿಗೆ ಬಂದಳು? ಎಂದುಕೊಂಡ ರಾಜಣ್ಣ.

ರಾಜಣ್ಣ ಮುಕುಂದರಾಯನೊಡನೆ ಅವನ ಮನೆಗೆ ಬರುವ ವೇಳೆಗಾಗಲೇ ಸುಬ್ಬಮ್ಮ ನಿದ್ದೆಯಿಂದ ಎದ್ದಾಗಿತ್ತು. ಅಡುಗೆ ಮನೆಯಿಂದ ಬಚ್ಚಲಿಗೆ ಹೋಗುವ ನಡುವಿನ ಜಾಗದಲ್ಲಿ ಇದ್ದ ಕೂಡೊಲೆಯ ಮುಂದೆ ಕುಳಿತು ವೆಂಕಟಲಕ್ಷ್ಮಿಯೊಡನೆ ಮಾತನಾಡುತ್ತಾ ಅವಳು ಮಾಡಿಕೊಟ್ಟಿದ್ದ ಕಷಾಯವನ್ನು ಹೀರುತ್ತಾ ಕುಳಿತ ಸುಬ್ಬಮ್ಮ ಎಂದಿಗಿಂತ ನಿರಾಳವಾಗಿ ಕಾಣುತ್ತಿದ್ದುದನ್ನು ಕಂಡು ಏನೇನೋ ಊಹಿಸಿ ಬಂದ ಗಂಡಸರಿಬ್ಬರಿಗೂ ಯಾಕೋ ತಳಮಳವಾಯಿತು. ಕಡೆಗೆ ತಿಳಿದು ಬಂದಿದ್ದೆಂದರೆ, ಸುಬ್ಬಮ್ಮ ಮಗುವನ್ನು ಎತ್ತಿಕೊಂಡು ತವರಿನಿಂದ ಗಂಡನ ಮನೆಗೆ ಬಂದದ್ದೇ ಬಂದಿದ್ದು, ಅವಳ ಕಷ್ಟ ಮೊದಲಿಗಿಂತಲೂ ಎರಡು ಪಟ್ಟು ಹೆಚ್ಚಾಯ್ತಂತೆ ಆ ಮನೆಯಲ್ಲಿ. ಮಗು, ಮನೆ ಕೆಲಸ, ಕೊಟ್ಟಿಗೆ ಕೆಲಸ ಎಂದು ಹೈರಾಣಾಗಿ ಹೋಗುತ್ತಿದ್ದ ಸುಬ್ಬಮ್ಮನನ್ನು ಊಟ ಮಾಡಿದೆಯಾ ನಿದ್ದೆ ಮಾಡಿದೆಯಾ ಎಂದು ಕೇಳುವವರ್ಯಾರೂ ಅಲ್ಲಿರಲಿಲ್ಲ. ಮಗುವಾದರೋ ರಾತ್ರಿ ಇಡೀ ರಚ್ಚೆ ಹಿಡಿದು ಅಳುತ್ತಾ ಅವಳಿಗೆ ನಿದ್ದೆಯೂ ಬಾರದ ಹಾಗೆ ನೋಡಿಕೊಳ್ಳುತ್ತಿತ್ತು. ಇಲ್ಲಿದ್ದಲ್ಲಿ ನನ್ನ ಇಡೀ ಜೀವನ ಹೀಗೆ ಕೆಲಸ ಬೊಗಸೆಗಳಲ್ಲಿ ಊಟ ನಿದ್ರೆಯೂ ಇಲ್ಲದೆ ಕಳೆದುಹೋಗುವುದೆಂದು ಮನಗಂಡು ಮನೆ ಬಿಡುವುದೆಂದು ತೀರ್ಮಾನಿಸಿದಳಂತೆ! ಮನೆ ಬಿಟ್ಟು ಹೆಣ್ಣು ಹೆಂಗಸಾದ ತಾನು ಹೋಗುವುದಾದರೂ ಎಲ್ಲಿಗೆ ಎಂದು ಯೋಚಿಸಿದಾಗ ಅವಳಿಗೆ ಸಿಕ್ಕ ಒಂದೇ ಉತ್ತರ, ಗುಂಡ್ಲುಪೇಟೆಯ ರಾಜಣ್ಣನ ಮನೆಯಂತೆ. ಹೀಗಾಗಿ ಮೈಮೇಲೊಂದು, ಗಳುವಿನ ಮೇಲೊಂದು ಎಂದಿದ್ದ ಎರಡು ಸೀರೆಗಳ ಜೊತೆಗೆ ಮಗುವನ್ನು ತವರಿನಿಂದ ಕಳಿಸಿಕೊಟ್ಟಾಗ ತೊಟ್ಟಿಲಿನ ಜೊತೆಗೆ ಉಡಿಸಿದ್ದ ಒಂದು ಪಟ್ಟೆ ಸೀರೆಯನ್ನು, ಎರಡು ಮಣ್ಣಿನ ಮಡಿಕೆಗಳನ್ನು, ಒಂದು ಕಸಬರಿಕೆ, ಒಂದೆರಡು ತೆಂಗಿನಕಾಯಿ, ಒಂದು ಹಳೆಯ ಮಲ್ ಬಟ್ಟೆಯಲ್ಲಿ ಕಟ್ಟಿದ ಒಂದೆರಡು ಹಿಡಿ ಅಕ್ಕಿ, ಹೀಗೆ ಆ ಗಳಿಗೆಯಲ್ಲಿ ತನಗೇನು ತೋಚಿತೋ ಅದನ್ನೆಲ್ಲಾ ಎತ್ತಿಕೊಂಡು ಮನೆ ಬಿಟ್ಟಿದ್ದಳು.

ಸುಬ್ಬಮ್ಮಜ್ಜಿ ಹೇಳುವಂತೆ, ಇವೆಲ್ಲವನ್ನೂ ಮೊದಲಿಗೆ ಒಂದು ಬಟ್ಟೆಯಲ್ಲಿಟ್ಟು ಗಂಟು ಕಟ್ಟಿ ತೆಗೆದುಕೊಳ್ಳುವುದು ಅಂದುಕೊಂಡವಳಿಗೆ ಕಡೆಯಲ್ಲಿ ಯಾಕೋ ತೊಟ್ಟಿಲನ್ನು ತೆಗೆದುಕೊಂಡು ಹೋಗಬೇಕು ಅನ್ನಿಸಿಬಿಟ್ಟಿತು. ತನ್ನ ತವರಿನವರು ತನಗೆ ಕೊಟ್ಟ ತೊಟ್ಟಿಲನ್ನು ಇಲ್ಯಾಕೆ ಬಿಡಬೇಕು ಅನಿಸಿತಂತೆ! ಸರಿ, ಹಾಗನ್ನಿಸಿದ್ದೇ ತನ್ನ ಸಾಮಾನುಗಳನ್ನೆಲ್ಲ ಈ ತೊಟ್ಟಿಲಿನಲ್ಲೇ ಇಟ್ಟುಕೊಂಡಳು. ಪದೇ ಪದೇ ರಚ್ಚೆ ಹಿಡಿದು ಅಳುವ ಮಗು ತೊಟ್ಟಿಲಿನಲ್ಲಿ ಮಲಗಿದ್ದೇ ಇಲ್ಲವಾಗಿ ಅದು ಖಾಲಿಯಾಗಿಯೇ ಉಳಿದಿತ್ತು. ಅದನ್ನು ತೊಲೆಗೂ ಕಟ್ಟಿರದೆ, ಊಟದ ಮನೆಯ ಮೂಲೆಯಲ್ಲೇ ಇಟ್ಟಿದ್ದು ಈಗ ಅನುಕೂಲವೇ ಆಯ್ತು ಅಂದುಕೊಂಡಳು. ಮೆತ್ತನೆಯ ಹಳೆಯ ಹತ್ತಿಯ ಸೀರೆಯ ಜೋಲಿಯಲ್ಲಿ ಮಲಗಿ ನಿದ್ರಿಸುತ್ತಿದ್ದ ಮಗುವನ್ನೂ ಗೊರಕೆ ಹೊಡೆದುಕೊಂಡು ಕನಸು ಕಾಣುತ್ತಾ ಮಲಗಿದ್ದ ಮನೆಯವರೆಲ್ಲರನ್ನೂ ಬಿಟ್ಟು ಸರಿರಾತ್ರಿಯಲ್ಲಿ ಸುಬ್ಬಮ್ಮ ಸಾಮಾನು ತುಂಬಿಸಿದ್ದ ತೊಟ್ಟಿಲನ್ನು ತಲೆಯ ಮೇಲೆ ಎತ್ತಿಕೊಂಡು ಗುಂಡ್ಲುಪೇಟೆಯ ದಾರಿ ಹಿಡಿದು ಬಂದುಬಿಟ್ಟಿದ್ದಳು. ಇವಳ ಕಥೆ ಕೇಳುತ್ತಿದ್ದ ಗಂಡಸರಿಬ್ಬರು ಸ್ತಬ್ಧರಾಗಿ ಕುಳಿತಿದ್ದರೆ, ಈಗಾಗಲೇ ಒಮ್ಮೆ ಇದೇ

ಕತೆಯನ್ನು ಸುಬ್ಬಮ್ಮನ ಬಾಯಿಂದಲೇ ಕೇಳಿ ತಿಳಿದಿದ್ದ ವೆಂಕಟಲಕ್ಷ್ಮಿ ಕಣ್ಣು ಮೂಗು ಒರೆಸಿಕೊಳ್ಳುತ್ತಾ 'ಅದ್ಯಾವ ಧೈರ್ಯದ ಮೇಲೆ ದೆವ್ವಗಳು ಓಡಾಡೋ ಹೊತ್ತಿನಲ್ಲಿ ಅಲ್ಲಿಂದ ಇಲ್ಲಿಗೆ ನಡೆದುಕೊಂಡು ಬಂದ್ಯೆ ತಾಯಿ? ಹೆಣ್ಣು ಹೆಂಗಸು ಆ ಹುಣಸೇ ಮರವನ್ನೂ ಹಾದು ಬದುಕಿ ಬಂದೆಯಲ್ಲಾ' ಎಂದಳು. ಹೆಂಡತಿ ಹಾಗೆ ಹೇಳಿದ್ದಕ್ಕೆ ಮುಕುಂದರಾಯನಿಗೆ ಇರುಸುಮುರುಸಾಯ್ತು. ತಂಗಿಯ ಪಾಡನ್ನೆಲ್ಲಾ ಕೇಳಿಸಿಕೊಳ್ಳುತ್ತಿದ್ದ ರಾಜಣ್ಣ ಮಾತ್ರ ಸುಮ್ಮನೆ, ಕಣ್ಣೀರಾಗುತ್ತಿದ್ದನಂತೆ. ಕತೆಯ ಈ ಭಾಗವನ್ನು ಹೇಳುವಾಗ ಸುಬ್ಬಮ್ಮಜ್ಜಿ ಧ್ವನಿಯಲ್ಲಿ ಅಭಿಮಾನ ತುಂಬಿಕೊಂಡು, 'ನಮ್ಮ ರಾಜಣ್ಣ ಯಾವಾಗಲೂ ಹಾಗೇ. ಅವನಿಗೆ ಅಂತಃಕರಣ ಹೆಚ್ಚು' ಅನ್ನುತ್ತಿದ್ದರು.

ನಂತರ ನಡೆದದ್ದೆಲ್ಲಾ ದೊಡ್ಡ ರಾಮಾಯಣವೇ. ತವರಿನವರೂ ಗಂಡನ ಮನೆಯವರೂ ಮನೆ ಬಿಟ್ಟು ಹೋದ ಈ ಹೆಮ್ಮಾರಿ ತಮ್ಮ ಪಾಲಿಗೆ ಸತ್ತಳು ಎಂದೇ ಅಂದುಕೊಂಡಿದ್ದೇವೆ ಅಂದು ಕೈತೊಳೆದುಕೊಂಡರು. ರಾಜಣ್ಣನ ಹೆಂಡತಿ ನಂಜಮ್ಮನಿಗೆ ಪ್ರಾರಂಭದಲ್ಲಿ, ಸುಬ್ಬಮ್ಮ ತನ್ನ ಮನೆಗೆ ಬಂದಿದ್ದು ಇಷ್ಟವಾಗದಿದ್ದರೂ ದಿನ ಕಳೆದಂತೆ ಇದೂ ಒಂದು ರೀತಿ ಅನುಕೂಲವೇ ಅನಿಸಿತು. ಸುಬ್ಬಮ್ಮ ಮಾಡಿಹಾಕುತ್ತಿದ್ದ ರುಚಿರುಚಿಯಾದ ಊಟ, ಮನೆಯ ಕೆಲಸ ಬೊಗಸೆಯಲ್ಲಿ ಕೈಗೂಡಿಸಿ ತನಗೆ ನೆರವಾಗುತ್ತಿದ್ದ ರೀತಿ ಅವಳಿಗೆ ಇಷ್ಟವಾಯ್ತು. ಆದರೂ ಒಮ್ಮೊಮ್ಮೆ 'ಆ ಹಸುಮಗೂನ ಅದು ಹ್ಯಾಗೆ ಬಿಟ್ಟು ಬಂದ್ಯೆ ನೀನು? ಪಾಪ, ಅದು ಅಲ್ಲಿ ತಾಯಿಯಿಲ್ಲದೆ ಅದೆಷ್ಟು ಕಷ್ಟಪಡ್ತಿದೆಯೋ ಏನೋ' ಎಂದು ಹಂಗಿಸಿ ಕೇಳುತ್ತಿದ್ದಳು. ಸುಬ್ಬಮ್ಮ ಮಾತ್ರ ನಿರಾಳವಾಗಿ, 'ಅಯ್ಯೋ, ಅಲ್ಲಿ ಇದ್ದಷ್ಟು ದಿನ ಎದೆಹಾಲು ಕೊಟ್ಟೇ ಬಂದಿಲ್ವೆ? ಅದಕ್ಕೇನು ಕಷ್ಟ? ಗಂಡು ಮಗು ಅದು. ಅದಕ್ಕೇ ತಾನೆ ಆ ಮನೆಯವರು ಮಗುವನ್ನು ತಾವೇ ಇಟ್ಟುಕೊಂಡಿದ್ದು? ತನ್ನ ಪಾಡಿಗೆ ತಾನು ಬೆಳೆದುಕೊಳ್ಳತ್ತೆ ಬಿಡು' ಎಂದುಬಿಡುತ್ತಿದ್ದಳು. ವೆಂಕಟಲಕ್ಷ್ಮಿಯೊಡನೆಯೂ ನಂಜಮ್ಮ ಇದೇ ವಿಷಯ ಪ್ರಸ್ತಾಪಿಸಿ ಆಗಾಗ ' ಪ್ರಪಂಚದಲ್ಲಿ ಇವಳಂತಾ ತಾಯಿಯೂ ಇರ್ತಾಳ್ಯೆ? ಹೆಂಗಸಿನ ಹಾಗೆ ಒಂಚೂರೂ ಕರುಣೆ, ದಯೆ ಒಂದೂ ಇಲ್ಲವಲ್ಲ ಇವಳಿಗೆ' ಅನ್ನುತ್ತಿದ್ದಳು. ವೆಂಕಟಲಕ್ಷ್ಮಿ ಮಾತ್ರ 'ಯಾರ್ಯಾರ ಕಷ್ಟ ಎಂತೆಂಥ ಕೆಲಸ ಮಾಡಿಸತ್ತೋ ಬಿಡು. ಹೆಂಗಸು ಎಂದರೆ ಹೀಗೇ ಇರಬೇಕು ಎಂದಾಕ್ಷಣ ಹಾಗೇ ಇರುವುದಕ್ಕಾಗತ್ಯೇ ಹೇಳು?' ಎಂದು ಹೇಳುತ್ತಿದ್ದಳು. ಕೊನೆಗೆ ಸುಬ್ಬಮ್ಮನೆ ಈ ಸಂಭಾಷಣೆಯಲ್ಲೂ ಬಾಯಿ ಹಾಕಿ, 'ನಮ್ಮ ರಾಜಣ್ಣನಿಗಿಂತಾ ಕರುಣೆ, ದಯೆ ಇರೋ ಇನ್ನೊಬ್ರಿದ್ದಾರ್ಯೇ? ಹಾಗಂತ ರಾಜಣ್ಣನ್ನ ಗಂಡಲ್ಲ ಹೆಣ್ಣು ಅಂತ ಕರೀಬೇಕೆ? ಇದೆಂಥಾ ಹುಚ್ಚು ಮಾತು ಅಂತೀನಿ' ಎಂದು ನಂಜಮ್ಮನ ಬಾಯಿ ಮುಚ್ಚಿಸಿ ಮಾತು ಮುಗಿಸಿಬಿಡುತ್ತಿದ್ದಳು. ಹೆಣ್ತನವನ್ನೂ ತಾಯ್ತನವನ್ನೂ ಒಂದೇ ಎಂದೋ ಅಥವಾ ಅವೆರಡರ ನಡುವೆ ಅವಿನಾಭಾವದ ಒಂದು ಎಳೆ ಇದ್ದು ತೀರಲೇಬೇಕು ಎನ್ನುವುದನ್ನೋ ಸುಬ್ಬಮ್ಮ ಹಾಗೆ ಖಡಾಖಂಡಿತವಾಗಿ ನಿರಾಕರಿಸುವಾಗ ಅವಳಿಗೆ ಬದಲು ಕೊಡಲು ನಂಜಮ್ಮನಿಗೆ ಸಾಧ್ಯವಾಗದಿದ್ದಿದ್ದು ಬಹಳಷ್ಟನ್ನು ಹೇಳುತ್ತಿತ್ತು ಎಂದು ಈಗ ನನಗೆ ತೋರುತ್ತಿದೆ.

ಈ ಕತೆಯಲ್ಲಿ ಬರುವ ತೊಟ್ಟಿಲ ಕುರಿತು ನನಗೆ ನನ್ನದೇ ಅನುಮಾನಗಳಿದ್ದವು. ನಿಜವಾಗಿಯೂ ಸುಬ್ಬಮ್ಮಜ್ಜಿ ತೆರಕಣಾಂಬಿಯಿಂದ ಗುಂಡ್ಲುಪೇಟೆಗೆ ತಲೆಯ ಮೇಲೆ ತೊಟ್ಟಿಲು ಹೊತ್ತು, ಕುರುಚಲು ಕಾಡು ಹಾದಿಯಲ್ಲಿ ಹತ್ತು ಮೈಲಿ ನಡೆದು ಬಂದಿದ್ದು ನಿಜವೋ ಅಲ್ಲವೋ ಎಂದೂ ಒಮ್ಮೊಮ್ಮೆ ಅನಿಸುತ್ತಿತ್ತು. ಹಾಗೊಮ್ಮೆ ನಿಜವಿದ್ದರೂ ಅವಳು ಆ ಸರಿರಾತ್ರಿಯಲ್ಲಿ, ದಾರಿಯಲ್ಲಿ ಇನ್ಯಾರದ್ದಾದರೂ ಸಹಾಯವನ್ನು ಪಡೆದಿದ್ದಳೇನೋ ಎಂದೂ ಅನಿಸುತ್ತಿತ್ತು. ಸುಬ್ಬಮ್ಮಜ್ಜಿಯನ್ನು ಈ ಕುರಿತು ಕೇಳಬಹುದಿದ್ದರೂ ನಾನು ಕೇಳಲಿಲ್ಲ. ಹಾಗೆ ಕೇಳಿದ್ದರೆ ಅದು ಅವಳ ಆ ದೊಡ್ಡ ಅನುಭವವನ್ನೇ ಅವಮಾನಿಸಿದ ಹಾಗಾಗಬಹುದೆಂದು ಆ ಎಳೆಯ ವಯಸ್ಸಿಗೇ ನನಗನ್ನಿಸಿತ್ತು. ಹಾಗೆ ನೋಡಿದರೆ ಕತೆ ಹೇಳುವವರ ಅನುಭವವನ್ನು ಅನುಮಾನಿಸದೆ, ಅವಮಾನಿಸದೆ ಕತೆಯ ಭಾರವನ್ನು ತಲೆಯ ಮೇಲೆ ತೊಟ್ಟಿಲ ಹಾಗೆ ಹೊತ್ತುಕೊಂಡು ದಾರಿ ಸವೆಸುವುದು ಎಳೆತನದ ಮೃದು ಹೃದಯಕ್ಕಷ್ಟೇ ಸಾಧ್ಯವೇನೋ.

ನನ್ನ ತಾತ ಮುಕುಂದರಾಯ ಹೇಳುತ್ತಿದ್ದ ದೆವ್ವಗಳ ಕತೆ ಸಂಪೂರ್ಣ ಸುಳ್ಳೆಂದು ನನಗೆ ಗೊತ್ತಿದ್ದರೂ ಅದರ ರೋಚಕತೆಗಾಗಿಯೇ ಮತ್ತೆ ಮತ್ತೆ ಅದನ್ನು ಕೇಳಿಸಿಕೊಂಡ ಹಾಗೆಯೇ ಮೇಲ್ನೋಟಕ್ಕೆ ಸುಳ್ಳಿರಬಹುದೆಂದು ತೋರುವ ಸುಬ್ಬಮ್ಮಜ್ಜಿಯ ಕತೆಯ ವಿವರಗಳಲ್ಲಿ ಆ ಸುಳ್ಳುಗಳನ್ನೆಲ್ಲಾ ನಿವಾರಿಸಿ ಒಗೆದುಬಿಡುವ ಸತ್ಯದ ಮೊನಚೊಂದಿದೆ ಎಂಬ ಸೂಕ್ಷ್ಮವನ್ನು ಅರಿಯಲಿಕ್ಕಾಗೇ ಮತ್ತೆ ಮತ್ತೆ ಕೇಳಿಸಿಕೊಂಡಿದ್ದು ಎಂದು ಈಗ ಅನಿಸುತ್ತಿದೆ.

* * *

ಈಗ ಸದ್ಯಕ್ಕೆ ಈ ಸಪೋರ್ಟ್ ಗುಂಪಿನಲ್ಲಿ ತಾನು ಹೆಣ್ಣಾಗಬೇಕೆಂದು ಹಂಬಲಿಸುತ್ತಿರುವ, ಹಾಗೆ ಆದರೂ ಅಮ್ಮನಾಗಲು ಸಾಧ್ಯವಿಲ್ಲವಲ್ಲಾ ಎಂದು ಹಲುಬುತ್ತಿರುವ ಜೋ-ಳನ್ನು ಹೇಗೆ ಸಂತೈಸುವುದು ತಿಳಿಯದೆ ಎಲ್ಲರೂ ಸುಮ್ಮನೆ ಕುಳಿತ ವೇಳೆ, ಈ ಎಳೆ ಜೀವಕ್ಕೆ ಮುಂದೊಮ್ಮೆ ಸುಬ್ಬಮ್ಮಜ್ಜಿಯ ಕತೆಯನ್ನು ತಾನು ಹೇಳಬೇಕು ಎಂದು ನನಗೆ ಅನಿಸುತ್ತಿರುವುದಾದರು ಏಕೆ? ಈ ಮಗುವಿಗೆ ಆ ಕತೆಯಿಂದ ಏನು ಸಿಗಬಹುದು ಎಂದು ತಿಳಿಯದಿದ್ದರೂ ಹಿಂದೊಮ್ಮೆ ಪುಟ್ಟ ಹುಡುಗಿಯಾಗಿದ್ದಾಗ ನನಗೆ ಸಿಕ್ಕ ಘನವಾದುದ್ದೇನೋ ಈ ಕತೆಯಿಂದ ಇವಳಿಗೂ ಸಿಗಬಹುದು ಎಂದು ಮಾತ್ರ ಅನಿಸಿತು.

ಬಿಕ್ಕಿ ಬಿಕ್ಕಿ ಅಳುತ್ತಿದ್ದ ಜೋಸೆಫೀನಳತ್ತ ಮೊದಲಿಗೆ ಹೋಗಿ ಅವಳನ್ನು ತಬ್ಬಿ ಸಂತೈಸಿದ್ದು ಮಕ್ಕಳೇ. ಹದಿಹರೆಯದ ಅವರೆಲ್ಲಾ ಜೋ-ಳನ್ನು ಸುತ್ತುವರಿದು ನಿಂತರು. ಎಲ್ಲರೂ ಅವಳನ್ನು ತಬ್ಬಿದರು, ತಲೆ, ಬೆನ್ನು ನೇವರಿಸಿದರು, ಕಣ್ಣೊರೆಸಿದರು. ಅವಳೊಂದಿಗೆ ತಾವೂ ಬಿಕ್ಕಳಿಸಿದರು.

ಕೊನೆಗೊಮ್ಮೆ ಮೀಟಿಂಗ್ ಮುಗಿದು ಎಲ್ಲರೂ ಅಲ್ಲಿಯೇ ಅಣಿಮಾಡಿದ್ದ ಲಘು ಉಪಾಹಾರವನ್ನು ತೆಗೆದುಕೊಳ್ಳುತ್ತಿದ್ದ ವೇಳೆ ನವೀನ ನನ್ನ ಬಳಿಗೆ ಬಂದು,

‘ಅಮ್ಮಾ, ನೀಡ್ ಟು ಆಸ್ಕ್ ಯೂ ಸಮ್ಥಿಂಗ್’ ಎಂದ.

‘ಅರೆ, ಏನಾಯ್ತು? ಈಸ್ ಎವ್ವೆರಿಥಿಂಗ್ ಆಲ್ರೈಟ್?’ ಎಂದು ಕೇಳಿದೆ.

‘ಎಸ್ ಅಮ್ಮ, ಎಲ್ಲವೂ ಸರಿಯಿದೆ. ಅದೂ... ನಿನ್ನ ಬಳಿ ಸ್ಯಾನಿಟರಿ ಪ್ಯಾಡ್ ಅಥವಾ ಟ್ಯಾಂಪೂನ್ ಇದೆಯಾ? ಏಜೇಗೆ ಪೀರಿಯಡ್ಸ್ ಶುರುವಾಯ್ತಂತೆ. ನಿನ್ನನ್ನು ಕೇಳಬೇಕೆಂದು...’ ಅನ್ನುವಷ್ಟರಲ್ಲಿ ನನ್ನ ಬಳಿ ಬಂದ ಏಜೆ,

‘ಹೇ ಮಿಸ್ ತನು, ಸಾರಿ ಟು ಬಾದರ್ ಯೂ. ನನ್ನ ಟೈಮ್ ಮುಂದಿನ ವಾರಕ್ಕಿತ್ತು. ಈ ಬಾರಿ ಬೇಗ ಆಗಿದ್ದರಿಂದ ನಾನು ಪ್ರಿಪೇರ್ ಆಗಿ ಬಂದಿರಲಿಲ್ಲ’ ಜೆಂಡರ್‌ನ್ಯೂಟ್ರಲ್ ಮಗು ಏಜೆ ಮಾತು ಮುಗಿಸುವ ಮುನ್ನವೇ ಏನೂ ತೊಂದರೆಯಿಲ್ಲವೆಂದು ಹೇಳಿ, ಏಜೆಗೆ ಬಾತ್ರೂಮಿನ ದಾರಿ ತೋರಿಸು ಎಂದು ನವೀನನಿಗೆ ತಿಳಿಸಿ, ‘ಅವರ’ ತಿಂಗಳ ಸ್ರಾವವನ್ನು ಹಿಡಿದಿಟ್ಟುಕೊಳ್ಳುವ ಟ್ಯಾಂಪೂನ್ ತರಲೆಂದು ನಾನು, ಬೇಸ್ಮೇಂಟಿನ ಮೆಟ್ಟಿಲೇರಿ ರೂಮಿನ ಕಡೆಗೆ ಹೆಜ್ಜೆ ಹಾಕಿದೆ.



# ಆಗ್ರಹ ಯಾತ್ರೆ

**ಶಶಿಕಲಾ ಚಂದ್ರಶೇಖರ್**
Boyds, Maryland

*

2016 ಎಂದಿನಂತಿರದ ವರ್ಷ. ಕಾರಣ, ರಾಷ್ಟ್ರ ತನ್ನ 45ನೆಯ ಅಧ್ಯಕ್ಷನನ್ನು ಆರಿಸಲಿತ್ತು. ಅದಕ್ಕೂ ಮಿಗಿಲಾದ ಕಾರಣ ನನ್ನ ಕುಲದ ಘನತೆ, ಗೌರವ ಮತ್ತು ಇರವನ್ನೇ ಆಕ್ರಮಣ ಮಾಡಿದ ವ್ಯಕ್ತಿ ಕಣದಲ್ಲಿದ್ದ. ಇಲ್ಲಿರುವುದು ಎರಡೇ ರಾಜಕೀಯ ಪಕ್ಷ. ಈ ನೆಲದ ಇತಿಹಾಸ ಎಂದೂ ಕೇಳರಿಯದ ಅಸಭ್ಯ ವ್ಯಕ್ತಿಯನ್ನು ಒಂದು ಪಕ್ಷ ಅನುಮೋದಿಸಿತ್ತು. ಅವನ ಹೆಣ್ಣು ಹಗೆತನ, ಹೆಣ್ಣಿನ ವಿಷಯದಲ್ಲಿ ಅವನಿಗಿದ್ದ ನಿಕೃಷ್ಟ ದೃಷ್ಟಿಯ ಬಗೆಗೆ ನನಗೆ ಅತೀವ ಹೇಸಿಗೆ ಇತ್ತು. ಅವನ ಅಲ್ಪತನದ ಬಗ್ಗೆ ನನ್ನಲ್ಲಿ ತೀವ್ರ ತಿರಸ್ಕಾರವಿತ್ತು.

ಚುನಾವಣೆಗೆ ಒಂದು ತಿಂಗಳು ಉಳಿದಿರುವಾಗ, Washington Post ಪತ್ರಿಕೆ ಅವನ ನೀಚ, ಕ್ಷುದ್ರ, ಲಂಪಟ, ಕಾಮುಕ ಪ್ರವೃತ್ತಿಯನ್ನು ಬಹಿರಂಗಗೊಳಿಸುವ ಒಂದು ಲೇಖನವನ್ನೂ, ಜೊತೆಗೆ ವೀಡಿಯೋ ತುಣುಕನ್ನೂ ಬಹಿರಂಗಪಡಿಸಿತು. Access Hollywood ಎಂಬ ಮನೋರಂಜನಾ ಕಾರ್ಯಕ್ರಮದ ಸಂದರ್ಶನದ ಸಂದರ್ಭದಲ್ಲಿ ಕಾರ್ಯಕ್ರಮದ ನಿರ್ವಾಹಕ ಬಿಲ್ಲಿ ಬುಶ್ ಜೊತೆ ಆಡಿದ ಮಾತಿನ ವೀಡಿಯೋ ತುಣುಕದು. ಧರಿಸಿದ್ದ Microphone ಚಾಲೂ ಇದೆ ಎಂದು ಅರಿಯದೆ ಸಂಭಾಷಣೆ ನಡೆಸಿದ್ದರು ಅವರಿಬ್ಬರು. ಆ ಮಾತುಗಳು ಶಿಷ್ಟ ಸಮಾಜಕ್ಕೆ ಮಸಿ ಬಳಿಯುವಂತಹವು. ಅದರಲ್ಲಿ, ಅವನು ವಿವಾಹಿತ ಹೆಣ್ಣನ್ನು ಹೇಗೆ ನನ್ನ ಬಲೆಗೆ ಕೆಡವಿಕೊಳ್ಳುವೆ ಎಂದು ಬಣ್ಣಿಸಿದ್ದ. 'ನೋಡಿದ ಕ್ಷಣವೇ ಅವರನ್ನು ಮುತ್ತಿಕ್ಕಲಾರಂಭಿಸುವೆ, ಕಾಯುವ ಪ್ರಶ್ನೆಯೇ ಇಲ್ಲಾ.

ತಾರಾ ಪಟ್ಟವಿದ್ದರೆ, ಏನು ಬೇಕಾದ್ರೂ ಮಾಡಬಹುದು; ಮಾಡಲು ಹೆಂಗಸರು ಬಿಡ್ತಾರೆ'. ಇಂತಹ ಮಾತುಗಳ ಜೊತೆಗೆ, ಮತ್ತಷ್ಟು ಅವಹೇಳನಕಾರಿ ಮಾತುಗಳನ್ನು ಹೇಳಿದ್ದ. ಹೀನಾಯವಾದ, ಕೀಳಾದ ಮತ್ತು ನನ್ನ ಕುಲದ ಅಸ್ತಿತ್ವವನ್ನೇ ತುಚ್ಛೀಕರಿಸಿದ ಅಶ್ಲೀಲ ಪದಬಳಸಿ ಅವನ ಪೌರುಷ(?) ಕೊಚ್ಚಿಕೊಂಡಿದ್ದ. '...Grab `em by the pussy. You can do anything'.

ದಿನಾಂಕ 11/08/2016 ರಂದು ಚುನಾವಣಾ ದಿನ. ದೇಶ ಹಾಗು ನಾನು ತಿಂಗಳುಗಟ್ಟಲೆಯಿಂದ ಕಾದಿದ್ದ 2016 ನವೆಂಬರ್ 8ರ ದಿನ ಕಡೆಗೂ ಬಂದಿತ್ತು. ಸಂಜೆ ಕವಿದಂತೆ, ರಾತ್ರಿಯ ಕತ್ತಲು ದೇಶವನ್ನು ಸಂಪೂರ್ಣವಾಗಿ ಆಕ್ರಮಿಸಿಕೊಳ್ಳುತ್ತಿರುವಂತೆ, ಮಾಧ್ಯಮಗಳು ಚುನಾವಣಾ ಭಾವಿ ಫಲಿತಾಂಶವನ್ನು ಅಂಕಿ ಅಂಶಗಳ ಸಹಿತ ಮುಂದಿಡತೊಡಗಿದರು. ವಾಸ್ತವ ಜಗದ ಅರಿವು ಎಲ್ಲರನ್ನೂ ಆವರಿಸಿತು. ಟಿವಿಯ ಕ್ಯಾಮರಾ ಕಣ್ಣಿನ ಮೂಲಕ ಬಹಿರಂಗವಾಗಿಯೇ ಅಪಾರ ಜನರ ನಿರಾಸೆ, ಹತಾಶೆ, ದುಃಖ ಪ್ರಕಟಗೊಂಡಿತ್ತು. ನಾನು ಮತ್ತು ನನಗೆ ಗೊತ್ತಿರುವ ಸಂವೇದನಾಶೀಲರೆಲ್ಲರ ಸ್ಥಿತಿಯೂ ಅದೇ ಆಗಿತ್ತು. ಬೆಳಕು ಹರಿಯುವ ಮುನ್ನ, ಅವನು ಸೋತಿದ್ದ. 2.9 ಮಿಲಿಯನ್ ಜನ ಅವನನ್ನು ತಮ್ಮ ಭಾವಿ ಅಧ್ಯಕ್ಷನಾಗುವುದನ್ನು ನಿರಾಕರಿಸಿದ್ದರು. ಎದುರಾಳಿಗಿಂತ 2.9 ಮಿಲಿಯನ್ ಕಮ್ಮಿ ಜನಾನುರಾಗಿ ಮತಗಳಿಂದ ಸೋತವನು ದೇಶದ ಚುನಾವಣಾ ಮಾದರಿಯ ಪ್ರಕಾರ 77 ಹೆಚ್ಚು Electoral College ಮತಗಳಿಂದಷ್ಟೇ ಗೆದ್ದು ಅಧ್ಯಕ್ಷ ಗದ್ದುಗೆ ಏರಲಿದ್ದ.

ಮರುದಿನ ಭಾರವಾದ ಮನಸ್ಸಿನಿಂದಲೇ ಕೆಲಸಕ್ಕೆ ಬಂದೆ. ಐಟಿ ವಿಭಾಗದ PL1 ಅಂತಸ್ತಿನ ಕೋಣೆಗಳೆಲ್ಲವೂ ಖಾಲಿ! login ಆಗುವ ಮೊದಲು ಮೂರನೇ ಅಂತಸ್ತಿನ ಕಡೆ ಹೊರಟೆ. ಮನದ ದುಗುಡ ಕಮ್ಮಿಯಾಗಬೇಕಿದ್ದಲ್ಲಿ, ಆಶ್ರಯ ತಾಣದ ಅಗತ್ಯವಿತ್ತು. ಎಲಿವೇಟರ್‌ನ ಹೊರಗಡಿ ಇಡುತ್ತಿದ್ದಂತೆ, C.E.O. ಕೇಟಿಯ ಕೊಠಡಿ ಎದುರಿನ ಹೊರ ಜಾಗದಲ್ಲಿ ಕೇಟಿ, ರೂಥ್, ಲಿಂಡಾ, ಟೋನಿ, ಹೈಕಾ, ಸೂಸನ್ ಮತ್ತು ಡಯಾನ ಕಂಡರು. ಎಲ್ಲರ ಕಣ್ಣಲ್ಲೂ ನಿರಾಸೆ, ಅನಿರೀಕ್ಷಿತ ಸೋಲು ತಂದ ಯಾತನೆ. ಗರಬಡಿದವಳಂತೆ ನಿಂತ ನಾನೂ ಅವರ ಭಾವವನ್ನೇ ಸಮವಸ್ತ್ರದಂತೆ ಧರಿಸಿದ್ದೆ.

ಹತ್ತಿರದಲ್ಲಿದ್ದ ಮಿಯಾ ನನ್ನೆಡೆ ಬಂದು ಬಾಗಿ ಅಪ್ಪಿದಳು. ನಾವಿಬ್ಬರೂ ಬಿಕ್ಕಿದೆವು. ಎಲ್ಲರ ಕಣ್ಣಲ್ಲೂ ತಿಳಿ ನೀರ ತೆರೆ. ಆನಂತರ ಹತ್ತಿರ ಬಂದವಳು ಕೇಟಿ. 50 ವರ್ಷಗಳಲ್ಲಿ ಸರ್ವಾನುಮತದಿಂದ ಆಯ್ಕೆಯಾದ ನಮ್ಮ ಸಂಸ್ಥೆಯ ಪ್ರಥಮ ಮಹಿಳಾ C.E.O ಅವಳು. ನನ್ನ ಕೈಯನ್ನು ಮೃದುವಾಗಿ ಒತ್ತಿ, ಹೆಗಲ ಮೇಲೆ ಕೈ ಇಟ್ಟು. ಸಂತೈಸುವ ಸ್ವರದಲ್ಲಿ 'ಸುಮಿ... It's OK. ಬಿದ್ದ ತಕ್ಷಣ ಎದ್ದು ಉಡುಗೆ ಕೊಡವಿ ನಡೆಯುವುದು ಹೇಗೆ; ಬಿದ್ದ ಮಕ್ಕಳನ್ನು ಎತ್ತಿ ಮಂಡಿ ಒರೆಸಿ, ಕಣ್ಣೀರು ತೊಡೆದು ನಡೆಸುವುದು ಹೇಗೆ; ಬಿದ್ದ ಗೆಳತಿಗೆ ಕೈ ಆಸರೆ ಕೊಟ್ಟು ಏಳಿಸುವುದು ಹೇಗೆ; ಎನ್ನುವುದು ಸ್ತ್ರೀ ಕುಲಕ್ಕೇ ನಿಸರ್ಗದತ್ತವಾಗಿ ಬಂದ ಸಹಜ ನಡೆ. ಇದನ್ನೂ ಹಾದು ಬರಬಲ್ಲೆವು. 1913ರಲ್ಲಿ ನನ್ನ

ಮುತ್ತಜ್ಜಿ National Union of Women's Suffrage Societies (NUWSS) ಏರ್ಪಡಿಸಿದ್ದ 'ಮಹಿಳಾ ಯಾತ್ರೆ'ಯಲ್ಲಿ ಪ್ರಮುಖ ಪಾತ್ರವಹಿಸಿದ್ದಳು. ಅಧ್ಯಕ್ಷ ವುಡ್ರೋ ವಿಲ್ಸನ್, ಅಧ್ಯಕ್ಷನಾಗಿ ಅಧಿಕಾರ ವಹಿಸಿಕೊಳ್ಳುವ ಹಿಂದಿನ ದಿನ ಯಾತ್ರೆ ನಡೆದಿತ್ತು. ಮಹಿಳಾ ಹಕ್ಕಿಗಾಗಿ ನಡೆದ ಮೆರವಣಿಗೆ ಅದು. ಪೆನ್ಸಿಲ್ವೇನಿಯಾ ಅವೆನ್ಯೂ ರಸ್ತೆಯಲ್ಲಿ, ಮರುದಿನ ಅಧ್ಯಕ್ಷ ಅಧಿಕಾರದ ಸ್ಥಾನ ಸ್ವೀಕರಿಸಲು ಸಾಗುವ ಹಾದಿಯ ಸಾಗುಮಾರ್ಗದಲ್ಲೇ ಆ ಮಹಿಳೆಯರು ನಡೆದಿದ್ದರು. ಮುಂಬರುವ ಸರ್ಕಾರಕ್ಕೆ ಎಚ್ಚರಿಕೆಯ ಸಂಕೇತದಂತಿತ್ತು ಅವರು ಆರಿಸಿಕೊಂಡಿದ್ದ ನಡುಗೆಯ ದಾರಿ. We have come a long way. 60ರ ದಶಕದಲ್ಲಿ ಪ್ರತೀ ದಿನ ಶ್ವೇತಭವನದ ಮುಂದೆ ಬಹಳಷ್ಟು ಮಂದಿ ವಿಯೆಟ್ನಾಮ್ ಯುದ್ಧದಲ್ಲಿ ಅಮೆರಿಕಾ ಹಸ್ತಕ್ಷೇಪದ ವಿರುದ್ಧ ಪ್ರತಿಭಟನೆ ನಡೆಸಿದ್ದರು. ನನ್ನಜ್ಜ ಅಜ್ಜಿ ಕೂಡ ಪ್ರತಿಭಟನಾಕಾರ ಗುಂಪಿನಲ್ಲಿದ್ದರು. 'ಮಹಿಳಾ ಹಕ್ಕು; ಮಾನವ ಹಕ್ಕು'. ಶ್ವೇತ ಭವನದ ಅಧಿಕಾರಸ್ಥರಿಗೆ ಈ ಸಂದೇಶ ಮುಟ್ಟಬೇಕು. ಹಕ್ಕಿಗೆ ಧಕ್ಕೆ ಬಂದಾಗ ಒಟ್ಟಾಗಿ ಪ್ರತಿಭಟಿಸಬೇಕು. ಒಟ್ಟಾಗಿ ನಡೆಯುವ ಸಾಮರ್ಥ್ಯದಲ್ಲಿ ನಂಬಿಕೆ ಇಡಬೇಕು. 'There is a lot we can do!'. ಆ ಸಾಂತ್ವನ ಹಿತವಾಗಿತ್ತು. ಇದೇ ತರಹ ಸಂವೇದನೆಯುಳ್ಳ ಬಿಡಿಯಾದ ಗುಂಪುಗಳು ಸಾಕಷ್ಟು ಇದ್ದಿರಲೇಬೇಕು. ಮಾಧ್ಯಮಗಳ ಪ್ರಕಾರ ಇದ್ದವು ಕೂಡಾ.

ಸಾಮಾಜಿಕ ನ್ಯಾಯದ ಬಗ್ಗೆ ಕಿಂಚಿತ್ತೂ ಆದರವಿರದ, ಹೆಂಗಸರ ಬಗ್ಗೆ ಗೌರವವಿರದ, ಹೆಣ್ಣುಹಗೆತನ (misogyny) ಉಳ್ಳ ವ್ಯಕ್ತಿ ಅಧ್ಯಕ್ಷ ಸ್ಥಾನ ವಹಿಸಿಕೊಳ್ಳಲು ಹೆಚ್ಚು ಸಮಯವೇನೂ ಇರಲಿಲ್ಲ. ಕೇಟಿ ಹೇಳಿದ್ದು ನಿಜವೋ ಎಂಬಂತೆ ಸ್ತ್ರೀ ಸಮುದಾಯ ಸಾಮಾಜಿಕ ಜಾಲತಾಣದ ಮೂಲಕ ಪ್ರತಿಭಟನಾ ಮಾರ್ಗದ ಬಗ್ಗೆ ಮಾತನಾಡತೊಡಗಿತು. ಮಹಿಳಾ ಆಂದೋಳನದ ಪುನಃಚೇತನದ ಆಶಯದ ಬಗ್ಗೆ ಚಿಂತಿಸತೊಡಗಿದರು. ಶಿಷ್ಟ ಸಮಾಜ ನೆಚ್ಚಿಕೊಂಡಿದ್ದ ಸಾಮಾಜಿಕ ನ್ಯಾಯಕ್ಕೆ ಧಕ್ಕೆ ಒದಗಿದ ಸ್ಥಿತಿಯನ್ನು ಒಪ್ಪಿಕೊಳ್ಳಲು ನಿರಾಕರಿಸಿ, ಅದರ ಪರವಾಗಿ ಮಹಿಳೆಯರು ಹೋರಾಟ ನಡೆಸುವುದನ್ನು ಮುಂದುವರೆಸುವವರು ಎಂಬ ದಿಟ್ಟ ಸಂದೇಶವನ್ನು ಹೊಸ ಸರ್ಕಾರಕ್ಕೆ, ಅದರಲ್ಲೂ ದೇಶದ 45ನೇ ಅಧ್ಯಕ್ಷನಿಗೆ ರವಾನಿಸುವ ಮಹಿಳೆಯರ ಗುರಿ ನಿಚ್ಚಳವಾಗಿತ್ತು. ಹೆಚ್ಚಿನ ತಯಾರಿ ಇಲ್ಲದೆ ಕೇವಲ FB, Insta ಹಾಗು ಇನ್ನಿತರ ಸಾಮಾಜಿಕ ಮಾಧ್ಯಮಗಳ ಮೂಲಕ ಮಾತನಾಡಿಕೊಳ್ಳುತ್ತಾ... ಆಕ್ರೋಶ ಮತ್ತು ಜವಾಬ್ದಾರಿಯನ್ನು ಹಂಚಿಕೊಂಡು ಒಗ್ಗೂಡಿ ಜನವರಿ 21ರಂದು ಆಗ್ರಹ ಯಾತ್ರೆ ನಡೆಸುವ ಬಗ್ಗೆ ಆಲೋಚನೆಗಳನ್ನು ಪರಸ್ಪರ ಹಂಚಿಕೊಳ್ಳತೊಡಗಿದರು. ಸಿದ್ಧತೆಗಳು ಭರದಿಂದ ಸಾಗಿದವು. 'The Women's March, 2017' ರೂಪ ತಾಳಿತು. ನಾನೂ ಒಳಗೊಳಗೇ ದಹಿಸುತ್ತಿದ್ದೆ.

ಜನವರಿ 21ರಂದು ನಾನು, ರೂಥ್, ಲಿಂಡಾ, ಟೋನಿ, ಹೈಕಾ, ಸೂಸನ್, ಎವಾ ಮತ್ತು ಡಯಾನ ಒಟ್ಟೊಟ್ಟಾಗಿ ಯಾತ್ರೆಯಲ್ಲಿ ಹೆಜ್ಜೆ ಹಾಕಿದೆವು. ನಮ್ಮೆಲ್ಲರ ಕುಟುಂಬಗಳ ಸದಸ್ಯರೂ ನಮ್ಮ ಜೊತೆಯಾಗಿದ್ದರು. ಅಮೆರಿಕೆಯ 45ನೇ ಅಧ್ಯಕ್ಷ ಸ್ಥಾನದ ಉದ್ಘಾಟನೆಯ

ಮರುದಿನ ರಾಜಧಾನಿಯಲ್ಲಿ ನಡೆದ ಬೃಹತ್ ಯಾತ್ರೆ ಅದಾಗಿತ್ತು. ಸುಮಾರು 5.5 ಮಿಲಿಯನ್‌ಗೂ ಮೀರಿ ಜನ ಪಾಲ್ಗೊಂಡಿದ್ದರು. 84 ರಾಷ್ಟಗಳನ್ನು ಒಳಗೊಂಡು 7 ಖಂಡಗಳಲ್ಲಿಯೂ (ಹೌದು ಅಂಟಾರ್ಟಿಕಾ ಖಂಡವೂ ಸೇರಿ), 'ಮಹಿಳಾ ಹಕ್ಕು ಮಾನವ ಹಕ್ಕು' ಎನ್ನುವ ಧ್ವನಿ ಜಗದಗಲಕ್ಕೆ ವಿಸ್ತರಿಸಿತ್ತು. ಅಜ್ಜಂದಿರು, ಅಪ್ಪಂದಿರು, ಅಣ್ಣ-ತಮ್ಮಂದಿರು, ಅಮ್ಮಂದಿರು, ಅಕ್ಕ ತಂಗಿಯರು ನಮ್ಮ ಮೊಮ್ಮಕ್ಕಳ, ಮಕ್ಕಳ, ಅಕ್ಕತಂಗಿಯರ, ಅಣ್ಣತಮ್ಮಂದಿರ ಹಾಗು ಸಹಜೀವಿಗಳ ಹಕ್ಕಿಗಾಗಿ, ಒಳಿತಿಗಾಗಿ ಜೊತೆಗೂಡಿದ್ದರು. Washington Monument ಮತ್ತು U.S. Capitol ನಡುವೆ ಮೈ ಚಾಚಿರುವ ಹಸಿರು ಹುಲ್ಲು ಹಾಸಿನುದ್ದಕ್ಕೂ ಜನ ಜಾತ್ರೆ. ಎಲ್ಲರ ತಲೆಯ ಮೇಲೂ ರೋಜಾ ಬಣ್ಣದ ಟೋಪಿ! ಪೋಸ್ಟರ್‌ಗಳನ್ನು ಹಿಡಿದ ಸಾವಿರಾರು ಕೈಗಳು. ಹುಡುಗಿಯೊಬ್ಬಳು ಹಿಡಿದಿದ್ದ ಒಂದು ಪೋಸ್ಟರಿನ ಬರಹ ಎಲ್ಲವನ್ನೂ ಪ್ರತಿನಿಧಿಸಿತ್ತು. 'Health care, Social justice, reproductive right, environment issues, LGBTQ rights, gun violence issue, freedom of religion ARE WOMEN'S ISSUES' ಉಲ್ಲೇಖಿಸಲರ್ಹವಾದ ಬಹಳಷ್ಟು ಪೋಸ್ಟರ್‌ಗಳನ್ನು ಹಿಡಿದ ದಂಡು ಬಹಳಷ್ಟಿತ್ತು. ಕೇಟಿ ಮುತ್ತಜ್ಜಿ ಪ್ರತಿನಿಧಿಸಿದ್ದ 'National Union of Women's Suffrage Societies (NUWSS)' ಪ್ರತಿನಿಧಿಗಳ ದೊಡ್ಡ ಗುಂಪನ್ನೂ ಕಂಡೆ. ಮುಂಚೂಣಿಯಲ್ಲಿದ್ದ ವೃದ್ಧ ಮಹಿಳೆಯ ಕೈಯ್ಯಲ್ಲಿದ್ದ ಪೋಸ್ಟರ್ ಬರಹ ಹೀಗಿತ್ತು. '104 Years later.... Women still march for EQUALITY'. ಗುಂಪಿನಲ್ಲಿದ್ದ ಮಹಿಳೆಯೊಬ್ಬಳನ್ನು ಮಾತನಾಡಿಸಿದೆ. ಅವಳ ಹೆಸರು ಮೇರಿ ಕ್ರೀಗನ್ ಲೆಫ್ಲರ್. ಅವಳಜ್ಜಿಯ ಗೌರವಾರ್ಥವಾಗಿ "Still Marching/1848–1917" ಎಂಬ ಬರಹದ ನೇರಳೆ ಬಣ್ಣದ ಬಾರ್ಡರ್ ಇದ್ದ ಬಿಳೀ ಪಟ್ಟಿ (sash) ಧರಿಸಿ ಬಂದಿದ್ದಳು.

ಆ ದಿನದ ಯಾತ್ರೆ ಮುಗಿದು ಸ್ಮಿಥ್‌ಸೋನಿಯನ್ ರೈಲ್ವೆಸ್ಟೇಷನ್ ನೆಲ ಮಾಳಿಗೆಯ ಮೆಟ್ಟಿಲನ್ನು ತುಳಿಯುವ ಮುನ್ನ ಹಿಂತಿರುಗಿ ನೋಡಿದೆ, ಕಣ್ಣ ಅಳತೆಗೆ ಮೀರಿದ ಜನ ರಾಶಿ. Washington Monument ಮತ್ತು U.S. Capitol ನಡುವೆ ರೋಜಾ ಬಣ್ಣದ ರತ್ನಗಂಬಳಿ ಹಾಸಿದಂತಹ ನೋಟ! ಜಗದ ಅನಿಷ್ಟಗಳ ವಿರುದ್ಧ ನಾನೂ ಧ್ವನಿ ಎತ್ತಿದೆ, ಈ ಅಗಾಧವಾದ ಯಾತ್ರೆಯಲ್ಲಿ ನಾನೊಂದು ಚಿಕ್ಕ ಪಾತ್ರ ನಿರ್ವಹಿಸಿದೆ ಎಂಬ ಸಣ್ಣ ನೆಮ್ಮದಿಯ ಮುಗುಳುನಗು ಮುಖದ ಮೇಲೆ ಸುಳಿಯಿತು.

ವ್ಯಕ್ತಿಗತ ಸಂವೇದನೆಗಳಿಗೆ, ಒಗ್ಗಟ್ಟಾದ ಸಂಗಚಾಲನೆ ಸಿಕ್ಕಾಗ ಪ್ರತಿಭಟನೆ ಭುಗಿಲೇಳುವುದು. ಆ ಸಮುದಾಯ ಪ್ರತಿಭಟನೆ, ಹೋರಾಟದಲ್ಲಿ ಪಾಲ್ಗೊಂಡವರಲ್ಲಿ ಸಮಷ್ಟಿ ಬಲದ ಶಕ್ತಿಯ ಮಹತ್ವದ ಅರಿವು, ಸ್ವನಂಬಿಕೆಯನ್ನು ಹೆಚ್ಚಿಸಿ ಹೋರಾಟ ಮುಂದುವರೆಸಲು ಪ್ರೇರಣೆಯಾಗುತ್ತದೆ. ಆ ಪ್ರೇರಣೆಯೇ ನಮ್ಮನ್ನೆಲ್ಲಾ ಮುಂದಿನ ದಿನಗಳಲ್ಲಿ ವಾಷಿಂಗ್‌ಟನ್ನಿನಲ್ಲಿ ನಡೆದ ಹಲವಾರು ಪ್ರತಿಭಟನೆ/ ಆಗ್ರಹ ಯಾತ್ರೆ/ ಜನಜಾಗೃತ

ಜಾಥಾಗಳಲ್ಲಿ ಭಾಗವಹಿಸುವಂತೆ ಮಾಡಿದ್ದು. ಹಲವು ಬಾರಿ ಪ್ಯಾಟ್ರಿಕ್, ಸೈಮನ್, ಮತ್ತು ಗ್ಯಾರಿ ಕೂಡ ನಮ್ಮ ಜೊತೆಯಾಗುತ್ತಿದ್ದರು.

ಹೀಗೊಂದು ದಿನ ಪೊಲೀಸರ ದೌರ್ಜನ್ಯಕ್ಕೆ ಬಲಿಯಾಗಿದ್ದ ಜಾರ್ಜ್ ಫ್ಲೊಯ್ಡ್ (ಅವನ ಸಾವೊಂದು ಹೃದಯವಿದ್ರಾವಕ ಘಟನೆ) ಮರಣದ ವಿರುದ್ಧ ನಡೆದ ಪ್ರತಿಭಟನೆಯಲ್ಲಿ ಜಿನುಗು ಹೃದಯದಿಂದ ಪಾಲ್ಗೊಂಡಿದ್ದೆವು. ಪ್ರತಿಭಟನಾ ಕಾರ್ಯಕ್ರಮ ಮುಗಿದ ನಂತರ ನಾನೂ ನನ್ನ ಗೆಳತಿಯರು ನಮ್ಮ ನಮ್ಮ ಮನೆಗಳತ್ತ ತಿರುಗಿ ಹೊರಟೆವು.

ಸ್ಮಿಥ್‌ಸೋನಿಯನ್ ರೈಲ್ವೆಸ್ಟೇಷನ್ ನೆಲಮಾಳಿಗೆಯ ಮೆಟ್ಟಿಲನ್ನು ಇಳಿದುಹೋಗುವ ಮುನ್ನ ತಿರುಗಿ ನೋಡಿದೆ. ಮರದ ಬುಡದಲ್ಲಿ ಕುಳಿತ ಅವಳು ಕಂಡಳು. ಕೈಯ್ಯಲ್ಲೊಂದು poster ಹಿಡಿದಿದ್ದಳು. ಅದೇ ಮೊದಲ ಸಲ ಆಕೆ ನನಗೆ ಸಿಕ್ಕಿದ್ದು. ಆದರೆ ಇಂದಿಗೂ ನನಗೆ ಅವಳ ಬಗ್ಗೆ ಯಾವ ವಿವರವೂ ತಿಳಿಯದು. ಸ್ಟೇಷನ್ ಒಳಹೋಗದೆ ಹಿಂತಿರುಗಿ ಅವಳೆಡೆ ನಡೆದೆ. ಅವಳನ್ನು ಹತ್ತಿರದಿಂದ ಕಂಡದ್ದೇ ಕೈಹಿಡಿದು ಏಳಲು ಅಂಗೈ ಚಾಚಬೇಕು ಎನಿಸಿತು. ಅವಳೆದುರು ಕುಳಿತೆ. ಅಂತಃಕರಣ ಕಲಕುವಂತಿತ್ತು ಅವಳ ದೃಷ್ಟಿ.

'Sorry looks like you are in so much pain' ಎಂದೆ. ನನ್ನ ಮಾತನ್ನು ಅವಳು ಹೇಗೆ ಅರ್ಥೈಸಿಕೊಂಡಳೋ? ನಾನು ಕೇಳಿಸಿಕೊಳ್ಳುತ್ತಿರುವೆನೋ ಇಲ್ಲವೋ ಅನ್ನುವ ಗೊಡವೆಯೂ ಇರದೆ, ಮಾತನಾಡತೊಡಗಿದಳು.

'ಟಿಮತಿ ವಿಲ್ಸನ್, ಪ್ರೀತಿಯ ಮಾಯಕ ಶಕ್ತಿಯಲ್ಲಿ ನಂಬಿಕೆ ಇಟ್ಟವನು. ದಯೆಯನ್ನೇ ಉಸಿರಾಡುತ್ತಾ ಬದುಕಿದವನು. ವೈಯೊಲೀನ್ ಮತ್ತು ಗಿಟಾರ್‌ಗಳನ್ನು ತಂತಾನೇ ಕಲಿತಿದ್ದ. ಉತ್ತಮ ವಾದಕ ಕೂಡಾ. ಸಮಯ ಸಿಕ್ಕಾಗೆಲ್ಲಾ ಮನೆಯ ಸಮೀಪದ ಅನಾಥ ಪ್ರಾಣಿಗಳ ಆಶ್ರಿತತಾಣಕ್ಕೆ (Animal Shelter) ಹೋಗಿ ವೈಯೊಲೀನ್ ನುಡಿಸುತ್ತಿದ್ದನವನು. ಇದರಿಂದ ಬೆಕ್ಕು ಮತ್ತು ನಾಯಿಗಳಿಗೆ ಶಾಂತಿ, ಸಮಾಧಾನ, ಖುಷಿ ಸಿಗುತ್ತೆ ಎನ್ನುವ ಆಶಯ ಅವನದು. ಪಕ್ಕಾ ಸಸ್ಯಾಹಾರಿ, ಹಾಗೆ ಅಹಿಂಸಾವಾದಿ, ಶಾಂತಿ ಸಂಧಾನ ಪ್ರಿಯ. ಅಧ್ಯಾತ್ಮದ ಹಾದಿಯ ದಾರಿಹೋಕ. ಎಲ್ಲಾಕ್ಕಿಂತಾ ಮಿಗಿಲಾಗಿ ಟಿಮಥಿ ವಿಲ್ಸನ್ ಸೂಕ್ಷ್ಮ ಮನಸ್ಸಿನ ಮೃದು ಹೃದಯ ಜೀವಿ. ಹತ್ತರಲ್ಲೊಬ್ಬರಲ್ಲದಂತಹವನು; ಕಾಣಲು ಇತರರಿಗಿಂತ ತುಸು ಭಿನ್ನ ಅಷ್ಟೇ. ಆ ದಿನ ಅವನ ಮೇಲೆರಗಿ, ಉಸಿರು ಒರಸಿಹಾಕಿದವರಿಗೆ, ಟಿಮತಿ ಕೆಟ್ಟವನೇನಲ್ಲ ಎಂದು ಮನಗಾಣಿಸಲು ಅವನ ಇವ್ಯಾವ ಗುಣಗಳೂ ಲೆಕ್ಕಕ್ಕೆ ಬರಲಿಲ್ಲ.'

ಶೂನ್ಯದಲ್ಲಿ ದೃಷ್ಟಿಯನ್ನಿಟ್ಟ ಅವಳು, ನಿಡಿದಾದ ಉಸಿರು ಉಯ್ಯುತ್ತಾ, ತೋರು ಬೆರಳಿಂದ ಗಾಳಿಯಲ್ಲಿ ಕುಳಿಯೊಂದನ್ನು ತೋಡಿದಂತೆ ಒತ್ತುತ್ತಾ '......ಇಂತಹದೇ ಹೊತ್ತಿನಲ್ಲಿ, ಇಂತಹದೇ ಗಳಿಗೆ ಟಿಮತಿ ಅವನ ಕಿವಿಗೆ ಹಚ್ಚಿದ ear phoneನಲ್ಲಿ ಸಂಗೀತ ಕೇಳ್ತಾ, ಆ ನಾದದ ಏರಿಳಿತಕ್ಕೆ ಮೈತೂಗ್ತಾ ಮನೆಗೆ ಹೋಗುವ ಹಾದಿಯಲ್ಲಿ ದಿಕ್ಕೇಡಿ ಬೆಕ್ಕು ನಾಯಿಗಳನ್ನು ಸಂತೈಸುವ ಆಶಯದಲ್ಲಿ ವೈಯೊಲೀನ್ ನುಡಿಸುತ್ತಲಿರಬೇಕಿತ್ತು. ಚಳಿದಿನಗಳು ಮೆಲ್ಲಮೆಲ್ಲಗೆ ಕಾಲಿಡುತ್ತಿದ್ದ ದಿನಗಳ ಶೀತಗಾಳಿ ಅವನಲ್ಲಿ ನಡುಕ ಹುಟ್ಟಿಸುತ್ತಿದ್ದ ಕಾರಣ ಆ ದಿನಗಳಲ್ಲಿ, ಬೆಚ್ಚನೆಯ ಕೋಟು ಮತ್ತು ತೆರೆದ ಮುಖದ ಸ್ಕೀ ಮ್ಯಾಸ್ಕ್ ತೊಟ್ಟು ಕೆಲಸದಿಂದ

ಮನೆಯ ಕಡೆ ಹೊರಟಿರಬೇಕಿತ್ತು. ಇದ್ಯಾವುದೂ ಹಾಗೆ ಆಗಲೇ ಇಲ್ಲಾ. ಅದ್ಯಾವುದೂ ಹಾಗೆ ಆಗುವುದೂ ಇಲ್ಲಾ. ಆಗೋಲ್ಲಾ....ಇನ್ನೆಂದೂ ಆಗೋಲ್ಲ.' ಮುಖ ಇಳಿಬಿಟ್ಟ ಅವಳು ನೆಲ ನಿಟ್ಟಿಸುತ್ತಾ, ಕ್ಷಣ ಕಳೆದು,

'ಸೆಪ್ಟೆಂಬರದ ಒಂದು ಸಂಜೆ ಬಾಲ್ಟಿಮೋರ್ ಪಟ್ಟಣದ, ಮೇರಿಲ್ಯಾಂಡ್ ರಾಜ್ಯದ ಪೊಲೀಸರು ಮತ್ತು 23 ವರ್ಷದ ಟಿಮತಿ ಎದುರಾಬದುರಾದರು, ಅಷ್ಟೇ. ಇದಕ್ಕಿಂತ ಹೆಚ್ಚಿನದೇನಾಗಿರಬೇಕಿರಲಿಲ್ಲ. ಆದರೆ... ದಿನದಂತೆ ಕೆಲಸ ಮುಗಿಸಿ ಮನೆಯ ಕಡೆ ಹೊರಟಿದ್ದ ಟಿಮತಿ. ಹೊರಟ ದಾರಿಯಲ್ಲಿ ಮನೆಗೆ ಹತ್ತಿರವೇ ಇದ್ದ ಸೆವೆನ್ ಇಲವೆನ್ ಅಂಗಡಿಯಲ್ಲಿ, ಮನೆಯಲ್ಲಿದ್ದ ಸಂಬಂಧಿ ಸೋದರನಿಗಾಗಿ ಟೀ ಕೊಳ್ಳಲು ಹೋಗಿದ್ದ. ಅಂಗಡಿ ಹೊಕ್ಕ ಕ್ಷಣ ಕ್ಯಾಶ್ ಕೌಂಟರ್ನಲ್ಲಿದ್ದವನಿಗೆ ನಡು ಬಗ್ಗಿಸಿ ತಲೆಬಾಗಿ ಗೌರವ ಸೂಚಿಸಿದ. ಬರ್ಫ ಹಾಕಿದ ತಣ್ಣನೆಯ ಚಹ ಕೊಂಡು, ಹಣ ಪಾವತಿಸಿ ಒಳಬಂದಾಗ ತೋರಿದ ಹಾಗೆ ಗೌರವವನ್ನು ಸೂಚಿಸಿ ಅಂಗಡಿಯಿಂದ ಆಚೆ ಹೊರಟ. ಅವನ ಕಿವಿಯ ತುಂಬಾ ಸಂಗೀತ ತುಂಬಿತ್ತು. ಆ ಸಂಗೀತದ ತಾಳಗತಿಗೆ ಹೆಜ್ಜೆ ಹಾಕುತ್ತಾ ಲಘುವಾಗಿ ನಡೆಯಹತ್ತಿದ್ದ. ಅವನ ತೋಳುಗಳು ಮೇಲೆದ್ದು ಗಾಳಿಯಲ್ಲಿ ಹಗುರಾಗಿ ತೇಲುತ್ತಾ ನೃತ್ಯದ ಭಂಗಿಯಲ್ಲಿ ದೇಹ ತೋಯ್ದಾಡುತ್ತಿತ್ತು. ಆ ಗಳಿಗೆ ಅನಾಮಿಕ ನಾಗರಿಕನೊಬ್ಬನಿಗೆ ಟಿಮತಿ sketchy ಆಗಿ ಕಂಡ. ಸರಿ ಅವನು ಮಾಡಿದ್ದೇನು? 911ಗೆ ಕಾಲ್ ಮಾಡಿ ವಿಷಯ ತಿಳಿಸಿದ್ದು! ತೆರೆದ ಮುಖದ ಸ್ಕೀ ಮ್ಯಾಸ್ಕ್ ಹಾಕಿದವನೊಬ್ಬ ಸಂಶಯಾಸ್ಪದವಾಗಿ ಕಂಡನೆಂದು, ಆ ಅನಾಮಿಕ ಮಾಹಿತಿ ಕೊಟ್ಟ. 911 Dispatcher ಕೇಳಿದ ಪ್ರಶ್ನೆಗಳಿಗೆ, ಇಲ್ಲ ಅವನ ಹತ್ತಿರ ಆಯುಧ ಇದ್ದಂತಿರಲಿಲ್ಲವೆಂದೂ ಬೇರೆಯವರಿಗೆ ಅವನಿಂದ ಯಾವ ತೊಂದರೆಯೂ ಆಗುತ್ತಿಲ್ಲವೆಂದೂ ಪ್ರಾಮಾಣಿಕವಾಗಿ ಹೇಳಿದ'. ಒಂದರಗಳಿಗೆ ತಡೆದು ಹೇಳತೊಡಗಿದಳು.

'ಮುಂದೆ ಆದದ್ದು... ಇದು;

ಆಸುಪಾಸಿನ ಭೌಗೋಳಿಕ ವರ್ತುಲದ ಹತ್ತಿರದಲ್ಲೇ ಇದ್ದ ಮೂವರು ಪೊಲೀಸರು ಪರಿಸ್ಥಿತಿಯನ್ನು ಪರಿಶೀಲಿಸಬಂದರು. ಟಿಮತಿಯ ಕುತ್ತಿಗೆಯನ್ನು ಬಲಿಷ್ಟ ತೋಳುಗಳಿಂದ ಬಳಸಿ ಒತ್ತಿಹಿಡಿದು ಉಸಿರುಗಟ್ಟಿಸಿದರು. Carotid ಅಮುಕು ಅದು....ಆಮ್ಲಜನಕಸಹಿತ ರಕ್ತವನ್ನು ತಲೆಗೆ ತಲುಪಿಸುವ ಕುತ್ತಿಗೆಯ ನಾಳದ ಮೇಲೆ ಹೇರುವ ಒತ್ತಡ.... ಉಸಿರಾಡಲಾರದ ಟಿಮತಿ ಹಲವಾರು ಬಾರಿ ವಾಂತಿ ಮಾಡಿಕೊಳ್ಳತೊಡಗಿದ. ಪಾಪದ ಹುಡುಗ ಟಿಮತಿ 'sorry, ನಾನು ಬೇಕಂತ ಮಾಡ್ತಿಲ್ಲ, ನನಗೆ ಉಸಿರಾಡಲು ಆಗುತ್ತಿಲ್ಲ' ಎಂದು ಗೋಗರೆಯ ಹತ್ತಿದ. ಅಸಹಾಯಕ ಮಗ. ದೀರ್ಘವಾದ 15 ನಿಮಿಷ ಅವರ ದೌರ್ಜನ್ಯ ಮುಂದುವರೆದೇ ಇತ್ತು. 'put him out' ಎಂದನೊಬ್ಬ police officer. ಅಲ್ಲಿಯವರೆಗೆ ಎಸಗಿದ ಕ್ರೌರ್ಯ ಸಾಲದೆಂಬಂತೆ, ಬಸವಳಿದವನ ಮೇಲೆ ನಾಯಿ ಬಿಡುವುದಾಗಿ ಬೆದರಿಸಿ ಅವನ ಕೈಗಳನ್ನು ಬೆನ್ನಿಗೊತ್ತಿಸಿ ಕೋಳ ಹಾಕಿ ನೆಲದಲ್ಲಿ ಅಮುಕಿಹಿಡಿದರು. ಉಸಿರಾಟಕ್ಕೆ ತಕ್ಕಷ್ಟು ಗಾಳಿ ದೊರಕದೆ ಟಿಮತಿ ಪ್ರಜ್ಞೆ ಕಳೆದುಕೊಂಡಿದ್ದ. ಕಡೆಗೆ ಪೊಲೀಸರು ವೈದ್ಯಕೀಯ ಸಹಾಯಕ್ಕೆ ಪ್ಯಾರಮೆಡಿಕ್ಸ್ ತಂಡಕ್ಕೆ ಕರೆ ಮಾಡಿದರು.

ಕರೆ ತಲುಪಿದ ಸ್ವಲ್ಪದರಲ್ಲೇ ಬಂದ ಪ್ಯಾರಮೆಡಿಕ್ಸ್ ತಂಡದವರು ಐದಡಿ ಆರಂಗುಲ ಉದ್ದಕ್ಕೂ, ಕೇವಲ 140 ಪೌಂಡ್‌ಗಳನ್ನಷ್ಟೇ ತೂಗುವ ಟಿಮತಿಯ ತೆಳು ತೋಳಿಗೆ ಅಗತ್ಯಕ್ಕಿಂತಲೂ ಹೆಚ್ಚಾಗಿ, ಯಥೇಚ್ಛವಾಗಿ ketamine ಚುಚ್ಚಿದರು. ಅವನ ಮಾಂಸಖಂಡ ಅಲ್ಲೋ ಗಿಡದ ಲೋಳೆಯಂತಾಗಿ, ದೇಹ ಚಲನೆಯ ಶಕ್ತಿಯ ಬಿಗಿ ಕಳೆದುಕೊಂಡು ನಿಶ್ಚಲಗೊಂಡಿತು. ಜರ್ಜರಿತವಾದ ಟಿಮತಿಯ ದೇಹ 4 ದಿನ ಕೋಮಾದಲ್ಲಿದ್ದು ನಂತರದ ಒಂದು ದಿನ, ಅವನ ಜೀವಚೈತನ್ಯ ಶರೀರದಿಂದ ಬಿಡುಗಡೆ ಪಡೆಯಿತು.

ಅನುಕಂಪ, ಕರುಣೆ, ಪ್ರೀತಿ, ಮತ್ತು ಸಹನೆಯೇ ಮೈವೆತ್ತಿದಂತಿದ್ದ ಟಿಮತಿಗೆ ಶಾಂತವಾದ ಸಾವು ಪಾರಿತೋಷೋಪಾದಿಯಂತೆ ಅವನನ್ನು ಅರಸಿ ಬರಬೇಕಿತ್ತು. ಅದಕ್ಕೆ ಅವನು ಅರ್ಹನಾಗಿದ್ದ ಕೂಡ. ಅವನು ಸಂಪಾದಿಸಿದ್ದ ಸಾವು ಅವನಿಗೆ ದಕ್ಕಲಿಲ್ಲ. ಟಿಮತಿ ತನ್ನೊಳಗೆ ತನ್ನ ಸತ್ ಆನಂದವನ್ನೂ, ತೃಪ್ತಿಯನ್ನೂ ಕಂಡುಕೊಂಡವ. ಅಂತರ್ಮುಖಿ, ಹೆಚ್ಚುಮಾತಿಲ್ಲ. ಹತ್ತಿರ ಸುಳಿದವರ ಬದುಕಿನಲ್ಲಿ ಧನಾತ್ಮಕ ಮುದ್ರೆ ಒತ್ತಿದವನು. ಅವನ ಸಹೋದ್ಯೋಗಿ ಜಿಮ್ ಹೇಳ್ತಿದ್ದ: 'ಕೆಲಸ ಮಾಡುವ ಕೋಣೆಯಲ್ಲಿ ನೊಣವೊಂದು ಸಿಕ್ಕಿ ಹಾಕಿಕೊಂಡಿದ್ದರೆ, ಮಗುಚಿದ ಒಂದು ಬೋಗುಣಿಯಲ್ಲಿ ಅದನ್ನು ಹಿಡಿದು ಅದನ್ನು ಹೊರಬಿಟ್ಟು ಬರುತ್ತಿದ್ದ. ಒಳ ಬಂದವನೇ, 'ಪ್ರತೀ ಜೀವವೂ ಅಮೂಲ್ಯ ಮತ್ತು ಮುಖ್ಯ' ಎನ್ನುತ್ತಿದ್ದ. ಜೀವದ ಅಮೂಲ್ಯ ಬೆಲೆ ಅರಿತವನ ನಡೆ ನುಡಿ ಅದು. ಭೂಮಿ ಮೇಲಿದ್ದದ್ದೆಲ್ಲಾ, ಅವನ ಬದುಕಿನ ಪ್ರೇರಣೆಗೆ ಕಾರಣ. ಆ ಅವನ ಪ್ರೇರಣೆ ನನಗೆ ಪ್ರೇರಣೆಯಾಗಿತ್ತು.'

"ಪ್ರತಿ ದಿನ ತನ್ನನ್ನು ತಾನು ಉತ್ತಮನನ್ನಾಗಿ ಮಾಡಿಕೊಳ್ಳಲು ಅಣಿಯಾಗುತ್ತಿದ್ದ. ಅದಕ್ಕಾಗಿ ಎಷ್ಟು ಕಷ್ಟಪಡಲೂ ಸಿದ್ಧನಿದ್ದ. ಆಕಸ್ಮಿಕವಾಗಿ ಏನಾದ್ರೂ ಅವನಿರುವ ಜಾಗದಲ್ಲೇನಾದರೂ ಇಲಿಗಳ ಕಾಟ ಎಂದಿಟ್ಟುಕೊಂಡಿದ್ದಾದರೆ, ಇಲಿ ಹಿಡಿಯಲು ಬೋನು ಕೂಡ ಇಡುವವನಲ್ಲ ಅವನು" – ಎಂದಿದ್ದ ಅವನ ಜೊತೆ ಮೂರು ವರ್ಷ ಕೆಲಸ ಮಾಡಿದ ಜೆರ್ರಿ.

ಆ ದಿನ ಪೋಲೀಸರಿಗೆ ಟಿಮತಿಯನ್ನು ನಿಲ್ಲಿಸಲಾಗಲಿ, ನಿರ್ದಯವಾಗಿ ನಡೆಸಿಕೊಳ್ಳಲಾಗಲಿ ಕಾರಣವಿರಲಿಲ್ಲ. ಅವನ ಹತ್ತಿರ ಯಾವುದೇ ಆಯುಧವಿರಲಿಲ್ಲ, ಅವನು ಯಾರಿಗೂ ತೊಂದರೆ ಕೊಟ್ಟಿರಲಿಲ್ಲ, ಅಪಾಯಕಾರಿಯಾಗಿರಲಿಲ್ಲ. ಯಾರ ಮೇಲೂ ಆಕ್ರಮಣವನ್ನಂತೂ ಮಾಡಿರಲಿಲ್ಲ. ಅವರಿಗಿದ್ದ ಒಂದೇ ಒಂದು ಕಾರಣ– ಸಂಶಯ ಮತ್ತು ಟಿಮತಿಯ ಕಪ್ಪು ಮೈಬಣ್ಣ... ಕರಿಯನವ.

ಎಷ್ಟೋ ಕರಿಯರ (ಟಿಮತಿ ಬೆಳೆದ) ನೆರೆಹೊರೆಗಳಲ್ಲಿ 'ಸೂಕ್ಷ್ಮ ನಡವಳಿಕೆ' ಗಂಡು ಹುಡುಗರ ಗುಣ ಅಲ್ಲ. ಸುತ್ತಮುತ್ತೆಲ್ಲ ಆವರಿಸಿರುವ ಅವ್ಯವಸ್ಥಿತ, ಸಾಮಾಜಿಕ ನ್ಯಾಯ ಸೋತ, ಕುಸಿದ ವ್ಯವಸ್ಥೆಯ ಪರಿಣಾಮ ಅವರ ಬಾಲ್ಯದ ಬೆಳವಣಿಗೆಯನ್ನು ದಟ್ಟವಾಗಿ ಆವರಿಸಿರುತ್ತೆ. ಈ ವಲಯದಲ್ಲೇ ಬಂಧಿತರಾದ ಗೋಲದಲ್ಲಿ ಒಬ್ಬಿಬ್ಬ ಹುಡುಗರೇನಾದರೂ ಸೂಕ್ಷ್ಮ ಸಂವೇದನೆ ತೋರಿದರೋ ಅಂತಹವರನ್ನು ಬೇರೆ ತರಹದ

ಹುಡುಗರು ಹುರಿದು ಮುಕ್ಕಿಬಿಡುತ್ತಾರೆ, ಲೇವಡಿ ಮಾಡ್ತಾರೆ. ಹುಡುಗರು ಹೊಡೆಯಲು, ಬಡಿಯಲು, ಧ್ವಂಸ ಮಾಡಲಷ್ಟೇ ಲಾಯಕ್ಕು; ಯಾವುದೇ ಕಾರಣಕ್ಕೂ ನಯವಾದ ವರ್ತನೆ ನಡಾವಳಿಯನ್ನು ತೋರಿಸಿಕೊಳ್ಳಲೇಬಾರದು. 'ಅಳು' ಎನ್ನುವ ಪದವಂತೂ ಪ್ರಕಟವಾಗುವುದಿರಲಿ ಅವರ ಎದೆಯ ಬಳಿಯೂ ಸುಳಿಯಬಾರದು ಅನ್ನುವ ಅಲಿಖಿತ ಸಹಜ ಸ್ಥಿತಿ ಅವರದ್ದು. ಗಡುಸಾಗಿರಬೇಕು ಎಂಬ ಕಾಲ್ಪನಿಕ ಗಂಡಸುತನದ ವ್ಯಾಖ್ಯೆಯೋ, ಮನೆಯ ಹೊರಗೆ ಎದುರಿಸಬೇಕಾದ ಗೂಳಿತನವೋ, ಕರಿ ಹುಡುಗರ ಸೂಕ್ಷ್ಮತೆ ಕ್ಷೀಣಿಸುತ್ತಾ ಹೋಗುವ ಅಪಾಯವೇ ಹೆಚ್ಚು. ಆ ನೆರೆಹೊರೆಯಲ್ಲಿ ಬೆಳೆಯುವ ಹುಡುಗರ ಸೂಕ್ಷ್ಮಸಂವೇದನೆಯ ಹೃದಯ ಸ್ರೋತು ಮೃತವಾಗಿರುವ ನಿದರ್ಶನಗಳು ಹಲವಾರು. ಆದರೆ ಟಿಮತಿ ಅದಕ್ಕೊಂದು ಅಪವಾದ. ಇಂತಹ ಪರಿಸರದ ಮಧ್ಯೆ ಟಿಮತಿ ತಾನು ತಾನಾಗೇ ಉಳಿದು, ತನ್ನ ಹುಟ್ಟಿನೊಟ್ಟಿಗೆ ಸಹಜವಾಗಿ ಅಂಟಿ ಬಂದಿದ್ದ ಮೃದುತ್ವ ಉಳಿಸಿಕೊಂಡು, ಮರುಗುವ ಮನಸ್ಸನ್ನು ಕಾಪಾಡಿಕೊಂಡು ಬಂದಿದ್ದ. ಅಗಾಧವಾದ ಕತ್ತಲೆಯ ನಡುವೆ ಬೆಳಕಾಗಿಯೇ ಬೆಳೆದು ಬೆಳಕಾಗಿಯೇ ಉಳಿದಿದ್ದ.

ಐದು ಅಡಿ ಆರು ಅಂಗುಲದ 140 ಪೌಂಡು ತೂಗುವ ಟಿಮತಿಗೆ ಸದೃಢಕಾಯದ ಮೂರು ಮಂದಿ ಪೊಲೀಸರಿಗೆ ಎಣೆಯೇ? 'ನಮ್ಮನ್ನು ಪ್ರತಿಭಟಿಸಿ, ಸೆಣಸಿ ಕಡೆಗೆ ನಮ್ಮ ಗನ್ನನ್ನು ಎಗರಿಸಲು ನೋಡಿದ. ಈ ಸೆಣಸಾಟದಲ್ಲಿ ನಾವು ದೇಹದ ಮೇಲೆ ಧರಿಸಿದ್ದ body camಗಳು ಬಿದ್ದುಹೋದವು' ಎಂದೆಲ್ಲಾ ಬರೆದಿಟ್ಟರು, ಆ ದಿನ ಟಿಮತಿಗೆ ಎದುರಾಬದುರು ಬಂದಿದ್ದ ಪೊಲೀಸರು. ನಂಬಬಹುದಾ ಇದನ್ನು? video ಇಲ್ಲದಿದ್ದರೂ, ಅದೇ ಕ್ಯಾಮರಾದಲ್ಲಿ ಧ್ವನಿಮುದ್ರಿಕೆ ಹೇಳುವ ಕಥೆಯೇ ಬೇರೆ. ಟಿಮತಿಯ ಧ್ವನಿ: – 'ಉಸಿರಾಡಲು ಆಗ್ತಿಲ್ಲ..... ನನ್ನ I. D. ಇಲ್ಲೇ ಇದೆ. ನನ್ನ ಹೆಸರು ಟಿಮತಿ ಟೇಟ್. ಅಗೋ ಅಲ್ಲಿ ಕಾಣುವ ಕಟ್ಟಡದಲ್ಲಿ ನನ್ನ ಅಪಾರ್ಟ್ಮೆಂಟ್ ಇದೆ. ನಾನು ಟೀ ಕೊಂಡು ಮನೆಗೆ ಹೋಗುತ್ತಿದ್ದೆ. ನಾನು ಅಂತರ್ಮುಖಿ. ನಾನು ಕಾಣಲು ಮತ್ತು ನೋಡಲು ಬೇರೆಯವರಿಗಿಂತ ಭಿನ್ನ ಅಷ್ಟೇ. ಸಾರಿ.... ನನ್ನ ಹತ್ತಿರ ಗನ್ನಿಲ್ಲ. ನಾನೆಂದೂ ಹೊಡೆದಾಟ ಮಾಡಿದವನಲ್ಲ. ನೀವ್ಯಾಕೆ ನನ್ನ ಮೇಲೆ ಆಕ್ರಮಣ ಮಾಡ್ತಿದ್ದೀರಿ? ನಾನು ಒಂದು ನೊಣವನ್ನು ಕೂಡ ಕೊಲ್ಲೊಲ್ಲ. ನಾನು ಮಾಂಸ ತಿನ್ನೋಲ್ಲಾ. ಹಾಗಂತ ನಾನೇನು ತಿನ್ನುವವರನ್ನು ಜಡ್ಜ್ ಮಾಡುವವನಲ್ಲ... (ಅಳುವ ಟಿಮತಿ. ಉಸಿರಿಗಾಗಿ ಕೊಸರಾಡುವ ನಿಂತು ನಿಂತು ಬರುವ ಅವನ ಕ್ಷೀಣ ದಯನೀಯ ಧ್ವನಿ) ದಯವಿಟ್ಟು ನನ್ನ ಕ್ಷಮಿಸಿಬಿಡಿ. ನಾನು ನನ್ನನ್ನು ಉತ್ತಮಪಡಿಸಿಕೊಳ್ಳಲು ಪ್ರಯತ್ನಿಸುತ್ತಿದ್ದೇನೆ. ಅದಕ್ಕಾಗಿ ಏನಾದ್ರೂ ಮಾಡ್ತೀನಿ. ನೀವೆಲ್ಲಾ ಅಸಾಧಾರಣರು. ನೀವೆಲ್ಲಾ ಒಳ್ಳೆಯವರು. ನನ್ನ ಕ್ಷಮಿಸಿಬಿಡಿ. ನೀವು ಬಲಾಢ್ಯರು. ಓಹ್ ನೋವು.... team work makes dream work (ವಯ್ಯಾಕ್... ವಾಕರಿಗೆ... ವಯ್ಯಾಕ್...) ಸಾರಿ ಬೇಕಂತ ವಾಂತಿ ಮಾಡಲಿಲ್ಲ. ಸಾರಿ. ಸರಿಯಾಗಿ ಉಸಿರಾಡಲು ಆಗುತ್ತಿಲ್ಲ...' ಇವೇ ಅವನ ಕಡೆಯ ವಾಕ್ಯಗಳು...

ಅವಳ ಮಾತು ನಿಂತಿತ್ತು. ಮುಂದುವರೆಸಲು ಏನೂ ಉಳಿದಿರಲಿಲ್ಲ. ಅವಳ ಬಾಯಿ ಒಣಗುತ್ತಿತ್ತು. ಒಣಗುತ್ತಿದ್ದ ತುಟಿಗಳನ್ನು ನಾಲಿಗೆಯಿಂದ ಸವರುವ ಪ್ರಯತ್ನ ಮಾಡುತ್ತಿದ್ದಳು. ಟಿಮತಿಯ ಯಾತನೆಯೆಲ್ಲಾ ಅವಳ ಕಣ್ಣಲ್ಲಿ, ಅದುರುತ್ತಿದ್ದ ತುಟಿಯಲ್ಲಿ, ಬಿರಿದ ಮೂಗಿನ ಹೊಳ್ಳೆಯ ತುದಿಯಲ್ಲಿ, ಕಂಪಿಸುತ್ತಿದ್ದ ಮೈಯಲ್ಲಿ ಹೊರಸೂಸುತ್ತಿತ್ತು. ನೀರಿನ ಸಣ್ಣ ಶೀಷೆಯನ್ನು ಮುಂದೊಡ್ಡಿದೆ. ಬಾಗಿ ಕೈಚಾಚಿ ನೀರು ತೆಗೆದುಕೊಂಡು, ಕೆಲ ನಿಮಿಷ ಅದನ್ನೇ ದೃಷ್ಟಿಸುತ್ತಾ ಕುಳಿತಿದ್ದು ನಂತರ ನೀರು ಕುಡಿದು, ಟಿಮತಿಯ ಮುಖ ಚಿತ್ರವಿದ್ದ poster ಕೆಳಗಿಟ್ಟು ಅವಳು ಮೇಲೆದ್ದಳು. ನಿಧಾನವಾಗಿ ನಡೆದೆದ್ದು ಹೊರಟ ಅವಳನ್ನು, 'ನೀನು ಅವನ ಅಮ್ಮನಾ?' ಅಂದೆ, ಹಾಗೆನ್ನಿಸಿತು. ಹಾಗೆ ಕೇಳಿದೆನಾ? ಕೇಳಿರಬೇಕು. ದೂರ ಇದ್ದಳು. ಏನು ಹೇಳಿದಳೋ? ಕೇಳಲಿಲ್ಲ. ಗೋಣು ಹಾಕಿದ್ಲಾ? ಕಾಣಿಸಲಿಲ್ಲ. ನೀರು ತುಂಬಿದ ಕಣ್ಣು ಮಂಜಾಗಿದ್ದವು.

ಅವಳು ಬಿಟ್ಟುಹೋದ poster ಎತ್ತಿಕೊಂಡೆ, ಅವಳು ಕುಳಿತ ಜಾಗದಲ್ಲಿ ಸ್ವಲ್ಪ ಹೊತ್ತು ಕುಳಿತೆ. 'Are you ok?' ಎಂಬ ಧ್ವನಿ ಬಂದತ್ತ ತಿರುಗಿದೆ. ಆರ್ದ್ರ ನೋಟ ಬೀರುತ್ತಾ ನಿಂತ ತರುಣ ಜೋಡಿ. ನಾನು ಗಟ್ಟಿಯಾಗಿ ಒತ್ತಿ ಹಿಡಿದಿದ್ದ poster ಕಡೆ ಬೊಟ್ಟು ಮಾಡುತ್ತಾ ಕೇಳಿದಳಾ ಹುಡುಗಿ. 'ನಿನ್ನ ಮಗನಾ?' ಟಿಮತಿಯ ಕಥೆಯನ್ನು ನನಗೆ ಹೇಳಿದವಳ ಯಾತನೆಯನ್ನೆಲ್ಲಾ, ನೀರು ತುಂಬಿದ ಕಣ್ಣಲ್ಲಿ, ಅದುರುತ್ತಿದ್ದ ತುಟಿಯಲ್ಲಿ, ಬಿರಿದ ಮೂಗಿನ ಹೊಳ್ಳೆಯ ತುದಿಯಲ್ಲಿ, ಕಂಪಿಸುತ್ತಿದ್ದ ಮೈಯಲ್ಲಿ ತುಂಬಿಕೊಂಡು ಗೋಣೆತ್ತಿ 'ಹೂಂ' ಅಂದೆ. ಆ ಗಳಿಗೆ ನನಗೆ ಹಾಗನ್ನಿಸಿದ್ದು ಹೌದು. ಆ 'ಹೂಂ'ಕಾರದಲ್ಲಿ ಟಿಮತಿಯ ಕಥೆ ಅವಳ ಒಡಲಿಗೆ ಸಂವಹಿಸಿರಬಹುದು. ತನ್ನ ಸೊಂಟ ಪಟ್ಟಿಯ ಪುಟ್ಟ ಚೀಲದಿಂದ ಕ್ಲೀನೆಕ್ಸ್ ಪೊಟ್ಟಣ ಹೊರತೆಗೆದು, ಟಿಷ್ಯು ಒಂದನ್ನು ನನ್ನ ಮುಂದೆ ಹಿಡಿದಳು. ಬಿಳಿದಾದ ಚೌಕಾಕಾರದ ಆ ಮೃದುವಾದ ಕಾಗದದ ಕರವಸ್ತ್ರದಿಂದ ಕಣ್ಣನೀರು ಒರೆಸಿಕೊಂಡು ತಲೆ ಕೆಳಗೆ ಮಾಡಿ ಒಂದರೆಗಳಿಗೆ ಸುಧಾರಿಸಿಕೊಂಡು, ನಿಧಾನವಾಗಿ ಪೋಸ್ಟರನ್ನು ಮಗುವನ್ನು ಇಳಿಸುವಂತೆ ಕೆಳಗಿರಿಸಿ ರೈಲ್ವೆಸ್ಟೇಷನ್ ಕಡೆಗೆ ಎದ್ದು ಹೊರಟೆ.

ಸ್ಮಿಥ್‌ಸೋನಿಯನ್ ರೈಲ್ವೆಸ್ಟೇಷನ್ ನೆಲಮಾಳಿಗೆಯ ಮೆಟ್ಟಿಲನ್ನು ತುಳಿಯುವ ಮುನ್ನ ತಿರುಗಿ ನೋಡಿದೆ. ಟಿಮತಿ ಟೇಟ್‌ನ ಪೋಸ್ಟರನ್ನು ಗಟ್ಟಿಯಾಗಿ ಒತ್ತಿ ಹಿಡಿದ ಹುಡುಗಿ ನಾನು ಕುಳಿತ ಜಾಗದಲ್ಲಿ ತನ್ನ ಸ್ನೇಹಿತನೊಡನೆ ಕುಳಿತಿದ್ದಳು. ಅವರ ಸುತ್ತ ಜನರ ಗುಂಪು ಸೇರತೊಡಗಿತ್ತು.



# 'ಋ ಋಲಾನ್ಣೆ'

**ಶಾಂತಲಾ ಭಂಡಿ**
Tracy, California

*

'ಆ್ಯಮ್ ಐ ರೈಟ್?' ಅಂದ ಜೆರಾಲ್ಡ್. ಕಣ್ಣು ಲ್ಯಾಪ್‌ಟಾಪ್‌ನಿಂದ ಜೆರಾಲ್ಡ್‌ನತ್ತ ಹೊರಳಿತು. ತಕ್ಷಣಕ್ಕೆ ಒಂದು ಈಮೈಲ್ ಕಳಿಸಬೇಕಿತ್ತು, ಅರ್ಧ ಬರೆದಿಟ್ಟಿದ್ದ ಈಮೈಲ್ ಪೂರ್ತಿಗೊಳಿಸುವತ್ತ ನನ್ನ ಲಕ್ಷ್ಯ ಹೋಗಿತ್ತು. ಟೀಮ್ ಮೀಟಿಂಗಿನಲ್ಲಿ ಜೆರಾಲ್ಡ್ ಇದ್ದಾನೆಂದರೆ ಅವನು ಮಾತನಾಡಲಿಕ್ಕೆ ಅಂತಲೇ ಮೀಟಿಂಗ್ ಸೆಟ್ ಆಗಿರುತ್ತದೆ ಅಥವಾ ಎಲ್ಲರಿಗೂ ಅವನ ಮಾತು ಕೇಳಬೇಕೆನಿಸಿದಾಗಲೂ ಮೀಟಿಂಗ್ ಸೆಟ್ ಆಗುತ್ತದೆ. ಜೆರಾಲ್ಡ್‌ನಿಗೆ ಮೂವತ್ತೆರಡೋ ಅಥವಾ ಮೂವತ್ಮೂರೋ ವರ್ಷಗಳಿರಬಹುದು. ಜೆರಾಲ್ಡ್ ಡೈರೆಕ್ಟರ್-ಅಫ್-ಇಂಜಿನಿಯರಿಂಗ್ ಮಾತ್ರವಾಗಿರದೇ ಒಬ್ಬ ಮೋಟಿವೇಷನಲ್ ಸ್ಪೀಕರ್ ಕೂಡ. ಈಮೈಲ್ ಕಡೆ ಲಕ್ಷ್ಯವಿತ್ತಾದ್ದರಿಂದ ಅವನು ಏನು ಹೇಳಿದನೆಂದು ತಿಳಿಯದೆ ಮಿಲಾಳತ್ತ ತಿರುಗಿದೆ. ನಾನು ಅವಳತ್ತ ತಿರುಗಿದ್ದು ಗೊತ್ತೇ ಆಗಿಲ್ಲವೆಂಬಂತೆ ಮಿಲಾ ಜೆರಾಲ್ಡ್‌ನನ್ನೇ ನೋಡುತ್ತಿದ್ದಳು. ನಾನು ಸ್ಮಾರ್ಟ್‌ಬೋರ್ಡ್ ಕಡೆ ಕಣ್ಣು ಹೊರಳಿಸಿದೆ. ಕಣ್ಣು ಮಿಟುಕಿಸದೆ ಸ್ಮಾರ್ಟ್‌ಬೋರ್ಡ್ ನೋಡುತ್ತಿದ್ದ ನನ್ನನ್ನೊಮ್ಮೆ ದಿಟ್ಟಿಸಿ ನೋಡಿದ ಜೆರಾಲ್ಡ್ ಮರಳಿ ಸ್ಮಾರ್ಟ್‌ಬೋರ್ಡ್ ನೋಡುತ್ತ 'You can lead a horse to water, but you can't make him drink' ಅಂದ. ಅವ್ಯಾನ್ ಕಡೆ ನೋಡಿದೆ. ಜೆರಾಲ್ಡ್‌ನ ಮಾತಿನೊಳಗೆ ಅವ್ಯಾನ್ ಕಳೆದುಹೋದವನಂತೆ ಕುಳಿತಿದ್ದ.

ಮೀಟಿಂಗ್ ಮುಗಿಸಿ ಬರುವಾಗ ಮಿಲಾ, 'ಜೆರಾಲ್ಡ್ ನಿನ್ನನ್ನು ನೋಡಿದಾಗಲೆಲ್ಲ ಸ್ವಂತಿಕೆ ಕಳೆದುಕೊಂಡು ತನ್ನ ಸ್ಥಾನದಿಂದ ಒಂದಿಂಚು ಕೆಳಗೆ ಕಾಣಿಸುತ್ತಾನೆ' ಕೆಲವರಿಗೆ

ದ್ವೇಷಿಸುವುದಕ್ಕೆ ಕಾರಣ ಬೇಕಿರುವುದಿಲ್ಲ. ಅವನಿಗೆ ಬೇಕಾದ್ದು ಕೆಲಸ, ನಿನ್ನಂಥವಳು ಟೀಮಿನಲ್ಲಿರುವುದು ಲಾಭವೇ, ವಿನಾಕಾರಣ ಉರಿದುಕೊಳ್ತಾನೆ' ಎಂದಳು.

'ನೋವಾದಾಗ ನೊಂದುಕೊಳ್ಳಬೇಕು, ಅದನ್ನು ಕಲಿ ಮೊದಲು', ಈ ಮಾತನ್ನು ಮಿಲಾ ನನಗೆ ಆಗಾಗ ಹೇಳುತ್ತಿರುತ್ತಾಳೆ. ಜೆರಾಲ್ಡ್‌ನ ಮಾತುಗಳಿಂದ ನನಗೆ ನೋವಾಗುವುದಿಲ್ಲ. ಸುಳ್ಳು ಕಾರಣ ಸೃಷ್ಟಿಸಿ ಜೆರಾಲ್ಡ್ ನನ್ನನ್ನು ಯಾವಾಗಲೋ ಕೆಲಸದಿಂದ ಕಿತ್ತುಹಾಕಬಹುದಿತ್ತು, ಜೆರಾಲ್ಡ್ ಅಷ್ಟೊಂದು ಕೆಟ್ಟ ಮನುಷ್ಯನಲ್ಲ ಎನ್ನುವುದೇ ನನಗೆ ಜೆರಾಲ್ಡ್‌ನನ್ನು ಸಹಿಸಿಕೊಳ್ಳುವುದಕ್ಕೆ ಶಕ್ತಿ.

ಮೀಟಿಂಗ್ ರೂಮಿನಿಂದ ಹೊರಗೆ ಬಂದ ಅವ್ಯಾನ್ 'ಸಂಜೆ ಆರು ಗಂಟೆಗೆ 'ಳು ಬುಲಾನ್ಜೆ'ಯಲ್ಲಿ ನಿನಗೊಂದು ಚಾಕ್ಲೆಟ್ ಕ್ರಸಾಂಟ್, ನನಗೊಂದು ಬ್ರೇಕ್‌ಫ಼ಾಸ್ಟ್ ಎಸ್ಪ್ರೆಸೊ ಆರ್ಡರ್ ಮಾಡಿರು. ಆರು ಹತ್ತಕ್ಕೆ ನಾನಲ್ಲಿಗೆ ಬರುತ್ತೇನೆ' ಅಂತ ಹೇಳಿ ತನ್ನ ಕ್ಯಾಬಿನ್‌ಗೆ ಹೋದ.

'ಳು ಬುಲಾನ್ಜೆ', ಎಷ್ಟೆಲ್ಲ ನೆನಪುಗಳನ್ನು ಕಟ್ಟಿಕೊಟ್ಟ ರೆಸ್ಟರಾಂಟ್ ಅದು. ನನ್ನ ಮತ್ತು ಅವ್ಯಾನ್‌ನ ಹೆಚ್ಚಿನ ಸಂಜೆಗಳು ಅಲ್ಲಿಯೇ ಕಳೆಯುತ್ತವೆ. ಎಷ್ಟೇ ಕೆಲಸವಿದ್ದರೂ ಐದು ಗಂಟೆಗೆ ಲ್ಯಾಪ್‌ಟಾಪ್ ಮುಚ್ಚಬೇಕೆಂದು ಅವ್ಯಾನ್ ನನಗೆ ಕಲಿಸಿಕೊಟ್ಟಿದ್ದಾನೆ. ಸ್ವಲ್ಪ ಸಮಯದಲ್ಲಿ ಹೆಚ್ಚು ಕೆಲಸವನ್ನು ಹೇಗೆ ಮಾಡಬೇಕೆನ್ನುವುದನ್ನು ನಾನಿನ್ನೂ ಅವನಿಂದ ಕಲಿಯಬೇಕಿದೆ. ನಾನಾಗಲೀ ಅವ್ಯಾನ್ ಆಗಲೀ ರೆಸ್ಟರಾಂಟ್ ಒಳಹೊಕ್ಕಿದ್ದು ಕಾಣಿಸಿದರೆ ಕೆಲವೊಮ್ಮೆ ಕೌಂಟರಿನಲ್ಲಿ ಒಂದು ಬ್ರೇಕ್‌ಫಾಸ್ಟ್ ಎಸ್ಪ್ರೆಸ್ಸೊ ಮತ್ತು ಒಂದು ಚಾಕ್ಲೆಟ್ ಕ್ರಸಾಂಟ್ ರೆಡಿಯಾಗುತ್ತದೆ. 'ಳು ಬುಲಾನ್ಜೆ' ನನ್ನ ಇತ್ತೀಚಿನ ಫೇವ್‌ರಿಟ್ ಜಾಗ. 'ಳು ಬುಲಾನ್ಜೆ' ಸಂಜೆಯ ಹೊತ್ತು ಪ್ರಶಾಂತವಾಗಿರುತ್ತದೆ. ಸಂಜೆ ಆಫೀಸಿನಿಂದ ಬಂದು, ಒಂದು ಬ್ರೇಕ್‌ಫಾಸ್ಟ್ ಕಾಫಿ ಮತ್ತು ಒಂದು ಚಾಕ್ಲೆಟ್ ಕ್ರಸಾಂಟ್ ಆರ್ಡರ್ ಮಾಡುತ್ತೇನೆ. ಅವು ರೆಡಿಯಾಗುವಷ್ಟರಲ್ಲಿ ಎರಡು ಪುಸ್ತಕಗಳನ್ನು ಕೈಯಲ್ಲಿ ಹಿಡಿದು ಅವ್ಯಾನ್ ಬರುತ್ತಾನೆ. ಒಂದು ಖಾಯಂ ಸೋಫಾಚೇರ್ ಅಲ್ಲಿ ಅವ್ಯಾನ್ ಕುಳಿತುಕೊಳ್ಳುತ್ತಾನೆ, ಅದರ ಪಕ್ಕದ ಬೀನ್‌ಬ್ಯಾಗಲ್ಲಿ ಕುಳಿತು ನಾನು ಕ್ರಸಾಂಟ್ ತಿನ್ನುತ್ತೇನೆ. ಅವನು ಪುಸ್ತಕ ಓದಲು ಶುರುಮಾಡುತ್ತಾನೆ, ಮಧ್ಯೆ ಮಧ್ಯೆ ನೆನಪಾದಾಗಲೊಮ್ಮೆ ಕಾಫಿ ಹೀರುತ್ತಾನೆ. ಕ್ರಸಾಂಟ್ ತಿಂದಾದ ಮೇಲೆ ನಾನು ಪುಸ್ತಕವನ್ನೆತ್ತಿಕೊಳ್ಳುತ್ತೇನೆ. ಕ್ರಸಾಂಟ್ ತಿನ್ನುವಾಗ ಬಟ್ಟೆಯ ಮೇಲೆ ಚೂರುಗಳನ್ನು ಬೀಳಿಸಿಕೊಂಡರೆ ತಲೆತಗ್ಗಿಸಿ ಪುಸ್ತಕ ಓದುತ್ತಲೇ ಅವ್ಯಾನ್ 'ಬೀಳಿಸಿಕೊಂಡೆ ನೋಡು' ಅಂತ ಹೇಳುತ್ತಾನೆ. ನಾನು ಮತ್ತು ಅವ್ಯಾನ್ ಒಟ್ಟಿಗೆ ಇದ್ದಾಗಲೂ ಮಾತನಾಡಿದ್ದು ತುಂಬ ಕಡಿಮೆ. ಅವ್ಯಾನ್ ನನ್ನ ಹತ್ತಿರ ಮಾತನಾಡಲಿ ಅನ್ನಿಸಿದ ದಿನ ನಾನು ಕ್ರಸಾಂಟ್ ಪುಡಿಯಾಗಿ ಮೈಮೇಲೆ ಉದುರುವಂತೆ ತಿನ್ನುತ್ತೇನೆ. ಆವತ್ತು ಅವ್ಯಾನ್ ಏನೂ ಹೇಳುವುದಿಲ್ಲ. ಒಂದೂವರೆ ಗಂಟೆಗಿಂತ ಹೆಚ್ಚು ಹೊತ್ತು ನಾವು ಅಲ್ಲಿ ಕುಳಿತುಕೊಳ್ಳುವುದಿಲ್ಲ. ಅಷ್ಟರೊಳಗೆ ನಾನು ಹೆಚ್ಚೆಂದರೆ ಮೂವತ್ತು ಪುಟಗಳಷ್ಟು ಓದಿರುತ್ತೇನೆ. ಹೊರಡುವಾಗ ಪುಸ್ತಕ ಮರಳಿ ಅವ್ಯಾನ್‌ನ ಕೈ ಸೇರುತ್ತದೆ. ನನಗೆ ಆ ಪುಸ್ತಕ ಓದಿ

ಮುಗಿಯುವತನಕ ಅವ್ಯಾನ್ ಅದೇ ಪುಸ್ತಕವನ್ನು ಮರಳಿ ಮರುದಿನ ತರುತ್ತಾನೆ. ಒಂದು ಪುಸ್ತಕ ಓದಿ ಮುಗಿದ ನಂತರ ಅವ್ಯಾನ್ ಯಾವ ಪುಸ್ತಕ ತಂದುಕೊಡುತ್ತಾನೋ ಅದನ್ನೇ ನಾನು ಓದುತ್ತೇನೆ, ನನಗಿಷ್ಟವಾಗುವ ಪುಸ್ತಕಗಳನ್ನೇ ಅವ್ಯಾನ್ ತಂದುಕೊಡುವುದೂ ಇದಕ್ಕೆ ಕಾರಣವಾಗಿರಬಹುದು. ಇದು ಯಾವತ್ತೂ ಮಾತುಕತೆಯಾಗಿರದ ತಾನಾಗಿ ಅಭ್ಯಾಸವಾದ ಅಲಿಖಿತ ನಿಯಮ. ಯಾವತ್ತಾದರೂ ಅಪರೂಪಕ್ಕೊಮ್ಮೆ ನಮ್ಮ ಖಾಯಂ ಸೀಟ್‌ಗಳಲ್ಲಿ ಯಾರಾದರೂ ಕುಳಿತಿರುತ್ತಾರೆ, ಅಥವಾ 'ಳು ಬುಲಾನ್ಜೆ'ಯಲ್ಲಿ ಜನ ಜಾಸ್ತಿ ಇದ್ದಾಗ, ಆವತ್ತು ನಮ್ಮ ಸಂಜೆಯ ರೀಡಿಂಗ್ ಸೆಷನ್‌ಗೆ ರಜೆ. ಕೆಲವೊಮ್ಮೆ ರೆಸ್ಟರಾಂಟ್‌ಗೆ ತುಂಬ ಜನ ಬರತೊಡಗಿದರೆ ನಮ್ಮ ಆವತ್ತಿನ ರೀಡಿಂಗ್ ಸೆಷನ್ ಅಲ್ಲಿಗೆ ಮುಗಿಯುತ್ತದೆ.

ಬೆಳಿಗ್ಗೆ ಎಂಟು ಗಂಟೆಗೆ ಮಿಲಾ ಆಫೀಸಿನಲ್ಲಿ ಇರುತ್ತಾಳೆ, ಸಂಜೆ ನಾಲ್ಕುವರೆಗೆ ಹೊರಟುಬಿಡುತ್ತಾಳೆ. ನಾಲ್ಕುವರೆಗೆ ಹೊರಟರೆ ಸಂಜೆಯ ಐದು ಗಂಟೆಗೆ ಶುರುವಾಗುವ ಫ್ರೀವೇ ಟ್ರಾಫಿಕ್ ತಪ್ಪಿಸಿಕೊಂಡು ಸಮಯಕ್ಕೆ ಸರಿಯಾಗಿ ಮನೆ ತಲುಪಬಹುದು ಎನ್ನುವುದು ಅವಳ ಅಭಿಪ್ರಾಯ, ಅನುಭವ. ಸಿಸ್ಟಮ್ ಶಟ್‌ಡೌನ್ ಮಾಡಿದವಳು 'ಇವಳು ಅಪ್ಪನನ್ನ ಬಿಟ್ಟು ಯಾವುದೋ ದೇಶಕ್ಕೆ ಬಂದಿದ್ದಾಳೆ, ಇವನ ಮಗಳು ಇವನನ್ನು ಬಿಟ್ಟು ಇನ್ಯಾವುದೋ ಸ್ಟೇಟ್‌ಗೆ ಹೋಗಿದ್ದಾಳೆ, ಸಂಜೆ ಆರುಗಂಟೆಗೆ ಬ್ರೇಕ್‌ಫಾಸ್ಟ್ ಕಾಫಿ, ಚಾಕ್ಲೆಟ್ ಕ್ರಸಾಂಟ್, ಇಬ್ಬರಿಗೂ ಹುಚ್ಚು' ಎನ್ನುತ್ತ ಹೊರಟವಳು ಮತ್ತೆ ಹೊರಳಿ ಕೆನ್ನೆಗೊಂದು ಮುತ್ತಿಟ್ಟು 'ತಮಾಷೆ ಮಾಡಿದೆ, ಇಬ್ಬರೂ ಪುಸ್ತಕ ಓದಿಕೊಂಡು, ನಿಮಗೆ ಹಿತವೆನಿಸಿದಂತೆ ಇರಿ. ಅವ್ಯಾನ್‌ನ ಹೆಂಡತಿ ಪ್ಯಾಂಕ್ರಿಯಾಟಿಕ್ ಕ್ಯಾನ್ಸರ್‌ನಿಂದ ತೀರಿಕೊಂಡಾಗ ನಮಗೆಲ್ಲ ಎಷ್ಟು ನೋವಾಗಿತ್ತು. ಅದೊಂದು ಅಚಾನಕ್ ಸಾವು. ಪ್ಯಾಂಕ್ರಿಯಾಟಿಕ್ ಕ್ಯಾನ್ಸರ್ ಡೈಗ್ನೌಸ್ ಆಗುವುದೇ ಕೊನೆಯ ಗಳಿಗೆಯಲ್ಲಿ. ಆರು ತಿಂಗಳಲ್ಲಿ ಅವ್ಯಾನ್ ಒಂಟಿಯಾದ. ನಂತರದ ಈ ಆರು ವರ್ಷಗಳಲ್ಲಿ ಅವನ ಮುಖದಲ್ಲಿ ನಗುವನ್ನು ನಾವ್ಯಾರೂ ನೋಡಿರಲಿಲ್ಲ. ಯಾವಾಗಲೂ ಸುಮ್ಮನೆ ಕೆಲಸ ಮಾಡುತ್ತಿರುತ್ತಿದ್ದ ಅವ್ಯಾನ್, ಈಗೀಗ ಸ್ವಲ್ಪ ನೆಮ್ಮದಿಯಿಂದ ಇರುವಂತೆ ಕಾಣುತ್ತಾನೆ. ನೀನೆಂದರೆ ಅವನಿಗೆ ತುಂಬ ಇಷ್ಟ, ನಿನಗೂ ಅವನೆಂದರೆ ಎಷ್ಟು ಪ್ರೀತಿ. ಅಂಟಿಕೊಂಡಿದ್ದೂ ಅಂಟಿಕೊಳ್ಳದಂತಿರುವ ನಿಮ್ಮಿಬ್ಬರನ್ನು ನೋಡಿದರೆ ಹೊಟ್ಟೆಕಿಚ್ಚಾಗುವಷ್ಟು ಹೊಂದಿಕೊಂಡಿದ್ದೀರಿ. ಹೀಗೆಯೇ ಇರಿ, ನಿನ್ನನ್ನು ಹಾರಿಸಿಕೊಂಡು ಹೋಗುವ ರಾಜಕುಮಾರ ಬರುವವರೆಗೂ' ಎನ್ನುತ್ತ ಹ್ಯಾಂಡ್‌ಬ್ಯಾಗ್ ಎತ್ತಿಕೊಂಡು ಹೊರಟುಹೋದಳು. ಮಿಲಾ ಹೋಗಿ ತುಂಬ ಹೊತ್ತಿನತನಕವೂ ನಾನು ಕೆಲಸ ಮಾಡುತ್ತಲಿದ್ದೆ. ಯೋಚಿಸುತ್ತ ಇತ್ತ ನೋಡಿದೆ. ಹೋಗುವಾಗ ಮಿಲಾ ನನ್ನ ಕೀಬೋರ್ಡ್ ಪಕ್ಕ ಒಂದು ಕಿಟ್‌ಕ್ಯಾಟ್ ಇಟ್ಟು ಹೋಗಿದ್ದಳು. ಕಿಟ್‌ಕ್ಯಾಟ್‌ನ ಒಂದು ಫೋಟೋ ತೆಗೆದು ಮಿಲಾಗೆ ಕಳಿಸುವಷ್ಟರಲ್ಲಿ ಅವ್ಯಾನ್ ಮೆಸೇಜ್ ಕಳಿಸಿದ್ದ 'ಐದು ನಲವತ್ತಾಯಿತು, ಹೊರಡು' ಅಂತಷ್ಟೇ ಇತ್ತು.

ಎಂಟು ತಿಂಗಳುಗಳ ಹಿಂದೆ, ಆಗಷ್ಟೇ ಯುನಿವರ್ಸಿಟಿ ಆಫ್ ಕ್ಯಾಲಿಫೋರ್ನಿಯಾ, ಲಾಸ್ ಏಂಜಲೀಸ್ ಅಲ್ಲಿ ಎಂ.ಎಸ್. ಮುಗಿಸಿ ಕೆಲಸ ಹುಡುಕುತ್ತಿದ್ದೆ. ದೇಶ ಬಿಟ್ಟು ಬಂದ

ಭಾವವಿತ್ತಾದರೂ ಅನುಭವ ಸಾಕಷ್ಟಿರಲಿಲ್ಲ. ಮರಳೋಣವೆಂದರೆ ಬರುವಾಗ ತೆಗೆದುಕೊಂಡ ಸ್ಟೂಡೆಂಟ್ ಲೋನ್ ನೆತ್ತಿಯ ಮೇಲೆ ಕತ್ತಿಯಂತೆ ಭಾಸವಾಗುತ್ತಲಿತ್ತು. ಮರಳಿ ಹೋಗಿ ಅಪ್ಪನಿಗೆ ಹೊರೆಯಾಗುವುದಕ್ಕಿಂತ ಇಲ್ಲಿ ಸ್ವಲ್ಪ ದಿನ ಕೆಲಸ ಮಾಡಿ ಸ್ವಲ್ಪ ಸಾಲ ತೀರಿದ ಮೇಲೆ ಮರಳುವ ನಿರ್ಧಾರ ಮಾಡಿದೆ. ಎಂಪ್ಲೊಯ್ಮೆಂಟ್ ಏಜನ್ಸಿಯೊಂದರಿಂದ ಕಾಂಟ್ರ್ಯಾಕ್ಟ್ ಕೆಲಸವೊಂದಕ್ಕೆ ಕರೆ ಬಂದಾಗ ಖುಷಿಯಾಗಿತ್ತು. ಎರಡು ರೌಂಡ್ಸ್ ಟೆಲಿಫೋನಿಕ್ ಇಂಟರ್ವ್ಯೂ ಆಗಿ ಫೈನಲ್ ರೌಂಡ್ ಇಂಟರ್ವ್ಯೂಗೆ ಸೆಲೆಕ್ಟ್ ಆದಾಗ ಕೆಲಸವೇ ಸಿಕ್ಕಷ್ಟು ಖುಷಿಯಾಗಿತ್ತು. ಇನ್‌ಪರ್ಸನ್ ಇಂಟರ್ವ್ಯೂ ದಿನ ರಿಕ್ರೂಟರ್ ಕಾಲ್ ಮಾಡಿದ್ದಾಗ ಇಂಟರ್ವ್ಯೂ ಪ್ಯಾನಲ್‌ನಲ್ಲಿ ಎಷ್ಟು ಜನರಿರುತ್ತಾರೆ, ಲೊಕೇಷನ್, ಸಮಯ, ಇಂಟರ್ವ್ಯೂ ಅವಧಿ, ಇವುಗಳನ್ನೆಲ್ಲ ಪುನಃ ಫೋನಿನಲ್ಲಿ ಮಾಹಿತಿ ತೆಗೆದುಕೊಂಡು ಹೊರಡಲು ಅನುವಾಗಿದ್ದೆ.

ಅರ್ಧ ಗಂಟೆ ಮುಂಚೆ ನಾನಲ್ಲಿದ್ದೆ. 'ಲು ಬುಲಾನ್ಜೆ', ಅದೇ ಮೊದಲ ಬಾರಿಗೆ ನಾನು ಆ ರೆಸ್ಟರಾಂಟ್ ನೋಡಿದ್ದು. ಒಳಹೊಕ್ಕಾಗ ಒಂದು ರೀತಿಯ ತಳಮಳ. ಇಂಟರ್ವ್ಯೂ ತೆಗೆದುಕೊಳ್ಳುವ ಮನುಷ್ಯನನ್ನು ನಾನಿನ್ನೂ ನೋಡಿಲ್ಲ, ಆಗಲೇ ಇಲ್ಲೆಲ್ಲಾದರೂ ಬಂದು ಕುಳಿತಿರಬಹುದ? ಯಾರಿರಬಹುದು? ಹುಡುಗನ? ಹುಡುಗಿಯ? ವಯಸ್ಸೆಷ್ಟಿರಬಹುದು? ಅಂತೆಲ್ಲ ಸುತ್ತ ನೋಡಿದೆ. ರೆಸ್ಟರಾಂಟ್‌ನಲ್ಲಿ ಟೇಬಲ್ಲಿಗೆ ಒಬ್ಬೊಬ್ಬರೇ ಎಂಬಂತೆ ಅಲ್ಲಲ್ಲಿ ಮಾತ್ರ ಜನರಿದ್ದರು. ಮೂಲೆಯೊಂದರಲ್ಲಿ ಕಾಫಿ ಟೇಬಲ್ಲೊಂದರ ಸುತ್ತ ಸೋಫಾಚೇರ್ಸ್ ಇದ್ದ ಫಾರ್ಮಲ್ ಎನ್ನಿಸುವ ಸ್ಥಳಕ್ಕೆ ಹೋಗಿ ಕೈಯಲ್ಲಿದ್ದ ಫೋಲ್ಡರ್-ಅನ್ನು ಕಾಫಿ ಟೇಬಲ್ ಮೇಲಿಟ್ಟು ಕುಳಿತೆ. ಸೌಜನ್ಯಕ್ಕೆ ಒಂದು ಕಾಫಿ ತಂದುಕೊಂಡೆನಾದರೂ ಕುಡಿಯುವುದು ಸಾಧ್ಯವಾಗಲಿಲ್ಲ. ಫೋನ್ ಪಕ್ಕಕ್ಕಿಟ್ಟು ಆಚೀಚೆ ನೋಡುತ್ತ ಕುಳಿತೆ. ಗಮನ ಪೂರ್ತಿ ರೆಸ್ಟರಾಂಟಿನ ಬಾಗಿಲುಗಳತ್ತಲೇ ಇತ್ತು. ಒಳಬರುವ, ಹೊರ ಹೋಗುವವರನ್ನೆಲ್ಲ ಇವರಿರಬಹುದ ಅಂತ ನೋಡುತ್ತ, ತಳಮಳಗೊಳ್ಳುತ್ತ ಕುಳಿತೆ. ಕಾಯುತ್ತ ಇಂಟರ್ವ್ಯೂಗೆ ನಿಗದಿಯಾಗಿದ್ದ ಸಮಯ ಮುಗಿದಿತ್ತು. ರಿಕ್ರೂಟರ್ ಕಳಿಸಿದ್ದ ಇಂಟರ್ವ್ಯೂ ಕ್ಯಾಲಂಡರ್ ಇನ್ವಿಟೇಷನ್ ತೆರೆದು ನೋಡಿದೆ. ಅದರಲ್ಲಿ ಇಂಟರ್ವ್ಯೂವರ್ ಪೂರ್ತಿ ಹೆಸರು, ಲೊಕೇಶನ್ ಬಿಟ್ಟರೆ ರಿಕ್ರೂಟರ್ ಫೋನ್ ನಂಬರ್ ಮಾತ್ರ ಕೊಡಲಾಗಿತ್ತು. ರಿಕ್ರೂಟರ್‌ಗೆ ನಾಲ್ಕಾರು ಬಾರಿ ಕರೆಮಾಡಿದರೂ ವಾಯ್ಸ್‌ಮೈಲ್ ಬಾಕ್ಸ್ ತಲುಪುತ್ತಲಿತ್ತು. ತಾಸಾಯಿತು, ಎರಡಾಯಿತು, ಮೂರಾಯಿತು. ಯಾರೂ ಬರಲಿಲ್ಲ.

ಕೌಂಟರ್‌ನಲ್ಲಿದ್ದ ಬರೀಸ್ಟಾ ನನ್ನನ್ನು ಗಮನಿಸುತ್ತಲಿದ್ದನಿರಬೇಕು. ಹತ್ತಿರ ಬಂದು ಇನ್ನು ಅರ್ಧ ಗಂಟೆಯಲ್ಲಿ ರೆಸ್ಟರಾಂಟ್ ಕಿಚನ್ ಕ್ಲೋಸ್ ಆಗುತ್ತದೆ, ಏನಾದರೂ ಬೇಕಿದ್ದರೆ ಈಗಲೇ ಆರ್ಡರ್ ಮಾಡಬಹುದು ಅಂದ. 'ಪ್ಲೀಸ್ ಗಿವ್ ಮಿ ಟು ಮಿನಿಟ್ಸ್' ಅಂತ ಹೇಳಿ ಒಂದು ನಿಮಿಷ ಯೋಚಿಸುತ್ತ ಕುಳಿತೆ. ಇಂಟರ್ವ್ಯೂವರ್‌ನ ಪೂರ್ತಿ ಹೆಸರನ್ನು ಲಿಂಕ್ಡಿನ್ ಅಲ್ಲಿ ಸರ್ಚ್ ಮಾಡಿದೆ. ಅದೇ ಹೆಸರಿನ ಮೂರ್ನಾಲ್ಕು ಜನರ

ಪ್ರೊಫೈಲುಗಳು ಕಾಣಿಸಿದವು. ಕಂಪನಿ ಹೆಸರನ್ನೂ ಸೇರಿಸಿ ನೋಡಿದೆ. ಒಂದು ಪ್ರೊಫೈಲ್ ಕಾಣಿಸಿತು. ಮೆಸೇಜ್ ಹಾಕಿದೆ 'Hope I am reaching out to the right person ...'

ಥಟ್ಟನೆ ಉತ್ತರ ಬಂತು 'ಇವತ್ತು ಇಂಟರ್ವ್ಯೂ ಇರುವುದು ನನಗೆ ಗೊತ್ತಿರಲಿಲ್ಲ, ಏನೋ ಮಿಸ್‌ಕಮ್ಯೂನಿಕೇಷನ್ ಆಗಿದೆ, ಸಾರಿ, ಇನ್ನೈದು ನಿಮಿಷದಲ್ಲಿ ಅಲ್ಲಿರುತ್ತೇನೆ, ಇದ್ದಲ್ಲಿಯೇ ಇರು' ಅಂತ ಉತ್ತರ ಬಂತು. ಆರು ನಿಮಿಷಗಳಲ್ಲಿ ವ್ಯಕ್ತಿಯೊಬ್ಬ ನನ್ನೆದುರು ಬಂದು ಕ್ಷಮೆಯಾಚಿಸುತ್ತ 'ನನ್ನ ಹೆಸರು ಜೆರಾಲ್ಡ್' ಅಂತ ಪರಿಚಯಿಸಿಕೊಂಡ.

ಮೂರು ಗಂಟೆಗಳ ಕಾಲ ಕಾದು ಕುಳಿತ ನನಗಿಂತ ಅವನು ಹೆಚ್ಚು ನರ್ವಸ್ ಆದಂತೆ ಕಾಣಿಸಿದ. ತನ್ನ ಕೆಲಸ ಮರೆತುದುದು, ಅಲ್ಲದೆ ನನ್ನನ್ನು ತುಂಬ ಹೊತ್ತು ಕಾಯಿಸಿದ ಅಳುಕು ಜೆರಾಲ್ಡ್‌ನಲ್ಲಿ ಕಾಣಿಸುತ್ತಲಿತ್ತು. ಅದೇ ಕಾರಣಕ್ಕೂ ಇರಬಹುದು ಇಂಟರ್ವ್ಯೂ ತುಂಬ ಕ್ಯಾಜ್ಯುಯಲ್ ಆಗಿತ್ತು. ಇಪ್ಪತ್ತು ನಿಮಿಷಗಳ ಮಾತುಕತೆಯ ನಂತರ ಜೆರಾಲ್ಡ್ 'ಈಗಷ್ಟೇ ಎಮ್.ಎಸ್. ಮುಗಿಸಿದ್ದೀಯ, ಚಿಕ್ಕ ಕಂಪನಿಗಳಲ್ಲಿ ಒಂದೆರಡು ವರ್ಷ ಕೆಲಸ ಮಾಡಿ ಅನುಭವ ಪಡೆದುಕೊಂಡು ಮತ್ತೆ ನನ್ನನ್ನು ಕಾಂಟ್ಯಾಕ್ಟ್ ಮಾಡು, ಇದು ನನ್ನ ಬಿಝ್ನೆಸ್ ಕಾರ್ಡ್' ಎಂದು ಹೇಳುತ್ತ ತನ್ನ ಕಾರ್ಡ್ ತೆಗೆದು ನನ್ನ ಮುಂದಿಟ್ಟ. ಅವನು ತನ್ನ ವಾಲೆಟ್‌ನಿಂದ ಕಾರ್ಡ್ ತೆಗೆಯುವಾಗಲೂ ನನ್ನ ರೆಜ್ಯೂಮೆ ಕಾಪಿ ಅವನ ಕೈಯಲ್ಲಿಯೇ ಇತ್ತು. 'ಒಂದು ಕಾಫಿ ಆರ್ಡರ್ ಮಾಡಲ' ಅಂತ ಕೇಳಿದ. ಧ್ವನಿ ಆಚೆ ಬರದಷ್ಟು ಮನಸ್ಸು ಆಯಾಸಗೊಂಡಿತ್ತು. ಹಸಿವಾಗಿತ್ತಾದರೂ ಬೇಡವೆಂದೆ. ಕಿಚನ್ ಕ್ಲೋಸ್ ಆಗಲು ಇನ್ನು ಒಂದು ನಿಮಿಷವಿತ್ತಾದ್ದರಿಂದ ಜೆರಾಲ್ಡ್‌ಗೆ ಥ್ಯಾಂಕ್ಸ್ ಹೇಳಿ ಏನಾದರೂ ಆರ್ಡರ್ ಮಾಡೋಣವೆಂದು ಎದ್ದು ಹೋದೆ. ಚಾಕ್ಲಟ್ ಕ್ರಸಾಂಟ್ ಕಾಣಿಸಿತು. ಆರ್ಡರ್ ಮಾಡಿ ತಿರುಗಿ ನೋಡುವಷ್ಟರಲ್ಲಿ ಜೆರಾಲ್ಡ್ ಹೊರಟುಹೋಗಿದ್ದ.

'ಳು ಬುಲಾನ್ಜೆ'ಯಿಂದ ಹೊರಬಂದಾಗ ಅನತಿ ದೂರದ ಹೈವೇಯಲ್ಲಿ ಸಾಗುತ್ತಿದ್ದ ವಾಹನಗಳ ಕೋರೈಸುವ ಬೆಳಕು ಕಣ್ಣೊಳಗೆ ಹೊಕ್ಕು ಕಣ್ಣಲ್ಲಿ ನೀರು ತುಂಬಿಕೊಂಡಿತು.

ಮರುದಿನ ಮತ್ತದೇ ರಿಕ್ರೂಟರ್‌ಯಿಂದ ಕಾಲ್ ಬಂತು. ನಿನ್ನೆ ಇಂಟರ್ವ್ಯೂ ಹೇಗಾಯಿತು, ಫೀಡ್ಬ್ಯಾಕ್ ತೆಗೆದುಕೊಳ್ಳಲು ಕಾಲ್ ಮಾಡಿದೆ ಅಂದ. ನಿನಗೆ ಈಗಾಗಲೇ ತಿಳಿದಿರಬೇಕಲ್ಲ ಅಂದೆ. ನೀನು ಕಳಿಸಿದ ಪೊಜಿಷನ್‌ಗೆ ಬೇಕಾದ ಎಲ್ಲ ಅರ್ಹತೆಗಳೂ ನನ್ನಲ್ಲಿದ್ದವು. ಸಾಧ್ಯವಾದರೆ ನಾನು ರಿಜೆಕ್ಟ್ ಆಗಲು ಸರಿಯಾದ ಕಾರಣ ತಿಳಿದುಕೊಂಡು ತಿಳಿಸಬಹುದ? ಅಂತ ಕೇಳಿದೆ. ರಿಕ್ರೂಟರ್ ಕ್ಷಮೆಯಾಚಿಸಿ ಫೋನಿಟ್ಟ.

ಎರಡು ದಿನ ಕಳೆದಿತ್ತು. ಸೂಕ್ತ ಜಾಬ್ ಓಪನಿಂಗ್ಸ್ ಹುಡುಕುತ್ತ ಅಪ್ಲೈ ಮಾಡುತ್ತಲಿದ್ದೆ. ಮೂರನೆಯ ದಿನ ಬೆಳಿಗ್ಗೆ ಕರೆಯೊಂದು ಬಂತು. ತನ್ನ ಹೆಸರನ್ನು ಪರಿಚಯಿಸಿಕೊಂಡವಳು 'ನಿನ್ನ ಪ್ರೊಫೈಲ್ ನೋಡಿದೆ, ನನ್ನ ಕಂಪನಿಯಲ್ಲಿ ಸೂಕ್ತವಾದ ಪೊಜಿಷನ್ ಒಂದಿದೆ, ಇವತ್ತು ಸಂಜೆ ಐದು ಗಂಟೆಗೆ ಭೇಟಿಯಾಗಲು ಸಾಧ್ಯವಾದರೆ ತಿಳಿಸು, ಇಂಟರ್ವ್ಯೂ ಇನ್ವಿಟೇಷನ್ ಕಳಿಸಿಕೊಡುತ್ತೇವೆ' ಅಂತ ಹೇಳಿದಳು. ಸರಿ ಎಂದೆ. ತಾಸಿನೊಳಗೆ ಕ್ಯಾಲಂಡರ್ ಇನ್ವಿಟೇಷನ್ ಬಂತು. ಎಕ್ಸೆಪ್ಟ್ ಮಾಡುವಾಗ ಗಮನಿಸಿದೆ. ಮೊನ್ನೆ ಇಂಟರ್ವ್ಯೂ ಕೊಟ್ಟ

ಕಂಪನಿಯಿಂದಲೇ. ಮೊನ್ನೆ ಎಂಪ್ಲೊಯ್ಮೆಂಟ್ ಏಜನ್ಸಿಯ ಮೂಲಕ ಬಂದಿದ್ದ ಅದೇ ಪೊಜಿಷನ್. ಇವತ್ತು ನೇರ ಕಂಪನಿಯಿಂದ ಕರೆದಿದ್ದರು. ಡೇಟಾ ಅಪ್ಡೇಟ್ ನೋಡದಲೆ ಮತ್ತೆ ಇನ್ವಿಟೇಷನ್ ಕಳಿಸಿದ್ದಾರ ಅಂತ ಯೋಚನೆಯಾಯಿತು. ಇಂಟರ್ವ್ಯೂ ಪ್ಯಾನಲ್ ಅಲ್ಲಿ ಎಷ್ಟು ಜನರಿದ್ದಾರೆ ಅಂತ ನೋಡಿದೆ. ಒಬ್ಬರೇ ಇದ್ದರು. ನೇರ ಇನ್‌ಪರ್ಸನ್ ಇಂಟರ್ವ್ಯೂಗೆ, ಅದೂ ಸಂಜೆ ಐದು ಗಂಟೆಗೆ, ವರ್ಕ್ ಅವರ್ಸ್ ನಂತರ ಆಫೀಸ್ ಕೆಂಪಸ್‌ನಿಂದ ಹೊರಗೆ ಇಂಟರ್ವ್ಯೂಗೆ ಕರೆದಿದ್ದಾರೆಂದರೆ ಖಂಡಿತ ಯಾರಾದರೂ ಡೈರೆಕ್ಟರ್ ಅಥವಾ ವಿಪಿ ಲೆವೆಲ್ ವ್ಯಕ್ತಿಗಳಿರಬಹುದು ಎನ್ನಿಸಿತಾದರೂ ಎಂಟ್ರಿ ಲೆವೆಲ್ ಜಾಬ್ ಇಂಟರ್ವ್ಯೂ ತೆಗೆದುಕೊಳ್ಳಲು ಅಂಥವರೆಲ್ಲ ಬರಲಿಕ್ಕಿಲ್ಲ ಅನ್ನಿಸಿತು. ಲೊಕೇಷನ್ ಮತ್ತು ಇಂಟರ್ವ್ಯೂವರ್ ನೇಮ್ಸ್ ಚೆಕ್ ಮಾಡಿದೆ. Location to be decided, Interviewer full name will be provided soon ಅಂತಿತ್ತು. ಯಾರಿರಬಹುದು, ಮೊನ್ನೆಯ ಹಾಗೆಯೇ ಆದರೆ ಅಂತೆಲ್ಲ ಯೋಚಿಸುತ್ತಲಿದ್ದೆ.

ಮಧ್ಯಾಹ್ನ ಮೂರು ಗಂಟೆಯ ಹೊತ್ತಿಗೆ ಇಂಟರ್ವ್ಯೂ ಕ್ಯಾಲಂಡರ್ ಅಪ್ಡೇಟ್ ಆದ ನೋಟಿಫಿಕೇಷನ್ ಬಂತು. ಚೆಕ್ ಮಾಡಿದೆ. ಸ್ಟಾರ್‌ಬಕ್ಸ್ ಒಂದರ ಆಡ್ರಸ್ ಕೊಟ್ಟಿದ್ದರು. ಇಂಟರ್ವ್ಯೂವರ್ ಹೆಸರು ಮಿಲನ್ ಅಂತಿತ್ತು. ಫೋನ್ ನಂಬರ್ ಕೂಡ ಇತ್ತು.

ಐದು ಗಂಟೆಗೆ ಹತ್ತು ನಿಮಿಷ ಮೊದಲಿಗೆ ಸ್ಟಾರ್‌ಬಕ್ಸ್ ಒಳಗೆ ಹೋದೆ. ಟೇಬಲ್ಲೊಂದರ ಮೇಲೆ ಫೋಲ್ಡರ್ ಇಟ್ಟು ಫೋನನ್ನು ಮ್ಯೂಟ್ ಮೋಡ್ ಅಲ್ಲಿಟ್ಟು ಕುಳಿತುಕೊಳ್ಳಬೇಕೆನ್ನು-ವಷ್ಟರಲ್ಲಿ ಕಾಲ್ ಬಂತು. ಫೋನ್‌ಕಾಲ್ ರಿಸೀವ್ ಮಾಡಿ ಸುತ್ತೆಲ್ಲ ಕಣ್ಣು ಹಾಯಿಸಿ ಹುಡುಕುತ್ತಿದ್ದ ನನ್ನ ಹತ್ತಿರ 'ಆಯ್‌ಮ್ ಮಿಲ್ಯಾನ್, ಯುವರ್ ಇಂಟರ್ವ್ಯೂವರ್ ಟುಡೆ' ಎಂಬುದಾಗಿ ಫೋನಿನಲ್ಲಿ ಹೇಳುತ್ತ ಐವತ್ತರ ಆಸುಪಾಸಿನ ಬೆಳ್ಳನೆಯ ಲೇಡಿಯೊಬ್ಬಳು ಬಂದಳು. 'ಆಯ್ ಆಯಮ್ ಮಿಲ್ಯಾನ್' ಎಂದು ಕೈ ಕುಲುಕಿದಳು. ಕಂಪನಿಯ ಹೆಸರು ಹೇಳಿ ತಾನು ನನ್ನ ಇಂಟರ್ವ್ಯೂವರ್ ಇವತ್ತು ಅಂತಲೂ ಹೇಳಿದಳು. ತಾನಾಗಲೇ ಕುಳಿತಿದ್ದ ಸ್ವಲ್ಪ ಪ್ರೈವೆಸಿ ಇರುವ ಟೇಬಲ್ಲೊಂದಕ್ಕೆ ನನ್ನನ್ನು ಕರೆದೊಯ್ದವಳು 'ನಿನಗೆ ಕಾಫಿ ತರುತ್ತೇನೆ, ಯಾವುದಿರಲಿ?' ಅಂತ ಕೇಳಿದಳು, ನಾನು ಕಾಫಿ ಬೇಡವೆಂದೆ. ಅವಳ ಕಾಫಿ ಕಪ್ ಆಗಲೇ ಟೇಬಲ್ ಮೇಲಿತ್ತು. ಅವಳ ಮಾತಿನ ರೀತಿ, ಅವಳ ಕಾಫಿಯ ಪರಿಮಳ ಒಂದು ಹಿತವಾದ ವಾತಾವರಣವನ್ನು ಸೃಷ್ಟಿಸಿದ್ದವು. ತೀರ ಫೊರ್ಮಲ್ಲಾಗಿ ಆರಂಭವಾದ ಇಂಟರ್ವ್ಯೂ ಕೊನೆಕೊನೆಗೆ ಸರಳವಾಗುತ್ತ ಮಾತುಕತೆ ಆಪ್ತವಾಗುತ್ತ ಹೋಯಿತು. 'ಕೆಲಸಕ್ಕೆ ಜೊಯ್ನ್ ಆಗಲು ಯಾವ ಡೇಟ್ಸ್ ಪ್ರಿಫರ್ ಮಾಡುತ್ತೀಯ? ಇನ್ನೆರಡು ದಿನಗಳಲ್ಲಿ ನಿನ್ನ ನಿರ್ಧಾರ ತಿಳಿಸು' ಎಂದಳು. ಇದನ್ನು ನಾನು ನಿರೀಕ್ಷಿಸಿರಲಿಲ್ಲ. ಹೊರಡುವಾಗ ಅವಳು ನನಗೊಂದು ಕೆಫೆ ಮೋಖಾ ಕೊಡಿಸಿದಳು.

ಅವಳಿಗೆ ಬಾಯ್ ಹೇಳಿ ಸ್ಟಾರ್‌ಬಕ್ಸ್ ಇಂದ ಹೊರಗೆ ಬಂದಾಗ ಕಾಲುಮೈಲಿ ದೂರದಲ್ಲಿ 'ಳು ಬುಲಾನ್ಜ಼' ಕಾಣುತ್ತಲಿತ್ತು. ಮೊನ್ನೆ ಕೊಂಡ ಚಾಕ್ಲಟ್ ಕ್ರಸಾಂಟ್ ನೆನಪಾಗಿ 'ಳು ಬುಲಾನ್ಜ಼'ಗೆ ಹೋದೆ. ಮೊನ್ನೆ ಕುಳಿತಿದ್ದ ಮೂಲೆಯ ಸೀಟನ್ನೊಮ್ಮೆ ನೋಡಿದೆ.

ಖಾಲಿಯಿತ್ತು. ಕಣ್ಣು ಪಕ್ಕದ ಮೂಲೆಯತ್ತ ತಿರುಗಿತು. ಸೋಫಾಚೇರ್ ಅಲ್ಲಿ ಕುಳಿತಿದ್ದ ವ್ಯಕ್ತಿಯೊಬ್ಬನನ್ನು ನಾನು ನೋಡುವುದಕ್ಕೂ ಅವನು ನನ್ನನ್ನು ನೋಡುವುದಕ್ಕೂ ಸರಿಯಾಯಿತು. ಒಬ್ಬರಿಗೊಬ್ಬರು ಸ್ಮೈಲ್ ಕೊಡುವುದು ಅನಿವಾರ್ಯವಾಯಿತು. ಕ್ರಸಾಂಟ್ ತೆಗೆದುಕೊಂಡು ಹೊರಡುವಾಗ ಬೇಡವೆಂದರೂ ಕಣ್ಣು ಮೊನ್ನೆ ಕುಳಿತ ಮೂಲೆಯ ಸೀಟಿನತ್ತ ಹೋಗುತ್ತಲಿತ್ತು. ಮನಸ್ಸು ಅದೇ ಸೀಟಿನೆಡೆ ಎಳೆದುಕೊಂಡು ಹೋಯಿತು. ಅಲ್ಲಿಯೇ ಕುಳಿತು ಕ್ರಸಾಂಟ್ ತಿನ್ನುವಾಗ ಜೆರಾಲ್ಡ್ ನೆನಪಾದ. ನನ್ನ ಕೆಲಸ ಅವನ ಟೀಮಿನಲ್ಲಿ ಇರಬಹುದ ಅಂತ ಯೋಚಿಸಿದೆ. ಪ್ರೊಜಕ್ಟ್ ಯಾವುದೆಂದು ತಿಳಿಸಿದರೂ ಆನ್‌ಬೋರ್ಡಿಂಗ್ ಪ್ರೊಸೆಸ್ ಶುರುವಾಗುವತನಕ ಉಳಿದ ಯಾವ ಮಾಹಿತಿಯೂ ಸಿಗುವುದಿಲ್ಲವಾಗಿತ್ತಾದ್ದರಿಂದ ಈಗಿನಿಂದ ಯೋಚಿಸಿ ಪ್ರಯೋಜನವಿರಲಿಲ್ಲ. ಕೆಲಸ ಸಿಕ್ಕ ಸಂತಸದಲ್ಲಿ ಎಲ್ಲವೂ ಆಪ್ತವಾಗಿ ಕಾಣುತ್ತಲಿತ್ತು. ಫೋಲ್ಡರ್ ಎತ್ತಿಕೊಂಡು, ಮಿಲ್ಯಾನ್ ಕೊಡಿಸಿದ್ದ ಕೆಫೆ ಮೋಖಾ ಕಪ್‌ಅನ್ನು ಎದೆಗೊತ್ತಿಕೊಂಡು, ಇನ್ನೊಂದು ಕೈಯಿಂದ 'ಳು ಬುಲಾನ್ಜೆ'ಯ ಬಾಗಿಲು ತೆರೆದು ಹೊರಬಂದೆ. ಅನತಿ ದೂರದ ಹೈವೇಯಲ್ಲಿ ಕಾರುಗಳು ದೀಪದ ಝುರಿಯಂತೆ ಸಾಗುತ್ತಲಿದ್ದವು.

ಕೆಲಸಕ್ಕೆ ಸೇರಿದ ಮೊದಲ ದಿನ ಒಂದು ಗಂಟೆ ಮುಂಚಿತವಾಗಿ ಮಿಲ್ಯಾನ್ ನನ್ನನ್ನು ಬರಲು ತಿಳಿಸಿದ್ದಳು. ಹೋಗಿ ಲಾಬಿಯಲ್ಲಿ ಕುಳಿತಿದ್ದೆ. ನಾನು ಕುಳಿತಲ್ಲಿಗೆ ಒಬ್ಬ ವ್ಯಕ್ತಿ ಬಂದು ನನಗೆ ವಿಷ್ ಮಾಡಿ ತನ್ನನ್ನು ಪರಿಚಯಿಸಿಕೊಂಡ. ಅವನೇ ಅವ್ಯಾನ್, ಆವತ್ತಿಗೆ ಸರಿಯಾಗಿ ವಾರದ ಹಿಂದೆ 'ಳು ಬುಲಾನ್ಜೆ'ಯ ಮೂಲೆಯ ಸೋಫಾಚೇರ್'ನಲ್ಲಿ ಕುಳಿತಿದ್ದ ವ್ಯಕ್ತಿ, ಅವ್ಯಾನ್.

'ಳು ಬುಲಾನ್ಜೆ'ಯ ಆ ಪಕ್ಕದ ಮೂಲೆಯ ಟೇಬಲ್, ಅದರ ಮೇಲೆ ಮೊದಲಬಾರಿಯ ಇಂಟರ್ವ್ಯೂ ದಿನದಂದು ಜೆರಾಲ್ಡ್ ಬಿಟ್ಟು ಹೋದ ನನ್ನ ರೆಜ್ಯೂಮ್ ಕಾಪಿ ಅವ್ಯಾನ್‌ನ ಕೈಸೇರಿ ನನ್ನನ್ನು ದಿನಾಲೂ ಮಿಲ್ಯಾನ್ ಪಕ್ಕ ಕುಳಿತು ಕೆಲಸ ಮಾಡುವಂತೆ ಮಾಡಿತ್ತು.

* * *

ಮನಸ್ಸು ಹರಿದಾಡುತ್ತಲಿತ್ತು, ಮಾನಿಟರ್ ನೋಡುತ್ತಲಿದ್ದೆ, ಕೈಯಲ್ಲಿದ್ದ ಮೌಸ್ ತಾನಾಗಿ ಸರಿದಾಡುತ್ತಿತ್ತು, ಕೈಗೆ ತಗುಲಿದ ಕಿಟ್‌ಕ್ಯಾಟ್ ಕೆಳಗೆ ಬಿತ್ತು. ಎತ್ತಿಟ್ಟುಕೊಂಡೆ. ಫೋನ್ ನೋಡಿದೆ. 'ಹೊರಡು, ಲೇಟಾಗಿದೆ' ಅಂತ ಅವ್ಯಾನ್ ಮತ್ತೊಮ್ಮೆ ಮೆಸೇಜ್ ಕಳಿಸಿದ್ದ. ಗಂಟೆ ನೋಡಿದೆ. ಐದು ನಲವತ್ತೈದು. ಸಿಸ್ಟಮ್ ಶಟ್‌ಡೌನ್ ಮಾಡಿ, ಕಿಟ್‌ಕ್ಯಾಟನ್ನು ಬ್ಯಾಗಿನಲ್ಲಿಟ್ಟುಕೊಂಡು ಹೊರಟೆ. 'ಳು ಬುಲಾನ್ಜೆ' ಇರುವ ಕಾಂಪ್ಲೆಕ್ಸಿನ ಪಾರ್ಕಿಂಗ್ ಲಾಟ್ ತುಂಬಿತ್ತು. ಹುಡುಕಾಡಿ ಕಾರ್ ಪಾರ್ಕ್ ಮಾಡಿ ಬರುವಷ್ಟರಲ್ಲಿ ಮತ್ತೆ ಮೂರ್ನಾಲ್ಕು ನಿಮಿಷ. 'ಳು ಬುಲಾನ್ಜೆ'ಯ ಒಳ ಹೊಕ್ಕಾಗ ಆರು ಗಂಟೆಗೆ ಮೂರು ನಿಮಿಷ. ಖಾಯಂ ಜಾಗಕ್ಕೆ ಹೋಗಿ ಸೋಫಾಚೇರ್ ಎದುರಿದ್ದ ಕಾಫಿಟೇಬಲ್ಲಿನ ಮೇಲೆ ಬ್ಯಾಗ್ ಇಟ್ಟು ರೆಸ್ಟ್‌ರೂಮಿಗೆ ಹೋಗಿ ಫ್ರೆಷ್‌ಅಪ್ ಆಗಿ ಬಂದು ಕಾಫಿ ಮತ್ತು ಕ್ರಸಾಂಟ್ ಆರ್ಡರ್

ಮಾಡೋಣವೆಂದು ಕೌಂಟರ್‌ಗೆ ಹೋದೆ. ಪರಿಚಯದ ಬರೀಸ್ಟಾ ಒಬ್ಬ ಕಿಚನ್ ಇಂದ ಹೊರಬಂದು ಒಂದು ಚಾಕ್ಲಟ್ ಕ್ರಸಾಂಟ್ ಕೌಂಟರಿನ ಮೇಲಿಟ್ಟು ಹಿಂದೆಯೇ ಪುಸ್ತಕವೊಂದನ್ನು ಕೊಟ್ಟವನು ಅವ್ಯಾನ್ ನಿನಗಿದನ್ನು ಕೊಡಲು ಹೇಳಿದ ಅಂತ ಹೇಳಿದ. ಅವ್ಯಾನ್ ಪುಸ್ತಕವನ್ನು ಇವನ ಹತ್ತಿರ ಯಾಕೆ ಕೊಟ್ಟಿದ್ದಾನೆ, ಅದೂ ಒಂದೇ ಪುಸ್ತಕ, ಅವ್ಯಾನ್ ಬರುವುದಿಲ್ಲವ, ಯೋಚನೆಗಳು ಒತ್ತಟ್ಟಿಗೆ ಬಂದವು. ಕ್ರಸಾಂಟ್‌ಗೆ ಪೇ ಮಾಡಲು ಹೋದೆ, ಅವ್ಯಾನ್ ಪೇ ಮಾಡಿದ್ದಾನೆ ಅಂತ ಹೇಳಿದ. ಕ್ರಸಾಂಟ್ ಮತ್ತು ಪುಸ್ತಕ ಎರಡನ್ನೂ ಎತ್ತಿಕೊಂಡು ಬಂದು ಪುಸ್ತಕವನ್ನು ಟೇಬಲ್ಲಿನ ಮೇಲಿಟ್ಟು ಬೀನ್‌ಬ್ಯಾಗಿನಲ್ಲಿ ಕುಳಿತುಕೊಂಡೆ. ಅವ್ಯಾನ್ ಬರಬಹುದೆಂದು ಬಾಗಿಲುಗಳತ್ತ ನೋಡುತ್ತ ಕ್ರಸಾಂಟ್ ತಿನ್ನುತ್ತಲಿದ್ದೆ. ಮಿಲಾ ಕಾಲ್ ಮಾಡಿದಳು. 'ಅವ್ಯಾನ್‌ನ ಮಗಳು ಆಫೀಸಿನಿಂದ ಮರಳುವಾಗ ಅವಳ ಕಾರ್ ಆ್ಯಕ್ಸಿಡಂಟ್ ಆಗಿದೆಯಂತೆ. ಅವ್ಯಾನ್ ನಾಲ್ಕು ದಿನಗಳ ನಂತರ ಮರಳುತ್ತೇನೆ ಅಂತ ಇ-ಮೈಲ್ ಕಳಿಸಿದ್ದಾನೆ. ಮೈನರ್ ಇಂಜುರೀಸ್ ಅಂತಷ್ಟೇ ಬರೆದಿದ್ದಾನೆ. ನಿನಗೆ ಹೆಚ್ಚಿನ ವಿಷಯವೇನಾದರೂ ಗೊತ್ತ ಅಂತ ವಿಚಾರಿಸೋಣವೆಂದು ಕಾಲ್ ಮಾಡಿದೆ' ಎಂದಳು. ನನಗೆ ಇದ್ಯಾವುದೂ ಗೊತ್ತಿಲ್ಲವೆಂದೆ. 'ಅವ್ಯಾನ್‌ಗೆ ನೀನೆಂದರೆ ತುಂಬ ಪ್ರೀತಿ, ನೀನು ಅವ್ಯಾನ್‌ನ ಅತ್ಯಂತ ನೆಚ್ಚಿನ ಪುಸ್ತಕ, ನೀನು ಗಾಬರಿಗೊಳ್ಳಬಾರದೆಂದು ಅವನು ನಿನಗೆ ವಿಷಯ ತಿಳಿಸಿರದೆ ಇರಬಹುದು, ವಿಷಯ ಗಂಭೀರವಿದ್ದರೆ ನಿನಗೆ ಹೇಳುತ್ತಿದ್ದ ಬಿಡು' ಎಂದು ಹೇಳಿ ಫೋನ್ ಇಟ್ಟಳು. ಮಿಲಾಳ ಜೊತೆ ಮಾತು ಮುಗಿಯುತ್ತಿದ್ದಂತೆ 'ರೆಸ್ಟರಾಂಟ್ ಬಾಗಿಲು ಮುಚ್ಚುವತನಕವೂ ಅಲ್ಲಿಯೇ ಕುಳಿತಿರಬೇಡ, ಬೇಗ ಮನೆ ಸೇರಿಕೊ' ಎಂಬುದಾಗಿ ಅವ್ಯಾನ್ ಮೆಸೇಜ್ ಕಳಿಸಿದ್ದ. ಪುಸ್ತಕದತ್ತ ನೋಡಿದೆ. ನಿನ್ನೆ ಮೂವತ್ಮೂರು ಪುಟಗಳಷ್ಟು ಓದಿದ್ದೆ. ಅದೇ ಪುಸ್ತಕವನ್ನು ಅವ್ಯಾನ್ ಕೊಟ್ಟು ಹೋಗಿದ್ದ.

ನಾನು ಮೊದಲ ಬಾರಿಗೆ ಅವ್ಯಾನ್‌ನನ್ನು ಭೇಟಿ ಮಾಡಿದ್ದು 'ಲು ಬುಲಾನ್ಜೆ'ಯಲ್ಲಿಯೇ. 'ಲು ಬುಲಾನ್ಜೆ', ಅವ್ಯಾನ್‌ನಿಗೆ ನನ್ನನ್ನು ಹುಡುಕಿಕೊಟ್ಟ ರೆಸ್ಟರಾಂಟ್. ಅವ್ಯಾನ್ ತನ್ನ ಹೆಚ್ಚಿನ ಸಂಜೆಗಳನ್ನು ಇಲ್ಲಿಯೇ ಕಳೆದಿದ್ದಾನೆ, ಅವನು ಓದಿದ ಬಹುಪಾಲು ಪುಸ್ತಕಗಳನ್ನು ಬಹುಷಃ ಇಲ್ಲಿಯೇ ಕುಳಿತು ಓದಿರಬಹುದು ಅಂತ ನನಗೆ ಅನ್ನಿಸುತ್ತಲಿತ್ತು. ಮೂವತ್ಮೂರನೆಯ ಪುಟ ತೆರೆದೆ. ಪುಟ್ಟ ನೋಟ್ ಇತ್ತು 'ರೆಸ್ಟರಾಂಟ್ ಬಾಗಿಲು ಮುಚ್ಚುವತನಕವೂ ಇಲ್ಲಿಯೇ ಕುಳಿತಿರಬೇಡ, ಬೇಗ ಮನೆ ಸೇರಿಕೋ' ಎಂಬುದಾಗಿ ಬರೆದಿತ್ತು.



# ಸ್ಥಿತಧೀರೆ

**ಸಂಜೋತಾ ಪುರೋಹಿತ್**
San Francisco, California

*

'ದಿಸ್ ಇಸ್ ಸೋ ಸ್ಪೈಸಿ' ಎಂದು ಹೇಳುವಾಗ ಅವಳ ಕಣ್ಣ ತುಂಬ ನೀರು. ಬಾಯಲ್ಲಿದ್ದ ಖಾರವೆಲ್ಲ ಮುಖಕ್ಕೆ ಉಗ್ಗಿದೆಯೇನೋ ಎಂಬಂತೆ ಮೂಗು, ಕೆನ್ನೆ, ತುಟಿಗಳೆಲ್ಲ ರಕ್ತಗೆಂಪು. ಅಷ್ಟು ಹೇಳುವ ಹೊತ್ತಿಗೆ ಅವಳಿಗೆ ಕೆಮ್ಮು ಒತ್ತರಿಸಿಕೊಂಡು ಬಂದು ಕಣ್ಣಿನಿಂದ ನೀರು ಹರಿಯತೊಡಗಿತು. ಅವಳ ನೆತ್ತಿಯನ್ನು ಮೆಲ್ಲನೆ ತಟ್ಟಿ ಬಾಟಲಿಯಲ್ಲಿದ್ದ ನೀರನ್ನು ಕೊಟ್ಟೆ. ಗಟಗಟನೇ ಕುಡಿದಳು. ಒಂಚೂರು ಸಮಾಧಾನವಾಯಿತು ಎಂದು ಅವಳ ಮುಖಭಾವದಿಂದ ಗೊತ್ತಾಗುತ್ತಿತ್ತು. ಪಲ್ಯ ಮತ್ತು ಚಟ್ನಿ ಖಾರವಾಗಿತ್ತು. ಅದರ ಮೇಲೆ ದೋಸೆಗೆ ಹಾಕಿದ ಖಾರದ ಶ್ರೀರಚಾ ಸಾಸ್ ಬೇರೆ. ಯಾವುದೇ ವಿನಾಯಿತಿ ಇಲ್ಲದೇ ಯಥೇಚ್ಛವಾಗಿ ಖಾರ ತಿನ್ನುವ ನಾವು ಭಾರತೀಯರಿಗೇ ಖಾರ ಎನ್ನಿಸುವಂತಿರುವಾಗ ಜೀವಮಾನವಿಡೀ ಸಪ್ಪೆ ಊಟ ಮಾಡುವ ಈ ವಿದೇಶಿ ಹುಡುಗಿಗೆ ಈ ಪರಿ ಖಾರ ನೆತ್ತಿಗೆ ಹತ್ತಿದ್ದರಲ್ಲಿ ಆಶ್ಚರ್ಯವೇನೂ ಇರಲಿಲ್ಲ.

'ಈ ದೋಸೆ ಬಿಡು. ಮೀನಾಳ ಹತ್ರ ಶ್ರೀರಚಾ ಹಾಕದೇ ಇರೋ ದೋಸೆ ಮಾಡಿಸ್ಕೋ. ಖಾರ ಕಡಿಮೆ ಆಗುತ್ತೆ' ಎಂದು ಇಂಗ್ಲೀಷಿನಲ್ಲಿ ಹೇಳಿದೆ ಅವಳಿಗೆ.

ಅವಳು ಎದ್ದು ಹೋಗಿ ತುಸು ದೂರದಲ್ಲಿ ದೋಸೆ ಹುಯ್ಯುತ್ತಿದ್ದ ಮೀನಾಳ ಬಳಿ ಹೋಗಿ ನಿಂತಳು. ಮರದ ಬೆಂಚಿನ ಮೇಲೆ ಎಲ್ಲ ಸಾಮಗ್ರಿಗಳನ್ನು ಜೋಡಿಸಿಟ್ಟುಕೊಂಡು, ಗ್ರಿಡಲ್ ಅನ್ನು ಅಲ್ಲೇ ಇದ್ದ ಪ್ಲಗ್ಗಿಗೆ ಚುಚ್ಚಿ, ಅದು ಬಿಸಿಯಾದಾಗ ನೀರನ್ನು ಚುಮುಕಿಸಿ

ಮೀನಾ ಪ್ರೀತಿಯಿಂದ ದೋಸೆಯನ್ನು ತೀಡುತ್ತಿದ್ದರೆ ನಮ್ಮೂರಿನ ರಸ್ತೆ ಬದಿಯಲ್ಲಿ ಕೆಂಡದ ಮೇಲೆ ಕಾವಲಿಯನ್ನಿಟ್ಟು ದೋಸೆ ಮಾಡುವ ಅಂಗಡಿಗಳು ನೆನಪಾದವು. ಮೀನಾ ಬಿಸಿ ಬಿಸಿ ದೋಸೆ ಮಾಡಿ ಕೊಡುತ್ತಿದ್ದರೆ ಅದೆಷ್ಟು ತಿಂದೆನೋ ನಾನು. ಇನ್ನು ಇದನ್ನು ಕರಗಿಸಲಿಕ್ಕೆ ಅದೆಷ್ಟು ಸೂರ್ಯ ನಮಸ್ಕಾರಗಳನ್ನು ಮಾಡಬೇಕೋ ಎಂದುಕೊಳ್ಳುತ್ತಿದ್ದಾಗ ಆ ಹುಡುಗಿ ಬಿಸಿ ದೋಸೆ ಹಾಕಿಸಿಕೊಂಡು ಮತ್ತೆ ನನ್ನ ಪಕ್ಕದಲ್ಲಿ ಬಂದು ಕುಳಿತಳು.

ಅವಳನ್ನೇ ನೋಡಿದೆ. ಇನ್ನೂ ಚಿಕ್ಕವಳು. ವಯಸ್ಸು ಇಪ್ಪತ್ತೈದಿರಬಹುದೇನೋ. ಬೆಳ್ಳನೆಯ ಚರ್ಮ ಹೊತ್ತಿದ್ದ ದೇಹದಲ್ಲಿ ಎಲ್ಲವನ್ನು ಕರಾರುವಾಕ್ಕಾಗಿ ತುಂಬಿಕೊಂಡಿದ್ದ ನೀಟ ಮೈ ಮಾಟಿನ ಸುಂದರಿ. ಅವಳ ಗುಂಡು ಮೊಗಕ್ಕೆ ಹೊಂದುವಂತೆ ಹಣೆಯ ಮೇಲೆ ಬರುವಂತೆ ಕೂದಲನ್ನು ಕತ್ತರಿಸಿಕೊಂಡಿದ್ದಳು. ಪುಟ್ಟ ತುಟಿಗಳು, ನಕ್ಕಾಗಲೆಲ್ಲ ಎರಡು ಕೆನ್ನೆಗಳಲ್ಲಿ ಗುಳಿ ಬಿದ್ದು ಇನ್ನೂ ಚೆಂದವಾಗಿ ಕಾಣಿಸುತ್ತಿದ್ದಳು. ಅವಳ ಎರಡು ಕೈಗಳ ತುಂಬ ಕೆಂಪು ಮತ್ತು ಹಸಿರು ಬಣ್ಣದ ಟ್ಯಾಟೂಗಳು ತುಂಬಿಹೋಗಿದ್ದವು.

ಒಂದರ ನಂತರ ಒಂದರಂತೆ ಅವಳೊಡನೆ ಮಾತು ಶುರುವಾಯಿತು. ತನ್ನ ಹೆಸರು ಲೆಂಜಿ ಎಂದು ಪರಿಚಯಿಸಿಕೊಂಡಳು. ನಾನು ಎಷ್ಟೇ ಹೇಳಿದರೂ ನನ್ನ ಹೆಸರನ್ನು ಗೀತಾ ಎಂದು ಹೇಳುವ ಬದಲಾಗಿ ಗೀಥಾ ಎಂದೇ ಉಚ್ಚರಿಸಿದಳು. ನಾನು ಎರಡ್ಮೂರು ಸಲ ಪ್ರಯತ್ನಿಸಿ ಅವಳ ಬಾಯಲ್ಲಿ ಗೀಥಾ ಎಂದು ಮುದ್ದಾಗಿ ಕೇಳುತ್ತಿದೆ ಎನ್ನಿಸಿ ನಕ್ಕು ಸುಮ್ಮನಾದೆ. ಅವಳು ತನ್ನ ಕೆಲಸದ ಬಗ್ಗೆ ಹೇಳಿಕೊಂಡಳು.

'ಸ್ಟ್ರಿಪ್ ಕ್ಲಬ್?' ಎಂದು ನನ್ನ ಬಾಯಿಂದ ನನಗರಿವಿಲ್ಲದಂತೆ ಹೊರಬಂದಿತ್ತು. ಅದರೊಳಗೆ ಆಶ್ಚರ್ಯವೂ, ಮಡಿವಂತಿಕೆಯೂ ತುಂಬಿಕೊಂಡಿತ್ತು. ನನ್ನ ಧ್ವನಿ ನನಗೇ ಕೇಳಿ, ಹಾಗೆ ಕೇಳಿದ್ದು ತಪ್ಪು ಎಂದೆನಿಸಿ ಹಲ್ಲು ಕಚ್ಚಿದ್ದೆ. ಆದರೂ ನನ್ನ ಮುಖದಲ್ಲಿನ ಭಾವನೆಯನ್ನು ತಡೆ ಹಿಡಿಯಲು ಆಗಲಿಲ್ಲ. ಅದು ಅವಳಿಗೂ ಕಂಡಿತೇನೋ.

'ಯಾಕೆ? ಈ ಕೆಲಸ ತಪ್ಪು ಅಂತ ನಿಮ್ಮ ಅನಿಸಿಕೆ ಅಲ್ವ?' ಎಂದು ಅವಳು ಇಂಗ್ಲೀಷಿನಲ್ಲಿ ನೇರವಾಗಿ ಕೇಳಿದಾಗ ಏನು ಹೇಳಬೇಕೆಂದು ತಿಳಿಯದೇ ತಡವರಿಸಿದೆ.

ಲೆಂಜಿ ಸ್ಟ್ರಿಪ್ ಕ್ಲಬ್‌ನಲ್ಲಿ ಕೆಲಸ ಮಾಡುತ್ತಿದ್ದಳು. ರಾತ್ರಿ ಎಂಟು ಗಂಟೆಗೆ ಶುರುವಾಗುವ ಅವಳ ಕೆಲಸ ಮಧ್ಯರಾತ್ರಿ ಎರಡು ಗಂಟೆಯವರೆಗೆ ನಡೆಯುತ್ತಿತ್ತು. ನಾನ್ಯಾವತ್ತೂ ಸ್ಟ್ರಿಪ್ ಕ್ಲಬ್ಬಿಗೆ ಹೋಗಿಲ್ಲ. ಆದರೆ ಸಿನಿಮಾಗಳಲ್ಲಿ ನೋಡಿದ್ದೇನೆ. ಕತೆಗಳಲ್ಲಿ, ಕಾದಂಬರಿಗಳಲ್ಲಿ ಓದಿದ್ದೇನೆ. ಅಲ್ಲಿರುವ ಬೆತ್ತಲೆ ವಾತಾವರಣದ ಹಿನ್ನೆಲೆಯನ್ನು ಅರಿಯದೇ ಇರುವಷ್ಟು ಮುಗ್ಧತನವಾಗಲೀ, ವಯಸ್ಸಿನ ಕೊರತೆಯಾಗಲೀ ನನಗಿಲ್ಲ. ನಲವತ್ತು ವರ್ಷಗಳನ್ನು ದಾಟಿಕೊಂಡು ಬಂದಿರುವ ನನ್ನ ಜೀವನದಲ್ಲಿ ಸ್ಟ್ರಿಪ್ ಕ್ಲಬ್ ಹೊಸದೇನೂ ಅಲ್ಲ. ಆದರೆ ಅದು ನಾನು ಯಾವತ್ತು ಕಣ್ಣಾರೆ ಕಂಡಿರದ, ದೂರದಿಂದಲೇ ಕೇಳಿದ, ನನ್ನ ಕಲ್ಪನೆಗಳಲ್ಲೇ ತೆರೆದುಕೊಂಡಿರುವ ಜಗತ್ತು.

'ಎಲ್ಲ ಕೆಲಸಗಳಂತೆಯೇ ಇದೂ ಒಂದು ಕೆಲಸ. ಇಲ್ಲಿ ಟಿಪ್ಸ್ ಚೆನ್ನಾಗಿ ಸಿಗುತ್ತದೆ ಎಂಬ ಕಾರಣಕ್ಕೆ ನಾನು ಈ ಕೆಲಸ ಮಾಡ್ತೇನೆ' ಎಂದು ಲೆಂಜಿ ನಿರ್ಭಿಡೆಯಿಂದ ಹೇಳಿದಳು.

ಕ್ಲಬ್ಬಿಗೆ ಎಂತೆಂತಹ ಜನ ಬರುತ್ತಾರೋ. ಅವರ ವಿಕೃತಿ ಏನಿರುತ್ತದೋ. ಅವರೆಲ್ಲರ ಮುಂದೆ ಈ ಹುಡುಗಿ ಕಂಬವೊಂದನ್ನು ಸುತ್ತುತ್ತ ಬಟ್ಟೆ ಬಿಚ್ಚುತ್ತ ಬೆತ್ತಲಾಗುವುದು ನನಗೆ ಸರಿ ಕಾಣಿಸಲಿಲ್ಲ. ಅವಳ ಪಾಡು ಅವಳಿಗೆ ಎಂದುಕೊಂಡು ನಾನು ಸುಮ್ಮನಾದೆ. ನನ್ನ ಮೌನವನ್ನು ಕಂಡು ಲೆಂಜಿ ನಗುತ್ತ ಹೇಳಿದಳು.

'ಗೀಥಾ... ನಂದು ಥಿಯೇಟರ್ ಕೋರ್ಸ್ ಆಗಿದೆ. ನಟಿ ಆಗ್ಬೇಕು ಅಂತ ನಾನು ಸುಮಾರು ಕಡೆ ಕೆಲಸ ಹುಡುಕಿದೆ. ಯಾರೂ ಅವಕಾಶ ಕೊಡಲಿಲ್ಲ. ನಾನು ಕಲಿತಿರೋ ವಿದ್ಯೆಗೆ ನನಗೆ ವಾಲ್‌ಮಾರ್ಟ್ ಟಾರ್ಗೆಟ್‌ಗಳಲ್ಲಿ ಸೇಲ್ಸ್ ರೆಪ್ರಸೆಂಟೆಟೀವ್ ಆಗಿ ಕೆಲಸ ಸಿಗುತ್ತೆ. ಅಲ್ಲಿ ಬೆಳಿಗ್ಗೆಯಿಂದ ಸಂಜೆಯವರೆಗೆ ದುಡಿದಾಗ ಒಂದಿಷ್ಟು ಕೊಡ್ತಾರೆ. ಅದು ಎಲ್ಲಿ ಸಾಲತ್ತೆ ಹೇಳಿ? ಈ ಕೆಲಸ ನನಗೆ ಆಕರ್ಷಣೀಯವಾಗಿ ಕಂಡಿತು. ಮನೆಯಲ್ಲಿ ತಮ್ಮ ತಂಗಿ ಇದ್ದಾರೆ. ಅವರಿನ್ನೂ ಓದ್ತಾ ಇದ್ದಾರೆ. ಅಮ್ಮ ಏನೂ ಕೆಲಸ ಮಾಡೋದಿಲ್ಲ, ಕುಡುಕಿ. ಯಾವಾಗಲೂ ಮನೇಲೇ ಇರ್ತಾಳೆ. ಅಷ್ಟು ಹೊಟ್ಟೆಗಳನ್ನ ಸಾಕೋದಕ್ಕೆ ದುಡ್ಡು ಬೇಕು. ಆಮೇಲೆ ನನಗೂ ಅದು ಇದು ಕೊಳ್ಳಬೇಕು ಅನ್ನೋ ಆಸೆ ಇರತ್ತೆ. ಈಗ ಆ ಆಸೆಗಳನ್ನು ಹತ್ತಿಕ್ಕಿಕೊಂಡರೆ ಮುಂದೆ ಅವಕಾಶವಿದ್ದರೂ ಅನುಭವಿಸೋ ಅಷ್ಟು ವಯಸ್ಸು, ಆಸಕ್ತಿ ಎರಡೂ ಇರೋದಿಲ್ಲ' ಎಂದು ಅವಳು ಹೇಳಿದಾಗ ನನಗೆ ಅವಳ ಪರಿಸ್ಥಿತಿಯ ಬಗ್ಗೆ ಅನುಕಂಪವೂ ಮತ್ತು ಎಲ್ಲವನ್ನೂ ನೇರವಾಗಿ ಕಣ್ಣಲ್ಲಿ ಕಣ್ಣಿಟ್ಟು ಹೇಳಿದ್ದರ ಬಗ್ಗೆ ಮೆಚ್ಚುಗೆಯೂ ಮೂಡಿತ್ತು.

ನನಗೆ ಜನರೊಡನೆ ಸುಲಭವಾಗಿ ಬೆರೆತು ಅಭ್ಯಾಸವಿಲ್ಲ. ಅವರಾಗಿ ಮಾತನಾಡಿಸಿದರೆ ಒಂದೆರಡು ಮಾತುಗಳನ್ನಾಡುತ್ತೇನೆಯೇ ಹೊರತು ನಾನಾಗಿಯೇ ಯಾವತ್ತೂ ಮಾತು ಬೆಳೆಸಿದವಳಲ್ಲ. ಗುಹೆಯೊಳಗಿನ ಸನ್ಯಾಸಿ ನಾನು. ಆದರೆ ನನಗೆ ಲೆಂಜಿ ಇಷ್ಟವಾದಳು. ನಾವಿಬ್ಬರು ಮಾತನಾಡುತ್ತ ಕುಳಿತಿದ್ದಾಗಲೇ ಮೀನಾ ನಮ್ಮನ್ನೆಲ್ಲ ಕರೆದಳು. ಅಲ್ಲಿ ಇಲ್ಲಿ ಚದುರಿದ್ದ, ಹರಟೆಗಳಲ್ಲಿ ಮುಳುಗಿಹೋಗಿದ್ದ ಜನ ಜಡವಾದ ಕಾಲುಗಳನ್ನು ಹೊತ್ತು ಮೀನಾಳ ಸುತ್ತ ನೆರೆದರು.

'ವಾಟ್ಸಾಪ್ ಗ್ರೂಪಿಗೆ ಶಿವಾನಿಯ 'ಹೌ ಟು ಡಿಲೀಟ್ ನೆಗೆಟಿವಿಟಿ ಫ್ರಾಮ್ ಮೈಂಡ್' ಯೂಟ್ಯೂಬ್ ವಿಡಿಯೋ ಕಳಿಸಿದ್ದೇನೆ. ಟೇಕ್ ಅ ವಾಕ್ ಆಂಡ್ ಲಿಸನ್ ಟು ಇಟ್' ಎಂದು ಆದೇಶಿಸಿದಳು ಮೀನಾ.

ಮೀನಾ ನನ್ನ ಯೋಗ ಟೀಚರ್. ನಮ್ಮ ಮನೆಯಿಂದ ಕೇವಲ ಹತ್ತೇ ನಿಮಿಷ ದೂರದಲ್ಲಿರುವ ಅವಳ ಮನೆಯಲ್ಲಿ 'ಯೋಗಸುಖಂ' ಎಂಬ ಹೆಸರಿನಲ್ಲಿ ಯೋಗ ತರಗತಿಗಳನ್ನು ನಡೆಸುತ್ತಾಳೆ. ದಿನಕ್ಕೆ ಐದಾರು ಬ್ಯಾಚುಗಳು ನಿರಂತರವಾಗಿ ನಡೆಯುತ್ತವೆ. ಬೆಳಗಿನ ಎಂಟು ಗಂಟೆಗೆ ಶುರುವಾಗುವ ಬ್ಯಾಚ್‌ನಲ್ಲಿ ನಾನೂ ಒಬ್ಬಳು. ನನ್ನನ್ನೂ

ಸೇರಿಸಿ ಒಟ್ಟು ಇಪ್ಪತ್ತು ಜನರಿದ್ದಾರೆ ನಮ್ಮ ಬ್ಯಾಚಿನಲ್ಲಿ. ಬಹುತೇಕರು ಭಾರತೀಯರು. ನಾಲ್ಕೈದು ಜನ ವಿದೇಶಿಗರು ಇದ್ದಿರಬೇಕು. ಅದರಲ್ಲಿ ಲೆಂಜಿಯೂ ಒಬ್ಬಳು. ನಾನು ಇಲ್ಲಿಗೆ ಸೇರಿ ಈಗಿನ್ನೂ ಹದಿನೈದು ದಿನಗಳಾಗಿರುವುದರಿಂದ ನನಗೆ ಹೆಚ್ಚು ಜನರ ಪರಿಚಯವಿಲ್ಲ. ಇವತ್ತು ಭಾನುವಾರ. ಪ್ರತಿ ತಿಂಗಳಿಗೊಮ್ಮೆ ಮೀನಾ ಔಟ್‌ಡೋರ್ ಯೋಗ ಹಮ್ಮಿಕೊಳ್ಳುತ್ತಾಳೆ. ಒಂದು ದಿನದ ಕಾಲ ನಿಸರ್ಗದ ಮಡಿಲಿನಲ್ಲಿ ಪಿಕ್‌ನಿಕ್ ತರಹ ಮಾಡಿದರೆ ನಮ್ಮ ದೇಹ ಮತ್ತು ಮನಸ್ಸಿಗೆ ಆರಾಮವೆನ್ನಿಸುತ್ತದೆ ಎಂದು ಅವಳ ಅಂಬೋಣ. ಬೆಳಗ್ಗೆ ಸೂರ್ಯ ನಮಸ್ಕಾರ ಆಯಿತು. ನಂತರ ದೋಸೆಯ ಕಾರ್ಯಕ್ರಮ. ಈಗ ಶಿವಾನಿಯ ಮಾತುಗಳನ್ನು ಕೇಳುವ ಕೆಲಸ.

ಕಿವಿಗೆ ಇಯರ್ ಫೋನ್ ಸಿಕ್ಕಿಸಿಕೊಂಡು ಶಿವಾನಿಯ ಮಾತುಗಳನ್ನು ಕೇಳುತ್ತ ಹಸಿರನ್ನೇ ಹೊತ್ತ ಆ ಪಾರ್ಕಿನಲ್ಲಿ ಸುತ್ತು ಹಾಕಿದೆ. ಕೇಳಿ ಮುಗಿಸುವ ಹೊತ್ತಿಗೆ ಮಧ್ಯಾಹ್ನ ಎರಡು ಗಂಟೆ. ಮೀನಾ ಅವಳು ತಂದಿದ್ದ ಕಲ್ಲಂಗಡಿ ಹಣ್ಣುಗಳನ್ನು ಹೆಚ್ಚಿ ಎಲ್ಲರಿಗೂ ಹಂಚಿದಳು. ನಂತರ ಎಲ್ಲರು ತಮ್ಮ ಜೀವನದಲ್ಲಿ ನಡೆದ ಯಾವುದೋ ಒಂದು ಕಹಿ ಘಟನೆಯನ್ನು ಹಂಚಿಕೊಳ್ಳಬೇಕೆಂದು ಸೂಚಿಸಿದಳು. ಒತ್ತಾಯವೇನಿರಲಿಲ್ಲವಾದ್ದರಿಂದ ನಾನು ಮುಂದಾಗಲಿಲ್ಲ. ಲೆಂಜಿ ಥಿಯೇಟರ್ ಕೋರ್ಸ್ ಮುಗಿಸಿದ ನಂತರ ಕೊಟ್ಟ ಆಡಿಷನ್ ಬಗ್ಗೆ ಮಾತನಾಡಿದಳು. ಆಯ್ಕೆಯಾಗಿದ್ದೀರಿ ಎಂದು ಹೇಳಿದ್ದರಂತೆ. ಇವಳು ಬಹಳ ಖುಷಿಯಲ್ಲಿ ಎಲ್ಲರಿಗೆ ಸುದ್ದಿ ಹೇಳಿ ಇನ್ನೇನು ತಾನು ಮಂಚ ಹತ್ತಿ ಅಭಿನಯಿಸಿಯೇ ಬಿಟ್ಟೆ ಎನ್ನುವಷ್ಟು ಸಂಭ್ರಮಿಸಿದ್ದಳಂತೆ. ಆದರೆ ಒಂದು ವಾರದ ನಂತರ ಅವರು ಕರೆ ಮಾಡಿ ಆ ಪಾತ್ರಕ್ಕೆ ಬೇರೆ ಯಾರನ್ನೋ ಹಾಕಿಕೊಂಡಿರುವುದಾಗಿ ಹೇಳಿ ಕಾರಣವನ್ನೂ ಕೊಡದೇ ಕೆಲಸ ಮುಗಿಸಿಬಿಟ್ಟರಂತೆ. ಅವಳು ಅದನ್ನು ಹೇಳಿಕೊಂಡ ರೀತಿ, ಅವಳ ಹೂ ಅರಳುವಂತಹ ಮುಗುಳ್ನಗು, ಕಹಿ ಘಟನೆಯನ್ನು ಸಹ ಒಂದಿನಿತೂ ಭಾವಾವೇಶವಿಲ್ಲದೆ ಹೇಳಿದ್ದೆಲ್ಲವು ನನಗೆ ಇಷ್ಟವಾಯಿತು.

ಸಂಜೆಯಾಗುವ ಹೊತ್ತಿಗೆ ಲೆಂಜಿ ನನಗೆ ಹಗ್ ಮಾಡಿ ಬೀಳ್ಕೊಡುವಷ್ಟು ಹತ್ತಿರವಾದಳು.

ಲೆಂಜಿಯ ಪರಿಚಯವಾದ ನಂತರ ನನಗೆ ರಾತ್ರಿಯಲ್ಲಿ ನಡೆಯುವ ಈ ನೈಟ್ ಕ್ಲಬ್ಬುಗಳ ಕರಾಳ ಪ್ರಪಂಚದ ಅರಿವಾಗತೊಡಗಿತು. ಅಲ್ಲಿಯವರೆಗೂ ಅದು ಅವರವರ ಕರ್ಮ ಎಂಬ ಅಭಿಪ್ರಾಯವನ್ನು ಹೇರಿಕೊಂಡಿದ್ದ ನನಗೆ ಅದೂ ಒಂದು ಆಯ್ಕೆ ಮತ್ತು ಗೌರವದ ಕೆಲಸ ಎಂದು ಲೆಂಜಿಯಿಂದ ಅರ್ಥವಾಗತೊಡಗಿತು. ಲೆಂಜಿ ತನ್ನ ಸಮಸ್ಯೆಗಳನ್ನು ನನ್ನ ಮುಂದೆ ಹೇಳಿಕೊಳ್ಳತೊಡಗಿದಳು.

'ದುಡಿದಿದ್ದೆಲ್ಲ ನಮಗೆ ಬರೋದಿಲ್ಲ. ಎಷ್ಟೇ ಬಂದರೂ ಅದರಲ್ಲಿ ಅರ್ಧವನ್ನು ಕ್ಲಬ್ ಓನರಿಗೆ ಕೊಡಬೇಕು. ಸ್ಟ್ರಿಪ್ಪರ್ ಆಗ್ತೀನಿ ಅಂತ ಬರೋ ಹುಡುಗೀರಿಗೆ ಲೆಕ್ಕ ಇಲ್ಲ. ನಮ್ಮನ್ನ ಯಾವಾಗ ಬೇಕಾದ್ರೂ ಕಿತ್ತುಹಾಕಬಹುದು. ಅದಕ್ಕೆ ತಿಂಗಳಿಗೆ ಇಂತಿಷ್ಟು ಅಂತ ನಮ್ಮನ್ನ ಆ ಕೆಲಸದಲ್ಲಿ ಉಳಿಸಿಕೊಳ್ಳಲಿಕ್ಕೆ ಕೊಡಬೇಕು. ಆಮೇಲೆ ಪ್ರತಿದಿನದ ಕೊನೆಗೆ ದುಡ್ಡು ಕೊಡುವಾಗ ದಂಡ ಅಂತ ಇಷ್ಟುದ್ದದ ಲಿಸ್ಟ್ ಇಟ್ಟುಕೊಂಡು ಕೂತಿರ್ತಾನೆ

ಮಹಾರಾಯ. ಸ್ಟೇಜ್ ಮೇಲೆ ಬೇಗ ಬೇಗ ಬಟ್ಟೆ ತೆಗೆಯಲಿಲ್ಲವೆಂದ್ರೆ ದಂಡ, ಯಾವುದಾದ್ರೂ ಗಿರಾಕಿ ತನ್ನ ತೊಡೆಯ ಮೇಲೆ ಕೂರು ಅಂದಾಗ ನಾವು ಇಲ್ಲ ಅಂದ್ರೆ ದಂಡ, ಅವರು ಕುಡಿಸಲು ಬಂದಿದ್ದನ್ನು ಕುಡಿಯದೇ ಇದ್ದರೆ ದಂಡ.. ಎಲ್ಲ ಸೇರಿ ಕೊನೆಗೆ ನಮ್ಮ ಕೈಗೆ ದುಡಿದಿದ್ದರಲ್ಲಿ ಒಂದು ನಾಕಂಶ ಭಾಗದಷ್ಟು ಸಹ ಬರೋದಿಲ್ಲ. ಆದರೂ ಬೇರೆ ಕೆಲಸಗಳಿಗೆ ಹೋಲಿಸಿದರೆ ಅದು ಹೆಚ್ಚೇ. ಅದೂ ಅಲ್ಲದೇ ಹಗಲಿನಲ್ಲಿ ಮಲಗುವ ಸದವಕಾಶ ಯಾರಿಗೆ ಸಿಗುತ್ತದೆ ಹೇಳಿ? ನಿದ್ದೆ ಬರಲಿಲ್ಲವೆಂದರೆ ಮಾಲ್, ಶಾಪಿಂಗ್ ಅಂತೆಲ್ಲ ಆರಾಮಾಗಿ ಸುತ್ತಾಡಬಹುದು. ವೀಕೆಂಡ್ ಅಂತ ಕಾಯಬೇಕಿಲ್ಲ. ಬೇರೆ ಯಾವುದೇ ಕೆಲಸದಲ್ಲಿ ಇಷ್ಟು ಸಮಯದ ಅನುಕೂಲ ಮತ್ತು ದುಡ್ಡು ಇರೋದಿಲ್ಲ ಗೀಥಾ' ಎಂದು ವಿವರಿಸಿದ್ದಳು.

ಸ್ಟ್ರಿಪ್‌ನಲ್ಲಿ ಕೆಲಸ ಮಾಡುವ ಹುಡುಗಿಯರು ಅದು ಹೇಗೆ ಅಷ್ಟು ಜನರೆದುರಿಗೆ ಬೆತ್ತಲಾಗುತ್ತಾರೆ ಎಂದು ಲೆಂಜಿಯ ಜೊತೆಗಿನ ಒಡನಾಟದಿಂದ ಅನ್ನಿಸತೊಡಗಿತ್ತು. ಬಟ್ಟೆ ಬದಲಾಯಿಸುವಾಗ ಒಬ್ಬಳೇ ಇದ್ದರೂ ಎಲ್ಲವನ್ನೂ ಮುಚ್ಚಿಟ್ಟುಕೊಂಡು ಬದಲಾಯಿಸುವಷ್ಟು ಸಂಕೋಚ ನನಗೆ. ಅದು ಕೀಳರಿಮೆ ಎಂದು ಲೆಂಜಿಯ ಸ್ನೇಹದಿಂದ ಅರ್ಥವಾಗತೊಡಗಿತ್ತು. ಬೆತ್ತಲಾಗಿ ನನ್ನನ್ನು ನಾನೇ ಕನ್ನಡಿಯಲ್ಲಿ ನೋಡಿಕೊಳ್ಳಲು ಅದೆಷ್ಟೇ ಪ್ರಯತ್ನಪಟ್ಟರೂ ನನ್ನ ಕೈಲಾಗಲಿಲ್ಲ. ಹೊಟ್ಟೆಯ ಸುತ್ತಲಿನ ಬೊಜ್ಜು ನನ್ನನ್ನು ಪ್ರಪಾತಕ್ಕೆ ತಳ್ಳುತ್ತಿತ್ತು. 'ಇನ್ನೇನು ವಯಸ್ಸಾಯ್ತು, ದೇಹ ಸೌಂದರ್ಯವನ್ನು ಕಾಪಿಟ್ಟುಕೊಂಡು ಮಾಡುವುದಾದರೂ ಏನಿದೆ' ಎಂದು ಇಷ್ಟು ದಿನ ಅಂದುಕೊಂಡಿದ್ದೆ. ಆದರೆ ಅದು ನಾನೇ ಮೈಮೇಲೆ ಎಳೆದುಕೊಂಡ ವೈರಾಗ್ಯ ಎಂದು ಈಗ ಅರ್ಥವಾಗುತ್ತಿದೆ.

ಲೆಂಜಿಗೆ ಅವಳ ದೇಹದ ಬಗ್ಗೆ, ಬದುಕಿನ ಬಗ್ಗೆ ಇದ್ದ ಪ್ರೀತಿ ನನ್ನನ್ನು ಇನ್ನಿಲ್ಲದಂತೆ ಸೆಳೆಯತೊಡಗಿತ್ತು. ಇಷ್ಟು ಚೆಂದದ ಹುಡುಗಿ ಅರೆ ಬೆತ್ತಲಾದರೆ ಯಾವ ಗಂಡಸು ನೋಡಲಿಕ್ಕೆ ಇಷ್ಟಪಡುವುದಿಲ್ಲ ಎಂದು ಲೆಂಜಿ ತನ್ನ ಕೆಲಸದ ಬಗ್ಗೆ ಮಾತನಾಡುವಾಗಲೆಲ್ಲ ಅಂದುಕೊಳ್ಳುತ್ತಿದ್ದೆ. ಆದರೆ ಲೆಂಜಿ ತನ್ನ ಜೊತೆಗೆ ಎಲ್ಲ ತರಹದ ಮೈ ಮಾಟದ ಹುಡುಗಿಯರೂ ಇದ್ದಾರೆ ಎಂದು ಹೇಳಿ ನನ್ನನ್ನು ಇನ್ನಷ್ಟು ಅಚ್ಚರಿಗೊಳಿಸಿದಳು. 'ಸ್ಟೇಜಿನ ಮೇಲೆ ಮ್ಯೂಸಿಕ್‌ಗೆ ತಕ್ಕಂತೆ ಮೈ ಬಳುಕಿಸುತ್ತಾ ಜನರ ಗಮನವನ್ನೆಲ್ಲ ತನ್ನತ್ತ ಸೆಳೆಯುವುದರಲ್ಲಿ ಥ್ರಿಲ್ ಇದೆ' ಎಂದು ಲೆಂಜಿ ಹೇಳಿದ್ದು ನನ್ನ ಊಹೆಗೆ ಮೀರಿದ್ದಾಗಿತ್ತು. ಸ್ಟ್ರಿಪ್ ಕ್ಲಬ್ ಸೇರಿದಾಗಿನಿಂದ ಅವಳಿಗೆ ಹಣಕ್ಕೆ ಕೊರತೆಯಾಗಿರಲಿಲ್ಲ. ಇನ್ನೊಂದು ವರ್ಷ ಹೀಗೆ ದುಡಿದರೆ ಅಮೆರಿಕಾದಲ್ಲಿಯೇ ತುಟ್ಟಿ ಮನೆಗಳಿರುವ ಸ್ಯಾನ್ ಫ್ರಾನ್ಸಿಸ್ಕೋದಲ್ಲಿ ಮೂರು ಬೆಡ್‌ರೂಮಿನ ಮನೆಯನ್ನು ತೆಗೆದುಕೊಳ್ಳುವ ಇರಾದೆಯಿರುವುದಾಗಿ ಹೇಳಿದ್ದಳು ಲೆಂಜಿ.

ಇತ್ತೀಚಿಗೆ ನನ್ನ ಮಾತುಗಳಲ್ಲಿ ಲೆಂಜಿ ಒಮ್ಮೆಯಾದರೂ ಹಾದು ಹೋಗುತ್ತಿದ್ದಳು. ಅವಳನ್ನು ಮನೆಗೆ ಕರೆಯುವ ಮನಸ್ಸಿದ್ದರೂ ಮನೆಯಲ್ಲಿರುವ ಹೇಮಂತನ ತಂದೆ ತಾಯಿಗೆ ಅವಳ ಬಗ್ಗೆ ಗೊತ್ತಾಗಿ ಮನಸ್ತಾಪ ಹುಟ್ಟುವುದು ಬೇಡ ಎಂದು ಸುಮ್ಮನಾಗಿದ್ದೆ. ಅವಳು ಜೀವನವನ್ನು ಎದುರಿಸುವ ಛಲ ನನಗೆ ಬಹಳ ಇಷ್ಟವಾಗುತ್ತಿತ್ತು. ಹದಿನಾರನೇ

ವಯಸ್ಸಿನವರೆಗೂ ಅವಳಿದ್ದದ್ದು ವ್ಯಾನ್‌ನಲ್ಲಿ. ಆ ವ್ಯಾನಿನೊಳಗೇ ಅಡುಗೆ, ಸ್ನಾನ, ಮಲಗುವುದು ಎಲ್ಲ! ಇವತ್ತು ಈ ಪಾರ್ಕು, ನಾಳೆ ಮತ್ತೊಂದು ಪಾರ್ಕು ಎಂದು ತಿರುಗುವ ಗಾಲಿಗಳ ಮೇಲೆ ಬೆಳೆದ ಲೆಂಜಿ ನೋಡಿದ ಬದುಕೇ ಬೇರೆ. ದೊಡ್ಡವಳಾಗುತ್ತ ಆ ವ್ಯಾನ್ ಲೈಫ್‌ನಿಂದ ಹೊರಬರಬೇಕು ಎಂಬುದೇ ಅವಳ ಗುರಿಯಾಗಿತ್ತಂತೆ, ಅಷ್ಟು ವಾಕರಿಸಿಕೊಂಡಿದ್ದಾಳೆ ಆ ಬದುಕನ್ನು. ಸ್ಟ್ರಿಪ್ ಕೆಲಸದಿಂದಾಗಿ, ಅಲ್ಲಿ ಸಿಗುವ ಧಾರಾಳ ಹಣದಿಂದಾಗಿಯೇ ಆ ವ್ಯಾನ್‌ನಿಂದ ಹೊರಬಂದು ಪುಟ್ಟ ಸ್ಟುಡಿಯೋ ಒಂದನ್ನು ಬಾಡಿಗೆಗೆ ತೆಗೆದುಕೊಳ್ಳುವಂತಾಗಿದ್ದು. ಅದಕ್ಕಾಗಿಯೇ ಅವಳಿಗೆ ತನ್ನ ಕೆಲಸದ ಬಗ್ಗೆ ಗೌರವವಿದೆ. 'ಬೇರೆಯವರು ಏನಾದ್ರೂ ಅಂದ್ಕೊಳ್ಳಿ ಗೀಥಾ. ನಮಗೆ ಎಲ್ಲ ಸರಿ ಅನ್ಸಿದ್ರೆ ಸಾಕು ಅಲ್ವ?' ಎಂದು ಅವಳು ಕೇಳುವಾಗ ನಾನು ನಿರುತ್ತರಳಾಗುತ್ತೇನೆ. ಈಗ ಲೆಂಜಿ ಮನೆಯ ಯಜಮಾನಿ. ತಂಗಿ, ತಮ್ಮನನ್ನು ತನ್ನ ಜೊತೆ ಇಟ್ಟುಕೊಂಡು ಅವರನ್ನು, ಅವರ ಖರ್ಚುವೆಚ್ಚವನ್ನು ನೋಡಿಕೊಳ್ಳುತ್ತಿದ್ದಾಳೆ. ಅವಳ ಕುಡುಕಿ ಅಮ್ಮ, ಮಕ್ಕಳ ಮೇಲೆ ಕರುಣೆ ಹುಟ್ಟಿದಾಗ ಇವರ ಬಳಿ ಬಂದು, ಗಂಡನ ಮೇಲೆ ಮೋಹ ಉಕ್ಕಿದಾಗ ಅವನಿರುವೆಡೆಗೆ ಓಡಾಡುತ್ತ ಮಕ್ಕಳ ಪಾಲಿಗೆ ಇದ್ದೂ ಇಲ್ಲದಂತಿರುವ ಜೀವಿ. ಬೆನ್ನಿಗೆ ಇಷ್ಟೆಲ್ಲ ಕಷ್ಟಗಳ ಮೂಟೆಯಿದ್ದರೂ ಲೆಂಜಿ ಸದಾ ಹಸನ್ಮುಖಿ. ಅವಳು ಕೆಟ್ಟ ದಾರಿ ಹಿಡಿಯಬಹುದಾದ ಎಲ್ಲ ಅವಕಾಶಗಳು ಅವಳು ಮಾಡುವ ಕೆಲಸದಲ್ಲಿವೆ. ನಾನಾ ನಮೂನಿಯ ಕುಡುಕರು, ಮಾದಕವಸ್ತು ಪ್ರಿಯರು ಅವಳಿರುವ ಕ್ಲಬ್ಬಿಗೆ ಬರುತ್ತಾರೆ. ಆದರೆ ಲೆಂಜಿ ಮಾತ್ರ ತನ್ನ ಪಾಲಿನ ಕೆಲಸವನ್ನು ಮುಗಿಸಿ ಮನೆಯ ದಾರಿ ಹಿಡಿಯುವ ಸೀದಾ ಸಾದಾ ಹುಡುಗಿ, ಕೆಸರಿನಲ್ಲಿ ಹೊಳೆಯುವ ಕಮಲದ ಹಾಗೆ.

ನಾನು ಅವಳನ್ನು ಎಷ್ಟು ಹಚ್ಚಿಕೊಂಡಿದ್ದೆನೆಂದರೆ ಅವಳನ್ನು ಬಿಟ್ಟು ಹೊರಡಲು ನನಗೆ ಮನಸ್ಸಾಗುತ್ತಿರಲಿಲ್ಲ. ಕ್ಲಾಸು ಮುಗಿದ ಮೇಲೂ ನಾವಿಬ್ಬರು ಮಾತನಾಡುತ್ತ ಕುಳಿತಿರುತ್ತಿದ್ದೆವು. ಅವಳಿಗೆ ನಮ್ಮ ಭಗವದ್ಗೀತೆಯನ್ನು ತಿಳಿದುಕೊಳ್ಳುವ ಹಂಬಲ. ಅಷ್ಟೋ ಇಷ್ಟೋ ಗೊತ್ತಿದ್ದ ನನಗೆ ಅವಳಿಗೋಸ್ಕರ ಪೂರ್ತಿ ತಿಳಿದುಕೊಂಡು ಅವಳಿಗೆ ಹೇಳಿ ಕೊಡಬೇಕೆಂಬ ಆಸೆ. ಅದಕ್ಕಾಗಿಯೇ ಮನೆಯ ಕಪಾಟಿನಲ್ಲಿ ಯಾವತ್ತೋ ಭಾರತಕ್ಕೆ ಹೋದಾಗ ಓದಬೇಕು ಎಂದು ತಂದಿಟ್ಟುಕೊಂಡು ಮರೆತೇಹೋಗಿದ್ದ ಭಗವದ್ಗೀತೆಯ ಪುಸ್ತಕವನ್ನು ತೆರೆದು ಪ್ರತಿಯೊಂದು ಶ್ಲೋಕದ ಅರ್ಥ, ಹಿನ್ನೆಲೆಯನ್ನು ಅಭ್ಯಾಸ ಮಾಡತೊಡಗಿದ್ದೆ. ಅವಳೂ ಸಹ ನನ್ನನ್ನು ಅಷ್ಟೇ ಹಚ್ಚಿಕೊಂಡಿದ್ದಳು. ನಾನು ಪ್ರತಿ ದಿನವೂ ತಪ್ಪದೇ ಕ್ಲಾಸಿಗೆ ಬರಲು ಅವಳೇ ಕಾರಣವೇನೋ ಎಂದು ನನಗನ್ನಿಸುತ್ತಿರುತ್ತದೆ. ನನಗೂ ಮಕ್ಕಳಾಗಿದ್ದರೆ ಅವಳಷ್ಟೇ ವಯಸ್ಸಿನ ಮಗಳು ಇರುತ್ತಿದ್ದಳು ಎಂಬ ಕಾರಣವೂ ಇತ್ತೇನೋ... ಗೊತ್ತಿಲ್ಲ.

ಅವಳೇ ನನಗೆ ಇನ್ನೊಂದು ಪ್ರಪಂಚವನ್ನು ಪರಿಚಯಿಸಿದ್ದು. ನೆಟ್‌ಫ್ಲಿಕ್ಸ್‌ನಲ್ಲಿ ಹೊಸ ಶೋಗಳ ಬಗ್ಗೆ ಮಾತನಾಡಿ, ನಾನು ನೋಡಿ ಮುಗಿಸುವತನಕವೂ ಬಿಡುತ್ತಿರಲಿಲ್ಲ. ಈ ಲಿಪ್ ಬಾಮ್ ಹಚ್ಕೋ, ಹುಬ್ಬು ಹೀಗೆ ಬರಕೋ, ಕೂದಲನ್ನ ಯಾಕೆ ಕಲರ್

ಮಾಡೋದಿಲ್ಲ ಎಂದು ದುಂಬಾಲು ಬೀಳುತ್ತಿದ್ದಳು. ಅದಕ್ಕೆಲ್ಲ ಬೇಕಾದ ಸಾಮಗ್ರಿ ಸಲಕರಣೆಗಳನ್ನು ತಂದು ನಾನು ಮನೆಯಲ್ಲಿ ಕೂದಲನ್ನು ಕಲರ್ ಮಾಡಿಕೊಳ್ಳುವ ತನಕ ಲೆಂಜಿಯ ಮಾತುಗಳಿಗೆ ನಾನು ಬದ್ಧಳಾಗಿದ್ದೆ. ನನ್ನ ಈ ಹೊಸ ಪರಿಭಾಷೆ ಹೇಮಂತನಿಗೆ ಅರ್ಥವಾಗಲಿಲ್ಲವಾದರೂ ನಾನು ಮತ್ತೆ ಮೊದಲಿನಂತೆ ಚಟುವಟಿಕೆಯಿಂದ ಇದ್ದೇನೆ, ಲವಲವಿಕೆಯಿಂದ ಇರುತ್ತೇನೆ ಎಂಬುದೇ ಅವನಿಗೆ ಸಮಾಧಾನ. ನನ್ನ ಜೀವನದಲ್ಲಿ ಅವನಿಗಿಂತ ಹೆಚ್ಚಾಗಿ ಹೀಗೆ ಒಬ್ಬರು ಆತ್ಮೀಯರಾಗಬಲ್ಲರು ಎಂದೇ ನನಗೆ ಇಲ್ಲಿಯವರೆಗೆ ಅನ್ನಿಸಿರಲಿಲ್ಲ. ಲೆಂಜಿಯೊಡನೆ ಬೆಳೆದ ಈ ಹೊಸ ಬಂಧ ಹಿತವಾಗಿತ್ತು, ಚಳಿಗಾಲದಲ್ಲಿ ಸೂರ್ಯನ ಬೆಚ್ಚನೆಯ ಕಿರಣಗಳ ಹಾಗೆ.

ಆ ದಿನ ಲೆಂಜಿ ಕ್ಲಾಸಿಗೆ ಬಂದಿರಲಿಲ್ಲ. ಒಮ್ಮೊಮ್ಮೆ ಕ್ಲಬ್ಬಿನಿಂದ ಬರುವುದು ತಡವಾದರೆ ಅವಳು ಕ್ಲಾಸು ತಪ್ಪಿಸುತ್ತಿದ್ದಳು. ಆದರೆ ಮುಂದಿನ ಮೂರು ದಿನಗಳು ಸಹ ಅವಳು ಕ್ಲಾಸಿಗೆ ಬರದೇ ಹೋದಾಗ ನನಗೆ ಚಿಂತೆ ಶುರುವಾಯಿತು. ಅವಳ ನಂಬರಿಗೆ ಕರೆ ಮಾಡಿದರೆ ವಾಯ್ಸ್ ಮೇಲ್‌ಗೆ ಹೋಗುತ್ತಿತ್ತು. 'ಏನಾಯ್ತು ಈ ಹುಡುಗಿಗೆ?' ಎಂದು ತಲೆಕೆಡಿಸಿಕೊಂಡ ನನ್ನನ್ನು ಕೆಟ್ಟ ಯೋಚನೆಗಳೇ ಮುಕ್ಕುತ್ತಿದ್ದವು. ಒಂದು ವಾರ ಕಳೆದರೂ ಅವಳ ಸಂಪರ್ಕ ಸಾಧ್ಯವಾಗದೇ ಹೋದಾಗ ನಾನು ಮೀನಾಳ ಹತ್ತಿರ ಲೆಂಜಿಯ ವಿಳಾಸ ಪಡೆದು ಅದನ್ನು ಹುಡುಕಿಕೊಂಡು ಹೋದೆ. ಅದೊಂದು ಪುಟ್ಟ ಸ್ಟುಡಿಯೋ ಮನೆ. ಒಂದು ಸಣ್ಣ ಕೋಣೆಯ ಮೂಲೆಯಲ್ಲಿ ಗ್ಯಾಸು, ತಲೆಯೆತ್ತರದಲ್ಲಿ ನಾಲ್ಕು ಸಣ್ಣ ಶೆಲ್ಫುಗಳು, ಇನ್ನೊಂದು ಮೂಲೆಯಲ್ಲಿ ಪುಟ್ಟ ಬಾತ್‌ರೂಮು, ಮಧ್ಯದಲ್ಲಿದ್ದ ಅಂಗೈ ಅಗಲದ ಜಾಗದಲ್ಲಿ ಹರಡಿರುವ ಹಾಸಿಗೆಗಳು. ಲೆಂಜಿಯ ತಮ್ಮನೊಬ್ಬನೇ ಮನೆಯಲ್ಲಿದ್ದ. ಅವನಿಂದ ಲೆಂಜಿ ಆಸ್ಪತ್ರೆಯಲ್ಲಿರುವ ವಿಚಾರ ತಿಳಿಯಿತು. ಏನಾಯಿತೆಂದು ಆ ಪುಟ್ಟ ಹುಡುಗನ ಬಳಿ ಕೇಳಲು ನನಗೆ ಮನಸ್ಸು ಬರಲಿಲ್ಲ. ಅವಳು ಆರೋಗ್ಯವಾಗಿದ್ದಾಳೆ ಎಂದು ಖಾತರಿಪಡಿಸಿಕೊಂಡು ಆಸ್ಪತ್ರೆಯತ್ತ ಕಾರು ಓಡಿಸಿದೆ. ಲೆಂಜಿಗೆ ಏನಾಗಿರಬಹುದೆಂಬ ಯೋಚನೆಗಳೇ ತಲೆಯ ತುಂಬ.

ಆಸ್ಪತ್ರೆ ಸೇರಿದಾಗ ಲೆಂಜಿ ಹಾಸಿಗೆಯ ಮೇಲೆ ಮಲಗಿದ್ದಳು. ಪಕ್ಕದಲ್ಲಿ ಅವಳ ತಂಗಿ ಫೋನು ಹಿಡಿದುಕೊಂಡು ಕುಳಿತಿದ್ದಳು. ನನ್ನನ್ನು ನೋಡಿ ಲೆಂಜಿಯ ಕಣ್ಣುಗಳು ಮಿನುಗಿದವು. ಅವಳ ಮುಖದಲ್ಲಿನ ಹೊಳಪು ಹಾಗೇ ಇತ್ತಾದರೂ ಸೊರಗಿದಂತೆ ನನ್ನ ಕಣ್ಣಿಗೆ ಕಾಣಿಸಿದಳು. ಒಣಗಿಹೋದ ಕಿತ್ತಳೆ ಹಣ್ಣಿನಂತೆ ಕೆನ್ನೆಗಳು ಇಳಿದಿದ್ದವು.

'ನನ್ನ ನೆನಪಾಯ್ತಾ? ಸಾರಿ, ಫೋನ್ ಆನ್ ಮಾಡಲಿಕ್ಕೆ ಮನಸ್ಸೇ ಆಗಲಿಲ್ಲ' ಎನ್ನುತ್ತ ನಕ್ಕಳು.

'ಏನಾಯ್ತು?' ಎಂದೆ ಆಪ್ತವಾಗಿ.

'ಅದು ನಾನು ನಿಮಗೆ ಹೇಳದೇ ಇರೋ ಒಂದು ಕತೆ' ಎಂದಳು.

ಇಲ್ಲಿಯವರೆಗೂ ಲೆಂಜಿ ನನ್ನ ಬಳಿ ಎಲ್ಲವನ್ನು ಹೇಳಿಕೊಳ್ಳುತ್ತಾಳೆ ಎಂದು ಸೊಕ್ಕಿದ್ದ ನನಗೆ ಅವಳು ನನ್ನಲ್ಲಿ ಹೇಳದೇ ಮುಚ್ಚಿಟ್ಟಿರುವುದು ಬಹಳ ಗಂಭೀರವಾದ ಸಂಗತಿ

ಎಂದು ಅರಿವಾಗಿ, ಅದನ್ನು ಹಂಚಿಕೊಳ್ಳುವಷ್ಟು ಆಪ್ತತೆಯನ್ನು ನಾನು ಅವಳಿಗೆ ನೀಡಿಲ್ಲವೆಂದು ಸಂಕಟವಾಯಿತು. ಮಕ್ಕಳಿಲ್ಲದ ನಾನು ಅವಳನ್ನು ಮಗಳಂತೆ ನೋಡಿ ನನ್ನಲ್ಲಿ ಅವಳು ಅಮ್ಮನನ್ನು ಕಾಣುವಂತೆ ಹಂಬಲಿಸುತ್ತಿದ್ದೆ ಎಂದು ಅರಿವಾಗಿದ್ದು ಸಹ ಆ ಕ್ಷಣದಲ್ಲಿಯೇ.

'ಪರವಾಗಿಲ್ಲ. ನೀನು ಸರಿಹೋಗು. ಆಮೇಲೆ ಮಾತಾಡೋಣ' ಎಂದೆ ಅವಳ ಕೈ ಅಮುಕುತ್ತ.

'ಈ ಟ್ಯಾಟೂಗಳೆಲ್ಲ ಏನು ಗೊತ್ತಾ?' ನನ್ನ ಮಾತು ಕೇಳಿಸದವಳಂತೆ ಕೇಳಿದಳು.

ಹರೆಯದ ಹುಡುಗಿಯ ಶೋಕಿ ಎಂದು ನಾನು ಅರ್ಥ ಮಾಡಿಕೊಂಡಿದ್ದನ್ನು ಅವಳ ಮುಂದೆ ಬಾಯಿಬಿಟ್ಟು ಹೇಳಲಿಲ್ಲ. ಈಗಲೇ ನಾನು ಅವುಗಳನ್ನೆಲ್ಲ ಇಷ್ಟು ಹತ್ತಿರದಿಂದ ಕೂಲಂಕಷವಾಗಿ ಗಮನಿಸಿದ್ದು. ಪುಟ್ಟ ಗುಲಾಬಿ ಹೂವಿನ ಕೆಳಗೆ ದೊಡ್ಡದಾದ ಮುಳ್ಳುಗಳು, 'You Deserve More' ಎಂದು ಇಟಾಲಿಕ್ ಶೈಲಿಯಲ್ಲಿ ಉದ್ದಕ್ಕೆ ಹಾಕಿಸಿಕೊಂಡಿದ್ದ ಅಕ್ಷರಗಳು.. ಇನ್ನೂ ಏನೇನೋ ಇತ್ತು. ಅದರಲ್ಲಿ ನನ್ನ ಗಮನ ಸೆಳೆದದ್ದು 'SCARS ARE BURIED HERE' ಎಂಬ ಕೆಂಪು ಬಣ್ಣದ ಸಾಲು. ಅದರ ಮೇಲೆ ಬೆರಳಾಡಿಸಿದೆ.

'ನಾನು ಮೊದಲನೇ ಟ್ಯಾಟೂ ಹಾಕಿಸಿಕೊಂಡಿದ್ದು ಹದಿನಾರನೇ ವಯಸ್ಸಿಗೆ. ನಮ್ಮಪ್ಪ ನನ್ನನ್ನು ಮುಟ್ತಾ ಇರೋದನ್ನ ನಾನು ಮೊಟ್ಟ ಮೊದಲ ಬಾರಿಗೆ ಆ ರೀತಿಯಾಗಿ ಪ್ರತಿಭಟಿಸಿದ್ದೆ.'

ಕೇಳಿ ನನಗೆ ಆಘಾತವಾಯಿತು. 'ಓಹ್.. ಡಿಯರ್' ಎಂದೆ. ನನ್ನ ಕಣ್ಣಲ್ಲಿ ನೀರು ತುಂಬಿಕೊಳ್ಳಲು ಶುರು ಮಾಡಿತ್ತು.

'ಅವನು ಪ್ರತಿ ಸಲ ಹಾಗೆ ಮಾಡಿದಾಗಲೆಲ್ಲ ನಾನು ಒಂದೊಂದು ಟ್ಯಾಟೂ ಹಾಕಿಸಿಕೊಳ್ಳುತ್ತ ಹೋದೆ. ಈ ಎರಡು ಕೈಗಳು ಟ್ಯಾಟೂನಿಂದ ತುಂಬಿಹೋದಾಗ ಅವನ ವಿಕೃತಿಯನ್ನು ತಡೆದುಕೊಂಡ ನನ್ನ ಮೇಲೆಯೇ ಅಸಹ್ಯ ಹುಟ್ಟಿತು. ಅವತ್ತೇ ಮನೆ ಬಿಟ್ಟೆ. ಇದೆಲ್ಲ ನಮ್ಮಮ್ಮನಿಗೆ ಗೊತ್ತಿದ್ದೂ ಸುಮ್ಮನಿದ್ದಳೋ ಅಥವಾ ವ್ಯಾನ್‌ನಂತಹ ಪುಟ್ಟ ಜಾಗದಲ್ಲಿ ಮಗಳ ಮೇಲೆ ನಡೆಯುತ್ತಿದ್ದ ಅತ್ಯಾಚಾರ ಅವಳಿಗೆ ನಿಜವಾಗಿಯೂ ಗೊತ್ತಾಗದೇ ಹೋಯಿತೋ ನಂಗೆ ಇವತ್ತಿಗೂ ಗೊತ್ತಿಲ್ಲ. ಕೇಳಿದರೆ ಇಲ್ಲ ಅಂತಲೇ ಹೇಳ್ತಾಳೆ ನಮ್ಮಮ್ಮ' ಲೆಂಜಿ ಹೇಳುವಾಗ ಅವಳ ಪುಟ್ಟ ತಂಗಿ ಬಂದು ಅಕ್ಕನನ್ನು ಅಪ್ಪಿಕೊಂಡಳು.

ನನ್ನ ಧ್ವನಿ ಆಳದಲ್ಲೆಲ್ಲೋ ಕಳೆದುಹೋಗಿತ್ತು. ನನಗರಿವಿಲ್ಲದಂತೆ ಮುಷ್ಟಿಗಳು ಬಿಗಿದಿದ್ದವು.

'ಈಗ ಏನಾಯ್ತು ನಿಂಗೆ? ಯಾರು ಏನು ಮಾಡಿದ್ರು?' ನನಗೆ ಸಿಟ್ಟು ಏರುತ್ತಿದ್ದರೆ ಲೆಂಜಿ ಮಾತ್ರ ದಿಗ್ವಿಜಯ ಸಾಧಿಸಿದ ಸೈನಿಕನಂತೆ ನಿರುಮ್ಮಳವಾಗಿದ್ದಳು.

'ಅವನು ಮತ್ತೆ ಬಂದಿದ್ದ. ನಾನು ಮನೆ ಬಿಟ್ಟು ಬಂದ ನಂತರ ಅವನ ಸಮೀಪ ಹೋಗಿರಲೇ ಇಲ್ಲ. ಅವನು ದೂರದಲ್ಲಿ ಕಂಡರೆ ದಿಕ್ಕು ಬದಲಾಯಿಸುತ್ತಿದ್ದೆ. ಆದರೆ ನಾನು ಕೆಲಸ ಮಾಡುತ್ತಿದ್ದ ಕ್ಲಬ್ಬಿಗೆ ಅವನು ಬಂದಾಗ ನನಗೆ ಅಲ್ಲಿಂದ ತಪ್ಪಿಸಿಕೊಳ್ಳಲಾಗಲಿಲ್ಲ, ಹೊಟ್ಟೆಪಾಡು.'

ಹೇಳುತ್ತಿರುವಾಗ ಲೆಂಜಿಯ ಮುಖದಲ್ಲಿ ಒಂದಿನಿತೂ ಆಕ್ರೋಶವಿಲ್ಲ, ಸಿಟ್ಟಿಲ್ಲ. 'ದುಃಖೇಷು ಅನುದ್ವಿಗ್ನ–ಮನಾಃ' ಎಂಬ ಭಗವದ್ಗೀತೆಯ ಶ್ಲೋಕದಂತೆ ದುಃಖಕ್ಕೆ ಸೊರಗುವ ಜೀವವಲ್ಲ ಇದು ಎಂದು ನನಗನ್ನಿಸುತ್ತಿತ್ತು.

'ಬಂದ. ನಾನು ಸ್ಟೇಜ್ ಮೇಲೆ ಕುಣಿಯುವುದನ್ನು, ಬಟ್ಟೆ ತೆಗೆಯುವುದನ್ನು ನೋಡಿದ. ನನ್ನ ಮೈ ಚರ್ಮವನ್ನೇ ತೆಗೆದು ರಕ್ತವನ್ನೇ ಬಸಿಯುತ್ತಿದ್ದೇನೇನೋ ಎಂದು ನನ್ನ ಆತ್ಮಕ್ಕೆ ಅನ್ನಿಸುತ್ತಿತ್ತು. ಆಮೇಲೆ ಡ್ರಿಂಕ್ಸ್ ಸರ್ವ್ ಮಾಡುವಾಗ ತೊಡೆಯ ಮೇಲೆ ಕೂತುಕೋ ಎಂದ. ನಾನು ಇಲ್ಲ ಅಂದೆ. ಜೋರಾಗಿ ಮಾತನಾಡಿ ರಂಪ ಮಾಡಿದ. ಕ್ಲಬ್ ಓನರ್ ಬಂದಾಗ ಕೂರಬೇಕಾಯಿತು. ಕುಡಿಸಿದ. ಎಲ್ಲೆಲ್ಲೋ ಮುಟ್ಟಿದ. ಅಷ್ಟಕ್ಕೆ ಮುಗಿಸಿದ್ದರೆ ನಾನು ಮತ್ತದೇ ಸಿಟ್ಟಿನ, ಅಸಹ್ಯದ ಜೀವನದೊಳಗೆ ಮುಳುಗೇಳುತ್ತಿದ್ದೇನೋ.. ಆದರೆ ಅವನು ನನ್ನ ನಾಡಿ ಕತ್ತರಿಸಿ ಅವನಿಂದ ನನಗೆ ಮುಕ್ತಿ ನೀಡಿದ.'

ಲೆಂಜಿ ಹೇಳುವುದು ನನಗೆ ಅರ್ಥವಾಗಲಿಲ್ಲ.

'ಕಿಸೆಯಲ್ಲಿ ಮುಚ್ಚಿಟ್ಟುಕೊಂಡಿದ್ದ ಚಾಕುವಿನಿಂದ ಅವನು ನನ್ನ ಕೈ ನಾಡಿಯನ್ನು ಕತ್ತರಿಸಿದ. ರಕ್ತ ಹರಿಯಿತು. ನಾನು ಮೂರ್ಛೆ ಹೋದೆ. ಇಷ್ಟೆಲ್ಲ ಸಹಿಸಿಕೊಂಡ ಮೇಲೆ ಮುಂದಿನ ಜೀವನವನ್ನು ಅದು ಹೇಗೆ ದೇವರು ಕಿತ್ತುಕೊಂಡುಬಿಡ್ತಾನೆ? ಅದಕ್ಕೇ ಬದುಕಿಸಿದ. ಅವನನ್ನು ಜೈಲಿಗೆ ಹಾಕಿದರು. ಇನ್ನೆಂದೂ ನನ್ನ ಕಣ್ಣಿಗೆ ಅವನು ಕಾಣಿಸೋದಿಲ್ಲ. ನಮ್ಮಮ್ಮ ಆ ದುಷ್ಟನ ಹತ್ತಿರ ಹೋಗ್ತಾಳೆ ಅಂತ ನಾನು ಚಿಂತೆ ಮಾಡೋದು ತಪ್ಪಿತು. ನಾನು ಮಾಡಲಾಗದ್ದನ್ನು ಅವನೇ ಮಾಡಿಕೊಂಡ.'

ಅವಳ ಅಸಹಾಯಕತೆ ನನಗೆ ಅರ್ಥವಾಗಿತ್ತು. ಇಷ್ಟು ದಿನ ಇದನ್ನೆಲ್ಲ ಅವಳೊಳಗೆ ಬಚ್ಚಿಟ್ಟುಕೊಂಡು ನಗು ನಗುತ್ತಿದ್ದ ಅವಳ ಮೇಲೆ ಇನ್ನಷ್ಟು ಮಮತೆಯುಕ್ಕಿ ಅವಳ ತಲೆ ನೇವರಿಸಿದೆ.

❑

# ಮೂಕಜ್ಜಿ ಮತ್ತು ಸ್ತ್ರೀ ಸಂವೇದನೆ

ಇಂಗ್ಲಿಷ್ ಮೂಲ: **ಅರ್ಚನಾ ಮೂರ್ತಿ,** Dallas, Texas
ಕನ್ನಡಕ್ಕೆ: **ಭಾರ್ಗವ ಬಿ. ವಿ.;** Edison, New Jersey

*

ಮೂಕಜ್ಜಿಯ ಕನಸುಗಳು, ಕನ್ನಡದ ಪ್ರಮುಖ ಲೇಖಕರಾದ ಡಾ. ಶಿವರಾಮ ಕಾರಂತರ ಒಂದು ಕಾದಂಬರಿ. ಈ ಕಾದಂಬರಿಯು ಒಬ್ಬ ಮೂಕ ಅಜ್ಜಿಯ ಅತೀಂದ್ರಿಯ ಶಕ್ತಿಯ ಹಾಗು ಅದರಿಂದ ಅಜ್ಜಿಯು ತೋರ್ಪಡಿಸುವ ವಿಶೇಷ ನಡವಳಿಕೆಯ ಕುರಿತದ್ದಾಗಿದೆ. ಈ ಕಾದಂಬರಿಯಲ್ಲಿ, ಕಥೆಯ ನಿರೂಪಕ ಸುಬ್ಬರಾಯ ತನ್ನ ಅಜ್ಜಿಯೊಂದಿಗೆ ಮೂಡೂರು ಎಂಬ ಕಾಲ್ಪನಿಕ ಪಟ್ಟಣದಲ್ಲಿ ಬೆಳೆದ ತನ್ನ ಅನುಭವಗಳನ್ನು ನಿರೂಪಿಸುತ್ತಾನೆ. ತನ್ನ ಬಾಲ್ಯದಲ್ಲೇ ಮದುವೆಯಾಗಬೇಕಾಗಿ ಬಂದ ಮೂಕಾಂಬಿಕೆಯು, ಮದುವೆಯಾದ ಕೆಲ ದಿನಗಳಲ್ಲೇ ಗಂಡನನ್ನು ಕಳೆದುಕೊಂಡು ಸಣ್ಣ ವಯಸ್ಸಿನಲ್ಲಿಯೇ ವಿಧವೆಯಾದಳು. ಅವಳು ಯುವತಿಯಾಗಿದ್ದಾಗಿನಿಂದಲು, ಆಗಾಗ ಉನ್ಮಾದ ಸ್ಥಿತಿಗೆ ಹೋಗುತ್ತಿದ್ದಳು. ಆ ಸ್ಥಿತಿಯಲ್ಲಿದ್ದಾಗ ತಾನು ಕಂಡು ಕೇಳಿರದ ಎಷ್ಟೋ ಜನಗಳ ಕುರಿತಂತೆ ಅವರ ನಿಜ ವಿಷಯಗಳನ್ನು ಹೇಳಿ ಅಚ್ಚರಿ ಉಂಟುಮಾಡುತ್ತಿದ್ದಳು. ಒಮ್ಮೆ, ಹಿಂಡುಗಾನ ಅಮ್ಮನ ಪರಿಷೆಯಲ್ಲಿ ಮೈಮೇಲೆ ಭಗವತಿ ಅಮ್ಮ ಬಂದು, ತಾನು ಉಟ್ಟಿದ್ದ ಬಟ್ಟೆಯನ್ನೆಲ್ಲ ಹರಿದು ಎಲ್ಲರೆದುರು ಬೆತ್ತಲೆಯಾದಳು. ತಮ್ಮನ್ನು ಹೆತ್ತ, ಮೊಲೆಯೂಡಿಸಿ ಬೆಳೆಸಿದ, ಹಾಗೆಯೇ ತಾವೇ ಕಾಮಿಸುವ ಹೆಣ್ಣಿನ ದೇಹವೊಂದು ಹೀಗೆ ತಮ್ಮೆದುರು ಬೆತ್ತಲೆಯಾಗುತ್ತಲೇ ಓಂಜರಿದು, ಹೀಯಾಳಿಸಿದ ಊರ ಜನರನ್ನು ಹಿಗ್ಗಾಮುಗ್ಗ ಬೈದಳು. ಅವಳ ಮೈ ಮೇಲೆ ದೆವ್ವ ಬಂದಿದೆ ಎಂದು ಊರಿನ ಮಂತ್ರವಾದಿಗಳು ದೆವ್ವ ಓಡಿಸಲು ಅವಳನ್ನು ಚೆನ್ನಾಗಿ

ಹೊಡೆದು ಹಿಂಸೆ ಕೊಟ್ಟರು. ಮುಂದೆಂದೂ, ಈ ಜನರ ಸುಳ್ಳು, ಹೊಡೆತಗಳಿಗೆ ಸಿಕ್ಕಿಕೊಳ್ಳಬಾರದೆಂದು, ಮೂಕಾಂಬಿಕೆಯು ಮಾತನ್ನೇ ನಿಲ್ಲಿಸಿ ಮೂಕಿಯಾದಳು. ವಯಸ್ಸಾಗಿ, ಮುದುಕಿಯಾದ ಮೇಲೆ ಮಾತ್ರ ಮತ್ತೆ ಮಾತನಾಡಲು ಪ್ರಾರಂಭಿಸಿದ್ದು.

ಊರೆಲ್ಲ ಮೂಕಜ್ಜಿಯ ತಲೆ ಸರಿ ಇಲ್ಲ ಎಂದು ಅಸಡ್ಡೆ ತೋರಿಸುತ್ತಿದ್ದರೆ, ಸುಬ್ಬರಾಯನಿಗೆ ಮಾತ್ರ ಅಜ್ಜಿಯನ್ನು ಕಂಡರೆ ಬಲು ಪ್ರೀತಿ, ಗೌರವ. ಈ ಕಾದಂಬರಿಯ ವಸ್ತು ಮುಖ್ಯವಾಗಿ, ಸುಬ್ಬರಾಯ ಊರ ಹೊರಗಿನ ಕಾಡಿನ ಗವಿಯಲ್ಲಿ ಕಂಡ ಹಳೆ ಕಾಲದ ವಸ್ತುಗಳ ಮೇಲೆ ಕೇಂದ್ರೀಕೃತವಾಗಿದೆ. ಗವಿಯಲ್ಲಿ ಸಿಕ್ಕ ಮೂಳೆಯ ಚೂರು, ವಿಗ್ರಹದ ತುಂಡು ಮುಂತಾದ ವಸ್ತುಗಳನ್ನು ಮುಟ್ಟಿದ ಅಜ್ಜಿಯ ದಿವ್ಯ ದೃಷ್ಟಿಗೆ, ಹಿಂದಿನ ಕಾಲದಲ್ಲಿ ನಡೆಯುತ್ತಿದ್ದ ನರಬಲಿ ಮತ್ತು ಲೈಂಗಿಕ ಆಚರಣೆಗಳು ಕಾಣಿಸಿತು. ಈ ಕಾದಂಬರಿಯಲ್ಲಿ ಕಾರಂತರು ಧರ್ಮ ಮತ್ತು ಅಧ್ಯಾತ್ಮ ಕುರಿತಂತೆ ತಮಗಿರುವ ಆಲೋಚನೆ ಮತ್ತು ಧೋರಣೆಗಳನ್ನು ಅಜ್ಜಿಯ ಅತೀಂದ್ರಿಯ ದೃಷ್ಟಿ ಮತ್ತು ತಿಳಿವಳಿಕೆಯ ಮಾತುಗಳ ಮೂಲಕ ತೋರ್ಪಡಿಸಿದ್ದಾರೆ.

ಅಜ್ಜಿಯ ದಿವ್ಯದೃಷ್ಟಿಯಲ್ಲಿ ಕಂಡಂತೆ, ದೇವಿ 'ಅಮ್ಮ'ನನ್ನು ಎಲ್ಲರೂ ಪೂಜಿಸಬೇಕು. ಏಕೆಂದರೆ, ಅಮ್ಮ ಮಾತ್ರ ಹೊಸ ಜೀವವನ್ನು ಸೃಷ್ಟಿಸಬಲ್ಲಳು, ಕಾಯಬಲ್ಲಳು ಮತ್ತು ನಾಶಪಡಿಸಬಲ್ಲಳು. ಅವಳು ಇಂದ್ರ, ಅಗ್ನಿ, ವಾಯು, ವರುಣ ಮುಂತಾದ ಗಂಡು ದೇವರುಗಳಿಗಿಂತ ಹೆಚ್ಚು ಶಕ್ತಿಶಾಲಿ. ಹೆಣ್ಣು ದೇಹಕ್ಕೆ ಮಾತ್ರವೇ ಜೀವವನ್ನು ಸೃಷ್ಟಿಸುವ, ಪೋಷಿಸುವ ಶಕ್ತಿಯಿದೆ – ಗಂಡು ದೇಹದ ಸಾಮರ್ಥ್ಯ ಇದರ ಮುಂದೆ ಅತ್ಯಲ್ಪ. ಹಾಗೇ, ಅಜ್ಜಿಯ ಪ್ರಕಾರ, ಲಿಂಗ ಮತ್ತು ಯೋನಿಗಳ ಸಮಾಗಮವೇ ಅತ್ಯಂತ ಶ್ರೇಷ್ಠ ಆರಾಧನೆ. ಹೊಸ ಜೀವ ಸೃಷ್ಟಿಯ ಮುಂದೆ ಬೇರೆಲ್ಲವೂ ತೃಣಮಾತ್ರ. ಅವಳ ಪ್ರಕಾರ ಸಂಸಾರ ಬಿಟ್ಟು, ಸಮಾಜದ ಜಂಜಾಟ ತ್ಯಜಿಸಿ ದೂರ ಹೋಗುವುದೇನು ದೊಡ್ಡ ಘನಕಾರ್ಯವೂ ಅಲ್ಲ, ಆಧ್ಯಾತ್ಮಿಕವೂ ಅಲ್ಲ. ಸಮಾಜದ ಮಧ್ಯದಲ್ಲಿದ್ದು, ಜನರ ಕಷ್ಟಸುಖಗಳಿಗೆ, ಸಮಾಜದ ಆಗುಹೋಗುಗಳಿಗೆ ಸ್ಪಂದಿಸುವುದೇ ಜೀವನದ ನಿಜವಾದ ಅನುಭವ. ಅಜ್ಜಿ ಹೇಳುವಂತೆ, ಆಧ್ಯಾತ್ಮಿಕತೆ ಮತ್ತು ಸಂಸಾರ ಜೀವನ ಎರಡೂ ಯಾವಾಗಲೂ ಜೊತೆ, ಒಂದನ್ನು ಬಿಟ್ಟು ಇನ್ನೊಂದನ್ನ ಹುಡುಕಿಕೊಂಡು ಹೋಗುವುದು ಮೂರ್ಖತನ.

ಕಾರಂತರ ಮುಖ್ಯ ಉದ್ದೇಶ ಹೆಣ್ಣನ್ನೂ ಒಳಗೊಂಡ ಆಧ್ಯಾತ್ಮಿಕತೆಯ ಕಲ್ಪನೆಯ ಪ್ರತಿಪಾದನೆ. ಜೊತೆಯಲ್ಲಿ, ಕಾರಂತರು ಹೆಣ್ಣಿನ ವಿಭಿನ್ನ ಸಂಕೀರ್ಣ ಮುಖಗಳನ್ನೂ ಯಶಸ್ವಿಯಾಗಿ ಪರಿಚಯಿಸಿದ್ದಾರೆ. ಗಂಡಿನ ದೃಷ್ಟಿಕೋನದಲ್ಲಿ ಪ್ರತಿಪಾದಿಸುವ ಅವರ ಹೆಣ್ಣಿನ ಚಿತ್ರಣ ಸಮಾಜದ ವಾಸ್ತವಿಕತೆಗೆ ಚೆನ್ನಾಗಿ ಹೋಲುತ್ತದೆ. ಹಾಗೆಯೇ, ಕಾರಂತರು ಸುಬ್ಬರಾಯನು ತನ್ನ ಜೀವನದಲ್ಲಿ ಬರುವ ಹೆಣ್ಣುಗಳ ಬಗ್ಗೆ ತೋರಿಸುವ ಧೋರಣೆ, ಅವನ ಗುಣದಲ್ಲಿರುವ ನ್ಯೂನತೆಗಳನ್ನು ಪರಿಚಯಿಸುವುದರಲ್ಲಿ ಹಿಂಜರಿಯುವುದಿಲ್ಲ. ಸುಬ್ಬರಾಯನ ಹೆಂಡತಿ ಸೀತೆಗೆ ದೈವಭಕ್ತಿ ಹಾಗೂ ಸಂಸಾರವನ್ನು ಸಂಭಾಳಿಸುವ ಜಾಣತನ ಎರಡೂ ಇತ್ತು. ಅವಳು ಮೂಕಜ್ಜಿಯನ್ನು ಪ್ರೀತಿ ಮತ್ತು ಘನತೆಯಿಂದ ನೋಡಿಕೊಳ್ಳುತ್ತಿದ್ದರೂ,

ಅಜ್ಜಿಯ ನಿಷ್ಠುರತೆ ಮತ್ತು ನಾಸ್ತಿಕತೆ ಅವಳಿಗೆ ಅರ್ಥವಾಗದ್ದಾಗಿತ್ತು. ಸೀತೆಯ ಜೀವನ ಮತ್ತು ಜೀವನದ ದೃಷ್ಟಿಕೋನ ಅವಳ ಮೇಲೆ ಸಮಾಜ ಮತ್ತು ಸಂಸಾರ ಹೊರಿಸಿದ ಚೌಕಟ್ಟಿನಲ್ಲೇ ಬೆಳೆದು ಬಂದಿದ್ದಾಗಿತ್ತು. ಸುಬ್ಬರಾಯ ಕಾಡು, ಗವಿಗಳಲ್ಲಿ ಅಲೆದಾಡುತ್ತಾ, ಅಜ್ಜಿಯ ಕಥೆಗಳನ್ನು ಕೇಳುವುದರಲ್ಲಿ ಸಮಯ ಕಳೆಯುತ್ತಿದ್ದರೆ, ಸೀತೆಯು ದಿನವಿಡೀ ಮನೆಕೆಲಸದಲ್ಲೇ ಸಮಯ ಕಳೆಯುತ್ತಿದ್ದಳು. ಸುಬ್ಬರಾಯನಾದರೋ ಹೊಲ, ಮನೆ ಕೆಲಸ ಬಿಟ್ಟು ಓಡಾಡುತ್ತ, ಅಜ್ಜಿಯ ವಿಶೇಷ ಮಾತುಗಳಿಗೆ ಕಿವಿಗೊಟ್ಟು ಕೂರಬಹುದಿತ್ತು. ಆದರೆ, ಹೆಂಗಸಾದ ಸೀತೆಗೆ ಇಂತಹ ಅವಕಾಶವೇ ಇರಲಿಲ್ಲ. ಈ ಪಿತೃಪ್ರಧಾನ ಸಮಾಜದಲ್ಲಿ ಬೆಳೆದ ಸುಬ್ಬರಾಯನ ದೃಷ್ಟಿಯಲ್ಲಿ ಸೀತೆಗೆ ಅಜ್ಜಿಯ ವಿಶೇಷ ಜ್ಞಾನವನ್ನು ಅರ್ಥಮಾಡಿಕೊಳ್ಳುವ ಬೌದ್ಧಿಕ ಸಾಮರ್ಥ್ಯ ಇರಲಿಲ್ಲ. ತಾನು ಗಮನಕೊಡಬೇಕಾದ ಕೆಲಸಗಳಾದ ತಮ್ಮನ ಮದುವೆ ಅಥವಾ ಮಕ್ಕಳೊಂದಿಗಿನ ಮಾತು ಇವೆಲ್ಲಕ್ಕಿಂತಲು ಅವನಿಗೆ, ಅಜ್ಜಿಯ ಜೊತೆ ಅಶ್ವತ್ಥ ಕಟ್ಟೆಯಲ್ಲಿ ಕುಳಿತು ಕಥೆ ಕೇಳುವುದರಲ್ಲಿಯೇ ಆಸಕ್ತಿ. ಸೀತೆ ಏನಾದರು ಅವನಿಗೆ ಅವನು ಮಾಡಲೇಬೇಕಾದ ಕೆಲಸವನ್ನು ಹೇಳಿದರೆ ಅವನಿಗೆ ಇಷ್ಟವಾಗದೇ ಸಿಟ್ಟು ಮಾಡಿಕೊಳ್ಳುತ್ತಿದ್ದನು. ದಿನದಿನದ ಕಷ್ಟಸುಖಗಳನ್ನು ಸಂಭಾಳಿಸಿ, ಸಂಸಾರವನ್ನು ಸಾಗಿಸುವ ಸೀತೆಯ ಸಾಮರ್ಥ್ಯ ಅವನ ಗಮನಕ್ಕೇ ಬರುತ್ತಿರಲಿಲ್ಲ.

ಕಾರಂತರು ಸೀತೆಯನ್ನು ಹಿಂದೂ ಸಮಾಜದ ಹೆಣ್ಣಿನ ಮೂಲರೂಪವಾಗಿಯೂ, ಸುಬ್ಬರಾಯನನ್ನು ಗಂಡಿನ ಮೂಲರೂಪವಾಗಿಯೂ ಬಹಳ ಚೆನ್ನಾಗಿ ಚಿತ್ರಿಸಿದ್ದಾರೆ. ಸೀತೆ, ಮನೆ ವ್ಯವಹಾರಗಳನ್ನು ಯಾವ ನ್ಯೂನತೆಗಳಿಲ್ಲದೆ ನಿಭಾಯಿಸುತ್ತಿದ್ದರಿಂದಲೇ, ಸುಬ್ಬರಾಯನು ತಾನು ಮಾಡಬೇಕಾದ ಕೆಲಸಗಳನ್ನು ಬಿಟ್ಟು, ಅಜ್ಜಿಯ ಜೊತೆ ತಾತ್ವಿಕ ವಿಷಯಗಳನ್ನು ಮಾತನಾಡಿ ಕಾಲಹರಣ ಮಾಡಲು ಸಾಧ್ಯವಾಯಿತು. ಅವಳು ಮಾಡಬೇಕಾದ ದಿನನಿತ್ಯದ ಕೆಲಸಗಳಿಗೆ ಸೀತೆ ಗಮನ ಕೊಡುವುದರಿಂದಲೇ ಸುಬ್ಬರಾಯನು ಅವಳಿಗೆ ಅಧ್ಯಾತ್ಮ, ತತ್ವಶಾಸ್ತ್ರ ಮುಂತಾದ ದೊಡ್ಡ ದೊಡ್ಡ ವಿಷಯಗಳನ್ನು ಅರ್ಥ ಮಾಡಿಕೊಳ್ಳುವ ಸಾಮರ್ಥ್ಯ ಇಲ್ಲ ಎಂದುಕೊಂಡಿದ್ದ. ಆದರೆ, ನಿಜವಾಗಿ ಸೀತೆಯೇ ಅಜ್ಜಿ ಹೇಳುವ ಪ್ರಕಾರದಲ್ಲಿ ಜೀವನ ನಡೆಸುತ್ತಿದ್ದದ್ದು. ಸುಬ್ಬರಾಯ ಅಜ್ಜಿಯ ತಾತ್ವಿಕತೆಯನ್ನು ಒಪ್ಪಿಕೊಂಡರೂ, ಸೀತೆಯೇ ಅದನ್ನು ತನ್ನ ಜೀವನದಲ್ಲಿ ಅಳವಡಿಸಿಕೊಂಡು, ತನ್ನ ದಿನನಿತ್ಯದ ಜವಾಬ್ದಾರಿಗಳನ್ನು ಸಂಭಾಳಿಸಿ, ಆ ಮೂಲಕ ಭವಸಾಗರದ ಗಂಟನ್ನು ಬಿಡಿಸಿಕೊಳ್ಳುವ ಪ್ರಯತ್ನದಲ್ಲಿದ್ದಳು. ಸುಬ್ಬರಾಯನಾದರೋ, ತಾತ್ವಿಕ ವಿಷಯಗಳ ಬಗ್ಗೆ ತಲೆ ಕೆಡಿಸಿಕೊಂಡು, ಮಾಡಬೇಕಾದ ಕೆಲಸಗಳನ್ನು ಮಾಡದೇ, ಜಂಜಾಟದಲ್ಲಿದ್ದನು.

ಸೀತೆ ಅಷ್ಟೆ ಅಲ್ಲದೆ, ಈ ಕಾದಂಬರಿಯಲ್ಲಿ ಬರುವ ಎಲ್ಲ ಹೆಣ್ಣುಗಳು ತಾಯ್ತನದ ಬಾಧ್ಯತೆಗಳನ್ನು ನಿರ್ವಹಿಸುತ್ತಾ ಅದರಲ್ಲೇ ಬಂಧಿತರಾಗಿದ್ದಾರೆ. ಎಲ್ಲ ಗಂಡಸರನ್ನು ಆಕರ್ಷಿಸಿ ತನ್ನ ಕಾಮಪಾಶದಲ್ಲಿ ಸೆರೆಹಿಡಿಯುತ್ತಿದ್ದ ಸುಂದರಿ ನಾಗಿಗೂ ಕೂಡ, ಕಡೆಗೆ ತನ್ನ ಪ್ರಿಯತಮ ಓಡಿಹೋದ ಮೇಲೆ ಇಬ್ಬರು ಗಂಡು ಮಕ್ಕಳನ್ನು ನೋಡಿಕೊಳ್ಳಲೇಬೇಕಾದ ಸ್ಥಿತಿ ಬಂತು. ಮೂಕಜ್ಜಿಯು ಕೂಡ ಅತೀಂದ್ರಿಯ ಶಕ್ತಿಯಿದ್ದ ಯೋಗಿನಿಯ ಹಾಗೆ

ಕಂಡರೂ ತಾನೇ ಸ್ವತಃ ತನ್ನ ವಿಶೇಷ ಜ್ಞಾನದಲ್ಲಿ ಬಂಧಿತಳಾಗಿದ್ದಂತಿದ್ದಳು. ತನ್ನ ಒಡಹುಟ್ಟಿದವರು, ಸಂಬಂಧಿಕರು ಇಲ್ಲದ ಅವಳು, ತನ್ನಪಾಡಿಗೆ ತಾನು, ಮೌನವಾಗಿ ಸನ್ಯಾಸಿಯಂತೆ ಇದ್ದಳು. ಹೀಗಿದ್ದರೂ, ತನ್ನ ದೈನಂದಿನ ಕೆಲಸಗಳನ್ನು ಮರೆಯದೆ ಮಾಡುತ್ತಿದ್ದಳು ಮತ್ತು ತಾನಿದ್ದ ಸಮುದಾಯದಲ್ಲಿ ತನ್ನ ವಿಶೇಷತೆಯಿಂದಲೇ ಸಲಹೆ ಸೂಚನೆ ಕೊಡಬಲ್ಲ, ಮನೆಯ ಮುಖ್ಯ ಗೃಹಸ್ಥನಂತಿದ್ದಳು. ಹೀಗೆ, ಈ ಕಾದಂಬರಿಯಲ್ಲಿ ಬರುವ ಹೆಣ್ಣುಗಳೆಲ್ಲರೂ, ಈ ಸಮಾಜ ಹೊರಿಸಿದ ಕಟ್ಟುಪಾಡುಗಳಲ್ಲಿ ಸಿಲುಕಿದ್ದಾರೆ – ಗಂಡ, ಮನೆ, ಮಕ್ಕಳುಗಳನ್ನು ನೋಡಿಕೊಳ್ಳುವ, ಮನೆ ಕೆಲಸವನ್ನು ದಿನನಿತ್ಯ ತಪ್ಪದೆ ಮಾಡುವ ಜವಾಬ್ದಾರಿ ಅವರದ್ದು. ಗಂಡಸರಂತೆ ಕುಳಿತು ತಾತ್ವಿಕ ವಿಷಯಗಳನ್ನು ಮಾತನಾಡಲು ಸಮಯವಾಗಲೀ, ತಮಗೆ ಇಷ್ಟವಾದ ಕೆಲಸ, ವೃತ್ತಿಯನ್ನು ಆಯ್ಕೆ ಮಾಡುವ ಅವಕಾಶವಾಗಲೀ ಅವರಿಗಿರಲಿಲ್ಲ. ಈಗಲೂ ಕೂಡ, ಸಮಾಜ, ಮಹಿಳೆಯರಿಗೆ ನೀವು ಮೊದಲು ಮನೆ, ಮಕ್ಕಳನ್ನು ನೋಡಿಕೊಳ್ಳಬೇಕು, ನಂತರ ಬೇರೆ ಕೆಲಸ ಮಾಡಬಹುದು ಎಂದೇ ಬುದ್ಧಿವಾದ ಹೇಳುತ್ತದೆ. ಈ ಸಮಾಜ, ಶತಮಾನಗಳಿಂದ ಮಹಿಳೆಯರನ್ನು ಅಡುಗೆ ಮನೆಗೆ ಸೀಮಿತವಾಗಿಸಿದ್ದಲ್ಲದೆ, ಅದರಿಂದ ಅವರು ಗಳಿಸಿದ ವ್ಯವಹಾರ ಪ್ರಜ್ಞೆ, ಚಾಣಾಕ್ಷತೆ, ತಾತ್ವಿಕತೆಗಳನ್ನು ಅಲ್ಲಗಳೆದಿದೆ.

ಆದ್ದರಿಂದ, ಈ ಕಾದಂಬರಿಯು ಮಹಿಳೆಯರ ಕುರಿತಂತೆ ಒಂದು ಮಹತ್ವದ ಮುನ್ನಡೆ. ಏಕೆಂದರೆ ಇದು ಆಧ್ಯಾತ್ಮಿಕತೆಯು ಬ್ರಾಹ್ಮಣ ಪುರುಷರ ತತ್ವಜ್ಞಾನ ಮತ್ತು ಆಚಾರಗಳಲ್ಲಿ ಮಾತ್ರ ಇರುವುದಿಲ್ಲ, ಬದಲಿಗೆ ಮಹಿಳೆಯರ ದೈನಂದಿನ ಕೆಲಸಗಳಲ್ಲೂ ಅಡಗಿದೆ ಎಂದು ಪ್ರತಿಪಾದಿಸುತ್ತದೆ. ಸಾಂಪ್ರದಾಯಿಕವಾಗಿ, ಎಲ್ಲಾ ಸಮಾಜಗಳೂ ಜೀವನಕ್ರಮವನ್ನು ಪುರುಷರ ಪಾತ್ರಗಳು ಮತ್ತು ಮಹಿಳೆಯರ ಪಾತ್ರಗಳೆಂದು ವಿಭಜಿಸಿವೆ. ಪುರುಷರಿಗೆ, ಜ್ಞಾನವನ್ನು ವೃದ್ಧಿಸಿಕೊಳ್ಳಲು ಮತ್ತು ತಾತ್ವಿಕ ವಿಚಾರಗಳ ಕುರಿತು ಚಿಂತಿಸಲು ಅವಕಾಶ ಕೊಟ್ಟು, ಮಹಿಳೆಯರನ್ನು ಮನೆಯಲ್ಲಿ ಸೀಮಿತಗೊಳಿಸಿ ಅವರನ್ನು ತಾತ್ವಿಕ ವಿಷಯಗಳಿಂದ ದೂರ ಇಡಲಾಗಿದೆ. ಜಗತ್ತಿನ ಎಲ್ಲಾ ಸಮಾಜಗಳೂ, ಪುರುಷನನ್ನು ಸಾಂಕೇತಿಕವಾಗಿ ಬುದ್ಧಿಗೆ ಹೋಲಿಸಿ, ಮಹಿಳೆಯರನ್ನು ದೇಹಕ್ಕೆ ಹೋಲಿಸಿವೆ. ಹಾಗೇ, ಮಾನವ ವಿಕಾಸದಲ್ಲಿ, ದೇಹಕ್ಕಿಂತ ಮನಸ್ಸಿಗೆ ಹೆಚ್ಚು ಪ್ರಾಮುಖ್ಯತೆ ಕೊಡಲಾಗಿದೆ. ಆದರೆ ಈ ಕಾದಂಬರಿಯಲ್ಲಿ, ಮೂಕಜ್ಜಿಯು ಹೇಳುವಂತೆ ಮಹಿಳೆಯರು ಮಾಡುವ ದಿನನಿತ್ಯದ ಕೆಲಸಗಳು ಅಧ್ಯಾತ್ಮ ಸಮಾನ ಎನ್ನುವುದು, ಮಹಿಳೆಯರನ್ನು ಅಧ್ಯಾತ್ಮ ನೆಲೆಗೆ ತಲುಪಿಸುತ್ತದೆ. ಜೊತೆಗೆ, ಮೂಕಜ್ಜಿ ಪುರುಷರ ಸಂಪ್ರದಾಯಬದ್ಧ ಕರ್ತವ್ಯಗಳ ನಿರರ್ಥಕತೆಯನ್ನು ತೋರಿಸಿ, ಗೃಹಸ್ಥಾಶ್ರಮವನ್ನು ಸನ್ಯಾಸಕ್ಕಿಂತಲೂ ಉನ್ನತ ಸ್ಥಾನಕ್ಕೆ ಏರಿಸುತ್ತಾಳೆ.

ಇದು ಸಮಾಜವನ್ನು ಪ್ರತಿನಿಧಿಸುವ ಒಂದು ಅತ್ಯುತ್ತಮ ಕಾದಂಬರಿ ಎಂದು ನಿಸ್ಸಂಶಯವಾಗಿ ಹೇಳಬಹುದು. ಒಬ್ಬ ಮಹಿಳಾ ನಾಯಕಿಯ ಕಥೆಯನ್ನು ಒಬ್ಬ ಪುರುಷನ ಮೂಲಕ ಸೂಕ್ಷ್ಮವಾಗಿ, ನಂಬುವಂತೆ ನಿರೂಪಿಸಿರುವುದು ಕಾರಂತರ ಅದ್ಭುತ ಪ್ರತಿಭೆಯನ್ನು ತೋರುತ್ತದೆ. ಹೃದಯಸ್ಪರ್ಶಿಯಾಗಿ ಅವರು ನಿರೂಪಿಸಿರುವ ಮಹಿಳೆಯ ಚಿತ್ರಣ ನಿಜ

ಜೀವನಕ್ಕೆ ಸಾಕಷ್ಟು ಹತ್ತಿರವಾಗಿದೆ. ಆದರೂ, ಈ ಕಥೆಯು ಪುರುಷನಿಂದ ಪುರುಷರಿಗಾಗಿ ಬರೆಯಲ್ಪಟ್ಟಿದೆ ಎಂಬುದು ಸ್ಪಷ್ಟವಾಗಿದೆ.

ಖಚಿತವಾಗಿ ಹೇಳುವುದಾದರೆ, ಕಾರಂತರು ಹೆಣ್ಣಿನ ದೇಹದ ಮೇಲೆ ಹೆಚ್ಚು ಗಮನ ಹರಿಸಿರುವುದು ಅವರು ಕಾದಂಬರಿಯ ಬಹುಭಾಗದಲ್ಲಿ ಮಾಡುತ್ತಿರುವ ವಾದಕ್ಕೆ ವಿರುದ್ಧವಾಗಿ ಕಾಣುತ್ತದೆ. ಹೆಣ್ಣಿನ ದೇಹವನ್ನು ಕನಿಷ್ಟವೆಂದುಕೊಂಡು, ಅವಳ ದೇಹವನ್ನು ತಮ್ಮ ಕಾಮಭೋಗವನ್ನು ತಣಿಸಬಲ್ಲ ಒಂದು ವಸ್ತುವಾಗಿಯಷ್ಟೇ ಭಾವಿಸುವ ಅಭಿಪ್ರಾಯ ಸಾಂಪ್ರದಾಯಿಕ ಮನೋಭಾವದ್ದು. ಇದನ್ನು ಬದಲಿಸಿ ಅವಳಲ್ಲಿರುವ ಸೃಜನಶೀಲ ಗುಣವನ್ನು ತೋರಿಸುವ ಉದ್ದೇಶ ಲೇಖಕರಿಗಿರುವಂತೆ ಕಂಡರೂ ಮತ್ತೆ ಈ ಪ್ರಯತ್ನದಲ್ಲಿ ಅವಳನ್ನು ಅವಳ ದೇಹಕ್ಕಷ್ಟೇ ಮೀಸಲಾಗಿರಿಸಿದ ಹಾಗಾಗಿದೆ. ಹೆಣ್ಣು ಬರೀ ದೇಹವಲ್ಲ, ದೇಹ ಮತ್ತು ಮನಸ್ಸು ಎರಡೂ ಇರುವ ಒಂದು ಜೀವ ಎಂಬುದು ಹೆಣ್ಣಿಗೆ ಚೆನ್ನಾಗಿ ತಿಳಿದಿದೆ. ಸಾಂಪ್ರದಾಯಿಕ ಮನೋಭಾವಕ್ಕೆ ಹೊರತಾದ ನಿಲುವಿನಿಂದ ಹೆಣ್ಣಿನ ದೇಹ ಮತ್ತು ಸೃಜಿಸುವ ದೈಹಿಕ ಸಾಮರ್ಥ್ಯವನ್ನು ಬಣ್ಣಿಸಿ, ಅವಳ ಸ್ಥಾನವನ್ನು ಹೆಚ್ಚಿಸುವ ಪ್ರಯತ್ನ ಎಂದಾದರೂ, ಇದು ಗಂಡಿನಂತೆ ಹೆಣ್ಣೂ ಸಂಪೂರ್ಣ ಗುಣವುಳ್ಳವಳು ಎಂಬ ನಿಲುವನ್ನು ಮುನ್ನಡೆಸುವುದಿಲ್ಲ. ಮನಸ್ಸು ಮತ್ತು ದೇಹಗಳೆರಡೂ ಬೇರೆಂಬ ಸುಳ್ಳನ್ನು ಸಂಸ್ಕೃತಿ ಮತ್ತು ಸಾಹಿತ್ಯಗಳು ನೂರಾರು ವರ್ಷಗಳಿಂದ ಹರಡುತ್ತಲೇ ಬಂದಿದೆ. ಮನಸ್ಸು ಮತ್ತು ದೇಹಗಳು ಬೇರೆಯಲ್ಲ, ದೇಹಕ್ಕಿಂತ ಮನಸ್ಸು/ಬುದ್ಧಿ ದೊಡ್ಡದು ಎಂದೂ ಅಲ್ಲ. ಅವೆರಡೂ ಒಂದಕ್ಕೊಂದು ಪೂರಕ. ಮೂಕಜ್ಜಿಯ ಬಾಯಲ್ಲಿಯೇ ಇದನ್ನು ಹೇಳಿಸಿದ್ದರೂ ಕಾರಂತರು, ಹೆಣ್ಣಿನ ದೇಹ ಮತ್ತು ರೂಪಗಳಿಗೆ ಒತ್ತು ಕೊಟ್ಟು, ಈ ಸುಳ್ಳನ್ನು ಅಳಿಸುವ ಪ್ರಯತ್ನದ ಬದಲು ಇನ್ನಷ್ಟು ಹೆಚ್ಚಿಸಿದ್ದಾರೆ. ಹೆಣ್ಣು ದೇಹದಿಂದ ಮಾತ್ರ ಹೊಸದನ್ನು ಸೃಷ್ಟಿಸುವುದಿಲ್ಲ, ಅವಳ ಸೃಜನಶೀಲ ಮನಸ್ಸು ಕೂಡ ಅಷ್ಟೇ ಶಕ್ತಿಯುತವಾದದ್ದು, ಸೃಜಿಸಬಲ್ಲಂಥದ್ದು. ಆದರೆ, ಈ ಕಾದಂಬರಿಯು ಆ ಚಿಂತನೆಯ ದಾರಿಯನ್ನು ಅನ್ವೇಷಿಸುವುದಿಲ್ಲ. ದುಃಖದ ಮಾತೆಂದರೆ, ಪುರುಷನು ತನ್ನಂತೆಯೇ ಹೆಣ್ಣು ಕೂಡ ಬುದ್ಧಿ, ಮನಸ್ಸು, ಭಾವನೆ ಎಲ್ಲವೂ ತುಂಬಿರುವ ಒಂದು ಪರಿಪೂರ್ಣ ಜೀವಿಯಾಗಿ ನೋಡದೆ, ಮತ್ತೆ ಮತ್ತೆ ಹೆಣ್ಣಿನ ದೇಹ, ರೂಪಕ್ಕೇ ಹೆಚ್ಚು ಗಮನ ಕೊಟ್ಟು, ಅವಳನ್ನು ದೇವತೆಯ ಸ್ಥಾನದಲ್ಲಿ ಕೂರಿಸಿದ್ದಾನೆ. ಆದರೆ, "ಹೆಣ್ಣು ಬರೀ ದೇಹವಲ್ಲ".

❑

# ವಿಶ್ವರೂಪಿ

**ಅನಿಲ ದೇಶಪಾಂಡೆ**
Palatine, Illinois

*

ಭಾಗವತ ಪುರಾಣದ ಆರಂಭಿಕ ಅಧ್ಯಾಯಗಳಲ್ಲಿ ಬರುವ ಮಾತು; ಕಲ್ಪ ಪ್ರಾರಂಭವಾಗಿದೆ. ಏನೇನೂ ಇರದಾಗ ಭಗವಂತ ಮಲಗಿದ್ದನಂತೆ. ಅವನು ಕಣ್ಣು ತೆರೆದಿದ್ದರಿಂದ ಕಲ್ಪ ಪ್ರಾರಂಭವಾಗಿದೆ! ಒಂದು ಹಿಡಿ ಆತ್ಮಬೀಜಗಳನ್ನು ಆಯ್ದು, ಸೃಷ್ಟಿಕ್ರಿಯೆ ಪ್ರಾರಂಭಿಸುವ ಬಯಕೆ ಅವನಿಗೆ! ಮೊದಲು, ತನ್ನ ನಾಭಿ ಕಮಲದಲ್ಲಿ ಜನಿಸಿದ ಬ್ರಹ್ಮನಿಗೆ ಈ ಜವಾಬ್ದಾರಿ ವಹಿಸಿದ. ಬ್ರಹ್ಮ ಹಲವು ಲಕ್ಷ ವರ್ಷಗಳ ಕಾಲ ಅಂದರೆ ಕಲ್ಪದ ಸಂಧಿ ಕಾಲದಲ್ಲಿ ತಪಸ್ಸು ಮಾಡಿದ! ಅದಕ್ಕೆ ನಾವು Requirement Analysis Time ಎಂದು ಕರೆಯುವ. ಆದರೆ ಬ್ರಹ್ಮನಿಗೆ, ಭಗವಂತನು ಹೇಳಿದ "ಸೃಷ್ಟಿ ಕ್ರಿಯೆ" ಹೇಗೆ ಪ್ರಾರಂಭಿಸಬೇಕು, ಎಲ್ಲಿಂದ ಪ್ರಾರಂಭಿಸಬೇಕು ಎಂದು ತಿಳಿಯದಾಯ್ತು. ತಲೆ ಕೆಡಿಸಿಕೊಂಡ. ತಲೆ ಕೆರೆದುಕೊಂಡ. ಅವನಿಗೋ ನಾಲ್ಕು ತಲೆಗಳು! ಒಂದೇ ತಲೆ ಕೆರೆಯಲು ಒದ್ದಾಡುವ ನಮಗೆ, ಅವನು ನಾಲ್ಕು ತಲೆಗಳನ್ನು ಕೆರೆದು ಒದ್ದಾಡುವ ಬಗೆ ಅರ್ಥ ಅಗಬಹುದು. ಮೊದಲು ತನ್ನ ದೇಹ ಭಾಗದಿಂದ ಶಿವನ ಸೃಷ್ಟಿ, ಭೂತಗಣ ಸೃಷ್ಟಿ ಇತ್ಯಾದಿಯನ್ನು ಮಾಡಿದನಂತೆ, ಆನಂತರ ಸನಕ ಸನಂದರ ಸೃಷ್ಟಿಯನ್ನು ಮಾಡಿದನಂತೆ. ಆದರೆ ಅವರಾರು ಸೃಷ್ಟಿಕ್ರಿಯೆ ಮುಂದುವರಿಸಲು ಒಪ್ಪಲಿಲ್ಲವಂತೆ. ನಾಲ್ಕು ತಲೆಗಳನ್ನು ಕೆಡಿಸಿಕೊಂಡರೂ ಸೃಷ್ಟಿಕ್ರಿಯೆ ಮುಂದುವರೆಯದಾಯಿತು. ಭಗವಂತ ಕೊಟ್ಟ Project Timeline ಒಂದು ಕಲ್ಪ ಮಾತ್ರ! ಆದರೆ ಕೆಲಸ ಸಾಗುತ್ತಿಲ್ಲ? ತಲೆ ಸಿಡಿದು ನಾಲ್ಕು ಹೋಳಾಗಬಹುದಾಗಿತ್ತು, ಆದರೆ ಅವನಿಗೆ ಈಗಾಗಲೇ ನಾಲ್ಕು ತಲೆಗಳು! ಕೊನೆಗೆ ಭಗವಂತನಿಗೆ ಕರುಣೆ ಬಂದು

ಸಹಾಯಕ್ಕಾಗಿ ಬಂದು ನಿಂತನಂತೆ. "ಮಿಥುನ ಸೃಷ್ಟಿ" ಒಂದೇ ಸೃಷ್ಟಿಕ್ರಿಯೆ ಮುಂದುವರೆಯಲು ಸಾಧ್ಯ ಅಂದನಂತೆ. ಅದಕ್ಕೆ "ಸ್ತ್ರೀ" ತತ್ವ ಬೇಕಾದದ್ದು ಎಂದು ಹೇಳಿದನಂತೆ. ಶಿವನಿಂದಾಗಲಿ ಭೂತಗಣಗಳಿಂದಾಗಲಿ ಮತ್ತಾವುದೇ ಸನಕ ಸನಂದರಿಂದ ಆಗದ ಕೆಲಸವನ್ನು ಕೊನೆಗೆ "ಸ್ತ್ರೀ" ಸರಸ್ವತಿಯ ಹುಟ್ಟಿನಿಂದ ಪ್ರಾರಂಭವಾಯಿತು! ಅಂತೂ ಅಲ್ಲಿಂದ ಬ್ರಹ್ಮನ ಪ್ರಾಬ್ಲಮ್ "ಸ್ತ್ರೀ" ಮುಖಾಂತರ Solve ಆಯಿತು! ಭಗವಂತ ಕೊಟ್ಟ ಮುಷ್ಟಿಹಿಡಿಯ ಜೀವಗಳಿಗೆ ಆತ್ಮ ಸಾಧನೆಗೆ ದಾರಿ ದೊರೆಯಿತು! ಹೀಗೆ ಸೃಷ್ಟಿಯ ಮೊದಲಿಂದಲೂ "ಸ್ತ್ರೀ" ಅತ್ಯಂತ ಪ್ರಮುಖ ಪಾತ್ರವನ್ನು ವಹಿಸುತ್ತಾಳೆ! ಇಲ್ಲಿಗೆ ನಾವು ಭಾಗವತದಿಂದ exit ಆಗೋಣ!

ಏಕೆ ಈ ಕಥೆ ಹೇಳಿದೆ ಅಂದರೆ ನನ್ನ ಜೀವನ ಅನುಭವದಲ್ಲಿ, ಅನೇಕ ವಿಷಯಗಳು, ವಸ್ತುಗಳು, ಘಟನೆಗಳು ರೋಚಕ ಹಾಗೂ ವಿಸ್ಮಯ ಅನ್ನಿಸಿವೆ. ಕೆಲವೊಂದನ್ನು ಗ್ರಹಿಸುವಲ್ಲಿ ಸಾಧ್ಯ ಆಗಿದೆ ಅನಿಸಿದ್ದು ಉಂಟು. ಈವರೆಗೂ ಸಂಪೂರ್ಣ ಅರ್ಥವಾಗದೆ ಉಳಿದವು ಹಲವು! ಉದಾಹರಣೆಗೆ "ನೀರು" ಮತ್ತು "ನೀರೆ" (ಸ್ತ್ರೀ)! "ಅರ್ಥ ಗೊತ್ತಾಗಲಾರದೆ ಇರುವುದು" ಅಂದರೆ ಏನು? ಎನ್ನುವುದಕ್ಕೆ ಒಂದು ಉದಾಹರಣೆ ಕೊಟ್ಟು ಮುಂದೆ ಹೋಗುತ್ತೇನೆ. "Pythagoras theorem" ಸೂತ್ರ, ಏನದರ ಅರ್ಥ? ನಾನು ಏಕೆ ಇದನ್ನು ಕಲಿಯಬೇಕು? ಅದರ ಉಪಯೋಗ ಏನು? ಎನ್ನುವ ಪ್ರಶ್ನೆ ತುಂಬಾ ಕಾಡಿತ್ತು. ಅದು ಕೇವಲ ಕೆಲ ದಿನಗಳು ಮಾತ್ರ. ಆ ಸೂತ್ರದಿಂದ ನಾನು ಅನೇಕ ಸಮಸ್ಯೆಗಳನ್ನು solve ಮಾಡಿದಾಗ, ಓಹೋ ಅದು ಈ ರೂಪದಲ್ಲಿ ಉಪಯೋಗವಾಗುತ್ತದೆ ಎಂದು ಅರಿತೆ. ಪ್ರಶ್ನೆ ಉಳಿಯಲೇ ಇಲ್ಲ! ಅಷ್ಟೇ ಏಕೆ ಅತ್ಯಂತ ಭಾರವಾದ ವಿಮಾನ ಮೇಲೆ ಹಾರುವುದಾದರೂ ಹೇಗೆ? ಅದನ್ನು lift ಮಾಡುವವರು ಯಾರು? ಕೆಳಗೆ ರಸ್ತೆ ಇಲ್ಲದೆ ಮುಂದೆ ಹೇಗೆ ಸಾಗುತ್ತದೆ? ಎನ್ನುವ ನನ್ನ ಪ್ರಶ್ನೆಗಳಿಗೆ ಬರ್ನೋಲಿಯ ತತ್ವ ಅರ್ಥವಾದ ಮೇಲೆ ಪ್ರಶ್ನೆ ಆಗಿ ಉಳಿಯಲೇ ಇಲ್ಲ! ಅನುಭವ ಆಗಿಹೋಯಿತು! ಆದರೆ, "ನೀರು" ಮತ್ತು "ನೀರೆ" (ಸ್ತ್ರೀ)! ಮಾತ್ರ ಇನ್ನೂ ಅರ್ಥವಾಗದೇ ಉಳಿದ ವಿಷಯಗಳ ಪಟ್ಟಿಯಲ್ಲಿ ಮೊದಲಿನವು. "ನೀರು" ಏಕೆ ಮೂರು ರೂಪುಗಳಲ್ಲಿ ಇದೆ? ಹೇಗೆ ಜೀವನಕ್ಕೆ ನೀರು ಇಷ್ಟೊಂದು ಅತ್ಯವಶ್ಯಕವಾಗಿದೆ? ಯಾವುದೇ ಗ್ರಹದಲ್ಲಿ ಕೂಡ ಜೀವಿಗಳು ಇರುವವೇ ಎಂದು ತಿಳಿಯಲು ನೀರು ಇದೆಯೇ ಅಥವಾ ಅಲ್ಲಿ ನೀರು ಇತ್ತೇ ಎಂದು ಹುಡುಕುವರಲ್ಲವೇ? ನಾನು ಚಿಕ್ಕವ ಇದ್ದಾಗನಿಂದಲೂ ನೀರು ಎಲ್ಲೆಡೆ ಏಕೆ ಇದೆ? ಎಣ್ಣೆ ಏಕೆ ಎಲ್ಲೆಡೆ ಮಳೆಯಾಗಿ, ನದಿಯಾಗಿ ಹರಿಯುತ್ತಿಲ್ಲ? ನೀರು ಏಕೆ ಎಲ್ಲಾ ಕಾರ್ಯಕ್ಕೂ ಮುಖ್ಯವಾಗಿದೆ? ಅದು ನಿರಾಕಾರವು ಇದೆ, ನಿರ್ಮಲವೂ ಇದೆ, ಮಧುರವು ಇದೆ, ಏನು ಇದೆಲ್ಲ? ನೀರು ಭಗವಂತನ ಇನ್ನೊಂದು ರೂಪವೇ? ಇಂತಹ ಇನ್ನೂ ಹಲವಾರು, ಇಂದಿಗೂ ಉತ್ತರ ದೊರಕದ ಪ್ರಶ್ನೆಗಳು ಕಾಡುತ್ತಿವೆ.

ನೀರಿಗಿಂತ ಒಂದು ತೂಕ ಹೆಚ್ಚು ಅನ್ನುವಂತೆ ಈ ನಮ್ಮ "ನೀರೆ" / "ಸ್ತ್ರೀ" ವಿಷಯ ಕೂಡ. ತುಂಬಾ ಕ್ಲಿಷ್ಟವಾದದ್ದು. ಯಾರಿವಳು? ಇವಳೇಕೆ ಹೀಗೇ, ಎಷ್ಟೋ

ಸಾರಿ ಅರ್ಥವಾಯಿತು ಅಂದುಕೊಂಡರು ಅರ್ಥವಾಗದೆ ಹೋಗುವಳು. ನೀರಿನಂತೆ ಕೈಯಲ್ಲಿ ಹಿಡಿದೆ ಎಂದುಕೊಂಡರೂ, ಕೈಗೆ ಸಿಕ್ಕದವಳೂ. ಭಗವಂತ ಕೂಡ ಕೆಲವೊಮ್ಮೆ difficult problems solve ಮಾಡಬೇಕಾದರೆ ತಾನು "ಸ್ತ್ರೀ" ರೂಪ ಧರಿಸಲೇ-ಬೇಕಾಯಿತಂತೆ. ನಾವು ನಾರಾಯಣನನ್ನು ನೆನೆಯಬೇಕಾದರೆ ಲಕ್ಷ್ಮಿ ಸಹಿತವಾಗಿಯೇ ನೆನೆಯಬೇಕಂತೆ! ಅಷ್ಟೇ ಏಕೆ ಸ್ವತಃ ಭಗವಂತನೇ ಭಗವದ್ಗೀತೆಯಲ್ಲಿ; "ಕ್ಷರಃ ಸರ್ವಾಣಿ ಭೂತಾನಿ, ಕೂಟಸ್ಥೋಽಕ್ಷರ ಉಚ್ಯತೇ" ಎಂದಿದ್ದಾನೆ. ಈ ಜಗತ್ತಿನಲ್ಲಿ ಎಲ್ಲವೂ ನಶ್ವರ ಆದರೆ ಸೃಷ್ಟಿ, ಲಕ್ಷ್ಮಿ ಮಾತ್ರ ಶಾಶ್ವತ ಎಂದು ಹೇಳಿ, ಸ್ತ್ರೀಯ ಮಹತ್ವವನ್ನು ಮತ್ತು ಅವಳ ಅತ್ಯವಶ್ಯಕತೆಯನ್ನು ಜಗತ್ತಿಗೆ ಸಾರಿದ್ದಾನೆ. ಇದು ನಮ್ಮೆಲ್ಲರ ಅನುಭವ ಕೂಡ ಅಲ್ಲವೇ? "ತೇನ ವಿನಾ ತೃಣಮಪಿ ನ ಚಲತಿ" ಎಂದು ಹೇಳಿ ನಾವು ಅವಳಿಗೆ ಶರಣಾಗಿಲ್ಲವೇ? ಆದರೂ ಅರ್ಥವಾಗಿಹಳೆ? ಹೀಗೆ ನನ್ನ ಎಲ್ಲಾ ವಿಚಾರಗಳು, ಬರವಣಿಗೆ ರೂಪ ಪಡೆದ ವಿಷಯಗಳು "ನೀರು" ಇಲ್ಲವೇ "ನೀರೇ" ಸುತ್ತ ಸುಳಿದಾಡುತ್ತಲೇ ಇರುತ್ತವೆ. ಸಾಧ್ಯ ಆದಷ್ಟು ಅರ್ಥೈಸುವ ಪ್ರಯತ್ನ ಮಾಡುತ್ತಲೇ ಇರುವೆ. ಅದು ನನ್ನಯ ಸಾಧನೆಯ ದಾರಿ ಇರಬಹುದೇನೋ.

ಹೀಗೆ ಸ್ತ್ರೀ ಶಕ್ತಿ, ನಮ್ಮ ಜೀವನಕ್ಕೆ ಅತ್ಯವಶ್ಯಕವಾಗಿಬಿಡುತ್ತಾಳೆ. ಎಷ್ಟಾದರೂ ಈ ಜಗದ ಸೃಷ್ಟಿಗೆ ಅವಳೆ ಕಾರಣ ಅಲ್ಲವೇ? ನಮ್ಮ ಹುಟ್ಟಿಗೂ ಅವಳೇ ಕಾರಣ, ಬೆಳವಣಿಗೆಗೂ ಅವಳೇ ಕಾರಣ, ನಮ್ಮ ಉಳಿವಿಗೂ ಮತ್ತು ಅಳಿವಿಗೂ ಕೂಡ! "ಅವಳಿಲ್ಲದೆ ನಾವಿರಲು ಸಾಧ್ಯವೇ?" ಮದುವೆಯಾದ ಮೇಲಂತೂ ಈ ಮಾತಿನ ಅನುಭವ ಗಟ್ಟಿ ಆಗುವುದು. ನಮಗೆ ನೋವಾದರೂ ಮೊದಲು ಹೇಳುವ ಮಾತು "ಅಮ್ಮ" ಅಂತಲೇ. ನಾನು ಕಂಡ ಅನ್ನುವುದಕಿಂತ ನಾನು ಸಂವೇದನೆ ಪಡೆದ ಮೊದಲ ವಸ್ತು ಆ ತಾಯಿ ಅಲ್ಲವೇ? ಹುಟ್ಟಿನ ಮೊದಲ ಸಂವೇದನೆ, Sensation "ಅವಳ ಸ್ಪರ್ಶ"!! ಎಲ್ಲೋ ಗರ್ಭದಲ್ಲಿ ಕತ್ತಲೆ ಕೋಣೆಯಲ್ಲಿ ತುತ್ತು ಕೊಟ್ಟು ಸಲಹಲು ಸಾಧ್ಯವಿಲ್ಲದಾಗ ತನ್ನ ದೇಹದ ಶಕ್ತಿಯನ್ನೇ ನಮಗೆ ಹಂಚಿ, ಊಟ, ಉಸಿರು ಎರಡನ್ನೂ ಕೊಟ್ಟು ಸಾಕಿದ ದೇವರಲ್ಲವೇ ಅವಳು? ನನಗೆ 9 ತಿಂಗಳುಕಾಲ Smartphone ಕೈಯಲ್ಲಿ ಇಲ್ಲದೆ ಬೋರಾಗುತ್ತಿರುವಾಗ, ತನ್ನ ಕೈಯನ್ನು ತನ್ನ ಹೊಟ್ಟೆಯ ಮೇಲೆ ಆಡಿಸಿ ನನಗೆ ಸಂವೇದನೆ ಮೂಲಕ ತಾನಿರುವ ಅರಿವನ್ನು ಕೊಟ್ಟು, ತಾನೂ ನನ್ನ ಜೊತೆ ಸದಾ ಇರುವ ಭರವಸೆಯನ್ನು ಕೊಟ್ಟು ಸಲುಹಿದವಳು. ತಾನು ಉಂಡದ್ದು ನನಗೆ ಕೊಟ್ಟವಳು, ತಾನು ಕೇಳಿದ್ದು ನನಗೆ ಕೇಳಿಸಿದವಳು, ತಾನು ನೊಂದಾಗ ಅದನ್ನು ನುಂಗಿ ನನಗೆ ನೋವಾಗದಂತೆ ನೋಡಿಕೊಂಡ ಶಕ್ತಿಯೇ ಆ ಸ್ತ್ರೀಯಲ್ಲವೇ? ನಾ ಆ ಕತ್ತಲೆಯ ಮನೆಯಿಂದ ಹೊರಬಿದ್ದಾಗ ಎಲ್ಲವೂ ವಿಚಿತ್ರ ಅನುಭವ! ಎಲ್ಲವೂ ಅಪರಿಚಿತ! ಏನೂ ತಿಳಿಯದ ಅಜ್ಞಾನ ಭಾವ! ಆದರೆ ಆ ಮೊದಲ ಅಪ್ಪುಗೆ, ಮೊದಲ ಮುತ್ತು ಮಾತ್ರ ಚಿರಪರಿಚಿತ! ಆ ಮೊದಲ ಅಪ್ಪುಗೆಯೇ ನನ್ನ ಜೀವನದಿ ಭರವಸೆ ನೀಡಿ ಹೊಸ ಜಗತ್ತಿನಲ್ಲಿ ಇರಲು ಅನುಕೂಲವಾಗಿದ್ದು! ನನಗೆ ಮೊದಲ ಹಸಿವು ಅನುಭವ ಆದಾಗ ಉಣ್ಣುವದಾದರೂ ಹೇಗೆ ಎಂದು ನಾನು ಯೋಚಿಸುವ

ಮುನ್ನ ನನ್ನ ಬಾಯಿಗೆ ಮೊಲೆಯನ್ನು ತುರುಕಿ ಆ ಅಮೃತದ ರುಚಿ ತೋರಿಸಿದ್ದು ಆ ಸ್ತ್ರೀ. ಅದಕೆಂದೆ ಇರಬೇಕು ಇಡೀ ಜಗತ್ತಿನಲ್ಲಿ ಅತ್ಯಂತ ಹಳೆಯದಾದ, ವಿದ್ವತ್ಪೂರ್ಣವಾದ ಭಾರತದ ಸನಾತನ ಸಂಸ್ಕೃತಿ ಮತ್ತು ಪದ್ಧತಿಯಲ್ಲಿ "ಮಾತೃದೇವೋ ಭವ" ಎಂದಿರುವುದು. ನನ್ನೆಲ್ಲ ಸಂವೇದಗಳು ಆ ಮಹಾ ತಾಯಿಗೆ ಅರ್ಪಿತ.

ನನ್ನ ತಾಯಿ ಈಗ ಪ್ರತ್ಯಕ್ಷವಾಗಿ ಇಲ್ಲದೆ ಇದ್ದರೂ ನನ್ನ ನೆನಪಿನಲ್ಲಿ ಅವಳು ಅಜರಾಮರ! ನನ್ನ ಮೊದಲ ಮಾತು, ಮೊದಲ ಓದು, ಮೊದಲ ಊಟ, ಎಲ್ಲ ಮೊದಲುಗಳಿಗೂ ಮತ್ತು ಎಲ್ಲಾ ತೊದಲುಗಳಿಗೂ ಅವಳೆ ಮೊದಲು. ಈ ಸಾಧನ ಶರೀರವನ್ನು ಕೊಟ್ಟವಳು ಅವಳೇ. ಆದರೆ ನಾವು ಸಾಧನೆ ಮಾಡಿದೆವೊ ಇಲ್ಲವೋ ಎನ್ನುವುದು ನಮ್ಮ ಕರ್ಮಾನುಸಾರಕ್ಕೆ ಬಿಟ್ಟದ್ದು.

ತಾಯಿಯ ಶಕ್ತಿ ಹೀರಿ ಬೆಳೆದ ನಾವು, ಸ್ವಂತ ಶಕ್ತಿ ಪಡೆದ ಮೇಲೆ ಅವಳ ಸಂವೇದಗಳಿಗೆ ಸ್ಪಂದಿಸುವುದನ್ನು ಕಡಿಮೆ ಮಾಡುತ್ತೇವೇನೊ ಎಂದು ಹಲವು ಬಾರಿ ಅನ್ನಿಸಿದೆ. ಆದರೆ ನಾನು ಚಿಕ್ಕವನಿದ್ದಾಗಿಂದಲೂ ಅವಳ ಮೇಲೆ ತುಂಬಾ ಆದರ, ಅಂತಃಕರಣ, ಜವಾಬ್ದಾರಿ ತೋರುತ್ತಾ ಬೆಳೆದೆ. ಅವಳು ಹೇಳಿದ ಎಲ್ಲ ಕೆಲಸಗಳನ್ನು ಅವಳು ಹೇಳುವ ಮುನ್ನ ಅರಿತು ಮಾಡುತ್ತಿದ್ದೆ. ಅದು ನೀರು ತರುವದು, ಕಸ ಬಳೆಯುವುದು, ಉಡುಸಾರಣಿಗೆ (ಊಟ ಆದ ಮೇಲೆ ಎಲೆ ಹಾಕಿದ ಜಾಗವನ್ನು ಗೋಮಯದಿಂದ ಸಾರಿಸಿ ಸ್ವಚ್ಛಗೊಳಿಸುವುದು), ಮುತ್ತಿಗದ ಗಿಡದಿಂದ ಎಲೆಗಳನ್ನು ತಂದು ಒಣಗಿಸಿ ಊಟದ ಪತ್ರದ ಎಲೆಗಳನ್ನು ಮಾಡುವುದು. ಒಟ್ಟಿನಲ್ಲಿ ಅವಳು ನಗುನಗುತ್ತಾ ಇರುವಂತೆ ನೋಡಿಕೊಳ್ಳುವದು ನನ್ನ ಆದ್ಯ ಕರ್ತವ್ಯವಾಗಿತ್ತು. ಎಷ್ಟೊ ಬಾರಿ ಅವಳು ನಮ್ಮ ಪಕ್ಕದ ಮನೆಯವರೊಂದಿಗೆ "ನಮ್ಮ ಅನ್ಯಪ್ಪ ನನಗೆ ಹೆಣ್ಣು ಮಕ್ಕಳು ಇಲ್ಲದ ನೋವನ್ನು ಮರೆಸಿದ್ದಾನೆ, ಹೆಣ್ಣು ಮಕ್ಕಳಿಗಿಂತ ಹೆಚ್ಚಾಗಿ ಕೆಲಸದಲ್ಲಿ ಸಹಾಯ ಮಾಡುತ್ತಾನೆ" ಎಂದು ಅಭಿಮಾನದಿಂದ ಹೇಳುವದನ್ನೂ ಕೇಳಿ ಆನಂದಪಟ್ಟಿದ್ದೇನೆ, ಅಷ್ಟೇ ಏಕೆ ನನ್ನ ಗೆಳೆಯರು, "ನನ್ನನ್ನು ನೋಡಿ ಕಲಿ" ಎಂದು ತಮ್ಮ ಮನೆಗಳಲ್ಲಿ ಹೇಳಿಸಿಕೊಂಡಿದ್ದರಿಂದ ನನಗೆ "ಶ್ರವಣಕುಮಾರಾ" ಎಂದು ಛೇಡಿಸಿದ್ದೂ ಉಂಟು. ನನ್ನ ಅಪ್ಪ ಸತ್ತಾಗ ನಾನು 6 ತಿಂಗಳ ಕಾಲ ನೌಕರಿಗೆ ಹೋಗುವುದು ಬಿಟ್ಟು ಸದಾ ಅವಳೊಂದಿಗೆ ಕಾಲ ಕಳೆದೆ. ಯಾವುದೇ ಬಂಧು-ಬಳಗದವರು ಬಂದು ನನ್ನ ಅಪ್ಪನನ್ನು ನೆನೆದು ಅವಳ ಮನಸ್ಸಿಗೆ ದುಃಖ ಮಾಡಿದರೆ ಅವರಿಗೆ ತಾಕೀತು ಮಾಡಿದ್ದೆ. ಕೊನೆಗೆ ನನ್ನ ತಾಯಿಯೆ ಒತ್ತಾಯ ಮಾಡಿ ನೌಕರಿಗೆ ಕಳಿಸಿದ್ದು ಇನ್ನೂ ನೆನಪಿದೆ.

ನನ್ನ ಮದುವೆ ಆದಾಗ ನನ್ನ ಹೆಂಡತಿಗೆ ಮೊದಲು ಹೇಳಿದ ಮಾತು ಕೂಡ ನನ್ನ ತಾಯಿಯ ಬಗೆಗೆ ನನಗಿರುವ ಗೌರವ ಮತ್ತು ಕಾಳಜಿಯ ಬಗೆಗೆ. ಒಟ್ಟಿನಲ್ಲಿ ಒಬ್ಬ ಸ್ತ್ರೀಯ ತಾಯಿತನದ ಸಂವೇದನೆಗೆ ಸ್ಪಂದಿಸಿರುವ ಬದುಕು ನನ್ನದು. ನನ್ನ ಹೆಂಡತಿಗೂ ಕೂಡ ಅವಳ ತಾಯಿಯ ಬಗೆಗೆ ಅದೇ ತರಹದ ಕಾಳಜಿ ವಹಿಸಲು ಸಾಧ್ಯವಾದಷ್ಟು ಅನುಕೂಲ ಮಾಡಿ ಅವರ ಆಶೀರ್ವಾದ ಪಡೆದ ತೃಪ್ತಿ ನನಗೆ ಇದೆ. ಇದು ಹೆಗ್ಗಳಿಕೆಯ ಮಾತಲ್ಲ,

ಸಂವೇದನಶೀಲತೆಯ ಬಗೆಗೆ ಕಾಳಜಿ. ಇಂಥ ವಿಷಯಗಳನ್ನು ಹಂಚಿಕೊಂಡಷ್ಟೂ ಸ್ಫೂರ್ತಿದಾಯಕವಾದುದು.

ತಾಯಿ ನೊಂದರೂ, ದುಃಖ ತೋರಿಸದೆ ಮುಖದಲ್ಲಿ ನಗು ಮಾತ್ರ ತೋರಿ ಮಕ್ಕಳ ದಾರಿ ಸುಗಮ ಮಾಡಿ ತನ್ನ ಹಿರಿಮೆಯನ್ನು ಮೆರೆಯುತ್ತಾಳೆ. ಸ್ತ್ರೀ ಭಗವಂತನ ಸೃಷ್ಟಿಕ್ರಿಯೆಯಲ್ಲಿ ಹಿರಿದಾದ ಪಾತ್ರ ವಹಿಸುತ್ತಾಳೆ. ತನ್ನ ಜೀವ ಇರುವವರೆಗೂ ರಕ್ಷಕಳಾಗಿ ನಿಲ್ಲುತ್ತಾಳೆ. ಆ ಹಿರಿತನದ ಗುಣಕ್ಕೆ ಈ ಪದ್ಯ ಅರ್ಪಿತ:

## ಅಕ್ಕರೆಯ ಅಮ್ಮನಿಗೆ

**ಸುಕ್ಕುಗಟ್ಟಿದ ಮರದ ಮೈಯೊಳೂ ಅಮ್ಮ ನಿನ್ನಯ ಹೊಳಪಿದೆ**
**ದಂತ ಗೊಂಬೆಯಂಥ ಅಮ್ಮ ಇನ್ನೂ ನನಗೆ ನೆನಪಿದೆ**
**ರತ್ನದೋಲೆಯ ಮೂರು ಹರಳೊಳು ನೂರು ಸ್ಫಟಿಕದ ಬೆಳಕಿದೆ**
**ಸುರಿವ ಮಳೆಯಲಿ, ಕೊರೆವ ಚಳಿಯಲಿ ಆ ಕೈ ತೊಟ್ಟಿಲ ತೂಗಿದೆ**
**ಮಳೆಯ ಹನಿಗಳು ಹೊಸೆದು ಹೊಸೆದು ಬೆಳಕ ಸರಪಳಿ ಮಾಡಿದಂತೆ**
**ನಿನ್ನ ಕರುಣೆಯ ಹೆಣೆದು ಹೆಣೆದು ನಮ್ಮ ಬಾಳನು ಬೆಳಗಿದೆ**
**ಗಿಡುಗ ಕಾಲನು ಹೋಲುವಂಥ ನಿನ್ನ ಮುದುಡಿದ ಕೈಗಳು**
**ಬದುಕ ಭರವಸೆ ಬಿಡದಂತೆ ಗಟ್ಟಿಯಾಗಿ ಹಿಡಿದಿವೆ**
**ಶಕ್ತಿ ಕಡಿಮೆಯಾದರೂ ಯುಕ್ತಿಗೇನು ಕೊರತೆಯೇ?**
**ಇಲಿಗೆ ಮನೆಯ ಬಿಟ್ಟುಕೊಡದೆ, ಅದಕೆ ಬಲೆಯ ಬೀಸಿಹೆ**
**ಜೋಕೆ ತಾಯಿ ನೋಯದಿರಲಿ ನಿನ್ನ ಮುದ್ದು ಕೈಗಳು**
**ಅದುವೆ ನನ್ನಯ ಪ್ರಾರ್ಥನೆ ದಿನದಿನವು ಅವನೊಳು**
**ಅಮ್ಮ ನಿನ್ನಯ ಮೈಗೊಪ್ಪುತಿದ್ದ ಬಿಗಿದುಟ್ಟ ಸೀರೆ ರವಿಕೆಯು**
**ನಿರಿಗೆ ಮುರಿದು, ಗರಿಯೇ ಉಳಿಯಿತೆ ಕೃಶದ ಮೈಯೊಳು**
**ಬಾಯಿಕಟ್ಟಿ ಒಣಗಿಹೋಯ್ತು ನಾಲಿಗೆ, ಕಂಡು ನಿನ್ನಯ ಕಾಳಜಿ**
**ಮುಪ್ಪಿನಲ್ಲೂ ಬಾಗಿ ಹೆಕ್ಕಿದೆ ಬಿದ್ದ ಅಕ್ಕಿಯ ಕಾಳನು**
**ನೀ ಹಾಳು ಮಾಡದೆ ಒಂದೂ ಕ್ಷಣವನೂ**
**ನಾ ನಿನ್ನನೆಂದೂ ಮರೆಯೆನು, ನಾ ನಿನ್ನನೆಂತು ಮರೆತೇನು?**

ಸ್ತ್ರೀ ಕೇವಲ ತಾಯಿಯಾಗಿ ಮಾತ್ರವಲ್ಲ, ಮಾಯೆಯಾಗಿ, ಸಖಿಯಾಗಿ, ಬಾಳಸಂಗಾತಿಯಾಗಿ, "ಗಂಡೊಂದು ಹೆಣ್ಣು ಆರು" ಎನ್ನುವಂತೆ ಅನೇಕ ಪಾತ್ರಗಳನ್ನು ನಿರ್ವಹಿಸುತ್ತಾಳೆ. ನೀರಿನಂತೆ ಅವಳೂ ಕೂಡ ವಿಸ್ಮಯಕಾರಿ ಮತ್ತು ವಿಶ್ವವ್ಯಾಪಿ. ಈ ಜಗತ್ತಿನ ಮಾಯೆ ಕೂಡ ಸ್ತ್ರೀ ತತ್ವವೇ. ಮಾಯೆಯ ಸಂವೇದನೆಗೆ, ಆಕರ್ಷಣೆಗೆ ಸಿಲುಕದ ಗಂಡು ಇರಲು ಸಾಧ್ಯವೆ! ಮೋಹಿನಿಯ ಮೋಹಕ್ಕೆ ಮರುಳಾದ ಪಟ್ಟಿಯಲ್ಲಿ

ಪರಶಿವನಿಂದ ಹಿಡಿದು, ಇಂದ್ರ, ಚಂದ್ರ, ಅಸುರರು, ಮಹಾಜ್ಞಾನಿ ರಾವಣ, ಮಹಾತಪಸ್ವಿ ವಿಶ್ವಾಮಿತ್ರ ನಮ್ಮಂಥ ಪಾಮರರವರೆಗೆ ಪಟ್ಟಿ ಬೆಳೆಯುತ್ತಿದೆ.

ಮಾಯೆ ರೂಪಿ ಸ್ತ್ರೀ ಕೂಡ ಮತ್ತೆ ಸೃಷ್ಟಿಕ್ರಿಯೆ ನಾಟಕದ ಆರಂಭಕ್ಕೆ ಕಾರಣ ಆಗುತ್ತಾಳೆ. ಹೊಸ ಬದುಕು ಕಟ್ಟಲು ಹೊರಟಾಗ ಸ್ತ್ರೀ ತನ್ನ ಹೆತ್ತವರಿಂದ ದೂರವಾಗಿ ಇನ್ನೊಬ್ಬರ ಮನೆಗೆ ಬಂದು ಅಲ್ಲಿ ಎಲ್ಲಾ ಜವಾಬ್ದಾರಿಗಳನ್ನು ನಿಭಾಯಿಸುತ್ತಾಳೆ! ನಾನು ಈಗ ಹೇಳುವ ವಿಷಯ ಆಧುನಿಕ ಬದುಕಿನಲ್ಲಿ ಸ್ವಲ್ಪ ವ್ಯತ್ಯಾಸ ಅನ್ನಿಸಿದರೂ, ನನ್ನ ಬದುಕಿನ ಅನುಭವದ ವಿಷಯ ಮಾತ್ರ ಹಂಚಿಕೊಳ್ಳುವೆ. ನನಗೆ, ನನ್ನ ತಾಯಿ ನಮ್ಮ ಅಪ್ಪನ ಬಾಳ ಸಂಗಾತಿಯಾಗಿ ಜವಾಬ್ದಾರಿ ನಿರ್ವಹಿಸುತ್ತಿದ್ದ ರೀತಿ ಅತ್ಯಂತ ರೋಚಕ ಅನ್ನಿಸಿತ್ತು. ಮನೆಯ ಎಲ್ಲ ಕೆಲಸಗಳನ್ನು ಒಪ್ಪಾಗಿ ಮಾಡುವುದು. ಎಲ್ಲ ವಿಷಯಗಳಲ್ಲಿ ಆಸಕ್ತಿ ಮತ್ತು ಕಾಳಜಿ ತೋರುವುದು. ದಣಿವು ಎನ್ನುವ ಮಾತೇ ಇಲ್ಲದೆ, ಸದಾ ಕಾರ್ಯ ನಿರತವಾಗಿ ಇರುವುದು. ಇವು ಅವಳ ಸ್ವಭಾವ. ಇಂಥ ಸ್ವಭಾವ ನಾನು ಹೆಚ್ಚಾಗಿ ಎಲ್ಲ ಸ್ತ್ರೀಯರಲ್ಲಿ, ನನ್ನ ಮನೆಯವಳಲ್ಲಿಯೂ ಕೂಡ ಕಂಡಿದ್ದೇನೆ. ಇದು ಭಗವಂತ ಸ್ತ್ರೀಯರಿಗೆ ಕರುಣಿಸಿದ extra faculty, ವಿಶೇಷ ಶಕ್ತಿ ಇರಬಹುದೇನೋ. ದುರ್ಗೆಯ ಹತ್ತು ಕೈಗಳಂತೆ! ನಮ್ಮ ತಾಯಿ ಹೊರ ತೋರಿಕೆಯಲ್ಲಿ ನನ್ನ ಅಪ್ಪ ಹೇಳಿದಂತೆ ನಡೆದುಕೊಳ್ಳುವವಳು ಎಂದು ಅನ್ನಿಸಿದ್ದರೂ ಕೂಡ, ನಮ್ಮ ಅಪ್ಪ, ಅವ್ವ ಬಯಸಿದ್ದನ್ನೇ ಮಾಡುವವನಾಗಿದ್ದ ಎನ್ನುವ ನಿಜ ನಾನು ಅರಿತಿದ್ದೆ! ಅಪ್ಪನಿಗೆ ಅವಳಲ್ಲಿ ಅಷ್ಟೊಂದು ಭರವಸೆ. ಅಷ್ಟೇ ಏಕೆ ನನ್ನ ಮಗನೇ ನನಗೆ ಅನೇಕ ಬಾರಿ ಹೇಳಿದ್ದುಂಟು, “ನೀನು ಕೇವಲ ಅಮ್ಮನ ಮಾತನ್ನು ಕೇಳುವೆ. ನನ್ನ ಮಾತನ್ನು ಕೇಳುವುದು ಯಾವಾಗ?” ಎಂದು. ನನ್ನ ಮತ್ತು ನನ್ನ ಮಗನ ಅನುಭವ ಒಂದೇ ಎಂದು ತಿಳಿದಾಗ ನಾನು ಮುಗುಳುನಕ್ಕಿದ್ದೆನಾದರೂ, ಈ ಸ್ತ್ರೀ ಶಕ್ತಿಯ ಬಗ್ಗೆ ಆಶ್ಚರ್ಯಪಟ್ಟಿದ್ದೆ!

ನನ್ನ ಅಪ್ಪ ತುಂಬಾ ಸಾತ್ವಿಕ ಸ್ವಭಾವದ ವ್ಯಕ್ತಿ. ಕೆಲವೊಮ್ಮೆ ಆ ಒಳ್ಳೆಯತನದಿಂದಲೇ ಮೋಸಹೋಗುವ ಪರಿಸ್ಥಿತಿಗೆ ಬಂದು ನಿಲ್ಲುತ್ತಿದ್ದ. ಆದರೆ ಅಂಥ ಸಂದರ್ಭದಲ್ಲಿ ನನ್ನ ತಾಯಿ ವೀರ ವನಿತೆಯ ಪಾತ್ರವಹಿಸಿ ತನ್ನ ಜವಾಬ್ದಾರಿ ಮೆರೆದು ಅವನು ತೊಂದರೆಗೆ ಒಳಗಾಗದಂತೆ ಕಾಪಾಡಿದ್ದನ್ನು ನಾನು ನೋಡಿದ್ದೇನೆ. ಅವಳಿಗೆ ಅಷ್ಟೊಂದು ಸಮಯ ಪ್ರಜ್ಞೆ ಅಥವಾ ಧೈರ್ಯ, ಶಕ್ತಿ ಎಲ್ಲಿಂದ ಬರುತ್ತಿತ್ತೋ? ಅವಳು ಅನೇಕ ಬಾರಿ ನನ್ನ ಅಪ್ಪನನ್ನು ತೊಂದರೆಯಿಂದ ಪಾರು ಮಾಡಿದ್ದು ನಾನೇ ಕಣ್ಣಾರೆ ಕಂಡಿದ್ದೇನೆ. ಒಂದು ಬಾರಿ ನಡೆದ ಘಟನೆ; ನನ್ನ ಊರು ಒಂದು ಹಳ್ಳಿ. ನಮ್ಮ ಮನೆಯ ಬಾಗಿಲು ಸದಾ ತೆರೆದಿರುತ್ತಿತ್ತು. ಮನೆಯ ಮುಂದೆ ದಾರಿಯಲ್ಲಿ ಓಡಾಡುವ ಜನರು ಎಲ್ಲರಿಗೂ ಮನೆಯ ಪಡಸಾಲೆ ಕಾಣುತ್ತಿತ್ತು. ಮನೆಯ ಪಡಸಾಲೆಯಲ್ಲಿ ನಮ್ಮ ಅಪ್ಪನ ಕುರ್ಚಿ, ನಾನು ಒಂದು ಮೂಲೆಯಲ್ಲಿ ಆಟ ಆಡುತ್ತಿದ್ದೆ. ಒಂದು ದಿನ ರೋಡಿನಲ್ಲಿ ಹೊರಟ ಇಬ್ಬರು ವ್ಯಕ್ತಿಗಳು ನಮ್ಮ ಪಡಸಾಲೆಗೆ ಪ್ರವೇಶಿಸಿದರು. ಅದರಲ್ಲಿ ಮೊದಲನೆಯವ 14–15 ವರ್ಷದ ವಯಸ್ಸಿನ ಕಾವಿ ಬಟ್ಟೆ ಧರಿಸಿದ ಚಿಕ್ಕ ಹುಡುಗ. ಅವನು ಯಾವುದೋ ಮಠದ

ಸ್ವಾಮಿಯಂತೆ ಅವನ ಹಿಂದೆ ಬಂದ ವ್ಯಕ್ತಿ ಹೇಳಿದ; "ಯಜಮಾನರೇ ನಿಮ್ಮದು ಎಂತಹ ಅದೃಷ್ಟ? ಈ ತಾತ ನಿಮ್ಮ ಮನೆ ಪ್ರವೇಶಿಸಿದ್ದಾನೆ ಅಂದರೆ ನಿಮ್ಮ ಅದೃಷ್ಟದ ಬಾಗಿಲು ತೆರೆದಿದೆ. ಈ ತಾತ ಕೇಳಿದ್ದು ಕೊಟ್ಟು ಕಳಿಸಿ" ಎಂದ. ನಮ್ಮಪ್ಪನಿಗೆ ಅದರಲ್ಲಿ ನಂಬಿಕೆ ಇತ್ತೊ ಇಲ್ಲವೊ? ಏನೊ ಕೊಟ್ಟರಾಯಿತು ಎಂದು ತನ್ನ ಜೇಬಿನಿಂದ 10 ರೂ. ನೋಟು ತೆಗೆದ. ಅದನ್ನು ನೋಡಿದ ಆ ಕಾವಿ ಬಟ್ಟೆ ಧರಿಸಿದ ಹುಡುಗ "ಅಷ್ಟು ಸಾಲದು ಎಲ್ಲ ಕೊಡಬೇಕು" ಎಂದು ನನ್ನ ಅಪ್ಪನ ಜೇಬಿಗೆ ಕೈ ಹಾಕಿದ. "ನಾನು ನಿನಗೆ ಎಷ್ಟು ಬೇಕೋ ಅಷ್ಟು ಕೊಡುವೆ" ಕೈ ತೆಗೆ ಎಂದು ನನ್ನ ಅಪ್ಪ ಬೇಡಿಕೊಂಡ. ಬಂದ ವ್ಯಕ್ತಿ "ಎಲ್ಲ ಕೊಟ್ಟು ಬಿಡಿ ಸ್ವಾಮಿ, ಇಲ್ಲ ಅನ್ನಬಾರದು" ಎಂದು ಬೋಧಿಸತೊಡಗಿದ. ನನ್ನ ಅಪ್ಪನಿಗೆ ಏನು ತಿಳಿಯದಾಯಿತು. ಗಾಬರಿಯಾಗಿ ಏನು ತೋಚದೆ ತನ್ನ ಕೈ ಹಿಡಿತ ಸಡಿಲಿಸದೆ "ಬಿಡು ಹಾಗೆ ಮಾಡಬಾರದು, ನಾನು ನಿನಗೆ ಎಷ್ಟು ಬೇಕೋ ಅಷ್ಟು ಕೊಡುವೆ" ಎಂದು ಅಂಗಲಾಚತೊಡಗಿದ. ನಾನು "ಏನು ನಡೆದಿದೆ" ಎಂದು ತಿಳಿದುಕೊಳ್ಳುವಷ್ಟರಲ್ಲಿಯೇ ಅಡುಗೆಮನೆಯಲ್ಲಿದ್ದ ನನ್ನ ತಾಯಿ ಈ ಎಲ್ಲಾ ಮಾತುಗಳನ್ನು ಕೇಳಿ ಕ್ಷಣಾರ್ಧದಲ್ಲಿ ಪರಿಸ್ಥಿತಿಯನ್ನು ಅರ್ಥ ಮಾಡಿಕೊಂಡು ಹುಲಿಯಂತೆ ಹೊರಬಂದವಳೇ ಅಬ್ಬರಿಸಿದಳು, ನನ್ನ ಅಪ್ಪನಿಗೆ ಉದ್ದೇಶಿಸಿ ಹೇಳಿದಳು "ನೀನು ಎಂಥ ಮನುಷ್ಯ? ನಿನಗೆ ಅರ್ಥವಾಗುವುದಿಲ್ಲವೇ? ಅವರು ಮೋಸಗಾರರು. ನಿನಗೆ ಇನ್ನೂ ಅರ್ಥವಾಗಲಿಲ್ಲವೇ? ಒಂದು ಕಪಾಳಿಗೆ ಕೊಡು ತಾನೇ ಬಿಟ್ಟುಹೋಗುತ್ತಾನೆ" ಎಂದು ಗುಡುಗಿದಳು. ಅಲ್ಲಿಯೇ ಇದ್ದ ಕಟ್ಟಿಗೆಯನ್ನು ಕೈಯಲ್ಲಿ ಹಿಡಿದು ಆ ಸ್ವಾಮಿಗೆ ಮತ್ತು ಅವನ ಹಿಂದೆ ಬಂದ ವ್ಯಕ್ತಿಗೆ ಹೇಳಿದಳು "ಮರ್ಯಾದೆಯಿಂದ ನಿನ್ನ ಈ "ತಾತ"ನನ್ನು ಕರೆದುಕೊಂಡು ಹೋದೆ ಆದರೆ ಸರಿ, ಇಲ್ಲವಾದರೆ ಮರ್ಯಾದೆ ಕಳೆದುಕೊಂಡು ಹೋಗುವೆ" ಎಂದು ಅಬ್ಬರಿಸಿದಳು. ಅಷ್ಟು ಗಲಾಟೆಗೆ ತಣ್ಣಗಾಗಿದ್ದ ಅವರು "ಹತ್ತು ರೂಪಾಯಿ ಕೊಡಿ ನಾವು ಹೋಗುವೆವು" ಎಂದರು. ನನ್ನ ಅವ್ವ ಅವರನ್ನು ಬರಿ ಕೈಯಿಂದಲೇ ಹೊರಗೆ ಹಾಕಿದ್ದಳು! ಈ ತರಹದ ಸಮಯೋಚಿತ ಪ್ರಜ್ಞೆ ಅದಕ್ಕೆ ತಕ್ಕಂತೆ ಕಾರ್ಯಾಚರಣೆಯನ್ನು ನಾನು ಅವಳಲ್ಲಿ ಅನೇಕ ಬಾರಿ ಕಂಡಿದ್ದೇನೆ.

ಅಷ್ಟೇ ಏಕೆ ಇಂದಿಗೂ ನನ್ನ (ಅಥವಾ ನಮ್ಮೆಲ್ಲರ) ಮನೆಯವಳು ಕೂಡ ಹಾಗೆಯೇ ನಮ್ಮ ಸಹಾಯಕ್ಕೆ ಬರುವುದಿಲ್ಲವೇ? "ಸಲಹೇಶು ಮಂತ್ರಿಯಾಗಿ" ಅನೇಕ ವಿಷಯಗಳಲ್ಲಿ ನಮಗೆ ಸಹಾಯಕರಾಗಿ. ನಮ್ಮನ್ನು ಬೇರೆಯವರಿಂದ ತೊಂದರೆಗೆ ಒಳಗಾಗದಂತೆ ಅನೇಕ ಬಾರಿ ಕಾಪಾಡಿರುತ್ತಾರೆ. (ಅವಳೇ ತೊಂದರೆ ಕೊಡುವುದು, ಅದು ಬೇರೆ ವಿಷಯ! ಅದರ ಪ್ರಸ್ತಾಪ ಈಗ ಬೇಡ. ಅದಕೆಂದೇ ಬೇರೆ ಲೇಖನ/ಗ್ರಂಥ ಮೀಸಲಿಟ್ಟರಾಯಿತು.) ಈ ತರಹದ ಸಮಯಪ್ರಜ್ಞೆ ಎಲ್ಲ ಹೆಣ್ಣುಮಕ್ಕಳಿಗೆ ಸಹಜವಾಗಿ ದೊರೆತ ಶಕ್ತಿ ಅನ್ನಿಸುತ್ತದೆ. ಇಂಥ ವಿಷಯವನ್ನು ಮಹಾಭಾರತದ ಕುಂತಿ, ದ್ರೌಪದಿ ಪಾತ್ರದಲ್ಲಿಯೂ ನಾವು ಕಾಣಬಹುದು. ನನ್ನ ಅನುಭವ ಮತ್ತು ಅಭಿಪ್ರಾಯದ ಪ್ರಕಾರ ಸ್ತ್ರೀಗೆ ಸಮಯಪ್ರಜ್ಞೆ ಮತ್ತು protection mechanism ಸಹಜವಾಗಿ ದೊರೆತಿರುತ್ತದೆ! ಅದಕ್ಕೆಂದೆ "Behind

every successful person there is a woman" ಎಂದು ಹೇಳುವರು. ಅದು ನಮ್ಮ ತಾಯಿ ಆಗಿರಬಹುದು, ಸಂಗಾತಿ ಆಗಿರಬಹುದು ಅಥವಾ ಯಾವುದೇ ಒಂದು ಸ್ತ್ರೀಶಕ್ತಿ ಆಗಿರಬಹುದು. ಇಡೀ ಮಹಾಭಾರತದಲ್ಲಿ ಶ್ರೀಕೃಷ್ಣ, ಸ್ತ್ರೀ ಕುಲಕ್ಕೆ ಹೆಚ್ಚು ಪ್ರಾಮುಖ್ಯತೆ ಮತ್ತು ಸನ್ಮಾನ ತೋರಿದ್ದಾನೆ.

ಹಾಗಂತ ಜಗತ್ತಿನಲ್ಲಿ ಕೆಟ್ಟ ಸ್ತ್ರೀಯರು, ಕುಲಟೆಯರು, ಮನೆ ಹಾಳು ಮಾಡಿದವರು ಇಲ್ಲವೇ? ಎನ್ನುವ ಪ್ರಶ್ನೆ ಬರಬಹುದು. ಅಂಥವರೂ ಇದ್ದಾರೆ, ಅದು ಅಪವಾದಗಳು (anomalies) ಎನ್ನಬಹುದು. ಆದರೆ ಅಂಥವರ ಸಂಖ್ಯೆ ಬಹಳ ವಿರಳ. ಜಗತ್ತನ್ನು ಹಾಳು ಮಾಡುವ ವಿಷಯದಲ್ಲಿ ಸ್ತ್ರೀಗಿಂತ ಪುರುಷರದೇ ಮೇಲುಗೈ.

ಸ್ತ್ರೀಯರು ಸಂವೇದನಾಶೀಲರು, ಹೆಚ್ಚು ಅಂತಃಕರಣ, ಅಕ್ಕರೆ ಉಳ್ಳವರು. ಸಾಧನೆಗೆ ದಾರಿ ತೋರಿಸುವಲ್ಲಿ, ಬದುಕು ಕಟ್ಟುವಲ್ಲಿ ಮೊದಲಿಗರು. ಸೃಷ್ಟಿಗೆ ಕಾರಣರಾದ ಅವರು, ತಾಯಿಯಾಗಿ ರಕ್ಷಿಸುವರು, ಬಾಳ ಸಂಗಾತಿಯಾಗಿ ಬದುಕು ಸುಂದರವಾಗಿಸುವರು, ವೀರ ವನಿತೆಯಾಗಿ ದೇಶಪ್ರೇಮ ಮೆರೆದಿಹರು, ಮುತ್ಸದ್ದಿ ರಾಜಕಾರಣಿಯಾಗಿ ದೇಶ ಸೇವೆ ಮಾಡಿಹರು, ಒಳ್ಳೆಯ ವಿಜ್ಞಾನಿ, ಇಂಜಿನೀಯರುಗಳಾಗಿ ಬಾನಂಗಳದ ಚಂದಿರ, ಮಂಗಳನನ್ನು ಮುಟ್ಟಿದ ಮಂಗಳೆಯರು. ಮುನಿದರೆ ಪ್ರಳಯಕ್ಕೂ ಕಾರಣ ಆಗುವರು. ಹಾಗಾಗಿ "ಶಕ್ತಿ"ಯ ಸ್ವರೂಪ ಸ್ತ್ರೀ ಎಂದೇ ಗುರುತಿಸಿಲ್ಲವೇ ಈ ಜಗತ್ತು? ಈ ಸೃಷ್ಟಿ, ಈ ಭೂಮಿ, ಈ ನದಿ, ಈ ದೇಶ... ಎಲ್ಲವೂ ಸ್ತ್ರೀ ಸ್ವರೂಪ ಅಲ್ಲವೇ? ಹೀಗಾಗಿ ಅವಳು ವಿಶ್ವರೂಪಿ!

ಸ್ತ್ರೀ ಸ್ವಾತಂತ್ರ್ಯ, ಸ್ತ್ರೀ ಸಮಾನತೆ ಅದಕ್ಕಾಗಿ ಹೋರಾಟ, ಇತ್ಯಾದಿ ಎಲ್ಲ ನಾವು ರಚಿಸಿದ ನಾಟಕ ಅಥವಾ ರಾಜಕೀಯ ಎಂದು ಅನಿಸುತ್ತದೆ! ಪುರುಷ, ಸ್ತ್ರೀ ಸಮಾನ ಆಗಲು ಸಾಧ್ಯವೇ ಇಲ್ಲ! Apple to orange comparison ಅನ್ನಬಹುದೇನೊ. ಸ್ತ್ರೀ ಅತ್ಯಂತ ಉನ್ನತ ಸ್ಥಾನದಲ್ಲಿ ಇರುವವಳು. ಯಾವ ಸಮಾಜದಲ್ಲಿ ಸ್ತ್ರೀಗೆ ಹೆಚ್ಚಿನ ಗೌರವ, ಪೂಜ್ಯತೆ ದೊರೆಯುತ್ತದೆಯೋ ಅಂಥ ಸಮಾಜ ಖಂಡಿತ ಉತ್ತುಂಗಕ್ಕೆ ಏರುವುದು ನಿಜ.



# ಸ್ತ್ರೀ ಸಂವೇದನೆ-ವೈಜ್ಞಾನಿಕ, ಪೌರಾಣಿಕ ಹಿನ್ನೆಲೆಯಲ್ಲಿ ಸ್ವವಿಮರ್ಶೆಯ ನೋಟ

**ಆನಂದವರ್ಧನ**
Portland, Oregon

*

"ಜೀವವೊಂದು ತನ್ನ ಬದುಕಿನ ಅನುಭವಗಳ ಮೂಲಕವೇ ತನ್ನ ಸುತ್ತಲಿನ ಜಗತ್ತನ್ನು ಪರಿಭಾವಿಸುವ, ಅರಿಯಲೆತ್ನಿಸುವ ಮತ್ತು ಹಾಗೆ ತನ್ನ ಅನುಭವ ಒದಗಿಸಿದ ಅರಿವಿನ ಮೂಲಕವೇ ತನ್ನದೇ ದೃಷ್ಟಿಯಿಂದ ಬದುಕಿಗೆ ಪ್ರತಿಸ್ಪಂದಿಸುವುದನ್ನು 'ಸಂವೇದನೆ' ಎಂದು ಕರೆಯಬಹುದು. ಪ್ರತಿ ವ್ಯಕ್ತಿಯ ಹಿನ್ನೆಲೆ, ಪರಿಸರ, ಅನುಭವ, ವಿಚಾರಶಕ್ತಿ ಮತ್ತು ಭಾವನೆ ವಿಭಿನ್ನವಾಗಿರುವುದರಿಂದ ಅವರವರ ಸಂವೇದನೆಗಳೂ ವಿಭಿನ್ನವಾಗಿರುತ್ತವೆ."

ಕನ್ನಡ ಸಾಹಿತ್ಯ ರಂಗದ ಪುಸ್ತಕಕ್ಕಾಗಿ ಕಳಿಸಿದ ಆಹ್ವಾನ ಪತ್ರಿಕೆಯಲ್ಲಿದ್ದ ಈ ಸಾಲುಗಳು ನನ್ನನ್ನು ಚಿಂತನೆಗೆ ಹಚ್ಚಿ, ತನ್ಮೂಲಕ ಈ ಲೇಖನದ ಸೃಷ್ಟಿಯಾಯಿತು. ಇದರ ಜೊತೆಗೆ ವೈಜ್ಞಾನಿಕ ಹಿನ್ನೆಲೆ, ಪುರಾಣಗಳ ಮರುವ್ಯಾಖ್ಯಾನ ಮತ್ತು ಸ್ವವಿಮರ್ಶೆಯ ನೆಲೆಯಿಂದ, ಸ್ತ್ರೀ ಸಂವೇದನೆಯನ್ನು ಅರಿಯುವ ಯತ್ನವನ್ನು ಈ ಲೇಖನದಲ್ಲಿ ಮಾಡಿದ್ದೇನೆ.

ಪ್ರತಿ "ಜೀವಿಯ" ಹಿನ್ನೆಲೆ, ಪರಿಸರ, ಅನುಭವ, ವಿಚಾರಶಕ್ತಿ ಮತ್ತು ಭಾವನೆ, ಈ ಐದು ಪದಗಳಲ್ಲಿ ಅಡಗಿದೆ ಇಡೀ ಸಂವೇದನೆಯ ನಾದ. ಈ ಐದು ಪದಗಳ ವೈಜ್ಞಾನಿಕ ವಿಸ್ತರಣೆಯೇ ಈ ಲೇಖನದ ಗುರಿ. ಜ್ಞೇಯನಿಷ್ಠ ವಿಧಾನ (Subjective approach)ವನ್ನು ಅನುಸರಿಸೋಣ. ಈ ಪದಪುಂಜವನ್ನು ಸ್ವಲ್ಪ ವಿಸ್ತರಿಸೋಣ.

**ಹಿನ್ನೆಲೆ:** ಜೀವಿ ಜನಿಸಿದ ಕುಲ (ಪ್ರಾಣಿ, ಕೀಟ, ಮನುಷ್ಯ) ಮತ್ತು ತಳಿ.

**ಪರಿಸರ:** ಜಾಗ, ಮನುಕುಲವಾದರೆ ಮನೆಯ ಬೌದ್ಧಿಕ ವಾತಾವರಣ.

**ಅನುಭವ:** ಬೌದ್ಧಿಕವಾಗಿ ಜೀರ್ಣಿಸಿಕೊಂಡ ವಿದ್ಯೆಯನ್ನು ಸಮರ್ಪಕವಾಗಿ ಎಸಗಿ, ಅದರ ಫಲಿತಾಂಶವನ್ನು ಮನನ ಮಾಡಿಟ್ಟುಕೊಳ್ಳುವ ಪರಿಕ್ರಿಯೆ.

**ವಿಚಾರಶಕ್ತಿ:** ಅನುಭವದಿಂದ ಆದ ಜ್ಞಾನಾಭಿವೃದ್ಧಿ.

**ಭಾವನೆ:** ಇದು ಅತ್ಯಂತ ಕಷ್ಟದ್ದು. ಮೇಲಿನ ನಾಲ್ಕು ವಿಚಾರಗಳ ತಾತ್ವಿಕ ಸಮ್ಮಿಶ್ರಣ ನಮ್ಮ ಸ್ತ್ರೀಸಂವೇದನೆಯನ್ನು ಅಂತಿಮವಾಗಿ ನಿರ್ಧರಿಸುತ್ತದೆ. ಸಂಗ್ರಹಿಸಿದ ಜ್ಞಾನದ ಅನುಷ್ಠಾನ ಒಂದು ಸರಿಯಾದ ಭಾವನೆ (ವಾತಾವರಣ)ಯನ್ನು ಸೃಷ್ಟಿ ಮಾಡುತ್ತದೆ. ಮತ್ತೆ ಬರುವ ಸಂವಾದ ನಮ್ಮ ಸ್ತ್ರೀಸಂವೇದನಾ ಶಕ್ತಿಯನ್ನು ಸೂಚಿಸುತ್ತದೆ.

ಮೇಲಿನ ಪಂಚಾಂಶಗಳನ್ನು ಪರಿಶೀಲಿಸೋಣ. ಶತಾವಧಾನಿ ಶ್ರೀ ಗಣೇಶರ ಶ್ರೀಮದ್ಭಗವದ್ಗೀತೆಯ ಪ್ರವಚನ, ಶ್ರೀ ಡಿ.ವಿ.ಜಿ. ಅವರ ಶ್ರೀಮದ್ಭಗವದ್ಗೀತೆ ಮತ್ತು ನಾನು ಆಂಗ್ಲ ಭಗವದ್ಗೀತೆ ಎಂದು ಕರೆಯುವ John A Moore ಅವರ 'Science as a Way of Knowing' ಈ ಮೂರು ವಿಷಯ ಮೂಲಗಳು ಈ ಲೇಖನದ ಆಧಾರ ಸ್ತಂಭಗಳು. Science as a Way of Knowing ಪುಸ್ತಕ ವೈಜ್ಞಾನಿಕ ಹಿನ್ನೆಲೆಯಲ್ಲಿ ಬರೆದದ್ದು. ಶ್ರೀ ಡಿ.ವಿ.ಜಿ.ಯವರ ಬರವಣಿಗೆ ತೋರಿಕೆಗೆ ಆಧ್ಯಾತ್ಮಿಕ ಆದರೆ ವಾಸ್ತವವಾಗಿ ಅದು ತಾತ್ವಿಕವಾಗಿ ಒಕ್ಕಣಿಸಿದ್ದು. ನಾನು ಡಿ.ವಿ.ಜಿ.ಯವರ ಪುಸ್ತಕ ಓದುತ್ತಿದ್ದಂತೆ ಅವರ ತಾತ್ವಿಕ ಚಿಂತನೆ, ಅವರ ಧೋರಣೆ, ಅಭಿವ್ಯಕ್ತ ವಿಷಯಗಳ ಆಮೂಲಾಗ್ರ ಚಿತ್ರಣವನ್ನು ನೋಡಿ ಬೆರಗಾದೆ. Science as a Way of Knowing ಮತ್ತು ಶ್ರೀಮದ್ಭಗವದ್ಗೀತೆಯ ವಿಷಯ ಪ್ರತಿಪಾದನೆಯಲ್ಲಿ ಸಾಮ್ಯ ಇತ್ತು. ಈ ಮೇಲಿನ ಸಂಪಾದಕಿಯರ ವಾಕ್ಯಗಳು ಇವೆರಡರಿಂದ ಉದ್ಧರಿಸಿದಂತಿತ್ತು. 'ಬಿತ್ತಿದ್ದನ್ನುಣ್ಣೋ ಮಹಾರಾಯ' (You reap what you sow) ಎಂಬ ಎರಡು ಪದ ಸಂಪಾದಕಿಯರ ಮಾತಿನ ಸಾರ. ಈ ವಾಕ್ಯಗಳನ್ನು ಓದಿದ ನಾನು ಪ್ರಭಾವಿತನಾಗಿ, ಸ್ಫೂರ್ತಿಗೊಂಡು ಈ ಲೇಖನವನ್ನು ಟಂಕಿಸಲು ಹೊರಟಿರುವೆನು.

ಸಹಸ್ರಾರು ಕೋಟಿ ವರ್ಷಗಳ ಹಿಂದೆ ಸೂರ್ಯನಿಂದ ಛೇದಗೊಂಡ ಒಂದು ಉಲ್ಕಾ ತುಣುಕು 93 ಮಿಲಿಯ ಮೈಲು ದೂರದಲ್ಲಿ ಸ್ಥಿರವಾಗಿ ಸೂರ್ಯನನ್ನು ಪರಿಭ್ರಮಿಸತೊಡಗಿತು. ಹಾಗೆ ಕಾಲಚಕ್ರ ಉರುಳಿತು, ಮತ್ತೆಷ್ಟೋ ಸಹಸ್ರಾರು ವರ್ಷಗಳ ನಂತರ ವಾಯು ಮತ್ತು ಧೂಳುಪೂಸಿತ ಜಗತ್ತು ಘನೀಕರಿಸಿ ನಾವು ಇಂದು ಕಾಣುವ ಭೂಮಿ ಮತ್ತು ನೀರಿನ ಮಿಶ್ರಣವಾಗಿ ಒಂದು ಸ್ಥಿರಸ್ಥಿತಿಗೆ ಬಂದಿತು. ಆದರೆ ಎಲ್ಲವೂ ನಿರ್ಜೀವವಾಗಿತ್ತು... ಹಾಗೇ ಸಮಯ ಸಂದಿತು... ಒಂದು ಪರ್ವಕಾಲದಲ್ಲಿ, ಅಂದರೆ ಹವಾಮಾನ, ಶೀತೋಷ್ಣ, ಗುರುತ್ವಾಕರ್ಷಣೆ, ಭೂಮಿ, ನೀರಿನಲ್ಲಿರುವ ರಾಸಾಯನಿಕ ದ್ರವ್ಯಗಳ ಸಮ್ಮಿಶ್ರಣ ಮತ್ತು ನಮಗಿಂದಿಗೂ ಪೂರ್ಣ ಅರಿವಿಲ್ಲದ ಗಾಮ, ಬೀಟ ಮುಂತಾದ ಕಿರಣಗಳೆಲ್ಲ ಕೂಡಿಬರಲು, ಜಗತ್ತಿನಲ್ಲಿ ಪ್ರಪ್ರಥಮವಾಗಿ ಅಲೈಂಗಿಕ ಜೀವಿಯ ಉದ್ಭವವಾಯಿತು. ಕೋಟ್ಯಾನುಕೋಟಿ ವರ್ಷಗಳಿಂದ ನಿರ್ಜೀವವಾಗಿದ್ದ ಜಗತ್ತಿನಲ್ಲಿ

ಜೀವ ಬಂದಿತು. ಆ ಕಾಲದಲ್ಲಿ ಜೀವಿಗೂ, ನಿರ್ಜೀವಿಗೂ ಇದ್ದದ್ದು ಒಂದೇ ವ್ಯತ್ಯಾಸ, ಜೀವಿಗೆ ಸಂತಾನೋತ್ಪತ್ತಿ ಮಾಡುವಂತಹ ಶಕ್ತಿ ಇತ್ತು ನಿರ್ಜೀವಿಗೆ ಇರಲಿಲ್ಲ. ನೆನಪಿರಲಿ ಅವು ಅಲೈಂಗಿಕ ಜೀವಿಗಳು (Asexual) ಆದರೂ ಸಂತಾನೋತ್ಪತ್ತಿ ಎಂಬುದು ನಿಜವಾಗಿತ್ತು. ಕಾಲಚಕ್ರ ಉರುಳಿತು, ಮತ್ತೊಮ್ಮೆ ಎಲ್ಲಾ ಶಕ್ತಿ-ಯುಕ್ತಿಗಳು ಕೂಡಿ ಬಂದ ಪರ್ವಕಾಲದಲ್ಲಿ ಲೈಂಗಿಕ ಜೀವಿಗಳು ಉದ್ಭವಿಸಿದವು. ಓದುಗರು ದಯವಿಟ್ಟು ಗಮನಿಸಿ, ಇಡೀ ಲೇಖನದಲ್ಲಿ ಪೀಳಿಗೆಯ ಅಳಿವು-ಉಳಿವಿಗೆ ಸಂಬಂಧಪಟ್ಟ ಹಾಗೆ ಮಾತ್ರ ಉದ್ದೇಶಿಸಿ ನಾವು ಸ್ತ್ರೀಸಂವೇದನೆಯನ್ನು ವಿಶ್ಲೇಷಿಸುವ. ಇನ್ನೂ ಅನೇಕ ತರಹದಲ್ಲಿ ಇದು ಅನ್ವಯವಾಗುತ್ತದೆ, ಆದರೆ ಲೇಖನದ ಗಾತ್ರಮಿತಿಗೆ ಅಡಕವಾಗಿಸಲು ಈ ಕ್ರಮ ಕೈಗೊಳ್ಳೋಣ.

ಮೊದಲು ಸಂವೇದನೆಯ ಉಗಮ ಮತ್ತು ಕಾರ್ಯಕಾರಣ ಸಂಬಂಧವನ್ನು ಪರಿಶೀಲಿಸುವ. ಅಲೈಂಗಿಕ ಜೀವಿಗಳಿಂದ ಲೈಂಗಿಕ ಜೀವಿಗಳ ಉದ್ಭವ ತೀರಾ ಕಾಕತಾಳೀಯ. ವಿಜ್ಞಾನ ಇದನ್ನು ಹೇಗೆ ವಿವರಿಸುತ್ತದೆ ಎಂದರೆ, ಅಲೈಂಗಿಕ ಜೀವಿಗಳ ಸಂತಾನಾವೃತ್ತಿಯಲ್ಲಿ ಶಾಶ್ವತವಾಗಿ ಒಂದೇ ವಂಶವಾಹಿಗಳು ಪ್ರವಹಿಸುತ್ತಿತ್ತು. ತತ್ಪರಿಣಾಮವಾಗಿ ಪರಿಸರದ ಬದಲಾಗುವ ಪರಿಕರಗಳಿಗೆ ಅವು ಹೊಂದಿಕೊಳ್ಳಲಾರದೆ ನಾಶವಾಗುತ್ತಿತ್ತು. ಪ್ರಕೃತಿಯ ಅಪಭ್ರಂಶಿತ ವಿಪಥನದ (anomalous deviation) ಫಲವಾಗಿ ಲೈಂಗಿಕ ಜೀವಿಗಳು ಅಸ್ತಿತ್ವಕ್ಕೆ ಬಂದವು. ಶತಾವಧಾನಿ ಗಣೇಶರು ಶ್ರೀಮದ್ಭಗವದ್ಗೀತೆಯ ಕುರಿತ ಪ್ರವಚನದಲ್ಲಿ ಇದನ್ನು ಸ್ಪಷ್ಟಪಡಿಸುತ್ತಾರೆ, ಎಲ್ಲಿ ಸ್ಖಾಲಿತ್ಯವಿಲ್ಲವೋ ಅಲ್ಲಿ ಪ್ರಗತಿ ಇಲ್ಲ, ಸಮತೋಲನ ವಿಕಾಸಕ್ಕೆ ಮಾರಕ. ಇದನ್ನು ಆಧುನಿಕ ಜಗತ್ತಿಗೆ ಅನ್ವಯವಾಗುವಂತೆ ಹೇಳುವುದಾದರೆ Innovate or Perish! ಸಮಾಜದಲ್ಲಿ ಸಮತೋಲನ ತಪ್ಪಿದಾಗಲೇ ಅವತಾರಗಳು ಬರುವುದು, ಅವತಾರಗಳು ಕ್ರಾಂತಿಕಾರಿಯಾಗಿ ಬದಲಾವಣೆಯನ್ನು ತರುತ್ತದೆ. Science as a Way of Knowing ಪುಸ್ತಕದಲ್ಲಿ ಹೇಳುವ ವಿಕಾಸಕ್ಕೆ ಸಂವಾದಿಯಾಗಿ ಭಗವದ್ಗೀತೆಯಲ್ಲಿ ಅವತಾರಗಳು ಎಂದು ಕರೆಯುತ್ತಾರೆ. ಈ ಲೈಂಗಿಕ ಜೀವಿಗಳು ಹಾಗೆ ಜನಿಸಿದವು ಮತ್ತು ಅದೇ ಗಳಿಗೆಯಲ್ಲಿ "ಸಂವೇದನೆ" ಜನಿಸಿತು. ಸಂವೇದನೆ ಇಲ್ಲದೆ ಸಂತಾನೋತ್ಪತ್ತಿ ಇಲ್ಲ, ಸಂತಾನೋತ್ಪತ್ತಿ ಇಲ್ಲದ ಜಗತ್ತಿನಲ್ಲಿ ಜೀವಿಗಳಿಲ್ಲ. Even uni cell beings, planktons communicate with each other. ಸಂವೇದನೆಯ ಅತ್ಯಂತ ಕನಿಷ್ಠ ಮಟ್ಟದ ಉದಾಹರಣೆ ಇದು.

ಹಾಗೆ ಸೃಷ್ಟಿಯಾದ ದ್ವಿಲಿಂಗಿಗಳ ಜೀವರಾಶಿಯಲ್ಲಿ ಮೊದಮೊದಲು ಹೆಣ್ಣು, ಗಂಡು ಎಂಬ ತಾರತಮ್ಯವಿರಲಿಲ್ಲ. ಒಂದಕ್ಕೆ ಇನ್ನೊಂದರ ಅಸ್ತಿತ್ವವೆ ಅರಿವಿರಲಿಲ್ಲ. ಒಂದಕ್ಕೆ ಇನ್ನೊಂದರ ವೇದ್ಯವಿರಲಿಲ್ಲ. ಹೆಣ್ಣು ಹೆಣ್ಣಿನಷ್ಟಕ್ಕೆ ನೀರಿನಲ್ಲಿ ಮೊಟ್ಟೆ ಹಾಕಿ ಹೋಗುತ್ತಿತ್ತು. ಮತ್ತೆ ಯಾವತ್ತೋ, ಎಲ್ಲಿಂದಲೋ ಬಂದ ಗಂಡು ತನ್ನ ವೀರ್ಯಸ್ಪರ್ಶ ಮಾಡುತಿತ್ತು. ಪ್ರಶ್ನೆ ಇರುವುದು, ಗಂಡಿಗೆ ಹೆಣ್ಣು ಮೊಟ್ಟೆ ಹಾಕಿದೆ, ಎಲ್ಲಿ ಹಾಕಿದೆ, ಯಾವಾಗ ಅದಕ್ಕೆ ವೀರ್ಯಸ್ಪರ್ಶ ಪ್ರಶಸ್ತ ಎಂದು ಹೇಗೆ ಗೊತ್ತಾಗುತಿತ್ತು? ಇಲ್ಲಿ ಅಂಡವಿಟ್ಟ ಹೆಣ್ಣುಜೀವಿ ಒಂದು ಮಟ್ಟದ ಕನಿಷ್ಠ ಸಂವಹನದಲ್ಲಿ ತಾನು ಎಸಗಿದ ಕಾರ್ಯವನ್ನು ಗಂಡಿಗೆ

ತಿಳಿಸುತಿತ್ತು, ಗಂಡು ಅದಕ್ಕೆ ಪ್ರತ್ಯುತ್ತರವಾಗಿ ವೀರ್ಯಸ್ಪರ್ಶ ಮಾಡುತಿತ್ತು. ಹೀಗೆ ವಂಶವಾಹಿಗಳ ಬದಲಾವಣೆಯಾಗುತ್ತಾ ಸಂತಾನೋತ್ಪತ್ತಿ ಏನೋ ಆಗುತ್ತಿತ್ತು, ಆದರೆ ಈ ಕನಿಷ್ಠ ಸಂವಹನದ ಮೂಲಕ ಆಗುವ ಸಂತಾನದಲ್ಲಿ ವಿದ್ವತ್ ಪ್ರವಹಿಸುವುದಿಲ್ಲ. ಎಲ್ಲಿ ವಿದ್ಯೆ ಇಲ್ಲವೋ ಅಲ್ಲಿ ಜ್ಞಾನವಿಲ್ಲ, ಎಲ್ಲಿ ಜ್ಞಾನವಿಲ್ಲವೋ ಆ ಸಂತತಿಯ ನಾಶ ಖಂಡಿತ. ಈ ವಾಕ್ಯದ ಪೂರ್ಣ ಅರಿವಾಗಬೇಕಾದರೆ ಜೀವವಿಕಾಸ ತತ್ವ ಪರಿಶೀಲಿಸೋಣ. ಅಲೈಂಗಿಕದಿಂದ ಲೈಂಗಿಕಕ್ಕೆ ಪರಿವರ್ತನೆ ಸಹಸ್ರಾರು ವರ್ಷಗಳ ಕಾಲಾವಧಿಯಲ್ಲಿ ನಡೆಯಿತು. ಅದರ ಪಳೆಯುಳಿಕೆಗಳಾಗಿ ಇಂದಿಗೂ ಅನೇಕ ಸರ್ವಲಿಂಗ ಮೀನುಗಳಿವೆ. ಈ ಸರ್ವಲಿಂಗಿಗಳು ತಮ್ಮ ಜೀವಿತ ಕಾಲದಲ್ಲಿ ಅನೇಕಬಾರಿ ಲಿಂಗ ಬದಲಾಯಿಸುತ್ತವೆ. ಈ ಎಲ್ಲಾ ಪ್ರಕ್ರಿಯೆಗಳಲ್ಲಿ ಒಂದು ಲಿಂಗ ಇನ್ನೊಂದು ಲಿಂಗದ ಸುಖ, ದುಃಖ, ಕಷ್ಟ, ನಷ್ಟವನ್ನರಿತು ವರ್ತಿಸುವ ಅವಕಾಶವೇ ಇಲ್ಲ. ಹೀಗೆ ಕಾಲಚಕ್ರ ಉರುಳಲು, ಮೀನುಗಳಲ್ಲಿ ಭಾವನಾ ಶಕ್ತಿ ಉದ್ಭವವಾಯಿತು. ಇಂದಿಗೂ ವಿಜ್ಞಾನಕ್ಕೆ ನಿಖರವಾಗಿ ಗೊತ್ತಿರದ ವಿಚಾರವೇನೆಂದರೆ ಒಂದು ಮೀನು ಇನ್ನೊಂದು ಮೀನನ್ನು, ತನ್ನದೇ ಜಾತಿಯ ಅಥವಾ ವರ್ಗಕ್ಕೆ ಸೇರಿದ್ದೆಂದು ಯಾವ ಬಗೆಯಲ್ಲಿ ಗುರುತಿಸುತ್ತದೆ ಎಂಬುದು! ಆದರೆ ಅಲ್ಲೂ ಯಾವುದೋ ತರಹದ ಸಂವೇದನೆ ಇದ್ದಿರಲೇಬೇಕು. ಆದ್ದರಿಂದ ಪೂರ್ಣ ವಿಕಾಸವಾಗದ ಮೀನು, ಕೀಟ, ಪ್ರಾಣಿಗಳಲ್ಲಿ ಸ್ವಜಾತಿಭಕ್ಷಣೆ ವಿರಳವಲ್ಲ. ಏತನ್ಮಧ್ಯೆ ಗಂಡು, ಹೆಣ್ಣು ಎಂಬ ಲಿಂಗ ಪ್ರಭೇದ ಸ್ಪಷ್ಟವಾಗುತ್ತಾ ಬಂದಂತೆ, ಗಂಡು-ಹೆಣ್ಣಿನ ಪ್ರಣಯ ಮತ್ತು ಮಿಲನ, ಸಂತಾನೋತ್ಪತ್ತಿಯಲ್ಲಿ ಮುಖ್ಯ ಅಂಶವಾಗುತ್ತಾ ಬಂತು.

ಕಾಲ ಸಂದಿತು, ಸೂರ್ಯನಿಂದ ಸಿಡಿದ ತುಣುಕು ತನ್ನ ಪರಿಭ್ರಮೆಯಲ್ಲಿ ಸಹಸ್ರಾರು ಕೋಟಿ ಸುತ್ತು ಹಾಕಿತ್ತು. ಜಲಜಂತುಗಳು, ಭೂಮಿಗೆ ಪಾದಾರ್ಪಣೆ ಮಾಡಿತ್ತು. ಪ್ರಕೃತಿಯ ಅನೇಕಾನೇಕ ಪ್ರಾಯೋಗಿಕ ಲೀಲಾಟೋಪಗಳಲ್ಲಿ ಅಲ್ಲಿಯವರೆಗಿನ ಜೀವಲೋಕದಲ್ಲಿ ಸಂತಾನೋತ್ಪತ್ತಿ ಕ್ರಿಯೆಗೆ ಬೇಕಾದಷ್ಟು ಎಷ್ಟೋ ಅಷ್ಟಲ್ಲದೆ, ಸಂವೇದನೆ ಅಥವಾ ಜ್ಞಾನ ಸಂವರ್ಧನೆಗೆ ಸಂಬಂಧಿಸಿದಂತೆ ಹೆಚ್ಚಿನ ವಿಕಾಸವೇನೂ ಇದ್ದಂತೆ ಕಾಣುವುದಿಲ್ಲ.

ಈಗ ನಮ್ಮ ಪ್ರಬಂಧದ ಮುಖ್ಯಗುರಿಯಾದ ಸ್ತ್ರೀಸಂವೇದನೆಗೆ ಬರೋಣ. ಪಾಲನೆ, ಪ್ರಕೃತಿ (Nurture, Nature) ಇವೆರಡರಲ್ಲಿ ಯಾವುದು ಮನುಕುಲದ ವಿಕಾಸದಲ್ಲಿ ಮುಖ್ಯ ಪಾತ್ರ ಎಂಬುದು ನಮ್ಮ ಮುಂದೆ ಇರುವ ದೊಡ್ಡ ಸವಾಲು. ಇದರ ಬಗ್ಗೆ ತುಂಬಾ ಸಂಶೋಧನೆಗಳು ನಡೆದಿವೆ. ಒಂದು ಶಿಶುವಿಗೆ ತಾಯಿ, ತಂದೆಯರಿಂದ, ದೇಹ ಗಾತ್ರ, ಮೈ ಬಣ್ಣ, ಸುದೃಢ ಅಂಗಗಳು ಮತ್ತು ವಿಷಯ ಗ್ರಾಹಣೆಗೆ ಬೇಕಾದ ಚುರುಕಾದ ಮೆದುಳು ಅನುವಂಶಿಕವಾಗಿ ಬರಬಹುದು. ಇದನ್ನು ಗಣಕಯಂತ್ರದ ಪರಿಭಾಷೆಯಲ್ಲಿ Hardware ಎನ್ನಬಹುದು. ಆದರೆ ಆ ಶಿಶುವನ್ನು ಅದು ಜನಿಸಿದ ಸಕಾರಾತ್ಮಕ ಪರಿಸರದಿಂದ ಬೇರ್ಪಡಿಸಿ ಸಂಪೂರ್ಣ ನಕಾರಾತ್ಮಕ ಪರಿಸರದಲ್ಲಿ ಬೆಳೆಸಿದರೆ ಆ ಅನುವಂಶಿಕವಾಗಿ ಬಂದ ಬಳುವಳಿ ವ್ಯರ್ಥವಾಗುತ್ತದೆ, ಅದು ಬರೀ ಅಲಂಕಾರವಾಗುತ್ತದೆ. Software (Operating System) ಅಷ್ಟೇ ಮುಖ್ಯ. ಅದೇ ತಾಯಿ ತಂದೆಯರು, ಭೌತಿಕವಾಗಿ

ಎಷ್ಟೇ ದುರ್ಬಲ ದೇಹಿಗಳಾಗಿದ್ದರೂ ತಮ್ಮ ಮಗುವಿಗೆ ಪೂರಕವಾದ ಪರಿಸರವನ್ನು ಒದಗಿಸಿ ಶಿಸ್ತಿನಿಂದ, ಪರಿಶ್ರಮದಿಂದ ಬೆಳೆಸಿದಲ್ಲಿ, ಆ ಮಗು ಸುದೃಢವಾಗಿ, ಉತ್ಕೃಷ್ಟವಾಗಿ ಬೆಳೆಯಬಹುದಾಗಿದೆ. ಇದಕ್ಕೆ ಸಾಕಷ್ಟು ಉದಾಹರಣೆಗಳು ಇವೆ. ಇದರ ತಾತ್ಪರ್ಯ ಪ್ರಕೃತಿ ಬೇಕು ಆದರೆ ಅದಕ್ಕಿಂತ ಮುಖ್ಯ ಪಾಲನೆ. ಹೆತ್ತು, ಹೊತ್ತವರು ಇಲ್ಲಿ ಮುಖ್ಯ ಪಾತ್ರವಹಿಸುತ್ತಾರೆ. ಇಷ್ಟು ಉದ್ದ ಬರೆದ ಕಂತೆ ಪುರಾಣಕ್ಕೂ, ಸ್ತ್ರೀಸಂವೇದನಕ್ಕೂ ಏನು ಸಂಬಂಧ? ಎಂಬ ಪ್ರಶ್ನೆ ಬರುವುದು ಸ್ವಾಭಾವಿಕ. ಇದಕ್ಕುತ್ತರ ಇಂತಿದೆ.

ಸ್ತ್ರೀಸಂವೇದನೆ ಈ ಪ್ರಬಂಧಕ್ಕೆ ಸಂಬಂಧಪಟ್ಟ ಹಾಗೆ ಬರುವುದು ಗಂಡು–ಹೆಣ್ಣಿನೊಡನೆ ಸಂಭಾಷಣೆ ಮಾಡುವಾಗ. ಇದು ವಯಸ್ಸು ಎಂಬ ಪರಿಕಲ್ಪನೆಯಿಂದ ಅತೀತವಾಗಿರಬೇಕು. ಧೀಮಹೀ, ಒಬ್ಬಳು ಸಣ್ಣ ಹುಡುಗಿ, ಅವಳಿಗೆ 3 ವರ್ಷ. ಆಟದ ಮೈದಾನದಲ್ಲಿ ಅವಳು, ಮತ್ತಿಬ್ಬರು ಹುಡುಗಿಯರು, ಮತ್ತೆ ಒಬ್ಬ ಹುಡುಗ (ರವಿ), ಎಲ್ಲಾ ಸಮವಯಸ್ಕರೆ, ಆಡುತ್ತಿರುತ್ತಾರೆ. ರವಿ ಚೆಂಡು ಆಡುವುದರಲ್ಲಿ ನಿಷ್ಣಾತ. ಇನ್ನೊಬ್ಬ ಹುಡುಗ (ಶ್ಯಾಮ) ಚೆಂಡನ್ನು ಕಾಲಲ್ಲಿ ಕುಟ್ಟಿಕೊಂಡು ಬರುತ್ತಾನೆ. ಶ್ಯಾಮ ಬಂದು ಏನು ಕೇಳಬೇಕು? "ಯಾರಾದರೂ ನನ್ನೊಡನೆ ಆಡುತ್ತೀರೋ?" ಲಿಂಗಾತೀತವಾಗಿರಬೇಕು ಅವನ ನೋಟ, ಆಗ ಅವನ ಸ್ತ್ರೀಸಂವೇದನೆ ಶಕ್ತಿಯುಕ್ತವಾಗಿದೆ ಎನ್ನಬಹುದು. ಧೀಮಹೀ ಮತ್ತು ರವಿ, ಶ್ಯಾಮನೊಡನೆ ಆಡುವ ಬಯಕೆ ವ್ಯಕ್ತಪಡಿಸುತ್ತಾರೆ. ಆಗ ಶ್ಯಾಮ ಆಟಕ್ಕೆ ಯಾರನ್ನು ಸೇರಿಸಿಕೊಳ್ಳುತ್ತಾನೆ ಎಂಬುದರಲ್ಲಿ ಅವನ ನಿಜವಾದ ಸ್ತ್ರೀಸಂವೇದನಾ ಶಕ್ತಿ ತೋರಿಸುತ್ತದೆ. ಅದನ್ನು, ನಾವು ಹಿರಿಯರು ಗಂಡು ಮಕ್ಕಳಲ್ಲಿ 2–3 ವರ್ಷದವರಿಂದಲೇ ಬೆಳೆಸಬೇಕು. ಇನ್ನು ವಯಸ್ಕರಲ್ಲಿ ಒಬ್ಬ ಗಂಡಸು ಒಬ್ಬ ಹೆಂಗಸೊಡನೆ ಸಂಭಾಷಣೆ ಇಲ್ಲ ಯಾವುದೇ ತರಹದ ಸಂಪರ್ಕ ಬೆಳೆಸಬೇಕಾದರೆ ಸಾನುಕ್ರೋಶಃ ಅಂದರೆ ಸಹಾನುಭೂತಿ ಅರಿತು ವರ್ತಿಸಬೇಕು, ಅಲ್ಲಿ ಬರುತ್ತದೆ ಸ್ತ್ರೀಸಂವೇದನೆ. ಗಂಡು – ಹೆಣ್ಣಿನ ಒಡನಾಟವನ್ನು 4 ವರ್ಗದಲ್ಲಿ ಪರಿಗಣಿಸಬಹುದು. ಜನ್ಮಾಂತರ ಸಂಬಂಧ, ವೃತ್ತಿಪರ ಸಂಬಂಧ, ಅಪರಿಚಿತ ಸಂಬಂಧ ಮತ್ತು ಪತಿ, ಪತ್ನಿ ಸಂಬಂಧ. ಮೊದಲನೆಯ ಮೂರು ತುಂಬಾ ಮುಖ್ಯ, ಆದರೆ ಅವೆಲ್ಲಕ್ಕಿಂತ "ಸ್ತ್ರೀಸಂವೇದನೆ" ಅತಿ ಮುಖ್ಯವಿರುವುದು ಸಮಾಜ ಮಾನಿತ ಮದುವೆಯೆಂಬ ಕಟ್ಟಳೆಯಲ್ಲಿ ಒಟ್ಟುಗೂಡಿಸಿದ ಗಂಡು ಹೆಣ್ಣಿನ ಮಧ್ಯೆ. ಕಾರಣವೇನೆಂದರೆ ಸಂಸಾರ ನಮ್ಮ ಮನುಕುಲದ ಮೂಲ ವೃದ್ಧಿಯ ಬೀಜ ಕೇಂದ್ರ, ಅತ್ಯಂತ ಕಿರು ಘಟಕ. ಅಲ್ಲಿ ಸ್ತ್ರೀಸಂವೇದನೆ ಸರಿ ಇದ್ದರೆ ಅದರ ಪ್ರಭಾವ ಪೀಳಿಗೆಯಿಂದ ಪೀಳಿಗೆಗೆ ದಾಟುತ್ತದೆ. ನಮ್ಮ ಈ ಲೇಖನದಲ್ಲಿ ಪತಿ/ಪತ್ನಿ ಮತ್ತು ಸಾಮಾಜಿಕವಾಗಿ ಗಂಡಸು/ಹೆಂಗಸರ ಮಧ್ಯದ ಸಂವಹನ ಮಾಧ್ಯಮವನ್ನು ಮುಖ್ಯ ಗುರಿಯಾಗಿ ಇಟ್ಟುಕೊಂಡಿದ್ದೇವೆ, ಅದಕ್ಕೆ ಜಾಸ್ತಿ ಪ್ರಾಶಸ್ತ್ಯ ಕೊಡೋಣ. ಸ್ತ್ರೀಸಂವೇದನೆ – ಅದರ ಮಹತ್ವ, ಅಗತ್ಯ ಮತ್ತು ಅದೆಲ್ಲಕ್ಕಿಂತ ಮುಖ್ಯವಾಗಿ ಈ ಪುರುಷಪ್ರಧಾನ ಜಗತ್ತಿನಲ್ಲಿ ಹೇಗೆ ಅದನ್ನು, ನಾವು ಗಂಡಸರು, ಉಲ್ಲಂಘಿಸಿದ್ದೇವೆ ಎಂಬುದನ್ನು ಬಿಡಿ ಬಿಡಿಯಾಗಿ ವಿಶ್ಲೇಷಿಸಿ ಪರಿಶೀಲಿಸೋಣ.

ಮನೆಯೇ ಮೊದಲ ಪಾಠಶಾಲೆ, ಜನನಿ ತಾನೆ ಮೊದಲ ಗುರುವು... John Medina ಅವರ Brain Rules For Babies ಪುಸ್ತಕದಲ್ಲಿ ಭ್ರೂಣದ ಸಂಸ್ಕಾರ ಶುರುವಾಗುವುದು ಅದರ ಎರಡನೇ ತಿಂಗಳಲ್ಲಿ ಎಂದು ಉಲ್ಲೇಖಿಸುತ್ತದೆ. ಅಲ್ಲದೆ ಹೆಜ್ಜೆ ಹೆಜ್ಜೆಗೆ ತಾಯಿಯ ಮನಃಸ್ವಸ್ಥತೆ ಬಗ್ಗೆ, ಅದರಿಂದ ಭ್ರೂಣಕ್ಕೆ ಆಗುವ ಪ್ರಭಾವ ಬಿಡಿಬಿಡಿಯಾಗಿ ವಿವರಿಸುತ್ತಾರೆ, ಸುಭದ್ರಾಪುತ್ರ ಅಭಿಮನ್ಯು ಚಕ್ರವ್ಯೂಹದ ಮರ್ಮ ಅರಿತದ್ದು ಸ್ವಲ್ಪ ಉತ್ಪ್ರೇಕ್ಷೆಯಾದರೂ ಅಸಾಧ್ಯವಲ್ಲ! ಬಸಿರಿನ 2ನೇ ತಿಂಗಳಿನಿಂದ ವಿಷಯ ಗ್ರಹಣ ಶುರುಮಾಡಿದ ಮಗು ಕನಿಷ್ಠ ತನ್ನ 5ನೇ ವರ್ಷದವರೆಗೆ ತನ್ನ ಜನನಿಯನ್ನು ಸಂಪೂರ್ಣವಾಗಿ ಗುರುವಾಗಿ ಮಾನಿಸುತ್ತದೆ. ಅಂದರೆ ಆ ಸಮಯದಲ್ಲಿ ಜನನಿಯಾದವಳು ತುಂಬಾ ಜವಾಬ್ದಾರಿಯನ್ನು ಹೊತ್ತಿರುತ್ತಾಳೆ. ಮುಂದಿನ ಪೀಳಿಗೆಯ ಬುನಾದಿ, ಭವಿಷ್ಯದ ಸಮಾಜದ ಅಡಿಪಾಯ ಹಾಕುತ್ತಿರುತ್ತಾಳೆ. ಬಸಿರಿ ಆದನಂತರ ಪ್ರಥಮ 5 ತಿಂಗಳು ಅವಳ ಮಾನಸಿಕ ಸ್ಥಿತಿಯನ್ನು ಅತ್ಯಂತ ಉನ್ನತ ಮಟ್ಟದಲ್ಲಿ ಅಂದರೆ ಉಲ್ಲಾಸದಾಯಕವಾಗಿ ಇಟ್ಟರೆ ನಮ್ಮ ಮನುಕುಲಕ್ಕೆ ಶ್ರೇಯಸ್ಕರ. ಅಂದರೆ, ನಂತರ ಸ್ತ್ರೀಸಂವೇದನೆಯನ್ನು ಮರೆತು ಸ್ತ್ರೀಶೋಷಣೆ ಮಾಡಬಹುದು ಎಂದರ್ಥವಲ್ಲ, ಯಾವತ್ತೂ ಸಂವೇದನಾಪೂರ್ಣ-ವಾಗಿಯೇ ಇರಬೇಕು. ಆ ಕಾಲದಲ್ಲಿ ವಿಶೇಷವಾಗಿ ಎಚ್ಚರವಹಿಸಬೇಕು.

ಹಿಮ್ಮುಖ ತಾರತಮ್ಯ (Reverse Discrimination) ಎಂಬುದು ಇತ್ತೀಚೆಗೆ ತುಂಬಾ ಕೇಳಿಬರುತ್ತದೆ. ಅಂದರೆ, ಉಚ್ಚಕುಲದವರಿಗೆ ಅವರ ಉಚ್ಚತನವೇ ದೋಷವಾಗುವುದು, ಅಂದರೆ ಉನ್ನತ ವ್ಯಾಸಂಗ, ಕೆಲಸ ಇತರ ವ್ಯವಹಾರಗಳಲ್ಲಿ ಅಡಚಣೆಯಾಗುವುದು. ಗಂಡಸರಿಗೆ ಅವರ ಲಿಂಗವೇ ಮಾರಕವಾಗುವುದು. ಬಿಳಿ ಜನರಿಗೆ ಅವರ ಮೈಬಣ್ಣವೇ ಅವರನ್ನು ಕೆಳಗೆಳೆಯುವುದು ಹೌದು ಹಿಮ್ಮುಖ ತಾರತಮ್ಯ ಮಾಡಬಾರದು, ವಾಸ್ತವವಾಗಿ ಯಾವುದೇ ತರಹದ ತಾರತಮ್ಯ ಮಾಡಬಾರದು. ಆದರೆ ಲಿಂಗ, ಜಾತಿ, ಮೈಬಣ್ಣವೆಂದು ತಾರತಮ್ಯ ಸಾವಿರಾರು ವರ್ಷಗಳಿಂದ ಅಂಥ ಪ್ರಬಲವಾಗಿ ಬಂದಿರುವಾಗ, ಈ ಕಳೆದ 50 ವರ್ಷದಲ್ಲಿ "ತಾರತಮ್ಯ ಮಾಡಬಾರದು" ಎಂಬ ಜಾಗೃತಿ ಸಂಪೂರ್ಣವಾಗಿ ಜನರಲ್ಲಿ ಮೈಗೂಡುವ ಮುನ್ನ ಹಿಮ್ಮುಖ ತಾರತಮ್ಯ ಪದಕ್ಕೆ ಅರ್ಥವೇ ಇಲ್ಲ. ಆದ್ದರಿಂದ ಸ್ತ್ರೀಸಂವೇದನೆ ಸ್ವಾಭಾವಿಕವಾಗಿ ಸಮಾಜದಲ್ಲಿ ಮೈಗೂಡುವವರೆಗೂ ಹಿಮ್ಮುಖ ತಾರತಮ್ಯಕ್ಕೆ ಅರ್ಥವಿಲ್ಲ. ಬರೀ ತಾರತಮ್ಯವನ್ನು, ಸದಾ ಎಚ್ಚರಿಕೆಯಿಂದ ಮಾತು ಮಾತಿಗೆ ಜ್ಞಾಪಿಸಿಕೊಳ್ಳುತ್ತ ಅದು ಆಗದಿರುವಂತೆ ಎಚ್ಚರಿಕೆ ವಹಿಸಲೇ ಬೇಕು. ಹಿಮ್ಮುಖ ತಾರತಮ್ಯವಾದರೆ ಅದನ್ನು ನಮ್ಮ ಪ್ರಾರಬ್ಧಕರ್ಮವೆಂದು ನುಂಗಬೇಕು. ಗಂಡಸರು, ಉಚ್ಚ ಜಾತಿಯವರು, ಬಿಳಿಯರು, ಸಿರಿವಂತರು ನಿತ್ಯ ನಿರಂತರ ಜ್ಞಾಪಿಸಿಕೊಳ್ಳಬೇಕಾದದ್ದು ಅವರ ಸವಲತ್ತಿನ ಜನನದ (Born to Privilege) ಹಿನ್ನೆಲೆ, ಮತ್ತು ಅದು ಅವರನ್ನು ಪೀಠಾಧಿಪತಿಯಾಗಿ ಕೂರಿಸಿದ್ದು! ಅದರಿಂದ ಅವರಿಗೆ ಹಿಮ್ಮುಖ ತಾರತಮ್ಯವಾದರೆ ಅನುಭವಿಸಲೇಬೇಕು, ಹೆಂಗಸರು ಸಹಸ್ರಾರು ವರ್ಷ ಅನುಭವಿಸಿದ ಅನ್ಯಾಯ ಜ್ಞಾಪಿಸಿಕೊಳ್ಳಬೇಕು. ನಿರಾಶಾವಾದಿಗಳು ಕೇಳಬಹುದು, ಎಂದಾದರೂ ಈ ಸಕಲ ತಾರತಮ್ಯ ನೀಗೀತೋ ಎಂದು? ಕೆಲವು

ಜನಾಂಗದಲ್ಲಿ, ಕೆಲವು ದೇಶಗಳಲ್ಲಿ ತುಂಬ ಬದಲಾವಣೆಯಾಗಿದೆ, ಭಾರತ ಅದರಲ್ಲಿ ಮುಂಚೂಣಿಯಲ್ಲಿದೆ. ಅಂದಿನ ಆದ್ಯಪ್ರವರ್ತಕಿ ಇಂದಿರಾಗಾಂಧಿಯಿಂದ ಹಿಡಿದು ಇಂದಿನ ಇಂದಿರಾ ನೂಯಿಯ ಮಧ್ಯೆ ಕೋಟಿಗಟ್ಟಲೆ ಹೆಂಗಸರು ಮೇಲೆ ಬಂದಿದ್ದಾರೆ, ಇದು ಹೇಗೆ ಸಾಧ್ಯವಾಯಿತು? ಸಮಾಜದ ಸ್ತ್ರೀಸಂವೇದನಾ ಶಕ್ತಿ ಜಾಸ್ತಿ ಆದದ್ದಕ್ಕೆ.

ಭಾರತದಲ್ಲಿ ಸ್ತ್ರೀಯನ್ನು ಮಾತೆ, ಮಹಾ ಮಾಯೆ, ಆದಿಶಕ್ತಿ ಎಂದು ನಮ್ಮ ಪುರಾಣಗಳಲ್ಲಿ, ಸಾಹಿತ್ಯದಲ್ಲಿ ಹಾಡಿ ಹರಸಿದ್ದಾರೆ. ಎಲ್ಲ ಬೆಟ್ಟ, ಕಾಡು, ಹೊಳೆ ಎಲ್ಲವೂ ಅವರ ಹೆಸರಲ್ಲಿದೆ. ಆದರೂ ನಮ್ಮ ಪುರಾಣಗಳಿಂದ ಹಿಡಿದು ಇಂದಿನವರೆಗೆ ಅಂದರೆ 1970–80 ರವರೆಗೆ ಸ್ತ್ರೀಸಂವೇದನೆ ತನ್ನ ಕನಿಷ್ಠ ಮಟ್ಟದಲ್ಲಿತ್ತಲ್ಲ? ಏಕೆ? ಇದನ್ನರಿತ ನಮ್ಮ ಋಷಿಪುಂಗವರು, ವೇದಜ್ಞಾನಿಗಳು ಏನು ಮಾಡಿದರು ಎಂಬುದನ್ನು ಪರಾಂಬರಿಸೋಣ. ವಾಲ್ಮೀಕಿ ಮುನಿಯ ಪೌಲಸ್ತ್ಯವಧ (ರಾಮಾಯಣ) ಪುರಾಣದ ಕೆಲವು ಸಾಂದರ್ಭಿಕವಾಗಿ ಅನ್ವಯಿಸುವ ವಿಷಯಗಳನ್ನು ಗಮನಿಸಿ.

ವಾಲ್ಮೀಕಿ ಒಬ್ಬ ಬೇಡರವ. ರಾವಣ ಪೌಲಸ್ತ್ಯ, ರಾಕ್ಷಸರ ರಾಜ.

ರಾವಣ ಪುತ್ರಿ ಸೀತೆ – ಹೆತ್ತ ತಾಯಿ, ತಂದೆಯಿಂದ ತ್ಯಜಿಸಲ್ಪಟ್ಟವಳು (ಇದು ಕೆಲವೊಂದು ಆವೃತ್ತಿಗಳಲ್ಲಿ ಬರುವ ರೂಪಾಂತರ), ಕೈ ಹಿಡಿದ ಪತಿಯಿಂದ ಎರಡೆರಡು ಬಾರಿ ವಿಚ್ಛೇದಿಸಲ್ಪಟ್ಟವಳು ಕಡೆಗೆ ತನ್ನ ಅಂತಿಮ ಕಾಲದಲ್ಲಿ ಹೆತ್ತ ಮಕ್ಕಳ ಸಖ್ಯದಿಂದ ವಂಚಿಸಲ್ಪಟ್ಟವಳು.

ತ್ರೇತಾಯುಗದಲ್ಲಿ, ಶೂನ್ಯಕ್ಕೆ ತಲುಪಿದ ವೇದನೆ ಉತ್ಕಟೋತ್ಕಟ ಮಟ್ಟ ತಲುಪಲು, ಯಾರಿಗೂ ಬೇಡದವ ಬೇಡರ ದತ್ತುಪುತ್ರ ಸುದೀರ್ಘವಾಗಿ ಅಂತರ್ಮುಖನಾಗಿ ತಪಸ್ಸು ಮಾಡಿ ಹೀಗೆ ಗ್ರಹಿಸಿದ. 'ಜನರಿಗೆ/ಸಮಾಜಕ್ಕೆ ಜಾತಿಭೇದ, ವರ್ಣಭೇದ, ಲಿಂಗಭೇದ ಮಾಡಬೇಡಿ ಎಂದು ನೇರವಾಗಿ ಹೇಳಿದರೆ ಅರ್ಥವಾಗುವ ಹಾಗೆ ಕಾಣುವುದಿಲ್ಲ. ಬದಲಾಗಿ ಪರೋಕ್ಷವಾಗಿ ಒಬ್ಬ ದೇವತಾ ಪುರುಷ – ಅಂದರೆ ಎಲ್ಲಾ ರೀತಿಯಲ್ಲಿ ಪರಿಪೂರ್ಣನನ್ನು ಸೃಷ್ಟಿಸಿ ಆತನಿಂದ, ಆಗಿನ ಕಾಲದಲ್ಲಿ ಆಗುತ್ತಿದ್ದ ಎಲ್ಲಾ ತಾರತಮ್ಯವನ್ನು ಮಾಡಿಸಿದರೆ ಆಗಲಾದರೂ ಜನರಿಗೆ/ಸಮಾಜಕ್ಕೆ ವೇದ್ಯವಾದೀತು' ಎಂದು ಬಗೆದು ವಾಲ್ಮೀಕಿ ಮುನಿನಾಥ ಪೌಲಸ್ತ್ಯವಧ ಪುರಾಣವನ್ನು ನಿರ್ಮಿಸಿದ. ಹಿಮ್ಮುಖ ಮನಃಶಾಸ್ತ್ರದ (Reverse Psychology) ಅಸ್ತ್ರವ ಉಪಯೋಗಿಸಿದ. ಸಕಲ ಸದ್ಗುಣಗಳ ಸಂಪನ್ನನಿಂದ ಸ್ತ್ರೀಸಂವೇದನದ ಗರಿಷ್ಠ ಋಣಾತ್ಮಕ ವರ್ತನೆಯನ್ನು ಚಿತ್ರಿಸಿದ.

ನಾವು ಈ ಪ್ರಬಂಧದ ಪ್ರಧಾನ ಗುರಿಯನ್ನು ಮನಸಲ್ಲಿಟ್ಟುಕೊಂಡು ಬರೀ ಸ್ತ್ರೀಸಂವೇದನೆ ಹೇಗೆ ಅಧೋಗತಿಗೆ ತಲುಪಿತ್ತು ಎಂದು ಪರಿಶೀಲಿಸೋಣ. ಓದುಗರಲ್ಲಿ ಒಂದು ವಿನಂತಿ. ವಾಲ್ಮೀಕಿ, ವ್ಯಾಸ ಮೊದಲಾದ ಮೇಧಾವಿಗಳು ಒಂದು ಮಹಾ ಕಾವ್ಯವನ್ನು ಸಮಾಜೋದ್ಧಾರಕ್ಕೆಂದು ಒಕ್ಕಣಿಸುವಾಗ ಅದಕ್ಕೆ ಅನೇಕಾನೇಕ ಅರ್ಥ, ಅನೇಕಾನೇಕ ಮೂಲತತ್ತ್ವ ಪ್ರತಿಪಾದನೆ ಮನಸ್ಸಲ್ಲಿಟ್ಟಿರುತ್ತಾರೆ. ನಾವೀಗ ಆ ಮಹಾಕಾವ್ಯಗಳನ್ನು ತಾಳ್ಮೆಯಿಂದ, ಬಿಚ್ಚುಮನಸ್ಸಿನಿಂದ ಓದುವವರಂಥವರಾಗಿ, ಬೇರೆ

ಕನ್ನಡಕ ಹಾಕಿ ಪರಿಶೀಲಿಸಬೇಕು. ಮಕ್ಕಳಿಲ್ಲದ ದಶರಥ, ತ್ರಿಪತ್ನಿಯರ ಮೂಲಕವೂ ಸಂತಾನಾಭಿವೃದ್ಧಿಯಲ್ಲಿ ಸಫಲನಾಗದಿರಲು, ತನ್ನ ದೋಷವ ಅರಿಯದೆ, ಋಷಿ ಪುಂಗವರಿಂದ ವೀರ್ಯದಾನ ಬೇಡಿ ಸಂತಾನ ಪಡೆಯುತ್ತಾನೆ. ಈ ಪ್ರಕ್ರಿಯೆಯಲ್ಲಿ ಸ್ತ್ರೀಸಂವೇದನೆ ಯಾವ ಕನಿಷ್ಠಮಟ್ಟಕ್ಕೆ ಹೋಗಿತ್ತೋ ಆ ಮುನಿನಾಥನೇ ಬಲ್ಲ. ಈ ತರಹದ ಸಂತಾನೋತ್ಪತ್ತಿ ಮಹಾಭಾರತದಲ್ಲೂ ಹಾಸುಹೊಕ್ಕಾಗಿದೆ. ನಂತರ ಈರ್ವರು ಹಿರಿಯ ಹೆಂಡಿರು, ಕೌಸಲ್ಯ, ಸುಮಿತ್ರೆಯರನ್ನು ಅಲಕ್ಷಿಸಿ ಅವರ ಪುತ್ರರನ್ನು ಕಾಡಿಗಟ್ಟುತ್ತಾನೆ ದಶರಥ ಭೂಪತಿ. ದಶರಥ ಪುತ್ರ ತನ್ನ ಕೈ ಹಿಡಿದ ಮಡದಿಯ ಮನೋಭಿಲಾಷೆಯನ್ನು ನಿರ್ಲಕ್ಷಿಸಿ (ಇಲ್ಲಿ "ಮಡಿ"ವಂತರು ಹೇಳುತ್ತಾರೆ, ರಾಮ ಒತ್ತಾಯ ಮಾಡಲಿಲ್ಲ ತನ್ನ ಮಡದಿಗೆ, ಬರಬೇಡ ಎಂದು ಬಗೆ ಬಗೆಯಲ್ಲಿ ಹೇಳಿದ, ಕಡೆಗೆ ಅವಳಿಗೆ ನಿರ್ಧರಿಸಲು ಬಿಟ್ಟ ಎಂದು ಇತ್ಯಾದಿ ಸಮಜಾಯಿಸುತ್ತಾರೆ. ಆದರೆ ನಮಗೆಲ್ಲ ಗೊತ್ತಿರುವ ಹಾಗೆ ತ್ರೇತಾಯುಗ ಅಲ್ಲ ಇಂದಿನ ಕಲಿಯುಗದಲ್ಲೂ ಪತಿ ಕಷ್ಟ, ಕಾರ್ಪಣ್ಯ ಅನುಭವಿಸುತ್ತಿರುವಾಗ ಪತ್ನಿಯಾದವಳು ಭೋಗದಲ್ಲಿ ಆವಿರ್ಭಾವಿಸಲು ಸಾಧ್ಯವೇ?? ಇಲ್ಲವೇ ಇಲ್ಲ). ನಮ್ಮ ಮುಂದೆ ಇರುವ ಸರಳ ಪ್ರಶ್ನೆಗಳು, ಕೈ ಹಿಡಿದ ಅದೂ ನೂತನ ದಂಪತಿಗಳಲ್ಲಿ ಪತಿಯ ಕರ್ತವ್ಯ ಮುದಿತಂದೆಯ ಅರ್ಥಹೀನ ವಚನಪಾಲನೆಗೋ ಇಲ್ಲ ಧರ್ಮಪತ್ನಿಗೋ? ಒಬ್ಬ ರಾಜಕುವರನ ಧರ್ಮ ಅವನ ಆಳ್ವಿಕೆಗೆ ಎದುರು ನೋಡುತ್ತಿದ್ದ ಪ್ರಜೆಗಳಿಗೋ ಇಲ್ಲ ಮುದಿತಂದೆಯ ಮಾತು ಉಳಿಸುವುದೋ? ಮುಖ್ಯವಾಗಿ ಇಲ್ಲಿ ಮುನಿನಾಥ ಸ್ತ್ರೀಸಂವೇದನೆಯ ಋಣಾತ್ಮಕ ಗರಿಷ್ಠಮಟ್ಟ ತಲುಪಲು ಯತ್ನಿಸುತ್ತಾನೆ. ನಂತರ ಅಣ್ಣನಿಂದ ತಾನೇನು ಕಡಿಮೆ ಇಲ್ಲಾ ಎಂದು ತೋರಿಸಲು ಅವನ ಅನುಜ, ಸಹಧರ್ಮಿಣೀ ಊರ್ಮಿಳೆಯನ್ನು 14 ವರ್ಷ ಪವಡಿಸಿ, ಶಿವ ಧನುಸ್ಸನ್ನು ಛೇದಿಸಿದ, ಪರಾಕ್ರಮಿಗಳಲ್ಲಿ ಪರಾಕ್ರಮಿ, ಶೂರರ ಶೂರ, ಧೀರರ ಧೀರ ಅಗ್ರಜನನ್ನು ಕಾಡಿನಲ್ಲಿ ಕಾಪಾಡಲು, ಅವನ ಸೇವೆ ಮಾಡಲು ಹೋಗುತ್ತಾನೆ. ಇಲ್ಲಿ ಸ್ತ್ರೀಸಂವೇದನೆಯ ಅಧೋಗತಿಯ ಪರಾಕಾಷ್ಠೆಯ ಉಚ್ಚ ಉದಾಹರಣೆ ತೋರಿಸುತ್ತಾನೆ ವಾಲ್ಮೀಕಿ ಮುನಿ ಪುಂಗವ. ಒಂದು ನಿಮಿಷ ಇದೇ ಸಂದರ್ಭವನ್ನು ಇಂದು ಕಲಿಯುಗದಲ್ಲಿ ಕಲ್ಪಿಸಿಕೊಳ್ಳಿ. ಯಾರಾದರೂ ತನ್ನ ವಿನೂತನ ಭಾರ್ಯೆಯನ್ನು ನಿದ್ರಾಲೋಕಕ್ಕೆ ತಳ್ಳಿ ಅಣ್ಣನ ಬಾಲ ಹಿಡಿದರೆ ಏನಾಗಬಹುದು? ಅಕ್ಷಮ್ಯ ಅಪರಾಧ, ವಿಚ್ಛೇದನ ಖಂಡಿತ.

ವ್ಯಾಸರೂ, ವಾಲ್ಮೀಕಿ ಹಾಕಿದ ಪಥದಲ್ಲಿ ಚಲಿಸಿ, ಪಂಚಪತಿಗಳು, ಹಿರಿಯ ಬಂಧುಗಳ ಸಮಕ್ಷಮದಲ್ಲಿ ಪಾಂಚಾಲಿಗೆ ವಸ್ತ್ರಾಪಹರಣ ಮಾಡಿಸಿದರು. ಧರ್ಮರಾಯನಿಂದ ಹಿಡಿದು ನಕುಲ, ಸಹದೇವರಂಥ ಪುರುಷ ಶ್ರೇಷ್ಠರನ್ನು ಸೃಷ್ಟಿಸಿ, ವಿಶ್ವಕ್ಕೊಬ್ಬ ಭೀಷ್ಮ ಎಂದು ಘೋಷಿಸಿ ಮತ್ತೆ ಅಂಥವರಿಂದ ಸ್ತ್ರೀಸಂವೇದನದ ಅರ್ಥವನ್ನು ಛಿದ್ರ ಛಿದ್ರ ಮಾಡಿಸಿ, ಜಗತ್ತಿಗೆ ಆದರ್ಶ ತೋರಿದರು. ಏನದು ಆದರ್ಶ? 'ಗಂಡಸೇ ನೀನು ನಿನ್ನ ಶೌರ್ಯ, ಧೈರ್ಯ, ವೀರ್ಯ, ಸ್ಥೈರ್ಯ ಸಕಲ ಸದ್ಗುಣಗಳಲ್ಲೂ ಉನ್ನತ ಸ್ಥಿತಿಗೆ ತಲುಪಿದ್ದರೂ ಕೂಡ ಮೂಲಭೂತ ಸ್ತ್ರೀಸಂವೇದನೆ ಅರಿಯದಿದ್ದರೆ ನೀನು ನಿಷ್ಪ್ರಯೋಜಕ'. ಕೃಷ್ಣೆಗಾದ

ಅಪಮಾನ, ಒಬ್ಬ ಕೃಷ್ಣ ಬಗೆಹರಿಸುವ ಕತೆಯನ್ನು ಇನ್ನೊಬ್ಬ ಕೃಷ್ಣ ಒಕ್ಕಣಿಸಿದ. ಏಕೆ ಒಕ್ಕಣಿಸಿದ? ಸ್ತ್ರೀಸಂವೇದನೆಯ ಅಧೋಗತಿಯನ್ನು ಬಿಂಬಿಸಲು ನಿಜವಾದ ಸ್ತ್ರೀಸಂವೇದನೆ ಒಬ್ಬ ಭಗವಂತನಂಥ ಪರಿಪೂರ್ಣನಿಂದ ಸಾಧ್ಯ ಎಂದು ತೋರಿಸಲು ಮತ್ತು ನಾವದನ್ನು ಆದರ್ಶವಾಗಿ ತೆಗೆದುಕೊಂಡು ವರ್ತಿಸಬೇಕೆಂದು. ನನ್ನ ಹೆಂಡತಿ ಮಕ್ಕಳು, ಯಾವುದೋ ದೇವಸ್ಥಾನದಿಂದ ಮನೆಗೆ ರೈಲಿನಲ್ಲಿ ಬರುತಿದ್ದರು. ಆಗ ಯಾರೋ ಒಬ್ಬ ಬಿಳಿಯ ಅವರ ಬಟ್ಟೆ, ತೊಟ್ಟ ಚಿನ್ನಾಭರಣ ನೋಡಿ ಅಸಂಬದ್ಧ ಮಾತನಾಡಲು ಶುರು ಮಾಡಿದ. ದುಶ್ಯಾಸನ ದುಷ್ಕರ್ಮ ಶುರು ಮಾಡಿದ. ರೈಲು ತುಂಬಾ ಜನವಿದ್ದರೂ, ಎಲ್ಲರೂ ಬೇರೆಲ್ಲೋ ನೋಡಿದರು. ಅಲ್ಲೇ ಇದ್ದ ಒಬ್ಬ ದೀರ್ಘಕಾಯಿ ಕಪ್ಪಿನವನು ಇವರ ಬವಣೆಯ ಅರಿತು ಮಧ್ಯೆ ತಲೆ ಹಾಕಿದ. ಅವ ಕಪ್ಪಿನವನು ಭೀಷ್ಮ, ದ್ರೋಣಾದಿಗಳಂತೆ ಕೈ ಕಟ್ಟಿ ಕೂರಲಿಲ್ಲ. ಅದು ನಿಜವಾದ ಸ್ತ್ರೀಸಂವೇದನೆ. ಇನ್ನು ದ್ವಾಪರದಲ್ಲಿ ಸ್ವಯಂವರವನ್ನು ನೋಡೋಣ. ಅಲ್ಲಿ ಒಬ್ಬ ಕನ್ಯೆಯನ್ನು ಪುರುಷನಿಗೆ ವೀರ್ಯಶುಲ್ಕವಾಗಿ ಕೊಡುತಿದ್ದರು, ಸ್ತ್ರೀಸಂವೇದನೆಯನ್ನು ಅರಿಯದ ಕಾಲದಲ್ಲಿ ಅಂಡಾಶಯ ಶುಲ್ಕದ ಕಲ್ಪನೆಯೇ ಇರಲಿಲ್ಲ. ದನ, ಧಾನ್ಯ ದಾನ ಮಾಡಿದಂತೆ ಹೆತ್ತ ಮಗಳನ್ನು ಕನ್ಯಾದಾನ ಮಾಡಿಬಿಡುತಿದ್ದರು. ವ್ಯಾಸರು ದ್ರೌಪದಿಗೆ ಮಾಡಿಸಿದ ಅಪಮಾನ ಸಾಲದೋ ಎಂಬಂತೆ ಸಾಲ್ವ, ಭೀಷ್ಮ ಇಬ್ಬರು ಪುರುಷ ಪುಂಗವರಿಂದ ಅಂಬೆ, ಅಂಬಿಕೆ, ಅಂಬಾಲಿಕೆಯರ ಜೀವನವನ್ನು ಸಂಪೂರ್ಣ ನಾಶ ಮಾಡಿಸಿಬಿಡುತ್ತಾರೆ. ಹೆಜ್ಜೆ ಹೆಜ್ಜೆಗೆ ಮನುಜರಿಗೆ ಸ್ತ್ರೀಸಂವೇದನದ ವಿಕೃತ ರೂಪದ ದರ್ಶನ ತೋರಿಸಿಕೊಡುತ್ತಾರೆ. ಇಂದು ಆಧುನಿಕ ಜಗತ್ತಲ್ಲಿ ಅವರು ಅಂದು ಹಾಕಿಕೊಟ್ಟ ಸ್ತ್ರೀಸಂವೇದನ ಮಾರ್ಗ ನಮಗೆ ದಾರಿದೀಪವಾಯಿತು. ಸಂತ ಭದ್ರಗಿರಿ ಅಚ್ಚುತದಾಸರು ಹೇಳುತ್ತಿದ್ದರು 'ಮಹಾಭಾರತದಲ್ಲಿ ಅನಾಚಾರ, ಅತ್ಯಾಚಾರ, ದೌರ್ಜನ್ಯ ಎಲ್ಲವನ್ನೂ ಅಷ್ಟು ಉನ್ನತಮಟ್ಟಕ್ಕೆ ತೆಗೆದೊಯ್ಯಲು ಕಾರಣ, ನಾವು ಹುಲುಮಾನವರು ಆ ಅಪರಾಧವನ್ನು ಮಾಡಬಾರದೆಂದು ಆದರ್ಶ ಈಯಲು". ಇಲ್ಲಿ ಪ್ರತಿಯೊಂದು ಘಟನಾವಳಿಯಲ್ಲಿ ಆದರ್ಶ ಸ್ತ್ರೀಸಂವೇದನೆಯನ್ನು ವಿರೋಧಾಭಾಸ ಮಾರ್ಗದಿಂದ ದರ್ಶನವೀಯುತ್ತಿದ್ದರು.

ನನ್ನ ಜೀವನದಲ್ಲಿ ಸ್ತ್ರೀಸಂವೇದನೆಯ ಲೋಪದ ಒಂದು ಘಟನೆಯನ್ನು ಹಂಚಿಕೊಳ್ಳುತ್ತೇನೆ. ನನ್ನ ಮಗಳು ಒಂದು ಸಂಸ್ಥೆಗೆ ಕೆಲಸ ಮಾಡುತ್ತಾಳೆ. ಅದರಲ್ಲಿ 3 ಜನರು ಪಾಲುದಾರ ಮುಖ್ಯಸ್ಥರು, ಅವರಲ್ಲಿ ಇವಳೂ ಒಬ್ಬಳು. ಮೊನ್ನೆ ಅವರ Board meeting ಇತ್ತು. ಆ ಸಭೆಯಲ್ಲಿ, ಇವರು ಮೂವರು ಮತ್ತು ಇನ್ನೊಂದು 10-15 ಜನ ಇದ್ದರು. ಇವಳೊಬ್ಬಳೇ ಮಹಿಳೆ ಅಲ್ಲಿ. ಇದು ಯಾವುದೋ ಒಂದು ಪಂಚತಾರ ಹೋಟೆಲ್. ಮಧ್ಯಾಹ್ನ ಆಗುತ್ತಾ ಬಂತು, ಸಭೆ ಆಗುತ್ತಿದ್ದಂತೆ ಇವಳಿಗಿಂತ 30+ ವರ್ಷ ಹಿರಿಯನಾದ Senior Partner ಯಾವ ತರಹದ ಆಲೋಚನೆ, ಮೀನ-ಮೇಷ ಇಲ್ಲದೆ ನಯವಾಗಿ "Please take care of ordering lunch for us" ಎಂದ. ಆ ವ್ಯಕ್ತಿ ಬಹಳ ಸಜ್ಜನ, ಸಹೃದಯಿ ಎಲ್ಲಾ ರೀತಿಯಲ್ಲಿ ಶ್ರೀರಾಮನಂತೆ ಆದರ್ಶ ಪುರುಷ, 2

ಮಗಳಂದಿರ ತಂದೆ. ಅವನಿಗೆ ಅರಿವಿಲ್ಲದೆ ಈ ರೀತಿ ಸಾಂಪ್ರದಾಯಿಕ ಆಲೋಚನಾ ವಿಧಾನದ ವರ್ತನೆಯನ್ನು ತೋರಿದ್ದ. ಕಾರಣಗಳು ಏನೇ ಇರಬಹುದು, ಮಾಡಿದ ಅಪರಾಧವನ್ನು ಹೇಗೆಯೇ ಸಮರ್ಥಿಸಿಕೊಳ್ಳಬಹುದು, ಆದರೆ ಅದು ಅಕ್ಷಮ್ಯ. ಆ ಇಪ್ಪತ್ತು ಗಂಡಸರಲ್ಲಿ ತನ್ನ ಹುದ್ದೆಯಲ್ಲಿ ಸಮಾನಸ್ಕಳಾದ ಮಹಿಳೆಗೆ ಊಟದ ವ್ಯವಸ್ಥೆ ಮಾಡಲು ಏಕೆ ಹೇಳಬೇಕು? ಇದು ನನ್ನ ತಲೆಮಾರಿನ ಪುರುಷರಲ್ಲಿ ಇರುವ ದೋಷ, ಇದು ನೀಗಲೇಬೇಕು. ಈ ತರಹದ ಅಪರಾಧಗಳನ್ನು ನಾನೂ ಹಿಂದೆ ಮಾಡಿದ್ದೇನೆ.

ಇನ್ನು ಸಮಾರೋಪ. ಇಷ್ಟೆಲ್ಲಾ ಉದ್ದದ ಪ್ರಬಂಧವ ಬರೆಯಲು ಗಂಡಸಾದ ನನಗೇನು ಅರ್ಹತೆ ಇದೆ, ನನಗೇನು ಅಧಿಕಾರವಿದೆ? ನನ್ನ ಮಡದಿ, ಮಗಳಂದಿರು ಮತ್ತು ಮೊಮ್ಮಗಳಂದಿರು ನನ್ನೀ ನಿಲುವಿಗೆ, ನನ್ನೀ ಮಹಾಪುರಾಣಗಳ ಪುನರ್‌ವ್ಯಾಖ್ಯಾನಕ್ಕೆ ಒಪ್ಪಿಯಾರೇ? ನುಡಿದದ್ದನ್ನು, ವ್ಯಾಖ್ಯಾನಿಸಿದ್ದನ್ನು ನಾನು ನಿತ್ಯಜೀವನದಲ್ಲಿ ಪಾಲಿಸುತ್ತೇನೆಯೇ? ಇಲ್ಲಾ ಪುಸ್ತಕದ ಬದನೆಕಾಯಿ ತರಹ ಬರೆದು ತಿಲಾಂಜಲಿ ಕೊಟ್ಟುಬಿಡುತ್ತೇನೆಯೇ? ಯೌವನದ ಮದದಲ್ಲಿ, ಸ್ತ್ರೀಸಂವೇದನ ಎಂಬ ಪದದ ಇರುವಿಕೆಯ ಅರಿವಿಲ್ಲದವ ನಾನು! ನನ್ನ ಸ್ತ್ರೀಸಂವೇದನಾ ರಾಹಿತ್ಯದ ಬಲಿಪಶು ನನ್ನ ಪ್ರಿಯ ಪತ್ನಿ. ಆದರೆ ತಿದ್ದಿಕೊಳ್ಳಲು ಎಂದೂ ತಡವಲ್ಲ ಎಂಬುದಕ್ಕೆ ನಾನೇ ಸಾಕ್ಷಿ. ಮಗಳಂದಿರ ಆಗಮನದಿಂದ ಸ್ತ್ರೀಸಂವೇದನಾ ಶೂನ್ಯವಾದ ನನ್ನ ಮೌಢ್ಯ ಪೂಸಿತ ಮಂದಬುದ್ಧಿಯ ನಿಶಾಛಾಯದ (Dark Shadow) ಮೇಲೆ ಒಂದು ಆಶಾಕಿರಣ ಮೂಡಿತು, ನಂತರ ಕ್ರಮೇಣ ನನ್ನನ್ನು ನಾನೇ ಬದಲಾಯಿಸಿಕೊಂಡೆ, ಅದೂ ಮೊಮ್ಮಗಳಾದ ಮೇಲೆ ಇನ್ನೂ ಬದಲಾಯಿಸಿಕೊಳ್ಳುತ್ತಿದ್ದೇನೆ. ನಿಜ ಹೇಳಬೇಕಾದರೆ ದಿನನಿತ್ಯ, ಆಲೋಚಿಸಿ ಮಾತನಾಡಲೇಬೇಕು. ಬರೀ ಮಾತಿನಲ್ಲಿ ಸ್ತ್ರೀಸಂವೇದನೆ ಸರಿಯಾಗಿರುವುದಲ್ಲದೆ, ಅವರಲ್ಲಿ ಆತ್ಮಧೈರ್ಯ, ಆತ್ಮವಿಶ್ವಾಸ, ತಮ್ಮಲ್ಲೆ ಭರವಸೆ ಮೂಡಿಸಬೇಕು. ನನ್ನ ಸ್ವಂತ ಅನುಭವದಲ್ಲಿ, ನನ್ನ ತಲೆಮಾರಿನ, ಸಂಪ್ರದಾಯಬದ್ಧ ಹೆಂಗಸರಲ್ಲಿ ಈ ಮೂರು ಗುಣಗಳನ್ನು ರಕ್ತಗತವಾಗುವ ಹಾಗೆ ಮಾಡಬೇಕು. ಹಾಗೆ ಮಾಡುವ ಕ್ರಿಯೆ ಹೊರನೋಟಕ್ಕೆ ಒರಟಾಗಿ ಕಂಡರೂ ಅದು ನಿಜವಾದ ಸ್ತ್ರೀಸಂವೇದನೆ, ದೀರ್ಘಕಾಲಿಕವಾಗಿ ಸಮಾಜಕ್ಕೆ ಶ್ರೇಯಸ್ಕರ! ಪುರುಷ ಆರಾಧನೆಯ ಕುರುಡು ಗುಂಗಿನಿಂದ ಅವರನ್ನು ಮುಕ್ತಗೊಳಿಸಬೇಕು.

ಇದು ಮಾಡದೆ ಅವರಿಗೆ ಪ್ರಸ್ತುತ ಅಭ್ಯಾಸವಾಗಿರುವ ರೀತಿಯಲ್ಲಿಯೇ ಇದ್ದುಬಿಟ್ಟರೆ ಅಂತಿಮವಾಗಿ ಅದು ಅವರ ಅಧೋಪತನಕ್ಕೆ, ಪರಸ್ಪರ ಕೆಟ್ಟ ಸಂಬಂಧಕ್ಕೆ ಕಾರಣವಾಗುತ್ತದೆ. ಉದಾ: ಗಂಡಸರು ಕಸ ಗುಡಿಸಬಾರದು, ಮುಸರೆ ತಿಕ್ಕಬಾರದು, ಬಚ್ಚಲು ಚೊಕ್ಕಟ ಮಾಡಬಾರದು ಹೀಗೆ ಅನೇಕ ನಿತ್ಯಕರ್ಮಗಳಿಂದ ಅವರು ಅತೀತರು ಎಂದು ಅವರ ಮನೋಭಿಲಾಷೆ ಇದ್ದಲ್ಲಿ, ಅದಕ್ಕೆ ಅವರ ಮನಸ್ಸನ್ನು ನೋಯಿಸಬಾರದೆಂದು ಗಂಡಸೊಬ್ಬ ಸುಖಜೀವನ ಎಸಗಿದರೆ ಅದು ಸ್ತ್ರೀಸಂವೇದನ ಅರಿತು ವರ್ತಿಸಿದ ಎಂದಾಗುವುದಿಲ್ಲ. ಅಲ್ಲಿ ಅವರ ಮೌಢ್ಯವನ್ನು ದುರುಪಯೋಗಗೊಳಿಸಿದ ಎಂದಾಗುತ್ತದೆ. ಬದಲಾಗಿ ಈ ಸ್ವಯಂನಿರ್ಮಿತ ಪುರುಷ ಆರಾಧನಾ ಕೋಟೆಯಿಂದ ಅವರಿಗೆ ಮುಕ್ತಿಕೊಡಿಸುವಾಗ

ಮಾಡುವ ಸಂವಾದ ನಿಜವಾದ ಸ್ತ್ರೀಸಂವೇದನೆ. ಹೆಜ್ಜೆಹೆಜ್ಜೆಗೆ 'ಸ್ತ್ರೀ ಶಕ್ತಿ ಸತ್ಯ, ಸ್ತ್ರೀ ಶಕ್ತಿ ನಿತ್ಯ' ಎಂದು ಸಾರಬೇಕು, ಹಾಡಿ ಹರಸಬೇಕು.

ಇಷ್ಟೆಲ್ಲ ಅರಿತಿದ್ದೇನೆ ಎಂದು ಗ್ರಹಿಸಿದ್ದರೂ, ಯಾವುದು ಸರಿ, ಯಾವುದು ತಪ್ಪು ಸಂವಾದ ಎಂದು ಗೊತ್ತಿದ್ದರೂ, ಹುಟ್ಟುಗುಣ ಅಮೇರಿಕಕ್ಕೆ ಬಂದರು ಬಿಡ ಎಂಬಂತೆ ಆಗಾಗ ನಾನು (ನಾವು) ಎಡವುತ್ತೇನೆ. ಗಾಂಧೀಜಿ ಹೇಳಿದಂತೆ, 'ನಿನಗೆ ಸಮಾಜದಲ್ಲಿ ಯಾವ ಬದಲಾವಣೆ ಬೇಕೋ ಆ ಬದಲಾವಣೆ ನೀನೇ ಆಗು ಮಂಕುತಿಮ್ಮ' (be the change you want to see in the world) ಎಂಬಂತೆ ನಾನು ನನ್ನನ್ನು ಬದಲಾಯಿಸಲು ಪ್ರಯತ್ನಪಟ್ಟೆ, ಇನ್ನೂ ಪಡುತ್ತಿದ್ದೇನೆ. ಆದ್ದರಿಂದಲೇ ಈ ಲೇಖನ ಬರೆಯುತ್ತಿರುವುದು. ಮಗಳಂದಿರು ಹುಟ್ಟದಿದ್ದರೆ ಸ್ತ್ರೀಸಂವೇದನೆ ನನಗೆ ಅರ್ಥವಾಗುತ್ತಿರಲಿಲ್ಲ, ಈ ಲೇಖನವೂ ಬರೆಯುತ್ತಿರಲಿಲ್ಲ. ಇಲ್ಲಿ ಎಲ್ಲಾ ಸ್ವಾರ್ಥ ಮೂಲ, ನಾನು ಬದಲಾಗದಿದ್ದರೆ ಸಮಾಜ ಬದಲಾಗುವುದಿಲ್ಲ, ನನ್ನ ಮಗಳು/ಮೊಮ್ಮಗಳಂದಿರಿಗೆ ಇಂದೂ ಕೂಡ ತಾತ್ವಿಕವೂ ತಾರ್ಕಿಕವೂ ಆದ ಸಮಸಮಾಜದ ಅನುಭವ ಸಿಗಲಿಕ್ಕಿಲ್ಲ, ಆದ್ದರಿಂದ ನನ್ನ ಸಂತಾನದ ಒಳಿತಿಗಾಗಿ ನಾನು ಬದಲಾದೆ. ಆದರೆ, ಎರಡಲ್ಲ ನಾಲ್ಕು ಹೆಣ್ಮಕ್ಕಳು ಇದ್ದರೂ ತುಂಬಾ ಜನ ಬದಲಾಗುವುದಿಲ್ಲ! ನಾನು ಬದಲಾಗಲು ಕಾರಣವಿಷ್ಟೆ, ನಾನು ಚಿಕ್ಕಂದಿನಿಂದ ನನ್ನ ತೀರ್ಥರೂಪರಾದ ಶ್ರೀ ಜಿ. ಟಿ. ನಾರಾಯಣರಾಯರ ಜೀವನ ಕ್ರಮದಿಂದ ಪ್ರಭಾವಿತನಾದವನು. ಅವರ ಪುಸ್ತಕ 'ವೈಜ್ಞಾನಿಕ ಮನೋಧರ್ಮ'ದಲ್ಲಡಗಿದೆ ನನ್ನ ಜೀವನದ ಮರ್ಮ. ವೈಜ್ಞಾನಿಕ, ತಾತ್ವಿಕವಾಗಿ, ಸ್ವಂತ ನಡವಳಿಕೆಗೆ ಜವಾಬ್ದಾರಿ ಹೊತ್ತು ಬಾಳುವವರಿಗೆ ಬದಲಾವಣೆ ಸಾಧ್ಯ! ದ್ವೈತಿಗಳಿಗೆ, 'ಹೊರ ಶಕ್ತಿ ಇದೆ, ಅದು ನಮ್ಮನ್ನು ಕಾಪಾಡುತ್ತದೆ, ಅದು ನಮ್ಮ ನಡೆ/ನುಡಿಯನ್ನು ನಿಯಂತ್ರಿಸುತ್ತದೆ, ನಾನು ನಿಮಿತ್ತ ಮಾತ್ರ' ಎಂದು ಭಾವಿಸಿದವರಿಗೆ ಸಾಧ್ಯವಿಲ್ಲ. 'ಅಹಂ ಬ್ರಹ್ಮಾಸ್ಮಿ' ಎಂಬುವರಲ್ಲಿ ಎರಡು ಪಂಗಡ, ಒಬ್ಬರು ಬರೀ ಮಾತಿನಲ್ಲಿ/ಬರವಣಿಗೆಯಲ್ಲಿ ತಮ್ಮ ಶ್ರೇಷ್ಠತೆ ತೋರಿಸುವಂಥವರು ಮತ್ತೆ ಇನ್ನೊಬ್ಬರು ಕರ್ಮಾದ್ವೈತಿಗಳು, ತಮ್ಮ ನಿತ್ಯ ಕರ್ಮದಲ್ಲಿ ಹೆಜ್ಜೆಹೆಜ್ಜೆಗೆ ಅದನ್ನು ಪರಿಪಾಲಿಸುವವರು. ಕಲಿತ ವಿದ್ಯೆಯನ್ನು ಕರ್ಮವಾಗಿಸಿದರೆ ಅದು ಅನುಭವ ಆಗುತ್ತದೆ, ತತ್ಪರಿಣಾಮ ಜ್ಞಾನಾಭಿವೃದ್ಧಿ ಆಗುತ್ತದೆ. ಗಳಿಸಿದ ಜ್ಞಾನವನ್ನು ಹಂಚಿಕೊಂಡರೆ, ನಿಮ್ಮ ಹೆಗಲ ಮೇಲೆ ಕೂತ/ನಿಂತ ಪೀಳಿಗೆ/ನ್ಯೂಟನ್ನರು ಇನ್ನೂ ಮೇಲೆ ಹೋಗುತ್ತಾರೆ. ನಿಮ್ಮ ಪೀಳಿಗೆ ಉದ್ಧಾರವಾಗುತ್ತದೆ. ನಿಮ್ಮ ಮಕ್ಕಳು ಉಚ್ಚ ವಿದ್ಯಾಲಯದಲ್ಲಿ ಓದುತ್ತಾರೆ, ಜೀವನದಲ್ಲಿ ಸಾಧಿಸುತ್ತಾರೆ. ಈ ದಿಶೆಯಲ್ಲಿ ನಾನು, ಬರೀ ನನ್ನ ಮಗಳಂದಿರಿಗಲ್ಲದೆ, ಬೇರೆಯವರ ಹೆಣ್ಮಕ್ಕಳಿಗೂ ಆಸರೆ ನೀಡಿದ್ದೇನೆ. ನನ್ನ ಸ್ತ್ರೀ ಸಂವೇದನೆಯನ್ನು ಬರೀ ಮಾತಿನಲ್ಲಲ್ಲದೆ ಇನ್ನೂ ಅನೇಕ ರೀತಿಯಲ್ಲಿ ಕಾರ್ಯಗತಕ್ಕೆ ತಂದಿದ್ದೇನೆ. "Technovation Girls" ಸಂಸ್ಥೆಯಲ್ಲಿ ಅನೇಕ ವರ್ಷಗಳಿಂದ ಸ್ವಯಂಸೇವಕನಾಗಿದ್ದೇನೆ. ಸ್ತ್ರೀಸಂವೇದನಾ ಮೌಲ್ಯವನ್ನು, ನನ್ನ ಅಲ್ಪಜ್ಞಾನಕ್ಕೆ ತೋರಿದಂತೆ ಕೆಲವು ಕಾರ್ಯಕ್ರಮಗಳನ್ನು ಸ್ಥಳೀಯ ಕನ್ನಡ ಸಂಘದ ಕಾರ್ಯಕ್ರಮದಲ್ಲಿ ಪ್ರಾಯೋಜಿಸಿ ವ್ಯಕ್ತಪಡಿಸಿದ್ದೇನೆ. ಅದನ್ನು ನೋಡಿ ಅರ್ಥವಾಗಿ

ಆನಂದಿಸಿದ ಸಹಸ್ರಾರು ಜನರಲ್ಲಿ ಒಬ್ಬ ಸ್ತ್ರೀಸಂವೇದನೆಯನ್ನು ಅರಿತು ವರ್ತಿಸಿದರೆ ನನ್ನ ಜೀವನ, ಈ ಲೇಖನ ಸಾರ್ಥಕ.

ಈ ಲೇಖನ ಅನೇಕ ಕಡೆ ವಿಷಯ ಬಿಟ್ಟು ಹೊರ ಹೋದಂತೆನಿಸುತ್ತದೆ. ಮತ್ತೆ ಈ ಲೇಖನದ ಗುರಿ ಏನೆಂದು ಸ್ಪಷ್ಟವಾಗುವುದಿಲ್ಲ. ಕಥಾಮೃತ, ಕಥಾಸರಿತ್ಸಾಗರ, ಶ್ರೀಮದ್ಭಾಗವತ ಈ ಎಲ್ಲಾ ಮಹಾಕೃತಿಗಳಲ್ಲಿ ಕತೆ, ಉಪಕತೆ, ಉಪಕತೆಗೆ ಉಪಕತೆ ಎಂದು ಬೆಸೆಯುತ್ತಾ, ಬೆಳೆಸುತ್ತಾ ಹೋಗುತ್ತಾರೆ. ಆಗ ಮುಖ್ಯ ವಿಷಯದಿಂದ ದೂರ ಅಲೆದಂತೆ ಭಾಸವಾಗುತ್ತದೆ. ಆದರೆ ಅಂತಿಮವಾಗಿ ಅದನ್ನು ತಂದು ಮೂಲ ಕತೆಗೆ ಜೋಡಿಸುತ್ತಾರೆ. ಈ ಲೇಖನವೂ ಅದೇ ಶೈಲಿಯಲ್ಲಿದೆ. ಮತ್ತೆ, ಈ ಲೇಖನ, ಭಾವನೆಗಳನ್ನು ವೈಜ್ಞಾನಿಕ ದೃಷ್ಟಿಕೋನದಿಂದ ಹೇಗೆ ಆಮೂಲಾಗ್ರ ವಿಶ್ಲೇಷಣೆ ಮಾಡಬಹುದು ಎಂಬ ದಿಶೆಯಲ್ಲಿ ಚೊಚ್ಚಲ ಪ್ರಯತ್ನ. ಈ ಲೇಖನದಲ್ಲಿ ಎಲ್ಲರೂ ಹಾಡಿ ಹರಸುವಂಥ ದೇವರಿಗೆ ಸಮಾನರಾದವರನ್ನು ಹೀಯಾಳಿಸಿದ ಹಾಗೆ ಕಾಣಬಹುದು, ಅದು ನನ್ನ ಉದ್ದೇಶ ಖಂಡಿತಾ ಅಲ್ಲ. ಬೇರೆ ಆಯಾಮದಿಂದ ಅದನ್ನು ವೀಕ್ಷಿಸಿದರೆ, ಬಿಂಬರೂಪಿಯಾದ ಭಗವಂತ ಬರೀ ಕಂಬದಲ್ಲಲ್ಲ ಸಕಲರಲ್ಲೂ, ದುಷ್ಟಾಗ್ರೇಸರರಲ್ಲೂ ಇರುತ್ತಾನೆ. ಸಕಲರ ಮನೋಕಾಮನೆಯನ್ನರಿತ ಆ ಭಗವಂತ ರಾಮ, ಲಕ್ಷ್ಮಣ, ದಶರಥ, ಸೀತೆ, ಧರ್ಮರಾಯ, ಭೀಷ್ಮ, ದ್ರೌಪದಿ, ಅರ್ಜುನ... ಎಲ್ಲರಲ್ಲೂ ಇದ್ದು ಈ ಕರ್ತಾರನ ಕಮ್ಮಟದ ಕೈಗೊಂಬೆಗಳ ಮೂಲಕ ಸ್ತ್ರೀಸಂವೇದನೆಯ ನೈಜರೂಪವನ್ನು ಪ್ರಕಟಿಸುತ್ತಾನೆಂದು ಭಾವಿಸತಕ್ಕದ್ದು.

ಮಂಗಳ ಹಾಡುವ ಸಮಯವಾಯಿತು. ಒಂದು ಸಂಶಯ ಪಿಶಾಚಿ ಕಾಡುತಿತ್ತು.ಈ ಲೇಖನ ಪ್ರಕಟಣೆಗೆ ಅರ್ಹವೋ ಎಂದು. ಅದಕ್ಕೆ ನಾನಿದನ್ನು ನನ್ನ ಅನೇಕ ಸಂಬಂಧಿ ಮತ್ತು ಪರಿಚಿತ ಹೆಂಗಸರಿಗೆ, 20 ವರ್ಷದವರಿಂದ ಹಿಡಿದು 80 ವರ್ಷದವರಿಗೆ, ಎಲ್ಲಾ ತರಹದ ಜೀವನ ಅನುಭವ ಇರುವವರಿಗೆ ಕಳಿಸಿ ಅವರ ಅಭಿಪ್ರಾಯ ಕೇಳಿದೆ. ಎಲ್ಲಾ ರೀತಿಯ, ಸಾತ್ವಿಕ ಕ್ರೋಧಭರಿತ ಪ್ರತಿಕ್ರಿಯೆಗಳು ಬಂದವು. ಆದರೆ ಅಂತಿಮವಾಗಿ ಪ್ರಕಟಿಸಲು ಯೋಗ್ಯವೆಂದು ಪ್ರತಿಯೊಬ್ಬರೂ ಅನುಮತಿ ಇತ್ತರು. ಹಾಗೆ ಧೈರ್ಯ ಮಾಡಿ ಮುನ್ನುಗ್ಗುತ್ತಿದ್ದೇನೆ. ಕೊನೆಯದಾಗಿ ಈ ಗೀತಾಚಾರ್ಯನ ಗೀತೋಪದೇಶದ ಸಾರವಾದ ಈ ಲೇಖನದ ಕಾಗುಣಿತ, ವಾಕ್ಯ ರಚನೆಯನ್ನು ಅನೇಕಬಾರಿ, ಸಾನುಕ್ರೋಶವ ಅರಿತು, ತಾಳ್ಮೆಯಿಂದ ತಿದ್ದಿ ಸಹಕರಿಸಿದ ಮಲೆನಾಡಿನ ಶ್ರೀಮತಿ ಗೀತಾರಾವ್ ಅವರಿಗೆ ನನ್ನ ಕೃತಜ್ಞತೆಯನ್ನು ಸಲ್ಲಿಸುತ್ತೇನೆ. ಕೊಲ್ಲೂರು ಮೂಕಾಂಬಿಕೆ ದೇವಿ ಸಕಲರಿಗೆ ಇಹದಲ್ಲೂ, ಪರದಲ್ಲೂ, ಆಯು, ಆರೋಗ್ಯ, ಐಶ್ವರ್ಯವನ್ನು ಮತ್ತು ಸದ್ಗತಿಯನ್ನೂ ಕರುಣಿಸಲಿ ಎಂದು ಪ್ರಾರ್ಥಿಸುತ್ತ ವಿದಾಯ ಕೋರುತ್ತೇನೆ. ನಿಮಗೆ ಮಂಗಳವಾಗಲಿ.



# ಮೇರಿ ಆನಿಂಗ್
# ಜಗತ್ತಿನ ಶ್ರೇಷ್ಠ ಪಳೆಯುಳಕೆ ಅನ್ವೇಷಕಿ

**ಉಮಾ ವೆಂಕಟೇಶ್**
State College, Pennsylvania

*

**ಪೀಠಿಕೆ:**

*'She sells sea-shells on the sea-shore*
*The shells she sells are sea-shells, I'm sure*
*For if she sells sea-shells on the sea-shore*
*Then I'm sure she sells sea-shore shells'.*

19ನೆಯ ಶತಮಾನದಲ್ಲಿ ಟೆರ್ರಿ ಸಲ್ಲಿವನ್ ಎನ್ನುವನು ಬರೆದಿದ್ದ ನಾಲಿಗೆಸುಂಟ್ರವು ಇಂಗ್ಲೇಂಡಿನ 'ದಿ ಫ್ಯಾಮಿಲಿ ಹೆರಾಲ್ಡ್' ಎನ್ನುವ ದೇಶೀಯ ಪತ್ರಿಕೆಯಲ್ಲಿ ಪ್ರಕಟವಾಗಿತ್ತು. ಈ ನಾಲಿಗೆಸುಂಟ್ರವನ್ನು ತಡವರಿಸದೆ ಉಚ್ಚರಿಸಲು ಪ್ರಯತ್ನಿಸುವ ಬಹುತೇಕ ಮಂದಿಗೆ, ಈ ಸಾಲುಗಳಲ್ಲಿ ಒಂದು ಮಹಿಳೆಯ ಜೀವಮಾನದ ಸಾಧನೆಗಳೇ ಅಡಗಿವೆ ಎನ್ನುವ ಸಂಗತಿ ಗೊತ್ತಿರಲಾರದು. ಕಡಲಚಿಪ್ಪುಗಳನ್ನು ಮಾರುತ್ತಿದ್ದ ಆ ಮಹಿಳೆ ಮೇರಿ ಆನಿಂಗ್ ಚಿಲ್ಲರೆ ವ್ಯಾಪಾರಿಯಾಗಿರಲಿಲ್ಲ. ಬ್ರಿಟನ್ ದ್ವೀಪಗಳ ನೈಋತ್ಯ ಭಾಗದ ಕರಾವಳಿ ಪ್ರದೇಶದಲ್ಲಿ ಲೈಮ್ ರೆಜಿಸ್ ಎನ್ನುವ ಸಣ್ಣ ಊರಿದೆ. ಅಲ್ಲಿನ ಅಸ್ಥಿರವಾದ ಕೋಡುಗಲ್ಲುಗಳಲ್ಲಿ ಹೇರಳವಾಗಿ ಹುದುಗಿದ್ದ ಪ್ರಾಚೀನ ಸರೀಸೃಪಗಳ ಕಳೇಬರಗಳನ್ನು ಪತ್ತೆ ಹಚ್ಚಿ, ಉತ್ಖನನ

ಮಾಡಿ, ಅಂದಿನ ವೈಜ್ಞಾನಿಕ ಸಮುದಾಯಕ್ಕೆ ಇತಿಹಾಸಪೂರ್ವ ಜೀವಿಗಳ ಬಗ್ಗೆ ಮಹತ್ವದ ಮಾಹಿತಿ ನೀಡಿದ ಒಬ್ಬ ಅಸಾಧಾರಣ ಮಹಿಳೆ ಮೇರಿ ಆನಿಂಗ್. ಇಂದು ಮೇರಿ ಆನಿಂಗಳನ್ನು ಲಂಡನ್ನಿನ ಪ್ರಖ್ಯಾತ ಬ್ರಿಟಿಷ್ ನ್ಯಾಚುರಲ್ ಹಿಸ್ಟರಿ ಮ್ಯೂಸಿಯಮ್ ವೆಬ್‌ಸೈಟಿನಲ್ಲಿ ಜಗತ್ತಿನ ಅತ್ಯಂತ ಶ್ರೇಷ್ಠ ಪಳೆಯುಳಿಕೆಯ ಅನ್ವೇಷಕಿ ಎಂದೆಲ್ಲಾ ಉಲ್ಲೇಖಿಸಿದ್ದಾರೆ. ಆದರೆ, ಜಾರ್ಜಿಯನ್ ಅವಧಿಯ ಇಂಗ್ಲೇಂಡಿನಲ್ಲಿ ಅವಳು ಬದುಕಿದ್ದಾಗ, ಅವಳ ಸಾಧನೆಗಳ ಬಗ್ಗೆ ತಿಳಿದಿದ್ದವರು ಬೆರಳೆನಿಸುವಷ್ಟು ಮಂದಿ ಎನ್ನಬಹುದು.

**ಕುಟುಂಬ ಮತ್ತು ಬಾಲ್ಯ:**

ಕೈಗಾರಿಕಾ ಕ್ರಾಂತಿಯ ಆರಂಭದ ಅಲೆಗಳು ಇನ್ನೂ ಏಳುತ್ತಿರುವಾಗಲೇ, 1799ರ ಮೇ ತಿಂಗಳಲ್ಲಿ ಲೈಮ್ ರೆಜಿಸ್ (Lyme Regis) ಎನ್ನುವ ಸಣ್ಣ ಊರಿನಲ್ಲಿ ವಾಸವಿದ್ದ ಬಡ ಕುಟುಂಬದಲ್ಲಿ ಮೇರಿ ಆನಿಂಗ್ ಜನಿಸಿದ್ದಳು. ಧರ್ಮನಿಷ್ಠೆಯಿದ್ದು ಕಡುಬಡವಳಾಗಿದ್ದ ಅವಳಿಗೆ, ದಿನನಿತ್ಯದ ಊಟಕ್ಕಾಗಿ ಪರದಾಡುವ ಪರಿಸ್ಥಿತಿಯಿತ್ತು. ಅವಳ ತಂದೆ ರಿಚರ್ಡ್ ಆನಿಂಗ್ ಒಬ್ಬ ಮರಗೆಲಸಗಾರ, ತಾಯಿ ಮಾಲಿ ಬಹಳ ಗಂಭೀರ ಪ್ರವೃತ್ತಿಯ ಹೆಂಗಸು. ಅವರ ಊರಿನ ಜನಸಂಖ್ಯೆ ಕೇವಲ 1200ರಷ್ಟಿದ್ದು, ಅಲ್ಲಿನ ನೈರ್ಮಲ್ಯ ಪರಿಸ್ಥಿತಿ ಶೋಚನೀಯವಾಗಿತ್ತು. ಆದರೆ, ಸಮುದ್ರದ ಮೇಲಿಂದ ಬೀಸಿ ಬರುತ್ತಿದ್ದ ಶುದ್ಧ ಗಾಳಿ, ಹಿತಕರವಾದ ನೀರು ಊರಿಗೆ ತಕ್ಕಮಟ್ಟಿನ ಕಳೆನೀಡಿತ್ತು. ಫ್ರೆಂಚ್ ಸಾರ್ವಭೌಮ ನೆಪೋಲಿಯನ್ನನ ದಾಳಿಗೆ ಭಯಭೀತವಾಗಿದ್ದ ಲೈಮ್ ರೆಜಿಸ್ ಊರಿನ ಬಂದರು, ಬ್ರಿಟನ್ನಿನ ಅತ್ಯಂತ ಪ್ರಾಚೀನವಾದ ಕೃತಕ ಬಂದರೆನಿಸಿದ್ದು, ಪಶ್ಚಿಮದ ಕಡೆಯಿಂದ ಬರಬಹುದಾದ ಭೀಕರ ಚಂಡಮಾರುತಗಳಿಗೆ ತಕ್ಕಮಟ್ಟಿನ ರಕ್ಷಣೆ ನೀಡಿತ್ತು. ಲಂಡನ್ನಿನ ಶ್ರೀಮಂತ ವರ್ಗದ ಜನ ಈ ಊರಿನ ನೈರ್ಮಲ್ಯದ ಬಗ್ಗೆ ಮೂಗುಮುರಿದರೂ, ಇಲ್ಲಿನ ಹವಾಮಾನಕ್ಕೆ ಮನಸೋತು, ವಾರಾಂತ್ಯದ ರಜೆಗೆಂದು ಇಲ್ಲಿ ತಮ್ಮ ಐಷಾರಾಮಿ ಬಂಗಲೆಗಳನ್ನು ನಿರ್ಮಿಸಿಕೊಂಡಿದ್ದರು.

ರಿಚರ್ಡನಿಗೆ, ಸಮುದ್ರ ತೀರದಲ್ಲಿ ಅಲೆದಾಡಿ ಅಲ್ಲಿ ಸಿಗುವ ಕಪ್ಪೆಚಿಪ್ಪು, ಮತ್ತಿತರ ಜಲಚರಗಳ ಪಳೆಯುಳಿಕೆಗಳನ್ನು ಸಂಗ್ರಹಿಸುವ ಹವ್ಯಾಸವಿತ್ತು. ಇದರಿಂದ ಸಂಸಾರದ ರಥ ಸಾಗುತ್ತಿರಲಿಲ್ಲ. ಮಾಲಿಗೆ ಅಸಮಾಧಾನವಿದ್ದರೂ, ಎದುರು ಮಾತನಾಡುವ ಧೈರ್ಯವಿಲ್ಲದೆ ಎಲ್ಲವನ್ನೂ ಸಹಿಸಿಕೊಂಡು ಹೋಗುತ್ತಿದ್ದಳು. ಆಗಾಗ್ಗೆ ನಡೆಯುತ್ತಲೇ ಇದ್ದ ಯುದ್ಧಗಳ ದೆಸೆಯಿಂದ ಆಹಾರ ಪದಾರ್ಥಗಳ ಬೆಲೆ ಗಗನಕ್ಕೇರಿ, ಬ್ರಿಟನ್ನಿನಲ್ಲಿ ಬಡವರ ಪರಿಸ್ಥಿತಿ ಶೋಚನೀಯವಾಗಿತ್ತು. ನ್ಯುಮೋನಿಯಾ, ಸಿಡುಬು, ದಡಾರದಂತಹ ರೋಗಗಳಿಗೆ ಬಹಳ ಮಕ್ಕಳು ಈಡಾಗುತ್ತಿದ್ದರು. ಇವರಿಗಿದ್ದ 10 ಮಕ್ಕಳಲ್ಲಿ, 8 ಮಕ್ಕಳು ಇಂತಹ ಕಾಯಿಲೆಗೆ ಬಲಿಯಾಗಿದ್ದು, ಕೇವಲ ಮೇರಿ ಮತ್ತು ಅವಳ ಸಹೋದರ ಜೋಸೆಫ್ ಮಾತ್ರ ಉಳಿದುಕೊಂಡಿದ್ದರು. ಬಾಲ್ಯದಲ್ಲಿ, ಸದಾ ಕಾಯಿಲೆ ಬೀಳುತ್ತಿದ್ದ ಮೇರಿ ದುರ್ಬಲಳಾಗಿದ್ದಳು. ಒಮ್ಮೆ ಊರಿನಲ್ಲಿ ಸಂಭವಿಸಿದ್ದ ಸಿಡಿಲಿನ ಅಪಘಾತವೊಂದರಲ್ಲಿ

ಪವಾಡವೋ ಎಂಬಂತೆ ಪಾರಾಗಿದ್ದ ಮೇರಿಯ ಆರೋಗ್ಯ, ಆ ಘಟನೆಯ ನಂತರ ದಿನದಿನಕ್ಕೆ ಉತ್ತಮಗೊಂಡು ಅವಳು ಆರೋಗ್ಯವಂತಳಾಗಿ ಬೆಳೆಯುತ್ತಾ ಹೋದಳು. ಸುಮಾರು 5–6 ವರ್ಷದ ಬಾಲಕಿಯಾಗಿದ್ದಾಗಲೇ, ಮೇರಿ ತನ್ನ ತಂದೆ ರಿಚರ್ಡ್‌ನ ಸಂಗಾತಿಯಾಗಿ ಅವನೊಂದಿಗೆ ಸಮುದ್ರತೀರದಲ್ಲಿ ಕಪ್ಪೆಚಿಪ್ಪು ಮತ್ತು ಪಳೆಯುಳಿಕೆಗಳ ಸಂಗ್ರಹದ ಕಾರ್ಯದಲ್ಲಿ ನೆರವಾಗಲು ಪ್ರಾರಂಭಿಸಿದಳು. ಜಾರ್ಜಿಯನ್ ಸಮಾಜಕ್ಕೆ ಹೊರತು ಎನ್ನುವಂತಿದ್ದ ರಿಚರ್ಡ್, ಮೇರಿಯ ಕುತೂಹಲಕರ ಪ್ರವೃತ್ತಿಯಲ್ಲಿ ದೊಡ್ಡ ಭರವಸೆಯನ್ನು ಕಂಡಿದ್ದನು. ಮಗಳನ್ನು ದೈನಂದಿನ ಚಾಕರಿಗಳಿಂದ ದೂರವಾಗಿಸಿ, ತನ್ನೊಡನೆ ಸಮುದ್ರ ತೀರಕ್ಕೆ ಕರೆದೊಯ್ಯುತ್ತಿದ್ದ. ಸ್ವಭಾವತಃ ಮೊಂಡಳಾಗಿದ್ದ ಮೇರಿ ಸಾಹಸ ಮತ್ತು ಹೊರಾಂಗಣದ ಚಟುವಟಿಕೆಗಳನ್ನು ಇಷ್ಟಪಡುತ್ತಿದ್ದಳು. ಅವಳ ಈ ಪ್ರವೃತ್ತಿಯನ್ನು ಮೆಚ್ಚಿದ್ದ ತಂದೆ, ಪಳೆಯುಳಿಕೆಗಳ ಸಂಗ್ರಹಣೆಯ ಕಾರ್ಯದಲ್ಲಿ ಬಾಲಕಿ ಮೇರಿಯನ್ನು ಭಾಗಿಮಾಡಿದ್ದ.

ಭೀಕರವಾದ ಚಂಡಮಾರುತಗಳು ಬ್ರಿಟನ್ನಿನ ದಕ್ಷಿಣ ಕರಾವಳಿಯನ್ನು ಅಪ್ಪಳಿಸಿದಾಗ, ಲೈಮ್ ರೆಜಿಸ್‌ನ ಸಮುದ್ರ ತೀರದಲ್ಲಿ ಪಳೆಯುಳಿಕೆಗಳ ಪದರಗಳೇ ಪ್ರಕಟವಾಗುತ್ತಿದ್ದವು. ಇಂತಹ ಅಪರೂಪದ ಘಟನೆಯ ಪೂರ್ಣ ಪ್ರಯೋಜನ ಪಡೆಯುವ ಹುಮ್ಮಸ್ಸಿನಿಂದ ಮೇರಿಯ ಜೊತೆಯಲ್ಲಿ ಆ ಜಾರುಬಂಡೆಗಳತ್ತ ಧಾವಿಸುತ್ತಿದ್ದ ರಿಚರ್ಡ್, ಆ ಹವಾಮಾನ ವೈಪರೀತ್ಯದಲ್ಲಿ ಇಬ್ಬರ ಪ್ರಾಣಗಳನ್ನೂ ಅಪಾಯಕ್ಕೆ ಒಡ್ಡುತ್ತಿದ್ದ. 1807ರ ಬೇಸಿಗೆಯಲ್ಲಿ, ಕಾಲು ಜಾರಿ ಕೋಡುಗಲ್ಲಿನ ತುದಿಯಿಂದ ಹಲವಾರು ಅಡಿಗಳು ಕೆಳಕ್ಕೆ ಬಿದ್ದು ಗಾಯಗೊಂಡಿದ್ದ ರಿಚರ್ಡ್, ಹಾಸಿಗೆ ಹಿಡಿಯುವ ಪರಿಸ್ಥಿತಿ ಉಂಟಾಯಿತು. ಗಾಯದ ಜೊತೆಗೆ, ಟ್ಯುಬರ್ಕ್ಯುಲೋಸಿಸ್ ಕಾಯಿಲೆಗೂ ಈಡಾದ ರಿಚರ್ಡ್, 1810ರ ನವೆಂಬರ್ ತಿಂಗಳಲ್ಲಿ ಅಸುನೀಗಿದಾಗ, ಅವನ ಕುಟುಂಬ ನಿರ್ಗತಿಕವಾಯಿತು. ಸುಮಾರು 150 ಪೌಂಡುಗಳ ಸಾಲ ತೀರಿಸಲಾಗದೆ, ಸೆರೆಮನೆವಾಸದಿಂದ ತಪ್ಪಿಸಿಕೊಳ್ಳಲು, ಪಾರಿಶ್ ಚರ್ಚಿನ ಮೊರೆಹೊಕ್ಕರು. ಗಂಡನ ಸಾವಿನಿಂದ ಕಂಗಾಲಾಗಿದ್ದ ಮೇರಿಯ ತಾಯಿ ಅವಳನ್ನು ಸಮುದ್ರದ ದಂಡೆಗೆ ಹೋಗಕೂಡದೆಂದು ನಿರ್ಬಂಧಿಸಿದಾಗ ಮೇರಿ ಮನೆಕೆಲಸದ ಮೊರೆಹೊಕ್ಕಳು.

ನಿರರ್ಗಳವಾಗಿ ಮಾತನಾಡಬಲ್ಲ, ಬುದ್ಧಿವಂತ 11 ವರ್ಷದ ಬಾಲಕಿ ಮೇರಿಗೆ, ತಂದೆಯ ಪ್ರೋತ್ಸಾಹ ಆತ್ಮವಿಶ್ವಾಸವನ್ನು ತುಂಬಿದ್ದವು. ನಿದ್ದೆಯಿಲ್ಲದೆ ಹೊರಳಾಡುತ್ತಿದ್ದ ಮೇರಿ ಒಂದು ರಾತ್ರಿ, ತನ್ನ ಜೀವನದ ಅತ್ಯಂತ ಪ್ರಮುಖವಾದ ನಿರ್ಧಾರವನ್ನು ತೆಗೆದುಕೊಂಡು, ಮರುದಿನ ನಸುಕಿನಲ್ಲೆದ್ದು ತನ್ನ ಚೂಪಾದ ಉಳಿಯನ್ನೆತ್ತಿಕೊಂಡು ಸೀದಾ ಸಮುದ್ರತೀರದ ಕಡೆಗೆ ನಡೆದಿದ್ದಳು. ಹಿಂದಿನ ರಾತ್ರಿಯೆಲ್ಲಾ ಚಚ್ಚಿದ್ದ ಪ್ರಬಲವಾದ ಬಿರುಗಾಳಿ ಅವಳ ಪಾಲಿಗೆ ವರವಾಗಿ ಪರಿಣಮಿಸಿತ್ತು. ಕಡಲ ದಂಡೆಯಲ್ಲಿ ಸಿಕ್ಕ ಅಮ್ಮೊನೈಟ್ಸ್ ಪಳೆಯುಳಿಕೆಯ ಶಿಲೆಯೊಂದನ್ನು ಪ್ರವಾಸಿ ಮಹಿಳೆಗೆ ಮಾರಿ 2 ಶಿಲ್ಲಿಂಗ್ ಮತ್ತು 6 ಪೆನ್ನಿಗಳನ್ನು ಸಂಪಾದಿಸಿ ತಂದಾಗ ಅವಳ ತಾಯಿ ಗಾಬರಿಗೊಂಡರೂ, ಕಡಲ ಚಿಪ್ಪುಗಳ

ಮಾರಾಟವೇ ತಮ್ಮ ಸಂಸಾರದ ಉಳಿವಿಗೆ ದಾರಿ ಎನ್ನಿಸಿ ಸುಮ್ಮನಾಗಿದ್ದಳು. ಇದರಿಂದ ಮೇರಿಯ ಮುಂದಿನ ಮಾರ್ಗ ಸುಗಮವಾಯಿತಾದರೂ, ಸಂಸಾರದ ಸಂಪೂರ್ಣ ಜವಾಬ್ದಾರಿ ಅವಳ ಎಳೆಯ ಹೆಗಲ ಮೇಲೆ ಬಿತ್ತು. ಮೇರಿ, ಮತ್ತು ಜೋಸೆಫ್ ಜೊತೆಯಾಗಿ ಕಡಲ ದಂಡೆಯಲ್ಲಿ ಚಿಪ್ಪು ಹುಡುಕಲು ಅಲೆಯುತ್ತಿದ್ದ ದೃಶ್ಯ ಊರಿನ ಜನಕ್ಕೆ ಸಾಮಾನ್ಯವಾಯಿತು. ಕೆದರಿದ ಕೂದಲು, ಹಳೆಯ ಮಸ್ಲಿನ್ ಲಂಗ, ಸವೆದ ಚಪ್ಪಲಿ ಧರಿಸಿ ತಿರುಗುತ್ತಿದ್ದ ಮೇರಿ ನೋಡುವವರ ಕಣ್ಣಿಗೆ ಆಕರ್ಷಕವಾಗಿರಲಿಲ್ಲ. ಆದರೆ ಕುಶಾಗ್ರಮತಿಯಾಗಿದ್ದ ಮೇರಿ, ತಾನು ಸಂಗ್ರಹಿಸಿದ ಕಡಲ ಚಿಪ್ಪುಗಳನ್ನು ವಾರಾಂತ್ಯದಲ್ಲಿ ಬರುವ ಪ್ರವಾಸಿಗರಿಗೆ ಯಶಸ್ವಿಯಾಗಿ ಮಾರುತ್ತಿದ್ದಳು.

**ಪ್ರಥಮಾನ್ವೇಷಣೆ: ಇಕ್ಥಿಯೋಸಾರಸ್**

1811ರಲ್ಲಿ, 12 ವಯಸ್ಸಿನ ಮೇರಿ, ನಾಲ್ಕು ಅಡಿ ಉದ್ದದ, ಸುಮಾರು 200 ಹಲ್ಲುಗಳಿದ್ದ ರಾಕ್ಷಸಾಕಾರದ ಹಲ್ಲಿಯ ಬುರುಡೆಯೊಂದನ್ನು ಪತ್ತೆಹಚ್ಚಿದ್ದಳು. ಅವಳ ತಮ್ಮ, 'ಅದೊಂದು ಮೊಸಳೆಯ ತಲೆ, ಅದರಲ್ಲೇನೂ ವಿಶೇಷವಿಲ್ಲ' ಎಂದು ತಳ್ಳಿದರೂ, ಅದನ್ನೊಪ್ಪದ ಮೇರಿ, ಆ ಪ್ರಾಣಿಯ ಅಸ್ಥಿಪಂಜರವನ್ನು ಹುಡುಕಲಾರಂಭಿಸಿದ್ದಳು. ಸುಮಾರು ಒಂದು ವರ್ಷದ ನಂತರ ಮತ್ತೊಂದು ಚಂಡಮಾರುತದಿಂದ, ಆ ಪ್ರಾಣಿಯ ಅಸ್ಥಿಪಂಜರವು ಸಮುದ್ರ ದಂಡೆಯ ಕೋಡುಗಲ್ಲಿನ ಮೇಲ್ಭಾಗದಲ್ಲಿ ಪ್ರಕಟಗೊಂಡಿತ್ತು. ಸುಮಾರು 17 ಅಡಿಗಳು ಉದ್ದವಾಗಿದ್ದ ಅಸ್ಥಿಪಂಜರವನ್ನು ಮೇರಿ ಇತರರ ಸಹಾಯದಿಂದ ಎಚ್ಚರಿಕೆಯಿಂದ ಮೇಲೆತ್ತಿ, ತಮ್ಮ ಮನೆಯ ಕಾರ್ಯಾಗಾರಕ್ಕೆ ಸಾಗಿಸಿದ್ದಳು. ಊರಿನ ಜನರಿಗೆ ಮೇರಿ ಅಸಾಮಾನ್ಯವಾದದ್ದನ್ನು ಪತ್ತೆಮಾಡಿದ್ದಾಳೆಂದು ತಿಳಿದಿದ್ದರೂ, ಅದಕ್ಕೇನೂ ಹೆಚ್ಚಿನ ಮಹತ್ವ ನೀಡಿರಲಿಲ್ಲ. ಸುಮಾರು 175 ಮಿಲಿಯನ್ ವರ್ಷಗಳಿಂದ ಅಲ್ಲಿ ಮಲಗಿದ್ದ ದೈತ್ಯಾಕಾರದ ಪಳೆಯುಳಿಕೆಯನ್ನು, ಸಣ್ಣ ಊರಿನ ಹುಡುಗಿಯೊಬ್ಬಳು ಪತ್ತೆಹಚ್ಚಿದ್ದಾಳೆ ಎನ್ನುವ ಸುದ್ದಿ ನಿಧಾನವಾಗಿ ಹಬ್ಬಿತ್ತು. ಇಕ್ಥಿಯೋಸಾರಸ್ (Ichthyosaurus) ಎಂದು ನಾಮಕರಣಗೊಂಡ ಆ ಪಳೆಯುಳಿಕೆಯು 23 ಪೌಂಡುಗಳಿಗೆ ಮಾರಾಟವಾದಾಗ, ಮೇರಿಗೆ 6 ತಿಂಗಳ ಕಾಲ ಸಂಸಾರ ನಡೆಸಲು ಸಹಾಯವಾಗಿದ್ದಲ್ಲದೇ, ತಂದೆ ಮಾಡಿದ್ದ ಸಾಲವನ್ನೂ ಅಲ್ಪಸ್ವಲ್ಪ ತೀರಿಸಲು ಸಾಧ್ಯವಾಯಿತು.

ಇದರಿಂದ ಪ್ರೋತ್ಸಾಹಿತಳಾದ ಮೇರಿ, ತನ್ನ ಕಾರ್ಯವನ್ನು ಮುಂದುವರೆಸಿದಳು. ಅದೇ ಸಮಯಕ್ಕೆ ಆ ಊರಿಗೆ ಬಂದ 16 ವಯಸ್ಸಿನ ಹೆನ್ರಿ ಡಿ ಲಾ ಬೆಕೆ ಎನ್ನುವ ತರುಣ ಮೇರಿಯ ಪಳೆಯುಳಿಕೆ ಅನ್ವೇಷಣೆಯ ಕೌಶಲ್ಯಕ್ಕೆ ಬೆರಗಾಗಿದ್ದ. ಆಗ ಪ್ರಾರಂಭವಾದ ಅವರಿಬ್ಬರ ಸ್ನೇಹ ಕಡೆಯವರೆಗೂ ಮುಂದುವರೆದಿತ್ತು ಎಂದು ತಿಳಿದುಬರುತ್ತದೆ. ಮೇರಿ ಪತ್ತೆ ಹಚ್ಚಿದ್ದ ಆ ಸರೀಸೃಪ ಅಸ್ಥಿಪಂಜರದ ವರದಿ ವಿಜ್ಞಾನಿಗಳನ್ನು ಬೆರಗುಗೊಳಿಸಿದ್ದರೂ, ಚರ್ಚಿನ ಬಗ್ಗೆ ಧರ್ಮನಿಷ್ಠೆಯಿದ್ದ ಜನಕ್ಕೆ ಸಹ್ಯವಾಗಿರಲಿಲ್ಲ. ಮೇರಿಯ ಅನ್ವೇಷಣೆ ಜನಗಳಲ್ಲಿ ತೀವ್ರಾಸಕ್ತಿಯನ್ನು ಕೆರಳಿಸುತ್ತಿದ್ದಾಗಲೇ, ವಿಜ್ಞಾನಿಗಳು ಈ ನೂತನ

ಬೆಳವಣಿಗೆಯನ್ನು, ಕ್ರಿಶ್ಚಿಯನ್ ಬೋಧನೆಗಳೊಂದಿಗೆ ಬೆಸೆದು, ಹೊಸ ಸಿದ್ಧಾಂತಗಳನ್ನು ಹುಟ್ಟುಹಾಕಲು ಹೆಣಗಾಡುತ್ತಿದ್ದರು. ಅಸ್ಥಿಪಂಜರದ ಸುದ್ದಿ ಕೇಳಿದ ನಂತರ, ವಿಜ್ಞಾನದಲ್ಲಿ ಜನರ ಕುತೂಹಲ ಕೆದರಲಾರಂಭಿಸಿ, ಕಡಲಚಿಪ್ಪುಗಳನ್ನು ಮಾರುವ ಅಂಗಡಿಗಳು ಎಲ್ಲೆಡೆ ಹಬ್ಬಿದವು. ಈ ಮಧ್ಯೆ ವಿಜ್ಞಾನಿಗಳು ಮೇರಿ ಹೊರತೆಗೆದ ಅಸ್ಥಿಪಂಜರದ ಜೀವಿಯನ್ನು ಯಾವ ಪ್ರಾಣಿಯ ವರ್ಗಕ್ಕೂ ಸೇರಿಸಲಾಗದೆ ತಡವರಿಸುತ್ತಿದ್ದರು. ಪ್ರತಿಷ್ಠಿತ ಆಕ್ಸ್‌ಫರ್ಡ್ ವಿಶ್ವವಿದ್ಯಾಲಯದ ಭೂವಿಜ್ಞಾನಿ ವಿಲಿಯಮ್ ಬಕ್ಲ್ಯಾಂಡ್, ಮೇರಿಯನ್ನು ಭೇಟಿ ಮಾಡಲು 1815ರಲ್ಲಿ ಲೈಮ್ ರೆಜಿಸ್ ಊರಿಗೆ ಭೇಟಿ ನೀಡಿದ್ದ. ದಯಾಪರ, ಆದರೆ ವಿಚಿತ್ರ ಸ್ವಭಾವದವನಾದ ಬಕ್ಲ್ಯಾಂಡ್, ಮೇರಿಯ ಜೊತೆ ಪಳೆಯುಳಿಕೆಯ ಬಗ್ಗೆ ಸಾಕಷ್ಟು ಚರ್ಚೆ ನಡೆಸಿ ಅವಳಿಂದ ಪಳೆಯುಳಿಕೆಯ ಬಗ್ಗೆ ಮಾಹಿತಿ ಸಂಗ್ರಹಿಸುವ ಪ್ರಯತ್ನ ಮಾಡಿದ್ದನು. 16 ವರ್ಷದ ಮೇರಿ, ಎಂದೂ ಮೇಲ್ವರ್ಗದ ವಿದ್ಯಾವಂತ ಜನಗಳ ಜೊತೆಗೆ ಬೆರೆಯದಿದ್ದರೂ, ಅವಳಿಗೆ ಕಲಿಯುವ ಆಸೆಯಿತ್ತು. ಬಕ್ಲ್ಯಾಂಡ್ ಜೊತೆಯಲ್ಲಿ ನಡೆಸಿದ ಮಾತುಕತೆಗಳಿಂದ ಅವಳಿಗೆ ಸಾಕಷ್ಟು ತನ್ನ ಜ್ಞಾನವನ್ನು ಹೆಚ್ಚಿಸಿಕೊಳ್ಳುವ ಅವಕಾಶ ಸಿಕ್ಕಿತ್ತು.

ಹಲವು ವರ್ಷಗಳ ಕಾಲ, ಪಾರಿಷ್ ಚರ್ಚಿನ ಸಂಜೆಯ ತರಗತಿಯಲ್ಲಿ ಓದಿ-ಬರೆಯುವುದನ್ನು ಕಲಿತಿದ್ದ ಮೇರಿ, ಸಾಂಪ್ರದಾಯಿಕ ಶಿಕ್ಷಣವಿಲ್ಲದಿದ್ದರೂ, ತಾನು ಓದಿ, ಕೇಳಿದ ಸುದ್ದಿಗಳನ್ನು ತಪ್ಪದೆ ಬರೆದಿಡುತ್ತಿದ್ದಳು. ಓದುವುದರಲ್ಲಿ ತೀವ್ರವಾದ ಆಸಕ್ತಿಯಿದ್ದ ಮೇರಿ, ಭೂವಿಜ್ಞಾನದ ಬಗ್ಗೆ ಪತ್ತೆಯಾದ ವೈಜ್ಞಾನಿಕ ವಿಷಯಗಳ ಬಗ್ಗೆ ತಿಳಿದುಕೊಳ್ಳಲು ಹರಸಾಹಸ ಪಡುತ್ತಿದ್ದಳು. ಯಾವುದಾದರೂ ವಿದ್ವತ್ಪೂರ್ಣ ಲೇಖನ ದೊರೆತರೆ, ಗಂಟೆಗಟ್ಟಲೆ ಕುಳಿತು ಅದನ್ನು ತನ್ನ ಡೈರಿಯಲ್ಲಿ ಬರೆದುಕೊಂಡು, ಅದರಲ್ಲಿರುವ ಕಡಲ ಸರೀಸೃಪಗಳ ಚಿತ್ರಗಳನ್ನು ನಕಲು ಮಾಡುವ ಪ್ರಯತ್ನ ಮಾಡುತ್ತಿದ್ದಳು. ಪಟ್ಟುಬಿಡದೆ ಕಲಿಯುತ್ತಾ, ಮುಂದೆ ಅನಾಟಮಿ, ಪ್ರಾಣಿ ಅಂಗರಚನಾಶಾಸ್ತ್ರಗಳ ವಿಷಯದ ಬಗ್ಗೆಯೂ ಓದಿ ಪರಿಣತಿ ಪಡೆದಿದ್ದಳು. ಪಳೆಯುಳಿಕೆಯ ಅನ್ವೇಷಣೆಯಲ್ಲಿ ಅವಳಿಗೆಷ್ಟು ಕೌಶಲ್ಯವಿತ್ತೆಂದರೆ, ಪ್ರತೀ ಚಂಡಮಾರುತದ ನಂತರ, ಯಾವ ಜಾಗದಲ್ಲಿ ಪಳೆಯುಳಿಕೆಗಳು ಇರಬಹುದು ಎನ್ನುವುದನ್ನು ನಿಖರವಾಗಿ ಹೇಳುವಷ್ಟು ಪರಿಣತಳಾಗಿದ್ದಳು. ಭೂವಿಜ್ಞಾನದಲ್ಲಿ ಅವಳಿಗಿದ್ದ ಚಾತುರ್ಯ ಮತ್ತು ಕುಶಾಗ್ರಮತಿಗೆ ಅನೇಕ ವಿಜ್ಞಾನಿಗಳು ಬೆರಗಾಗುತ್ತಿದ್ದರು.

1815-1816ರ ನಡುವಿನಲ್ಲಿ ಮುಂದುವರೆದಿದ್ದ ಮೇರಿಯ ಅನ್ವೇಷಣೆಗಳು, ಅವಳಿಗೆ ಅಂದಿನ ಹೆಸರಾಂತ ಭೂವಿಜ್ಞಾನಿಗಳ ಜೊತೆಗೆ ಸಂಪರ್ಕ ಬೆಳೆಸುವ ಅವಕಾಶವನ್ನು ಕಲ್ಪಿಸಿತ್ತು. ಅವಳ ಹೆಸರು ಮತ್ತು ಸಾಧನೆ ಪ್ರಭಾವಿ ಜನಗಳಿಗೆ ಗೊತ್ತಿದ್ದರೂ, ಅವಳ ಕುಟುಂಬದವರು ಇನ್ನೂ ಬಡತನದಲ್ಲೇ ನರಳುತ್ತಿದ್ದರು. ಮೇರಿಯ ಕುಟುಂಬದ ಕಷ್ಟಗಳ ಬಗ್ಗೆ ಕೇಳಿದ ಕರ್ನಲ್ ಬರ್ಚ್ ಎನ್ನುವ ಪಳೆಯುಳಿಕೆಗಳ ಸಂಗ್ರಾಹಕ, ಸಿಟ್ಟಿಗೆದ್ದಿದ್ದ. ಭೂವಿಜ್ಞಾನಕ್ಕೆ ಇಂತಹ ಅಪೂರ್ವ ಕೊಡುಗೆಯಿತ್ತ ಮೇರಿ ಮತ್ತು ಅವಳ ಕುಟುಂಬವನ್ನು ನಿರ್ಗತಿಕ ಪರಿಸ್ಥಿತಿಗೆ ತಳ್ಳುವುದು ನಾಚಿಕೆಯ ವಿಷಯ ಎಂದು, ತನ್ನಲ್ಲಿದ್ದ ಎಲ್ಲಾ

ಪಳೆಯುಳಿಕೆಗಳ ಸಂಗ್ರಹವನ್ನು ಲಂಡನ್ನಿನಲ್ಲಿ ಹರಾಜು ಹಾಕಿ, ಅದರಿಂದ ಬಂದ 400 ಪೌಂಡುಗಳಷ್ಟು ಹಣವನ್ನು ಮೇರಿಗೆ ನೀಡಿ ಅವಳ ಕುಟುಂಬಕ್ಕೆ ಹಣಕಾಸಿನ ಸುರಕ್ಷತೆ ನೀಡಿದ ಮೊದಲ ಪುರುಷನಾಗಿದ್ದನು. ಈ ಹರಾಜಿನಿಂದ ಮೇರಿಯ ಸಾಧನೆಗೆ ಬಹಳಷ್ಟು ಪ್ರಚಾರ ಸಿಕ್ಕಿತ್ತು. ಕರ್ನಲ್ ಬರ್ಚನ ಔದಾರ್ಯ ಕಂಡ ಊರಿನ ಜನ ಸಹಿಸಲಾರದೆ, ಅವರಿಬ್ಬರ ಸಂಬಂಧದ ಬಗ್ಗೆ ಊಹಾಪೋಹ ಹಬ್ಬಿಸಿದರು. ಆದರೆ ಮೇರಿ ಮಾತ್ರ ಆ ಅಸೂಯೆಯ ಮಾತುಗಳಿಗೆ ಕಿವಿಗೊಡದೆ ತನ್ನ ಕಾರ್ಯಗಳನ್ನು ಮುಂದುವರೆಸಿದ್ದಳು. ಮುಂದೆ, ಹೆಸರಾಂತ ಲೇಖಕ ಚಾರ್ಲ್ಸ್ ಡಿಕನ್ಸ್ ಮೇರಿಯ ಬಗ್ಗೆ ಬರೆಯುತ್ತಾ 'ಪಳೆಯುಳಿಕೆಯ ಹರಾಜಿಗೆ ಮುಂಚೆ, ಯಾರಿಗೂ ಮೇರಿಯ ಬಗ್ಗೆ ಗೌರವ ಮತ್ತು ಆದರಗಳಿರಲಿಲ್ಲ. ಅದಾದ ನಂತರ ಜನಗಳು ಅವಳನ್ನು ಸ್ವಲ್ಪ ಗಮನಿಸುತ್ತಿದ್ದರೂ, ಮೇರಿಯಂತಹ ಆಕರ್ಷಕವಲ್ಲದ, ಅವಿದ್ಯಾವಂತ ತರುಣಿ ಸಮಾಜದ ಶ್ರೀಮಂತ ಪುರುಷನ ದಯೆ ಮತ್ತು ಔದಾರ್ಯವನ್ನು ಸಂಪಾದಿಸಲು ಹೇಗೆ ಸಾಧ್ಯವಾಯಿತು ಎಂದು ಅವಳ ಹಿಂದೆ ಆಡಿಕೊಳ್ಳುತ್ತಿದ್ದರು' ಎನ್ನುತ್ತಾನೆ. ಹರಾಜಿನಿಂದ ಬಂದ ಹಣ ದೊಡ್ಡ ಮೊತ್ತವಾಗಿದ್ದರೂ, ಮೇರಿ ಆಲಸಿಯಾಗಿ ಕುಳಿತಿರಲಿಲ್ಲ. ತನ್ನ ಅನ್ವೇಷಣೆಯನ್ನು ಮುಂದುವರೆಸಿ, ಇಕ್ಥಿಯೋಸಾರಸ್ ಪ್ಲಾಟಿಡಾನ್ ಎನ್ನುವಂತಹ ಮತ್ತೊಂದು ಬೃಹತ್ ಜೀವಿಯ ಪಳೆಯುಳಿಕೆಯನ್ನು ಹೊರತೆಗೆದಿದ್ದಳು. ಮೇರಿಯ ಪ್ರಯತ್ನಗಳ ಫಲವಾಗಿ ಭೂವಿಜ್ಞಾನದಲ್ಲಿ ಅಪಾರವಾದ ಪ್ರಗತಿ ಸಂಭವಿಸಿದ್ದಲ್ಲದೇ, ವಿಜ್ಞಾನಿಗಳು ಜೀವಿಗಳ ವಿಕಾಸದ ಬಗ್ಗೆ ಚಿಂತಿಸಲು ಪ್ರಾರಂಭಿಸಿದ್ದರು. ಈ ಮಧ್ಯೆ ಜಾರ್ಜ್ ಕಂಬರ್ಲ್ಯಾಂಡ್ ಎನ್ನುವ ಮೇಧಾವಿ ಪಳೆಯುಳಿಕೆಯ ಶಾಸ್ತ್ರಜ್ಞನು, ಬ್ರಿಸ್ಟಲ್ಲಿನ ಸುದ್ದಿಪತ್ರಿಕೆಯಲ್ಲಿ, ಮೇರಿಯ ಸಾಹಸಿ ಶೋಧನೆಗಳ ಬಗ್ಗೆ ಹೊಗಳಿ ಬರೆದಿದ್ದ. ಆ ಕಾಲಕ್ಕೆ ಮಹಿಳೆಯರ ಪಾಲಿಗೆ ಅಪರೂಪವೆನಿಸಿದ್ದ ಆ ಔದಾರ್ಯವನ್ನು ಮೇರಿ ಮೆಚ್ಚಿಕೊಂಡಿದ್ದಳು.

**ಪ್ಲೆಸಿಯೋಸಾರಸ್:**

1823ರ ಡಿಸೆಂಬರ್ ತಿಂಗಳಲ್ಲಿ, ಮೇರಿ ಉತ್ಖನನ ಮಾಡಿದ 9 ಅಡಿಗಳಷ್ಟು ನೀಳವಾಗಿದ್ದ ವಿಕೃತ ಕತ್ತಿನ ಆಮೆಯಂತಹ ಜೀವಿಯ ತಲೆ ಕೇವಲ 5 ಇಂಚುಗಳಿತ್ತು. ಮೇರಿ ಅದರ ಚಿತ್ರವನ್ನು ಬರೆದು, ಪ್ರಖ್ಯಾತ ಭೂವಿಜ್ಞಾನಿಯಾಗಿದ್ದ ಕೋನಿಬೇರ್ ಎನ್ನುವವನಿಗೆ ಕಳಿಸಿದ್ದಳು. ಅವನು ಆ ಪಳೆಯುಳಿಕೆಗೆ ಪ್ಲೆಸಿಯೋಸಾರಸ್ ಎಂದು ಕರೆದು, ಅದರ ಸುದ್ದಿಯನ್ನು ಎಲ್ಲೆಡೆ ಹರಡಿದ್ದ. ಈ ಸುದ್ದಿ ಫ್ರಾನ್ಸಿನ ಪ್ರಸಿದ್ಧ ವಿಜ್ಞಾನಿ ಜಾರ್ಜ್ ಕ್ಯೂವಿಯರ್ ಕಿವಿಗೆ ತಲುಪಿತು. ಬ್ರಿಟಿಷ್ ಅಂಗರಚನಾಶಾಸ್ತ್ರಜ್ಞರ ಬಗ್ಗೆ ಹೆಚ್ಚಿನ ಗೌರವವಿಲ್ಲದ ಅವನು, ಮೇರಿ ಪತ್ತೆಹಚ್ಚಿದ ಪಳೆಯುಳಿಕೆಯ ಮಾದರಿಯಲ್ಲಿ ಮೋಸವಿರಬಹುದು ಎಂದು ಸಾರಿದಾಗ, ಅದು ಮೇರಿಯ ಅನ್ವೇಷಣೆಯ ಮೇಲೆ ಪರಿಣಾಮ ಬೀರಿತು. ಬ್ರಿಟನ್ನಿನಲ್ಲಿ ಹಲವು ಸಂಗ್ರಹಕಾರರು ಪ್ಲಾಸ್ಟರ್ ಆಫ್ ಪ್ಯಾರಿಸಿನ ನಕಲುಗಳನ್ನು ತಯಾರಿಸಿ ಮಾರುತ್ತಿದ್ದ ಕಾರಣ, ಕ್ಯೂವಿಯರ್ ಮೇರಿಯ ಅನ್ವೇಷಣೆಯ

ಬಗ್ಗೆ ಸಂಶಯ ವ್ಯಕ್ತಪಡಿಸಿದ್ದ. ಇದರಿಂದ ಸಿಟ್ಟಿಗೆದ್ದ ಬ್ರಿಟಿಷ್ ಮ್ಯೂಸಿಯಮ್ ಇದನ್ನು ಖಂಡಿಸಲು ವಿಶೇಷ ಸಭೆಯನ್ನು ಕರೆದಾಗ, ಅದಕ್ಕೆ ಮೇರಿಯನ್ನೇನೂ ಆಹ್ವಾನಿಸಿರಲಿಲ್ಲ. ಸೊಸೈಟಿಯ ಸದಸ್ಯರು ಒಮ್ಮತದಿಂದ ಮೇರಿ ಉತ್ಖನನ ಮಾಡಿರುವ ಎಲ್ಲಾ ಪಳೆಯುಳಿಕೆಗಳೂ ನಿಜವಾದದ್ದು, ನಕಲಲ್ಲ ಎಂದು ನಿರ್ಧರಿಸಿ, ಬ್ರಿಟನ್ನಿನ ಗೌರವ ಉಳಿಸಿಕೊಂಡಿದ್ದರು.

ಈ ಮಧ್ಯೆ ಮೇರಿ ರಚಿಸಿದ್ದ ಪ್ಲೆಸಿಯೋಸಾರ್ಸ್ ಚಿತ್ರಗಳನ್ನು ಕೂಲಂಕಷವಾಗಿ ಅಧ್ಯಯನ ಮಾಡಿದ ನಂತರ ಜಾರ್ಜ್ ಕ್ಯೂವಿಯರ್ ತನ್ನ ತಪ್ಪನ್ನು ಒಪ್ಪಿಕೊಂಡಾಗ, ಮೇರಿಗೆ ತನ್ನ ಸಾಮರ್ಥ್ಯದ ಬಗ್ಗೆ ಆತ್ಮವಿಶ್ವಾಸ ಹೆಚ್ಚಾಯಿತು. ಮೇರಿಯ ಆ ಪ್ಲೆಸಿಯೋಸಾರಸ್ ನಮೂನೆಯನ್ನು ಡ್ಯೂಕ್ ಆಫ್ ಬರ್ಮಿಂಗ್ಯಾಮ್ 110 ಪೌಂಡುಗಳಿಗೆ ಕೊಂಡುಕೊಂಡ. ಪ್ಲೆಸಿಯೋಸಾರ್ಸ್ ಅನ್ವೇಷಣೆಯ ಬಗ್ಗೆ ಪ್ರಕಟವಾದ ವಿಜ್ಞಾನದ ಪ್ರಬಂಧಗಳಲ್ಲಿ, ಕೋನಿಬೇರ್ ಮೇರಿಯ ಹೆಸರನ್ನು ಪ್ರಸ್ತಾಪಿಸಿದಾಗ, ಅವಳು ಕೇವಲ ಹೊಟ್ಟೆಯ ಪಾಡಿಗಾಗಿ ಪಳೆಯುಳಿಕೆಗಳನ್ನು ಹುಡುಕಿ ಮಾರುತ್ತಾಳೆ ಎನ್ನುವ ನಕಾರಾತ್ಮಕ ಭಾವನೆಯನ್ನು ವ್ಯಕ್ತಪಡಿಸಿ, ಅವಳ ಅನ್ವೇಷಣೆಯ ಸಾಮರ್ಥ್ಯದ ಬಗ್ಗೆ ಅವಳಿಗೆ ಸಲ್ಲಬೇಕಾಗಿದ್ದ ಮಾನ್ಯತೆಯನ್ನು ನೀಡದೆ ಅನ್ಯಾಯಮಾಡಿದ್ದ. ಮೇರಿಯ ಪಳೆಯುಳಿಕೆಗಳು, ಪ್ರಾಚೀನ ಕಾಲದಲ್ಲಿದ್ದ ಜೀವಿಗಳು, ಹಿಂದೊಮ್ಮೆ ಭೂಮಿಯಲ್ಲಿ ಹಠಾತ್ತಾಗಿ ಸಂಭವಿಸಿದ ಪ್ರಳಯಕಾರಿ ಘಟನೆಯೊಂದರ ಕಾರಣ, ಸಾಮೂಹಿಕವಾಗಿ ನಾಶಗೊಂಡಿರಬಹುದು ಎನ್ನುವುದನ್ನು ಸೂಚಿಸುತ್ತಿತ್ತು. ಅದನ್ನು ಊಹಿಸಲೂ ಸಾಮರ್ಥ್ಯವಿಲ್ಲದ 19ನೆಯ ಶತಮಾನದ ಧರ್ಮನಿಷ್ಠ ಜನಗಳಿಗೆ ಅದೊಂದು ಭಯಾನಕ ಕಲ್ಪನೆಯಾಗಿತ್ತು.

ಸಾರ್ವಜನಿಕವಾಗಿ ಪುರುಷರೊಡನೆ ಮಹಿಳೆಯರು ನಡೆದಾಡುವ ಪದ್ಧತಿಯಿಲ್ಲದ ಕಾಲದಲ್ಲಿ, ಮೇರಿಯನ್ನು ಭೇಟಿಮಾಡಲು ವಿದ್ವಾಂಸರು ಆಗಾಗ್ಗೆ ಬರುತ್ತಿದ್ದರು. ಬಡಕುಟುಂಬದ ಮೇರಿಗೆ, ಬುದ್ಧಿವಂತ ಪುರುಷರ ಜೊತೆ ಚರ್ಚೆಮಾಡುವ, ಅವರೊಂದಿಗೆ ಪತ್ರವ್ಯವಹಾರ ಮಾಡುವಷ್ಟು ತಿಳಿವಳಿಕೆಯಿತ್ತು. ಜಾರ್ಜ್ ಕ್ಯೂವಿಯರ್‌ನಂತಹ ಪ್ರಸಿದ್ಧ ವಿಜ್ಞಾನಿ ಮೇರಿಯ ಅನ್ವೇಷಣೆ ನಕಲಲ್ಲ ಎಂದು ಅಂಗೀಕರಿಸಿದ ಸಂಗತಿ ಬ್ರಿಟನ್ನಿನ ವಿಜ್ಞಾನಿಗಳಿಗೆ ನಂಬಲಾಗಿರಲಿಲ್ಲ. ಬ್ರಿಟನ್ನಿನ ಪುರುಷ ವಿಜ್ಞಾನಿಗಳಿಗೆ ಹಣದ ಯಾವುದೇ ಕೊರತೆಯಿರಲಿಲ್ಲ. ಆದರೆ, ಪ್ರತಿ ಕಾಸಿಗೂ ಬೆವರು ಸುರಿಸಬೇಕಾಗಿದ್ದ ಅಸಹಾಯಕ ಪರಿಸ್ಥಿತಿ ಮೇರಿಯನ್ನು ಕೆರಳಿಸುತ್ತಿತ್ತು. 1826ರಲ್ಲಿ, ಮೇರಿ ತಾನು ಉಳಿತಾಯಮಾಡಿದ್ದ ಹಣದಿಂದ ಸಮುದ್ರಕ್ಕೆ ಹತ್ತಿರವಾಗಿದ್ದ ಸಣ್ಣ ಮನೆಯೊಂದನ್ನು ಖರೀದಿಸಿದ್ದಳು. ಆ ಮನೆಯ ಮುಂದಿನ ಕೋಣೆಯನ್ನು ಗಾಜಿನ ಕಿಟಕಿಯಿದ್ದ ಸಣ್ಣ ಅಂಗಡಿಯಾಗಿ ಪರಿವರ್ತಿಸಿ, ಅದಕ್ಕೆ 'ಆನಿಂಗ್ ಪಳೆಯುಳಿಕೆಯ ಉಗ್ರಾಣ' ಎಂದು ಹೆಸರಿಟ್ಟು ತನ್ನ ತಂದೆಯ ಕನಸನ್ನು ಸಾಕಾರಗೊಳಿಸಿದಳು. ಅವಳ ಮನೆ ಈಗ ಊರಿನ ಹಣವಂತರ ಮನೆಗಳಿಗೆ ಸಮೀಪದಲ್ಲಿದ್ದ ಕಾರಣ, ಸಮಾಜದಲ್ಲಿ ಅವಳ ಅಂತಸ್ತು ಮೇಲೇರಿತ್ತು. ಇದು ಒಂದು ಮಹತ್ವಪೂರ್ಣ ಸುದ್ದಿಯಾಗಿ ಪತ್ರಿಕೆಯಲ್ಲಿ ಪ್ರಕಟವಾದಾಗ ಮೇರಿಗೆ ಸಂತೋಷವಾಗಿತ್ತು. ಅವಳ ಪಳೆಯುಳಿಕೆಯ ಉಗ್ರಾಣ ಸಂಗ್ರಾಹಕರಿಗೆ ವಿಶೇಷ ಆಕರ್ಷಣೆಯಾಗಿದ್ದು, ಪ್ರಖ್ಯಾತರು

ಭೇಟಿ ನೀಡುತ್ತಿದ್ದರು. ಅಮೆರಿಕ, ಐರೋಪ್ಯ ರಾಷ್ಟ್ರಗಳ ಭೂವಿಜ್ಞಾನಿಗಳು ತಮ್ಮ ಪಳೆಯುಳಿಕೆಗಳನ್ನು ಗುರುತುಹಿಡಿದು ವರ್ಗೀಕರಿಸುವ ಕೆಲಸಕ್ಕೆ ಮೇರಿಯ ಸಲಹೆ ಮತ್ತು ಸಹಾಯವನ್ನು ಅಪೇಕ್ಷಿಸಿ ಬರುತ್ತಿದ್ದದ್ದು ನಿಜಕ್ಕೂ ಗರ್ವದ ಸಂಗತಿಯಾಗಿತ್ತು. ಅವರಲ್ಲೊಬ್ಬ ಪ್ರಖ್ಯಾತ ಇಂಗ್ಲಿಷ್ ಭೂಗರ್ಭಶಾಸ್ತ್ರಜ್ಞ, ರೋಡ್ರಿಕ್ ಮುರ್ಚಿನ್ಸನ್, ಅವಳಿಗೆ ನಿಕಟ ಮಿತ್ರನಾದ. ಅವನ ಹೆಂಡತಿ ಶಾಲೆಟ್, ಮೇರಿಯ ಬಗ್ಗೆ ತುಂಬಾ ವಿಶ್ವಾಸ ತೋರುತ್ತಿದ್ದಳಲ್ಲದೇ, ಯೂರೋಪಿನಲ್ಲಿ ಅವಳ ಸಂಪರ್ಕ ಮತ್ತು ಯಶಸ್ಸು ಹೆಚ್ಚಲು ಸಹಕಾರಿಯಾದಳು.

**ಕೋಪ್ರೊಲೈಟ್ಸ್:**

1826ಲ್ಲಿ ಮೇರಿ ಇಕ್ಥಿಯೋಸಾರಸ್ ಅಸ್ಥಿಪಂಜರದೊಳಗೆ ಅಡಕವಾಗಿದ್ದ ಪಳೆಯುಳಿಕೆಯ ಕಲ್ಲುಗಳನ್ನು ಸಂಗ್ರಹಿಸಿದ್ದಳು. ಈ ಕಲ್ಲುಗಳು ಈ ಪ್ರಾಣಿಯ ಮರಣದ ಸಮಯದಲ್ಲಿ, ಅದರ ಶರೀರದೊಳಗೆ ಜೀರ್ಣವಾಗದೆ ಉಳಿದುಕೊಂಡ ಆಹಾರಪದಾರ್ಥದ ಅವಶೇಷಗಳು ಎಂದು ಮೇರಿ ನಂಬಿದ್ದಳು. ಅವಳ ಮಿತ್ರ ವಿಜ್ಞಾನಿ ವಿಲಿಯಮ್ ಬಕ್ಲ್ಯಾಂಡನಿಗೆ ಈ ವಿವರಣೆ ಅಷ್ಟೊಂದು ಸರಿ ಎನಿಸಿರಲಿಲ್ಲ. ಆದರೆ, ತನ್ನ ಸಹೋದ್ಯೋಗಿಗಳ ಜೊತೆಗೆ ಸಮಾಲೋಚನೆ ನಡೆಸಿದ ನಂತರ, ಮೇರಿಯ ವ್ಯಾಖ್ಯಾನವೇ ಸರಿ ಎಂದು ತಿಳಿದುಬಂದಿತ್ತು. ಕೋಪ್ರೊಲೈಟ್ಸ್ ಎಂದು ಕರೆಯಲ್ಪಡುತ್ತಿದ್ದ ಈ ಶಿಲೆಗಳು ಮೀನು, ಮತ್ತು ಇತರ ಸಣ್ಣ ಜೀವಿಗಳ ಹಲ್ಲಿನ ತುಣುಕುಗಳ ಅವಶೇಷಗಳೆಂದು ಅನೇಕ ವರ್ಷಗಳ ನಂತರ ವಿಜ್ಞಾನಿಗಳಿಗೆ ತಿಳಿದುಬಂದಿದ್ದಲ್ಲದೇ, ಟೈರಾನೋಸಾರಸ್ ಎನ್ನುವ ರಾಕ್ಷಸಾಕಾರದ ಪ್ರಾಣಿಯು ಮಾಂಸಾಹಾರಿಯಾಗಿತ್ತು ಎನ್ನುವ ಸಂಗತಿಯನ್ನು ದೃಢಪಡಿಸಲು ಸಹಕಾರಿಯಾಗಿತ್ತು. ಮೇರಿಯ ಈ ಅನ್ವೇಷಣೆಯೂ ಕೂಡಾ ಅಂದಿನ ಭೂವಿಜ್ಞಾನಿಗಳಿಗೆ, ಪಳೆಯುಳಿಕೆಗಳ ಸ್ವರೂಪದ ಬಗ್ಗೆ ಹೊಸದಾದ ತಿಳಿವಳಿಕೆಯನ್ನು ನೀಡಿತ್ತು.

1828ರ ಚಳಿಗಾಲದಲ್ಲಿ, ಲೈಮ್ ರೆಜಿಸ್ ಕರಾವಳಿಯ ಕ್ವಾರಿಯಲ್ಲಿ, 4 ಅಡಿಗಳಷ್ಟು ಉದ್ದದ, ವಿಕೃತ ಸ್ವರೂಪದ ಜೀವಿಯನ್ನು ಮೇರಿ ಹೊರಕ್ಕೆಳೆದಳು. ಬಾಲ, ರೆಕ್ಕೆ, ಉದ್ದವಾದ ಕೊಕ್ಕು ಮತ್ತು ಹರಿತವಾದ ಪಂಜಗಳ ಸುಳಿವನ್ನು ಹೊಂದಿದ್ದ ಈ ಅಮೋಘವಾದ ಜೀವಿಯ ಮಾದರಿಯು ಹಾರುವ ಹಲ್ಲಿಯಂತೆ ಕಾಣುತ್ತಿತ್ತು. ಇಂತಹ ಜೀವಿಯ ಅಸ್ತಿತ್ವದ ಬಗ್ಗೆ ಅನೇಕ ವಿಜ್ಞಾನಿಗಳಿಗೆ ಸ್ವಲ್ಪ ಸುಳಿವಿದ್ದರೂ, ಮೇರಿಯ ಈ ಅನ್ವೇಷಣೆ ನೂತನ, ಅತ್ಯಂತ ಕುತೂಹಲಕಾರಿ ಮತ್ತು ಅಪರೂಪವೆಂದು ಬಕ್ಲ್ಯಾಂಡ್ ಘೋಷಿಸಿದ್ದನು.

ಜಿಯಲಾಜಿಕಲ್ ಸೊಸೈಟಿಯ ಸಭೆಗಳಲ್ಲಿ, ಇನ್ನೂ ಮಹಿಳೆಯರಿಗೆ ಪ್ರವೇಶವಿಲ್ಲದ ಕಾರಣ, ಮೇರಿಯ ನೂತನ ಪಳೆಯುಳಿಕೆಯ ಅನ್ವೇಷಣೆಯನ್ನು ಕೂಡಾ 1829ರಲ್ಲಿ ಬಕ್ಲ್ಯಾಂಡನೇ ವರದಿಮಾಡಿದ್ದ. ಆದರೆ, ಅಧಿಕೃತವಾಗಿ ಈ ಪತ್ತೆಯ ಮಾನ್ಯತೆಯನ್ನು ಬಕ್ಲ್ಯಾಂಡನಿಗೆ ಜಿಯಲಾಜಿಕಲ್ ಸೊಸೈಟಿ ನೀಡಿದ್ದ ಕಾರಣ, ಮತ್ತೊಮ್ಮೆ ಮೇರಿಗೆ ಮೋಸವಾಗಿತ್ತು. ಆದರೆ, ಅಷ್ಟು ಹೊತ್ತಿಗಾಗಲೇ, ಅವಳ ಅನ್ವೇಷಣೆಯ ಸುದ್ದಿ ಪ್ಯಾರಿಸ್ ನಗರಕ್ಕೆ ತಲುಪಿ, ಅಲ್ಲಿನ ವಿಶ್ವವಿದ್ಯಾಲಯದವರು ಉಪನ್ಯಾಸಗಳಲ್ಲಿ ಮೇರಿಯ

ಪಳೆಯುಳಿಕೆಗಳ ಬಗ್ಗೆ ವಿದ್ಯಾರ್ಥಿಗಳಿಗೆ ಕಲಿಸಲಾರಂಭಿಸಿದ್ದರು. ಮೇರಿ ಪತ್ತೆಹಚ್ಚಿದ್ದ ಆ ಬೃಹತ್ ಜೀವಿ ನೂರಾರು ಮಿಲಿಯನ್ ವರ್ಷಗಳ ಹಿಂದೆ ಅಸ್ತಿತ್ವದಲ್ಲಿದ್ದ ದೊಡ್ಡ ಹಾರುವ ಹಲ್ಲಿಯೆಂದು ನಂಬಲಾಗಿತ್ತು. ಆ ಹೊಸ ಜೀವಿಗೆ, ಮುಂದೆ ಡೈಮಾರ್ಫೋಡಾನ್ ಎಂದು ಹೆಸರಿಟ್ಟರು.

**ಚರ್ಚ್ ಮತ್ತು ಸಮಾಜ:**

ಮೇರಿಯ ಪಳೆಯುಳಿಕೆಗಳು ವಿಜ್ಞಾನಿಗಳ ಚಿಂತನೆಯನ್ನು ವಿಕಾಸವಾದದ ಕಡೆಗೆ ಒಯ್ಯಲಾರಂಭಿಸಿದಾಗ, ಚರ್ಚಿನ ಮಂದಿ ಕುಪಿತರಾದರು. ಆಗಷ್ಟೇ ಪ್ರಾರಂಭವಾಗಿದ್ದ ವೈಜ್ಞಾನಿಕ ಬೆಳವಣಿಗೆಗಳು ಜನಗಳ ಮನಸ್ಸಿನಲ್ಲಿ ಪ್ರಶ್ನೆಗಳನ್ನು ಹುಟ್ಟುಹಾಕಲು ಪ್ರಾರಂಭಿಸಿದ್ದವು. ಜುರಾಸಿಕ್ ಯುಗದ ಸಮಾಧಿಯಿಂದ ಉತ್ಖನನವಾಗುತ್ತಿದ್ದ ದೈತ್ಯಾಕಾರದ ಪೆಡಂಭೂತಗಳ ಅವಶೇಷಗಳು, ಬೈಬಲ್ಲಿನಲ್ಲಿ ನಿರೂಪಿತವಾಗಿದ್ದ ಭೂಮಿಯ ಇತಿಹಾಸದ ವರ್ಣನೆಯನ್ನು ಬುಡಸಮೇತವಾಗಿ ಅಲ್ಲಾಡಿಸಲು ಪ್ರಯತ್ನಿಸುತ್ತಿದ್ದವು. ಸೃಷ್ಟಿಯ ಬಗ್ಗೆ ಬೈಬಲ್ಲಿನ ನಿರೂಪಣೆಯಲ್ಲಿ ಅಪರಿಮಿತವಾದ ನಂಬಿಕೆಯಿದ್ದ ಜನಗಳು, ಜೀವ ಜಾತಿಗಳ ಅಸ್ತಿತ್ವ ಶಾಶ್ವತವೆಂದು ತಿಳಿದಿದ್ದರು. ಅಲ್ಲಿ ಬದಲಾವಣೆ, ವಿಕಸನ ಮತ್ತು ಅಳಿಯುವಿಕೆಯ ಕಲ್ಪನೆಗಳಿಗೆ ಸ್ಥಾನವೇ ಇರಲಿಲ್ಲ.

ಲಂಡನ್ನಿನ ಬ್ರಿಟಿಷ್ ಮ್ಯೂಸಿಯಮ್ ಒಳಗೆ ನಡೆಯುತ್ತಿದ್ದ ಸಾರ್ವಜನಿಕ ಪ್ರದರ್ಶನಗಳನ್ನು ಬಹುತೇಕವಾಗಿ ರಾಯಲ್ ಜಿಯಲಾಜಿಕಲ್ ಸೊಸೈಟಿ ತನ್ನ ಮೇಲ್ವಿಚಾರಣೆಯಲ್ಲಿ ನಡೆಸುತ್ತಿತ್ತು. ಮೇರಿಯೆಂದೂ ಮ್ಯೂಸಿಯಮ್ಮಿನ ದಿಕ್ಕಿನಲ್ಲಿ ತಲೆಹಾಕಿರಲಿಲ್ಲ. ಆದರೆ ಪತ್ರಗಳ ಮೂಲಕ ಸಂಪರ್ಕ ನಡೆಸುತ್ತಾ ಅಲ್ಲಿ ತನ್ನ ಪರಿಚಯವನ್ನು ಹೆಚ್ಚಿಕೊಳ್ಳಲು ಪ್ರಯತ್ನಿಸುತ್ತಿದ್ದಳು. 1829ರಲ್ಲಿ, ಅವಳು ಹೊರತೆಗೆದಿದ್ದ ನೀಳ ಕತ್ತಿನ ಪ್ಲೆಸಿಯೋಸಾರಸ್ ಸರೀಸೃಪದ ಪಳೆಯುಳಿಕೆಯ ಸುದ್ದಿ ಮುಟ್ಟಿದೊಡನೆಯೇ, ಅದರ ಹಕ್ಕು ಸ್ವಾಮ್ಯಕ್ಕಾಗಿ ಪ್ರಪಂಚದ ಎಲ್ಲಾ ಮ್ಯೂಸಿಯಮ್ಮುಗಳ ನಡುವೆ ಸಮರವೇ ಶುರುವಾಯಿತು. ಆದರೆ, ವಿಲಿಯಮ್ ಬಕ್ಲ್ಯಾಂಡಿನ ಪ್ರಯತ್ನದ ಫಲವಾಗಿ, ಶೀಘ್ರವೇ ಅದನ್ನು ಬ್ರಿಟಿಷ್ ಮ್ಯೂಸಿಯಮ್ 105 ಪೌಂಡುಗಳಿಗೆ ಕೊಂಡು ಅದನ್ನು ತನ್ನ ಪ್ರದರ್ಶನಗಳ ಪಟ್ಟಿಗೆ ಸೇರಿಸಿಕೊಂಡಿತ್ತು. ಈ ಘಟನೆಯ ನಂತರ, ಮೇರಿಯ ಪರಿಣತಿಗೆ ಎಲ್ಲೆಡೆಯಿಂದಲೂ ಪ್ರಶಂಸೆಗಳು ಬರಲಾರಂಭಿಸಿತ್ತು. ಎಡಿನ್ಬರೋ ಫಿಲಾಸಾಫಿಕಲ್ ಜರ್ನಲ್, ರಾಯಲ್ ಸೊಸೈಟಿಯ ಸಾಹಿತ್ಯ, ವಿಜ್ಞಾನ ಮತ್ತು ಕಲೆಯ ಜರ್ನಲ್ಲಿನಲ್ಲಿ, ಅಂತಿಮವಾಗಿ ಮೇರಿಯ ಪರಿಶ್ರಮ ಮತ್ತು ನೈಪುಣ್ಯತೆಗಳ ಬಗ್ಗೆ ಉಲ್ಲೇಖಿಸಿ, ಅದುವರೆಗೂ ಅವಳು ಪತ್ತೆಹಚ್ಚಿದ್ದ ಎಲ್ಲಾ ಪಳೆಯುಳಿಕೆಗಳ ಬಗ್ಗೆ ಬರೆದಿದ್ದರು. ಅಂದಿನ ಮತ್ತೊಬ್ಬ ಪ್ರಖ್ಯಾತ ಭೂವಿಜ್ಞಾನಿ ಚಾರ್ಲ್ಸ್ ಲಯಲ್ ಕೂಡಾ, ಮೇರಿಯ ಪ್ರತಿಭೆಗೆ ತಲೆದೂಗಿ, ಲೈಮ್ ರೆಜಿಸ್ ಕರಾವಳಿಯ ಅನೇಕ ವಾಸ್ತವಾಂಶಗಳನ್ನು ನಿರ್ಧರಿಸಲು, ಅವಳ ಸಹಕಾರ ಕೋರಿ ಬೇಡಿಕೊಂಡಿದ್ದನೆಂದು ತಿಳಿದುಬರುತ್ತದೆ.

ಸಣ್ಣ ವಯಸ್ಸಿನಿಂದಲೂ, ಮೇರಿಗೆ ಹೊರ ಪ್ರಪಂಚವನ್ನು ನೋಡುವ ಆಸೆಯಿತ್ತು. ಕಡುಬಡತನದ ದೆಸೆಯಿಂದ ಅವಳಿಗೆ ಲೈಮ್ ರೆಜಿಸ್ ಊರಿನಿಂದ ಎಲ್ಲೂ ಹೊರಗೆ ಕಾಲಿಡುವ ಅವಕಾಶವೇ ಸಿಕ್ಕಿರಲಿಲ್ಲ. 1839ರ ಬೇಸಿಗೆಯಲ್ಲಿ ಮೊಟ್ಟಮೊದಲ ಬಾರಿಗೆ ಮೇರಿ ತನ್ನ ಸ್ನೇಹಿತರ ಆಹ್ವಾನವನ್ನು ಸ್ವೀಕರಿಸಿ, ದೋಣಿಯಲ್ಲಿ ಲಂಡನ್ನಿಗೆ ಪ್ರಯಾಣ ಕೈಗೊಂಡಳು. ಸುಮಾರು 1.7 ಮಿಲಿಯನ್ ಜನಸಂಖ್ಯೆಯಿದ್ದ ಲಂಡನ್ ಅಂದು ಪ್ರಪಂಚದ ಅತ್ಯಂತ ದೊಡ್ಡ ನಗರವೆನಿಸಿದ್ದು, ಆರ್ಥಿಕ ಮತ್ತು ಕೈಗಾರಿಕೆಗಳ ಕೇಂದ್ರವೆನಿಸಿತ್ತು. ಆ ನಗರದ ವಿಭಿನ್ನತೆಗೆ ಮೇರಿ ಮನಸೋತರೂ, ಅಲ್ಲಿನ ಕಲುಷಿತ ಗಾಳಿ, ಶೋಚನೀಯ ನೈರ್ಮಲ್ಯಕ್ಕೆ ಬೆಚ್ಚಿದ್ದಳು. ಕಡೆಗೊಮ್ಮೆ, ಜಿಯಲಾಜಿಕಲ್ ಸೊಸೈಟಿ, ಬ್ರಿಟಿಷ್ ಮ್ಯೂಸಿಯಮ್ಮಿಗೆ ಭೇಟಿಯಿತ್ತು ತನ್ನ ಕನಸನ್ನು ಸಾಕಾರಗೊಳಿಸಿಕೊಂಡ ಮೇರಿ, ಅವುಗಳ ಭವ್ಯತೆಗೆ ಮಾರುಹೋಗಿದ್ದಳು. ಪ್ರವಾಸದಿಂದ ವಾಪಸಾದ ಮೇರಿಯ ಮನ ತೃಪ್ತಿಗೊಂಡಿತ್ತು. ಆದರೆ, ಅನೇಕ ವರ್ಷಗಳ ಮೈಮುರಿತದ ದುಡಿತದಿಂದ ದೈಹಿಕವಾಗಿ ಬಳಲಿದ್ದ ಮೇರಿಗೆ 30ರ ವಯಸ್ಸಿನಲ್ಲೇ ತಾನು ವೃದ್ಧೆಯಾಗುತ್ತಿರುವ ಅನುಭವವಾಗತೊಡಗಿತ್ತು.

**ಜುರಾಸಿಕ್ ಜಲಚರ:**

ಪಳೆಯುಳಿಕೆಯ ಬೆನ್ನಟ್ಟುವುದು ಅಪಾಯಕಾರಿಯಾದರೂ, ಆರ್ಥಿಕ ಸ್ವಾತಂತ್ರ್ಯದ ಸಲುವಾಗಿ ಮೇರಿ ಮತ್ತೆ ಅದೇ ಕಾರ್ಯಕ್ಕಿಳಿದಳು. 1829ರ ಡಿಸೆಂಬರ್ ತಿಂಗಳ ಪ್ರಾರಂಭದಲ್ಲಿ ಮೇರಿ 18 ಇಂಚುಗಳಷ್ಟು ಉದ್ದವಾದ ದೇಹದ, ಮೂತಿಯಿದ್ದು ವಿಚಿತ್ರವಾಗಿದ್ದ ಮೀನಿನಂತಹ ಜೀವಿಯ ಪಳೆಯುಳಿಕೆಯನ್ನು ಪತ್ತೆಹಚ್ಚಿದಳು. ಮೇರಿಯ ನಿಖರವಾದ ಪುನರ್ನಿರ್ಮಾಣದ ಫಲವಾಗಿ ಆ ಜೀವಿಯ ಪಳೆಯುಳಿಕೆ ಅಚ್ಚುಕಟ್ಟಾಗಿತ್ತು. ತನ್ನ ಅಸಾಮಾನ್ಯವಾದ ಆ ನಮೂನೆಯನ್ನು ಬ್ರಿಸ್ಟಲ್ಲಿನ ಸಂಸ್ಥೆಯಲ್ಲಿದ್ದ ವ್ಯಕ್ತಿಯೊಬ್ಬನಿಗೆ ಸುಮಾರು 40 ಪೌಂಡುಗಳಿಗೆ ಮಾರಿದ್ದಳು. ಈ ಮೀನಿನಂತಹ ಜೀವಿ, ಸುಮಾರು 150 ಮಿಲಿಯನ್ ವರ್ಷಗಳ ಹಿಂದೆ, ಜುರಾಸಿಕ್ ಅವಧಿಯ ಅಂತ್ಯದಲ್ಲಿ ಈಜಾಡುತ್ತಿದ್ದು, ಇಂದಿನ ಶಾರ್ಕ್ ಮತ್ತು ರೇ ಮೀನುಗಳ ಪೂರ್ವಜ ಎನ್ನುವುದನ್ನು ಭೂವಿಜ್ಞಾನಿಗಳು ತೀರ್ಮಾನಿಸಿದರು. ಇದು ಮೇರಿಯ ಜೀವನದ ನಾಲ್ಕನೆಯ ಮಹತ್ವದ ಅನ್ವೇಷಣೆಯಾಗಿತ್ತು.

ಮೇರಿಯ ಪಳೆಯುಳಿಕೆಯ ವ್ಯಾಪಾರವೇನೋ ಚೆನ್ನಾಗಿ ನಡೆಯುತಿದ್ದರೂ, ಅವಳ ಲಾಭದ 20%–30%ರಷ್ಟನ್ನು ಮಧ್ಯವರ್ತಿಗಳು ಲಪಟಾಯಿಸುತ್ತಿದ್ದರು. ಇದರಿಂದ ಬೇಸತ್ತ ಮೇರಿ, ಪಳೆಯುಳಿಕೆಯ ಅನ್ವೇಷಣೆಯನ್ನು ಬಿಟ್ಟುಬಿಡುವ ಯೋಚನೆ ಮಾಡಿದಳು. ಆದರೆ ಹೊಟ್ಟೆಪಾಡಿಗೆ ಬೇರೆ ಮಾರ್ಗವಿರಲಿಲ್ಲ. ಸಣ್ಣಸಣ್ಣ ಅಮ್ಮೊನೈಟುಗಳು ಮತ್ತು ನವುರು–ನಕ್ಷತ್ರಗಳನ್ನು ಮಾರಲು ನಿರ್ಧರಿಸಿದಾಗ, ಅವಳ ವ್ಯಾಪಾರ ಸ್ವಲ್ಪಮಟ್ಟಿಗೆ ಕುದುರಿತು. ಇದರಿಂದ ಹಣಕಾಸಿನ ಸ್ಥಿತಿಯೇನೂ ಉತ್ತಮವಾಗಲಿಲ್ಲ. ಆ ಸಮಯದಲ್ಲಿ ಅವಳ ನೆರವಿಗೆ ಬಂದ ಅವಳ ಬಾಲ್ಯ ಸ್ನೇಹಿತ ಹೆನ್ರಿ ಬೆಕಿ, ಅವಳ ಎಲ್ಲಾ ಪ್ರಮುಖ ಪಳೆಯುಳಿಕೆಯ ಅನ್ವೇಷಣೆಗಳನ್ನು ಬಿಂಬಿಸುವಂತಹ ವರ್ಣಚಿತ್ರವೊಂದನ್ನು ರಚಿಸಿ, ಅದಕ್ಕೆ 'ಪ್ರಾಚೀನ

ಡಾರ್ಸೆಟ್' ಎಂಬ ಹೆಸರಿಟ್ಟು, ಅದರ ಕಲ್ಲಚ್ಚುಗಳನ್ನು ಮಾರಿ, ಅದರಿಂದ ಬರುವ ವರಮಾನದ ಮೂಲಕ ಮೇರಿಯ ಆರ್ಥಿಕ ಪರಿಸ್ಥಿತಿ ಸುಧಾರಿಸಲು ಪ್ರಯತ್ನಿಸಿದ.

**ಜಿಯಲಾಜಿಕಲ್ ಸೊಸೈಟಿ ಮತ್ತು ಲಿಂಗಭೇದ ನೀತಿ:**

ಅಂದಿನ ಪ್ರತಿಷ್ಠಿತ ಸಂಸ್ಥೆ ಎನಿಸಿದ್ದ ಲಂಡನ್ನಿನ ಜಿಯಲಾಜಿಕಲ್ ಸೊಸೈಟಿಯಲ್ಲಿ ಕೇವಲ ಶ್ರೀಮಂತ, ವಿದ್ಯಾವಂತ, ಅಂತಸ್ತುಳ್ಳ ಪ್ರಭಾವಿ ಪುರುಷರಿಗೆ ಮಾನ್ಯತೆಯಿತ್ತೇ ಹೊರತು, ಅಲ್ಲಿ ಮಹಿಳೆಯರಿಗೆ ಬಿಲ್ಕುಲ್ ಪ್ರವೇಶವಿರಲಿಲ್ಲ. 1919ರವರೆಗೂ, ಮಹಿಳೆಯರಿಗೆ, ಬ್ರಿಟನ್ನಿನ ಪ್ರತಿಷ್ಠಿತ ವೈಜ್ಞಾನಿಕ ಸಂಸ್ಥೆಗಳಲ್ಲಿ ಪ್ರವೇಶ ನೀಡದೆ, ಅವರಲ್ಲಿ ಹೊರಾಂಗಣದ ಕೆಲಸಗಳು, ತರಗತಿಯಲ್ಲಿ ನಡೆಯುವ ಗಂಭೀರವಾದ ಚರ್ಚೆಗಳಲ್ಲಿ ಭಾಗವಹಿಸುವ ಬೌದ್ಧಿಕ ನಿಖರತೆಯಿಲ್ಲ ಎಂದು ಪುರುಷರು ವಾದಿಸುತ್ತಿದ್ದರು. ಮೇರಿಯ ಜೀವನ ಪರ್ಯಂತದ ಹೊರಾಂಗಣ ಪರಿಶ್ರಮ ಮತ್ತು ಅನ್ವೇಷಣೆಗಳ ಸಾಕ್ಷ್ಯಾಧಾರದ ಹೊರತಾಗಿಯೂ, ಸಮಾಜದಲ್ಲಿ ಇಂತಹ ಪ್ರಮಾದಗಳು ಇನ್ನೂ ನಡೆಯುತ್ತಲೇ ಇದ್ದವು. 1832ರಲ್ಲಿ, ಜಿಯಲಾಜಿಕಲ್ ಸೊಸೈಟಿಯ ಸಭೆಯಲ್ಲಿ ಮಹಿಳೆಯರಿಗೆ ಸಾರ್ವಜನಿಕ ಸಭೆಗಳಲ್ಲಿ ಭಾಗವಹಿಸಲು ಅನುಮತಿ ನೀಡಬೇಕೆ ಅಥವಾ ಇಲ್ಲವೇ ಎನ್ನುವುದರ ಬಗ್ಗೆ ನಡೆದ ನಿರ್ಭೀತ ಚರ್ಚೆಯಲ್ಲಿ, ಭೂವಿಜ್ಞಾನಿಗಳು ತಮ್ಮ ಗಂಭೀರವಾದ ಹಿಂಜರಿಕೆಯನ್ನು ವ್ಯಕ್ತಪಡಿಸಿದ್ದರು. ಇವರ ಪ್ರಕಟಣೆಗಳು ಮೇರಿಯ ಪಳೆಯುಳಿಕೆಗಳ ಅನ್ವೇಷಣೆಯ ಮೇಲೆ ಅವಲಂಬಿತವಾಗಿದ್ದರೂ, ಮಹಿಳೆಯರ ಸಾಮರ್ಥ್ಯದ ಬಗ್ಗೆ ಅವರಿಗಿದ್ದ ದೃಷ್ಟಿಕೋನ ಮತ್ತು ನಿಲುವುಗಳು ನಾಚಿಕೆಗೇಡಾಗುವಂತಿತ್ತು. ಮೇರಿಯ ಮತ್ತೊಬ್ಬ ಸ್ನೇಹಿತ ಮರ್ಚಿನ್ಸನ್, ಇವರ ವರ್ತನೆಗೆ ಬೇಸತ್ತು, ಮಹಿಳೆಯರನ್ನು ಸಭೆಗೆ ಬರಲು ಅನುಮತಿಸದಿದ್ದರೆ, ತಾನು ಇನ್ನು ಮುಂದೆ ಜಿಯಲಾಜಿಕಲ್ ಸೊಸೈಟಿಯ ಯಾವುದೇ ಸಭೆಗಳಿಗೆ ಬರುವುದಿಲ್ಲ ಎಂದು ಕಡ್ಡಿಮುರಿದಂತೆ ತಿಳಿಸಿದಾಗ, ಅರೆಮನಸ್ಸಿನಿಂದಲೇ ಮಹಿಳೆಯರಿಗೆ ಸಾರ್ವಜನಿಕ ಉಪನ್ಯಾಸಗಳಿಗೆ ಪ್ರವೇಶ ನೀಡಿದ್ದರು. ಈ ಸುದ್ದಿ ಹರಡಿದ ನಂತರ ಸಾರ್ವಜನಿಕ ಉಪನ್ಯಾಸಗಳಿಗೆ ನೂರಾರು ಮಹಿಳೆಯರು ಬರಲಾರಂಭಿಸಿದರು. ಇದು ಲಂಡನ್ ಚರ್ಚಿನ ಪಾದ್ರಿಯೊಬ್ಬನಿಗೆ ಸಹ್ಯವಾಗಲಿಲ್ಲ. ಅವನು ಮಹಿಳೆಯರನ್ನು ಸಾರ್ವಜನಿಕ ಉಪನ್ಯಾಸಗಳಿಗೆ ಬರಕೂಡದೆಂದು ಮತ್ತೊಮ್ಮೆ ಯಶಸ್ವಿಯಾಗಿ ನಿರ್ಬಂಧಿಸಿದನು. ಬ್ರಿಟನ್ನಿನಲ್ಲಿ ಆಗತಾನೇ ಸುಧಾರಣಾ ಕಾಯಿದೆಯು ಸಮಾಜದಲ್ಲಿ ಮಧ್ಯಮವರ್ಗದ ಜನಗಳಿಗೆ ಹಲವು ಹಕ್ಕುಗಳನ್ನು ನೀಡುವ ಪ್ರಯತ್ನ ನಡೆಸುತ್ತಿದ್ದರೂ, ಮಹಿಳೆಯರು ಭೂವಿಜ್ಞಾನಿಗಳಾಗಿ ತಮ್ಮ ಸರಿಸಮನಾಗಿ ಕಾರ್ಯ ನಿರ್ವಹಿಸುವ ಕಲ್ಪನೆ ಇನ್ನೂ ಪುರುಷರಿಗೆ ಹಿತಕರವಾಗಿರಲಿಲ್ಲ. ಮೇರಿಯ ನಿಕಟಮಿತ್ರನಾಗಿದ್ದ ವಿಲಿಯಮ್ ಬಕ್ಲ್ಯಾಂಡ್ ಕೂಡಾ, 1831ರಲ್ಲಿ ಬ್ರಿಟಿಷ್ ವಿಜ್ಞಾನ ಪ್ರಗತಿ ಸಂಘದ ಅಧ್ಯಕ್ಷನಾಗಿದ್ದಾಗ, ಆಕ್ಸ್‌ಫರ್ಡಿನಲ್ಲಿ ಅಂತಹ ಸಭೆಗಳಿಗೆ ಮಹಿಳೆಯರನ್ನು ಸೇರಿಸಿಕೊಳ್ಳುವ ಸಲಹೆಯನ್ನು ಸಾರಾಸಗಟಾಗಿ ತಿರಸ್ಕರಿಸಿದ್ದನು. ವೈಜ್ಞಾನಿಕ

ಪ್ರಬಂಧಗಳನ್ನು ಚರ್ಚಿಸುವ ಸಮಾವೇಶಗಳಲ್ಲಿ, ಅಲ್ಪ ತಿಳಿವಳಿಕೆಯ, ಕಡಿಮೆ ಬುದ್ಧಿಮತ್ತೆಯ ಮಹಿಳೆಯರು ಸೇರಿಕೊಂಡರೆ, ಅದೊಂದು ತೋರಿಕೆಯ ಮತ್ತು ಗಂಭೀರವಲ್ಲದ ವಿನೋದಾವಳಿಯಾಗುತ್ತದೆ ಎಂದು ಹೇಳಿ, ತನ್ನ ಪುರುಷತ್ವವನ್ನು ಮೆರೆದಿದ್ದ!

ಮೇರಿಯ ಮಾರ್ಗದರ್ಶನ ಮತ್ತು ಸಹಕಾರಗಳನ್ನು ಪಡೆದ ಅನೇಕ ಮ್ಯೂಸಿಯಮ್‌ಗಳು ಮತ್ತು ಸಂಗ್ರಾಹಕರು, ತಮ್ಮ ಲೇಖನದ ಪ್ರಕಟಣೆಗಳಲ್ಲಿ ಇನ್ನೂ ಅವಳ ಹೆಸರನ್ನು ಸೇರಿಸುವುದಾಗಲೀ, ಅವಳ ಕಾರ್ಯಕ್ಕೆ ತಕ್ಕ ಪರಿಹಾರಧನವನ್ನು ನೀಡುವುದಾಗಲೀ ಮಾಡುತ್ತಿರಲಿಲ್ಲ. ಮೇರಿಗೆ ಈ ಸಂಸ್ಥೆಯ ಜೊತೆಗೆ ಸಂಪರ್ಕ ಬೆಳೆಸುವ ಎಲ್ಲಾ ಅರ್ಹತೆಗಳಿದ್ದರೂ ಸಹಾ, ಮಹಿಳೆಯಾದ್ದರಿಂದ ಅವಳನ್ನು ಅಲ್ಲಿ ಅಂಗೀಕರಿಸುವ ಸಾಧ್ಯತೆಗಳಿರಲಿಲ್ಲ. ಅವಳಿಂದ ಎಲ್ಲಾ ಸಹಾಯವನ್ನು ಪಡೆದು, ಅವಳ ಪಳೆಯುಳಿಕೆಗಳನ್ನು ಸಂಕೋಚವಿಲ್ಲದೇ ಸ್ವೀಕರಿಸುತ್ತಿದ್ದ ಯಾವ ವಿಜ್ಞಾನಿಯೂ ಮೇರಿ ಅನ್ವೇಷಿಸಿದ್ದ ಪಳೆಯುಳಿಕೆಯ ಬಗ್ಗೆ ಅವರು ನೀಡುತ್ತಿದ್ದ ಸಾರ್ವಜನಿಕ ಉಪನ್ಯಾಸಗಳಲ್ಲಾಗಲೀ, ಅಥವಾ ಪ್ರಕಟಿಸುತ್ತಿದ್ದ ಲೇಖನಗಳಲ್ಲಾಗಲೀ ಅವಳಿಗೆ ಸಲ್ಲಬೇಕಾದ ಮಾನ್ಯತೆಯನ್ನು ನೀಡುತ್ತಿರಲಿಲ್ಲ. ಲೈಮ್ ರೆಜಿಸ್ ಭೇಟಿಗೆ ಬಂದವರನ್ನು ತಪ್ಪದೇ ಪಳೆಯುಳಿಕೆಯ ಪ್ರವಾಸಕ್ಕೆ ಕರೆದೊಯ್ಯುತ್ತಿದ್ದ ಮೇರಿಯ ಹೆಸರು ಎಲ್ಲಿಯೂ ಪ್ರಕಟವಾಗುತ್ತಿರಲಿಲ್ಲ. ಬ್ರಿಟಿಷ್ ಮ್ಯೂಸಿಯಮ್ ಅವಳಿಂದ ಪಡೆದುಕೊಂಡ ಕೆಲವು ಪಳೆಯುಳಿಕೆಗಳಿಗೆ ಯಾವ ಹಣವನ್ನೂ ಕೊಟ್ಟಿರಲಿಲ್ಲ. ಮೇರಿ ಮ್ಯೂಸಿಯಮ್ಮಿನ ಕ್ಯುರೇಟರ್ಗೆ ಪತ್ರ ಬರೆದು ಹಣ ನೀಡುವಂತೆ ವಿನಂತಿಸಿಕೊಂಡರೂ, ಅವರಿಂದ ಯಾವ ಪ್ರತಿಕ್ರಿಯೆಯೂ ಬರುತ್ತಿರಲಿಲ್ಲ.

ಅವಳ ವ್ಯಾಪಕ ಅನುಭವದ ಕಾರಣ, ಜನಗಳಿಂದ ಅವಳ ಸೇವೆಗೆ ಹೆಚ್ಚಿನ ಬೇಡಿಕೆಯಿತ್ತು. ಆ ಸಮಯದಲ್ಲಿ ಬ್ರಿಟನ್ನಿನ ಅತ್ಯಂತ ಪ್ರಖ್ಯಾತ ಪಳೆಯುಳಿಕೆಯ ತಜ್ಞನೆನಿಸಿದ್ದ ರಿಚರ್ಡ್ ಒವೆನ್, ಮೇರಿಯನ್ನು ಭೇಟಿಯಾಗಲು ಲೈಮ್ ರೆಜಿಸಿಗೆ ಬಂದಿದ್ದ. ಹಿಂದೆ 1838ರಲ್ಲಿ, ಅವಳು ಪತ್ತೆಹಚ್ಚಿದ್ದ ಪ್ಲೆಸಿಯೋಸಾರಸ್ ಬಗ್ಗೆ ಜಿಯಲಾಜಿಕಲ್ ಸೊಸೈಟಿಯಲ್ಲಿ ಒವೆನ್ ಉಪನ್ಯಾಸ ನೀಡಿದ್ದಾಗ, ಅವನು ಮೇರಿಗೆ ಯಾವ ಮಾನ್ಯತೆಯನ್ನೂ ನೀಡಿರಲಿಲ್ಲ. ಅವನ ವರ್ತನೆಯ ಬಗ್ಗೆ ಕೋಪಗೊಂಡಿದ್ದ ಮೇರಿಗೆ, ಅಂತಹ ವ್ಯಕ್ತಿ ಈಗ ಖುದ್ದಾಗಿ ತನ್ನನ್ನು ಭೇಟಿ ಮಾಡಲೆಂದೇ ಅವಳ ಊರಿಗೆ ಬಂದಿದ್ದು ಸ್ವಲ್ಪ ಸಮಾಧಾನ ನೀಡಿತ್ತು. ಅವನ ಜೊತೆಯಲ್ಲಿ ಬಂದಿದ್ದ ಬಕ್ಲ್ಯಾಂಡ್ ಮತ್ತು ಕೋನಿಬೇರ್ ಜೊತೆಗೆ ಅವನನ್ನು ಕರಾವಳಿಯ ಪ್ರವಾಸಕ್ಕೆ ಕರೆದೊಯ್ದಳು. ಅಲ್ಲಿಯ ಕಠಿಣವಾದ ಬಂಡೆಗಳನ್ನೇರಲು ಶ್ರಮಪಡುತ್ತಿದ್ದ, ಆ ಸಂಭಾವಿತ ಪುರುಷರು, ಸಲೀಸಾಗಿ ಮೇಲೆ, ಕೆಳಕ್ಕೆ ಹತ್ತಿ ಇಳಿದು ನಡೆದಾಡುತ್ತಿದ್ದ ಮೇರಿಯ ಸಾಮರ್ಥ್ಯಕ್ಕೆ ಬೆರಗಾಗಿದ್ದರು. ತನ್ನ ಜೀವನದ ಯಾವ ಅನ್ವೇಷಣೆಗಳಿಗೂ ಸಲ್ಲಬೇಕಾದ ಮಾನ್ಯತೆಯನ್ನು ನೀಡದಿದ್ದ ಆ ಮಹನೀಯ ಪುರುಷರ ಅವಸ್ಥೆಯನ್ನು ನೋಡುತ್ತಿದ್ದ ಮೇರಿಗೆ ಅದೊಂದು ಆನಂದದಾಯಕ ಅನುಭವವಾಗಿತ್ತು.

**ಅಪರೂಪದ ಔದಾರ್ಯ ಮತ್ತು ಮಾನ್ಯತೆ:**

1834ರಲ್ಲಿ ಲೈಮ್ ರೆಜಿಸಿಗೆ ಭೇಟಿ ನೀಡಿದ್ದ ತರುಣ ಸ್ವಿಸ್ ಪರಿಸರ ವಿಜ್ಞಾನಿ ಬರ್ನೀಸ್ ಅಗಾಸಿಝ್, ಮೇರಿ ಸಂಗ್ರಹಿಸಿದ್ದ 34 ವಂಶಗಳ ಮೀನಿನ ಪಳೆಯುಳಿಕೆಗಳನ್ನು ನೋಡಿ ಬೆರಗಾಗಿದ್ದನು. ಅವಳ ತೀಕ್ಷ್ಣಬುದ್ಧಿ ಮತ್ತು ಚತುರತೆಯನ್ನು ತನ್ನ ಪುಸ್ತಕದಲ್ಲಿ ಕೊಂಡಾಡಿದ್ದಲ್ಲದೇ, ಅವಳ ಸಹಕಾರಕ್ಕೆ ಕೃತಜ್ಞತೆ ಸಲ್ಲಿಸಿ, ಒಂದು ಮೀನಿಗೆ – belenostomus anningiae ಎಂದು ಮೇರಿಯ ಹೆಸರನ್ನಿಟ್ಟು ಅಧಿಕೃತವಾಗಿ ಅವಳಿಗೆ ಮಾನ್ಯತೆ ನೀಡಿದ್ದನು. ಮೇರಿಯ ಬ್ರಿಟಿಷ್ ಸಹೋದ್ಯೋಗಿಗಳಾರೂ ಅವಳಿಗೆ ಅಂತಹ ಗೌರವ ಸಲ್ಲಿಸಿರಲಿಲ್ಲ. ಜೀವನಪರ್ಯಂತದ ದುಡಿಮೆಯಿಂದ ಉಳಿಸಿದ್ದ ಸುಮಾರು 300 ಪೌಂಡುಗಳ ಹಣವನ್ನು ಮೇರಿ ಲಂಡನ್ನಿನಲ್ಲಿ ಒಬ್ಬ ವ್ಯಾಪಾರಿಯ ಹತ್ತಿರ ಬಂಡವಾಳ ಹೂಡಿದ್ದಳು. ಉತ್ತಮ ದರದ ಬಡ್ಡಿ ಕೊಡುವ ಭರವಸೆ ನೀಡಿದ್ದ ಅವನು 1835ರಲ್ಲಿ, ಹಠಾತ್ತನೇ ಸತ್ತಾಗ, ಮೇರಿಯ ಹಣ ಮುಳುಗಿಹೋಯಿತು. ಇದರಿಂದ ಕಂಗಾಲಾದ ಮೇರಿ ಮತ್ತೊಮ್ಮೆ ಆರ್ಥಿಕ ತೊಂದರೆಯಿಂದ ನರಳುವಂತಾಯ್ತು. ಇವಳ ಪರಿಸ್ಥಿತಿಯನ್ನು ಕಂಡು ಮರುಗಿದ ವಿಲಿಯಮ್ ಬಕ್ಲ್ಯಾಂಡ್, ಬ್ರಿಟಿಷ್ ವೈಜ್ಞಾನಿಕ ಪ್ರಗತಿಯ ಸಂಸ್ಥೆಗೆ ಬರೆದು, ವರ್ಷಕ್ಕೆ ಸುಮಾರು 25 ಪೌಂಡುಗಳಷ್ಟು ಮೊತ್ತದ ಪಿಂಚಣಿ ಕೊಡುವಂತೆ ವ್ಯವಸ್ಥೆಮಾಡಿದನು. ಇದರಿಂದ ಮೇರಿ ಮತ್ತು ಅವಳ ತಾಯಿ ಹಾಗೂ ಹೀಗೂ ಹೊಟ್ಟೆಯ ಪಾಡಿಗೆ ಚಿಂತಿಸುವುದು ತಪ್ಪಿತ್ತು. ಅವಳ 30 ವರ್ಷಗಳ ಪರಿಶ್ರಮಕ್ಕೆ, ಕಡೆಗೊಮ್ಮೆ ಅವಳಿಗೆ ಧನಸೌಲಭ್ಯ ಸಿಕ್ಕಿತ್ತು. ಮುಂದೆ ಅವಳಿಗೆ ಯಾವ ಮಹತ್ವದ ಅನ್ವೇಷಣೆ ಮಾಡಲಾಗದಿದ್ದರೂ, ಅಷ್ಟು ಹೊತ್ತಿಗೆ ಸಂಪಾದಿಸಿದ್ದ ಅಲ್ಪಸ್ವಲ್ಪ ಗೌರವದಿಂದ ಅವಳು ಸಂತೃಪ್ತಳಾಗಿದ್ದಳು. ಮೇರಿಗೆ 40 ವರ್ಷಗಳಾದಾಗ, ವಿಜ್ಞಾನದಲ್ಲಿ ಮಹತ್ತರ ಬೆಳವಣಿಗೆಗಳಾಗುತ್ತಿತ್ತು. ಚಾರ್ಲ್ಸ್ ಡಾರ್ವಿನ್, 1838–39ರ ನಡುವೆ, ಮೇರಿ ಅನ್ವೇಷಿಸಿದ್ದ ಇಕ್ಥಿಯೋಸಾರಸ್ ಮತ್ತು ಪ್ಲೇಸಿಯೋಸಾರಸ್ ಜೀವಿಗಳ ಪಳೆಯುಳಿಕೆಗಳ ಬಗ್ಗೆ ತನ್ನ ಪುಸ್ತಕದಲ್ಲಿ ವ್ಯಾಪಕವಾಗಿ ಬರೆದಿದ್ದ. ಈ ಜೀವಿಗಳು, ಅವನ ವಿಕಾಸದ ಸಿದ್ಧಾಂತ ರಚನೆಯಲ್ಲಿ ಪ್ರಮುಖ ಪಾತ್ರವನ್ನು ವಹಿಸಿತ್ತು. ಇತರರಿಂದ ಇದರ ಬಗ್ಗೆ ಕೇಳಿಕೊಂಡಿದ್ದ ಮೇರಿ, ತಾನು ವಿಜ್ಞಾನಕ್ಕೆ ಇನ್ನೂ ಹೆಚ್ಚಿನ ಕೊಡುಗೆ ನೀಡಬಹುದಿತ್ತು ಎಂದು ಬಯಸಿದ್ದಳು.

**ವ್ಯಕ್ತಿಗತ ಜೀವನ:**

ಅನೇಕ ವರ್ಷಗಳ ಕಠಿಣ ಪರಿಶ್ರಮದಿಂದ ಮೇರಿ ದೈಹಿಕವಾಗಿ ಬಳಲಿದ್ದಳು. ಇಷ್ಟು ಹೊತ್ತಿಗೆ 40 ವರ್ಷ ವಯಸ್ಸಾಗಿದ್ದ ಮೇರಿಗೆ, ಮದುವೆಯಾಗುವ ಯಾವ ಸಾಧ್ಯತೆಗಳೂ ಕಾಣುತ್ತಿರಲಿಲ್ಲ. ಬಡಕುಟುಂಬದ ಅವಿವಾಹಿತ ಮಹಿಳೆಯರಿಗೆ ಇಂಗ್ಲೇಂಡಿನ ಪುರುಷಪ್ರಧಾನ ಸಮಾಜದಲ್ಲಿ ಹೆಚ್ಚಿನ ಆಯ್ಕೆಗಳಿಲ್ಲ ಎನ್ನುವುದನ್ನು ಅವಳು ಚೆನ್ನಾಗಿ ಅರಿತಿದ್ದಳು. ಜಾರ್ಜಿಯನ್ ಅವಧಿಯ ಮಹಿಳೆಯರಿಗೆ, ರಾಜಕೀಯ, ವಿಶ್ವವಿದ್ಯಾಲಯ, ವೃತ್ತಿಪರ ಉದ್ಯೋಗ ರಂಗಗಳಲ್ಲಿ ಪ್ರವೇಶವಿರಲಿಲ್ಲ. ಮಹಿಳೆಯ ಸ್ಥಾನ ಮನೆ ಮತ್ತು

ಮದುವೆಗೆ ಮಾತ್ರ ಸೀಮಿತವಾಗಿತ್ತು. ಅವಿವಾಹಿತ ತರುಣಿಯರನ್ನು ದುರದೃಷ್ಟಕರರೆಂದು ಪರಿಗಣಿಸುತ್ತಿದ್ದರು. ಹುಡುಗಿಯರ ಮದುವೆಯ ವಯಸ್ಸನ್ನು 12 ವರುಷಗಳಿಗೆ ನಿಗದಿಪಡಿಸಿದ್ದರು. ಮದುವೆಗೆ ಮುನ್ನ ಅವರು ತಂದೆಯ ಅಧೀನತೆಯಲ್ಲಿದ್ದು, ನಂತರ ಅವರ ಜವಾಬ್ದಾರಿ ಗಂಡನಿಗೆ ವರ್ಗಾವಣೆಯಾಗುತ್ತಿತ್ತು. ಅದೇ ಸಮಯದಲ್ಲಿ ಬದುಕಿ ಬಾಳಿದ್ದ ಇಂಗ್ಲೀಷ್ ಬರಹಗಾರ್ತಿ ಜೇನ್ ಆಸ್ಟಿನ್‌ನಂತಹ ಪ್ರಖ್ಯಾತ ಮಹಿಳೆ ಕೂಡಾ, ಅವಿವಾಹಿತಳಾಗಿದ್ದರಿಂದ ಆರ್ಥಿಕ ಸ್ವಾತಂತ್ರ್ಯವಿಲ್ಲದೆ ಕಡೆಯತನಕ, ತಂದೆ ಮತ್ತು ಸಹೋದರರ ಅಧೀನತೆಯಲ್ಲಿದ್ದು ನರಳಬೇಕಾಯಿತು. ಅಸಾಧಾರಣವಾದ ಅನ್ವೇಷಣೆಯಿಂದ ಮಾತ್ರ ಅಂತಹ ಸಮಾಜದಲ್ಲಿ ಮೇರಿಗೆ ಶಾಶ್ವತವಾದ ಸ್ಥಾನವನ್ನು ಗಳಿಸುವ ಸಾಧ್ಯತೆಯಿತ್ತು. ತನ್ನ ಅನ್ವೇಷಣೆಯ ಕಾರ್ಯದಲ್ಲಿ ಯಶಸ್ಸು ಗಳಿಸುತ್ತಿದ್ದರೂ, ವೈಯಕ್ತಿಕವಾಗಿ ಗಂಡ, ಮಕ್ಕಳು ಮತ್ತು ತನ್ನದೇ ಸಂಸಾರವಿಲ್ಲದ ಮೇರಿ ಹಲವೊಮ್ಮೆ ಭಾವುಕಳಾಗುತ್ತಿದ್ದಳು. ವಯಸ್ಸಾದಂತೆ, ಈ ಧೈರ್ಯಶಾಲಿ ಅನ್ವೇಷಕಿ, ಧಾರ್ಮಿಕ ಚಿಂತನೆಯತ್ತ ತನ್ನ ಮನಸ್ಸನ್ನು ಹರಿಸಲಾರಂಭಿಸಿದ್ದಳು. 1840ರಲ್ಲಿ ಮೇರಿಯ ತಾಯಿ ಮಾಲಿ ತೀರಿಕೊಡಳು. 43ರ ವಯಸ್ಸಿನ ಮೇರಿ ಈಗ ಒಂಟಿಯಾಗಿದ್ದರೂ, ಅವಳಿಗೆ ಸಂಪೂರ್ಣ ಸ್ವಾತಂತ್ರ್ಯ ಸಿಕ್ಕಿತ್ತು. ಅವಳಿಗೆ ಇನ್ನಾರ ಅವಶ್ಯಕತೆಗಳ ಬಗ್ಗೆಯೂ ತಲೆಕೆಡಿಸಿಕೊಳ್ಳುವ ಅಗತ್ಯವಿರಲಿಲ್ಲ. ತನ್ನ ಬಿಡುವಿನ ವೇಳೆಯನ್ನು ಧರ್ಮ, ಭೌತಶಾಸ್ತ್ರ, ಖಗೋಳಶಾಸ್ತ್ರ, ಪ್ರಣಯ ಕಥೆಗಳ ಪುಸ್ತಕಗಳನ್ನು ಓದಿ ಕಳೆಯುತ್ತಿದ್ದಳು. ತನ್ನ ಜೀವನದ ಕಡೆಯ ದಶಕದಲ್ಲಿ ಮೇರಿ ಯೂರೋಪಿನ ಅತ್ಯಂತ ಪ್ರಸಿದ್ಧ ಭೂವಿಜ್ಞಾನಿಗಳ ಜೊತೆಯಲ್ಲಿ ಸಮಾಲೋಚನೆ ನಡೆಸಿ, ಪಳೆಯುಳಿಕೆಗಳ ಬಗ್ಗೆ ಅವರ ನಡುವಿದ್ದ ಭಿನ್ನಾಭಿಪ್ರಾಯಗಳನ್ನು ಪರಿಹರಿಸುವಷ್ಟು ಪರಿಣತಿ ಹೊಂದಿದ್ದಳು. ಭೂಮಿಯ ಬೆಳವಣಿಗೆಯ ಬಗ್ಗೆ ತನ್ನದೇ ಆದ ಅಭಿಪ್ರಾಯಗಳನ್ನು ಹೊಂದಿದ್ದ ಮೇರಿ, ಜೀವಜಾತಿಗಳು ವಿಕಸನಗೊಳ್ಳುತ್ತಿವೆ ಎನ್ನುವ ಕಲ್ಪನೆಯ ಬಗ್ಗೆ ನೈಜ ತಿಳಿವಳಿಕೆಯನ್ನು ತೋರ್ಪಡಿಸುತ್ತಿದ್ದಳು.

**ಕೊನೆಗಾಲ:**

12ನೆಯ ವಯಸ್ಸಿನಲ್ಲಿ ಪ್ರಾರಂಭವಾದ ಅವಳ ಅನ್ವೇಷಣೆಗಳು, ಪ್ರಾಚೀನ ಜೀವಿಗಳ ವರದಿಗಳಿಗೆ ಒಂದು ಭದ್ರವಾದ ತಳಪಾಯವನ್ನು ಹಾಕಿದ್ದವು. ಅವಳ ತಂದೆ ರಿಚರ್ಡ್ ಬದುಕಿದ್ದರೆ, ಅವಳ ಸಾಧನೆಗಳ ಬಗ್ಗೆ, ತಾಯಿ ಮತ್ತು ತಮ್ಮನ ಪೋಷಣೆಯ ಜವಾಬ್ದಾರಿಯನ್ನು ಅವಳು ನಿಭಾಯಿಸಿದ ರೀತಿಗೆ ನಿಜಕ್ಕೂ ಹೆಮ್ಮೆಪಡುತ್ತಿದ್ದನು. ಆದರೆ, ಮೇರಿಗೆ ಇದನ್ನೆಲ್ಲಾ ಆನಂದಿಸುತ್ತಾ ಕಾಲಕಳೆಯುವ ಸೌಭಾಗ್ಯವಿರಲಿಲ್ಲ. ಅವಳ ಸ್ತನದಲ್ಲಿ ಬೆಳೆದಿದ್ದ ಗೆಡ್ಡೆಯ ಕಾರಣದಿಂದ ತೀವ್ರವಾದ ನೋವು ಅವಳನ್ನು ಕಾಡಲಾರಂಭಿಸಿತ್ತು. ಅಂದಿನ ದಿನಗಳಲ್ಲಿ, ಸ್ತನದ ಕಾನ್ಸರ್ ರೋಗ-ನಿರ್ಣಯವು ರೋಗಿಗಳ ಪಾಲಿಗೆ ಮರಣದಂಡನೆಯಷ್ಟೇ ಕಠಿಣವಾಗಿತ್ತು. ರೋಗದ ಮುನ್ಸೂಚನೆ ಅಹಿತವಾಗಿದ್ದರೆ, ವೈದ್ಯರು ರೋಗಿಗಳಿಗೆ ತಿಳಿಸುತ್ತಿರಲಿಲ್ಲ. 19ನೆಯ ಶತಮಾನದಲ್ಲಿ, ಸ್ತನದ ಕ್ಯಾನ್ಸರಿಗೆ ಹೆಚ್ಚಿನ ಯಾವ

ಚಿಕಿತ್ಸೆಗಳಿರಲಿಲ್ಲ. 1846ರಲ್ಲಿ ಮೇರಿಯ ಕಾಯಿಲೆ ಉಲ್ಬಣವಾಗಿ ಅವಳು ಅಶಕ್ತಳಾಗುತ್ತಿದ್ದಳು. ಆದರೂ ಸಮುದ್ರ ದಂಡೆಯ ಸೆಳೆತ ಅವಳಲ್ಲಿ ಬಲವಾಗಿತ್ತು. ಕಡೆಯಲ್ಲಿ ಹಾಸಿಗೆ ಹಿಡಿದ ಮೇರಿ ತನ್ನ ನೋವಿನ ಶಮನಕ್ಕೆ ಅಂದಿನ ಕಾಲದಲ್ಲಿ ಎಲ್ಲರೂ ಸಾಮಾನ್ಯವಾಗಿ ಬಳಸುತ್ತಿದ್ದ ನೋವು-ನಿವಾರಕ ಗುಳಿಗೆಯಾಗಿದ್ದ ಲೌಡನಮ್ ಎನ್ನುವಂತಹ ಔಷಧಿಯ ಮೊರೆಹೊಕ್ಕಳು. ಆಲ್ಕೋಹಾಲ್ ಮತ್ತು ಓಪಿಯಮ್ ಮಿಶ್ರಣದ ಗುಳಿಗೆ, ಜಿನ್ ಪಾನೀಯಕ್ಕಿಂತ ಅಗ್ಗವಾಗಿದ್ದು, ಕಾರ್ಮಿಕರು ತಮ್ಮ ನೋವಿನ ಶಮನಕ್ಕೆ ಇದನ್ನು ಹೇರಳವಾಗಿ ಬಳಸುತ್ತಿದ್ದರು. ಕಡೆಕಡೆಗೆ, ಮೇರಿ ತನ್ನ ನೋವನ್ನು ಮರೆಯಲು ಆಲ್ಕೋಹಾಲಿಗೆ ಮೊರೆಹೊಕ್ಕಳು.

1846ರಲ್ಲಿ, ಡಾರ್ಸೆಟ್ ಜಿಲ್ಲೆಯ ಮ್ಯೂಸಿಯಮ್, ಅವಳನ್ನು ತನ್ನ ಮೊಟ್ಟಮೊದಲ ಗೌರವ ಸದಸ್ಯಳಾಗಿ ಆರಿಸಿ, ಅವಳಿಗೆ ಸ್ಥಳೀಯವಾಗಿ ಮಾನ್ಯತೆ ನೀಡಿತು. ವಿಲಿಯಮ್ ಬಕ್ಲ್ಯಾಂಡ್ ಅವಳ ಗಂಭೀರ ಕಾಯಿಲೆಯ ಸುದ್ದಿ ತಿಳಿದ ಮೇಲೆ, ಜಿಯಲಾಜಿಕಲ್ ಸೊಸೈಟಿಯ ಸದಸ್ಯರನ್ನು ಪುಸಲಾಯಿಸಿ, ಅವಳಿಗೆ ಹಣದ ಏರ್ಪಾಡು ಮಾಡಿದ್ದನು. ಆದರೆ, ಆಗ ಮೇರಿಗೆ ಹಣಕ್ಕಿಂತ ಉತ್ತಮವಾದ ಚಿಕಿತ್ಸೆಯ ಅಗತ್ಯವಿತ್ತು. ಸುಮಾರು ಎರಡು ವರ್ಷಗಳ ಕಾಲ ನೋವನ್ನನುಭವಿಸಿ, ತಕ್ಕದಾದ ಚಿಕಿತ್ಸೆಯಿಲ್ಲದ ಕಾರಣ, 1847ರ ಮಾರ್ಚ್ ತಿಂಗಳ 9ನೆಯ ತಾರೀಖಿನಂದು, 48ರ ಪ್ರಾಯದ ಮೇರಿ ಕ್ಯಾನ್ಸರ್ ರೋಗಕ್ಕೆ ಬಲಿಯಾದಳು. ಬಹುಶಃ ಅವಳ ಕಡೆಯ ಘಳಿಗೆಯಲ್ಲಿ ಅವಳು ಒಂಟಿಯಾಗಿದ್ದಳು ಎಂದು ಕಂಡುಬರುತ್ತದೆ. ಅವಳಿಗಿದ್ದ ಹಲವೇ ಕುಟುಂಬದ ಸದಸ್ಯರು ಮತ್ತು ನಿಕಟ ಮಿತ್ರರು ಅವಳ ಅಂತಿಮ ಸಂಸ್ಕಾರಗಳನ್ನು ನಡೆಸಿ, ಅವಳ ಶವವನ್ನು ಲೈಮ್ ರೆಜಿಸ್ ಊರಿನ ಸಮುದ್ರದ ದಂಡೆಯ ಕೋಡುಗಲ್ಲಿನ ತುದಿಯಲ್ಲಿ ಸಮಾಧಿ ಮಾಡಿದ್ದರು. ಊರಿನ ಚರ್ಚಿನ ಸದಸ್ಯರು ಮತ್ತು ಜಿಯಲಾಜಿಕಲ್ ಸೊಸೈಟಿಯವರು ಕಡೆಗೊಮ್ಮೆ ಭೂವಿಜ್ಞಾನದ ಬೆಳವಣಿಗೆಗೆ ಅವಳು ನೀಡಿದ ಕೊಡುಗೆ, ಅವಳ ದಯಾಳು ಹೃದಯ ಮತ್ತು ಸಮಗ್ರತೆಯ ಜೀವನವನ್ನು ಶ್ಲಾಘಿಸುತ್ತಾ, ಅವಳ ಹೆಸರಿನಲ್ಲಿ ಬಣ್ಣದ-ಗಾಜಿನ ಕಿಟಕಿಯೊಂದನ್ನು ಸ್ಥಳೀಯ ಚರ್ಚಿನಲ್ಲಿ ಸ್ಥಾಪಿಸಿದ್ದರು.

**ಶ್ರದ್ಧಾಂಜಲಿ:**

ಅವಳ ಮರಣದ ನಂತರ ಅವಳನ್ನು ಕೊಂಡಾಡುತ್ತಾ ಬರೆದ ಶ್ರದ್ಧಾಂಜಲಿಯೊಂದು ಜಿಯಲಾಜಿಕಲ್ ಸೊಸೈಟಿಯ ತ್ರೈಮಾಸಿಕ ಪತ್ರಿಕೆಯಲ್ಲಿ ಪ್ರಕಟವಾಗಿತ್ತು. ಮೇರಿ ಸತ್ತ 5 ದಶಕಗಳ ನಂತರ ಟೆರ್ರಿ ಸಲ್ಲಿವನ್ ಎನ್ನುವವನು ಬರೆದ ಜನಪ್ರಿಯ ನಾಲಿಗೆ-ಸುಂಟ್ರವು ಮೇರಿಯ ಜೀವನದಿಂದ ಪ್ರೇರಿತವಾಗಿತ್ತು. ಲಂಡನ್ನಿನ ಪ್ರಖ್ಯಾತ ಸಾಹಿತಿ ಚಾರ್ಲ್ಸ್ ಡಿಕನ್ಸ್ ಕೂಡಾ ಮೇರಿಯ ಜೀವನದ ಬಗ್ಗೆ ಬರೆದು, ಅವಳು ಪಟ್ಟ ಬವಣೆ, ಅವಳ ಹತಾಶೆಗಳನ್ನು ವರ್ಣಿಸಿದ್ದನು. ಅವಳ ಜೀವನದ ಅವಲೋಕನದಲ್ಲಿ- 'ಬಡಗಿಯ ಮಗಳೊಬ್ಬಳು ಗಳಿಸಿದ ಪ್ರಖ್ಯಾತಿ ಮತ್ತು ಗೌರವಗಳು ಅರ್ಹವಾದವು, ಆದರೆ, ಅವಳ ಊರಿನ ಜನರ ಅಸಡ್ಡೆ, ಅಂದಿನ ಸಮಾಜದ ಮೌಲ್ಯದ ಕೊರತೆ ನಿಜಕ್ಕೂ ವಿಚಿತ್ರವಾದ

ಸಂಗತಿ' ಎಂದು ಬರೆದಿದ್ದನು. ಲೈಮ್ ರೆಜಿಸ್ ಊರಿನ ಇತಿಹಾಸಕಾರನೊಬ್ಬ ಮೇರಿಯ ಅನನ್ಯತೆಯನ್ನು ಪ್ರಶಂಸಿಸುತ್ತಾ, 'ವಿಚಿತ್ರ ಜೀವಿಗಳ ಪ್ರಗತಿಪರ ರಚನೆಯ ಅನ್ವೇಷಣೆಗೆ, ಗ್ರೀಕ್ ದೇಶದ ಟ್ರಾಯ್ ಪಟ್ಟಣವನ್ನು ಮುತ್ತಿಗೆ ಹಾಕಿ ಗೆಲ್ಲುವಷ್ಟೇ ಸಮಯ ಬೇಕಾಯಿತು, ಮೇರಿ ಭೂವಿಜ್ಞಾನಿಗಳ ಪಾಲಿಗೆ ಟ್ರಾಯ್ ನಗರದ ಹೆಲೆನ್ ಆಗಿ ಸಾಬೀತಾದಳು', ಎಂದು ಬರೆದಿದ್ದನು.

ಮೇರಿ ಸತ್ತ ಒಂದು ವರ್ಷದ ಬಳಿಕ, ಅವಳ ನಿಕಟ ಮಿತ್ರನಾಗಿದ್ದ ಹೆನ್ರಿ ಡಿ ಲೆ ಬೆಕಿ, ಲಂಡನ್ನಿನಲ್ಲಿ ಜಿಯಲಾಜಿಕಲ್ ಸೊಸೈಟಿಯ ಸಭೆಯಲ್ಲಿ ನೀಡಿದ್ದ ತನ್ನ ಅಧ್ಯಕ್ಷ ಭಾಷಣದಲ್ಲಿ ಮೇರಿಯ ಸಾಧನೆಗಳ ಬಗ್ಗೆ ಅದ್ಭುತವಾದ ಪ್ರಶಂಸೆಯ ನುಡಿಗಳನ್ನಾಡಿದ್ದ. ಅಂದಿನ ಕಾಲಕ್ಕೆ, ಅಂತಹ ವೇದಿಕೆಯಲ್ಲಿ, ಬಹುಶಃ ಅದು ಮಹಿಳೆಯೊಬ್ಬಳಿಗೆ ಸಲ್ಲಿಸಿದ್ದ ಮೊಟ್ಟಮೊದಲ ಗೌರವವಾಗಿತ್ತು. ಅವಳ ಪ್ರತಿಭೆ, ಉತ್ತಮ ನಡವಳಿಕೆಗಳನ್ನು ಕುರಿತು ಮೆಚ್ಚುಗೆಯ ನುಡಿಗಳನ್ನಾಡಿದ್ದರೂ, ಅವಳ ಮಹತ್ತರ ಅನ್ವೇಷಣೆಗಳಿಗೆ ಅವಳು ಬದುಕಿದ್ದಾಗ ಸಿಕ್ಕ ಪ್ರತಿಫಲ ತೀರಾ ಕಡಿಮೆ. ಮೇರಿಯ ಬಡತನ, ಪರಿಸ್ಥಿತಿ ಮತ್ತು ದುರ್ದೆಸೆಯ ಬಗ್ಗೆ ಆಡಿದ ಕನಿಕರದ ನುಡಿಗಳಿಂದ ಕೂಡಿದ್ದ ದಯಾಳು ಮಿತ್ರರ ಗುಣಗಾನ ಅಂದಿನ ಕಾಲಕ್ಕೆ ಗಮನಾರ್ಹವೆನಿಸಿದರೂ, ಅದು ಮೇರಿ ನಡೆಸಿದ್ದ ಅಸಾಧಾರಣ ಅನ್ವೇಷಣೆಗಳಿಗೆ ತಕ್ಕದ್ದಾಗಿರಲಿಲ್ಲ. ಇದಾದ 50 ವರ್ಷಗಳ ನಂತರದವರೆಗೂ, ಮಹಿಳೆಯರನ್ನು ಜಿಯಲಾಜಿಕಲ್ ಸೊಸೈಟಿಯ ಸದಸ್ಯರನ್ನಾಗಿ ಸ್ವೀಕರಿಸುತ್ತಿರಲಿಲ್ಲ. ಅವಳು ಪತ್ತೆಹಚ್ಚಿದ ಪಳೆಯುಳಿಕೆಗಳ ಸಹಾಯ ಪಡೆದು ತಮ್ಮ ವೈಜ್ಞಾನಿಕ ಪ್ರಬಂಧಗಳನ್ನು ಮಂಡಿಸಿದ್ದ ಪುರುಷ ವಿಜ್ಞಾನಿಗಳಿಗೆ ವಿಕ್ಟೋರಿಯಾ ಸಾಮ್ರಾಜ್ಞಿ, ನೈಟ್–ಹುಡ್ ಗೌರವ ನೀಡಿದ್ದು ವಿಡಂಬನೆಯಲ್ಲವೇ!

ಇಂದು ಲಂಡನ್ನಿನ ಪ್ರತಿಷ್ಠಿತ ನ್ಯಾಚುರಲ್ ಹಿಸ್ಟರಿ ಮ್ಯೂಸಿಯಮ್ಮಿನಲ್ಲಿ, ಮೇರಿ ಪತ್ತೆಹಚ್ಚಿದ ಇಕ್ಥಿಯೋಸಾರ್ಸ್ ಜೀವಿಯ ತಲೆಬುರುಡೆ ಅಲ್ಲಿಗೆ ಬರುವ ಸಾವಿರಾರು ಸಂದರ್ಶಕರನ್ನು ದಿಟ್ಟಿಸಿ ನೋಡುತ್ತಿದೆ. ಮ್ಯೂಸಿಯಮ್ಮಿನ ಮತ್ತೊಂದು ಮೊಗಸಾಲೆಯಲ್ಲಿ ಅನಾಮಧೇಯ ಚಿತ್ರಕಾರನೊಬ್ಬ ರಚಿಸಿರುವ ಮೇರಿಯ ತೈಲಚಿತ್ರವನ್ನು ನೋಡಬಹುದು. ಮೇರಿ ಅನ್ವೇಷಿಸಿದ ಹಲವಾರು ಜೀವಿಗಳ ಮಾದರಿಗಳನ್ನು ಅಲ್ಲಿನ ಗೋಡೆಗಳ ಮೇಲೆ ಪ್ರದರ್ಶಿಸಿದ್ದಾರೆ. ಆದರೆ ಇದು ಮೇರಿಯ ಕಾರ್ಯತತ್ಪರತೆಗೆ ಅವಳ ದೇಶ ನೀಡಿರುವ ಒಂದು ಸಣ್ಣ ಪ್ರಶಂಸೆಯೆನ್ನಬಹುದು. ಮೇರಿ ಸುತ್ತಾಡುತ್ತಿದ್ದ ಲೈಮ್ ರೆಜಿಸ್ ಊರಿನ ಕರಾವಳಿಯನ್ನು ಇಂದು UNESCO ವಿಶ್ವ ಪರಂಪರೆಯ ನೆಲೆ ಎಂದು ಗುರುತಿಸಲಾಗಿದೆ. ಈ ಕರಾವಳಿಯ ಕೋಡುಗಲ್ಲುಗಳಲ್ಲಿ ಮೇರಿಯ ಆತ್ಮ ಜೀವಂತವಾಗಿದ್ದು, ಟ್ರೈಲೊಬೈಟ್ಸ್, ಅಮ್ಮೊನೈಟ್ಸ್, ಬೆಲೆಮ್ನೈಟ್ಸ್ ಪಳೆಯುಳಿಕೆಯನ್ನು ಪತ್ತೆಮಾಡಲು ಅಲೆದಾಡುವ ಅನೇಕ ತರುಣಿಯರನ್ನು ನೋಡಿ ಆನಂದಿಸುತ್ತಿರಬೇಕು. ಮೇರಿಯ ಕಠಿಣ ಪರಿಶ್ರಮದಿಂದ ಪತ್ತೆಯಾದ ಹಲವಾರು ಪಳೆಯುಳಿಕೆಗಳ ಮಾದರಿಗಳು ಎರಡನೆಯ ಮಹಾಯುದ್ಧದ ಕಾಲದಲ್ಲಿ ನಾಶಗೊಂಡವು. ಕೇವಲ ಬೆರಳೆಣಿಸುವಷ್ಟು ವಿಜ್ಞಾನಿಗಳು ಮತ್ತು ಇತಿಹಾಸಕಾರರು

ಮೇರಿಯ ಅನ್ವೇಷಣೆಗಳಿಗೆ ಮಾನ್ಯತೆ ನೀಡಿ ಅವಳ ಕೊಡುಗೆಯನ್ನು ಸ್ಮರಿಸುತ್ತಾರೆ. ಜಾಗತಿಕವಾಗಿ ಅವಳ ವೈಜ್ಞಾನಿಕ ಕೊಡುಗೆಗೆ ಸಿಕ್ಕಿರುವ ಮನ್ನಣೆ ಬಹಳ ಅಲ್ಪವಾದದ್ದು. ಅವಳ ಸ್ವಂತ ದೇಶದಲ್ಲೂ ಕೂಡಾ ಅವಳ ಹೆಸರು ಮತ್ತು ಅವಳ ಕಾರ್ಯಗಳ ಬಗ್ಗೆ ತಿಳಿದಿರುವವರ ಸಂಖ್ಯೆ ಬಹಳ ಕಡಿಮೆ. ಇಂದು ಪ್ರಪಂಚದಲ್ಲಿ ಡೈನೋಸಾರುಗಳ ಬಗ್ಗೆ ಅನೇಕ ವೈಜ್ಞಾನಿಕ ಸಿದ್ಧಾಂತಗಳು, ಪ್ರಬಂಧಗಳು, ಪುಸ್ತಕಗಳು, ಚಲನಚಿತ್ರಗಳು, ಮಕ್ಕಳ ಆಟಿಗೆಗಳು ಸಾವಿರಾರು ಸಂಖ್ಯೆಯಲ್ಲಿ ಹುಟ್ಟಿಕೊಂಡಿವೆ. ಇಂದಿನ ಮಕ್ಕಳಲ್ಲಂತೂ ಡೈನೋಸಾರುಗಳ ವ್ಯಾಮೋಹ ಮತ್ತು ಗೀಳನ್ನೇ ನೋಡಬಹುದು. ಇಷ್ಟೆಲ್ಲಾ 'ಡೈನೋಮೇನಿಯಾ'ದ ನಡುವೆಯೂ, ಒಂದು ಮಾತು ಮಾತ್ರಾ ನಿಜ. ಮೇರಿ ಅನ್ವೇಷಿಸಿದ ಪಳೆಯುಳಿಕೆಗಳ ಕಾರಣದಿಂದಲೇ, ಭೂವಿಜ್ಞಾನಿಗಳಿಗೆ ಜಾಗತಿಕ ಭೂವೈಜ್ಞಾನಿಕ ದಾಖಲೆಗಳ ಗೂಢಾರ್ಥವನ್ನು ಗ್ರಹಿಸಲು ಸಾಧ್ಯವಾಯಿತು. ಚಾರ್ಲ್ಸ್ ಡಾರ್ವಿನ್ ಅಂತಹ ಪ್ರಕೃತಿ-ವಿಜ್ಞಾನಿಯ ವಿಕಾಸವಾದ ಸಿದ್ಧಾಂತದ ಮಂಡನೆಗೆ ಸಹಾಯಕಾರಿಯಾಗಿದ್ದು ಮೇರಿಯ ಪಳೆಯುಳಿಕೆಯ ಮಾದರಿಗಳೇ ಹೊರತು, ಡೈನೋಸಾರುಗಳಲ್ಲ! ಚಾರ್ಲ್ಸ್ ಡಾರ್ವಿನ್ನನ 'ದಿ ಆರಿಜಿನ್ ಆಫ್ ಸ್ಪೀಸೀಸ್' ಪುಸ್ತಕದಲ್ಲಿ ಡೈನೋಸಾರ್ ಎನ್ನುವ ಪದವು ಎಲ್ಲೂ ಉಲ್ಲೇಖಿತವಾಗಿಲ್ಲ.

ಹೀಗೆ ಅನೇಕ ಪೀಳಿಗೆಗಳಲ್ಲಿ ಭರವಸೆ ಮತ್ತು ಆತ್ಮವಿಶ್ವಾಸಗಳನ್ನು ತುಂಬುವಂತಹ ಕಾರ್ಯಗಳಿಗೆ ತನ್ನ ಜೀವನವನ್ನೇ ಮುಡಿಪಾಗಿಟ್ಟ ಮೇರಿ ಆನಿಂಗ್ ಅಂತಹ ಮಹಿಳೆಗೆ, ಕೇವಲ ಹೆಣ್ಣು ಎನ್ನುವ ಕಾರಣಕ್ಕೆ ಅವಳ ಸಮಯದಲ್ಲಂತೂ ಮಾನ್ಯತೆ ಗೌರವಗಳು ಸಿಗಲಿಲ್ಲ. ಮೇರಿಯ ಸಮಯದಲ್ಲಿ ಸ್ತ್ರೀಯರ ಬಗ್ಗೆ, ಅವರ ಅಸ್ತಿತ್ವ ಮತ್ತು ಹಕ್ಕುಗಳ ಬಗ್ಗೆ ಸಂವೇದಿಸುತ್ತಿದ್ದ ಪುರುಷರು ಕೇವಲ ಬೆರಳೆಣಿಸುವಷ್ಟಿದ್ದರು. ಉದಾಹರಣೆಗೆ, ಅಂದಿನ ಪುರುಷ-ಪ್ರಧಾನ ಸಮಾಜಕ್ಕೆ ಹೊರತೆನಿಸಿದ್ದ ಮೇರಿಯ ತಂದೆ, ಅವಳನ್ನು ಮನೆಯ ನಾಲ್ಕು ಗೋಡೆಗಳ ಮಧ್ಯದಿಂದ ಸಣ್ಣ ವಯಸ್ಸಿನಲ್ಲೇ ಹೊರಕ್ಕೆಳೆದು, ಅವಳಲ್ಲಿ ಪಳೆಯುಳಿಕೆಗಳ ಬಗ್ಗೆ ಆಸಕ್ತಿಯನ್ನು ಹುಟ್ಟುಹಾಕದಿದ್ದಲ್ಲಿ, ಮೇರಿ ಕೂಡಾ ಅಂದಿನ ಸಮಾಜದ ಇತರ ಮಹಿಳೆಯರಂತೆ, ಕಾಲದ ಪುಟಗಳಲ್ಲಿ ಕಳೆದುಹೋಗುತ್ತಿದ್ದಳು. ಅವಳ ತಂದೆ ಸತ್ತ ನಂತರವೂ, ಸಂಸಾರದ ಉಳಿಯುವಿಕೆಗೆ, ಅವರ ಹೊಟ್ಟೆಹೊರೆಯುವ ದೃಷ್ಟಿಯಿಂದ ತನ್ನ ಉತ್ಸಾಹವನ್ನು ಸ್ಥಿರವಾಗಿಟ್ಟು, ಪಳೆಯುಳಿಕೆಯ ಅನ್ವೇಷಣೆ ಮುಂದುವರೆಸಿದ್ದು ಅವಳ ಧೈರ್ಯ, ಸಾಹಸೀ ಮನೋವೃತ್ತಿ, ಆತ್ಮವಿಶ್ವಾಸಕ್ಕೆ ನಿದರ್ಶನವಾಗಿದೆ. ಮದುವೆಯಿಲ್ಲದ ಮಹಿಳೆ ಮೇರಿ ಆನಿಂಗ್, ಸಮಾಜದ ಉದಾಸೀನತೆಗೆ ಒಳಗಾಗಿದ್ದರೂ, ವೈಜ್ಞಾನಿಕ ಪ್ರಪಂಚಕ್ಕೆ ಅವಳಿತ್ತ ಆದ್ಯಪ್ರವರ್ತಕ ಕೊಡುಗೆ ನಿಜಕ್ಕೂ ಪ್ರಶಂಸನೀಯ. ಅವಳ ನಿಕಟಮಿತ್ರರೆನ್ನಿಸಿ ಅವಳಿಗೆ ಸಹಕಾರ ನೀಡಿದ ಮಂದಿ ಬೆರಳೆಣಿಸುವಷ್ಟು. ವಿಲಿಯಮ್ ಬಕ್ಲ್ಯಾಂಡ್, ಚಾರ್ಲ್ಸ್ ಮ್ಯಾಂಟಲ್‌ನಂತಹ ಪ್ರಖ್ಯಾತ ಭೂವಿಜ್ಞಾನಿಗಳು, ಅವಳ ಕಡುಬಡತನಕ್ಕೆ ಕರುಣೆಯಿಂದ ಆರ್ಥಿಕ ಸಹಾಯವನ್ನು ನೀಡಿದ್ದರೇ ಹೊರತು, ಅವಳ ಅನ್ವೇಷಣೆಗಳಿಗೆ ತಕ್ಕ ಮಾನ್ಯತೆಯನ್ನು ಅವಳು ಜೀವಂತವಾಗಿದ್ದಾಗ ನೀಡಿರಲಿಲ್ಲ. ಪ್ರಭಾವಿ ವ್ಯಕ್ತಿಗಳಾಗಿದ್ದರೂ,

ಅಂದಿನ ಸಮಾಜವನ್ನು ಎದುರುಹಾಕಿಕೊಂಡು, ಮೇರಿಯ ಸ್ಥಾನಮಾನಗಳಿಗೆ ಗೌರವ ಸಲ್ಲಿಸುವ ಸಂವೇದನೆ ಅವರಲ್ಲಿರಲಿಲ್ಲ. ಅವಳ ಪಳೆಯುಳಿಕೆಗಳು, ಡಾರ್ವಿನ್ ಬರೆದ ವಿಕಾಸವಾದದ ಸಿದ್ಧಾಂತಕ್ಕೆ ನೆರವಾಗಿದ್ದು ವೈಜ್ಞಾನಿಕವಾಗಿ ಅಸಾಧಾರಣವಾದ ಸಂಗತಿ. ಇದನ್ನೇ ಪುರುಷನೊಬ್ಬ ಮಾಡಿದ್ದರೆ, ಅವನ ಹೆಸರು ಚರಿತ್ರೆಯ ಪುಟಗಳಲ್ಲಿ ಬಹುಶಃ ಸುವರ್ಣಾಕ್ಷರಗಳಲ್ಲಿ ಇರುತ್ತಿತ್ತೇನೋ! ಇಂದಿಗೂ ಚಾರ್ಲ್ಸ್ ಡಾರ್ವಿನ್ನನ ಹೆಸರು ಮನೆಮಾತಾಗಿದೆಯೇ ಹೊರತು, ಅವನ ಸಿದ್ಧಾಂತ ಮಂಡನೆಗೆ ನೆರವಾದ ಪಳೆಯುಳಿಕೆಗಳನ್ನು, ಜೀವದ ಮೇಲೆ ಒತ್ತೆಯಿಟ್ಟು ಅನ್ವೇಷಿಸಿದ ಮೇರಿ ಆನಿಂಗಳ ಹೆಸರನ್ನು ಬಲ್ಲ ಜನಗಳ ಸಂಖ್ಯೆ ಬಹಳ ಕಡಿಮೆ. ನಮ್ಮ ಪುರುಷ–ಪ್ರಧಾನ ಸಮಾಜದ ಇತಿಹಾಸದ ಪುಟಗಳಲ್ಲಿ ಕಳೆದುಹೋದ ಮಹಿಳೆಯರು, ಅವರ ಕೊಡುಗೆಗಳು ಇನ್ನೂ ಎಷ್ಟಿವೆಯೋ ಕಾಣೆವು?

**References:**


1. The Fossil Hunter, Shelly Emling, St. Martin's Griffin, New York, 2009.
2. Wikipedia pages - https://en.wikipedia.org/wiki/Mary_Anning.




# ಪಗಡೆ ಆಟದಲ್ಲಿ ಸೋತು ಬಳುಕಿದ ಭಾನುಮತಿಯ ಸಂವೇದನೆಗಳು

ಟಿ. ಎನ್. ಕೃಷ್ಣರಾಜು
Gaithersburg, Maryland

*

**ನೆತ್ತಮನಾಡಿ ಭಾನುಮತಿ ಸೋಲ್ತೊಡೆ, ಸೋಲುಮನೀವುದೆಂದು ಕಾ–**
**ಡುತ್ತಿರೆ, ಲಂಬಣಂ ಪಱಿಯೆ, ಮುತ್ತಿನ ಕೇಡನೆ ನೋಡಿ ನೋಡಿ ಬ–।**
**ಳ್ಕುತ್ತಿರೆ ಯೇವಮಿಲ್ಲದಿವನಾಯ್ದುದೊ ತಪ್ಪದೆ ಪೇಱಿಮೆಂಬ ಭೂ–**
**ಪೋತ್ತಮನಂ ಬಿಸುಟ್ಟರದೆ ನಿಮ್ಮೊಳೆ ಪೊಕ್ಕೊಡೆ ಬೇಡನಲ್ಲನೇ?॥** (1)

–ಪಂಪಭಾರತ, ನವಮಾಶ್ವಾಸಂ, ಪದ್ಯ 69

ಮಹಾಕವಿ ಪಂಪ (ಕ್ರಿ.ಶ. 902–950) ಕನ್ನಡ ರತ್ನತ್ರಯರಲ್ಲಿ ಮೊದಲಿಗ. ಮೇಲಿನ ಪದ್ಯ, ಇವನು ರಚಿಸಿದ ಅದ್ಭುತ ಕಾವ್ಯ, 'ಪಂಪ ಭಾರತ' ದ ಒಂಬತ್ತನೆಯ ಭಾಗದಲ್ಲಿ ಬರುವ 69ನೆಯ ಕವನ. ಆಶ್ಚರ್ಯವೆಂದರೆ ಹತ್ತು ಶತಮಾನಗಳ ಹಿಂದೆ ಬರೆದ ಈ ಕವನ ಇಂದಿಗೂ ಒಗಟಾಗಿ ಉಳಿದಿದೆ, ಬಿಡಿಸಲಾಗದ ಗಂಟಿನಂತೆ. ಈ ಪದ್ಯವನ್ನು ಕನ್ನಡದ ಧೀಮಂತ ವಿದ್ವಾಂಸರು ಜಿಜ್ಞಾಸೆ ಮಾಡಿ ಇದರ ಅರ್ಥದ ಬಗ್ಗೆ ಚರ್ಚಿಸಿ ಅನೇಕ ಲೇಖನಗಳನ್ನು ಬರೆದಿದ್ದಾರೆ. ಆ ಲೇಖನಗಳ ಸಂಕಲನ, 'ಭಾನುಮತಿಯ ನೆತ್ತ: ಪಂಪಭಾರತದ ಪದ್ಯವೊಂದನ್ನಾಧರಿಸಿದ ಸಂವಾದ ಸಂಚಯ,' 352 ಪುಟಗಳ ಗ್ರಂಥ, 2012ರಲ್ಲಿ ಪ್ರಕಟವಾಯಿತು (2).

ಕನ್ನಡದ ಹೆಚ್ಚು ವಿವಾದಾತ್ಮಕ ಪದ್ಯಗಳಲ್ಲಿ ಇದೂ ಒಂದು. ನಿಮ್ಮಲ್ಲಿ ಅನೇಕರಿಗೆ ಈ ಪದ್ಯದ ಬಗ್ಗೆ ಮಾಹಿತಿ ಇರಬಹುದು. ಆದರೆ, ಮಾಹಿತಿ ಇಲ್ಲದ ಕೆಲವು ಓದುಗರಿರಬಹುದು. ಆದ್ದರಿಂದ, ಪಂಪಭಾರತದಲ್ಲಿ ಯಾವ ಸಂದರ್ಭದಲ್ಲಿ ಈ ಕವನ ಬಂದಿದೆ, ತೋರುನೋಟಕ್ಕೆ ತಿಳಿಯುವ ಈ ಕವನದ ಅರ್ಥವೇನು, ಮತ್ತು ವಾದ ವಿವಾದಗಳ ಕಾರಣಗಳೇನು ಎಂದು ತಿಳಿಸುವ ಪ್ರಯತ್ನವನ್ನು ಮಾಡಿದ್ದೇನೆ. ಹಾಗೂ, ದುರ್ಯೋಧನನ ರಾಣಿ ಭಾನುಮತಿಯ ಸಂವೇದನೆಗಳನ್ನು ಗುರುತಿಸುವ ಪ್ರಯತ್ನವನ್ನು ಮಾಡಿದ್ದೇನೆ.

**ಹಿನ್ನೆಲೆ:** ಮಹಾಭಾರತದ ಉದ್ಯೋಗ ಪರ್ವದಲ್ಲಿ ಬರುವ "ಕರ್ಣ ಭೇದನ" ಎಂಬ ಖ್ಯಾತ ಪ್ರಕರಣ ಎಲ್ಲರಿಗೂ ತಿಳಿದದ್ದೇ. ಪಂಪಭಾರತದಲ್ಲಿ ಈ ಪ್ರಕರಣದಲ್ಲಿ ಮೇಲಿನ ಕವನ ಬರುತ್ತದೆ. ಆಗಲಿರುವ ಪಾಂಡವ ಕೌರವರ ಘೋರ ಯುದ್ಧವನ್ನು ನಿಲ್ಲಿಸಬೇಕು ಎಂದು ಶ್ರೀಕೃಷ್ಣ ರಾಯಭಾರಿಯಾಗಿ ದುರ್ಯೋಧನನ ಆಸ್ಥಾನಕ್ಕೆ ಹೋಗುತ್ತಾನೆ. ಆದರೆ, ಅವನು ಬಂದ ಕಾರ್ಯ ವಿಫಲವಾಗುತ್ತದೆ. ಅವನು ಹಿಂದಿರುಗುವಾಗ ದಾರಿಯಲ್ಲಿ ಕರ್ಣ ಸಿಗುತ್ತಾನೆ. ಆಗ ಶ್ರೀಕೃಷ್ಣ, ರಥವನ್ನು ನಿಲ್ಲಿಸಿ, ಕರ್ಣನನ್ನು ಕರೆದು, ತನ್ನ ಪಕ್ಕದಲ್ಲೇ ಕುಳಿತುಕೊಳ್ಳಲು ಹೇಳುತ್ತಾನೆ.

'ಸೂತನ ಮಗನಾದ ನಾನು ನಿಮ್ಮ ಪಕ್ಕದಲ್ಲಿ ಹೇಗೆ ಕೂರಲಿ' ಎಂದು ಕರ್ಣ ಅಳುಕಿದಾಗ. ಶ್ರೀಕೃಷ್ಣ ಅವನ ಜನ್ಮ ರಹಸ್ಯವನ್ನು ತಿಳಿಸಿ 'ನೀನು ಪಾಂಡವರ ಹಿರಿಯಣ್ಣ', ಎನ್ನುತ್ತಾನೆ. 'ನೀನು ಪಾಂಡವರ ಜತೆ ಸೇರಿದರೆ ನ್ಯಾಯವಾಗಿ ನೀನೇ ರಾಜನಾಗಬಹುದು, ಮತ್ತು ಮುಂದೆ ಆಗಬಹುದಾದ ಘೋರ ಯುದ್ಧವನ್ನು ನಿಲ್ಲಿಸಬಹುದು' ಎಂದು ಕರ್ಣನನ್ನು ಪಾಂಡವರ ಕಡೆಗೆ ಆಹ್ವಾನಿಸುತ್ತಾನೆ.

ಈ ಪ್ರಕರಣವನ್ನು ಕುಮಾರವ್ಯಾಸ ಅತ್ಯಂತ ಹೃದಯಂಗಮವಾಗಿ ಬಣ್ಣಿಸಿದ್ದಾನೆ:

**ಭೇದವಿಲ್ಲ ಎಲೆ ಕರ್ಣ, ನಿಮ್ಮೊಳು**
**ಯಾದವರು ಕೌರವರೊಳಗೆ ಸಂ**
**ವಾದಿಸುವಡನ್ವಯದ ಮೊದಲೆರಡಿಲ್ಲ ನಿನ್ನಾಣೆ**
**ಮೇದಿನೀಪತಿ ನೀನು, ಚಿತ್ತದೊ**
**ಳಾದುದರಿವಿಲ್ಲೆನುತ ದಾನವ**
**ಸೂದನನು ರವಿಸುತನ ಕಿವಿಯಲಿ ಬಿತ್ತಿದನು ಭಯವ (3).**

ಇಲ್ಲಿ, 'ರವಿಸುತನ ಕಿವಿಯಲಿ ಬಿತ್ತಿದನು ಭಯವ' ಎಂಬ ಸಾಲು ಕರ್ಣನ ಮನಃಸ್ಥಿತಿಯನ್ನು ಅತ್ಯಂತ ನಿಖರವಾಗಿ ಸೂಚಿಸುತ್ತದೆ. ಈ ಪ್ರಕರಣವನ್ನು ಬಣ್ಣಿಸುತ್ತಾ ಪಂಪ ಕುಮಾರವ್ಯಾಸನಿಗಿಂತ ಒಂದು ಹೆಜ್ಜೆ ಮುಂದೆ ಹೋಗುತ್ತಾನೆ. ಶ್ರೀಕೃಷ್ಣ ಕರ್ಣನ ಜನ್ಮರಹಸ್ಯವನ್ನು ತಿಳಿಸುವುದು ಮಾತ್ರವಲ್ಲದೇ, ದುರ್ಯೋಧನನಿಗೆ ಕರ್ಣನು ಪಾಂಡವರ ಹಿರಿಯಣ್ಣ ಎಂದು ಬಹಳ ಹಿಂದೆಯೇ ತಿಳಿದಿತ್ತು ಎಂಬ ರಹಸ್ಯವನ್ನು ಹೇಳುತ್ತಾನೆ.

ಒಮ್ಮೆ ಕರ್ಣ ಮತ್ತು ದುರ್ಯೋಧನರು ಗಂಗಾತೀರದಲ್ಲಿ ಬೇಟೆಗೆ ಹೋಗಿದ್ದಾಗ ಅವರು ಸಮೀಪದ ತಾಪಸಾಶ್ರಮದಲ್ಲಿದ್ದ ಸತ್ಯಂತಪ ಎಂಬ ದಿವ್ಯಜ್ಞಾನಿಗಳನ್ನು ಭೇಟಿಯಾಗುತ್ತಾರೆ. ಆ ಮುನಿಗಳು ಇವರನ್ನು ಕುಟೀರದೊಳಗೆ ಬರಲು ಆಹ್ವಾನಿಸುತ್ತಾರೆ. ಮುನಿಗಳು ಬಂದವರನ್ನು ಹರಸಿ, ಮೊದಲು ಕರ್ಣನಿಗೆ ಕುಳಿತುಕೊಳ್ಳಲು ಆಸನವನ್ನು ತೋರಿಸುತ್ತಾರೆ. ಇದರಿಂದ ಆಶ್ಚರ್ಯಗೊಂಡ ದುರ್ಯೋಧನ, ಯಾವುದೋ ಕಾರಣವನ್ನು ಹೇಳಿ ಕರ್ಣನನ್ನು ಹೊರಗೆ ಹೋಗಲು ಹೇಳುತ್ತಾನೆ. ನಂತರ, ಮುನಿಗಳನ್ನು ಕೇಳುತ್ತಾನೆ: 'ದೊರೆಯಾದ ನಾನಿರುವಾಗ ತಾವೇಕೆ ಆ 'ಮೀಂಗುಲಿಗನಿಗೆ' (ಮೀನನ್ನು ಕೊಲ್ಲುವ ಬೆಸ್ತನಿಗೆ) ಮೊದಲು ಆಸನವನ್ನು ತೋರಿಸಿದಿರಿ' ಎನ್ನುತ್ತಾನೆ. ಆಗ ಅವರು ದುರ್ಯೋಧನನಿಗೆ ಕರ್ಣನ ಜನ್ಮ ವೃತ್ತಾಂತವನ್ನು ತಿಳಿಸಿ, ಕರ್ಣ ಪಾಂಡವರಲ್ಲಿ ಹಿರಿಯಣ್ಣ ಎಂದು ಹೇಳುತ್ತಾರೆ.

ಅದನ್ನರಿತ ದುರ್ಯೋಧನ, 'ಕರ್ಣ, ಮುಳ್ಳನ್ನು ಮುಳ್ಳಿನಿಂದಲೇ ತೆಗೆಯುವ ಉಪಾಯವನ್ನು ಮಾಡುವೆನು,' ಎಂದುಕೊಳ್ಳುತ್ತಾನೆ– ಈ ಸಾಲು ಪಂಪಭಾರತದಲ್ಲಿದೆ. ಇದನ್ನು ಕರ್ಣನಿಗೆ ಹೇಳಿ, ಶ್ರೀಕೃಷ್ಣ, 'ದುರ್ಯೋಧನನಿಗೆ ನೀನು ಪಾಂಡವರ ಹಿರಿಯಣ್ಣ ಎಂದು ತಿಳಿದಿದ್ದರೂ, ತಿಳಿಯದವನಂತೆ ಸುಮ್ಮನಿದ್ದಾನೆ. ಇದುವರೆಗೂ ಅವನು ನಿನಗೆ ತೋರಿಸಿದ ಪ್ರೀತಿ ಕಪಟ ನಾಟಕ. ನಿನ್ನನ್ನು ನಾಶಮಾಡಬೇಕೆಂದು ಹೊಂಚು ಹಾಕುತ್ತಾ ನಯದಿಂದ ನಿನ್ನನ್ನು ಪೋಷಿಸುತ್ತಾ ಸಲಹಿದ್ದಾನೆ. ನೀನೇಕೆ ಅಂತಹವನ ಆಳಾಗಿರಬೇಕು? ಪಾಂಡವರ ಪಕ್ಷಕ್ಕೆ ಬಂದು ರಾಜ್ಯವನ್ನು ಆಳು' ಎನ್ನುತ್ತಾನೆ.

ಶ್ರೀಕೃಷ್ಣನು ತಿಳಿಸಿದ ತನ್ನ ಜನ್ಮರಹಸ್ಯ ಕರ್ಣನನ್ನು ತೀವ್ರ ಸಂಕಟಕ್ಕೆ ಈಡುಮಾಡುತ್ತದೆ. ರೋಮಾಂಚನದೊಡನೆ ಕಣ್ಣೀರು ಸುರಿಸುತ್ತಾ, ಕರ್ಣ ಶ್ರೀಕೃಷ್ಣನಿಗೆ ಕೊಡುವ ಪ್ರತ್ಯುತ್ತರ ಮೇಲಿನ ಪದ್ಯ. ಈ ಕವನದಲ್ಲಿ, ಕರ್ಣ ದುರ್ಯೋಧನನ ಔದಾರ್ಯ ಮತ್ತು ತನಗೂ ದೊರೆಗೂ ಇರುವ ಸದರ ಹಾಗೂ ಆಳವಾದ ಸಂಬಂಧವನ್ನು ಸ್ಮರಿಸಿಕೊಂಡು ಒಂದು ಪ್ರಸಂಗವನ್ನು ಹೇಳುತ್ತಾನೆ. ಶ್ರೀಕೃಷ್ಣನ ಮಾತನ್ನು ನಂಬಿದರೂ, ಕೌರವರಾಜನಿಗೂ ತನಗೂ ಇರುವ ಆಪ್ತಬಂಧನವನ್ನು ಹೇಳಿ, ತಾನು ಪಾಂಡವರ ಕಡೆಗೆ ಹೇಗೆ ಬರಲು ಸಾಧ್ಯ ಎಂದು ಉತ್ತರಿಸುವ ಈ ಪದ್ಯ ಕರ್ಣನ ಉದಾರ ಮನಸ್ಸಿಗೆ ಕನ್ನಡಿ ಹಿಡಿಯುತ್ತದೆ.

**ಪದ್ಯದ ಸಾಲುಗಳ ಅರ್ಥ:**

'ನೆತ್ತಮನಾಡಿ ಭಾನುಮತಿ ಸೋಲ್ತೊಡೆ' = ಪಗಡೆಯ ಆಟದಲ್ಲಿ ದುರ್ಯೋಧನನ ಪತ್ನಿ ಭಾನುಮತಿಯು ಸೋತಾಗ,

'ಸೋಲುಮನೀವುದೆಂದು ಕಾಡುತ್ತಿರೆ' = ಸೋತವಳು ಕೊಡಬೇಕಾದ ಪಣವನ್ನು ಕೊಡಬೇಕು ಎಂದು (ಗೆದ್ದವನು) ಕಾಡಿದಾಗ,

'ಲಂಬಣಂ ಪಱಿಯೆ' = ಮುತ್ತಿನ ಹಾರವು ಕಿತ್ತುಹೋಗಲು,

'ಮುತ್ತಿನ ಕೇಡನೆ ನೋಡಿ ನೋಡಿ ಬಳ್ಕುತ್ತಿರೆ' = ಚೆಲ್ಲಿದ ಮುತ್ತುಗಳನ್ನು ನೋಡುತ್ತಾ ನಡುಗುತ್ತಿದ್ದಾಗ,

'ಯೇವಮಿಲ್ಲದಿವನಾಯ್ವುದೊ ತಪ್ಪದೆ ಪೇಱಿಮೆಂಬ' = ಯಾವ ಬೇಸರವೂ ಇಲ್ಲದೇ 'ಈ ಮುತ್ತುಗಳನ್ನು ಆಯ್ದುಕೊಡಲೇ, ತಪ್ಪದೆ ಹೇಳು' ಎಂದು ಹೇಳಿದ.

'ಭೂಪೋತ್ತಮನಂ ಬಿಸುಟ್ಟಿರದೆ ನಿಮ್ಮೊಳೆ ಪೊಕ್ಕೊಡೆ ಬೇಡನಲ್ಲನೇ?' = ಉತ್ತಮೋತ್ತಮ ರಾಜನನ್ನು ಬಿಸುಟು ಅವನೊಡನಿರದೆ ನಿಮ್ಮ ಕಡೆಗೆ ಬಂದರೆ, ನಾನು (ಕಳಪೆಯ) ಬೇಡನಂತಾಗುವುದಿಲ್ಲವೇ?

ಇಲ್ಲಿ ಕರ್ಣ, 'ನಾನು ಕೌರವನನ್ನು ಬಿಟ್ಟು ಪಾಂಡವರ ಕಡೆಗೆ ಬಂದರೆ' ಎಂದು ಮಾತ್ರ ಹೇಳದೇ, 'ಭೂಪೋತ್ತಮನನ್ನು ಬಿಸುಟ್ಟಿರದೆ ನಿಮ್ಮೊಳೆ ಪೊಕ್ಕೊಡೆ' ಎಂದು ಹೇಳುತ್ತಾನೆ. ಅಂದರೆ, ನಾನು ಕೌರವನನ್ನು 'ಬಿಸುಟು,' ಅವನೊಟ್ಟಿಗೆ ಇರದೆ, ಹೇಡಿಯಂತೆ ಗುಪ್ತವಾಗಿ 'ನಿಮ್ಮೊಳಗೆ ಹೊಕ್ಕಿಕೊಂಡರೆ' ಎಂದು ಅರ್ಥಬರುವ ಸಾಲು ಬಹಳ ಗಮನಾರ್ಹವಾಗಿದೆ.

ಈ ಕವನವನ್ನು ಮೊದಲು ಓದಿದಾಗ ಅನಿಸುವ ಅರ್ಥ: ಒಮ್ಮೆ, ಭಾನುಮತಿಯು ಪಗಡೆಯಾಟದಲ್ಲಿ ಸೋತಳು. ಸೋತವಳು ಕೊಡಬೇಕಾದ ಪಣವನ್ನು ಅವಳು ಗೆದ್ದವನಿಗೆ ಕೊಡಲು ನಿರಾಕರಿಸಿದಳು. ಗೆದ್ದವನು ಆ ಪಣವನ್ನು ಪಡೆದುಕೊಳ್ಳಲು ಅವಳನ್ನು ಕಾಡಿದಾಗ ಅವಳ ಮುತ್ತಿನ ಹಾರವು ಕಿತ್ತುಹೋಯಿತು. ಮುತ್ತುಗಳು ಚೆಲ್ಲಿದವು. ಆಗ ನಡುಗುತ್ತಾ ನಿಂತವರನ್ನು ನೋಡಿದ ದುರ್ಯೋಧನನು ಯಾವ ಬೇಸರವೂ ಇಲ್ಲದೆ, 'ಇದೇನು ಮಹಾ--ಚೆಲ್ಲಿದ ಮುತ್ತುಗಳನ್ನು ಹೆಕ್ಕಿಕೊಡಲೇ,' ಎಂದು ಕೇಳಿದ. 'ಅಂಥಾ ರಾಜಶ್ರೇಷ್ಠನನ್ನು ಬಿಟ್ಟು ನಿಮ್ಮ ಕಡೆಗೆ ಬಂದರೆ ನನಗೆ ಕಳಂಕ ಬಾರದೇ?' ಎಂದು ಕರ್ಣ ಕೃಷ್ಣನಿಗೆ ಉತ್ತರಿಸುತ್ತಾನೆ.

ಆದರೆ, ಕನ್ನಡದ ಧೀಮಂತ ವಿದ್ವಾಂಸರು ಈ ಪದ್ಯವನ್ನು ಹಲವಾರು ರೀತಿಯಲ್ಲಿ ಅರ್ಥೈಸಿ, ವಾದ ಪ್ರತಿವಾದಗಳನ್ನು ಮುಂದಿಟ್ಟಿದ್ದಾರೆ.

ಈ ಕವನದ ಮೂರು ವಿವಾದಾಂಶಗಳು:

* ಭಾನುಮತಿ ನೆತ್ತಮನಾಡಿದ್ದು ಯಾರೊಡನೆ?
* ಸೋತವಳು ಪಣವನ್ನು ಕೊಡಬೇಕೆಂದು ಕಾಡುತ್ತಿದ್ದುದು ಯಾರು?
* 'ಮುತ್ತಿನ ಕೇಡನೇ ನೋಡಿ ನೋಡಿ ಬಳ್ಕುತ್ತಿದ್ದುದು' ಯಾರು?

ಕೆಲವು ವಿದ್ವಾಂಸರು, ಮೇಲಿನ ಮೂರು ಪ್ರಶ್ನೆಗಳಿಗೆ 'ಕರ್ಣ' ಎಂದು ಉತ್ತರಿಸಿದ್ದಾರೆ. ಮತ್ತೆ ಕೆಲವರು, ಮೊದಲ ಎರಡು ಪ್ರಶ್ನೆಗಳಿಗೆ 'ದುರ್ಯೋಧನ,' ಎಂದೂ ಮೂರನೆಯ ಪ್ರಶ್ನೆಗೆ 'ಭಾನುಮತಿ' ಎಂದೂ ಹೇಳಿದ್ದಾರೆ. ಈ ಎರಡು ಗುಂಪುಗಳಿಗೆ ಸೇರಿದವರು ಕನ್ನಡದ ಖ್ಯಾತ ಪಂಡಿತರು ಎಂಬುದನ್ನು ಗಮನಿಸಬೇಕು. 'ಭಾನುಮತಿಯ ನೆತ್ತ' (2) ಸಂವಾದ ಸಂಚಯದಲ್ಲಿ ಇವರು ತಮ್ಮ ವಾದಗಳನ್ನು ಸಮರ್ಥಿಸಿ ಬರೆದ ಲೇಖನಗಳಿವೆ.

ಭಾನುಮತಿಯು ಕರ್ಣನೊಡನೆ ಪಗಡೆಯಾಡುತ್ತಿದ್ದಳು ಎಂದು ಹೇಳಿದವರಲ್ಲಿ ಕೆಲವರು: 'ಪಂಪ ಭಾರತ ದೀಪಿಕೆ' (4) ಎಂಬ ಗ್ರಂಥವನ್ನು ಬರೆದ ಡಾ. ಡಿ. ಎಲ್. ನರಸಿಂಹಾಚಾರ್; ಡಿ. ವಿ. ಶೇಷಗಿರಿರಾವ್; ಎ. ಆರ್. ಕೃಷ್ಣಶಾಸ್ತ್ರಿ; ಕೆ. ವಿ. ಕೃಷ್ಣಭಟ್ಟ; ಕುವೆಂಪು; ಜಿ. ಪಿ. ರಾಜರತ್ನಂ; ತ. ಸು.ಶಾಮರಾಯ; ಮತ್ತು ಕೀರ್ತಿನಾಥ ಕುರ್ತಕೋಟಿ.

ಭಾನುಮತಿಯು ದುರ್ಯೋಧನನೊಡನೆ ಪಗಡೆಯಾಡುತ್ತಿದ್ದಳು ಎಂದು ವ್ಯಾಖ್ಯಾನಮಾಡಿರುವ ಕೆಲವರು: 'ಪಂಪ ಮಹಾಕವಿ ವಿರಚಿತ ಪಂಪ ಭಾರತಂ' ಎಂಬ ಗದ್ಯಾನುವಾದವನ್ನು ಪ್ರಕಟಿಸಿದ ಡಾ. ಎನ್. ಅನಂತರಂಗಾಚಾರ್ (1); ಮಂಗಳೂರು ಪದ್ಮನಾಭ; ತೆಕ್ಕುಂಜ ಗೋಪಾಲಕೃಷ್ಣ ಭಟ್ಟ; ಮತ್ತು ಸೇಡಿಯಾಪು ಕೃಷ್ಣಭಟ್ಟ.

ಮೇಲಿನ ಎರಡು ಗುಂಪಿನಲ್ಲಿ ಅತಿ ಮುಖ್ಯವಾದ ಸ್ಥಾನ ಸೇಡಿಯಾಪು ಕೃಷ್ಣಭಟ್ಟರಿಗೆ. ಇವರು ಬರೆದ ದೀರ್ಘ ಲೇಖನ 1976ರಲ್ಲಿ ಪ್ರಬುದ್ಧ ಕರ್ನಾಟಕದ 58ನೇ ಸಂಪುಟದ 3ನೇ ಸಂಚಿಕೆಯಲ್ಲಿ ಪ್ರಕಟವಾಯಿತು. ಅದರಲ್ಲಿ ಅವರು ಪಗಡೆಯ ಆಟವನ್ನು ಆಡುತ್ತಿದ್ದದ್ದು ಭಾನುಮತಿ ಮತ್ತು ದುರ್ಯೋಧನರು ಎಂದು ವಾದಿಸಿದ್ದಾರೆ. ಅಷ್ಟಲ್ಲದೇ, ಸೋತ ಭಾನುಮತಿ ಕೊಡಬೇಕಾಗಿದ್ದ ಪಣ ಮುತ್ತಿನ ಹಾರವಲ್ಲ, ಅವಳು ತನ್ನ ಪತಿಗೆ ಕೊಡಬೇಕಾದ 'ಮುತ್ತುಗಳು' ಅಥವಾ 'ಚುಂಬನ' ಎಂದು ವಾದಿಸಿದ್ದಾರೆ.

ಸೇಡಿಯಾಪು ಅವರ ಪ್ರಬಂಧ ಪ್ರಕಟಣೆಯಾದ ನಂತರ, ಅವರ ಹೊಸ ಅರ್ಥವಿವರಣೆಯ ಪರ ಮತ್ತು ವಿರೋಧದ ನಿಲುವುಗಳಿದ್ದ ಅನೇಕ ಲೇಖನಗಳು ಪ್ರಬುದ್ಧ ಕರ್ನಾಟಕ ಮತ್ತು ಹಲವಾರು ಪತ್ರಿಕೆಗಳಲ್ಲಿ ಪ್ರಕಟವಾದವು. ಆ ಲೇಖನಗಳು 'ಭಾನುಮತಿಯ ನೆತ್ತ' ಸಂವಾದ ಸಂಚಯದಲ್ಲಿವೆ (2).

**ಭಾನುಮತಿಯ ಸಂವೇದನೆಗಳು:**

ಈ ವಾದ ವಿವಾದಗಳಲ್ಲಿ ಭಾನುಮತಿಯ ಸಂವೇದನೆಗಳ ಬಗ್ಗೆ ಹೆಚ್ಚು ವಿಮರ್ಶೆಗಳಿಲ್ಲ. ಆದ್ದರಿಂದ ಅದನ್ನು ಈ ಲೇಖನದಲ್ಲಿ ಬರೆಯುವ ಪ್ರಯತ್ನವನ್ನು ಮಾಡಿದ್ದೇನೆ. ಬರಹಕ್ಕೆ ಆಧಾರವಾಗಿ, ಒಂದು ಸಣ್ಣ ಕತೆ, ಒಂದು ಕಿರುನಾಟಕ, ಮತ್ತು ಹಲವಾರು ಲೇಖನಗಳನ್ನು ಉದಾಹರಿಸಿದ್ದೇನೆ.

ಭಾನುಮತಿಯು ಪಗಡೆಯಾಡಿದ ಪ್ರಕರಣವನ್ನು ವಸ್ತುವನ್ನಾಗಿ ಇಟ್ಟುಕೊಂಡು, ಉತ್ತರ ಕರ್ನಾಟಕದ ಹಿರಿಯ ಸಾಹಿತಿಗಳಾದ ಶಾಂತರಸ ಹೆಂಬೇರಾಳು, 'ಮುತ್ತುಗಳನ್ನಾಯ್ದುಕೊಡಲೇ' ಎಂಬ ಹೆಸರಿನ ಸಣ್ಣಕತೆಯನ್ನು ಪ್ರಕಟಿಸಿದರು. ಈ ಕತೆ ಹೀಗಿದೆ.

ಒಂದು ದಿನ ಸಾಮ್ರಾಜ್ಞಿ ಭಾನುಮತಿಗೆ ಯಾವ ಕಾರಣವೂ ಇಲ್ಲದೇ ಬೇಸರವಾಗಿರುತ್ತದೆ. ಅದನ್ನು ತಿಳಿದ ದುರ್ಯೋಧನ. 'ಭಾನುಮತಿ, ಬಾ, ಪಗಡೆಯಾಡೋಣ, ನಿನ್ನ ಬೇಸರವು ಹೋಗುತ್ತದೆ' ಎನ್ನುತ್ತಾನೆ. ಆಗ ಭಾನುಮತಿ 'ನಿಮ್ಮೊಡನೆ ಆಡಿದಾಗಲೆಲ್ಲಾ ಗೆಲ್ಲುವುದು ನಾನೇ ಅಲ್ಲವೇ,' ಎಂದು ನಸು ವ್ಯಂಗ್ಯದಿಂದ ಮುಗುಳುನಗೆ ಬೀರುತ್ತಾಳೆ.

‘ಹಾಗಾದರೆ, ಯಾರೂ ಸೋಲಿಸಲಾಗದ ಕರ್ಣನನ್ನು ಕರೆಯುತ್ತೇನೆ, ಅವನೊಂದಿಗೆ ಪಗಡೆಯಾಡು, ನಿನ್ನ ಬೇಸರ ಹೋಗಲಿ,’ ಎಂದು ದುರ್ಯೋಧನನು ಕರ್ಣನಿಗೆ ಬರಲು ಹೇಳಿ ಕಳಿಸುತ್ತಾನೆ.

ರಾಜನ ಆಹ್ವಾನವನ್ನು ಮನ್ನಿಸಿ ಬಂದ ಕರ್ಣ ಭಾನುಮತಿಯೊಡನೆ ಪಗಡೆಯಾಟ–ವನ್ನು ಆಡಲು ಆರಂಭಿಸುತ್ತಾನೆ. ಆಗ, ದುರ್ಯೋಧನ, ‘ನೆತ್ತದಲ್ಲಿ ಸೋಲು ಗೆಲುವಿಗೆ ಪಣವೇನು?’ ಎಂದು ಕೇಳುತ್ತಾನೆ. ‘ನೀವೇ ಹೇಳಬೇಕು’ ಎಂದು ಭಾನುಮತಿ ಉತ್ತರಿಸುತ್ತಾಳೆ. ದುರ್ಯೋಧನ, ‘ನೀನೇ ಹೇಳು ಅಂಗರಾಜ’ ಎಂದು ಕರ್ಣನನ್ನು ಕೇಳುತ್ತಾನೆ. ‘ನಾನು ಸೋತರೆ ಇನ್ನೊಮ್ಮೆ ಸಾಮ್ರಾಜ್ಞಿಯೊಡನೆ ಆಡುವುದಿಲ್ಲ,’ ಎಂದು ಕರ್ಣ ತನ್ನ ಪಣವನ್ನು ಮುಂದಿಡುತ್ತಾನೆ. ಆಗ ಭಾನುಮತಿ, ‘ನಾನು ಸೋತರೆ ನನ್ನ ಕೊರಳಿನ ಮುತ್ತಿನ ಹಾರವನ್ನು ಕೊಡುವೆ,’ ಎನ್ನುತ್ತಾಳೆ.

ಪಗಡೆಯ ಆಟ ರಭಸದಿಂದ ಆರಂಭವಾಗುತ್ತದೆ. ಮೊದಲಿನ ಪಂದ್ಯಗಳಲ್ಲಿ ಭಾನುಮತಿ ಗೆಲ್ಲುತ್ತಾ ಕರ್ಣನ ಕಾಯಿಗಳನ್ನು ‘ಸುಡುತ್ತಾಳೆ’ (ಸುಡುತ್ತಾಳೆ ಎಂಬ ಪದ ಕತೆಯಲ್ಲಿ ಉಪಯೋಗಿಸಿದ್ದಾರೆ), ಈ ಮಧ್ಯೆ, ಒಬ್ಬ ಸೇವಕನು ಬಂದು ದುರ್ಯೋಧನನ ಕಿವಿಯಲ್ಲಿ ಏನನ್ನೋ ಹೇಳುತ್ತಾನೆ. ದುರ್ಯೋಧನ, ‘ಈಗ ಬಂದೆ, ನೀವು ಆಡುತ್ತಿರಿ,’ ಎಂದು ಹೇಳಿ ವಿಹಾರ ಗೃಹದಿಂದ ಹೊರಗೆ ಹೋಗುತ್ತಾನೆ.

ಭಾನುಮತಿ ಮತ್ತು ಕರ್ಣ ಪಗಡೆಯಾಟವನ್ನು ಮುಂದುವರಿಸುತ್ತಾರೆ. ಕ್ರಮೇಣ, ಮೊದಮೊದಲು ಗೆಲ್ಲುತ್ತಿದ್ದ ಭಾನುಮತಿಯ ಆಟ ಮಂದವಾಗುತ್ತಾ ಹೋಗುತ್ತದೆ. ಹಾಗೇ, ಕರ್ಣನ ಕೈಬಲ ಹೆಚ್ಚಾಗುತ್ತದೆ. ಆಟದ ಕಾವು ಹೆಚ್ಚುತ್ತದೆ. ಪಗಡೆಯಾಟದ ಗುಂಗಿನಲ್ಲಿ ಮುಳುಗಿದ್ದ ಅವರಿಗೆ ದುರ್ಯೋಧನನು ಹಿಂದಿರುಗಿ ಬಂದು ಕರ್ಣನ ಹಿಂದೆ ನಿಂತದ್ದು ಗಮನಕ್ಕೆ ಬರುವುದಿಲ್ಲ. ಕಡೆಯ ಆಟದಲ್ಲಿ ಕರ್ಣನೇ ಗೆಲ್ಲುತ್ತಾನೆ. ಆಗ, ಸಂತೋಷವನ್ನು ವ್ಯಕ್ತಪಡಿಸುತ್ತಾ ಕರ್ಣ ಗೆಲುವಿನಿಂದ ಜೋರಾಗಿ ನಗುತ್ತಾನೆ. ಆಟದಲ್ಲಿ ಸೋತ ಭಾನುಮತಿ ಸೋಲಿನ ನೋವನ್ನು ತೋರಿಸದೇ, ‘ಆಟ ಮುಗಿಯಿತಲ್ಲಾ, ಈಗ ನನ್ನ ಬೇಸರ ಹೋಯಿತು’ ಎಂದು ಹೇಳುತ್ತಾಳೆ. ಆದರೆ, ಪಣವಾಗಿಟ್ಟ ಮುತ್ತಿನ ಹಾರವನ್ನು ಕೊಡುವುದಿಲ್ಲ.

ಆಗ ಕರ್ಣ, ‘ಪಣವಾಗಿ ಇಟ್ಟ ಮುತ್ತಿನ ಹಾರವನ್ನು ಕೊಡಿ’ ಎನ್ನುತ್ತಾನೆ. ಅದಕ್ಕೆ ಭಾನುಮತಿ, ‘ನಾನು ಸೋತದ್ದು ಸಾಕಲ್ಲವೇ, ಮುತ್ತಿನ ಹಾರವನ್ನೇಕೆ ಕೊಡಬೇಕು?’ ಎನ್ನುತ್ತಾಳೆ. ‘ಪಣವಾಗಿಟ್ಟ ಹಾರವನ್ನು ಕೊಡಲೇಬೇಕು,’ ಎಂದು ಕರ್ಣ ಒತ್ತಾಯ ಮಾಡುತ್ತಾನೆ. ಅವನ ಒತ್ತಾಯ ಹೆಚ್ಚಾದಷ್ಟೂ ಭಾನುಮತಿಯ ನಿರಾಕರಣೆ ಹೆಚ್ಚುತ್ತದೆ. ‘ನೀವು ಕೊಡದಿದ್ದರೆ, ಗೆದ್ದವನಾದ ನಾನು ಹಾರವನ್ನು ತೆಗೆದುಕೊಳ್ಳುತ್ತೇನೆ,’ ಎನ್ನುತ್ತಾನೆ ಕರ್ಣ. ‘ಹಾಗೋ, ಹೇಗೆ ತೆಗೆದುಕೊಳ್ಳುತ್ತೀರಿ ನೋಡಿಯೇಬಿಡೋಣ,’ ಎನ್ನುತ್ತಾ ಭಾನುಮತಿ ನಿಲ್ಲಲು ಹೊರಡುತ್ತಾಳೆ.

'ಹೀಗೆ' ಎಂದು ಕರ್ಣ ಭಾನುಮತಿಯ ಕೊರಳ ಹಾರಕ್ಕೆ ಕೈಹಾಕಿ ಎಳೆಯುತ್ತಾನೆ. ಅವಳ ಹಾರವು ತುಂಡಾಗಿ, ಮುತ್ತುಗಳು ಚೆಲ್ಲಾಪಿಲ್ಲಿಯಾಗಿ ಬೀಳುತ್ತವೆ. ಅದನ್ನು ನೋಡಿ ಪರಿಚಾರಿಕೆಯರು ಭಯಗ್ರಸ್ತರಾಗಿ ನಿಲ್ಲುತ್ತಾರೆ. ಆಗ ಕರ್ಣ ಮತ್ತು ಭಾನುಮತಿಗೆ ದುರ್ಯೋಧನನು ಇವೆಲ್ಲವನ್ನೂ ನೋಡುತ್ತಾ, ಮಾತಾಡದೇ ಅಲ್ಲೇ ನಿಂತಿದ್ದಾನೆ ಎಂದು ತಿಳಿಯುತ್ತದೆ. ಹಾಗಾಗಿ ಅವರೂ ಭಯಗ್ರಸ್ತರಾಗಿ ರಾಜನನ್ನು ನೋಡುತ್ತಾರೆ.

ಆಗ ದುರ್ಯೋಧನ, 'ಭೇಷ್! ಕರ್ಣ, ಭೇಷ್' ಎನ್ನುತ್ತಾ ಚಪ್ಪಾಳೆ ತಟ್ಟುತ್ತಾನೆ. ಮಾತಾಡದೇ ನಿಂತಿದ್ದ ಕರ್ಣ ಮತ್ತು ಭಾನುಮತಿಯನ್ನು ನೋಡಿ, ಯಾವ ಅಸಮಾಧಾನವನ್ನೂ ವ್ಯಕ್ತಪಡಿಸದೇ, 'ಇದೇನು ಮಹಾ, ಈ ಮುತ್ತುಗಳನ್ನು ಆಯ್ದು ಕೊಡಲೇ?' ಎನ್ನುತ್ತಾ ಬಾಗಿ ಮುತ್ತುಗಳನ್ನು ಹೆಕ್ಕಲು ತೊಡಗುತ್ತಾನೆ.

ಕರ್ಣ ಅವಮಾನಿತನಾಗಿ, 'ನಾನು ಅವಿನಯವೆಸಗಿದೆ. ಸಾಮ್ರಾಜ್ಞಿ ಎಂದು ಮರೆತು ಅವರ ಕೊರಳ ಹಾರಕ್ಕೆ ಕೈಹಾಕಿದೆ...' ಎಂದು ನಡುಗುತ್ತಾನೆ. ಭಾನುಮತಿಯೂ ತನ್ನ ವರ್ತನೆ ಉದ್ಧಟತನವಾಯಿತು ಎಂದು ಹೇಳಿ ನಡುಗುತ್ತಾಳೆ. ಆದರೆ, ದುರ್ಯೋಧನನ ಔದಾರ್ಯವನ್ನು ಕಂಡು ಎಲ್ಲರೂ ಸಮಾಧಾನಗೊಳ್ಳುತ್ತಾರೆ. ಕರ್ಣ ಮತ್ತು ದುರ್ಯೋಧನ ಒಬ್ಬರನ್ನೊಬ್ಬರು ತಬ್ಬಿಕೊಳ್ಳುತ್ತಾರೆ. ಅವರ ಆಳವಾದ ಸ್ನೇಹವನ್ನು ನೋಡುತ್ತಾ ಭಾನುಮತಿಯ ಕಣ್ಣುಗಳು ಹನಿಗೂಡುತ್ತವೆ. ಕತೆ ಅಲ್ಲಿಗೆ ಮುಕ್ತಾಯವಾಗುತ್ತದೆ.

ಈ ಪ್ರಕರಣ, ಮೇಲಿನ ಕತೆಯಲ್ಲಿ ಹೇಳಿದಂತೆ ಎಂಬುದು ಪಂಪನ ಗುರಿಯಾಗಿದ್ದರೆ, ಭಾನುಮತಿಯು 'ಬಳುಕಿದ್ದಕ್ಕೆ' ಕಾರಣ, ತನ್ನ ಗಂಡನ ಅತ್ಯಂತ ಆಪ್ತ ಸ್ನೇಹಿತನಾದ ಕರ್ಣ, ಎಲ್ಲೆ ಮೀರಿ ತನ್ನ ಕೊರಳಿಗೆ ಕೈಹಾಕಿ ಅಪಚಾರ ಮಾಡಿದ ಎಂದು. ಅದನ್ನು ನೋಡಿ ತನ್ನ ಗಂಡ ಏನು ತಿಳಿದುಕೊಳ್ಳುವನೋ ಎಂಬ ಭಯದಿಂದ ಅವಳು ಅಂಜಿ ನಡುಗಿದಳು ಎಂದು ನಾವು ಊಹಿಸಬಹುದು.

ಆದರೆ, ಸೇಡಿಯಾಪು ಕೃಷ್ಣಭಟ್ಟರ ವ್ಯಾಖ್ಯಾನದ ಪ್ರಕಾರ, ಭಾನುಮತಿಯು ಬಳುಕಿದ್ದಕ್ಕೆ ಬೇರೆಯೇ ಕಾರಣ. ಅವರು, ಭಾನುಮತಿಯು ಪಗಡೆಯಾಡುತ್ತಿದ್ದದ್ದು ದುರ್ಯೋಧನ ನೊಡನೆ ಎನ್ನುತ್ತಾರೆ. ಅವಳು ಇಟ್ಟಿದ್ದ ಪಣ, ತಾನು ಸೋತರೆ ಗಂಡನಿಗೆ ಮುತ್ತನ್ನು, ಅಂದರೆ ಚುಂಬನವನ್ನು ಕೊಡುತ್ತೇನೆ ಎಂದು. ಅವರ ಪಗಡೆಯಾಟದ ನಡುವೆ ಅಂತಃಪುರಕ್ಕೆ ಬರುವಷ್ಟು ಸಲಿಗೆಯಿದ್ದ ಕರ್ಣ ಬರುತ್ತಾನೆ. ಆಟವನ್ನು ನೋಡುತ್ತಿರುತ್ತಾನೆ. ಪಗಡೆಯಾಟದಲ್ಲಿ ಭಾನುಮತಿ ಸೋಲುತ್ತಾಳೆ. ಆಗ ದುರ್ಯೋಧನನು ಸೋತ ಭಾನುಮತಿಯು ಪಣವನ್ನು ಕೊಡಬೇಕು ಎಂದು ಅವಳನ್ನು ಪೀಡಿಸುತ್ತಾನೆ. ಎಷ್ಟೇ ಆದರೂ ಕರ್ಣ ಹೊರಗಿನವನು. ಪರಪುರುಷನೆದುರಿಗೆ ಯಾವ ಹೆಂಗಸಿಗೆ ತಾನೇ ಪತಿಯನ್ನು ಚುಂಬಿಸಲು ಸಾಧ್ಯ? ಹಾಗಾಗಿ ನಾಚಿಕೆಯ ಭಾರದಿಂದ ಭಾನುಮತಿ, 'ಬಳುಕುತ್ತಾಳೆ' ಅಥವಾ ಅಳುಕುತ್ತಾಳೆ.

ಭಾನುಮತಿ ಮತ್ತು ದುರ್ಯೋಧನರ ಪ್ರಣಯ ಕಲಹದ ನಡುವೆ ಭಾನುಮತಿಯ ಮುತ್ತಿನ ಹಾರ ತುಂಡಾಗಿ ಮುತ್ತುಗಳು ಚೆಲ್ಲುತ್ತವೆ. ಆಗ ದುರ್ಯೋಧನನು ತನಗೆ ಲಭ್ಯವಾಗದಿದ್ದ ಅಮೂಲ್ಯವಾದ ಮುತ್ತುಗಳಿಗೆ (ಚುಂಬನಗಳಿಗೆ) ಈ ಸರದ 'ಮುತ್ತುಗಳು'

ಸಮಾನವಲ್ಲದಿದ್ದರೂ, ಇವೂ ಭಾನುಮತಿಯ ಮುತ್ತುಗಳೇ ಆಗಿರುವ ಕಾರಣ, ವಿಜಯಿಯಾದ ತಾನು ಇವನ್ನೇ ಭಾನುಮತಿಯು ತನಗೆ ಕೊಡಬೇಕಾದ ಪಣ ಎಂದು ಭಾವಿಸಿ, ಈ ಮುತ್ತುಗಳನ್ನು ಆರಿಸಿಕೊಳ್ಳುತ್ತೇನೆ ಎಂದು ವಿನೋದದಿಂದ ಹೇಳುತ್ತಾನೆ. 'ಅಂತಹಾ ಭೂಪೋತ್ತಮನನ್ನು ಬಿಟ್ಟು ನಾನು ಹೇಗೆ ನಿಮ್ಮ ಕಡೆಗೆ ಬರಲಿ?' ಎಂದು ಕರ್ಣನು ಶ್ರೀಕೃಷ್ಣನನ್ನು ಕೇಳುತ್ತಾನೆ. ಇದು ಸೇಡಿಯಾಪು ಕೃಷ್ಣಭಟ್ಟರ ಅಭಿಪ್ರಾಯ.

ತೆಕ್ಕುಂಜ ಗೋಪಾಲಕೃಷ್ಣಭಟ್ಟ ಎಂಬ ವಿದ್ವಾಂಸರು, ಸೇಡಿಯಾಪು ಅವರ ವಾದವನ್ನು ಒಪ್ಪುತ್ತಾರೆ. ಆದರೆ, ಅವರು ಭಾನುಮತಿಯು 'ಬಳುಕಿದ್ದಕ್ಕೆ' ಮತ್ತೊಂದು ಕಾರಣವನ್ನು ಕೊಡುತ್ತಾರೆ. ಈ ಪದ್ಯದಲ್ಲಿ 'ಮುತ್ತಿನ' ಎಂಬ ಪದವು ಏಕವಚನವಾದ್ದರಿಂದ, ಸೇಡಿಯಾಪು ಅವರು ಹೇಳುವಂತೆ, ಭಾನುಮತಿಯ ಪಣ ಅವಳ ಹಾರದ ಮುತ್ತಲ್ಲ. ಏಕೆಂದರೆ, ಮುತ್ತಿನ ಸರಗಳಲ್ಲಿ ಒಂದಕ್ಕಿಂತ ಹೆಚ್ಚು ಮುತ್ತುಗಳಿರುತ್ತವೆ. ಪಂಪ ಕೆಳಗೆ ಬಿದ್ದ ಮುತ್ತುಗಳನ್ನು ಕುರಿತು ಹೇಳುತ್ತಿದ್ದರೆ, ಅವನು ಬಹುವಚನವನ್ನು ಉಪಯೋಗಿಸಿ, 'ಮುತ್ತುಗಳು' ಎನ್ನುತ್ತಿದ್ದ. ಹಾಗಿಲ್ಲದ್ದರಿಂದ ಗೋಪಾಲಕೃಷ್ಣಭಟ್ಟರು ಭಾನುಮತಿಯ ಪಣ ಮತ್ತೊಂದು ವಿಶಿಷ್ಟವಾದ 'ಮುತ್ತು' ಅಥವಾ 'ಚುಂಬನ' ಎಂಬ ಸೇಡಿಯಾಪುಗಳ ತಾತ್ಪರ್ಯವನ್ನು ಒಪ್ಪುತ್ತಾರೆ.

ಮಹಾರಾಣಿಯಾದರೂ ಸ್ತ್ರೀಸಹಜ ಲಜ್ಜೆ ಭಾನುಮತಿಯನ್ನು ಸಂಕೋಚದಿಂದ ಬಾಗುವಂತೆ ಮಾಡುತ್ತದೆ. ಅಷ್ಟಲ್ಲದೇ, ದುರ್ಯೋಧನನು ಕರ್ಣನಿದ್ದಾನೆ ಎಂಬ ಚಿಂತೆಯಿಲ್ಲದೇ, 'ಈ ಮುತ್ತುಗಳನ್ನು (ಚುಂಬನಗಳನ್ನು) ತಪ್ಪದೇ ಪಡೆದುಕೊಳ್ಳಲೇ?' ಎಂದು ಕರ್ಣನನ್ನು ಕೇಳುತ್ತಾನೆ. ಇದನ್ನು ಶ್ರೀಕೃಷ್ಣನಿಗೆ ಹೇಳುತ್ತಾ, ಕರ್ಣ, 'ಅಂತಹಾ ಸರಸ ಸಮಯದಲ್ಲೂ ನನ್ನೆದುರಿಗೇ ಹೀಗೆ (ಚುಂಬನವನ್ನು ಪಡೆಯಲೇ ಎಂದು) ಹೇಳಿದ್ದು, ಮಹಾರಾಜನಿಗೆ ನನ್ನಲ್ಲಿ ಎಷ್ಟು ಸಲಿಗೆ ಮತ್ತು ನಂಬಿಕೆಗಳಿದ್ದವು ಎಂಬುದಕ್ಕೆ ಸಾಕ್ಷಿಯಲ್ಲವೇ? ಅಂತಹಾ ದೊರೆಯನ್ನು ಬಿಟ್ಟು ನಾನು ನಿಮ್ಮ ಕಡೆಗೆ ಬಂದರೆ ನನಗೆ ಕಳಂಕ ಬರದೇ?' ಎನ್ನುತ್ತಾನೆ. ಇದು ಗೋಪಾಲಕೃಷ್ಣಭಟ್ಟರು ಭಾನುಮತಿಯ ಅಳುಕಿಗೂ, ದುರ್ಯೋಧನನ ಔದಾರ್ಯಕ್ಕೂ ಕೊಡುವ ಅಭಿಪ್ರಾಯಗಳು.

ಆದರೆ, ಭಾನುಮತಿಯು ಬಳುಕಿದ್ದಕ್ಕೆ ಬೇರೇಯೇ ಕಾರಣ ಎಂಬ ಪ್ರತಿಪಾದನೆಯು ಒಂದು ನಾಟಕದಲ್ಲಿ ಬರುತ್ತದೆ. ನಾ. ಕೃ. ಸತ್ಯನಾರಾಯಣ ಅವರು ರಚಿಸಿದ 'ನೆತ್ತಮನಾಡಿ ಭಾನುಮತಿ ಸೋಲ್ತೊಡೆ' ಎಂಬ ನಾಟಕ, ಬೆಂಗಳೂರಿನ ರಂಗಮಂಟಪದಲ್ಲಿ 1972ರಲ್ಲಿ ನಡೆದ ನಾಟಕ ಸ್ಪರ್ಧೆಯಲ್ಲಿ ಬಹುಮಾನ ಪಡೆಯಿತು. ಅದರಲ್ಲಿ ಭಾನುಮತಿ ಮತ್ತು ಕರ್ಣ ಪಗಡೆಯಾಡುತ್ತಾರೆ. ಆದರೆ ಈ ಲೇಖಕರು ಭಾನುಮತಿಯು 'ಬಳುಕಿದ್ದಕ್ಕೆ' ಅತ್ಯಂತ ಗಂಭೀರವಾದ ಕಾರಣವಿದೆ ಎನ್ನುತ್ತಾರೆ.

ಕರ್ಣನನ್ನು ಭ್ರಾತೃಪ್ರೇಮದಿಂದ ಕಾಣುತ್ತಿದ್ದದ್ದರಿಂದ, ತನ್ನ ಮುತ್ತಿನ ಹಾರವನ್ನು ಕರ್ಣನು ಎಳೆದ ಮಾತ್ರಕ್ಕೆ ದುರ್ಯೋಧನನು ಸಂಶಯಪಟ್ಟಾನು ಎಂದು ಭಾನುಮತಿಯು ಬಳುಕುವ ಸಾಧ್ಯತೆ ಕಡಿಮೆ. ಆದ್ದರಿಂದ, ತಾನು ಧರಿಸಿದ್ದ 'ಲಂಬಣವು' ಅಂದರೆ

ಹಾರವು ಹರಿದದ್ದು ತನಗೆ ಮುಂದೆ ಬರುವ ವೈಧವ್ಯದ ಮುನ್ಸೂಚನೆ ಎಂದು ಭಾನುಮತಿಯು ಹೆದರಿ ನಡುಗುತ್ತಾಳೆ ಎನ್ನುತ್ತಾರೆ.

ಆಕೆಯ ಸರ, ಮುತ್ತುಗಳುಳ್ಳ ಕರಿಮಣಿ ಸರದಂತೆ. ಅದು ತುಂಡಾಗುವುದು ಅಪಶಕುನ ಎಂದು ಭಾನುಮತಿಯು ಭಾವಿಸಿ ನಡುಗುವುದು ಸಹಜ. ಅದಲ್ಲದೇ, ಭಾನುಮತಿಯಂಥಾ ಸಾಧ್ವಿಗೆ ಆ ಮುಂದಿನ ದೃಶ್ಯ ಅವಳ ಕಣ್ಣ ಮುಂದೆಯೇ ಬಂದು ಅತ್ಯಂತ ಭಯವಾಗಿರಬೇಕು ಎನ್ನುವ ಅಭಿಪ್ರಾಯ ಈ ನಾಟಕದಲ್ಲಿದೆ. ಇಂತಹಾ ಆತಂಕ ಕಾಡುವುದು ಪತ್ನಿಯಾದವಳಿಗೆ ಮಾತ್ರ. ಹಾಗಾಗಿ, ಸತ್ಯನಾರಾಯಣ ಅವರು ತಮ್ಮ ನಾಟಕದಲ್ಲಿ ಹೇಳಿದ ಕಾರಣಕ್ಕಾಗಿ ಭಾನುಮತಿಯು ನಡುಗಿದಳು ಎಂದು ಒಪ್ಪಬಹುದು.

ಈ ರೀತಿಯ ವಿಧವಿಧವಾದ ಅರ್ಥಗಳನ್ನು ತರುವ ಪದ್ಯದಲ್ಲಿ ಪಂಪನ ನಿಜವಾದ ಅಭಿಪ್ರಾಯವೇನು ಎಂಬುದನ್ನು ತಿಳಿಯುವ ಸಾಧ್ಯತೆ ನಮಗಿಲ್ಲ! ಅಂತಹಾ ಮಹಾಕವಿಯ ನಾಲ್ಕು ಸಾಲುಗಳ ಕವನ ಸಾವಿರ ವರ್ಷಗಳಾದರೂ ತನ್ನ ಗುಟ್ಟನ್ನು ಬಿಟ್ಟಿಲ್ಲ ಎನ್ನುವುದು ಆಶ್ಚರ್ಯವಲ್ಲವೇ? ಇಂತಹಾ ಅಮೋಘ ಕಾವ್ಯವನ್ನು ಬರೆದ ಪಂಪ ಮಹಾಕವಿ ಕನ್ನಡದವನು ಎಂದು ನಮಗೆ ಹೆಮ್ಮೆಯಾಗುತ್ತದೆ. ಹಾಗೇ, ಹತ್ತಾರು ಕನ್ನಡ ವಿದ್ವಾಂಸರು ಈ ಕವನವನ್ನು ಆಳವಾಗಿ ಅಭ್ಯಾಸಮಾಡಿ, ತಮ್ಮ ತೀವ್ರವಾದ ಅಭಿಪ್ರಾಯ ಭೇದಗಳನ್ನು ವಿದ್ವಚ್ಚರ್ಚೆಗಳ ಮೂಲಕ ಸುಂದರವಾಗಿ ವ್ಯಾಖ್ಯಾನಿಸಿದ್ದಾರೆ ಎಂಬುದು ಕನ್ನಡ ಸಾಹಿತ್ಯದ ಇತಿಹಾಸ ಪರಂಪರೆಯ ಸಮೃದ್ಧಿಯನ್ನು ಸೂಚಿಸುತ್ತದೆ ಎಂದೂ ನಾವು ಹೆಮ್ಮೆಪಡಬೇಕು.

**ಆಧಾರಗಳು:**

1. ಎನ್. ಅನಂತರಂಗಾಚಾರ್: ಪಂಪ ಮಹಾಕವಿ ವಿರಚಿತ ಪಂಪ ಭಾರತಂ ಗದ್ಯಾನುವಾದ. ಪ್ರಕಾಶಕರು: ಕನ್ನಡ ಸಾಹಿತ್ಯ ಪರಿಷತ್ತು, ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು. ಎರಡನೆಯ ಮುದ್ರಣ, 2013, ಪುಟಗಳು; 435–436.
2. ಡಾ. ಪಾದೇಕಲ್ಲು ವಿಷ್ಣು ಭಟ್ಟ (ಸಂ): ಭಾನುಮತಿಯ ನೆತ್ತ: ಪಂಪಭಾರತದ ಪದ್ಯವೊಂದನಾಧರಿಸಿದ ಸಂವಾದ ಸಂಚಯ. ಪ್ರಕಾಶಕರು: ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ. 2012, 352 ಪುಟಗಳು.
3. ಕುವೆಂಪು ಮತ್ತು ಮಾಸ್ತಿ ವೆಂಕಟೇಶ ಅಯ್ಯಂಗಾರ್ (ಸಂ): ಕುಮಾರವ್ಯಾಸ ಮಹಾಕವಿಯ ಕರ್ಣಾಟ ಭಾರತ ಕಥಾಮಂಜರಿ. ಪ್ರಕಾಶಕರು: ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು. ಮೂರನೇ ಮುದ್ರಣ, 1988; ಪುಟ 341.
4. ಡಾ. ಡಿ. ಎಲ್. ನರಸಿಂಹಾಚಾರ್: ಪಂಪ ಭಾರತ ದೀಪಿಕೆ. ಪ್ರಕಾಶಕರು: ಡಿ.ವಿ.ಕೆ. ಮೂರ್ತಿ ಪ್ರಕಾಶನ, ಕೃಷ್ಣಮೂರ್ತಿಪುರಂ, ಮೈಸೂರು. ನಾಲ್ಕನೆಯ ಮುದ್ರಣ, 2012, ಪುಟ 308.

5. ಡಾ. ಪಿ. ವಿ. ನಾರಾಯಣ: ಪಂಪನ ನುಡಿಗಣಿ. ಪ್ರಕಾಶಕರು: ಕಾಮಧೇನು ಪುಸ್ತಕ ಭವನ, ಶೇಷಾದ್ರಿಪುರ, ಬೆಂಗಳೂರು. 2013, 608 ಪುಟಗಳು. ಪಂಪ ಮಹಾಕವಿಯ 'ಆದಿಪುರಾಣ' ಮತ್ತು 'ವಿಕ್ರಮಾದಿತ್ಯ ವಿಜಯ'ಗಳ ಪ್ರತಿ ಪದ್ಯದ ಓದಿನಿಂದ ಅಕಾರಾದಿಯಾಗಿ ಸಂಗ್ರಹಿಸಿರುವ ಪದಗಡಣ ಇದರಲ್ಲಿದೆ. ಈ ಶಬ್ದಕೋಶ ಕನ್ನಡಕ್ಕೆ ಅಪೂರ್ವವಾದ ಕೊಡುಗೆ. ಪ್ರಸ್ತುತ ಲೇಖನಕ್ಕಾಗಿ ಈ ಗ್ರಂಥದಿಂದ ಪಂಪನ ಅನೇಕ ನುಡಿಕಟ್ಟುಗಳ ಅರ್ಥವನ್ನು ಪಡೆದಿದ್ದೇನೆ.



# ಸ್ತ್ರೀಯೊಬ್ಬಳ ಆದರ್ಶ ರಾಜ್ಯ–ಸಲ್ಮಾನ್ ರಶ್ದಿಯ ಕಣ್ಣಲ್ಲಿ 'ವಿಕ್ಟರಿ ಸಿಟಿ'–ಒಂದು ಅವಲೋಕನ

ಇಂಗ್ಲಿಷ್ ಮೂಲ: **ಗುಂಡು ಶಂಕರ್**; Freehold, New Jersey
ಕನ್ನಡಕ್ಕೆ: **ಜ್ಯೋತಿ ವೆಂಕಟಸುಬ್ರಹ್ಮಣ್ಯ**; Laramie, Wyoming

*

**ಪರಿಚಯ**

ನಾನು ಸಲ್ಮಾನ್ ರಶ್ದಿಯವರ ಇತ್ತೀಚಿನ ಕಾದಂಬರಿ 'ವಿಕ್ಟರಿ ಸಿಟಿ'ಯ ಬಗ್ಗೆ ಬರೆಯಬೇಕೆಂದು ಆಯ್ದುಕೊಂಡಿದ್ದೇನೆ. ಅನೇಕ ದೃಷ್ಟಿಗಳಲ್ಲಿ ಇದೊಂದು ಗಮನಾರ್ಹ ಪುಸ್ತಕ. ಸ್ತ್ರೀಯೊಬ್ಬಳು ಕಾಣುವ ಆದರ್ಶರಾಜ್ಯದ ಕಲ್ಪನೆಯನ್ನು ಮನೋಜ್ಞವಾಗಿ ಬಿಂಬಿಸುವ ಈ ಪುಸ್ತಕ ಆ ಕಾರಣಕ್ಕಾಗಿಯೇ ವಿಶಿಷ್ಟ ಎನ್ನಿಸಿಕೊಳ್ಳುತ್ತದೆ. ಆ ಆದರ್ಶರಾಜ್ಯದಲ್ಲಿ ಮಹಿಳೆಯರಿಗೆ ಯಾವುದೇ ರೀತಿಯ ಸಾಮಾಜಿಕ ನಿರ್ಬಂಧಗಳಿಲ್ಲದೆ ತಮ್ಮ ಬದುಕಿನ ಗುರಿಗಳನ್ನು ಆಯ್ದುಕೊಳ್ಳುವ ಸ್ವಾತಂತ್ರ್ಯವಿದೆ. ಅಲ್ಲಿ ಯಾವುದೇ ವೃತ್ತಿ ಸ್ತ್ರೀಯರಿಗೆ ಎಟುಕಲಾರದ್ದು ಅಥವಾ ಗೌರವಕ್ಕೆ ಕುಂದು ಎಂಬ ಪೂರ್ವಗ್ರಹಗಳಿಲ್ಲ. ಅವರ ಆಯ್ಕೆಗಳಿಗೆ ಹೊರಪ್ರಪಂಚದ ಯಾವುದೇ ಕಟ್ಟುಪಾಡುಗಳ ಅಡ್ಡಿಯಿಲ್ಲ. ಇಲ್ಲಿ ಸ್ತ್ರೀಯೊಬ್ಬಳಿಗೆ ತನ್ನಿಚ್ಛೆಯಂತೆ ತನ್ನನ್ನು ಕಲೆಯ ಮೂಲಕ, ನಡತೆಯ ಮೂಲಕ ಅಭಿವ್ಯಕ್ತಪಡಿಸಿಕೊಳ್ಳುವ ಸ್ವಾತಂತ್ರ್ಯವಿದೆ ಮತ್ತು ಅವಕಾಶಗಳಿವೆ.

ಇಂದು ಅನೇಕ ಸಮಾಜಗಳಲ್ಲಿ ಸ್ತ್ರೀಯರಿಗೆ ಹೆಚ್ಚಿನ ಸ್ವಾತಂತ್ರ್ಯ ದೊರಕುತ್ತಿದೆ ಎಂಬುದು ನಿಜವಾದರೂ ಅವರ ಸಂಘರ್ಷಗಳು ಕೊನೆಮುಟ್ಟುವ ಗಳಿಗೆ ಬಹು ದೂರವಿದೆ ಎನ್ನುವುದೂ ಅಷ್ಟೇ ಸತ್ಯ. ಡಾ. ಮಾರ್ಟಿನ್ ಲೂಥರ್‌ಕಿಂಗ್ ಅವರು ಉಲ್ಲೇಖಿಸಿದಂತೆ

"ನೈತಿಕ ವಿಶ್ವದ ಕಮಾನು ಬಲು ದೀರ್ಘ. ಆದರೆ ಅದು ಬಾಗುವುದು ಮಾತ್ರ ನ್ಯಾಯದೆಡೆಗೇ". ಪರಿವರ್ತನೆಗೆ ಬಹುಕಾಲ ಹಿಡಿಯಬಹುದು. ಆದರೆ ಅದು ಸಿದ್ಧಿಸುತ್ತದೆ ಎನ್ನುವುದು ನಿರ್ಣಾಯಕ ಸತ್ಯ. ಸಮಬಾಳ್ವೆಗಾಗಿನ ಹೋರಾಟ ಇನ್ನೂ ಗುರಿ ಮುಟ್ಟಿಲ್ಲವಾದರೂ ಆ ಕಮಾನು ನಿಧಾನವಾಗಿ ನ್ಯಾಯದೆಡೆಗೆ ಬಾಗುತ್ತಿದೆ. ಕೆಲವು ಸಮಾಜಗಳಲ್ಲಿ ಈ ಬದಲಾವಣೆಯ ಸ್ವರೂಪ ಹೆಚ್ಚು ಸ್ಪಷ್ಟವಿರಬಹುದು.

**'ವಿಕ್ಟರಿ ಸಿಟಿ' – ಪುಸ್ತಕದ ಸುತ್ತ**

ರಶ್ದಿಯ 'ವಿಕ್ಟರಿ ಸಿಟಿ'ಯಲ್ಲಿ ಇಡೀ ಕಾದಂಬರಿಯನ್ನು ನಿಷ್ಕೃಷ್ಟಗೊಳಿಸುವ, ವಿಶದೀಕರಿಸುವ ಕ್ಷಣವೊಂದಿದೆ. ಒಂಬತ್ತು ವರ್ಷದ ಪಂಪಾ ತನ್ನ ತಾಯಿ ಧಗಧಗಿಸುತ್ತಿದ್ದ ಚಿತಾಗ್ನಿಯ ಜ್ವಾಲೆಗಳತ್ತ ನಡೆದುಹೋಗುತ್ತಿರುವುದನ್ನು ನೋಡುತ್ತಾ ನಿಲ್ಲುವ ಕ್ಷಣ. ಮಗಳ ಕೈಯನ್ನು ಹಿಡಿದಿದ್ದ ತಾಯಿ ಅವಳ ಕೈ ಬಿಡಿಸಿಕೊಂಡು ಚಿತಾಗ್ನಿಯತ್ತ ಧಾವಿಸುತ್ತಿದ್ದ ಅನೇಕ ಸ್ತ್ರೀಯರೊಂದಿಗೆ ನಡೆದು ತಾನೂ 'ಸತಿ'ಯಾಗುತ್ತಾಳೆ. ಅವರಲ್ಲಿ ಅನೇಕರು ಆಗಷ್ಟೇ ನಡೆದ ಯುದ್ಧದಲ್ಲಿ ಅಸುನೀಗಿದ ಯೋಧರ ವಿಧವೆಯರು. ಪಂಪಾಳ ತಾಯಿ ವರ್ಷಗಳ ಹಿಂದೆಯೇ ವಿಧವೆಯಾಗಿದ್ದರೂ ಆ 'ಸಮೂಹ ಆತ್ಮಹತ್ಯೆ'ಯ ಸನ್ನಿಗೆ ಬಲಿಯಾಗುತ್ತಾಳೆ. ಎಳೆಯ ಪಂಪಾ ಭಯಭೀತಳಾಗಿ, ಅಸಹಾಯಳಾಗಿ ಈ ಘೋರ ದೃಶ್ಯಕ್ಕೆ ಸಾಕ್ಷಿಯಾಗುತ್ತಾಳೆ. ಬೇಯುತ್ತಿದ್ದ ನರಮಾಂಸದ ಕಮಟು ವಾಸನೆ ಮೂಗಿನ ಹೊಳ್ಳೆಗಳಲ್ಲಿ ತುಂಬಿಕೊಳ್ಳುತ್ತಿದ್ದ ಗಳಿಗೆಯಲ್ಲಿ ಆ ಅನಾಥ ಮಗು 'ಸಾವನ್ನು ಎಂದೆಂದಿಗೂ ಧಿಕ್ಕರಿಸಿ, ತಿರಸ್ಕರಿಸಿ, ಬದುಕಿನತ್ತ ಮುಖಮಾಡುವ' ಪ್ರತಿಜ್ಞೆ ಮಾಡುತ್ತಾಳೆ. ತಾನು ಇನ್ನು ವಯಸ್ಸಾಗುವುದು ಸಾಧ್ಯವೇ ಇಲ್ಲ ಎನ್ನುವಷ್ಟು ಮುದುಕಿಯಾಗುವವರೆಗೆ ಜೀವಂತವಾಗಿರುತ್ತೇನೆ ಎಂದು ನಿರ್ಧಾರ ತೆಗೆದುಕೊಳ್ಳುತ್ತಿದ್ದಂತೆ ಅವಳ ಬಾಯಿಂದ ದೇವಿಯೊಬ್ಬಳ ಮಾತುಗಳು ಗುಡುಗಿನಂತೆ ಹೊರಬರುತ್ತವೆ "ಭವಿಷ್ಯದಲ್ಲಿ ಯಾವ ಸ್ತ್ರೀಯರೂ ಈ ಬಗೆಯಲ್ಲಿ ದಹಿಸದಿರುವಂತೆ ತಡೆಯಲು ಮತ್ತು ಸ್ತ್ರೀಯರನ್ನು ಪುರುಷರು ವಿಭಿನ್ನ ದೃಷ್ಟಿಯಲ್ಲಿ ನೋಡುವಂತೆ ಮಾಡಲು ನೀನು ಹೋರಾಡುವೆ." ದೇವಿಯ ಭವಿಷ್ಯವಾಣಿ ಮುಂದುವರೆಯುತ್ತದೆ.. "ನಿನ್ನ ಯಶಸ್ಸು ಮತ್ತು ಸೋಲುಗಳನ್ನು ಕಣ್ಣಾರೆ ಕಾಣುವಷ್ಟು ಕಾಲ ನಿನ್ನ ಆಯಸ್ಸು ಇರುತ್ತದೆ."

ದೇವಿಯ ಮತ್ತು ಅವಳ ಕನಸು ಸಾಕ್ಷಾತ್ಕಾರವಾಗುವವರೆಗೆ ಮತ್ತು ಅದನ್ನು ಅನುಸರಿಸಿ ನಡೆಯುವ ಘಟನಾವಳಿಗಳಿಗೆಲ್ಲಾ ಸಾಕ್ಷಿಯಾಗುವಷ್ಟು ಕಾಲ ಪಂಪಾ ಜೀವಂತವಿರುತ್ತಾಳೆ. ತನ್ನ ಮಾಂತ್ರಿಕ ಶಕ್ತಿಯಿಂದ ಸೃಷ್ಟಿಸಿದ ವಿಜಯನಗರ ಸಾಮ್ರಾಜ್ಯದಲ್ಲಿ ಸ್ತ್ರೀಯರಿಗೆ ಬೇರೆಲ್ಲೂ ಕಾಣಸಿಗದ, ಅದರಲ್ಲೂ ಹದಿನಾಲ್ಕನೆಯ ಶತಮಾನದಲ್ಲಿ ಕೇಳರಿಯದ ವೃತ್ತಿ ಗೌರವಗಳು ಸಿಗುವಂತೆ ಮಾಡುತ್ತಾಳೆ. ಅಲ್ಲಿ ಸ್ತ್ರೀಯರೇ ವಕೀಲರು, ಆರಕ್ಷಕರು, ದಂತವೈದ್ಯೆಯರು ಮತ್ತು ಯೋಧೆಯರು. ಬಂಗಾರದ ಕವಚಗಳನ್ನು ಧರಿಸಿ ಅರಮನೆಯ ರಕ್ಷಣೆಗೆ ನಿಲ್ಲುವವರೂ ಸ್ತ್ರೀಯರೇ. ನಗರದ ಚೌಕಿಗಳಲ್ಲಿ ಅವರು ಡೋಲು ಬಾರಿಸಿದರೆ

ಪುರುಷರು ನರ್ತಿಸುತ್ತಾರೆ. ಸಮಾನತಾವಾದಕ್ಕೆ ಮನ್ನಣೆ ಕೊಟ್ಟ ನಗರ ಅದ್ಭುತ ಏಳಿಗೆ ಕಾಣುತ್ತದೆ. ರಾಜ್ಯದ ಬೊಕ್ಕಸ ತುಂಬಿ ತುಳುಕುತ್ತದೆ.

ಆದರೆ ಇಂತಹ ಸುವರ್ಣಕಾಲ ಶಾಶ್ವತವಲ್ಲ. ಎಲ್ಲರಿಗೂ ತಿಳಿದಿರುವಂತೆ ತಲೆಮಾರುಗಳು ಬದಲಾಗುತ್ತಿದ್ದಂತೆ ಆದರ್ಶರಾಜ್ಯಗಳು, ಮಾಯಾ ಪ್ರಪಂಚಗಳಿಗೆ ಉಳಿಗಾಲವಿರುವುದಿಲ್ಲ. ಆ ಆದರ್ಶಗಳಿಗೆ ವ್ಯತಿರಿಕ್ತವಾದ, ಗಂಟುಮೋರೆಯ, ಶುಷ್ಕ, ಬೈರಾಗಿ ವೇಷದವನೊಬ್ಬನಿಗೆ ಸಾಮ್ರಾಜ್ಯದಲ್ಲಿ ಎಲ್ಲರ ಮನ್ನಣೆ, ಹಿಂಬಾಲಕತ್ವ ದೊರಕುತ್ತದೆ. ರಾಣಿಯಾಗಿ ಆಳ್ವಿಕೆ ನಡೆಸುತ್ತಿದ್ದ ಪಂಪಾ ತನ್ನ ಆದರ್ಶಗಳನ್ನು ಬಲಿಕೊಡಲು ಸಿದ್ಧಳಿರುವುದಿಲ್ಲ. ಬುಕ್ಕನಿಂದ ಹುಟ್ಟಿದ ಬುದ್ಧಿಹೀನ, ದುಷ್ಟ ಗಂಡುಮಕ್ಕಳಿಗಿಂತ ತನ್ನ ವಿವೇಕಿ, ಸದ್ಗುಣ ಸಂಪನ್ನರಾದ ಹೆಣ್ಣುಮಕ್ಕಳು ರಾಜ್ಯದ ಗದ್ದುಗೆ ಏರಲು ಸಮರ್ಥರೆಂದು ಪಟ್ಟು ಹಿಡಿಯುತ್ತಾಳೆ. ಇದನ್ನು ಒತ್ತಾಯಪೂರ್ವಕವಾಗಿ ಒಪ್ಪಿಕೊಂಡ ಬುಕ್ಕ ತನ್ನ ಮಕ್ಕಳನ್ನು ಗಡೀಪಾರು ಮಾಡುತ್ತಾನೆ. ಸಾಮ್ರಾಜ್ಯದಲ್ಲಿ ಅಸಹಿಷ್ಣುತೆ ಹೆಚ್ಚಾಗಿ ಅಲ್ಲಲ್ಲಿ ದಂಗೆಯೇಳುವುದು ಸಾಮಾನ್ಯವಾಗುತ್ತದೆ. ರಾಣಿ ಪಂಪಾ ತನ್ನ 'ಪಿಸುಮಾತಿನ' ತಂತ್ರ ಬಳಸಿ ಜನರಲ್ಲಿ ವಿವೇಕ ತುಂಬುವ ವಿಫಲ ಪ್ರಯತ್ನ ನಡೆಸುತ್ತಾಳೆ. ವಿಜಯನಗರ ಮತ್ತೆ ಮರಳಿ ಬರಲಾಗದಂತಹ ಅಧಃಪತನದ ಹಾದಿ ಹಿಡಿಯತೊಡಗುತ್ತದೆ (ಇಲ್ಲಿ ಬುಕ್ಕನ ಮೂಲಕ ರಶ್ದಿ ಪರೋಕ್ಷವಾಗಿ ಓದುಗರಿಗೆ ಪಂಪಾ ತನ್ನ ಕಾಲಕ್ಕೆ ಮೀರಿದ ಪ್ರಗತಿಪರಳು ಎಂದು ನೆನಪಿಸುತ್ತಾನೆ).

ಹೆಣ್ಣು – ಗಂಡುಗಳು ಎಲ್ಲ ರೀತಿಯಲ್ಲಿಯೂ ಸಮಾನರಾದ ಈ ಆದರ್ಶರಾಜ್ಯದಲ್ಲಿ ಸಮಾಜ ಉನ್ನತ ಸ್ಥಿತಿಯನ್ನು ತಲುಪಿ ಸಮೃದ್ಧವಾಗುತ್ತದೆ. ಆದರೆ ಧಾರ್ಮಿಕ ಅಥವಾ ಮತ್ತೆಂಥದೋ ಅಂಧಶ್ರದ್ಧೆಗಳಿಗೆ ಶರಣಾಗಿ, ಪ್ರಾಕೃತಿಕ ನಿಯಮವನ್ನು ಉಲ್ಲಂಘಿಸಿದರೆ ಇಂಥಾ ಆದರ್ಶ ರಾಜ್ಯ ಕೂಡ ನಾಶವಾಗುವುದು ನಿಶ್ಚಿತ ಎಂಬ ಸಂದೇಶ ಇಲ್ಲಿದೆ.

* * *

'ವಿಕ್ಟರಿ ಸಿಟಿ' ಸಲ್ಮಾನ್ ರಶ್ದಿಯ 15ನೇ ಕಾದಂಬರಿ. 2022ರಲ್ಲಿ ಅವನ ಮೇಲೆ ಪ್ರಾಣಾಂತಿಕ ಹಲ್ಲೆ ನಡೆಯುವ ಮುನ್ನವೇ ಬರೆದದ್ದು. ರಶ್ದಿಯ ಮೋಡಿಗೊಳಿಸುವ ಬರಹದ ಸೊಗಸು, ಅದ್ಭುತ ಕಲ್ಪನೆ, ಸೃಜನಶೀಲತೆಗೆ ಕನ್ನಡಿ ಹಿಡಿಯುವ ಕೃತಿ ಇದಾಗಿದೆ. ಕಲ್ಪನಾಲೋಕದ ಕಥೆಯನ್ನು ಹಿನ್ನೆಲೆಯಾಗಿರಿಸಿಕೊಂಡು ಧರ್ಮಾಂಧತೆ ಸೃಷ್ಟಿಸಬಹುದಾದ ಭ್ರಷ್ಟಾಚಾರದ ವಿರುದ್ಧ ರಶ್ದಿ ದನಿಯೆತ್ತುತ್ತಾನೆ.

ಕಾದಂಬರಿಯಲ್ಲಿನ 14ನೆಯ ಶತಮಾನದ ಮೊದಲಲ್ಲಿ ನಡೆಯುವ ಸಮೂಹ ಆತ್ಮಹತ್ಯೆಗಳು, ಹಕ್ಕ – ಬುಕ್ಕರು ವಿಜಯನಗರ ಸಾಮ್ರಾಜ್ಯವನ್ನು ಸ್ಥಾಪಿಸಿದ್ದು, ಆ ಸಾಮ್ರಾಜ್ಯದ ಬೃಹತ್ ಪಡೆಗಳು, ಗಜಸೇನೆ, ಅಕ್ಕಪಕ್ಕದ ಮತ್ತು ಉತ್ತರದ ಮುಸ್ಲಿಂ ಅಧಿಪತ್ಯಗಳೊಂದಿಗಿನ ದೀರ್ಘಕಾಲದ ಕದನಗಳು, ವಿಜಯನಗರಕ್ಕೆ ಭೇಟಿ ನೀಡಿದ ಪೋರ್ಚುಗೀಸ್ ಮತ್ತು ಚೀನಾದ ಯಾತ್ರಿಕರು ಮತ್ತಿತರ ಅಂಶಗಳೆಲ್ಲ ಐತಿಹಾಸಿಕ

ಸತ್ಯಗಳನ್ನು ಆಧರಿಸಿ ಹೆಣೆದ ಕಥನಗಳು. ವಿಕ್ಟರಿ ಸಿಟಿ ಕೂಡಾ ಮಧ್ಯ ಕಾಲೀನ ವಿಜಯನಗರ ಸಾಮ್ರಾಜ್ಯವನ್ನು (1336–1565) ಆಧರಿಸಿ ಚಿತ್ರಿಸಿದ ಕಥೆ. ಅಲ್ಲಿ ಅದಷ್ಟೂ ಪಂಪಾಳ ಜೀವನಕಾಲವೆಂದೇ ಬಿಂಬಿತವಾಗಿದೆ. ವಿಜಯನಗರದ ಅವಶೇಷಗಳನ್ನು ಇಂದಿನ ಹಂಪಿಯಲ್ಲಿ ಕಾಣಬಹುದು. ಇಲ್ಲಿನ ದೇವಾಲಯಗಳು ಯುನೆಸ್ಕೋ(UNESCO)ದ ವಿಶ್ವ ಪರಂಪರೆಯ ತಾಣವೆಂದು ಮಾನ್ಯತೆ ಪಡೆದಿವೆ. ಹಂಪಿಯ ಅವಶೇಷಗಳು ಭಾರತದ ದಕ್ಷಿಣದ ತುತ್ತತುದಿಯವರೆಗೂ ಹರಡಿವೆ.

ಈ (ಕಲ್ಪಿತ) ಕಥಾನಕ ಪಂಪಾ ಕಂಪನಳೇ ಸಂಸ್ಕೃತದಲ್ಲಿ ಬರೆದ ಮಹಾಕಾವ್ಯವೆಂದು ರಶ್ದಿ ಹೇಳುತ್ತಾನೆ. 400 ವರ್ಷಗಳಿಂದ ಮಣ್ಣಿನ ಕುಡಿಕೆಯೊಂದರಲ್ಲಿ ಭೂಮಿಯಲ್ಲಿ ಹೂತಿಟ್ಟಿದ್ದ ಈ 24 ಸಾವಿರ ಶ್ಲೋಕಗಳ ಅಗಾಧ ವೃತ್ತಾಂತಕ್ಕೆ ಪಂಪಾ 'ಜಯಾಪರಾಜಯ' ಎಂದು ಹೆಸರಿಟ್ಟಿದ್ದಳು. ಸಾಮ್ರಾಜ್ಯವೊಂದರ ರಹಸ್ಯಮಯ ಚರಿತೆಯನ್ನು ಹೇಳುವ ಈ ಕಥೆ (ವಿಕ್ಟರಿ ಸಿಟಿ) ಅನಾಮಧೇಯನಾದ ಸಮಕಾಲೀನ ಬರಹಗಾರನೊಬ್ಬನ ನಿರೂಪಣೆ. ರಶ್ದಿಯ ಮಾತುಗಳಲ್ಲಿ 'ಅವನೊಬ್ಬ ವಿದ್ವಾಂಸ ಅಥವಾ ಮಹಾಕವಿಯಲ್ಲ, ಕೇವಲ ಕಥೆ ಹೊಸೆಯುವವ'. (ಕೇವಲ!). ಲೇಖಕ ರಶ್ದಿಯ ಪಾತ್ರ, ನಾಟಕವೊಂದರ 'ಸೂತ್ರಧಾರ'ನಂತೆ ಭಾಸವಾಗುತ್ತದೆ.

ಪಂಪಾ ಕಂಪನಳ ಗಾಥೆ ಆಕೆಯ ತಾಯಿ ಚಿತೆಯೆಡೆಗೆ ನಡೆಯುವುದರೊಂದಿಗೆ ಹುಟ್ಟಿಕೊಳ್ಳುತ್ತದೆ. ಕಥೆಯ ಅನುಸಾರ ಚಿಕ್ಕದೊಂದು ರಾಜ್ಯದಲ್ಲಿ, ಯುದ್ಧವೊಂದರಲ್ಲಿ ತಮ್ಮ ಪತಿಯಂದಿರು ವೀರ ಮರಣವನ್ನಪ್ಪಿದಾಗ ಅಲ್ಲಿನ ವಿಧವೆಯರೆಲ್ಲ ಸೇರಿ ನದೀತೀರದಲ್ಲಿ ದೊಡ್ಡ ಉರಿಯೊಂದನ್ನು ಹಾಕಿ ಪರಸ್ಪರ ವಿದಾಯಗಳನ್ನು ಹೇಳಿಕೊಂಡು ಮೌನವಾಗಿ ಸಾವಿನೆಡೆಗೆ ನಡೆಯುತ್ತಾರೆ. ಗಾಳಿಯಲ್ಲಿ ನರಮಾಂಸದ ಘಾಟುವಾಸನೆಯೊಂದಿಗೆ ಸುಡುತ್ತಿದ್ದ ಶ್ರೀಗಂಧ, ಲವಂಗಗಳ ಗಂಧವೂ ಬೆರೆಯುತ್ತದೆ. ಪಂಪಾ ಮುಂದೆ ತನ್ನ ಜೀವಿತದ 238 ವರ್ಷಗಳಲ್ಲಿ ಒಮ್ಮೆ ಕೂಡಾ ಮಾಂಸಾಹಾರವನ್ನು ಸೇವಿಸುವುದಿಲ್ಲ. ಮುಂದೆ ಮರಿಮಕ್ಕಳೆಲ್ಲಾ ಸತ್ತರೂ ಆಕೆಯ ಯೌವನ ಕುಂದಲು ಬಹಳ ವರ್ಷಗಳೇ ಹಿಡಿಯುತ್ತವೆ. ಒಂಬತ್ತು ವರ್ಷದ ಪಂಪಾ ತಾಯಿಯ ಚಿತೆಗೆ ಬೆನ್ನುಹಾಕಿ ನಡೆದಾಗ ದೈವೀಶಕ್ತಿಯೊಂದು ಅವಳನ್ನು ಆವಾಹಿಸುತ್ತದೆ. ಕೆಲವು ವರ್ಷಗಳಾದ ಮೇಲೆ ಮೊದಲು ಹಸುಕಾಯುವವರಾಗಿದ್ದು ನಂತರ ಸೈನಿಕರಾಗಿ ಯುದ್ಧವೊಂದರಲ್ಲಿ ಸೋತು ಪಲಾಯನ ಮಾಡುತ್ತಿದ್ದ ಹಕ್ಕ–ಬುಕ್ಕರ ಪ್ರವೇಶವಾಗುತ್ತದೆ.

ಪಂಪಾ ಕಂಪನಳು ಸಂಗಮ ಸಹೋದರ(ಹಕ್ಕ–ಬುಕ್ಕ)ರಿಗೆ ಮಾಂತ್ರಿಕ ಬೀಜಗಳ ಚೀಲವನ್ನು ನೀಡುತ್ತಾಳೆ. ಅವನ್ನು ಬಿತ್ತಿದ ಪ್ರದೇಶದಲ್ಲಿ ಗಾಳಿಯ ಕಣಗಳು ಮಿರುಗಲು ಪ್ರಾರಂಭಿಸಿ 'ಮಾಯಾನಗರಿ'ಯೊಂದು ಜೀವತಾಳುವುದಕ್ಕೆ ಆರಂಭವಾಗುತ್ತದೆ. ಅರಮನೆ, ದೇವಾಲಯಗಳು, ಕೊನೆಗೆ ಮನುಷ್ಯರೂ ಪವಾಡಸದೃಶವಾಗಿ ಗೋಚರಿಸುತ್ತಾರೆ. ಅವರ ಸ್ಮೃತಿಗಳೆಲ್ಲ ಪಂಪಾಳ ಸೃಷ್ಟಿ. ಸಕಲ ಸೇನೆಗಳು, ಗಜಪಡೆಗಳು ರಕ್ಷಣಾಕಾರ್ಯಕ್ಕೆ ಸಿದ್ಧವಾಗುತ್ತವೆ. ಆ ಸಹೋದರರು ಭರತಖಂಡದ ಶ್ರೇಷ್ಠ ರಾಜರಲ್ಲೊಬ್ಬರಾಗುತ್ತಾರೆ. ಮೊದಲಿಗೆ ಹಕ್ಕನ

ಆಡಳಿತ, ನಂತರ ಬುಕ್ಕನದು. ಪಂಪಾ ಕಾಲಾನುಕ್ರಮವಾಗಿ ಇಬ್ಬರನ್ನೂ ವರಿಸುತ್ತಾಳೆ. ಆದರೆ ಅವಳ ನಿಜಪ್ರೇಮಿ ಪೋರ್ಚುಗೀಸಿನಿಂದ ಬಂದ ಕುದುರೆ ವರ್ತಕ. ಆತ ಹಕ್ಕ ಬುಕ್ಕರಿಗೆ ಪಟಾಕಿ ತಯಾರಿಕೆ ಮತ್ತು ಅದಕ್ಕಿಂತ ಮುಖ್ಯವಾಗಿ ಬಂದೂಕಿನ ಪರಿಚಯ ಮಾಡಿಸುತ್ತಾನೆ.

ಈ ಸಹೋದರರು ಶಾಂತಿಪ್ರಿಯರೆಂದು ಹೇಳಿಕೊಂಡರೂ ಶಾಂತಿಯನ್ನು ಕಾಪಾಡುವುದಕ್ಕಾಗಿಯೇ ಯುದ್ಧಗಳನ್ನು ಮಾಡುತ್ತಾರೆ. ಆದರೆ ತಮ್ಮ ರಾಜ್ಯದೊಳಗೆ ಭುಗಿಲೇಳುತ್ತಿದ್ದ ಅಸಹಿಷ್ಣುತೆಯನ್ನು ದಮನ ಮಾಡುವುದರಲ್ಲಿ, ಒಬ್ಬ ಕಟ್ಟಾ ಸಂಪ್ರದಾಯವಾದಿಯ ಧೋರಣೆಗಳು ತಮ್ಮ ಸಾಮ್ರಾಜ್ಯದ ಮೂಲ ಧ್ಯೇಯವಾದ ಬಹುಸಾಂಸ್ಕೃತಿಕ ಸಾಮಾಜಿಕ ವ್ಯವಸ್ಥೆಯ ಅಡಿಪಾಯವನ್ನು ಶಿಥಿಲಗೊಳಿಸುವುದನ್ನು ತಡೆಯುವುದರಲ್ಲಿ ಸೋಲುತ್ತಾರೆ.

ಪಂಪಾ ಪ್ರಗತಿಪರ ಭವಿಷ್ಯಕ್ಕೆ ಸಲ್ಲುವವಳಾದರೂ ತನ್ನ ಗತವನ್ನು ಮರೆಯದ ಹೆಣ್ಣು. ಅವಳು ನೋಡುವವರ ಮೈ ಜುಮ್ಮೆನಿಸುವಷ್ಟು ನಿರ್ಭಿಡೆ ಸ್ವಭಾವದವಳು, ತೋರಿಕೆಯ ಶಿಷ್ಟತೆ ಅವಳಲ್ಲಿಲ್ಲ. ಬರೀ ಅವಳ ಕಾಲದಲ್ಲೇ ಅಲ್ಲ, ನಮ್ಮ ಕಾಲದ ಮಟ್ಟಕ್ಕೂ ಅವಳ ಕಸುವು, ಎದೆಗಾರಿಕೆ ಬೆಚ್ಚುಬೀಳಿಸುವಂತದ್ದು. ಅವಳ ಎಂಟೆದೆ ಎಂತಹುದೆಂದರೆ 'ನಾವು ಅತಿ ಶಿಷ್ಟತೆಯನ್ನು ಪ್ರದರ್ಶಿಸುತ್ತೇವೆ, ನಾವೂ ಅವಳಂತೆ ಏಕಿರಬಾರದು?' ಎಂದು ನಮ್ಮನ್ನು ನಾವು ನಯವಾಗಿ ತಿವಿದುಕೊಳ್ಳುವಷ್ಟು!.

ಹಕ್ಕ ಪಂಪಾಳ ಮುಂದೆ ಮದುವೆಯ ಪ್ರಸ್ತಾಪವಿಟ್ಟಾಗ ಅವಳು ವಿವೇಕದಿಂದಲೇ ಉತ್ತರಿಸುತ್ತಾಳೆ: "ಲೋಕ ಕಲ್ಯಾಣಕ್ಕಾಗಿ ಅವಶ್ಯವಿರುವ ಕಾರ್ಯಗಳನ್ನು ಮಾಡಲೇಬೇಕು. ಈ ಸಾಮ್ರಾಜ್ಯದ ವಂಶಾವಳಿಯನ್ನು ಬೆಳೆಸುವುದಕ್ಕಾಗಿ ನಾನು ನಿನ್ನ ಕೈ ಹಿಡಿಯುತ್ತೇನೆ." ಆದರೆ ತನ್ನ ಮತ್ತು ಪೋರ್ಚುಗೀಸನ ಸಂಬಂಧ ಮುಂದುವರೆಯುವುದಕ್ಕೆ ಅವಕಾಶವಿದ್ದರೆ ಮಾತ್ರ ಈ ಮದುವೆ ಸಾಧ್ಯ ಎಂಬ ಷರತ್ತನ್ನೂ ಇಡುತ್ತಾಳೆ. ಆ ಪೋರ್ಚುಗೀಸನೋ, ಉಷಾಕಿರಣ ತಾಕಿದ ಹುಲ್ಲಿನಂತೆ ಹೊಳೆಯುವ ಹಸಿರು ಕಣ್ಣುಳ್ಳವ ಮತ್ತು ಅವನ ಕೂದಲು ಮುಳುಗುವ ಸೂರ್ಯನಂತೆ ಕೆಂಪು ಕೆಂಪು. ಆದರೆ ಅವಳ ಸೌಂದರ್ಯ, ಶಕ್ತಿಗಳಿಗೆ ಮಾರುಹೋಗಿ ಹುಚ್ಚನಂತೆ ಅವಳನ್ನು ಮೋಹಿಸಿದ್ದ ಹಕ್ಕ, ಈ ಅಸಾಂಪ್ರದಾಯಿಕ ಒಪ್ಪಂದಕ್ಕೂ ಬೆಂಬಲ ನೀಡುತ್ತಾನೆ. "ನೀನು ತೀರಾ ಅಪಾಯಕಾರಿ" ಎಂದು ಉತ್ಕಟತೆಯಿಂದ ನುಡಿಯುತ್ತಾನೆ. ಆದರೆ ಅವಳಿಗೆ ಈ ಪ್ರೇಮಪೂರಿತ ಮಾತುಗಳೆಲ್ಲ ಒಂದು ರೀತಿಯ ಎಚ್ಚರಿಕೆ ಎಂದು ಅರ್ಥವಾಗಬೇಕಿತ್ತು. ಅನೇಕ ಮಂದಿಗೆ ಮುಖ್ಯವಾಗಿ ಪೋರ್ಚುಗೀಸನಿಗೆ 'ವಿಜಯನಗರ' ಎಂದು ಉಚ್ಚರಿಸಲು ಬಾರದ ಕಾರಣ ಅದು 'ಬಿಸ್ನಾಗ' ಎಂದಾಗುತ್ತದೆ.

ಪಂಪಾಳ ಸ್ವೇಚ್ಛಾಚಾರದ ವರ್ತನೆ ವಿಜಯನಗರದ ಸಾಮ್ರಾಜ್ಯದಲ್ಲಿ ಅಸ್ಥಿರತೆ-ಯನ್ನುಂಟುಮಾಡುವುದಕ್ಕೆ ಕಾರಣವಾಗುತ್ತದೆ. ಪಂಪಾ ಮತ್ತು ಹಕ್ಕರದು ವಿಫಲ ದಾಂಪತ್ಯ. ಪಂಪಾಳ ಹೆಣ್ಣುಮಕ್ಕಳ ಹೊಳೆಯುವ ಹಸಿರು ಕಣ್ಣುಗಳು ಮತ್ತು ಕೆಂಪು ಕೂದಲು

ಹಕ್ಕನ ಕೊರಗು, ಅಸಮಾಧಾನಗಳನ್ನು ಹೆಚ್ಚಿಸುತ್ತವೆ. ಹಕ್ಕನು ಅತಿ ಮಡಿವಂತಿಕೆಯ, ಸೋಗಿನ, ಸಿಡುಕು ಸ್ವಭಾವದವನಾದ ಗುರು ವಿದ್ಯಾಸಾಗರನ ಪ್ರಭಾವಕ್ಕೆ ಒಳಗಾಗುತ್ತಾನೆ. ಈತ 'ಹೊಸಧರ್ಮ' ಎಂಬ ಪಂಥವೊಂದನ್ನು ಕಟ್ಟಿ ವಿಜಯನಗರದ 'ಅನೈತಿಕತೆ'ಯನ್ನು ಸರಿಪಡಿಸುತ್ತೇನೆ ಎಂದು ಹೊರಟಿರುತ್ತಾನೆ. ಈ ವಿದ್ಯಾಸಾಗರ ಪಂಪಾಳ ಬದುಕಿನಲ್ಲೊಂದು ನೋವಿನ ಅಧ್ಯಾಯ ಬರೆದವನು. ಅವಳು ಅನಾಥೆಯಾದ ಮೇಲೆ ಆಶ್ರಯ ನೀಡುವ ನೆಪದಲ್ಲಿ ಅವಳ ಮೇಲೆ ಅನೇಕ ವರ್ಷಗಳ ಕಾಲ ಅತ್ಯಾಚಾರವನ್ನೆಸಗಿದ್ದವನು. ಈಗ ಹಕ್ಕನಿಗೆ ಗುರುವಾಗುತ್ತಾನೆ. ಇವರಿಬ್ಬರೂ ಸೇರಿ ರಾಜ್ಯದ ಸಕಲ ಜೀವಿಗಳನ್ನೂ ದೇಶಭ್ರಷ್ಟರನ್ನಾಗಿ ಮಾಡುವ ಮೊದಲೇ ಅದೃಷ್ಟವಶಾತ್ ಹಕ್ಕ ಮರಣವನ್ನಪ್ಪುತ್ತಾನೆ. ನಂತರ ಪಟ್ಟಕ್ಕೇರಿದ ಬುಕ್ಕ ವಿಶಾಲ ಮನಸ್ಸುಳ್ಳ ಪ್ರಸನ್ನ ಸ್ವಭಾವದವನು. ಈ ವೇಳೆಗೆ ಪಂಪಾಳ ಪೋರ್ಚುಗೀಸ್ ಪ್ರೇಮಿಯೂ ತೀರಿಕೊಂಡಿರುತ್ತಾನೆ. ಪಂಪಾ ಪ್ರೀತಿಯಿಂದಲೇ ಅವನನ್ನು ವರಿಸುತ್ತಾಳೆ. ಬುಕ್ಕ ಪಂಪಾಳ ಇಚ್ಛೆಯಂತೆ ನಗರದಲ್ಲಿ ಎಲ್ಲೆಡೆ ಶೃಂಗಾರ ಶಿಲ್ಪಗಳನ್ನು, ಕಾಮಪ್ರಚೋದಕ ಕೆತ್ತನೆಗಳನ್ನು ಮಾಡಿಸುತ್ತಾನೆ. ಇದು ಈ ಸಾಮ್ರಾಜ್ಯದ ಮೊದಲನೆಯ ಸ್ವರ್ಣಯುಗ.

ಮಾಂತ್ರಿಕ ಬೀಜಗಳ ಪವಾಡದಿಂದ ವಿಜಯನಗರ ನಳನಳಿಸುವ ಮಹಾನಗರಿಯಾಗಿ ಮಾರ್ಪಡುತ್ತದೆ. ಸುತ್ತಮುತ್ತಲಿನ ಸಾಮ್ರಾಜ್ಯಗಳು ಆಕ್ರಮಣಕಾರಿ ವಸಾಹತುಶಾಹೀ ರಾಜ್ಯಗಳು. ಈಗ ವಿಜಯನಗರ ಪ್ರವರ್ಧಮಾನಕ್ಕೆ ಬಂದ, ಆದರೆ ಕೆಲವೊಮ್ಮೆ ರಾಜಕೀಯ ಕಳವಳಗಳಿರುವ ಊಳಿಗಮಾನ್ಯ ಪದ್ಧತಿಯ ರಾಜ್ಯ. ಸಂಗಮ ಸಹೋದರರು ತಮ್ಮ ಆಧಿಪತ್ಯ, ಸ್ಥಾನಗಳನ್ನು ಉಳಿಸಿಕೊಳ್ಳಲು ಹೋರಾಟದ ದಾರಿ ಹಿಡಿದರೆ ಪಂಪಾ ತನ್ನ ರಾಜ್ಯದಲ್ಲಿ ಸ್ತ್ರೀಯರ ಉನ್ನತಿ, ರಕ್ಷಣೆಗಳಿಗಾಗಿ ದೃಢಸಂಕಲ್ಪದಿಂದ ಶ್ರಮಿಸುತ್ತಾಳೆ. ದುರದೃಷ್ಟವಶಾತ್ ಮುಂದಿನ ದಿನಗಳಲ್ಲಿ ರಾಜಕೀಯ ಮಹತ್ವಾಕಾಂಕ್ಷೆ ಮತ್ತು ಮತಾಂಧತೆಗಳೇ ಮೇಲುಗೈ ಪಡೆದು ಪಂಪಾ ತನ್ನ ಹೆಣ್ಣುಮಕ್ಕಳೊಂದಿಗೆ ವಿಜಯನಗರವನ್ನು ತೊರೆದು ದೇಶಾಂತರ ಹೋಗುವ ದುರ್ದೈವ ಬಂದೊದಗುತ್ತದೆ. ಮತ್ತೆ ಮರಳುವ ಹಾಗೂ ರಾಜ್ಯದ ಸ್ತ್ರೀಯರಿಗೆ ಕಳೆದುಹೋದ ಮಾನ ಸಮ್ಮಾನಗಳನ್ನು ಪುನಃ ದೊರಕಿಸಿಕೊಡುವ ಪ್ರತಿಜ್ಞೆ ಮಾಡಿ ಪಂಪಾ ತೆರಳುತ್ತಾಳೆ.

ಪಂಪಾಳಿಗೆ ಒದಗಿದ ದೈವೀಶಕ್ತಿಯ ಫಲವಾಗಿ ಆಕೆ ಶತಕಗಳವರೆಗೆ ಜೀವಿಸುತ್ತಾಳೆ. ಗಂಡಂದಿರು, ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳು ಅವರ ಮಕ್ಕಳು ಎಲ್ಲರೂ ಅಸು ನೀಗಿದರೂ ಪಂಪಾ ಇನ್ನೂ ಬದುಕಿರುತ್ತಾಳೆ. ಅವಳೊಂದಿಗೇ ಅವಳ ಪ್ರತಿಜ್ಞೆಯೂ ಜೀವಂತವಾಗಿರುತ್ತದೆ. ಹಲವು ದಶಕಗಳ ನಂತರ ವಿಜಯನಗರಕ್ಕೆ ಮರಳುವ ಪಂಪಾ ಮತ್ತೆ ರಾಜ್ಯದಲ್ಲಿ ಸ್ತ್ರೀಯರಿಗೆ ಶಿಕ್ಷಣ, ವೃತ್ತಿ ಸ್ವಾತಂತ್ರ್ಯ, ದೇಶದ ರಕ್ಷಣಾ ವ್ಯವಸ್ಥೆಯಲ್ಲಿ ಸೇರ್ಪಡೆ ಮತ್ತು ಪುರುಷರಿಗಿಂತಲೂ ಉತ್ತಮವಾಗಿ ಹೋರಾಡುವಂತೆ ಅತ್ಯುತ್ತಮ ತರಬೇತಿಗಳನ್ನು ದೊರಕಿಸಿಕೊಡುವಲ್ಲಿ ಸಫಲಳಾಗುತ್ತಾಳೆ. ಆದರೆ ಆಧಿಪತ್ಯ ಬದಲಾದಾಗ ಮತ್ತೆ ಸಾಂಪ್ರದಾಯಿಕ ಕಟ್ಟಾಚಾರಗಳು, ಮತಾಂಧತೆ, ಧರ್ಮಾಂಧತೆಗಳಿಂದ ಕಲುಷಿತಗೊಂಡ

ವ್ಯವಸ್ಥೆಯಿಂದ ಸ್ತ್ರೀಕುಲದ ಬಗ್ಗೆ ಅಸಹನೀಯವಾದ ಧೋರಣೆಗಳು ಹೆಚ್ಚಾಗುತ್ತವೆ. ಕ್ರಮೇಣವಾಗಿ ಪಂಪಾ ನೇಪಥ್ಯಕ್ಕೆ ತಳ್ಳಲ್ಪಡುತ್ತಾಳೆ.

"ಧರ್ಮಾಧಿಕಾರಿಗಳ ಪ್ರಪಂಚ ಮತ್ತು ರಾಜ್ಯಾಧಿಕಾರ ಒಂದಕ್ಕೊಂದು ಬೆಸೆದುಕೊಳ್ಳುವಷ್ಟು ಹತ್ತಿರವಾಗಿವೆ" ಎನ್ನುತ್ತಾನೆ ಸೂತ್ರಧಾರ.

ಪಂಪಾ ಮತ್ತು ಆಗಿನ ರಾಜನ ನಡುವೆ ತೀವ್ರವಾದ ವೈಷಮ್ಯ ಉಂಟಾಗುತ್ತದೆ. ಆ ಮಹಾರಾಜ ಪಂಪಾಳ ಕಣ್ಣು ಕಿತ್ತು ಅವಳನ್ನು ಅಂಧಳನ್ನಾಗಿಸಲು ಆಜ್ಞಾಪಿಸುತ್ತಾನೆ. ಕೆಂಪಗೆ ಕಾದ ಕಬ್ಬಿಣದ ಸಲಾಕೆಯಿಂದ ಈ ಶಿಕ್ಷೆ ನೀಡಲಾಗುತ್ತದೆ. ಪಂಪಾ ಇದಕ್ಕಿಂತ ಸಾವೇ ಮೇಲು ಅನ್ನಿಸುವಷ್ಟು ಅಸಹನೀಯ ವೇದನೆಯಿಂದ ನರಳುತ್ತಾಳೆ. ಅವಳಿಗೆ ಭಯಂಕರವಾದ ಕನಸುಗಳು ಬೀಳುತ್ತವೆ. ಆ ಆಘಾತದಿಂದ ದೇಹದ ಪ್ರತಿ ರಂಧ್ರದಿಂದಲೂ ಬೆವರು ಸುರಿಯುತ್ತದೆ. ಆದರೆ ಆ ಕಗ್ಗತ್ತಲು ಎಲ್ಲವನ್ನೂ ನುಂಗಲು ಸಾಧ್ಯವಾಗುವುದಿಲ್ಲ. ಅವಳ ಮನಸ್ಸಿನಲ್ಲಿ ಬಿಂಬಗಳು, ಚಿತ್ರಗಳು ಇನ್ನೂ ಮೂಡುತ್ತಿರುತ್ತವೆ. ಈ ಅಂಧಕಾರದ ಮುನ್ಸೂಚನೆ ಕಾದಂಬರಿಯ ಮೊದಲ ಸಾಲಿನಲ್ಲೇ ಸಿಗುತ್ತದೆ. [ಇದನ್ನು ಬರೆದಾಗ ರಶ್ದಿ 2022ರ ಆಗಸ್ಟಿನಲ್ಲಿ ತಾನೇ ಇಂತಹ ಕ್ರೂರ ದಾಳಿಗೆ ತುತ್ತಾಗಿ ಕಣ್ಣೊಂದನ್ನು ಕಳೆದುಕೊಳ್ಳುತ್ತೇನೆಂಬ ಕಲ್ಪನೆ ಕೂಡಾ ಮಾಡಿರಲು ಸಾಧ್ಯವಿಲ್ಲ. 'ಸಟಾನಿಕ್ ವರ್ಸಸ್' ಎಂಬ ಪುಸ್ತಕದ ಕೇವಲ ಎರಡು ಪುಟಗಳನ್ನು ಓದಿದ ಮತಾಂಧ ಮತಿಗೆಟ್ಟವನೊಬ್ಬ ರಶ್ದಿಯನ್ನು ಅಮಾನುಷವಾಗಿ ಹಲವು ಬಾರಿ ಇರಿದು ಕೊಲ್ಲಲು ಯತ್ನಿಸಿದ. ಇದು ವಿಪರ್ಯಾಸವೇ ಸರಿ.]

ಕಾದಂಬರಿಯ ಈ ತಿರುವಿನಲ್ಲಿ ರಶ್ದಿಯ ಬರವಣಿಗೆ ಹೀಗೆ ಸಾಗುತ್ತದೆ. 'ಬಿಸ್ನಾಗದ ಸಂಪೂರ್ಣ ಅವನತಿಗೆ ಇನ್ನೂ ನಲವತ್ತು ವರ್ಷಗಳು ಉಳಿದಿದ್ದರೂ ಆ ಸಾಮ್ರಾಜ್ಯದ ನಿಶ್ಚಿತ ಅಧಃಪತನಕ್ಕೆ ಚಾಲನೆ ಸಿಕ್ಕಿದ್ದು ಪಂಪಾಳನ್ನು ಅಂಧಳನ್ನಾಗಿಸುವ ಕೃಷ್ಣದೇವರಾಯನ ಈ ಭಯಂಕರ ದುರುದ್ದೇಶದ ಆದೇಶ ಹೊರಟ ಸಮಯದಿಂದ. ಪಂಪಾಳ ಕಣ್ಣನ್ನು ಕೀಳುವುದಕ್ಕಾಗಿ ಅವಳನ್ನು ಕರೆದುಕೊಂಡು ಹೋಗುತ್ತಿದ್ದಾಗ ಅವಳ ಅಂಗರಕ್ಷಕರು, ಪೇಟೆಯಲ್ಲಿದ್ದ ಎಲ್ಲ ಜನರು, ಅವಳ ಕಣ್ಣನ್ನು ಕಿತ್ತ ಕಮ್ಮಾರ, ಹೀಗೆ ಎಲ್ಲರೂ ಬಹಳ ಅಳುತ್ತಿದ್ದರು. ಆ ರೋದನ, ಕಣ್ಣೀರು ಆರಲೇ ಇಲ್ಲ. ಬದಲಾಗಿ ಎಷ್ಟು ಅಗಾಧವಾಯಿತೆಂದರೆ ಇಡೀ ನಗರವೇ ಕಣ್ಣೀರು ಹಾಕತೊಡಗಿದಾಗ ಆ ಕಣ್ಣೀರಿನ ಕೋಡಿ ಹರಿದು ನಗರಬೀದಿಗಳನ್ನು, ಸಣ್ಣ ಓಣಿಗಳನ್ನು ತುಂಬಿಸಿ ಎಲ್ಲಾ ಕಿಟಕಿ, ಬಾಗಿಲುಗಳಿಂದಲೂ ಹರಿಯತೊಡಗಿತು. ಗಾಳಿಯೇ ಕಣ್ಣೀರಿಡುವವರೆಗೆ, ಭೂಮಿಯೇ ಭಾರವಾದ ನಿಟ್ಟುಸಿರಿಡುವವರೆಗೆ ಅದು ನಿಲ್ಲಲಿಲ್ಲ.

ಇದರ ಪರಿಣಾಮವಾಗಿ ಪ್ರಜೆಗಳಿಗೆ ಕೃಷ್ಣದೇವರಾಯನ ಮೇಲಿದ್ದ ಅಭಿಪ್ರಾಯವೇ ಬದಲಾಯಿತು. 'ಅವನ ವೈಭವದ ಸೂರ್ಯ ಅಸ್ತಂಗಿಸಲು ಪ್ರಾರಂಭಿಸಿದ. ಇನ್ನೆಂದೂ ಅವನು ಮರಳಿ ಉದಯಿಸಲಿಲ್ಲ.'

ಬಹಳ ಕಾಲದ ನಂತರ ವಿಜಯನಗರ ಭ್ರಷ್ಟ, ಪುರೋಹಿತಶಾಹಿ ಆಡಳಿತಕ್ಕೆ

ಒಳಗಾದ ಸಮಯದಲ್ಲಿ ಅಲ್ಲಿನ ಪ್ರಜೆಗಳಿಗೆ ಸಾಮ್ರಾಜ್ಯದ ಚರಿತ್ರೆಯ ಬಗ್ಗೆ ಅಸಡ್ಡೆ ಇರುವುದನ್ನು ನಿರೂಪಕ ಗಮನಿಸುತ್ತಾನೆ. ಅವರು ಪ್ರಸ್ತುತ ಕ್ಷಣದಲ್ಲಿ ಬದುಕುವುದರಲ್ಲಿಯೇ ಸಾರ್ಥಕತೆ ಕಂಡುಕೊಳ್ಳುವವರು. ರಶ್ದಿ ಇದರ ಬಗ್ಗೆ ಹೀಗೆನ್ನುತ್ತಾನೆ 'ಇದು ಬಿಸ್ನಾಗವನ್ನು ಒಂದು ಸಬಲ ಕ್ರಿಯಾತ್ಮಕ ಸಮಾಜವನ್ನಾಗಿ ಮಾಡಿದೆ. ಇಲ್ಲಿ ಅದ್ಭುತವಾದ ಪ್ರಗತಿಪರ ಚಿಂತನೆಗಳಿಗೆ ಅವಕಾಶವಿರುವ ವಾತಾವರಣ ಏರ್ಪಟ್ಟಿದೆ. ಅದರೊಂದಿಗೇ ಇದೊಂದು ಮರೆವಿನ ತೊಂದರೆಯಿಂದ ಪೀಡಿತವಾದ ತಾಣವೂ ಹೌದು. ನಮ್ಮನ್ನು ಚರಿತ್ರೆಯಿಂದ ವಿಮುಖಗೊಳಿಸುವುದೇ ಮತ್ತೆ ನಮ್ಮನ್ನು ಅದೇ ಅಪರಾಧಗಳನ್ನು ಪುನರಾವರ್ತಿಸುವಂತೆ ಮಾಡುತ್ತದೆ.' ಈ ಚಿಂತನೆ ಅಭಿವೃದ್ಧಿಯಾಗುತ್ತಿರುವ ಎಲ್ಲಾ ದೇಶಗಳಿಗೂ ಅನ್ವಯವಾದರೂ ಅಮೇರಿಕೆಯ ಬಗ್ಗೆ ಇರುವ ಪ್ರಚಲಿತ ಟೀಕೆಯನ್ನು ಪ್ರತಿಧ್ವನಿಸುತ್ತದೆ. ನಾವು ಇತಿಹಾಸದ ಪುಟಗಳಿಂದ ಪಾಠ ಕಲಿಯುವುದಿಲ್ಲ. ಹಾಗಾಗಿ ಮತ್ತೆ ಹಿಂದಿನ ತಪ್ಪುಗಳನ್ನೇ ಮರುಕಳಿಸುವ ಅಪಾಯಕ್ಕೆ ಸಿಲುಕುತ್ತೇವೆ.

'ಮಿಕ್ಕುಳಿಯುವುದು ಇಷ್ಟೇ – ಈ ಪದಗಳ ನಗರ' ಎಂದು ನುಡಿದು ಕವಿ ಪಂಪಾ ತನ್ನ ಮಹಾಕಾವ್ಯವನ್ನು ಸಮಾಪ್ತಿಗೊಳಿಸುತ್ತಾಳೆ. ತನ್ನ ಸಂದೇಶವನ್ನು ಕುಡಿಕೆಯಲ್ಲಿಟ್ಟು ಮುಂದಿನ ಪೀಳಿಗೆಗಳಿಗಾಗಿ ಬಚ್ಚಿಡುತ್ತಾಳೆ. ತನ್ನ ಸಾಮ್ರಾಜ್ಯದ ಪರಾಕಾಷ್ಠೆ – ಅವನತಿಗಳನ್ನು ಪುನರಾವಲೋಕಿಸುತ್ತ ಉದ್ಗರಿಸುತ್ತಾಳೆ "ಪದಗಳಷ್ಟೇ ವಿಜಯಿಗಳು". ಮುನ್ನ ಆಳಿದ ಅರಸ – ಅರಸಿಯರು ಹೇಗೆ ನೆನಪಿನಲ್ಲಿ ಉಳಿಯುತ್ತಾರೆ ಎಂದು ಪ್ರಶ್ನಿಸಿಕೊಂಡು ತಾನೇ ಸಮಾಧಾನ ಹೇಳುತ್ತಾಳೆ.. "ಪದಗಳ ರೂಪದಲ್ಲಷ್ಟೇ."

"ಜೀವಂತವಿರುವವರೆಗೆ ಅವರು ವಿಜೇತರು ಇಲ್ಲವೇ ಪರಾಜಿತರು.
ಈ ಕ್ಷಣಕ್ಕೆ ಎರಡೂ ಅಲ್ಲದವರು.
ಪದಗಳಷ್ಟೇ ವಿಜಯಿಗಳು."

ಇಲ್ಲಿ ಮಹತ್ತರವಾದುದೇನೆಂದರೆ ವಿಕ್ಟರಿ ಸಿಟಿ(ವಿಜಯನಗರ) ಒಂದು ಜಯಭೇರಿ, ಮಹಾಸಾಧನೆ. ಅದು ಅಸ್ತಿತ್ವದಲ್ಲಿತ್ತು ಎಂಬ ಕಾರಣಕ್ಕಲ್ಲ. ಈ ಕಥೆ ಸಂಪೂರ್ಣವಾಗಿ ಮನಮೋಹಕವಾದುದು ಎಂಬುದಕ್ಕೆ. ಪದಗಳೇ ಅಂತಿಮ ವಿಜೇತರು. ಅಸಲಿಗೆ ಕಟ್ಟಕಡೆಗೆ ಮಾನವ ಚರಿತ್ರೆಯ ನಿಜಸ್ವರೂಪವೆಂದರೆ ಇಷ್ಟೇ, ಪದಗಳು.

ರಶ್ದಿಯ ಮಹಾಗಾಥೆ ಆ ಮಾಯಾ ಪ್ರಪಂಚವನ್ನು ಓದುಗರು ಮಂತ್ರಮುಗ್ಧ-ರಾಗುವಂತೆ ಅಗಾಧರೀತಿಯಲ್ಲಿ ಕಟ್ಟಿಕೊಡುತ್ತದೆ. ಅಲ್ಲಿ ನಗರದ ಸುತ್ತ ಮರಳಿನ ದೊಡ್ಡ ದೊಡ್ಡ ಗೋಡೆಗಳು ಎದ್ದು ನಿಲ್ಲುತ್ತವೆ. ಮನುಷ್ಯರು ಹಕ್ಕಿಗಳಾಗುತ್ತಾರೆ. ಆದರೆ ಇಷ್ಟಾದರೂ ನಗರದೊಳಗೆ ನೂರಾರು ವರ್ಷಗಳ ಚರಿತ್ರೆಯಲ್ಲಿ ಕೊನೆಗಾಣದ ಅವೇ ಅರ್ಥವಿಲ್ಲದ ರಾಜಕೀಯ, ಧಾರ್ಮಿಕ ಸಂಘರ್ಷಗಳು. ಸೃಷ್ಟಿ – ಸರ್ವನಾಶಗಳು, ಸ್ತ್ರೀದ್ವೇಷೀ, ಪುರುಷಪ್ರಧಾನ ಸಮಾಜದಲ್ಲಿ ಸ್ತ್ರೀ ಸ್ವಾತಂತ್ರ್ಯಕ್ಕೆ ಆಗಾಗ್ಗೆ ದೊರಕುವ ಗೆಲುವು, ಮತ್ತೆ ಮತ್ತೆ ಚಕ್ರದಂತೆ ಇವೆಲ್ಲದರ ಮರುಕಳಿಕೆ.

* * *

ಜನರ ನೆನಪುಗಳನ್ನು ತುಂಬಲು ಮತ್ತು ನಂತರ ಅವರ ಆಲೋಚನೆಗಳನ್ನು ತನಗೆ ಬೇಕಾದಂತೆ ರೂಪಿಸಲು ಪಂಪಾ ತನ್ನ ರಾಜ್ಯದ ಪ್ರಜೆಗಳ ಕಿವಿಯಲ್ಲಿ 'ಪಿಸುಗುಡುತ್ತಾಳೆ'. ಇಲ್ಲಿ ರಶ್ದಿ ತನ್ನ ಕಲ್ಪನಾಶಕ್ತಿಯಿಂದ ಕೂಡಿದ ಬರವಣಿಗೆಯ ಶೈಲಿಯಿಂದ ಓದುಗರನ್ನು ವಿಸ್ಮಯಗೊಳಿಸುತ್ತಾನೆ. ('ನಿಶ್ಶಬ್ದ ಪಿಸುಮಾತುಗಳು'). ನಾವು ನಮ್ಮ ಚರಿತ್ರೆಗಳನ್ನೆಲ್ಲ ದಂತಕಥೆಗಳನ್ನಾಗಿಸುತ್ತೇವೆಯೇ ಹೊರತು ಅದರ ಕಿವಿಮಾತುಗಳನ್ನು ಮರೆಯುತ್ತೇವೆ.

'ವಿಕ್ಟರಿ ಸಿಟಿ' ಇಂದಿನ ಭಾರತದ ಸಾಂಕೇತಿಕ ರೂಪಕವೋ, ಸ್ತ್ರೀಯೊಬ್ಬಳ ದೃಷ್ಟಿಕೋನದಿಂದ ಕಟ್ಟಿಕೊಟ್ಟ ಪೂರ್ವ ವಸಾಹತು ಯುಗದ ಸಾಮ್ರಾಜ್ಯವೊಂದರ ಚರಿತ್ರೆಯ ಪುನರ್ ಸೃಷ್ಟಿಯೋ ಅಥವಾ ಈ ಎರಡೂ ಆಗಿರಬಹುದು. ಆದರೆ ಇದು ಸ್ತ್ರೀಯೊಬ್ಬಳ ಅಂತಃಶಕ್ತಿ, ಎದೆಗಾರಿಕೆಗಳನ್ನು ಕೊಂಡಾಡುವ ಕೃತಿಯೆನ್ನುವುದು ನಿಜ. ಒಂದೊಮ್ಮೆ ಅಸಹಾಯ, ಅನಾಥ ಬಾಲೆಯಾದ ಪಂಪಾ ತನ್ನ ಮತ್ತು ತನ್ನಂತಹ ಇತರ ಹೆಣ್ಣುಗಳಿಗೆ ಸಮಾನತೆಯ ಅವಕಾಶವಿದೆಯೆಂಬ ಭರವಸೆಯಿಂದ ಜೀವನದಲ್ಲಿ ಮುನ್ನುಗ್ಗುತ್ತಾಳೆ. ಇದು ವಿಜಯನಗರದ ಒಳಗೆ ನಡೆಯುವ ಕಥೆ. ಆದರೆ ಅದನ್ನೂ ಮೀರಿ ಪಂಪಾಳಂತೆಯೇ ಕಾಲಾತೀತವಾದ, ಸಬಲೀಕರಣಗೊಳಿಸುವ ಕಥನ. ರಶ್ದಿ ಹೇಳುವಂತೆ 'ಕಲ್ಪಿತವೂ ಚರಿತ್ರೆಯಷ್ಟೇ ಸಶಕ್ತವಾಗಬಹುದು. ನಮಗೆ ನಮ್ಮ ಮತ್ತು ನಮ್ಮ ಸುತ್ತಲಿರುವವರ ನೈಜಸ್ವಭಾವದ ಅರಿವನ್ನು ಮೂಡಿಸುವ ಮೂಲಕ ಕಲ್ಪಿತವೂ ನಿಜವೇ ಆಗಬಹುದು.'

ಈ ಕಾದಂಬರಿಯ ಅಂತ್ಯ ವಿಷಾದಕರವಾಗಿ, ನಿರಾಶಾದಾಯಕವಾಗಿದ್ದರೂ ಇದೊಂದು ಬದುಕನ್ನು ಉತ್ಕಟವಾಗಿ, ಹರ್ಷದಿಂದ ಸಂಭ್ರಮಿಸುವ ಚೇತೋಹಾರಿ ಕಥನವೆನ್ನಬಹುದು. ವಿಜಯನಗರದ ಸೃಷ್ಟಿಯ ಪೌರಾಣಿಕ ಪ್ರಸಂಗದ ನಿರೂಪಣೆಯೂ ತಮಾಷೆ, ನಲಿವಿನಿಂದ ಕೂಡಿದೆ. ಆ ದಿನ ಬಿಸ್ನಾಗ ಸೃಷ್ಟಿಯಾಯಿತಲ್ಲ, ಅಂದು ರಾತ್ರಿ ಹೊಸದಾಗಿ ಟಂಕಿಸಲ್ಪಟ್ಟ ಮನುಷ್ಯರಲ್ಲಿ ಕೆಲವರು ರಸ್ತೆಗಳ ಮೇಲೆಯೇ ನಿದ್ರಿಸುತ್ತಿದ್ದರೆ ಮತ್ತೆ ಕೆಲವರು ನಿದ್ರೆಯಲ್ಲಿ ನಡೆಯುವವರಂತೆ ಅಡ್ಡಾಡುತ್ತಿದ್ದರು, ಕಸಿವಿಸಿಯಲ್ಲಿ ನೆಲದಲ್ಲಿ ಉರುಳಿಕೊಂಡು ಹೋಗುತ್ತಿದ್ದರು. ಪಂಪಾಳ 'ಪಿಸುಮಾತು' ಅವರೆಲ್ಲರ ಕಿವಿಯಲ್ಲಿ ತುಂಬಿ, ಅವರ ಮನಗಳಲ್ಲಿ ಕಾಲ್ಪನಿಕ ಪೂರ್ವಜರು, ಸುಳ್ಳಂಬಳ್ಳಿನ ನೆನಪುಗಳು ಮತ್ತು ಅವರೆಲ್ಲ ನಡೆದುಕೊಳ್ಳಬೇಕಾದ ರೀತಿ ನೀತಿಗಳನ್ನೆಲ್ಲ ಸೃಷ್ಟಿಸಿತು. ರಾತ್ರಿ ಕಳೆಯುತ್ತಿದ್ದಂತೆ ವಯಸ್ಕರೆಲ್ಲ ಅವರ ವಯಸ್ಸಿಗೆ ತಕ್ಕಂತೆ ವರ್ತಿಸುತ್ತಿದ್ದರೆ ಮಕ್ಕಳೆಲ್ಲ ಪಕ್ಕಾ ಮಕ್ಕಳಂತೆ ಬೀದಿಗಳಲ್ಲಿ ಓಡುತ್ತಿದ್ದರು. ಸೃಷ್ಟಿಪೂರ್ವದ ಅವ್ಯಕ್ತ ಸ್ಥಿತಿಯನ್ನು ದಾಟಿ ಬಹುಮಟ್ಟಿಗೆ ನಾಡೊಂದನ್ನು ಹೋಲುವಂತದ್ದೊಂದು ಅಲ್ಲಿ ರೂಪುಗೊಂಡಿತು. 'ಎಷ್ಟೋ ವರ್ಷಗಳಿಂದ ಅವರೆಲ್ಲ ಹಾಗೇ ಇದ್ದಂತೆ' ಎಂದು ರಶ್ದಿ ವಿವರಿಸುತ್ತಾನೆ 'ಮತ್ತು ದೀರ್ಘಕಾಲದಿಂದ ಅಸ್ತಿತ್ವದಲ್ಲಿದ್ದ ಪರಿವಾರವೊಂದರಂತೆ ಆ ನಗರದಲ್ಲಿ ಪ್ರೀತಿ ಮತ್ತು ಸಾವು, ಕಣ್ಣೀರು – ನಗುಗಳ ಕೇಕೆ, ನಿಷ್ಠೆ – ದ್ರೋಹ ಮತ್ತು ಇನ್ನೂ ಯಾವುವನ್ನು ಮನುಷ್ಯನ ಸಹಜ ಸಂವೇದನೆಗಳು ಎನ್ನಬಹುದೋ ಆ ಛಾಯೆಗಳೆಲ್ಲ ತುಂಬಿಕೊಂಡಿತ್ತು.'

ಈ ಕಾದಂಬರಿ ಜಾನಪದ ಹೊಳಹಿನ ಯಕ್ಷಿಣಿ ಕಥೆಗಳ ಚೌಕಟ್ಟಿನಲ್ಲೇ ಸಾಗುತ್ತದೆ. ಹಾಗೆಂದು ಇದರ ಸಾಲುಗಳು ಬಹಳ ಸಾಧಾರಣ, ಸರಳ ಎಂದೇನೂ ಅಲ್ಲ. ಪಂಪಾಳನ್ನು ಕುರುಡಾಗಿಸುವ ಭಾಗದಲ್ಲಿ ನೋಡಿದ ಹಾಗೆ ಈ ಕಥೆಯಲ್ಲಿ ಮಾಂತ್ರಿಕ ವಾಸ್ತವಿಕತೆಯ ತಂತ್ರವನ್ನು ಬಳಸಲಾಗಿದೆ. ಪಂಪಾ ದೇಶಾಂತರದಲ್ಲಿದ್ದಾಗ ಪಕ್ಷಿಗಳು ಮಾತಾಡುತ್ತವೆ. ಈಸೋಪನ ಕಥೆಗಳಂತೆ, ನಮ್ಮ ಜಾನಪದ ಕಥೆಗಳಲ್ಲಿ ಬರುವಂತೆ ವಿಜಯನಗರಕ್ಕೆ ಹಾರಿಹೋಗಿ ಅಲ್ಲಿನ ವಿದ್ಯಮಾನಗಳನ್ನೆಲ್ಲ ಕಲೆಹಾಕಿ ಬಂದು ಪಂಪಾಳಿಗೆ ವರದಿ ಒಪ್ಪಿಸುತ್ತವೆ. ಪಂಪಾಳ ಮಗಳು ಪ್ರೀತಿಸುವ ಚೀನಾ ದೇಶದ ಸೈನಿಕನಿಗೆ ಯಾತ್ರೆ ಮಾಡಲು ಅತಿಮಾನುಷ ಶಕ್ತಿಗಳಿರುತ್ತವೆ. ಇದು 'Crouching Tiger, Hidden Dragon' ಸಿನೆಮಾದ ಪಾತ್ರಗಳನ್ನು ನೆನೆಪಿಸುತ್ತದೆ. 330 ಪುಟಗಳಷ್ಟಿರುವ ಈ ಓದನ್ನು ಒಂದು ದಿವ್ಯವಾದ ಅನುಭವವನ್ನಾಗಿಸಲು ರಶ್ದಿ ವಿವಿಧ ತಂತ್ರಗಾರಿಕೆಗಳ ದಂಡನ್ನೇ ಬಳಸಿದ್ದಾನೆ.

ರಶ್ದಿ ವಿಕ್ಟರಿ ಸಿಟಿಯ ಸಂಕೀರ್ಣತೆಗಳಲ್ಲಿ ನಮ್ಮನ್ನು ಕಳೆದುಹೋಗಲು ಬಿಡುವುದಿಲ್ಲ. ಬದಲಾಗಿ ಪಂಪಾಳ ಮಾಂತ್ರಿಕ ಸಾಮ್ರಾಜ್ಯದ ಭವ್ಯ ಘಟನಾವಳಿಗಳ ಅನಾವರಣವನ್ನು ನಂಬುಗೆಯಿಂದ ಅನುಭವಿಸಲು ನಮ್ಮನ್ನು ತಯಾರು ಮಾಡುತ್ತಾನೆ. ಹಿತ-ಅಹಿತ ವಾದುದೆಲ್ಲವನ್ನೂ ಉಣಬಡಿಸುತ್ತಾನೆ. ಪಂಪಾಳ ಬದುಕು ಅಬ್ಬರವಿಲ್ಲದ, ಕಳೆದದ್ದನ್ನು ಮತ್ತೆ ಪಡೆಯುವ ಒಂದು ಯಾತ್ರೆ. ಅವಳ ಬದುಕು ಕಳೆಯುವುದು ತನ್ನ ಮತ್ತು ಇತರ ಸ್ತ್ರೀಯರ ಆತ್ಮಸಮ್ಮಾನದ ಶೋಧದಲ್ಲಿ. ಇದು ಪುನಶ್ಚೈತನ್ಯಕಾರಿಯಾದುದು. ರಶ್ದಿ ಕೆಲವೊಮ್ಮೆ ತನ್ನ ವಿಚಾರಗಳನ್ನು ಮುಂದಿಡಲು ವಿನೋದವನ್ನೂ ಬಳಸುತ್ತಾನೆ. ಉದಾಹರಣೆಗೆ ಸಮಾಜದಲ್ಲಿ ಮುಕ್ತ ವಿಚಾರಗಳನ್ನು, ಪ್ರಗತಿಪರ ನಡವಳಿಕೆಗಳನ್ನು ಪ್ರೋತ್ಸಾಹಿಸಲು ಪಂಪಾ ನಗರದ ಎಲ್ಲೆಡೆ ಶೃಂಗಾರ ಶಿಲ್ಪಗಳ ಕೆತ್ತನೆಗಳನ್ನು ಮಾಡಿಸುವ ಸಲಹೆ ನೀಡಿದಾಗ ರಾಜಪುರೋಹಿತ ಅವಳಿಗೆ 'ಇದು ಇನ್ನೂ ಮಧ್ಯಕಾಲೀನ ಯುಗ, ಮುಕ್ತವಾಗಿ ಆಲೋಚಿಸುವ ಭವಿಷ್ಯಕಾಲವಲ್ಲ' ಎಂದು ಎಚ್ಚರಿಸುತ್ತಾನೆ. ಪಂಪಾಳ ಪ್ರತ್ಯುತ್ತರ – 'ಎಲ್ಲೆಡೆ ಹದಿನಾಲ್ಕನೆಯ ಶತಮಾನವೇ ಇರಲಿ ಬಿಡಿ. ನಮಗೆ ಇಲ್ಲಿ ಈಗ ಹದಿನೈದನೇ ಶತಮಾನವಾಗುತ್ತದೆ!' (ನನಗೆ ಈ ಚುರುಕು ಹಾಸ್ಯ ಮಾರ್ಕ್ ಟ್ವೈನ್‌ನನ್ನು ನೆನಪಿಸಿತು).

ರಶ್ದಿ, ಪಂಪಾ ಎದುರಿಸಿದ ದುಷ್ಪರಿಣಾಮಗಳ ಭಯಾನಕತೆಯನ್ನು ವೈಯಕ್ತಿಕ ಸ್ತರದಲ್ಲಿ ಕೂಡ ಚೆನ್ನಾಗಿ ಬಲ್ಲ. ಧಾರ್ಮಿಕ ಅಂಧಶ್ರದ್ಧೆಯ ಅತಿರೇಕತೆ ತಂದೊಡ್ಡುವ ಅಪಾಯಗಳು, ಚರಿತ್ರೆಯಲ್ಲಿನ ಹೇಳಲಾಗದೇ ಖಾಲಿ ಬಿಟ್ಟ ನಿಶ್ಶಬ್ದ ಪುಟಗಳನ್ನು ಅರ್ಥೈಸಿಕೊಳ್ಳುವುದು ಇಂತಹ ವಸ್ತು ವಿಷಯಗಳು ಹಿಂದೆಯೂ ರಶ್ದಿಯನ್ನು ಸೆಳೆದ ಅಂಶಗಳು. ಇವುಗಳೇ ಈ ಕಾದಂಬರಿಯಲ್ಲೂ ಎದ್ದು ಕಾಣುತ್ತವೆ. ಸ್ತ್ರೀಸಮಾನತಾವಾದ ಈ ಕಥೆಯ ಕೇಂದ್ರ ವಸ್ತು. ಲೇಖಕ ಅದನ್ನು ಸ್ತ್ರೀಯರ ಭೌತಿಕ – ಸಾಮಾಜಿಕ ತ್ಯಾಗ, ಬಲಿಗಳ ಹಿನ್ನೆಲೆಯಲ್ಲಿಟ್ಟು ಕಾಣುವ ಪ್ರಯತ್ನವನ್ನು ಮಾಡಿದ್ದಾನೆ.

ನಶಿಸಿದ ವಿಜಯನಗರ ಸಾಮ್ರಾಜ್ಯದ ಕಥೆಯನ್ನು ರಶ್ದಿ ತನ್ನದೇ ರೀತಿಯಲ್ಲಿ ಮರುನಿರೂಪಣೆ ಮಾಡುತ್ತ ಓದುಗರಿಗೆ ನಮ್ಮ ಉಪಖಂಡದ ಪುರಾಣ, ರೂಪಕಗಳ

ಬಗೆಗಿನ ತಿಳಿವಳಿಕೆಯನ್ನು ವಿಸ್ತರಿಸಿಕೊಳ್ಳಲು ಕೇಳಿಕೊಳ್ಳುತ್ತಾನೆ. ಕಾಲ್ಪನಿಕವೆಂದರೂ ಇವೂ ನಮ್ಮ ಚರಿತ್ರೆಯ ಅಂಗಗಳೇ. ಈ ಹಾದಿಯಲ್ಲಿ ನಡೆಯುವುದು ಕೂಡಾ ಸುಖಕರ ಭಾವನೆಗಳನ್ನೇ ಹುಟ್ಟಿಸುತ್ತದೆ. ಏಕೆಂದರೆ ಇದೊಂದು ಸಂಪೂರ್ಣ ಸಮ್ಮೋಹನಾತ್ಮಕ ಅನುಭವ. ಪುರಾಣಕಥೆಗಳು ನಮ್ಮ ಜ್ಞಾನವನ್ನು ಹೆಚ್ಚಿಸುವುದಲ್ಲದೆ ಭಾರತದ ಶ್ರೀಮಂತ ಸಾಂಸ್ಕೃತಿಕ ಮತ್ತು ರಾಜಕೀಯ ಚರಿತ್ರೆಗಳ ಬಗೆಗಿನ ಅರಿವನ್ನೂ ವಿಶಾಲಗೊಳಿಸುತ್ತದೆ. ತನ್ನ ಅನೇಕ ಪುಸ್ತಕಗಳಲ್ಲಿ ರಶ್ದಿ ಆದಿಕಾಲದಿಂದ ನಮ್ಮ ದೇಶ ಆದರ್ಶಗಳಿಗೆ ಬದ್ಧವಾಗಿರಲು ಪಡುವ ಪ್ರಯತ್ನದ ಬಗ್ಗೆ ಬರೆದಿದ್ದಾನೆ.

* * *

**ಹದಿನಾಲ್ಕನೆಯ ಶತಮಾನದ ಹಿನ್ನೆಲೆಯಲ್ಲಿ ಸ್ತ್ರೀ ವಾದ**

ಹಾಗಾದರೆ ಸ್ತ್ರೀಯರ ಬಗೆಗೆ ಮತ್ತು ಬದುಕಿನ ಎಲ್ಲ ಮಜಲುಗಳಲ್ಲೂ ಅವರು ಅಪೇಕ್ಷಿಸುವ ನಿಜವಾದ ಸ್ವಾತಂತ್ರ್ಯದ ಬಗೆಗೆ ಈ ಪುಸ್ತಕದ ದೃಷ್ಟಿಕೋನವನ್ನು ನಾವು ಏನೆಂದು ಅರ್ಥೈಸಿಕೊಳ್ಳಬಹುದು?

ಈ ಕಾದಂಬರಿಯ ಪ್ರಧಾನ ವಸ್ತು ಸಮಕಾಲೀನವಾಗಿಯೂ ಪ್ರಸ್ತುತವಾಗಿದೆ. ಅತಿಮಾನುಷ ಶಕ್ತಿಯಿರುವ ಪಂಪಾ ಕಂಪನಳು ಇದರ ಕಥಾನಾಯಕಿ. ಆ ಶಕ್ತಿಗಳು ಆಕೆಯ ಹೆಣ್ಣು ಮಕ್ಕಳಿಗೂ ಬಳುವಳಿಯಾಗಿ ಬಂದಿರುತ್ತವೆ. ಪಂಪಾ ಕೆಚ್ಚೆದೆಯ ಹೆಣ್ಣು. ತನ್ನನ್ನು ತಾನು ಸಮರ್ಥಿಸಿಕೊಳ್ಳುವ ಛಾತಿಯುಳ್ಳವಳು. ಅಂತೆಯೇ 'ಬಿಸ್ನಾಗ'ವೆಂಬ ಮಾಯಾನಗರದ ಉಗಮ, ಬೆಳವಣಿಗೆ, ಶಾಂತಿ – ಸಂಘರ್ಷಗಳಿಗೆಲ್ಲ ಮೂಲ ಪಂಪಾಳೇ. ಆಕೆ ಬಿಸ್ನಾಗವನ್ನು ಅಕ್ಷರಶಃ 'ಬಿತ್ತಿ' ತನ್ನ ಕಲ್ಪನೆಯಲ್ಲಿ ಅದಕ್ಕೊಂದು ರೂಪ ನೀಡಿ, ಅದರ ಅಸ್ತಿತ್ವವನ್ನು 'ಪಿಸುಗುಡುತ್ತಾಳೆ'. ಆ ಸಾಮ್ರಾಜ್ಯದಲ್ಲಿ ಸ್ತ್ರೀಯರ ಹಕ್ಕುಗಳು, ಸ್ತ್ರೀ ಸಮಾನತೆ, ಧರ್ಮ ಮತ್ತು ಆಡಳಿತಗಳ ಪ್ರತ್ಯೇಕತೆಯನ್ನು ಕಾಪಾಡುವುದಕ್ಕಾಗಿ ಮತ್ತು ಉದಾರಶೀಲತೆಯ ಪ್ರಗತಿ ಮತ್ತು ಅವಸಾನಗಳ ವಿಷಯದಲ್ಲಿ ಘರ್ಷಣೆಗಳು ಏಳುತ್ತಿರುತ್ತವೆ. ಐತಿಹಾಸಿಕ ಕಥೆಯ ಶೈಲಿಯಲ್ಲಿ ರಚಿಸಲ್ಪಟ್ಟಿದ್ದರೂ ಈ ಕಾದಂಬರಿ ಸಮಕಾಲೀನ ಸಮಸ್ಯೆಗಳನ್ನು ಸಮರ್ಥವಾಗಿ ಬಿಂಬಿಸುತ್ತದೆ.

(ಪಂಪಾಳ ವ್ಯಕ್ತಿಚಿತ್ರಣ ಆ ಕಾಲದಲ್ಲಿ ಬಾಳಿದ ಮಹಿಳೆಯೊಬ್ಬಳ ಮೇಲೆ ಆಧಾರಿತ ಎನ್ನಲಾಗಿದೆ. ಗಂಗಾದೇವಿ ಅಥವಾ ಗಂಗಾಂಬಿಕಾ 14ನೆಯ ಶತಮಾನದ ರಾಜಕುಮಾರಿ ಹಾಗೂ ವಿಜಯನಗರ ಸಾಮ್ರಾಜ್ಯದ ಸಂಸ್ಕೃತ ಕವಯಿತ್ರೀ. ವಿಜಯನಗರದ ದೊರೆ ಮೊದಲನೇ ರಾಯನ (1360–1370) ಪುತ್ರ ಕುಮಾರ ಕಂಪನನ ಪತ್ನಿಯಾಗಿದ್ದವಳು. ಆಕೆ ಮಧುರೆಯ ಮುಸ್ಲಿಮರ ಮೇಲೆ ತನ್ನ ಪತಿ ಸಾಧಿಸಿದ ವಿಜಯವನ್ನು ಕವನದ ರೂಪದಲ್ಲಿ ದಾಖಲಿಸಿದ್ದಾಳೆ.)

ಪಂಪಾ ಕಂಪನ ತನ್ನ ಮಾಂತ್ರಿಕ ಶಕ್ತಿಯನ್ನು ಬಳಸಿಕೊಂಡು ಬಿಸ್ನಾಗದ ರಾಜರ ಕಿವಿಯಲ್ಲಿ 'ಪಿಸುಗುಡುತ್ತಾ' ತನ್ನ ಆದರ್ಶರಾಜ್ಯದಲ್ಲಿ ಮಹಿಳೆಯರ ಹಕ್ಕುಗಳು

ಸ್ಥಾಪನೆಯಾಗುವಂತೆ ಮಾಡುತ್ತಾಳೆ. (ಸ್ತ್ರೀಯರಿಗೆ ವೃತ್ತಿಪರ ಗೌರವಗಳು ಸಿಗುವಂತೆ ಮತ್ತು ತಮ್ಮ ಮೃತ ಪತಿಯರೊಂದಿಗೆ ಚಿತೆಯಲ್ಲಿ ದಹಿಸದಿರುವಂತೆ). ಪಂಪಾಳ ಮೂರೂ ಹೆಣ್ಣುಮಕ್ಕಳು ಸುಸಂಸ್ಕೃತರು, ಸಬಲೆಯರು ಮತ್ತು ಚತುರೆಯರು. ಆಕೆ ಬಿಸ್ನಾಗದಿಂದ ಬಹಿಷ್ಕರಿಸುವ ಅವಳ ಮೂರು ಗಂಡುಮಕ್ಕಳು ಅಸೂಯಿಗಳು, ತುಚ್ಛರು ಮತ್ತು ಕ್ರೂರಿಗಳಾಗಿದ್ದರೆಂದು ಕಥೆಯಲ್ಲಿ ಚಿತ್ರಿಸಲಾಗಿದೆ.

"ಬಿಸ್ನಾಗ ಸಾಮ್ರಾಜ್ಯದಲ್ಲಿ" ಮಂತ್ರಿಮಂಡಲವನ್ನು ಉದ್ದೇಶಿಸಿ ಪಂಪಾ ನುಡಿಯುತ್ತಾಳೆ. "ಮಹಿಳೆಯರು ಎರಡನೆಯ ದರ್ಜೆಯವರಲ್ಲ. ನಾವು ಮುಸುಕಿನಲ್ಲಿಲ್ಲ, ಅಡಗಿ ಕುಳಿತವರೂ ಅಲ್ಲ. ನಮ್ಮಲ್ಲಿ ಬಹುಮಟ್ಟಿನವರು ಉನ್ನತ ಶಿಕ್ಷಣ ಗಳಿಸಿದವರು ಮತ್ತು ಉತ್ತಮ ಸಂಸ್ಕಾರ ಹೊಂದಿದವರು. ತಲ್ಲಪಾಲ್ಕಟಿ ಮತ್ತು ರಮಾಭದ್ರಾಂಬಾರಂತಹ ಅದ್ಭುತ, ಅಸಾಮಾನ್ಯ ಕವಯಿತ್ರಿಯರೇ ಇದಕ್ಕೆ ಉದಾಹರಣೆ. ಅದಲ್ಲದೆ ಎಲ್ಲಾ ಆಡಳಿತ ಕ್ಷೇತ್ರಗಳಲ್ಲಿ ಸ್ತ್ರೀಯರು ತಮ್ಮನ್ನು ಸಕ್ರಿಯವಾಗಿ ತೊಡಗಿಸಿಕೊಂಡಿದ್ದಾರೆ."

ಪಂಪಾ ಮಹಿಳೆಯ ಬಗ್ಗೆ ಆಧುನಿಕ ಮನೋಭಾವ ಹೊಂದಿದವಳು ಮತ್ತು ಅದರಂತೆಯೇ ದಿಟ್ಟವಾಗಿ ಬದುಕುವವಳು. ಹಕ್ಕನನ್ನು ಪತಿಯೆಂದು ವರಿಸಿದರೂ ಪೋರ್ಚುಗೀಸ್ ವರ್ತಕನನ್ನು ಪ್ರಿಯತಮನಾಗಿ ಉಳಿಸಿಕೊಂಡವಳು. ಬುಕ್ಕನಿಂದ ಪಡೆದ ಗಂಡು ಮಕ್ಕಳು ದುರಹಂಕಾರಿಗಳಾದಾಗ ಪ್ರಿಯಕರನಿಂದ ಪಡೆದ ಪುತ್ರಿಯರನ್ನು ಬೆಂಬಲಿಸಿದವಳು.

ಬುಕ್ಕನ ಆಡಳಿತ ಕಾಲದಲ್ಲಿ ಪರಂಪರಾನುಗತವಾಗಿ ಬಂದ ಪುರುಷ ಪ್ರಾಧಾನ್ಯ ಪದ್ಧತಿಯನ್ನು (ಕೇವಲ ಗಂಡು ಸಂತಾನ ಮಾತ್ರ ಗದ್ದುಗೆಯನ್ನೇರಲು ಅರ್ಹರೆಂಬ ಪದ್ಧತಿ) ವಿರೋಧಿಸಿ ತನ್ನ ಹೆಣ್ಣು ಮಕ್ಕಳು ಅಧಿಕಾರ ವಹಿಸಿಕೊಳ್ಳಲು ಯೋಗ್ಯರೆಂದು ವಿನಂತಿಸಿಕೊಳ್ಳುತ್ತಾಳೆ. ಲಿಂಗ ಸಮಾನತಾವಾದಿಯಾಗಿದ್ದ ಪಂಪಾ ಈ ಬದಲಾವಣೆ ತನ್ನ ಸಾಮ್ರಾಜ್ಯದ ಮೌಲ್ಯಗಳನ್ನು ಎತ್ತಿಹಿಡಿಯಲು ಬಹಳ ಅಗತ್ಯದ ಕ್ರಮ ಎಂದು ನಂಬಿರುತ್ತಾಳೆ. ಈ ಕೋರಿಕೆ ಅನೇಕ ಸಂಘರ್ಷಗಳಿಗೆ ಎಡೆಮಾಡಿಕೊಟ್ಟರೂ ಕೊನೆಗೆ ಬುಕ್ಕ ಅದನ್ನು ಅನುಮೋದಿಸಿ ತನ್ನ ಸೊಕ್ಕಿನ ವರ್ತನೆಯ ಗಂಡುಮಕ್ಕಳನ್ನು ಗಡೀಪಾರು ಮಾಡುತ್ತಾನೆ. (ಬುಕ್ಕ ಮರಣಿಸಿದ ನಂತರ ಪಂಪಾಳನ್ನೇ ಗಡೀಪಾರು ಮಾಡಲಾಗುತದೆ. ಆಕೆ ಮಾಯಾ ಅಡವಿಯೊಂದರಲ್ಲಿ ತನ್ನ ಹೆಣ್ಣುಮಕ್ಕಳು ಮತ್ತು ಇಬ್ಬರು ನಿಷ್ಠಾವಂತ ಸೇವಕರೊಂದಿಗೆ ಬದುಕುತ್ತಾಳೆ).

ಈ ಕಾದಂಬರಿಯಲ್ಲಿ ಲಿಂಗ ಸಮಾನತೆಯ ಸಮರ್ಥನೆಯ ದೃಷ್ಟಿಕೋನ ಸ್ಪಷ್ಟವಾಗಿ ತೋರುತ್ತದೆ. ಪಂಪಾಳ ಮಕ್ಕಳಲ್ಲಿ ಒಬ್ಬಳು ಅಡವಿಯಲ್ಲಿ ವನ್ಯ ಸಲಿಂಗ ಕಾಮಿಗಳ ಗುಂಪಿಗೆ ಸೇರುತ್ತಾಳೆ. ಈ ಗುಂಪಿನವರೆಲ್ಲ ಮರಗಳ ಮೇಲೆ ವಾಸಿಸುವ ಆತ್ಮಗಳಂತೆ ಬದುಕುವವರು. ಸ್ವಚ್ಛಂದರು, ಒಳ್ಳೆಯ ಸ್ವಭಾವದವರು ಮತ್ತು ಶಕ್ತಿವಂತರು. ಇನ್ನೊಬ್ಬ ಪುತ್ರಿ ಚೀನಾದ ಯಾತ್ರಿಕನೊಂದಿಗೆ ಹೋಗಲು ಬಯಸಿದಾಗ ಆಕೆಗೆ ಕೂಡಾ ತನಗೆ ಬೇಕಾದನ್ನು ಪಡೆಯುವ ಸ್ವಾತಂತ್ರ್ಯ ದೊರೆಯುತ್ತದೆ.

ಪುಸ್ತಕದಲ್ಲಿನ ಪುರುಷರ ಚಿತ್ರಣ ಹೇಗಿದೆ? ಮಾಯಾ ಅರಣ್ಯವನ್ನು ಆಕ್ರಮಿಸುವ 'ಕೆಂಪು ಮೂತಿಯ ಕೋತಿಗಳು' (ಯುರೋಪಿನ ಬಿಳಿಯ ವರ್ತಕರನ್ನು ಬಣ್ಣಿಸುವ ರೂಪಕೋಕ್ತಿ) ವಂಚಕರು ಮತ್ತು ಯುದ್ಧೋಭಿಲಾಷಿಗಳು. ಇದರಲ್ಲಿ ಚಿತ್ರಿಸಲಾದ ಸಜ್ಜನ ಪುರುಷರು 14ನೆಯ ಶತಮಾನದ ಮಟ್ಟಿಗೆ ಪ್ರಬುದ್ಧರು ಮತ್ತು ವಿವೇಕಿಗಳು ಅಥವಾ ಆಗಲು ಬಯಸುವವರು. ಅದಕ್ಕೊಂದು ಉದಾಹರಣೆ ಹೀಗಿದೆ.

**ಹಳೆಯ ಕೋಟೆ:** "ನಾನು ಮತಾಂಧತೆಯನ್ನು ಮತ್ತು ಅಜ್ಞಾನವನ್ನು ಹೋಗಲಾಡಿಸಿಕೊಳ್ಳುವ ಪ್ರಯತ್ನವನ್ನು ಮಾಡುತ್ತೇನೆ."

**ಬುಕ್ಕರಾಯ:** "ಒಳ್ಳೆಯದು."

ಕಾದಂಬರಿಯಲ್ಲಿನ ಸಾಮಾನ್ಯ ಪ್ರಜೆಗಳು ಕೂಡ (ಸ್ವಲ್ಪಕಾಲದ ಮಟ್ಟಿಗಾದರೂ) ಆಧುನಿಕ ಮನೋಭಾವ ಹೊಂದಿದವರಾಗಿದ್ದರು. ಇಲ್ಲೊಂದು ಉದಾರಹಣೆ ನೋಡಿ. ಆಸ್ಥಾನದಲ್ಲಿ ನಡೆಯುವ ಸಾಮಾನ್ಯ ಆಗುಹೋಗುಗಳ ಬಗ್ಗೆ ಹೀಗೊಂದು ವಿವರಣೆಯಿದೆ. "ಬಿಸ್ನಾಗದ ಪ್ರಜೆಗಳು ವಿಧವಿಧವಾದ ಬೇಡಿಕೆಗಳೊಂದಿಗೆ ಅವರ ಮುಂದೆ ಬರುತ್ತಿದ್ದರು. ಆ ವರ್ಷ ಮಳೆಗಳಾಗದ ಕಾರಣ ಸುಂಕದಲ್ಲಿ ರಿಯಾಯಿತಿ ಬೇಕೆಂದು ಅಥವಾ ತಮ್ಮ ಮಗಳು ಅನ್ಯಜಾತಿಯ ಪುರುಷನನ್ನು ವರಿಸಲು ಅನುಮತಿ ಬೇಕೆಂದು ಬೇಡುವವರಿದ್ದರು. "ಏಕೆಂದರೆ ಮಹಾಪ್ರಭು, ಏನು ಮಾಡಲು ಸಾಧ್ಯ! ಇದು ಪ್ರೀತಿಯ ವಿಷಯ". ಹೀಗೆ ಸಾಮಾನ್ಯರೂ ಸಹ ಅಲ್ಲಿ ತೆರೆದ ಮನದ ವ್ಯಕ್ತಿಗಳು. ತಮ್ಮ ಹೆಣ್ಣುಮಕ್ಕಳು ಹೃದಯದ ಕರೆಗೆ ಓಗೊಡುವುದನ್ನು ಅನುಮೋದಿಸುವವರು.

ಹಾಗೆಂದರೂ ಆ ಸಮಯದಲ್ಲೆ ಪಂಪಾ ಸ್ತ್ರೀ ವಿರೋಧೀ ಪೂರ್ವಗ್ರಹಗಳನ್ನೂ ಎದುರಿಸಬೇಕಾಯಿತು. ಮುಖ್ಯವಾಗಿ ಸ್ತ್ರೀ – ಪುರುಷರ ಸಮಾನತೆಯನ್ನು ತೀವ್ರವಾಗಿ ಪ್ರತಿಪಾದಿಸುವ ಅವಳ ದಿಟ್ಟ ನಿಲುವಿಗೆ, ಎಲ್ಲೆಲ್ಲಿ ಅರ್ಹತೆಯಿರುವುದೋ ಅಲ್ಲೆಲ್ಲ ಸ್ತ್ರೀಯರಿಗೆ ಸಂಭಾವನೆ ಸಿಗಬೇಕೆಂಬ ಅವಳ ಮನೋಧರ್ಮಕ್ಕೆ ಅನೇಕರ ವಿರೋಧವಿತ್ತು. ಪಿತೃ ಪ್ರಧಾನ ವ್ಯವಸ್ಥೆಯನ್ನು ಧಿಕ್ಕರಿಸಿ ತನ್ನ ಪ್ರತಿಭಾವಂತ ಹೆಣ್ಣುಮಕ್ಕಳ ರಾಜ ಪರಂಪರೆಯನ್ನು ಸ್ಥಾಪಿಸಬೇಕೆಂಬ ಅವಳ ಕನಸಿಗೂ ವಿರೋಧವಿತ್ತು.

ಕಾದಂಬರಿಯಲ್ಲಿನ ಬೇರೆಲ್ಲ ವಿವರಗಳು ಪವಾಡಗಳು, ಜಾನಪದ, ದಂತಕಥೆಗಳನ್ನು ಬಿಂಬಿಸಿದರೂ ಕಥನದಲ್ಲಿ ಈ ಆಧುನಿಕ ನೆಲೆಗಟ್ಟು ಸಹಾ ಸಮರ್ಥವಾಗಿ ಹಾಸುಹೊಕ್ಕಾಗಿದೆ. ದಿಟ್ಟ, ಆಧುನಿಕ ನಿರೂಪಕಿ ಪಂಪಾ 'ಪವಾಡಸದೃಶವಾದುವು ಮತ್ತು ದೈನಂದಿನ ಬದುಕು ಇವೆರಡೂ ಒಂದೇ ಸಮಷ್ಟಿಯ ಎರಡು ಮುಖ'ಗಳೆಂದು ನಂಬುತ್ತಾಳೆ.

ಕಥಾನಾಯಕಿ ಪಂಪಾಳ ಕಥನದೊಂದಿಗೆ ಬಿಸ್ನಾಗ ಉತ್ಕೃಷ್ಟ ಸ್ತ್ರೀವಾದೀ ಆದರ್ಶರಾಜ್ಯವಾಗುತ್ತದೆ. ಅಲ್ಲಿನ ಸ್ತ್ರೀಯರು ಬದುಕಿನ ಪ್ರತಿಯೊಂದು ಕ್ಷೇತ್ರದಲ್ಲಿ ಸಾಧಕಿಯರಾಗುತ್ತಾರೆ. ಪಂಥೀಯರು ಮತ್ತು ಮೂಲಭೂತವಾದಿಗಳನ್ನು ವಿರೋಧಿಸುತ್ತಾರೆ. ಪ್ರೀತಿಯನ್ನು ಹಂಚಿಕೊಳ್ಳುವುದಕ್ಕಾಗಿ 'ಅನ್ಯನಂಬಿಕೆ'ಯುಳ್ಳವರಾಗುತ್ತಾರೆ. ಮೊದಲ ನೋಟಕ್ಕೆ

ಇದು ಅಸಹಜವೆನ್ನಿಸಿದರೂ ಐತಿಹಾಸಿಕವಾಗಿ ವಿಜಯನಗರ ಸಹಿಷ್ಣುತೆಗೆ, ಸ್ತ್ರೀ ಪ್ರಾಬಲ್ಯಕ್ಕೆ ಹೆಸರಾಗಿದ್ದ ಸಾಮ್ರಾಜ್ಯ.

ಕಳೆದುಹೋದ ಕಾಲದ ಕಥೆಯೊಂದಕ್ಕೆ ಸ್ತ್ರೀಪರ ಆಲೋಚನೆಯ ಹೊಳಹು ನೀಡಿದ್ದು ಪುಸ್ತಕಕ್ಕೆ ಸುಂದರ ಮೆರುಗು ಕೊಟ್ಟಿದೆ.

**ಸಲ್ಮಾನ್ ರಶ್ದಿ – ಬರಹಗಾರ**

ಬಹಳ ಸಮಯದಿಂದಲೇ ರಶ್ದಿಯನ್ನು ವಿಶ್ವದ ಅತ್ಯುತ್ತಮ ಲೇಖಕರಲ್ಲಿ ಒಬ್ಬ ಎಂದು ಗುರುತಿಸಲಾಗಿದೆ. ಆತ ಒಟ್ಟು 14 ಕಾದಂಬರಿಗಳನ್ನು ಬರೆದಿದ್ದಾನೆ. ಅವುಗಳಲ್ಲಿ ಬಹುತೇಕ ಚರಿತ್ರೆ, ರಾಜಕೀಯಗಳನ್ನು ಬೆಸೆದು ಮಾಂತ್ರಿಕ ವಾಸ್ತವಿಕತೆಯಿಂದ ಕೂಡಿದ ಅದ್ಭುತ ಅಥವಾ ಫ್ಯಾಂಟಸಿ ಶೈಲಿಯವು.

ಭಾರತದಲ್ಲಿ ಹುಟ್ಟಿ ಬೆಳೆದ ರಶ್ದಿಯ ಬಾಲ್ಯ ವೈವಿಧ್ಯಮಯ ಕತೆಗಳನ್ನು ಕೇಳುತ್ತಾ, ಓದುತ್ತಾ ಕಳೆದಿತ್ತು. ಚಿಕ್ಕಂದಿನಲ್ಲಿ 'ಸಾವಿರದ ಒಂದು ರಾತ್ರಿಗಳು', ಪಂಚತಂತ್ರದ ಕಥೆಗಳು ಮತ್ತು ಅಮಿರ್ ಹಮ್ಜಾ (ಮೊಹಮದರ ಚಿಕ್ಕಪ್ಪ)ರ ಕಥೆಗಳನ್ನು ಕೇಳುತ್ತ ಬೆಳೆದವನು. ಸಂಸ್ಕೃತದ ರಾಮಾಯಣ, ಮಹಾಭಾರತ, ಗ್ರೀಕ್, ರೋಮನ್ನರ ಪುರಾಣಕಥೆಗಳು, ಬರ್ಟೀ ವೂಸ್ಟರ್ ಮತ್ತು ಜೀವ್ಸ್ (ಅಂತಸ್ತಿನ ಬಗ್ಗೆ ವಿಶೇಷ ಕಾಳಜಿ ತೋರುವ ಬ್ರಿಟಿಷ್ ಸಮಾಜದ ಬಗ್ಗೆ ಪಿ. ಜಿ. ವುಡ್ ಹೌಸ್ ಎಂಬ ಬ್ರಿಟಿಷ್ ಹಾಸ್ಯ ಲೇಖಕ ಬರೆದಿರುವ ಕಥೆಯಲ್ಲಿ ಬರುವ ಪಾತ್ರಗಳು) ಇವೆಲ್ಲವನ್ನೂ ಓದಿಕೊಂಡಿದ್ದವ.

ಇಂಗ್ಲೆಂಡಿನಲ್ಲಿ ವಸತಿ ಶಾಲೆ ಮತ್ತು ಲಂಡನ್ ಕೇಂಬ್ರಿಡ್ಜ್‌ಗಳಲ್ಲಿ ಕಲಿಕೆ. ನಂತರ ಲೇಖಕನಾಗಿ ಮುಂದುವರೆಯುವುದಕ್ಕಾಗಿ ಲಂಡನ್‌ನಲ್ಲಿ ವಾಸ. ಅಲ್ಲಿ ಸಣ್ಣ ಕಥೆಗಳು ಮತ್ತು ಕಾದಂಬರಿಗಳನ್ನು ರಚಿಸಿದ. ಮೊದಲ ಕೃತಿ 'ಗ್ರಿಮಸ್' (Grimus) 1975ರಲ್ಲಿ ಪ್ರಕಟ. ಜೀವನೋಪಾಯಕ್ಕಾಗಿ ಜಾಹಿರಾತಿನ ಕ್ಷೇತ್ರದಲ್ಲಿ ಕೆಲಸ ಮಾಡಿದರೂ ತೃಪ್ತಿಯಿರದ ಕಾರಣ ಪೂರ್ಣ ಪ್ರಮಾಣದ ಲೇಖಕ ವೃತ್ತಿಯನ್ನೇ ಆರಿಸಿಕೊಂಡ.

ಭಾರತದಲ್ಲಿ ಹಲವು ದಿನಗಳ ದೀರ್ಘ ಪ್ರವಾಸ ನಡೆಸಿದ ರಶ್ದಿ ಆಗ ಸಂಪೂರ್ಣವಾಗಿ ಅಲ್ಲಿನ ಬದುಕಿನಲ್ಲಿ ಮುಳುಗೆದ್ದ ಅನುಭವ ಪಡೆದ. ಲೆಕ್ಕವಿಲ್ಲದಷ್ಟು ಬಸ್ ಯಾತ್ರೆಗಳು, ಮಾತುಕತೆಗಳು. ಅವು ಅವನಲ್ಲೇನೋ ಭಾವನೆಗಳನ್ನು ಜಾಗೃತಗೊಳಿಸಿದವು. ಆತನೇ ಹೇಳುವ ಹಾಗೆ 'ಒಂದು ಪ್ರಪಂಚವೇ ಅವನೆಡೆಗೆ ಉಕ್ಕಿಬಂತು.' ಆತ ಹುಡುಕುತ್ತಿದ್ದ ಸ್ಫೂರ್ತಿಯ ಸೆಲೆ ದೊರಕಿತು.

1981ರಲ್ಲಿ ಅವನ 33ನೆಯ ವಯಸ್ಸಿನಲ್ಲಿ ಕಾದಂಬರಿ 'ಮಿಡ್ನೈಟ್ಸ್ ಚಿಲ್ಡ್ರನ್' (Midnight's Children) ಪ್ರಕಟವಾಯಿತು. ಅದು ಸ್ವಾತಂತ್ರ್ಯಾನಂತರದ ಭಾರತದ ಬೆಳವಣಿಗೆಯನ್ನು ಸ್ವಂತ ಅನುಭವಗಳ ಮೂಲಕ ಚಿತ್ರಿಸಿದ ಕೃತಿ.

ಸ್ವಲ್ಪ ಸಮಯದಲ್ಲೇ ಈ ಪುಸ್ತಕ ಶ್ರೇಷ್ಠ ಕೃತಿ ಎನ್ನಿಸಿಕೊಂಡಿತು. ಬುಕರ್ ಪ್ರಶಸ್ತಿ ದೊರಕಿಸಿಕೊಂಡಿತು. ಇಂದಿಗೂ ಬುಕರ್ ಆಫ್ ಬುಕರ್ಸ್ ಅಂದರೆ ಶ್ರೇಷ್ಠರಲ್ಲಿ ಶ್ರೇಷ್ಠ

ಎಂಬ ಹೆಗ್ಗಳಿಕೆಗೆ ಪಾತ್ರವಾದ ಕೃತಿ ಇದು. ನಂತರ 'ಶೇಮ್' (Shame) ಪ್ರಕಟವಾಯಿತು. ಇದು ಪಾಕಿಸ್ತಾನ 'ಅಲ್ಲದ' ದೇಶದಲ್ಲಿ ನಡೆಯುವ ಕಥೆ. ಈ ಎರಡೂ ಕೃತಿಗಳು ಕ್ರಮವಾಗಿ ಇಂದಿರಾಗಾಂಧಿ ಮತ್ತು ಜಿನ್ನಾರ ಕಣ್ಣು ಕೆಂಪಾಗಿಸುವಲ್ಲಿ ಯಶಸ್ವಿಯಾದವು!

ನಂತರ ಬಂದಿದ್ದು ಬಹು ಚರ್ಚಿತ 'ಸಟಾನಿಕ್ ವರ್ಸಸ್' (Satanic Verses) 1998ರಲ್ಲಿ. ಇದು ವಿವಿಧ ಬಗೆಯ ಮನುಷ್ಯರ, ಸಂಸ್ಕೃತಿ, ಆಲೋಚನೆ, ರಾಜಕೀಯ, ಸಿನೆಮಾ, ಸಂಗೀತಗಳ ಅನಿರೀಕ್ಷಿತ ಹೊಸ ಮಿಲನದಿಂದ ಹುಟ್ಟುವ ಹೊಸ ರೂಪಾಂತರಗಳು, ಸಂಕರಗಳು, ಪರಸ್ಪರ ಅಂತರ್ಮಿಶ್ರಣಗಳ ಸಂಭ್ರಮಾಚರಣೆ, ಉತ್ಸವ.

ಆದರೆ ಇದಕ್ಕೆ ಎಲ್ಲೆಡೆ ತೀವ್ರ ಪ್ರತಿಕ್ರಿಯೆಗಳು ವ್ಯಕ್ತವಾದವು. ರಾಜೀವಗಾಂಧಿ ಸರ್ಕಾರ ಆ ಪುಸ್ತಕವನ್ನು ಬಹಿಷ್ಕರಿಸಿತು. ಕಾಶ್ಮೀರ ಮತ್ತು ಇಸ್ಲಾಮಾಬಾದ್‌ಗಳಲ್ಲಿ ದಂಗೆಗಳಾದವು. ಇಂಗ್ಲೆಂಡಿನಲ್ಲಿ ಅನೇಕ ಕಡೆ ಈ ಪುಸ್ತಕಗಳನ್ನು ಸುಡಲಾಯಿತು. ಪ್ರಕಾಶಕರಿಗೆ ಬಾಂಬ್ ಬೆದರಿಕೆ ಹಾಕಲಾಯಿತು. ಅಸಹನೆ, ಗೊಂದಲ ಮಧ್ಯಪೂರ್ವ ದೇಶಗಳಿಗೂ ಹರಡಿತು. ಅಯತುಲ್ಲಾಹ್ ಖೊಮೇನಿ ಫತ್ವಾ ಜಾರಿಗೊಳಿಸಿ ಅವನಿಗೆ 'ಮರಣದಂಡನೆ'ಯ ತೀರ್ಪು ಕೊಟ್ಟ.

ತಲೆ ಮರೆಸಿಕೊಂಡಿದ್ದಾಗ ರಶ್ದಿ ಮಗ ಹರೂನ್ ಝಫರ್‌ನಿಗೆ ಮಾತು ಕೊಟ್ಟಂತೆ, ಅವನಿಗೆ ಹೇಳುತ್ತಿದ್ದ ಕಥೆಗಳನ್ನು ಪುಸ್ತಕವಾಗಿ ಪ್ರಕಟಿಸಿದ. 'ಹರೂನ್ ಮತ್ತು ಸಮುದ್ರದ ಕಥೆಗಳು' ಎಂಬ ಆ ಪುಸ್ತಕ ಸಾಂಕೇತಿಕವಾಗಿ ಕಲೆಯ ಅವಶ್ಯಕತೆ ಮತ್ತು ಅದರ ಧಾರಣಾ ಶಕ್ತಿಗಳ ಪ್ರತೀಕವಾಯಿತು. ಮತ್ತೊಂದು ಕೃತಿ, ರಶ್ದಿ ಹೇಳಲೇಬೇಕೆಂದುಕೊಂಡಿದ್ದ ಕಥೆಗಳಲ್ಲಿ ಒಂದಾದ ಅವರ ಆತ್ಮ ಕಥೆ, 'ಜೋಸೆಫ್ ಆಂಟನ್'. ತಲೆಮರೆಸಿಕೊಂಡಿದ್ದಾಗ ರಶ್ದಿಗೆ ಬ್ರಿಟಿಷ್ ಪೊಲೀಸರು ಕೊಟ್ಟ ರಹಸ್ಯನಾಮ ಅದು.

**ರಶ್ದಿಯ ಅಭಿಮತದ ಬಗ್ಗೆ ಅವನದೇ ನುಡಿಗಳು:**

"ನಾವೆಲ್ಲ ಯಾವುದೇ ಹಿನ್ನೆಲೆಯಿಂದ ಬಂದಿದ್ದರೂ, ಯಾವುದರೊಳಗೆ ಬದುಕುತ್ತೇವೋ ಮತ್ತು ಯಾವುದರೊಂದಿಗೆ ಬದುಕುತ್ತೇವೋ ಆ ಕಥೆಗಳನ್ನು ನಿರಂತರವಾಗಿ ಪರಿಶೀಲಿಸುತ್ತಿರುವುದು ಬಹಳ ಅಗತ್ಯ. ನಾವೆಲ್ಲರೂ ಭವ್ಯ ನಿರೂಪಣೆ ಎಂದು ಕರೆಸಿಕೊಳ್ಳಬಹುದಾದ ಕಥೆಯೊಳಗೆಯೇ ಬದುಕುತ್ತಿದ್ದೇವೆ. ದೇಶ ಒಂದು ಕಥೆ. ಕುಟುಂಬ ಒಂದು ಕಥೆ. ಧರ್ಮ – ಮತ ಒಂದು ಕಥೆ. ಸಮುದಾಯ ಒಂದು ಕಥೆ. ನನಗನ್ನಿಸುವ ಹಾಗೆ, ಯಾವುದೇ ಜೀವಂತವಾದ, ಚೈತನ್ಯದಿಂದ ಮಿಡಿಯುವ ಸಮಾಜದ ಪರಿಭಾಷೆಯೆಂದರೆ ನೀವು ನಿರಂತರವಾಗಿ ಈ ಕಥೆಗಳನ್ನು ಪ್ರಶ್ನೆ ಮಾಡುತ್ತಿರುವುದು, ಈ ಕಥೆಗಳ ಬಗ್ಗೆ ಸದಾ ಚರ್ಚೆ, ವಾದಗಳನ್ನು ಮಾಡುತ್ತಿರುವುದು. ನಿಜವಾಗಿ ಹೇಳುವುದಾದರೆ ಈ ವಾದಗಳು ಎಂದಿಗೂ ನಿಲ್ಲುವುದಿಲ್ಲ. ಈ ಚರ್ಚೆಗಳೇ ನಿಜವಾದ ಸ್ವಾತಂತ್ರ್ಯ. ಯಾವುದೇ ತೀರ್ಮಾನಕ್ಕೆ ಬರುವಿರಿ ಎಂದಲ್ಲ. ಚರ್ಚೆಗಳ ಮೂಲಕವೇ ಕೆಲವೊಮ್ಮೆ ನಿಮ್ಮ ಮನಸ್ಸೂ ಪರಿವರ್ತನೆಯಾಗಬಹುದು. ಸಮಾಜಗಳು ಬೆಳೆಯುವುದು ಹೀಗೆ.

ನಿಮ್ಮ ಬದುಕಿನ ಕಥೆಗಳನ್ನು ನಿಮಗೆ ನೀವೇ ಮತ್ತೆ ಹೇಳಿಕೊಳ್ಳಲಾರಿರಿ ಎಂದರೆ ನೀವು ಬಂಧಿಯಾಗಿದ್ದೀರಿ ಎಂದರ್ಥ. ಮತ್ಯಾರೋ ಕಥೆಗಳನ್ನು ನಿಯಂತ್ರಿಸುತ್ತಿರುತ್ತಾರೆ. ನನಗನ್ನಿಸುವ ಮಟ್ಟಿಗೆ ಸಮಕಾಲೀನ ಇಸ್ಲಾಂ ಧರ್ಮದಲ್ಲಿರುವ ಒಂದು ತೊಂದರೆಯೆಂದರೆ ಆ ಧರ್ಮದ ಮೂಲಭೂತ ಕಥನವನ್ನು ಪುನರ್ ಪರಿಶೀಲನೆ ಮಾಡಲಾಗದಂತಹ ಅಸಾಮರ್ಥ್ಯ. ಇಸ್ಲಾಂನಲ್ಲಿ ಈ ಪ್ರಯತ್ನ ಬಹಳ ಕಠಿಣವಾಗಿರುವುದಕ್ಕೇ ಅಲ್ಲಿ ಹೊಸ ಆಲೋಚನೆಗಳ ಬಗ್ಗೆ ಚಿಂತಿಸುವುದೂ ಕಷ್ಟವಾಗುತ್ತದೆ. ಜಗತ್ತಿನ ಇತರ ಧರ್ಮಗಳಲ್ಲೂ ಹೊಸ ವಿಚಾರಗಳನ್ನು ವಿರೋಧಿಸುವವರ ಗುಂಪುಗಳಿರುತ್ತವೆ ಎಂದು ಸಂಶಯವಿಲ್ಲದೆ ಹೇಳಬಲ್ಲೆ."

ಕೊನೆಗೆ ಅರ್ಥವಾಗುವುದು ರಶ್ದಿಯೆಂದರೆ ಈ ವ್ಯಕ್ತಿ. ಅವ ಕಥೆ ಹೇಳುವವ, ಚರಿತ್ರೆಯನ್ನು ಸೂಕ್ಷ್ಮವಾಗಿ ಪರೀಕ್ಷಿಸುವವ, ಪುರಾಣಗಳ, ಕಟ್ಟುಕಥೆಗಳ, ನಾವು ಹೇಳಿಕೊಂಡ ನಮ್ಮದೇ ಕಥೆಗಳ ನಿರೂಪಕ.



# ಜೀವಪರ ಸಂವೇದನೆ

**ಜ್ಯೋತಿ ಮಹಾದೇವ್**
Manipal, Karnataka

*

**ಮೊದಲ ಮಾತು:**

ಒಂದು ವರ್ಗದ ಜನರ ಬದುಕು ಮತ್ತು ಅನುಭವಗಳಿಗೆ ಸೀಮಿತವಾದ ವಿಶಿಷ್ಟ ಜಗತ್ತನ್ನು ಅರಿಯಲು ಪ್ರಯತ್ನಿಸುವ ಉಳಿದವರಿಗೆ, ಆ ವರ್ಗದ ಬಗೆಗೆ ತಿಳಿವಳಿಕೆ, ಆಸಕ್ತಿ ಮತ್ತು ಸಹಾನುಭೂತಿ ಇರುವುದು ಅಥವಾ ಬೆಳೆಸಿಕೊಳ್ಳುವುದು ಅತ್ಯಂತ ಮುಖ್ಯವಾಗುತ್ತದೆ. ಈ ಪ್ರಜ್ಞಾಪೂರ್ವಕ ಅಭಿವ್ಯಕ್ತಿಯ ಮೂಲಧಾತುವೇ ಸಂವೇದನಾಶೀಲತೆ. ಮಹಿಳಾಪರ ದೃಷ್ಟಿಕೋನವನ್ನು ಸಹಾನುಭೂತಿಯಿಂದ ಬಿಂಬಿಸುವ ಕೃತಿಗಳಲ್ಲಿ 'ಸ್ತ್ರೀ ಸಂವೇದನೆ'ಯ ಛಾಪಿದೆ ಎಂದು ಬಹುಕಾಲದಿಂದ ಸಾಹಿತ್ಯವಲಯ ಗುರುತಿಸುತ್ತಾ ಬಂದಿದೆ. ಅದೇ ರೀತಿ 'ದಲಿತ ಸಂವೇದನೆ', 'ನಗರ ಸಂವೇದನೆ', 'ತೃತೀಯ ಲಿಂಗಿಗಳ ಸಂವೇದನೆ', 'ಶಿಕ್ಷಕ ಸಂವೇದನೆ', 'ಶೋಷಿತ ವರ್ಗದ ಸಂವೇದನೆ', 'ಕೃಷಿಕ ಸಂವೇದನೆ', 'ಟೆಕ್ಕಿ ಸಂವೇದನೆ'... ಇತ್ಯಾದಿ ಮಾರ್ಗಗಳನ್ನೂ ಗುರುತಿಸಬಹುದು. ಇಷ್ಟೊಂದು ವಿಸ್ತಾರವಾದ ಹರವುಗಳಲ್ಲಿ ಸಾಗುತ್ತಾ ಸಂವೇದನೆ ಪದವೇ ಕ್ಲೀಷೆಯಾಗುವ ಹಂತದಲ್ಲಿದೆ ಎನ್ನುವ ಅನುಮಾನ ಬರಬಹುದು!

'ಸಂವೇದನ' (ನಪುಂ) ಎಂದರೆ (ಸಂ+ವಿದ=) ಅರಿವು, ಅನುಭವ, ತಿಳಿವು ಎಂದಾಗುತ್ತದ. ಸಂವೇದನಾ ಅಥವಾ ಸಂವೇದನೆ (ನಾಮಪದ) ಎಂದರೆ ಅರಿತುದು, ತಿಳಿದುದು, ಅನುಭವ ಎಂದಾಗುತ್ತದೆ. ಮನುಜರಲ್ಲದೆ, ಇತರ ಪ್ರಾಣಿಪ್ರಪಂಚದಲ್ಲಿಯೂ

ಅತ್ಯಂತ ಸೂಕ್ಷ್ಮ ಸಂವೇದನೆಯುಳ್ಳ ಜೀವಿಗಳಿವೆ, ಅವುಗಳಲ್ಲಿಯೂ ಹೆಣ್ಣು-ಗಂಡು ಜೀವಿಗಳು ಸಮಾನವಾಗಿ ಸಂವೇದನಾಯುಕ್ತವಾಗಿವೆ. ಸಸ್ಯಗಳೂ ಪ್ರತಿಸ್ಪಂದಿ ಗುಣ ಪಡೆದಿವೆ, ಸಂವೇದನೆಯನ್ನು ಹೊಂದಿವೆ ಎನ್ನುವುದನ್ನು ಸಸ್ಯಶಾಸ್ತ್ರಜ್ಞರು ಗುರುತಿಸಿದ್ದಾರೆ. ಅಲ್ಲೆಲ್ಲ ಅದನ್ನು ಗುರುತಿಸುವ ಸೌಹಾರ್ದತೆ ನಮಗಿದೆ, ಎಲ್ಲ ಮನುಜರೊಳಗೂ ಅದನ್ನು ಸಮಾನವಾಗಿ ಕಾಣುವ ದೃಷ್ಟಿಕೋನವೂ ಇರಬೇಕಾಗಿದೆ.

ಹಾಗೆಂದು ಎಲ್ಲ ಮನುಜರೂ ಒಂದೇ ತೆರನಾದ ಸಂವೇದನಾಶೀಲರೆಂದು ಹೇಳುತ್ತಿಲ್ಲ. ಮನೆಯೊಳಗೆ ಮಡದಿ ಮಕ್ಕಳನ್ನು ಮನಬಂದಂತೆ ದಂಡಿಸುವ ಪೀಡಿಸುವ ವ್ಯಕ್ತಿಯೊಬ್ಬ ಸಮಾಜದ ಇತರರ ಜೊತೆಗೆ ಸೌಹಾರ್ದಯುತ ನಡವಳಿಕೆ ಹೊಂದಿರಬಹುದು. ಅಲ್ಲಿಗೆ ಆತನ ಸಂವೇದನಾಶೀಲತೆ ಪ್ರಶ್ನಾರ್ಹವಾಗುವುದು. ಆತನ ಸಂವೇದನಾಗುಣ ವ್ಯಕ್ತಿತ್ವದ ಆಚ್ಛಾದಿತ ಮುಖವೂ ಇದ್ದೀತು, ಮನೆಯೊಳಗಿನ ಕ್ರೌರ್ಯ ವಿಕೃತ ಮುಖವೂ ಇದ್ದೀತು. ಆತನಿಗೆ ಮನೋವೈಜ್ಞಾನಿಕ ಸಹಾಯ ಬೇಕಾಗುವ ಸಾಧ್ಯತೆ ಇರಬಹುದು.

**ವಿಷಯ ಪ್ರಸ್ತಾರ:**

ಈಗ ನಾವುಗಳು ವ್ಯಾಪಕವಾಗಿಯೇ ಬಳಸುತ್ತಿರುವ ಅರ್ಥವ್ಯಾಪ್ತಿಯಲ್ಲಿ 'ಸ್ತ್ರೀ ಸಂವೇದನೆ' ಎಂದರೆ 'ಮಹಿಳೆಯ ಮನೋಪ್ರಪಂಚಕ್ಕೆ ಸಂಬಂಧಿಸಿದಂಥವು' ಎಂದಿದೆ. ಇದರ ಮುಖ್ಯ ಮೂರು ಆಯಾಮಗಳು: ಸೂಕ್ಷ್ಮ ಭಾವನೆ, ಸೂಕ್ಷ್ಮ ಗ್ರಹಿಕೆ ಮತ್ತು ಸೂಕ್ಷ್ಮ ಸ್ಪಂದನೆ. ಈ ಬರಹದ ಮಿತಿಯೊಳಗೆ ಈ ಮೂರು ಪದಗುಚ್ಛಗಳನ್ನು ಒಂದಿಷ್ಟು ಬೆದಕೋಣ.

**ಸೂಕ್ಷ್ಮ ಭಾವನೆ:** ಮನುಷ್ಯರಿಗೆ ವಿಶಿಷ್ಟವಾಗಿರುವ, 'ಭಾವನಾಪ್ರಪಂಚ' ಎನ್ನಿಸಿಕೊಳ್ಳುವ, ಮನೋಲೋಕದ ಈ ಒಂದು ಆಯಾಮ ಬಹುವರ್ಣಮಯವಾದುದು. ನವರಸಗಳಾದಿಯಾಗಿ ಒಂಬತ್ತು ಸ್ಥಾಯೀ-ಭಾವಗಳು ಮತ್ತವುಗಳ ಸಂಚಾರೀ ಭಾವಗಳ ಒಟ್ಟು ಮೊತ್ತ ಹಿರಿದು. ಭಾವಪಟ್ಟಕದಲ್ಲಿ ವಿಸ್ತೃತವಾಗಿ ಪ್ರಕಟಗೊಳ್ಳುವ ಭಾವನೆಗಳು ಹಲವು. ಅವುಗಳು ಮನುಜನ ಮನೋಮಯ ಬಾನಿನಲ್ಲಿ ಒಡಮೂಡಿಸುವ ಇಂದ್ರಚಾಪ ವೃಂದಾವನದ ಬಣ್ಣದ ಕಾರಂಜಿಗಿಂತಲೂ ಚಂಚಲ, ವಿಪುಲ, ರಂಜಕ. ಈ ಇಂದ್ರಧನುವಿನ ವರ್ಣವಿಸ್ತಾರ ಕೌತುಕಭರಿತ, ರೋಚಕ, ಅನನ್ಯ.

ಇಷ್ಟು ವೈವಿಧ್ಯವಿರುವ 'ಭಾವನೆ'ಗಳಲ್ಲಿ 'ಸೂಕ್ಷ್ಮ' ಎಂಬೊಂದಿಷ್ಟನ್ನು ಮಹಿಳೆಗೇ ಸೀಮಿತಗೊಳಿಸಿತು ಬೌದ್ಧಿಕ ಜಗತ್ತು. ಅವು ಯಾವುವು? ಮಮತೆ, ಕಾಳಜಿ, ಅನುಕಂಪ, ನವಿರುತನ, ಇತ್ಯಾದಿ. ಇವುಗಳಿಗೇ ಅನ್ವರ್ಥವಾಗುವಂತೆ ಹೆಣ್ಣನ್ನು 'ಮಾತೃ ಹೃದಯಿ' ಎಂದಿತು. ಇವು- ಈ ಭಾವನೆಗಳು- ಗಂಡಿಗಿಲ್ಲವೆ? ಗಂಡು ಮನದೊಳಗೆ ಈ ಸೂಕ್ಷ್ಮಕ್ಕೆ ಅವಕಾಶವಿಲ್ಲವೆ? ಹೆಂಗರುಳು ದಿಟ್ಟವಾಗಿರಲಾರದೆ? ಅಮ್ಮನಾಗುವ ಅಪ್ಪಂದಿರಿಲ್ಲವೆ? ಅಥವಾ ಅಪ್ಪನಂತೆಯೇ ಗಟ್ಟಿಯಾಗಿ ನಿಂತ, ನಿಲ್ಲಬಲ್ಲ ಅಮ್ಮಂದಿರಿಲ್ಲವೆ? ನಮ್ಮ ಸುತ್ತಲಲ್ಲೇ ಇಂಥ ಉದಾಹರಣೆಗಳನ್ನು ನೋಡನೋಡುತ್ತಲೂ ನಾವುಗಳು ಕಣ್ಣಾಮು ಕಟ್ಟಿಕೊಂಡು

ಸ್ಟೀರಿಯೋಟೈಪ್ ಅನ್ನಿಸುವ ಚೌಕಟ್ಟಿನಿಂದ ಹೊರಬರಲಾರದಂತೆ ಸಿಕ್ಕಿ ಅಲ್ಲಲ್ಲೇ ಸುತ್ತುತ್ತಿದ್ದೇವೆ. ಕಣ್ಕಾಪು ಕಿತ್ತೆಸೆದು, ಸೂಕ್ಷ್ಮ ಭಾವನೆಗಳ ಗಂಡಸರನ್ನು ಗುರುತಿಸುವ ಮತ್ತು ಗೌರವದಿಂದ ಕಾಣುವ 'ಅರಿವು' ನಮಗಿರಲಿ. ಸೂಕ್ಷ್ಮ ಭಾವನೆ ಹೆಣ್ಣೊಬ್ಬಳಿಗೇ ಮೀಸಲಲ್ಲ ಅನ್ನುವ 'ಎಚ್ಚರ'ವೂ ನಮಗಿರಲಿ.

**ಸೂಕ್ಷ್ಮ ಗ್ರಹಿಕೆ:** ಗ್ರಹಣಶಕ್ತಿ ಯಾರೊಬ್ಬರ ಸ್ವಾಯತ್ತೆಯಲ್ಲ. ಯಾರೂ ಸಾಧಿಸಬಲ್ಲ, ಸಾಧಿಸಲೇಬೇಕಾದ ಸಂವೇದನೆಗಳಲ್ಲೊಂದು. ಪುಟ್ಟ ಮಗು ತನ್ನ ಸುತ್ತಲ ಪ್ರಪಂಚವನ್ನು ತನ್ನ ಗ್ರಹಿಕೆಯಿಂದಲೇ ಅರಿಯುತ್ತ ಬೆಳೆಯುತ್ತದೆ. ಅರಿತಂತೆ ನಡವಳಿಕೆ ಹೊಂದಿಸಿಕೊಳ್ಳುತ್ತದೆ. ದುರದೃಷ್ಟವೆಂದರೆ, ನಾವು ಹಿರಿಯರು, ಆ ಮಗುವಿನ ಗ್ರಹಿಕೆಯನ್ನು ತಿದ್ದಲಾರಂಭಿಸುತ್ತೇವೆ. ಸೂಕ್ಷ್ಮಜ್ಞ ಮನವನ್ನು ಮೊಂಡುಗೊಳಿಸುತ್ತೇವೆ.

ಗಂಡುಮಗು ತಾಯಿಯನ್ನು ಅನುಸರಿಸಿ, ಅನುಕರಿಸುತ್ತಿದ್ದರೆ 'ನೀನು ಗಂಡು, ಹಾಗಿರಬೇಡ, ಹೀಗಿರಬೇಕು' ಎಂದು ತಿದ್ದುತ್ತೇವೆ. ಹೆಣ್ಣನ್ನು 'ಹೀಗೇ ಇರಬೇಕು, ಹಾಗಿರಬಾರದು' ಎಂದು ತೀಡುತ್ತೇವೆ. ಗಂಡಾಟಿಕೆ, ಹೆಣ್ಣಾಟಿಕೆ ಎಂದು ವಿಂಗಡಿಸುತ್ತೇವೆ. ಒಂದು ಗಂಡುಮಗು ಮತ್ತು ಒಂದು ಹೆಣ್ಣುಮಗು ಜೊತೆಯಾಗಿ ಗೊಂಬೆಯಲ್ಲೋ ಪಾತ್ರೆಗಳ ಜೊತೆಗೋ ಕಾರ್-ಬೈಕ್ ಜೊತೆಗೋ ಆಡುತ್ತಿದ್ದರೆ ಹಿರಿಯರಿಗೆ ಮುಜುಗರವಾಗುವುದನ್ನು ಕಂಡಿದ್ದೇನೆ. ಹೆಮ್ಮಗುವಿನ ಕೈಯಿಂದ ಕಾರ್-ಬೈಕ್ ಕಿತ್ತುಕೊಳ್ಳುವ, ಗಂಡುಗೂಸಿನ ದೃಷ್ಟಿಯನ್ನು ಗೊಂಬೆಯಿಂದ ಸರಿಸುವ ಅಮ್ಮನನ್ನು ತಡೆದು ನಿಲ್ಲಿಸಿ ಕೇಳಲೇಬೇಕಿದೆ. ಶಾಸ್ತ್ರೀಯ ನೃತ್ಯ ಕಲಿಯುವ ಗಂಡನ್ನು ಪೋಷಿಸಲೇಬೇಕಿದೆ.

ಹೆಣ್ಣಿಗೆ ಗುಲಾಬಿ, ಗಂಡಿಗೆ ನೀಲಿ ಬಣ್ಣವೆಂದು ಸೀಮಿತಗೊಳಿಸುವ ಆಧುನಿಕ ಸಮಾಜ ಗಂಡಾಗಸದ ನೀಲಿಯಲ್ಲಿ ಭಾನು, ಸೋಮರಂತೆಯೇ ತಾರೆಯರೂ ಇರುವರೆಂದು ಮರೆಯುತ್ತದೆ. ಮೋಡಪಾತ್ರದೊಳಗೆ ತುಂಬಿರುವ ನೀರನೀರೆಯನ್ನು ಚಂಚಲ ನದಿಯಾಗಿಸುತ್ತದೆ. ಸೃಷ್ಟಿರೂಪಿ ಇಳೆಯೊಳಗಿನ ಸಾಗರನನ್ನು ಗಂಭೀರವಾಗಿಸುತ್ತದೆ. ಈ ಎಲ್ಲ 'ಪದ'ಗಳ 'ಲಿಂಗಭೇದ'ವನ್ನು ಪದ ವ್ಯುತ್ಪತ್ತಿಗಷ್ಟೇ ಸೀಮಿತಗೊಳಿಸಿದರೆ ಮಾತ್ರ ಪ್ರಕೃತಿಯೊಳಗೆ ಗಂಡು-ಹೆಣ್ಣು 'ತತ್ತ್ವ'ಗಳು, 'ಶಕ್ತಿ'ಗಳು ಎಷ್ಟು ಸರಿಸಮ ಎಂಬುದು 'ಸಂವೇದ್ಯ'ವಾಗುವುದು. ಈ ಅರಿವಿನ ವಿಸ್ತಾರವೂ ಸೂಕ್ಷ್ಮ ಗ್ರಹಿಕೆಯಿಂದಲಷ್ಟೇ ಸಾಧ್ಯ. ಮಾನವರೆಲ್ಲರೂ ಸೂಕ್ಷ್ಮ ಗ್ರಹಿಕೆಯನ್ನು ಪರಿಗ್ರಹಿಸಿಕೊಂಡರೆ ಪರಸ್ಪರ ಸಂಬಂಧಗಳು ಸೌಹಾರ್ದಯುತವಾಗುತ್ತವೆ; ಜೀವನ ಜೇನಾಗುತ್ತದೆ.

**ಸೂಕ್ಷ್ಮ ಸ್ಪಂದನೆ:** ಸ್ಪಂದನೆ ಮಾನವ ಸಹಜಗುಣ; ಮಾನವನೇನು, ಸಕಲ ಜೀವರಾಶಿಯ ಮೂಲಗುಣ. ಯಾವುದೇ ಒಂದು ಚೋದನೆಗೆ ಜೀವಿಯೊಂದು ಸ್ಪಂದಿಸುವುದು ಆ ಜೀವಿಯು ಜೀವಿಸಿರುವುದಕ್ಕೆ ಸಾಕ್ಷಿ. ನಿರ್ಜೀವವೆಂದು 'ಕಾಣುವ' ಗಿಡ-ಮರಗಳೂ ಸ್ಪಂದಿಸುತ್ತವೆಂಬುದು ವೈಜ್ಞಾನಿಕ ಪ್ರಯೋಗಗಳಿಂದ ಈಗಾಗಲೇ ಸಾಬೀತಾಗಿದೆ. ಅಷ್ಟಿದ್ದೂ ನಾವು ಮನುಜರು ಸೂಕ್ಷ್ಮ ಸ್ಪಂದನೆಯನ್ನು ಹೆಣ್ಣಿಗೆ ಮೀಸಲಿರಿಸಿದ್ದೇವೆ. ಗಂಡಿನ ಸ್ಪಂದನೆಗೆ ಯಾವ ಸ್ಥಾನ ಕೊಟ್ಟಿದ್ದೇವೆ? ನಮಗೆ ಸಿನೆಮಾ

ತೆರೆಯ 'ಕುಪಿತ ಗಂಡು' (Angry young Man) ಅತ್ಯಂತ ಪ್ರೀತಿಪಾತ್ರ. ಮನೆಯೊಳಗೆ? ಈಗಾಗಲೇ ತಿಳಿಸಿದಂತೆ, ಮನೆಯೊಳಗಿನ ಕುಪಿತ ಗಂಡು ಮನೋಚಿಕಿತ್ಸೆ ಪಡೆಯಬೇಕಾಗುವುದು.

ಸ್ಪಂದನೆಯೆನ್ನುವುದು ಸಮಯ-ಸಂದರ್ಭಗಳಿಗೆ ಅನುಕೂಲಕರವಾದಾಗ ವ್ಯಕ್ತಿಗತವಾಗಿ ಹಾಗೂ ಸಾಮಾಜಿಕವಾಗಿ ಹಿತಕರವಾಗಿಯೂ ಪ್ರತಿಕೂಲವಾದಾಗ ಅಹಿತವಾಗಿಯೂ ಇರುವುದು. ಗಂಡು-ಹೆಣ್ಣುಗಳ ಸ್ಪಂದನೆಗಳು ಹಿತ-ಅಹಿತದ ಮಾಪುಗೋಲಿನ ಈ ಎರಡು ಕೊನೆಗಳಲ್ಲಿಯೇ ಇರಬೇಕೆಂದಿಲ್ಲ, ನಡುವಿನಲ್ಲೆಲ್ಲಾದರೂ ಇರುತ್ತವೆ. ಅನುಕೂಲಕರ ಮತ್ತು ಪ್ರತಿಕೂಲಕರ ಸ್ಪಂದನೆಗಳು ಹೆಣ್ಣಿಗೆ/ಗಂಡಿಗೆ ಸೀಮಿತವೆಂದೂ ಏನಿಲ್ಲ. ಸಮಾಧಾನದ ಶಾಂತಚಿತ್ತದ ಸ್ಥಿಮಿತ ನಡವಳಿಕೆಯ ಗಂಡಸರು ಇರುವಂತೆಯೇ ತಟಕ್ಕನೆ ಸಿಡಿದೇಳುವ ಭದ್ರಕಾಳಿಯ ಅಪರಾವತಾರೀ ಹೆಣ್ಣುಗಳೂ ಇಲ್ಲವೆ? ರೋಡ್ ರೇಜ್ ಅಂದಾಕ್ಷಣ ನಾವು ಗಂಡಸರನ್ನೇ ಗಮನಕ್ಕೆ ತಂದುಕೊಳ್ಳುತ್ತೇವೆ. ಸಂಖ್ಯೆಯಲ್ಲಿ ಕಡಿಮೆಯಾದರೂ ರಸ್ತೆರೋಷ ತೋರುವ, ದನಿಯೆತ್ತುವ, ಗನ್ ಎತ್ತುವ, ಹಾಂಕ್ ಹ್ಯಾಪಿ ಹೆಣ್ಣುಗಳಿಲ್ಲವೆ? ಆಸ್ಪತ್ರೆಗಳಲ್ಲಿ ವೈದ್ಯರ ಬಳಿಕ ಶುಶ್ರೂಷೆಯ ಸೇವೆ ಒದಗಿಸುವ ಬಹುತೇಕರು ಮಹಿಳೆಯರು- ದಾದಿಯರು. ಪೂರಕವಾಗಿ, ಮೇಲ್-ನರ್ಸ್ ಅನ್ನುವ ಆಯಾಮ ಇತ್ತೀಚೆಗೆ ಆರ್ಥಿಕವಾಗಿ ಮುಂದುವರಿದ ಕೆಲವು ದೇಶಗಳಲ್ಲಿ ಕಂಡುಬರುತ್ತಿದೆ. ಹಿಂದಿಯ 'ದಾದಾ'ರಂತೆಯೇ ಈ ಶುಶ್ರೂಷಕರು ಅತ್ಯಂತ ಮುತುವರ್ಜಿಯಿಂದ ಕಾಳಜಿ, ಆಸ್ಥೆಯಿಂದ, ಪ್ರೀತಿಯಿಂದ ಅನಾರೋಗ್ಯಪೀಡಿತರ ಸೇವೆ ಮಾಡುತ್ತಾರೆ. ಹಾಗಾದರೆ 'ಸೂಕ್ಷ್ಮ ಸ್ಪಂದನೆ' ಎನ್ನುವುದನ್ನು ಹೆಣ್ಣಿಗೇ ಮೀಸಲಿಡುವುದು ಸರಿಯೇ?

ಸ್ಪಂದನಾಗುಣ ಹೇಗೆ ಜೀವ-ಸಹಜವೋ ಹಾಗೆಯೇ ಸೂಕ್ಷ್ಮ ಸ್ಪಂದನೆ ಮನುಜ-ಸಹಜ ಆಗಬೇಕಾಗಿದೆ. ಮಾನವ ಜೀವಿಯನ್ನು ಜೈವಿಕ ಜಗತ್ತಿನ ಅತ್ಯಂತ ಉನ್ನತ ಸೃಷ್ಟಿಯೆಂದು ನಾವೇ ಕರೆದುಕೊಳ್ಳುತ್ತೇವೆ. ಈ ಹೆಗ್ಗಳಿಕೆಯ ಜೊತೆಗೆ ಸೌಹಾರ್ದಯುತ ನಡವಳಿಕೆ ಮಿಳಿತಗೊಂಡಾಗ ಭೂಮಿ ಸ್ವರ್ಗಸದೃಶವಾಗಬಲ್ಲದು.

ಸಂವೇದನೆಗಳಲ್ಲಿ ಇತ್ತೀಚೆಗೆ ಚಾಲ್ತಿಯಲ್ಲಿರುವಂಥಾದ್ದು: 'ತೃತೀಯ ಲಿಂಗಿಗಳ ಸಂವೇದನೆ'. ಇಲ್ಲಿ ತೃತೀಯ ಲಿಂಗಿಗಳು ಎನ್ನುವುದಕ್ಕೆ ಯಾವುದೇ ವಿಶ್ಲೇಷಣೆಯ ಅಗತ್ಯವಿಲ್ಲ. ಪ್ರಪಂಚಾದ್ಯಂತ ಈ ವಿಚಾರ ಬಹುತೇಕ ಒಪ್ಪಿತವಾಗಿದೆ, ಕೆಲವು ದೇಶಗಳನ್ನು ಹೊರತುಪಡಿಸಿ. ತಮ್ಮ ಹಕ್ಕುಗಳಿಗಾಗಿ, ಸಮಾನ ಸ್ಥಾನಮಾನಗಳಿಗಾಗಿ ತೃತೀಯಲಿಂಗಿಗಳು ಹೋರಾಟ ನಡೆಸುತ್ತಿದ್ದಾರೆ. ನಾವು ಉಳಿದವರು ರಸ್ತೆ ಬದಿಯ ನೋಡುಗರಾಗಿದ್ದೇವೆ. ಅವರಲ್ಲಿ ಅವರ ಹಕ್ಕುಗಳಿಗಾಗಿ ಸ್ಥಾನಕ್ಕಾಗಿ ಪರಸ್ಪರರಿಗಾಗಿ ಸಂವೇದನೆಯಿದ್ದರೆ ನಮ್ಮಲ್ಲಿ ಅವರ ಕುರಿತಾಗಿ ಏನಿದೆ? ಅವರ ಕುರಿತಾದ ಕುತೂಹಲ, ಅಚ್ಚರಿ, ಭಯ, ಮುಜುಗರ, ಹೇವರಿಕೆ, ಹಾಗೂ ಭಯದಿಂದುಂಟಾದ ಗೌರವ ಬಿಟ್ಟರೆ ನಮ್ಮಲ್ಲೆಷ್ಟು ಜನರಿಗೆ ಅವರುಗಳ ಬಗೆಗೆ ಅನುಕಂಪ, ಸಹಾನುಭೂತಿಯಿದೆ? ಬಸ್ಸಿನಲ್ಲೋ ಮೆಟ್ರೋದಲ್ಲೋ ಕ್ರಾಸ್ ಡ್ರೆಸ್ಸರ್ ಒಬ್ಬರ ಪಕ್ಕದ ಸೀಟ್ ಖಾಲಿಯಿದ್ದರೆ ನಿರಾಳವಾಗಿ ಕೂರುವವರೆಷ್ಟು ಮಂದಿ? ತೃತೀಯ

ಲಿಂಗಿ ಸಂವೇದನೆಯ ಈ ಮಗ್ಗುಲಿಗೆ ನಾವುಗಳು ತೆರೆದುಕೊಳ್ಳಬೇಕಿದೆ. ಲೋಕಹಿತಕ್ಕಾಗಿ ಋಷಿಮನಸು ಆಶಿಸಿದ 'ಜಸವು ಜನಜೀವನಕೆ' ಆಗ ಸಾಧ್ಯವಾಗುವುದು. ಸಂವೇದನೆಯು ಸಾರ್ವತ್ರಿಕ, ಸಾರ್ವಜನಿಕವಾಗಲಿ.

**ಮುಗಿಸುವ ಮುನ್ನ:**

ಸಂವೇದನೆಯನ್ನು 'ಜೆಂಡರ್ ಬಯಾಸ್' (ಲಿಂಗ ಸೀಮಿತ) ನೆಲೆಯಲ್ಲಿ ಕಾಣುವ-ವಿಶ್ಲೇಷಿಸುವ ಪರಿಪಾಠವನ್ನು ಮೀರಿ ನಾವೆಲ್ಲರೂ ವಿಸ್ತೃತವಾಗಿ ಚಿಂತಿಸಬೇಕಾಗಿದೆ. ಸಾಹಿತ್ಯವಿರಲಿ ಜೀವನವಿರಲಿ, ಸಂವೇದನೆ ನಮ್ಮ ಬದುಕಿನ ಅವಿಭಾಜ್ಯ ಮತ್ತು ಬಹುಮುಖ್ಯ ನಡೆಯಾಗಬೇಕಿದೆ. ಎಲ್ಲವನ್ನೂ ಎಲ್ಲರನ್ನೂ ಒಂದೇ ಪಟ್ಟಕದಲ್ಲಿ ಕಾಣುವುದು ಎಂದರೂ ಸರಿಯೇ! ಸಂವೇದನೆಯಿಂದ ಸಹೃದಯತೆಯಿಂದ ಕಾಣುವ ಜೀವನಶೈಲಿ ನಮ್ಮದಾಗಬೇಕಿದೆ. ರೈಲಿನಲ್ಲೋ ಬಸ್ಸಿನಲ್ಲೋ ಅಂಗಡಿಯಲ್ಲೋ ಬೀದಿಯಲ್ಲೋ ಕಂಡುಬರುವ ಅನ್ಯರನ್ನು ಅನ್ಯರಾಗಿ ಕಾಣದೆ, ಮಾನವಮಾತ್ರರಾಗಿ ಕಾಣುವ ಮನಃಸ್ಥಿತಿ ರೂಢಿಸಿಕೊಳ್ಳಬೇಕಿದೆ.

**ಕಾಲೇ ವರ್ಷತು ಪರ್ಜನ್ಯಃ। ಪೃಥಿವೀ ಸಸ್ಯಶಾಲಿನೀ॥**
**ದೇಶೋಽಯಂ ಕ್ಷೋಭರಹಿತಃ। ಸಜ್ಜನಾಃ ಸಂತು ನಿರ್ಭಯಾಃ॥**

ಇಂತಹ ಉದಾತ್ತ ಚಿಂತನೆಯುಳ್ಳ ಮನುಜಮತ ನಮ್ಮದು. 'ಕಾಲಕಾಲಕ್ಕೆ ಮಳೆಯಾಗಲಿ, ಭೂಮಿ ಸಸ್ಯಶ್ಯಾಮಲೆಯಾಗಲಿ, (ನಾವುಗಳು ವಾಸಿಸುವ) ಪ್ರದೇಶವು ಕ್ಷೋಭೆರಹಿತವಾಗಿರಲಿ, ಸಜ್ಜನರು ನಿರ್ಭಯರಾಗಿ ಬಾಳಲಿ' ಎನ್ನುವುದು ಇದರ ಸ್ಥೂಲಾರ್ಥ.

ಇದರ ಕೊನೆಯ ವಾಕ್ಯವನ್ನು ಹಿಗ್ಗಿಸಿ ನೋಡುವುದಾದರೆ: ಸತ್-ಜನ (ಒಳ್ಳೆಯ ಜನರು) ನಿರ್ಭಯರಾಗಿರಲಿ ಎನ್ನುವಾಗ 'ಎಲ್ಲಾ ಜನರಿಗೆ ಯಾವುದೇ ರೀತಿಯ ಭಯಗಳು ಇಲ್ಲದಿರಲಿ, ಕೆಟ್ಟತನವು ಇಲ್ಲದಿರಲಿ, ಕೆಟ್ಟದ್ದಾಗದಿರಲಿ' ಎನ್ನುವ ಆಶಯವಿದೆ. ಕೆಟ್ಟತನವೇ ಇಲ್ಲವಾದಾಗ ಎಲ್ಲರೂ ಸಜ್ಜನರು, ಎಲ್ಲರೂ ನಿರ್ಭಯರಾಗಿ ಬಾಳಬಹುದು. ಅಂತಹದೊಂದು ಬಾಳ್ವೆಯ ಕಾಣ್ಕೆ ಕಂಡ ನಾವು ಅದಕ್ಕಾಗಿ ವಿಸ್ತೃತ ಸಂವೇದನೆಯನ್ನೂ ಬೆಳೆಸಿಕೊಂಡು ಬಳಸಿಕೊಂಡು ಬಾಳಬೇಕು.

ಭೂಮಿ ನಮ್ಮದು, ಬದುಕು ನಮ್ಮದು. ನಮ್ಮೆಲ್ಲರದು ಈ ಪೃಥಿವೀ. Live and Let Live.

ಇದೇ ಸಂವೇದನೆ, ಮನುಜ ಸಂವೇದನೆ, ಜೀವಪರ ಸಂವೇದನೆ.



# ಹೊಸ್ತಿಲು ದಾಟಿದವರು

**ಜ್ಯೋತಿ ವೆಂಕಟಸುಬ್ರಹ್ಮಣ್ಯ**
Laramie, Wyoming

*

ನಾಗರಿಕತೆಯೆಂಬ ವ್ಯವಸ್ಥೆ ರೂಪುಗೊಂಡು ಆಧುನಿಕ ಸಮಾಜ ಬೆಳೆಯುತ್ತಿದ್ದಂತೆ ಸ್ತ್ರೀಪರಿವಾರಕ್ಕೂ ತನ್ನನ್ನು ತಾನು ಕಂಡುಕೊಳ್ಳುವ, ತನ್ನ ದಿಗಂತಗಳನ್ನು ವಿಸ್ತರಿಸಿಕೊಳ್ಳುವ ತುಡಿತಗಳು ಸಹಜವಾಗಿಯೇ ಅರಳುತ್ತಾ ಹೋದವು. ಸ್ತ್ರೀ ತನ್ನ ಜಗತ್ತಿನಿಂದ ಸೀಮೋಲ್ಲಂಘನ ಮಾಡಿ ಹೊಸ ಅನುಭವಗಳನ್ನು ತನ್ನದಾಗಿಸಿಕೊಳ್ಳಲು ಪುರುಷ ಪ್ರಪಂಚದಲ್ಲಿ ಕಾಲಿಡುವುದು ಅನಿವಾರ್ಯ. ಈ ಮೊದಲು ಯಾರೂ ನಡೆಯದ ದಾರಿಯಲ್ಲಿ ಒಂಟಿಯಾಗಿ ಮುನ್ನುಗ್ಗಿ ಕಲ್ಲು ಮುಳ್ಳುಗಳನ್ನು ನಿವಾರಿಸಿ ಹಾದಿ ಹಸನುಗೊಳಿಸಿದವರ ಹೆಜ್ಜೆ ಗುರುತುಗಳು ಅನುಸರಿಸಿ ಬರುವ ಪಾದಗಳಿಗೆ ಮಾರ್ಗಸೂಚಿಗಳು. ಅಂತಹ ಇಬ್ಬರು ಹರಿಕಾರರ ಸಂಘರ್ಷಗಳನ್ನು ಹಿಡಿದಿಡುವ ಪ್ರಯತ್ನ ಈ ಲೇಖನ.

**ಝಾನ್ ಬ್ಯಾರೆ (Jeanne Baret) (1740–1816) (ಹಡಗಿನಲ್ಲಿ ಭೂ ಪ್ರದಕ್ಷಿಣೆ ಮಾಡಿದ ಮೊದಲ ಮಹಿಳೆ)**

**ಪ್ಯಾರಿಸ್, 1766**

ಪ್ರಖ್ಯಾತ ಸಸ್ಯಶಾಸ್ತ್ರಜ್ಞ ಕಮರ್ಸನ್‌ಗೆ ಫ್ರಾನ್ಸಿನ ಸೇನಾಪಡೆಯ ನೌಕೆಯಲ್ಲಿ ಸಮುದ್ರಮಾರ್ಗವಾಗಿ ಪ್ರಪಂಚವನ್ನು ಸುತ್ತುಹಾಕುವ ಅವಕಾಶ ದೊರಕಿತ್ತು. ವೃತ್ತಿಯಲ್ಲಿ ವೈದ್ಯನಾಗಿದ್ದರೂ ಸಸ್ಯಶಾಸ್ತ್ರದಲ್ಲಿ ಬಹಳ ದೊಡ್ಡ ಹೆಸರು ಮಾಡಿದ್ದ ಅವನನ್ನು ಈ

ಯಾನದಲ್ಲಿ ಹೊಸ ಸಸ್ಯ ಪ್ರಭೇದಗಳನ್ನು, ಮುಖ್ಯವಾಗಿ ಮಸಾಲೆ, ಕಾಫಿಯಂತಹ ಬಹು ಬೆಲೆಬಾಳುವ ಸಸ್ಯಗಳನ್ನು ಹುಡುಕಿ ತರುವ ಕೆಲಸಕ್ಕಾಗಿ ವಿಶೇಷವಾಗಿ ನೇಮಿಸಲಾಗಿತ್ತು. ನಾಯಕ ಬೋಗನ್ವಿಲ್ ನೇತೃತ್ವ ವಹಿಸಲಿದ್ದ ಎರಡು ದೊಡ್ಡ ಹಡಗುಗಳು ('ಇಟ್ವಾಯಿಲ್' ಮತ್ತು 'ಬೋರ್ದ್ಯೂಸ್') ಮಹತ್ವದ ಸಾಹಸಕ್ಕೆ ತಯಾರಾಗುತ್ತಿದ್ದವು. ಸುಮಾರು ಮೂರು ವರ್ಷಗಳ ದೀರ್ಘ ಪ್ರಯಾಣಕ್ಕೆ ಯೋಜನೆ ತಯಾರಾಗಿತ್ತು. ಅವನ ಮನೆಯ ಕೆಲಸದಾಕೆ ಬ್ಯಾರೆ ಕೂಡಾ ತನ್ನ ಮಾಲೀಕನ ಜೊತೆಯಲ್ಲಿ ಹೊರಟಿದ್ದಳು.

ಇಂತಹ ಅಪಾಯಕಾರಿ, ದುರ್ಗಮ ಸಾಹಸಕ್ಕೆ ಬ್ಯಾರೆ ಕೈಹಾಕುವ ಪ್ರಮೇಯವಾದರೂ ಏನಿತ್ತು?

ಬಹು ಪ್ರತಿಷ್ಠಿತ ಪರಿವಾರದಿಂದ ಬಂದ ಫ್ಲಿಲ್ಬರ್ಟ್ ಕಮರ್ಸನ್ ತಂದೆಯ ಬಲವಂತಕ್ಕೆ ವೈದ್ಯನಾದರೂ ತನ್ನ ಜೀವನವನ್ನೆಲ್ಲಾ ಸಸ್ಯಗಳ ಅಧ್ಯಯನಕ್ಕೇ ಮೀಸಲಾಗಿಟ್ಟಿದ್ದ. ಝಾನ್ ಬ್ಯಾರೆ 'ಬರ್ಗುಂಡಿ' ಎಂಬ ಪ್ರದೇಶದ ಬಳಿ ಹುಟ್ಟಿ ಬೆಳೆದ ಅತ್ಯಂತ ಬಡತನದ, ಊಳಿಗ ಮನೆತನದ ಹುಡುಗಿ. ಆದರೆ ಚಿಕ್ಕ ವಯಸ್ಸಿಗೇ ಅವಳಿಗೆ ಗಿಡಮೂಲಿಕೆಗಳ ಬಗ್ಗೆ ಅದ್ಭುತವಾದ ತಿಳಿವಳಿಕೆ ಇತ್ತು. ಆ ಕಾರಣದಿಂದಲೇ ಅವರಿಬ್ಬರ ಒಡನಾಟ ಪ್ರಾರಂಭವಾಗಿತ್ತು.

ಮದುವೆಯಾದ ಒಂದೇ ವರ್ಷಕ್ಕೆ ಅವನ ಪತ್ನಿ ಹೆರಿಗೆಯ ಸಮಯದಲ್ಲಿ ತೀರಿಕೊಂಡಾಗ ಕಮರ್ಸನ್ ಆ ಮಗುವನ್ನು ಹೆಂಡತಿಯ ತಮ್ಮನಿಗೆ ಸಾಕಲು ಕೊಟ್ಟು 22 ವರ್ಷದ ಬ್ಯಾರೆಯನ್ನು ತನ್ನ ಮನೆಯಲ್ಲೇ ಸಹಾಯಕಿಯಾಗಿ ನೇಮಿಸಿಕೊಂಡಿದ್ದ. ಬ್ಯಾರೆ ಅವನ ಸಂಶೋಧನೆ, ಮನೆಯ ನಿರ್ವಹಣೆ ಎಲ್ಲವೂ ನಿಭಾಯಿಸುತ್ತಾ ಅವನ ದೈಹಿಕ ಸಂಗಾತಿಯೂ ಆಗಿದ್ದಳು. ಆಕೆ ಓದು ಬರಹ ಬಲ್ಲ ವಿದ್ಯಾವಂತೆ. (ಕಮರ್ಸನ್ ಸ್ವತಃ ಅವಳಿಗೆ ಕಲಿಸಿರಬಹುದೆಂದು ಅಂದಾಜು). ಆಕೆ ಗರ್ಭಿಣಿಯಾದಾಗ ಪ್ಯಾರಿಸ್‌ಗೆ ಬಂದು ನೆಲೆಸಿ, ಮಗುವನ್ನು ಹೆತ್ತು ಅನಾಥಾಶ್ರಮದಲ್ಲಿ ಬಿಟ್ಟು ಮಾಲೀಕನ ಸೇವೆಗಷ್ಟೆ ತನ್ನನ್ನು ಒಪ್ಪಿಸಿಕೊಂಡಿದ್ದಳು ಬ್ಯಾರೆ. ಅವನ ಕಾಲಿನಲ್ಲಿ ಯಾವಾಗಲೂ ಗಾಯಗಳಾಗುತ್ತಿದ್ದವು. ನಡೆಯಲು ಕೂಡಾ ಕಷ್ಟಪಡುತ್ತಿದ್ದವನಿಗೆ ಈ ಪ್ರಯಾಣದಲ್ಲಿ ಎಲ್ಲಾ ರೀತಿಯ ಸೇವೆ ಮಾಡಿ, ಗಿಡಮೂಲಿಕೆಗಳನ್ನು ಹುಡುಕಿ ತರಬಲ್ಲವಳು ಬ್ಯಾರೆ ಮಾತ್ರ. ಆದರೆ ಇದಕ್ಕೆ ದೊಡ್ಡ ಅಡ್ಡಿಯೊಂದಿತ್ತು. ಅಂದಿನ ದಿನಗಳಲ್ಲಿ ನೌಕಾಪಡೆಯ ಹಡಗುಗಳಲ್ಲಿ ಮಹಿಳೆಯರಿಗೆ ಕೆಲಸ ಮಾಡಲು ಅವಕಾಶವಿರಲಿಲ್ಲ. ಅವಳೀಗ 'ಪುರುಷ'ನಾಗಬೇಕಿತ್ತು. ಬ್ಯಾರೆ ಮುಗ್ಧ ಕುತೂಹಲದಿಂದ, ಹೊಸ ಗಿಡಮೂಲಿಕೆಗಳನ್ನು ಹುಡುಕಿ ತೆಗೆಯುವ, ಕನಸಿನಲ್ಲೂ ಊಹಿಸದ ಪ್ರಯಾಣಕ್ಕೆ ಅವಕಾಶ ಸಿಕ್ಕಿತೆಂಬ ಉತ್ಸಾಹದಿಂದ ಒಪ್ಪಿದಳೋ, ತನ್ನ ಮಾಲೀಕನ ಆಜ್ಞೆ ಮೀರಲಾರದೆ ಅಸಹಾಯಕತೆಯಿಂದ ಹೊರಟಳೋ ಗೊತ್ತಿಲ್ಲ. ಒಟ್ಟಿನಲ್ಲಿ ತನ್ನ 'ಸ್ತ್ರೀತನ' ಮುಚ್ಚಿಕೊಳ್ಳುವ ಉದ್ದೇಶದಿಂದ ಎದೆಗೆ ದಪ್ಪವಾದ ನೂಲಿನ ಪಟ್ಟಿಗಳನ್ನು ಬಿಗಿದು ಚಪ್ಪಟೆಯಾಗಿಸಿದಳು. ಕೂದಲನ್ನು ಬಿಗಿಯಾಗಿ ಕಟ್ಟಿ ಅಥವಾ ಕತ್ತರಿಸಿ ಮೇಲೊಂದು ಟೋಪಿ ಹಾಕಿ ದೊಗಳೆ ಪ್ಯಾಂಟು, ಸಡಿಲ ಶರ್ಟು ಏರಿಸಿ ಹುಡುಗನಂತೆ ತಯಾರಾದಳು...

(ಆಗಿನ ಕಾಲದಲ್ಲಿ ಫ್ರಾನ್ಸ್‌ನಲ್ಲಿ ಹೆಣ್ಣು ಪುರುಷರಂತೆ ಪ್ಯಾಂಟ್ ಧರಿಸುವುದು ಸಹಾ ಶಿಕ್ಷಾರ್ಹ ಅಪರಾಧವೇ ಆಗಿತ್ತು).

'ಇಟ್ವಾಯಿಲ್' ಫ್ರಾನ್ಸ್ ತೀರವನ್ನು ಬಿಟ್ಟು ಹೊರಡುವಾಗ 'ಜೀನ್' ಎಂಬ ಹೆಸರಿನಲ್ಲಿ ಝಾನ್ ಬ್ಯಾರೆಯೂ ಹಡಗು ಏರಿದಳು. ಸುಮಾರು 200 ಮಂದಿ ಸಿಬ್ಬಂದಿಯಿದ್ದ ದೊಡ್ಡ ಹಡಗು. ನೌಕಾಪಡೆಯ ಅಧಿಕಾರಿಗಳು, ಶಸ್ತ್ರ ವೈದ್ಯ (ವೈವ್ಸ್), ಖಗೋಳ ಶಾಸ್ತ್ರಜ್ಞರು, ಸ್ವತಃ ಹಣ ಕೊಟ್ಟು ಬಂದ ರಾಜಕುಮಾರ (ನಾಸ್ಸು ಸೀಗೆನ್/ಚಾರ್ಲ್ಸ್), ನಾವಿಕರು, ಕೆಲಸಗಾರರು, ಬಂಡಿಗಟ್ಟಲೆ ಆಹಾರ ಸಾಮಗ್ರಿ ಎಲ್ಲವನ್ನೂ ಹೊತ್ತ ಹಡಗು. ಶುರುವಿನಲ್ಲೇ ಬ್ಯಾರೆ ತಾನು ಊಹಿಸಿಯೂ ಇಲ್ಲದ ಆತಂಕ ಎದುರಿಸಬೇಕಾಯಿತು. ಇಂತಹ ಹಡಗುಗಳಲ್ಲಿ ಕೆಲಸಗಾರರು ಉಪಯೋಗಿಸುವ ಶೌಚಾಲಯಗಳು ಹಡಗಿನ ಮೇಲ್ಭಾಗದಲ್ಲಿ ಹಾಯಿಯ ಕೆಳಗೆ ಇರುವ ಒಂದು ದೊಡ್ಡ ಗುಂಡಿ ಅಷ್ಟೆ. ಎಲ್ಲರೂ ಮುಕ್ತವಾಗಿ ಹೋಗುವ, ಬಾಗಿಲುಗಳಿಲ್ಲದ ಮೂಲೆ!. ಆದರೆ ಕಮರ್ಸನ್ ತಂದಿದ್ದ ಉಪಕರಣಗಳು, ದೊಡ್ಡ ಗಾತ್ರದ ಅನೇಕ ಪೆಟ್ಟಿಗೆಗಳು, ಸಸ್ಯಗಳನ್ನು ಸಂಗ್ರಹಿಸಿಡಲು ಇದ್ದ ದೊಡ್ಡ ಹಾಳೆಗಳ ರಾಶಿ ಇವನ್ನೆಲ್ಲಾ ನೋಡಿದ ನೌಕೆಯ ಕ್ಯಾಪ್ಟನ್ ತನ್ನ ಕೋಣೆಯಲ್ಲೇ ಅವನಿಗೆ ಜಾಗ ಕೊಟ್ಟಿದ್ದ. ಅಲ್ಲಿದ್ದ ಚಿಕ್ಕ ಶೌಚಾಲಯ ಮತ್ತು ಸ್ನಾನ ಮಾಡಲು ಇದ್ದ ಜಾಗ ಅವಳಿಗೆ ವರದಾನವಾಗಿತ್ತು. ಆದರೆ ಉಳಿದೆಲ್ಲ ಸಮಯ ಅವಳು ಹಡಗಿನ ಕೆಳಭಾಗದಲ್ಲಿ ನೌಕರರೊಂದಿಗೇ ಕಳೆಯಬೇಕಾಗಿತ್ತು. ಸುಮಾರು 200 ಜೋಡಿ ಕಣ್ಣುಗಳು ಅವಳ ಹಾವ ಭಾವ, ಗಡ್ಡವಿಲ್ಲದ ಕೆನ್ನೆಯ ನುಣುಪು, ವಿಚಿತ್ರವಾದ ಧ್ವನಿ, ಹುದುಗಿಸಿಡಲು ಪ್ರಯತ್ನಿಸಿದಷ್ಟೂ ತೋರುವ ಅವಳ ಹೆಣ್ತನ, ಯಾವುದೇ ಕಾರಣಕ್ಕೂ ಎಲ್ಲರೆದುರು ಮೇಲಂಗಿಯನ್ನೂ ತೆಗೆಯದಿರುವುದು, ಇವೆಲ್ಲವನ್ನೂ ಎಡಬಿಡದೆ ಗಮನಿಸುತ್ತಿದ್ದವು. ಮುಂದಿನ ದಿನಗಳಲ್ಲಿ ತನ್ನ ರಹಸ್ಯ ಬಯಲಾಗದೆ ಉಳಿಯಬೇಕೆಂದು ಅವಳು ಪಟ್ಟ ಪಾಡು ಅಷ್ಟಿಷ್ಟಲ್ಲ. ಹಡಗಿನಲ್ಲಿ ಗಂಡಸರಿಗೆ ಸಮವಾಗಿ ದುಡಿಯುತ್ತಿದ್ದಳು. ಸಮುದ್ರಯಾನದ ಎಲ್ಲಾ ಸಂಕಟಗಳನ್ನು ಅವಡುಗಚ್ಚಿ ಸಹಿಸಿಕೊಂಡಳು. ರಾತ್ರಿ ನೌಕರರೊಂದಿಗೆ ಮಲಗುವಾಗ, ಸಸ್ಯ ಸಂಗ್ರಹಣೆಯ ಸಮಯದಲ್ಲಿ ಅಡ್ಡಾಡುವಾಗ ಕಮರ್ಸನ್‌ನ ಪಿಸ್ತೂಲನ್ನು ಹತ್ತಿರವಿರಿಸಿಕೊಂಡೇ ಇರುತ್ತಿದ್ದಳು. ಇಷ್ಟಾಗಿಯೂ ಕೆಲವೊಮ್ಮೆ ಅವಳ ನಿಜವನ್ನು 'ಪರೀಕ್ಷಿಸುವ' ಪ್ರಯತ್ನಗಳು ನಡೆದಿತ್ತು ಎಂದು ಹಡಗಿನಲ್ಲಿದ್ದ ಶಸ್ತ್ರವೈದ್ಯ ವೈವ್ಸ್ ತನ್ನ ದಿನಚರಿಯಲ್ಲಿ ಬರೆಯುತ್ತಾನೆ. ಪರಿಸ್ಥಿತಿ ಹದಗೆಟ್ಟಾಗ ತಾನು ನಪುಂಸಕನೆಂದು ಹೇಳಿಕೊಂಡು ಹೇಗೋ ಕಷ್ಟಪಟ್ಟು ನಿಭಾಯಿಸಿಕೊಂಡಳು. ಮುಂದಿನ ಎರಡು ವರ್ಷಗಳ ಅವಳ ಜೀವನ ದೊಡ್ಡ ಸಂಘರ್ಷವಾಗಿಯೇ ಪರಿಣಮಿಸಿತು. ಹಡಗು ನಿಂತಲ್ಲೆಲ್ಲಾ ಬೆಳಗಿನಿಂದ ರಾತ್ರಿಯವರೆಗೆ ತೀರಾ ದುರ್ಗಮವಾದ ಪರಿಸ್ಥಿತಿಗಳಲ್ಲಿ ಅತ್ಯಂತ ಭಾರವಾದ ಉಪಕರಣಗಳನ್ನು ಹೊತ್ತು ಒಬ್ಬಳೇ ಕಾಡುಮೇಡುಗಳಲ್ಲಿ, ಹಿಮ ತುಂಬಿದ ಪರ್ವತಗಳಲ್ಲಿ, ದಾರಿಯೇ ತಿಳಿಯದ ಹೊಸ ದ್ವೀಪಗಳಲ್ಲಿ ಅಲೆಯುತ್ತಿದ್ದಳು. ಹೊಸ ತಳಿಯ ಗಿಡಗಳನ್ನು ಹುಡುಕಿ ತರುತ್ತಿದ್ದಳು. ಮತ್ತೆ ಹಡಗಿನಲ್ಲಿ ಅವುಗಳ ಸಂರಕ್ಷಣೆ, ಒಣಗಿಸುವುದು, ಅವುಗಳ ವಿಂಗಡಣೆ,

ಬೀಜಗಳನ್ನು ಕಾಪಾಡುವುದು, ಇದಲ್ಲದೆ ಕಮರ್ಸನ್ ಎಷ್ಟೋ ಜಾತಿಯ ಸಮುದ್ರ ಜೀವಿಗಳನ್ನು, ಕೀಟಗಳನ್ನು ಹಿಡಿದು ತಂದು ಅವುಗಳನ್ನೂ ವಿಚ್ಛೇದಿಸಿ ಅಭ್ಯಸಿಸುತ್ತಿದ್ದ. ಅದಕ್ಕೂ ಬ್ಯಾರೆಯದೇ ಸಹಾಯ. ಕೈ ತುಂಬಾ ಕೆಲಸ. ಕಮರ್ಸನ್ ಅವಳನ್ನು 'ನನ್ನ ಭಾರ ಹೊರುವ ಪ್ರಾಣಿ' ಎಂದು ಕರೆಯುತ್ತಿದ್ದ. ಇದಲ್ಲದೆ ಹಡಗು ನಿಂತಲ್ಲೆಲ್ಲಾ ಎಲ್ಲರೊಂದಿಗೆ ಸೇರಿ ಅವರಿಗೆ ಸಮವಾಗಿ ಮೈಮುರಿಯುವಂತೆ ದುಡಿತ. ನಾವಿಕರನ್ನು ಹೆಚ್ಚಾಗಿ ಕಾಡುತ್ತಿದ್ದ 'ಸ್ಕರ್ವಿ'ರೋಗಕ್ಕೂ ಗಿಡಮದ್ದುಗಳನ್ನು ಹುಡುಕಿ ತಂದು ಔಷಧಿ ತಯಾರಿಸುತ್ತಿದ್ದಳು. (ಆಗ ವಿಟಮಿನ್ 'ಸಿ'ಗೂ ಸ್ಕರ್ವಿಗೂ ಇರುವ ಸಂಬಂಧದ ಬಗ್ಗೆ ಇನ್ನೂ ಅರಿವಿರಲಿಲ್ಲ). ಬೆವರಿನಲ್ಲಿ ತೊಯ್ದು, ಎದೆಗೆ ಅಂಟಿದ್ದ ಪಟ್ಟಿಗಳಿಂದ ಗಾಯಗಳಾಗಿ ಕೀವು ಒಸರುತ್ತಿತ್ತು. ಯಾರೊಂದಿಗೂ ಹೇಳಲಾಗದ, ಮೌನವಾಗಿ ಅನುಭವಿಸಲಾಗದ ಪರಿಸ್ಥಿತಿ. ಹಡಗೆಂದರೆ, ಅದರಲ್ಲೂ ನೌಕರರಿರುವ ಕೆಳಭಾಗವೆಂದರೆ ಹೆಚ್ಚಿನ ಸಂಖ್ಯೆಯಲ್ಲಿ ಸಿಬ್ಬಂದಿಯಿರುವ ಉಸಿರುಗಟ್ಟಿಸುವ ವಾತಾವರಣವಿರುವ, ಏಕಾಂತವಿರದ ಕಿಷ್ಕಿಂಧೆ.

ಅಟ್ಲಾಂಟಿಕ್ ಸಾಗರದಲ್ಲಿ ಪ್ರಯಾಣ ಪ್ರಾರಂಭಿಸಿದ ಇಟ್ವಾಯಿಲ್ ಬ್ರೆಜಿಲ್‌ನ ರಿಯೋನಲ್ಲಿ 'ಬೋರ್ದ್ಯೂಸ್' ಅನ್ನು ಸಂಧಿಸಿತು. ಆ ವೇಳೆಗೆ ಕಮರ್ಸನ್‌ನ ಕಾಲಿನಲ್ಲಿ ದಾರುಣವಾದ ಹುಣ್ಣುಗಳಾಗಿದ್ದವು. ಬ್ಯಾರೆ ಅದಕ್ಕೆ ಔಷಧಿಯನ್ನು ಹುಡುಕುತ್ತಿರುವಾಗ ಕಡು ಕೆಂಪು ಹೂಗಳಿರುವ ಅತ್ಯಾಕರ್ಷಕವಾದ ಬಳ್ಳಿಯೊಂದು ಕಣ್ಣಿಗೆ ಬಿದ್ದಾಗ ಅದೇ ಜಾತಿಯ ಗಿಡದ ಹೂವುಗಳನ್ನು(ಎಲೆಗಳನ್ನು) ಹುಣ್ಣುಗಳಿಗೆ ಬಳಸುವುದು ನೆನಪಾಗಿ ಎಷ್ಟು ಸಾಧ್ಯವೋ ಅಷ್ಟನ್ನು ಹೊತ್ತು ತಂದಳು. ಅದರ ಸೌಂದರ್ಯಕ್ಕೆ ಮಾರುಹೋದ ಕಮರ್ಸನ್ ನಾಯಕನನ್ನು ಮೆಚ್ಚಿಸಲು ಅದಕ್ಕೆ ಅವನದೇ ಹೆಸರಿಟ್ಟು ಉಡುಗೊರೆ ನೀಡಿದ. ಅದೇ ಇಂದು ಎಲ್ಲೆಡೆ ಕಾಣುವ, ನಮ್ಮ ಮನ ಸೂರೆಗೊಂಡಿರುವ 'ಬೋಗನ್ವಿಲ್ಲಾ'!

ಮಾರ್ಚಿ 22, 1767ರಂದು ಎರಡೂ ಹಡಗುಗಳು ಅಟ್ಲಾಂಟಿಕ್ ಸಮುದ್ರವನ್ನು ದಾಟಿ ಪೆಸಿಫಿಕ್ ಮಹಾಸಾಗರದಲ್ಲಿ ಅಡಿಯಿಟ್ಟವು. ನಾವಿಕರಿಗೆ ಇದೊಂದು ಮಹತ್ವದ ಘಟ್ಟ (crossing of the line). ಇದನ್ನು ಆಚರಿಸುವ ಪರಿ ಮಾತ್ರ ಅಸಹ್ಯ, ಭಯ ಹುಟ್ಟಿಸುವಂತದ್ದು. ಮೊದಲ ಬಾರಿಗೆ ಗಡಿ ದಾಟಿದವರನ್ನು 'ಬ್ಯಾಪ್ಟಿಸಮ್' ಎಂಬ ಹೆಚ್ಚೂ ಕಡಿಮೆ ಕ್ರೂರ ಎನ್ನಿಸಬಹುದಾದ ಆಚರಣೆಗೆ ಒಳಪಡಿಸುತ್ತಾರೆ. ಅವರನ್ನು ಸಂಪೂರ್ಣ ನಗ್ನರಾಗಿಸಿ ಮೈಗೆಲ್ಲಾ ಬಣ್ಣ, ಮಸಿ ಬಳಿದು ಮನಬಂದಂತೆ ಎಳೆದಾಡಿ, ಅವಹೇಳನ ಮಾಡಿ ಸಮುದ್ರದಲ್ಲಿ ಎಸೆಯುತ್ತಾರೆ. ಅವರನ್ನು ಮುಂದಿನ ಪ್ರಯಾಣಕ್ಕೆ ತಯಾರು ಮಾಡುವ, ಗಟ್ಟಿಗೊಳಿಸುವ ಉದ್ದೇಶದಿಂದ ನಡೆಸುವ ಬರ್ಬರ ಆಚರಣೆ ಇದು. ನಗ್ನರಾಗಲು ಒಪ್ಪದಿದ್ದವರಿಗೆ 'ಶಿಕ್ಷೆ'ಯೂ ಇರುತ್ತದೆ. ಅಂತಹವರನ್ನು ಹಿಡಿದು ಮೊದಲೇ ಸಂಗ್ರಹಿಸಿಟ್ಟಿದ್ದ ಕೊಳಕು ನೀರಿನಲ್ಲಿ ಮುಳುಗಿಸಿ ಮೇಲೆತ್ತಿ ಅವರ ಮುಖಕ್ಕೆಲ್ಲಾ ಮಸಿ ಬಳಿಯುವುದು ಇತ್ಯಾದಿ. ಆ ದಿನ ಬ್ಯಾರೆ ಏನೇನನ್ನೆಲ್ಲಾ ಅನುಭವಿಸಿದಳು ಎಂಬುದನ್ನು ಕಮರ್ಸನ್ ಅವಳ ಹೆಸರು ಹೇಳದೆ ಪರೋಕ್ಷವಾಗಿ ಆದರೆ ಬಹಳ ವಿವರವಾಗಿ ತನ್ನ ದಿನಚರಿಯಲ್ಲಿ ದಾಖಲಿಸಿದ್ದಾನೆ.

ಬೋಗನ್ವಿಲ್‌ನ ದಿನಚರಿಯಲ್ಲಿ ಮೇ ತಿಂಗಳ 28 – 29ರ ದಿನಾಂಕದಲ್ಲಿ ಎರಡು ಪುಟಗಳಲ್ಲಿ ಹೀಗಿದೆ "ಸುಮಾರು 6 ವಾರಗಳ ಹಿಂದೆ ನಡೆದ ಘಟನೆಯೊಂದನ್ನು ನನ್ನ ಗಮನಕ್ಕೆ ತರಲಾಯಿತು. ನಾವುಗಳು ತಹೀಟಿ ದ್ವೀಪದಲ್ಲಿ ಇಳಿದಾಗ ಅಲ್ಲಿನ ವಾಸಿಗಳು ನಮ್ಮ ಸಸ್ಯಶಾಸ್ತ್ರಜ್ಞ ಕಮರ್ಸನ್‌ನ ಸಹಾಯಕನನ್ನು ಕಂಡೊಡನೆ ಆಕೆ ಗಂಡಲ್ಲ ಹೆಣ್ಣು ಎಂದು ಗುರುತಿಸಿದರಂತೆ ಮತ್ತು ಅವಳನ್ನು ಗಂಡಸರೆಲ್ಲ ಸುತ್ತುವರೆದಿದ್ದರಂತೆ. ಅವಳು ಸಹಾಯಕ್ಕಾಗಿ ಕೂಗಿದಾಗ ಬೋದ್ರ್ಯೂಸ್‌ನ ಲೆಫ್ಟಿನೆಂಟ್ ಧಾವಿಸಿ ಬಂದು ಅವಳನ್ನು ರಕ್ಷಿಸಿ ಹಡಗಿಗೆ ಕರೆತಂದನಂತೆ. ಈ ಮೊದಲು ನಾನು ಜೀನ್ 'ಹೆಣ್ಣು' ಎಂಬ ಪುಕಾರುಗಳನ್ನು ಕೇಳಿದ್ದೆ. ಆದರೆ ಅವಳು ಮಾಡುತ್ತಿದ್ದ ಶ್ರಮದ ಕೆಲಸಗಳನ್ನು ನೋಡಿದರೆ ಹಾಗೆನ್ನಿಸುತ್ತಿರಲಿಲ್ಲ. ಇದರ ಬಗ್ಗೆ ಅವಳಲ್ಲಿ ವಿಚಾರಿಸಿದಾಗ ತಾನು ಅನಾಥೆಯೆಂದೂ, ಹಡಗಿನಲ್ಲಿ ಸುತ್ತಿದರೆ ಪ್ರಪಂಚ ನೋಡಬಹುದೆಂದು ಹೀಗೆ ಮೋಸ ಮಾಡಿದೆ ಎಂದು ಕಣ್ಣೀರಿಟ್ಟಳು. ಒಟ್ಟಿನಲ್ಲಿ ಹಡಗಿನಲ್ಲಿ ಅವಳು ಬಹಳ ಗೌರವಯುತವಾಗಿಯೇ ಇದ್ದಳು. ಸಾಮಾನ್ಯ ರೂಪಿನ ಅವಳಿಗೆ ಇನ್ನೂ ಇಪ್ಪತ್ತೈದು ವರ್ಷವೂ ಕಳೆದಿಲ್ಲ". (ಕಮರ್ಸನ್ ಕೊನೆಯವರೆಗೂ ತನಗೆ ಬ್ಯಾರೆ ಬಗ್ಗೆ ಏನೂ ಗೊತ್ತಿರಲಿಲ್ಲ ಎಂದೇ ಸಾಧಿಸುತ್ತಿದ್ದ!) ಈ ವಿವರಣೆಯನ್ನು ಬಿಟ್ಟರೆ ಮತ್ತ್ಯಾವುದೇ ಸಂದರ್ಭದಲ್ಲೂ ಬ್ಯಾರೆಯ ಬಗ್ಗೆ ಯಾವುದೇ ಮಾತು ಆ ಪುಸ್ತಕದಲ್ಲಿ ಇಲ್ಲ. ಒಂದು ಬಾರಿ ಬೇರೆಲ್ಲೋ "ಈ ವಿಷಯ ತಿಳಿದ ಮೇಲೆ ಅವಳ ಸೌಶೀಲ್ಯವನ್ನು 'ತಳಮಳ'ಗೊಳಿಸುವ ಪ್ರಯತ್ನಗಳನ್ನು ತಡೆಯುವುದು ಕಷ್ಟವಾಗಿತ್ತು" ಎಂದು ಹೇಳಿದ್ದಾನೆ.

ಆದರೆ ಅವನಲ್ಲದೆ ಹಡಗಿನಲ್ಲಿದ್ದ ಇತರರೂ ಕೂಡಾ ದಿನಚರಿಗಳನ್ನು ಬರೆಯುತಿದ್ದರು. ಅವರ ದಿನಚರಿಗಳಲ್ಲಿ ಈ ಘಟನೆ ಇಲ್ಲ. ವೈವ್ಸ್, ಚಾರ್ಲ್ಸ್, ಡಕ್ಲೋ ಗಯೋಟ್ ಈ ಮೂವರ ದಿನಚರಿಯಲ್ಲಿ (ಅವರು 'ಪಾಪಾ ನ್ಯುಗಿನಿ' ಬಳಿಯ 'ನ್ಯೂ ಐರ್ಲ್ಯಾಂಡ್' ದ್ವೀಪದಲ್ಲಿ ತಂಗಿದ್ದಾಗ), ಜುಲೈ 11, 1768ರ ದಿನಾಂಕದಲ್ಲಿ ದಾಖಲಾಗಿರುವ ಘಟನೆಗಳ ವಿವರಣೆ ಓದುವವರ ಮನ ಮೂಕಗೊಳಿಸುತ್ತದೆ. ಅದನ್ನು ವೈವ್ಸ್‌ನ ಮಾತುಗಳಲ್ಲೇ ಹೇಳಬೇಕೆಂದರೆ "ಬಹಳ ದಿನಗಳಿಂದ ಹಡಗಿನ ನೌಕರರ ಮನಸ್ಸಿನಲ್ಲಿ ನಮ್ಮ ಸ್ವಯಂಘೋಷಿತ 'ನಪುಂಸಕ'ಳ ಬಗ್ಗೆ ಇದ್ದ ಅನುಮಾನಗಳನ್ನು 'ಸಾಮೂಹಿಕ'ವಾಗಿ ಪರಿಹರಿಸಿಕೊಳ್ಳುವುದರ ಬಗ್ಗೆ ಯೋಚನೆ ನಡೆಯುತ್ತಿತ್ತು. ಈ ದುರದೃಷ್ಟಕರ ದಿನ ಅದು ನೆರವೇರಿತು. ಅವಳು ಯಾವಾಗಲೂ ಜೊತೆಯಲ್ಲಿ ಒಯ್ಯುತ್ತಿದ್ದ ಪಿಸ್ತೂಲು ಕೂಡಾ ಈ ದಿನ ಕೆಲಸಕ್ಕೆ ಬರಲಿಲ್ಲ. ಪಿಸ್ತೂಲನ್ನು ವಶಪಡಿಸಿಕೊಳ್ಳಲಾಯಿತು ಮತ್ತು ಅದರ 'ಲಾಕ್ ಪ್ಲೇಟ್' ಹಿಂದಕ್ಕೆ ಎಳೆಯಲಾಯಿತು, ಅದರಿಂದ ಬಂದ ಬೆಳಕನ್ನೂ ನೋಡಲಾಯಿತು. ಇನ್ನು ಯಾರಿಗೂ ಯಾವ ಅನುಮಾನವೂ ಉಳಿದಿಲ್ಲ. (ನಾವು) ಈ 'ಪರೀಕ್ಷೆ' ಮಾಡಿದ್ದರಿಂದ ಅವಳಿಗೆ ದೊಡ್ಡ ಉಪಕಾರವೇ ಆಯಿತೆನ್ನಬಹುದು. ಇನ್ನು ಮುಂದೆ ಅವಳು ಎದೆಗೆ ಪಟ್ಟಿ ಬಿಗಿಯಬೇಕಾಗಿಲ್ಲ. ಅದನ್ನು ಬಿಗಿದೂ ಬಿಗಿದೂ ಅವಳ ಚರ್ಮಕ್ಕೆ ಗಾಯಗಳೂ, ಕಲೆಗಳೂ ಬಹಳ ಆಗಿದ್ದವು."

ದೈಹಿಕವಾಗಿ ಮಾನಸಿಕವಾಗಿ ಸಂಪೂರ್ಣ ಜರ್ಜರಿತಳಾದ ಬ್ಯಾರೆ ಸಾವಿನ ಅಂಚಿನಿಂದ ಹೊರಬಂದು ಮತ್ತೆ ಚೇತರಿಸಿಕೊಳ್ಳಲು ಎಷ್ಟು ಕಷ್ಟವಾಯಿತು ಎಂದು ಕಮರ್ಸನ್ ಬಹಳ ಕಾಲ ತನಗೆ ಪತ್ರ ಬರೆದು ಹೇಳುತ್ತಿದ್ದ ಎಂದು ಆ ಸಮಯದಲ್ಲಿ ಹಡಗಿನಲ್ಲಿದ್ದ ಬ್ಯಾರೆಯ ಗೆಳೆಯ ತಹೀಟಿಯ ನಿವಾಸಿ ಬ್ಯುಟಾವರಿ ಮುಂದೊಮ್ಮೆ ಸೂಚ್ಯವಾಗಿ ಹೇಳಿದ್ದಾನೆ. ಆದರೆ ಈ ಘಟನೆಯ ಬಗ್ಗೆ ಯಾರೂ ಎಲ್ಲೂ ನೇರವಾಗಿ ಹೇಳೇ ಇಲ್ಲ. 'ಅವರು' ಯಾರು ಎಂಬ ಸತ್ಯವನ್ನೂ ಬಿಟ್ಟುಕೊಡುವುದಿಲ್ಲ.

ಮುಂದೆ ಹಡಗುಗಳು ಡಿಸೆಂಬರ್ 1768ರಲ್ಲಿ ಹಿಂದೂ ಮಹಾಸಾಗರದಲ್ಲಿ ಫ್ರೆಂಚ್ ವಸಾಹತು ಮಾರಿಷ್ಯಿಯಸ್‌ನಲ್ಲಿ ನಿಂತಾಗ ಕಮರ್ಸನ್ ಮತ್ತು ಬ್ಯಾರೆಯನ್ನು ಅಲ್ಲೆ ಉಳಿದುಕೊಳ್ಳುವಂತೆ ಸೂಚಿಸಲಾಯಿತು. ಅಲ್ಲಿ ಕಮರ್ಸನ್‌ನ ಜೊತೆಗೆ ಮತ್ತೆ ದ್ವೀಪಗಳ (ಮುಖ್ಯವಾಗಿ ಮಡಗಾಸ್ಕರ್) ಪರ್ಯಟನೆ, ಸಸ್ಯಗಳ ಹುಡುಕಾಟ, ಅವನ ಆರೈಕೆ. ಕಮರ್ಸನ್‌ಗೆ ಸಮಾಜದ ಮೇಲ್ವರ್ಗದವರೊಡನೆ ಒಡನಾಟ. ಆದರೆ ಬ್ಯಾರೆಯ ವಾಸ ಆಫೀಸರುಗಳ ಸೇವಕರೊಂದಿಗೆ. ಮಾರಿಶ್ಯಿಯಸ್‌ನಲ್ಲಿ ಅವಳು ಕಳೆದದ್ದು ಏಳು ವರ್ಷಗಳು. ಅಲ್ಲಿ ಕಮರ್ಸನ್‌ನ ಆರೋಗ್ಯ ಕ್ರಮೇಣ ಕ್ಷೀಣಿಸಿ 1773ರ ಮಾರ್ಚಿಯಲ್ಲಿ ಅವನು ನಿಧನವಾದ ನಂತರ ಅವನು ಕೊಂಡಿದ್ದ ಮನೆ, ಅದರಲ್ಲಿದ್ದ ಸಸ್ಯಸಂಗ್ರಹ, ಎಲ್ಲವನ್ನೂ ಫ್ರೆಂಚ್ ಸರ್ಕಾರ ತನ್ನ ವಶಕ್ಕೆ ತೆಗೆದುಕೊಂಡಿತು. ಆ ದಿನಗಳಲ್ಲಿ ಅವಳು ಸ್ವತಂತ್ರವಾಗಿ ಬಾರ್ ಒಂದನ್ನು ನಡೆಸಿದ್ದಳು, ಸಾಕಷ್ಟು ಹಣವನ್ನೂ ಸಂಪಾದಿಸಿದ್ದಳು ಎಂದು ಊಹಿಸಲಾಗಿದೆ.

ಸುಮಾರು 10 ವರ್ಷಗಳು ಬ್ಯಾರೆ ಕಮರ್ಸನ್‌ನ ಒಡನಾಡಿಯಾಗಿದ್ದಳು. ಊಹೆಗೂ ಮೀರಿದ ಧೈರ್ಯ ಸಾಹಸಗಳನ್ನು ಮೆರೆದಳು. ಬೌದ್ಧಿಕವಾಗಿ, ದೈಹಿಕವಾಗಿ ಅವನಿಗೆ ಸಂಗಾತಿಯಾಗಿದ್ದಳು, ಹಗಲಿರುಳೂ ಅವನ ಸೇವೆಯನ್ನೂ ಮಾಡಿದಳು. ಸಸ್ಯಶಾಸ್ತ್ರದ ಜಗತ್ತಿಗೆ ಅವಳು ನೀಡಿದ ಕಾಣಿಕೆ ಅತ್ಯಮೂಲ್ಯವಾದುದು. ಕಮರ್ಸನ್ ಅವಳು ಸಂಗ್ರಹಿಸಿದ ಅನೇಕ ಗಿಡಗಳಿಗೆ ತನ್ನ ಹೆಸರು, ತನಗೆ ಗೊತ್ತಿದ್ದವರೆಲ್ಲರ ಹೆಸರಿಟ್ಟು ಪ್ರೀತಿ, ಗೌರವ ತೋರಿಸಿದ್ದಾನೆ. ಇಷ್ಟಾದರೂ ಕಮರ್ಸನ್‌ನ ಪಾಲಿಗೆ ಅವಳು ಸೇವಕಳಾಗಿಯೇ ಉಳಿದಳು.

ಇಂದು ಪ್ಯಾರಿಸ್‌ನ 'ಮ್ಯೂಸಿಯಮ್ ಆಫ್ ನ್ಯಾಚುರಲ್ ಹಿಸ್ಟರಿ' ಸಂಗ್ರಹದಲ್ಲಿರುವ ಕಮರ್ಸನ್‌ನ ಹಸ್ತಪ್ರತಿಗಳಲ್ಲಿರುವ ಬರವಣಿಗೆ ಬ್ಯಾರೆಳದ್ದೇ ಎಂದು ಗುರುತಿಸಲಾಗಿದೆ. ಅದಲ್ಲದೆ ಒಂದು ಚಿಕ್ಕ ಪುಸ್ತಕವೂ ಆ ಸಂಗ್ರಹದಲ್ಲಿದೆ. ಅದರಲ್ಲಿ ಅನೇಕ ಗಿಡಮೂಲಿಕೆಗಳ ವಿವರಣೆಗಳು ಮತ್ತು ಔಷಧೀಯ ಗುಣಗಳ ವಿವರಣೆ ಇದೆ. ಅದು ಕಮರ್ಸನ್‌ನ ಬರವಣಿಗೆಯದಲ್ಲ. ಆದರೆ ಬ್ಯಾರೆಳ ಹೆಸರು ಕೂಡಾ ಎಲ್ಲೂ ದಾಖಲೆಯಾಗಿಲ್ಲ.

ಮುಂದೆ ಬ್ಯಾರೆ 1774ರಲ್ಲಿ ಫ್ರೆಂಚ್ ಸೈನಿಕ ದುಬೆರಾಂಟ್(Duberant)ನನ್ನು ಮದುವೆಯಾಗಿ ಹಡಗೊಂದರಲ್ಲಿ ಫ್ರಾನ್ಸಿಗೆ ಮರಳಿದಳು. ಅವಳು ತನ್ನ ಹೆಸರನ್ನು ಬದಲಾಯಿಸಿಕೊಂಡು ಪ್ಯಾರಿಸ್‌ನಿಂದ ದೂರವಿರುವ ಚಿಕ್ಕ ಊರಿನಲ್ಲಿ ಅನಾಮಧೇಯಳಾಗಿ ಬದುಕಿದಳು. ಆ ವೇಳೆಗೆ ಬಹಳ ಸ್ಥಿತಿವಂತಳಾಗಿದ್ದಳೆಂದು, ತನ್ನ ಬಂಧು ಬಳಗದವರಿಗೆ

ಸಾಕಷ್ಟು ಸಹಾಯ ಮಾಡಿದಳೆಂದು ಊಹಿಸಲಾಗಿದೆ. ಬ್ಯಾರೆಳ ಬದುಕು ನಮಗೆ ಕಾಣಸಿಗುವುದು ಇತರರ ದಾಖಲೆಗಳಿಂದ, ಅದೂ ಕೇವಲ ಪುರುಷರ ದೃಷ್ಟಿಯಿಂದ ಮಾತ್ರ. ನಮ್ಮ ಪಾಲಿಗೆ ಬಹುಮಟ್ಟಿಗೆ ಅವಳೊಂದು ಒಗಟು. ಅವಳೆಂದೂ ತನ್ನ ಬಗ್ಗೆ ಬರೆಯಲಿಲ್ಲ. ಇದಕ್ಕೆ ಬಹುಶಃ ಆ ಕಾಲಘಟ್ಟದ ಸಾಮಾಜಿಕ ಸ್ಥಿತಿಗತಿಗಳೇ ಕಾರಣವೆನ್ನಿಸುತ್ತದೆ. ಸಸ್ಯಶಾಸ್ತ್ರದ ವಿವರಣೆಗಳು, ಅದರಲ್ಲೂ ಗಿಡದ ಸಂತಾನೋತ್ಪತ್ತಿಯ ಅಂಗಗಳ ವಿವರಣೆ ಅಶ್ಲೀಲ ಮತ್ತು ಮಹಿಳೆಯರು ಅದನ್ನು ಓದುವುದು ಅಗೌರವದ ವಿಷಯ ಎಂದು ಪರಿಗಣಿಸುತ್ತಿದ್ದ ಸಮಯದಲ್ಲಿ ಒಬ್ಬ ಸಸ್ಯಶಾಸ್ತ್ರಜ್ಞೆಯಾಗಿ ಬರೇ ಪುರುಷರಿರುವ ಹಡಗಿನಲ್ಲಿ ಹೋಗುವ ಧೈರ್ಯ ತೋರಿದ ಅವಳನ್ನು ವೇಶ್ಯೆ ಎಂದು ಪರಿಗಣಿಸಿ ಶಿಕ್ಷೆ ನೀಡಿದರೂ ಆಶ್ಚರ್ಯವಿರಲಿಲ್ಲ. ಅದಲ್ಲದೆ ಅವಳ ಚರಿತ್ರೆಯೆಂದರೆ ಸಮಾಜದಲ್ಲಿ ಮತ್ತು ನೌಕಾಪಡೆಯಲ್ಲಿ ಪ್ರಭಾವೀ ಸ್ಥಾನಗಳಲ್ಲಿದ್ದ ಆಫೀಸರುಗಳ ಬಗೆಗಿನ ಕೆಲವು 'ಸತ್ಯ'ಗಳ ಅನಾವರಣವೇ. ಅದರ ಪರಿಣಾಮಗಳನ್ನು ಊಹಿಸಲಾರದಷ್ಟು ಮುಗ್ಧೆಯಾಗಿರಲಿಲ್ಲ ಬ್ಯಾರೆ. ಅವಳ ಬಗ್ಗೆ ಒಂದು ಆಸಕ್ತಿಕರ ದಾಖಲೆ ದೊರಕಿದೆ. ಅದರಲ್ಲಿ 'ಝೂನ್ ಬ್ಯಾರೆ ಎಂಬುವಳು ವೇಷ ಬದಲಿಸಿಕೊಂಡು ಬೋಗನ್ವಿಲ್ ನೇತೃತ್ವ ಹಹಿಸಿದ ಹಡಗಿನಲ್ಲಿ ಭೂ ಪ್ರದಕ್ಷಿಣೆ ಕೈಗೊಂಡಾಗ ಡಾ. ಕಮರ್ಸನ್ ಅವರ ಸಹಾಯಕಳಾಗಿ ಅವರ ಕೆಲಸವನ್ನಷ್ಟೇ ಅಲ್ಲದೆ ಆ ಪ್ರಯಾಣದ ಎಲ್ಲಾ ಅಪಾಯಗಳನ್ನೂ ಎದುರಿಸಿ ಅನುಪಮ ಧೈರ್ಯ ಪ್ರದರ್ಶಿಸಿದ್ದಾಳೆ. ಅವಳ ಅತ್ಯುತ್ತಮ ನಡತೆಯನ್ನು ಬೋಗನ್ವಿಲ್ ಅವರೇ ಕೊಂಡಾಡಿದ್ದಾರೆ. ಡಾ. ಕಮರ್ಸನ್‌ನ ನಿಧನದ ನಂತರ ಆಕೆ ವಿವಾಹವಾಗಿ ತನ್ನ ಪತಿ, ಸೈನಿಕ ದುಬೆರಾಂಟ್‌ನೊಂದಿಗೆ ಜೀವನ ನಡೆಸುತ್ತಿದ್ದಾಳೆ. ಈಗ ಕಾರಣಾಂತರಗಳಿಂದ ಅವರಿಗೆ ದುಡಿದು ತಿನ್ನುವ ಸಾಮರ್ಥ್ಯವಿಲ್ಲ. ಆದ್ದರಿಂದ (ಸಾಗರ) ಸಚಿವಾಲಯ ಅವಳಿಗೆ ಅಂಗವಿಕಲ ಸೈನಿಕರ ಧನದಿಂದ 200 ಪೌಂಡ್‌ಗಳಷ್ಟು ವಾರ್ಷಿಕ ಪಿಂಚಣಿ ನೀಡಲಿದೆ ಮತ್ತು ಈ ಹಣ ಜನವರಿ 1, 1785ರಿಂದ ಸಂದಾಯವಾಗಲಿದೆ' ಎಂದು ಬರೆದಿದೆ.

2012ರಲ್ಲಿ ಸಸ್ಯಶಾಸ್ತ್ರದ ಜಗತ್ತು 'ಸೊಲಾನಮ್' ಅಂದರೆ ಬದನೇಕಾಯಿ, ಟೊಮೇಟೋ ಜಾತಿಯ ಬಳ್ಳಿಯೊಂದಕ್ಕೆ 'ಸೊಲಾನಮ್ ಬ್ಯಾರಿಯೇಟ' ಎಂದು ಹೆಸರಿಟ್ಟು ಬ್ಯಾರೆಳನ್ನು ಗೌರವಿಸಿದೆ. 2018ರಲ್ಲಿ ಕ್ಷುದ್ರ ಗ್ರಹ ಪ್ಲೂಟೋವಿನ ಮೇಲೆ ಚಿಕ್ಕ ಪರ್ವತ ಶ್ರೇಣಿಯೊಂದಕ್ಕೆ ಬ್ಯಾರೆಯ ಹೆಸರಿಟ್ಟು ಗೌರವಿಸಲಾಗಿದೆ (Baret Montes). 2022ರಲ್ಲಿ ಫ್ರಾನ್ಸ್‌ನ ಕಡಲು ರಕ್ಷಣಾಪಡೆಯ ಹಡಗೊಂದಕ್ಕೆ ಬ್ಯಾರೆಳ ಹೆಸರಿಟ್ಟು ಗೌರವಿಸಲಾಗಿದೆ.

"ಕಮರ್ಸನ್ ಅವರ ಸೇವಕನಾಗಿದ್ದವನು ಗಂಡಿನ ವೇಷ ಧರಿಸಿದ 'ಹೆಣ್ಣು' ಎಂದು ಹಡಗಿನಲ್ಲಿದ್ದವರು (The men) ಶೋಧಿಸಿಬಿಟ್ಟರು. ಅವಳನ್ನು ಇಂತಹ ಕಠಿಣ ಯಾನದಲ್ಲಿ ಉಳಿಸಿಕೊಂಡ ಡಾ. ಕಮರ್ಸನ್‌ರವರ ತೇಜೋವಧೆ ಮಾಡದೆ ಅವಳ ಧೈರ್ಯಕ್ಕೆ ಎಲ್ಲಾ ಶ್ರೇಯವನ್ನೂ ಸಲ್ಲಿಸುತ್ತೇನೆ. ಅವಳನ್ನು ಗೆದ್ದೆವೆಂದುಕೊಂಡ ಜುಜುಬಿಗಳಿಗಿಂತ ಬಹಳ ದೊಡ್ಡದು ಅವಳ ಧೈರ್ಯ. ಅವಳು ಆತಂಕದ ಸನ್ನಿವೇಶಗಳನ್ನು, ಅಪಾಯಗಳನ್ನು, ಇಂತಹ ಪ್ರಯಾಣಗಳಲ್ಲಿ ವಾಸ್ತವಿಕವಾಗಿ ಏನೆಲ್ಲ ಸಂಭವಿಸಬಹುದೆಂದು

ಊಹಿಸಬಹುದೋ ಅದನ್ನೆಲ್ಲಾ ಛಲದಿಂದ ಎದುರಿಸಿದಳು. ಅವಳ ಸಾಹಸ ಜಗತ್ತಿನ ಪ್ರಸಿದ್ಧ ಮಹಿಳೆಯರ ಇತಿಹಾಸದಲ್ಲಿ ಸೇರಬೇಕೆಂದು ನಾನು ನಂಬುತ್ತೇನೆ."

**– ನಾಸ್ಸು ಸೀಗೆನ್ (ಚಾರ್ಲ್ಸ್)**

ಜುಲೈ 1768.

**ಸಿಸಿಲಿಯಾ ಪೇಯಿನ್ ಗಪೋಷ್ಕಿನ್ (1900 – 1979)**
**ತಾರೆಗಳ ಒಡಲಲ್ಲೇನಿದೆ ಎಂದು ಕಂಡುಹಿಡಿದ ವಿಜ್ಞಾನಿ.**

1921 ನ್ಯೂನಮ್ ಕಾಲೇಜು, ಕೇಂಬ್ರಿಡ್ಜ್ ವಿಶ್ವವಿದ್ಯಾಲಯ

"ಲೇಡೀಸ್ ಅಂಡ್ ಜೆಂಟಲ್‌ಮೆನ್"... ಪ್ರಸಿದ್ಧ ಭೌತಶಾಸ್ತ್ರಜ್ಞ ರುದರ್‌ಫೋರ್ಡ್ ತಮ್ಮ ತರಗತಿಯನ್ನು ಪ್ರಾರಂಭಿಸುತ್ತಿದ್ದರು. ಅವರ ಚೂಪಾದ ನೇರ ದೃಷ್ಟಿ ಮುಂದಿನ ಬೆಂಚಿನಲ್ಲಿ ತಮ್ಮ ಮೂಗಿನ ಕೆಳಗೇ ಎಂಬಷ್ಟು ಹತ್ತಿರದಲ್ಲಿ ಕುಳಿತ ಒಬ್ಬಳೇ ವಿದ್ಯಾರ್ಥಿನಿಯ ಮೇಲೆ ಇತ್ತು. ಅವರು ಹಾಗೆನ್ನುತ್ತಿದ್ದಂತೆಯೇ ಉಳಿದ ವಿದ್ಯಾರ್ಥಿಗಳೆಲ್ಲಾ ಕಿವಿಗಡಚಿಕ್ಕುವಂತೆ ಚಪ್ಪಾಳೆಯ ಮಳೆ ಸುರಿಸಿ, ಕಾಲುಗಳನ್ನು ನೆಲಕ್ಕೆ ಬಡಿದು ಪ್ರತಿಕ್ರಿಯೆ ನೀಡುತ್ತಿದ್ದರು. ಆ ವಿದ್ಯಾರ್ಥಿನಿಗೆ ತಾನು ಈ ಕ್ಷಣಕ್ಕೆ ಭೂಮಿಯೊಳಗೆ ಕುಸಿದುಹೋಗಬಾರದೇ ಎನ್ನಿಸುತ್ತಿತ್ತು. ಇದು ಅಲ್ಲಿ ಪ್ರತಿ ದಿನವೂ ಪುನರಾವರ್ತನೆಯಾಗುತ್ತಿದ್ದ ದೃಶ್ಯ. ಹಾಗೆಂದು ತನ್ನ ಜೀವದ ಉಸಿರಾಗಿದ್ದ ಭೌತಶಾಸ್ತ್ರವನ್ನು ಬಿಟ್ಟೋಡುವಷ್ಟು ಹೇಡಿಯಲ್ಲ ಸಿಸಿಲಿಯಾ. ಕೇಂಬ್ರಿಡ್ಜ್‌ಗೆ ಪ್ರವೇಶ ಪಡೆಯುವುದಕ್ಕೆ ಸಾಕಷ್ಟು ಕಷ್ಟಪಟ್ಟಿದ್ದಳು. ವಿಜ್ಞಾನಿಯಾಗಬೇಕೆಂಬ ತನ್ನ ಜೀವನದ ಗುರಿಯನ್ನು ಸಾಧಿಸುವಲ್ಲಿ ಇಂತಹುದಕ್ಕೆಲ್ಲಾ ಹೆದರುವ ಅವಕಾಶವೇ ಇರಲಿಲ್ಲ.

ಮುಂದೆ ಖಭೌತ ಶಾಸ್ತ್ರದ ಪ್ರವರ್ತಕರಲ್ಲಿ ಒಬ್ಬರಾಗಿ, ಖಗೋಳ ವಿಜ್ಞಾನ ಲೋಕದ ಧ್ರುವ ತಾರೆ ಎನ್ನಿಸಿಕೊಂಡ ಸಿಸಿಲಿಯಾ ಪೇಯಿನ್ ಗಪೋಷ್ಕಿನ್ ಬದುಕಿನ ಕಥೆ ತಾರಾವಲೋಕನದಷ್ಟೇ ರೋಮಾಂಚಕಾರಿ.

**ವಿಂಡೋವರ್‌ನ ದಿನಗಳು:**

ಐದರ ಎಳೆ ವಯಸ್ಸಿನಲ್ಲೇ ಆಕಾಶದಲ್ಲಿನ ಉಲ್ಕೆಗಳು, ಧೂಮಕೇತುಗಳು, ನಕ್ಷತ್ರಗಳ ಸೆಳೆತ ಸಿಸಿಲಿಯಾಗೆ. ಆದರೆ ಆಗಲೇ ತಂದೆ ತೀರಿಕೊಂಡಿದ್ದರಿಂದ ಅವಳ ಬದುಕು ಅಷ್ಟೇನೂ ಸುಗಮವಾಗಿರಲಿಲ್ಲ. ತಾಯಿ ಎಮ್ಮಾ ಹೆಲೆನ್‌ಗೆ ಮಗನ ಬೆಳವಣಿಗೆಯೇ ಮುಖ್ಯವಾಗಿತ್ತು.

ಎಲಿಜಬೆತ್ ಎಡ್ವರ್ಡ್ಸ್ ಎಂಬ ಅತ್ಯುತ್ತಮ ಶಿಕ್ಷಕಿಯ ಶಾಲೆಯಲ್ಲಿ ಮೊದಲ ವಿದ್ಯಾಭ್ಯಾಸ. ಮನೆಯಲ್ಲಿದ್ದ ರಾಶಿ ರಾಶಿ ಪುಸ್ತಕಗಳೇ ಸಿಸಿಲಿಯಾಳ ಗೆಳೆಯ ಗೆಳತಿಯರು. ಅವಳಿಗೆ ಅದಮ್ಯ ಕುತೂಹಲ. "ಜೀಸಸ್ ಏಕೆ ಗಂಡು, ಏಕೆ ಹೆಣ್ಣಲ್ಲ?" "ಬಹುಶಃ ಆಗಿನ ಕಾಲಕ್ಕೆ ಜೀಸಸ್ ಹೆಣ್ಣಾಗಿದ್ದರೆ ಅಷ್ಟೆಲ್ಲಾ ಸಾಧಿಸಲು ಸಾಧ್ಯವಾಗುತ್ತಿರಲಿಲ್ಲವೇನೋ" ಟೀಚರ್ ಸಮಜಾಯಿಷಿ. "ನಾನು ಏನು ಬೇಕಾದರೂ ಓದಬಹುದಾ? ಎನ್ಸೈಕ್ಲೋಪೀಡಿಯಾ

ಬ್ರಿಟಾನಿಕಾ ಕೂಡಾ?" "ಹೌದು, ಚೆನ್ನಾಗಿ ಶಿಕ್ಷಣ ಪಡೆದರೆ ಖಂಡಿತಾ ಹೌದು." "ಅಮ್ಮ ಮಕ್ಕಳು ಹೇಗೆ ಬರ್ತಾರೆ ಹೇಳು?" "ಅಮ್ಮನ ಹೊಟ್ಟೆಯಿಂದ ಹೀಗೆ." ಕಾಟ ತಡೆಯಲಾರದೆ ಅಮ್ಮ ಉತ್ತರ ಕೊಟ್ಟರೆ ಮರು ಪ್ರಶ್ನೆ ಹಾಜರ್ "ಮತ್ತೆ ಅಪ್ಪ ಏಕೆ ಬೇಕು?". ಯಾವುದೋ ಸ್ಪರ್ಧೆಯಲ್ಲಿ ಮೊದಲ ಬಹುಮಾನ ಬಂದಾಗ ಯಾವ ಪುಸ್ತಕ ಬೇಕು ಎಂದು ಕೇಳಿದ್ದಕ್ಕೆ 'ಶಿಲೀಂಧ್ರ'(Fungi)ಗಳ ಬಗ್ಗೆ ಬರೆದ ಪುಸ್ತಕ ಕೇಳಿ ಎಲ್ಲರನ್ನೂ ಆಶ್ಚರ್ಯಗೊಳಿಸಿದ್ದಳು.

ಶಾಲೆಯಲ್ಲಿ ವಿಜ್ಞಾನ, ಗಣಿತಗಳ ಪರಿಚಯವೂ ಚೆನ್ನಾಗಿ ಆಯಿತು. ಇದೆಲ್ಲವೂ ಬದಲಾಗುವ ದಿನಗಳೂ ಬಂದವು. ಸಿಸಿಲಿಯಾಳ ತಮ್ಮ ಹಂಫ್ರಿಗೆ ಉತ್ತಮ ಶಿಕ್ಷಣ ಕೊಡಿಸಬೇಕಾದ್ದು ಮುಖ್ಯ ಎಂದು ತೀರ್ಮಾನಿಸಿದ ಎಮ್ಮಾ ಹೆಲೆನ್ ಮೂವರು ಮಕ್ಕಳೊಂದಿಗೆ ಲಂಡನ್‌ನಲ್ಲಿ ನೆಲೆಸುವ ನಿರ್ಧಾರ ಮಾಡಿದರು.

**ಕನಸುಗಳು ನನಸಾಗುವತ್ತ – ಲಂಡನ್**

ಲಂಡನ್ನಿನಲ್ಲಿ ತಮ್ಮನಿಗೆ ಪ್ರತಿಷ್ಠಿತ ಶಾಲೆಗೆ ಹೋಗುವ ಅವಕಾಶ. ಸಿಸಿಲಿಯಾಳ ಪಾಲಿಗೆ ಹೆಣ್ಣುಮಕ್ಕಳ ಕ್ಯಾಥೋಲಿಕ್ ಶಾಲೆ. ಹೆಣ್ಣುಮಕ್ಕಳು ಸಾಹಿತ್ಯ, ಕಲೆ, ಬೈಬಲ್ ಬಿಟ್ಟು ಬೇರೆ ಓದಿದರೆ ಪತಿತೆಯರಾಗುತ್ತಾರೆ ಎಂಬ ಎಚ್ಚರಿಕೆ. ಪ್ಲೇಟೋ, ಅರಿಸ್ಟಾಟಲ್, ಐಸಾಕ್ ನ್ಯೂಟನ್‌ರನ್ನು ಅರಗಿಸಿಕೊಂಡ ಸಿಸಿಲಿಯಾ ನೀರಿನಿಂದ ಹೊರಬಿದ್ದ ಮೀನಾದಳು.

'ಪ್ಲೇಟೋ'ನ ಎರಡು ಪುಸ್ತಕಗಳನ್ನು ತೆಗೆದುಕೊಂಡು ಬುಕ್‌ಬೈಂಡರ್‌ನ ಬಳಿ ಹೋಗಿ ಇದನ್ನು ಒಟ್ಟಿಗೆ ಸೇರಿಸಿ ಪುಸ್ತಕದ ಬೆನ್ನಿನಲ್ಲಿ 'ಬೈಬಲ್' ಎಂದು ಬರೆದುಕೊಡು ಎಂದು ಹಠ ಹಿಡಿದಳು! ಆದರೆ ಅಂತಹ ಪಾಪ ಮಾಡಲು ಅವನು ಸಿದ್ಧವಿರಲಿಲ್ಲ. ಸ್ಕೂಲಿನಲ್ಲಿ "ನಾನು ಹೈಸ್ಕೂಲಿನ ವಿಜ್ಞಾನವನ್ನು ಓದಬೇಕು, ನನಗೆ ಕೇಂಬ್ರಿಡ್ಜ್‌ಗೆ ಹೋಗಲಿಕ್ಕಿದೆ" ಎಂದು ಪ್ರಾಂಶುಪಾಲರಿಗೆ ದುಂಬಾಲು ಬಿದ್ದಳು. ಉಳಿದವರೆಲ್ಲ ಗುಣಿತ, ಭಾಗಾಕಾರದ ಓಂಕಾರ ಕಲಿಯುತಿದ್ದರೆ ಸಿಸಿಲಿಯಾ ಮನೆಯಲ್ಲಿ ತಾನೇ ಯೂಕ್ಲಿಡ್‌ನ ನಿಯಮಗಳು, ಕ್ಯಾಲ್ಕ್ಯುಲಸ್, ಚತುರ್ಘಾತ ಸಮೀಕರಣ(Quadratic Equations)ಗಳನ್ನು ಕಲಿತಳು. ಶಾಲೆಯಲ್ಲಿ ಇವಳ ಸಂಕಟ ನೋಡಲಾಗದೆ ಇವಳಿಗೆಂದೇ ಪ್ರತ್ಯೇಕವಾಗಿ ಗಣಿತದ ಶಿಕ್ಷಕಿಯನ್ನು ನೇಮಿಸಲಾಯಿತು. 17 ವರ್ಷದ ಸಿಸಿಲಿಯಾಳ ಗಣಿತದ ಮೇಲಿನ ಅತ್ಯುತ್ಸಾಹ, ಆ ಟೀಚರ್‌ಗೆ ಇವಳಿಗೆ ತನ್ನ ಮೇಲೆ ಮನಸ್ಸಾಗಿದೆ ಎಂದು ತಪ್ಪು ತಿಳಿದುಕೊಳ್ಳುವ ಹಾಗೆ ಮಾಡಿಬಿಟ್ಟಿತು ಮತ್ತು ದೂರು ಕೊಡುವಷ್ಟು ಪರಿಸ್ಥಿತಿ ಬಿಗಡಾಯಿಸಿತು. ಶಾಲೆಗೆ ಸಿಸಿಲಿಯಾ ಮತ್ತು ಸಿಸಿಲಿಯಾಗೆ ಶಾಲೆ ಸಾಕೆನ್ನಿಸಿತು. ಹೈಸ್ಕೂಲಿನ ಕೊನೆಯ ವರ್ಷದಲ್ಲಿ ಅಂತೂ ಸೆಂಟ್ ಪಾಲ್ ಹೆಣ್ಣುಮಕ್ಕಳ ಶಾಲೆಗೆ ಪ್ರವೇಶ ಸಿಕ್ಕಿತು. ಸಿಸಿಲಿಯಾಳ ಮಟ್ಟಿಗೆ ಸ್ವರ್ಗದ ಬಾಗಿಲೇ ತೆರೆಯಿತು. ಹೆಣ್ಣುಮಕ್ಕಳ ಉನ್ನತ ಶಿಕ್ಷಣಕ್ಕೆಂದೇ ಇದ್ದ ಶಾಲೆ ಅದು. ಅತ್ಯುತ್ತಮ ಪ್ರಯೋಗ ಶಾಲೆಗಳು, ಶಿಕ್ಷಕಿಯರು, ಗ್ರಂಥಾಲಯ, ಸಂಗೀತ ಶಾಲೆ. 'ಅಬ್ಬಾ, ಇನ್ನು ಮುಂದೆ ನಾನು ಒಂಟಿಯಲ್ಲ, ವಿಜ್ಞಾನ ಓದಬಹುದಲ್ಲ' ಎಂದು ಆನಂದದಿಂದ

ತೇಲಾಡಿದಳು. ಆದರೆ ಗಣಿತವನ್ನು ಮುಖ್ಯ ವಿಷಯವನ್ನಾಗಿ ತೆಗೆದುಕೊಳ್ಳಲು ಕಾಲ ಮಿಂಚಿತ್ತು. ಶಿಕ್ಷಕಿ ಮಿಸ್ ಪೆಂಡಲ್ ಬರ್ರಿ ಒಂದು ವರ್ಷದಲ್ಲಿ ಕಾಲೇಜು ಮಟ್ಟದ ಭೌತವಿಜ್ಞಾನವನ್ನೆಲ್ಲಾ ಅರೆದು ಕುಡಿಸಿದರು. ರಸ್ತೆಯಲ್ಲಿ ನಡೆಯುವಾಗಲೆಲ್ಲ ಸಾಪೇಕ್ಷ ಸಿದ್ಧಾಂತವೇ (Theory of Relativity) ತಲೆಯಲ್ಲಿ ನರ್ತಿಸುತ್ತಿತ್ತು. ಯಾವುದಕ್ಕೆ ಸಾಪೇಕ್ಷ? ಕಾಡುತ್ತಿದ್ದ ಪ್ರಶ್ನೆಗೆ 'ಬ್ರಹ್ಮಾಂಡಕ್ಕೆ' ಎಂಬ ಉತ್ತರ ಹೊಳೆದೊಡನೆ ಮೈಯಲ್ಲಿ ವಿದ್ಯುತ್ ಸಂಚಾರವಾದಂತಾಯಿತು. ಒಂದು ಕ್ಷಣ ಹೃದಯದ ಬಡಿತ ತಪ್ಪಿತು. ಮಿಸ್ ಪೆಂಡಲ್ ಬರ್ರಿಗೆ ಸಿಸಿಲಿಯಾಳ ಭವಿಷ್ಯ ಸ್ಪಷ್ಟವಾಗಿ ಗೋಚರಿಸುತಿತ್ತು. ಆದರೆ ಕೇಂಬ್ರಿಡ್ಜ್‌ಗೆ ಹೋಗಬೇಕಾದರೆ ಅವಳಿಗೆ ಸ್ಕಾಲರ್‌ಶಿಪ್ ಅನಿವಾರ್ಯವಾಗಿತ್ತು. ಪೆಂಡಲ್ ಬರ್ರಿ ಅವಳನ್ನು ಸ್ಕಾಲರ್‌ಶಿಪ್ ಪರೀಕ್ಷೆಗೆ ತಯಾರು ಮಾಡಿದರು. ಇದ್ದ ಒಂದೇ ಒಂದು ಸ್ಕಾಲರ್‌ಶಿಪ್ ಸಿಸಿಲಿಯಾಳ ಪಾಲಾಯಿತು. ಗಣಿತಕ್ಕಾಗಿ ಇನ್ನೊಂದು ಪರೀಕ್ಷೆಯನ್ನೂ ತೆಗೆದುಕೊಳ್ಳಬೇಕಾಯಿತು.

**ಕೇಂಬ್ರಿಡ್ಜ್ – ವಿಜ್ಞಾನಿ ಸಿಸಿಲಿಯಾ**

1919ರಲ್ಲಿ ಸಿಸಿಲಿಯಾ ಕೇಂಬ್ರಿಡ್ಜ್‌ನ 'ನ್ಯೂನಮ್'ಗೆ ಬಂದಾಗ ಅಲ್ಲಿ ಸುಮಾರು 600 ವಿದ್ಯಾರ್ಥಿನಿಯರಿದ್ದರು. (ಆದರೆ ಭೌತಶಾಸ್ತ್ರ ವಿಭಾಗಕ್ಕೆಲ್ಲ ಸಿಸಿಲಿಯಾ ಒಬ್ಬಳೆ ಹುಡುಗಿ). ಹಳೆಯ ಬಂಧನಗಳನ್ನೆಲ್ಲ ಕಳಚಿ ಹೊಸ ಸ್ವಾತಂತ್ರ್ಯಕ್ಕೆ ಹಾತೊರೆಯುತ್ತಿದ್ದ ಮನಸುಗಳು. ಆ ಯುವ ಚೈತನ್ಯಗಳನ್ನು ಶಿಸ್ತಿನ ಸಂಪ್ರದಾಯಗಳ ಕಟ್ಟುಪಾಡುಗಳಲ್ಲಿ ಹಿಡಿದಿಡುವ ಪ್ರಯತ್ನದಲ್ಲಿದ್ದ ಆಡಳಿತ ವರ್ಗ. ಹೊರ ಹೋಗುವಾಗ ತಲೆಗೆ ಹ್ಯಾಟ್ ಧರಿಸಬೇಕು, ಕಾಲಿಗೆ ಸ್ಟಾಕಿಂಗ್‌ಗಳನ್ನು ಹಾಕಿರಲೇಬೇಕು, ರಾತ್ರಿ ಹತ್ತು ಗಂಟೆಯ ಒಳಗೆ ರೂಮು ಸೇರಬೇಕು ಇತ್ಯಾದಿ.

ಸಾಮಾನ್ಯವಾಗಿ ಹೆಣ್ಣುಮಕ್ಕಳಿಗೆ ಜೀವಶಾಸ್ತ್ರ, ಸಸ್ಯಶಾಸ್ತ್ರ ಮತ್ತು ರಾಸಾಯನಿಕ ಶಾಸ್ತ್ರಗಳನ್ನು ವಿಷಯಗಳನ್ನಾಗಿ ಆರಿಸಿಕೊಳ್ಳುವಂತೆ ಸೂಚಿಸಲಾಗುತ್ತಿತ್ತು. ಆದರೆ ಸಿಸಿಲಿಯಾ ಭೌತಶಾಸ್ತ್ರವನ್ನು ಬಿಟ್ಟುಕೊಡಲು ಸಿದ್ಧಳಿರಲಿಲ್ಲ. ಬಾಟನಿ, ಕೆಮಿಸ್ಟ್ರಿಗಳು ಓಕೆ ಆದರೆ ಭೌತಶಾಸ್ತ್ರ ಬೇಕೇ ಬೇಕು ಎಂದು ಹಠ ಹಿಡಿದು ಒಪ್ಪಿಸಿದಳು. ಕೆಲವು ದಿನಗಳಲ್ಲೇ ಅವಳ ಜೀವನದ ದಿಕ್ಕನ್ನೇ ಬದಲಾಯಿಸುವ ಘಟನೆಯೊಂದು ನಡೆಯಿತು. ಭೌತಶಾಸ್ತ್ರದ ಪ್ರಾಧ್ಯಾಪಕ, ಕೇಂಬ್ರಿಡ್ಜ್ ತಾರಾ ವೀಕ್ಷಣಾಲಯದ ನಿರ್ದೇಶಕ ಆರ್ಥರ್ ಎಡಿಂಗ್ಟನ್‌ರ ವಿಶೇಷ ಉಪನ್ಯಾಸ ಕೇಳುವ ಅಪರೂಪದ ಅವಕಾಶ ಸಿಸಿಲಿಯಾಗೆ ಆಕಸ್ಮಿಕವಾಗಿ ಸಿಕ್ಕಿತು. ಉಪನ್ಯಾಸ ಕೇಳಿದ ಸಿಸಿಲಿಯಾಗೆ ಸಿಡಿಲು ಹೊಡೆದ ಅನುಭವ. ತನ್ನ ರೂಮಿಗೆ ಬಂದು ಇಡೀ ಉಪನ್ಯಾಸವನ್ನು ಬರೆದಿಟ್ಟಳು. ಎಡಿಂಗ್ಟನ್ ಅವಳ ಆರಾಧ್ಯ ದೈವವಾದ. ಮೂರು ದಿನ ನಿದ್ದೆ ಬಾರದೆ ತೊಳಲಾಡಿದಳು. ವಾರದಲ್ಲಿ ಒಂದು ರಾತ್ರಿ ತಾರಾ ವೀಕ್ಷಣಾಲಯ ಸಾಮಾನ್ಯ ಜನರಿಗೆ ತೆರೆಯುತ್ತದೆ ಎಂದು ಕಂಡುಹಿಡಿದು ಅನುಮತಿ ಪಡೆದು ಅಲ್ಲಿ ಹೋದಳು. ಅಲ್ಲಿ ಅವಳು ಕೇಳಿದ ಪ್ರಶ್ನೆಗಳಿಗೆ ಉತ್ತರಿಸಲಾಗದೆ ಅಲ್ಲಿನ ಸಹಾಯಕರು ಹೋಗಿ ಪ್ರೊಫೆಸರ್

ಎಡಿಂಗ್ಟನ್‌ನನ್ನೇ ಕರೆತಂದರು. ಅವಳೊಂದಿಗೆ ಮಾತನಾಡಿದ ಮೇಲೆ ಆತ ಅವಳ ಮಟ್ಟಿಗೆ ವೀಕ್ಷಣಾಲಯ ಯಾವಾಗಲೂ ತೆರೆದಿರುತ್ತದೆ ಎಂದು ಆಶ್ವಾಸನೆ ನೀಡಿದ. ಆದರೆ ಖಗೋಳ ವಿಜ್ಞಾನವನ್ನು ಗಣಿತದ ವಿಭಾಗಕ್ಕೆ ಸೇರಿಸಿದ್ದರಿಂದ ವಿಷಯವನ್ನಾಗಿ ಓದಲು ಸಾಧ್ಯವಾಗಲಿಲ್ಲ. ತರಗತಿಗಳಿಗೆ ಹೋಗಿ ಕುಳಿತುಕೊಳ್ಳುತ್ತಿದ್ದಳು. ಮೊದಲ ವರ್ಷ ಕಳೆದ ಮೇಲೆ ಖಗೋಳ ವಿಜ್ಞಾನ, ವೀಕ್ಷಣಾಲಯವೇ ಅವಳ ಬದುಕಾಯಿತು. ಮೊದಲಿಗೆ ಸಿಸಿಲಿಯಾಗೆ ಪುರುಷರೊಂದಿಗೆ ಮಾತನಾಡಲು ತುಂಬಾ ಭಯವಾಗುತ್ತಿತ್ತು. ನಿಧಾನವಾಗಿ ಹೊಸ ವಾತಾವರಣಕ್ಕೆ ಹೊಂದಿಕೊಂಡಳು. ಕಾಲೇಜು ಮುಗಿಯುವಷ್ಟರಲ್ಲಿ ಆಕೆಯ ದೈತ್ಯಪ್ರತಿಭೆ, ಸಾಮರ್ಥ್ಯಗಳು ಎಲ್ಲರಿಗೂ ಮೋಡಿ ಮಾಡಿದ್ದವು. ಆಗ ಇನ್ನೂ ಕೇಂಬ್ರಿಡ್ಜ್ ಮಹಿಳೆಯರಿಗೆ ಪದವಿಯನ್ನು ಅಧಿಕೃತವಾಗಿ ನೀಡುತ್ತಿರಲಿಲ್ಲ. ಮುಂದೆ ಇಂಗ್ಲೆಂಡಿನಲ್ಲಿದ್ದರೆ ಶಿಕ್ಷಕಿಯಾಗುವುದು ಬಿಟ್ಟರೆ ಬೇರೆ ಅವಕಾಶಗಳೇ ಇರಲಿಲ್ಲ. ಅಮೆರಿಕೆಗೆ ಹೋದರೆ ಮಾತ್ರ ಅವಳ ಕನಸು ನನಸಾಗುವ ಅವಕಾಶ ಸ್ವಲ್ಪಮಟ್ಟಿಗೆ ಇರಬಹುದೆಂದು ಸಲಹೆ ಸಿಕ್ಕಿದ್ದರಿಂದ ಹಾರ್ವರ್ಡ್ ವಿಶ್ವವಿದ್ಯಾಲಯಕ್ಕೆ ಪತ್ರ ಬರೆದು, ಪ್ರೊಫೆಸರ್ಗಳು, ಶಾಲೆಯ ಪ್ರಾಂಶುಪಾಲರು ಕೊಟ್ಟ ಶಿಫಾರಸ್ಸಿನ ಪತ್ರಗಳನ್ನೂ ಸೇರಿಸಿದಳು. ಒಬ್ಬ ಪ್ರೊಫೆಸರ್ "ಈಕೆಗೆ ಅವಕಾಶ ಕೊಟ್ಟರೆ ತನ್ನ ಜೀವನವನ್ನೇ ಸಂಶೋಧನೆಗೆ ಮುಡಿಪಾಗಿಡುತ್ತಾಳೆ. ಬೇರೆ ಹುಡುಗಿಯರಂತೆ ಮದುವೆ ಮಾಡಿಕೊಂಡು ಎಲ್ಲ ಬಿಟ್ಟು ಓಡಿಹೋಗುವುದಿಲ್ಲ" ಎಂದು ಬರೆದಿದ್ದರು. ಅಂತೂ ಫೆಲೋಶಿಪ್ ಸಿಕ್ಕಿತು. ಕೆಲವೊಂದು ವಿದ್ಯಾರ್ಥಿ ವೇತನಗಳನ್ನೂ ಗಿಟ್ಟಿಸಿಕೊಂಡಳು. ಒಟ್ಟಿನಲ್ಲಿ ಒಂದು ವರ್ಷಕ್ಕೆ ಸಾಕಾಗುವಷ್ಟು ಹಣದ ವ್ಯವಸ್ಥೆಯಾಯಿತು. ತನ್ನ ತಂದೆಯ ಪ್ರೀತಿಯ ವಯೊಲಿನ್ ಅನ್ನು ಎದೆಗೆ ಅವುಚಿಕೊಂಡು ಅಮೆರಿಕದ ಹಡಗು ಹತ್ತಿದಳು.

**ಹಾರ್ವರ್ಡ್ – ಕನಸು, ವಾಸ್ತವಗಳ ನಡುವೆ ಸಾಧನೆಯ ಪರಾಕಾಷ್ಠೆ**

ಹಾರ್ವರ್ಡ್‌ನ ವೀಕ್ಷಣಾಲಯದಲ್ಲಿ 'ಕಂಪ್ಯೂಟರ್'ಗಳು ಎಂದು ಕರೆಸಿಕೊಳ್ಳುವ ಮಹಿಳಾ ಸಿಬ್ಬಂದಿ ಕೆಲಸ ಮಾಡುತ್ತಿದ್ದರು. ದೂರದರ್ಶಕದ ಸಹಾಯದಿಂದ ಒಂದು ಗಾಜಿನ ಪ್ಲೇಟ್‌ನ ಮೇಲೆ ತಾರೆಗಳ ಚಿತ್ರ ಮೂಡುವಂತೆ ಮಾಡಿ ಆ ಪ್ಲೇಟ್‌ಗಳನ್ನು ವಿಶ್ಲೇಷಿಸುವುದರ ಮೂಲಕ ತಾರೆಗಳ ಬಗೆಗಿನ ವಿವರಗಳನ್ನು ಲೆಕ್ಕಹಾಕಿ ದಾಖಲಿಸುವುದು ಮತ್ತು ತಾರೆಗಳನ್ನು ವರ್ಗೀಕರಿಸುವುದು ಅವರ ಕೆಲಸ. ವೀಕ್ಷಣಾಲಯದ ಅಧ್ಯಕ್ಷ ಶಾಪ್ಲಿ ಸಿಸಿಲಿಯಾಳಿಂದಲೂ ಇದೇ ಕೆಲಸವನ್ನಷ್ಟೇ ನಿರೀಕ್ಷಿಸಿದ್ದ. ಆದರೆ ಒಂದೇ ತಿಂಗಳಿನಲ್ಲಿ ಸಿಸಿಲಿಯಾ ತೋರಿಸುತ್ತಿದ್ದ ಶ್ರದ್ಧೆ, ಅವಳ ಅಗಾಧ ಪ್ರತಿಭೆ, ವಿಷಯ ಪ್ರೌಢಿಮೆ ಅವನನ್ನು ಮೋಡಿ ಮಾಡಿತು. ಸಿಸಿಲಿಯಾ ಹಗಲಿರುಳೂ ತಾರೆಗಳ ವಿಶ್ಲೇಷಣೆಯಲ್ಲಿ ಮುಳುಗಿದಳು. ಒಮ್ಮೆ 72 ಗಂಟೆಗಳ ಕಾಲ ಒಂದೇ ಸಮನೆ ಕೆಲಸ ಮಾಡಿದ್ದೂ ಉಂಟು. ಒಂದು ವರ್ಷದೊಳಗೆ ನಾಲ್ಕು ಮಹತ್ವದ ಸಂಶೋಧನಾ ಪೇಪರ್‌ಗಳನ್ನೂ ಪ್ರಕಟಿಸಿದಳು. 1926ರಲ್ಲಿ 'ಅಮೇರಿಕನ್ ಮೆನ್ ಆಫ್ ಸೈನ್ಸ್' ಎಂಬ ಪ್ರತಿಷ್ಠಿತ ಪುಸ್ತಕಮಾಲೆಯಲ್ಲಿ ಹೆಸರಿಸಿದ

ಅತ್ಯಂತ ಕಿರಿಯ ವಿಜ್ಞಾನಿ ಸಿಸಿಲಿಯಾ. ಆಗ ಸಿಸಿಲಿಯಾಳ ಪಿಎಚ್‌ಡಿ ಪ್ರಬಂಧ ಇನ್ನೂ ತಯಾರಾಗುತ್ತಿತ್ತು.

ಮುಂದಿನ ಎರಡು ವರ್ಷಗಳಲ್ಲಿ ಖಗೋಳ ವಿಜ್ಞಾನದಲ್ಲಿ ಇದುವರೆಗೂ ಯಾರೂ ಮಾಡದ ಅತ್ಯಂತ ಮಹತ್ವದ ಸಂಶೋಧನೆ ಮಾಡಿಬಿಟ್ಟಳು ಸಿಸಿಲಿಯಾ! 25 ವರ್ಷದ ಯುವತಿಯೊಬ್ಬಳು ದೊಡ್ಡ ದೊಡ್ಡ ವಿಜ್ಞಾನಿಗಳು ಪ್ರತಿಪಾದಿಸುತ್ತಿದ್ದ ಸಿದ್ಧಾಂತವನ್ನು ಸುಳ್ಳು ಎಂದು ಸಾಧಿಸುವ ಹಂತದಲ್ಲಿದ್ದಳು. ಇದುವರೆಗೂ ನಕ್ಷತ್ರಗಳು ಕೂಡ ಭೂಮಿಯಂತೆಯೇ ಖನಿಜಗಳಿಂದ ಕೂಡಿದೆ ಎಂದು ನಂಬಿಕೊಂಡಿದ್ದ ವಿಜ್ಞಾನಜಗತ್ತಿಗೆ ನಕ್ಷತ್ರಗಳಲ್ಲಿ ಅತ್ಯಂತ ಹೆಚ್ಚಿನ ಪ್ರಮಾಣದಲ್ಲಿರುವುದು (ಮಿಲಿಯನ್ ಪಟ್ಟು) ಹೈಡ್ರೋಜನ್ ಮತ್ತು ಹೀಲಿಯಮ್ ಅನಿಲಗಳು ಎಂದು ಸಿಸಿಲಿಯಾಳ ಪ್ರಯೋಗ ಮತ್ತು ವಿಶ್ಲೇಷಣೆ ತೋರಿಸಿತು. ಇದನ್ನು ನಂಬಲು ಅಥವಾ ಈ ದಿಕ್ಕಿನಲ್ಲಿ ಯೋಚಿಸಲೂ ಕೂಡಾ ಶಾಪ್ಲಿ, ರಸ್ಸಲ್, ಎಡಿಂಗ್ಟನ್ ಸಿದ್ಧರಿರಲಿಲ್ಲ (ಇವರೆಲ್ಲರೂ ಖನಿಜ ಸಿದ್ಧಾಂತವನ್ನು ಪ್ರತಿಪಾದಿಸಿದ್ದರು). ಇದನ್ನು ಪ್ರಕಟಿಸುವ ಮೊದಲು 'ಈ ಫಲಿತಾಂಶ ಬಹುಮಟ್ಟಿಗೆ ತಪ್ಪು' ಎಂದು ಸೇರಿಸು ಎಂದು ಶಾಪ್ಲಿ ತಾಕೀತು ಮಾಡಿದ. ರಸ್ಸಲ್ ಈ ಫಲಿತಾಂಶಗಳಲ್ಲಿ ಅವನ ಸಂಶೋಧನೆಗೆ ಅನುಗುಣವಾಗಿ ಮಾರ್ಪಾಡು ಮಾಡುವಂತೆಯೂ ಸೂಚಿಸಿದ. ಸಿಸಿಲಿಯಾ ಅವರ ಅಧಿಕಾರಕ್ಕೆ ಶರಣಾದಳು. ತಾರೆಗಳ ಲೋಕವನ್ನು ಅರಿತುಕೊಳ್ಳುವ ದಿಸೆಯಲ್ಲಿ ಅತ್ಯಂತ ಮಹತ್ವದ, ಮೂಲಭೂತ ಅನ್ವೇಷಣೆಯನ್ನು ಮಾಡಿದ ಹೆಣ್ಣುಮಗಳನ್ನು ಅನಾಮಧೇಯಳನ್ನಾಗಿಸುವಲ್ಲಿ ಶಾಪ್ಲಿ ಯಶಸ್ವಿಯಾದ. ಅಷ್ಟೇ ಅಲ್ಲ, ಆಕೆಯನ್ನು ಸ್ಪೆಕ್ಟ್ರಮ್ ವಿಶ್ಲೇಷಣೆ ಬಿಟ್ಟು 'ಫೋಟಾಮೆಟ್ರಿ' (ಬೆಳಕಿನ ತೀಕ್ಷ್ಣತೆಯನ್ನು ಅಳೆಯುವ) ಅಧ್ಯಯನಕ್ಕೆ ವರ್ಗಾವಣೆ ಮಾಡಿದ. ವೈಯಕ್ತಿಕವಾಗಿ ಸಿಸಿಲಿಯಾಗೆ, ಅದಕ್ಕಿಂತ ಹೆಚ್ಚು ಖಗೋಳ ವಿಜ್ಞಾನದ ಜಗತ್ತಿಗೆ ಆದ ಘೋರ ಅನ್ಯಾಯ ಇದು.

ಸಿಸಿಲಿಯಾಳ ಪಿಎಚ್.ಡಿ. ಮುಗಿಯಿತು. ಆದರೆ ಹಾರ್ವರ್ಡ್‌ನಲ್ಲಿ ಇನ್ನೂ ಹೆಣ್ಣುಮಕ್ಕಳಿಗೆ ಪ್ರವೇಶ ಇರಲಿಲ್ಲ. ಹಾರ್ವರ್ಡ್‌ನ ಮಹಿಳಾ ಕಾಲೇಜು ರಾಡ್‌ಕ್ಲಿಫ್‌ನಿಂದ ಪದವಿ ನೀಡಬೇಕಿತ್ತು. ಅಲ್ಲಿ ಖಗೋಳ ವಿಜ್ಞಾನದ ವಿಭಾಗವೇ ಇರಲಿಲ್ಲ. ಅಲ್ಲಿಯ ಭೌತಶಾಸ್ತ್ರದ ಮುಖ್ಯಸ್ಥ ಮಹಿಳೆಯರಿಗೆ ಡಾಕ್ಟರೇಟ್ ನೀಡಲು ಸಾಧ್ಯವಿಲ್ಲ ಎಂದ. ಶಾಪ್ಲಿ ಖಗೋಳ ವಿಜ್ಞಾನ ವಿಭಾಗವನ್ನೇ ಪ್ರಾರಂಭಿಸಿದ. ಸಿಸಿಲಿಯಾಳೇ ಇದರ ಕಾರಣಕರ್ತಳು ಎಂದರೂ ತಪ್ಪಿಲ್ಲ. ಹಾರ್ವರ್ಡ್ ವಿದ್ಯಾ ಸಂಸ್ಥೆಯಲ್ಲಿ ಡಾಕ್ಟರೇಟ್ ಪಡೆದ ಮೊದಲ ಮಹಿಳೆ ಸಿಸಿಲಿಯಾ.

ಶಾಪ್ಲಿಯ ಸಲಹೆಯ ಮೇರೆಗೆ ಪಿಎಚ್.ಡಿ. ಪ್ರಬಂಧ ಪುಸ್ತಕವಾಗಿ (Stellar Atmospheres) ಪ್ರಕಟವಾಯಿತು. ಸಿಸಿಲಿಯಾಳ ಫೆಲೋಶಿಪ್ ಮುಗಿಯುವ ಸಮಯ ಬಂದಿತು. ಹೊರಜಗತ್ತಿನಲ್ಲಿ ಅವಳಿಗೆ ಅವಕಾಶಗಳೇ ಇರಲಿಲ್ಲ. ಆಗ ಮಹಿಳೆಯರಿಗೆ ವೀಕ್ಷಣಾಲಯಗಳಲ್ಲಿ ಕೆಲಸ ಸಿಗುತ್ತಿರಲಿಲ್ಲ. ದಕ್ಷಿಣ ಆಫ್ರಿಕಾದಲ್ಲಿದ್ದ ಹಾರ್ವರ್ಡ್‌ನ ವೀಕ್ಷಣಾಲಯದ ನಿರ್ದೇಶಕ ಅವಳು ಅಲ್ಲಿಗೆ ಭೇಟಿ ಮಾಡುವುದನ್ನೂ ಒಪ್ಪಲಿಲ್ಲ.

ಹಾರ್ವರ್ಡ್‌ನ ಅಧ್ಯಕ್ಷ ಲೋವೆಲ್ ತನ್ನ ಜೀವ ಇರುವವರೆಗೆ ಮಹಿಳೆಯರಿಗೆ ಯಾವುದೇ ಉದ್ಯೋಗ ನೀಡುವುದಿಲ್ಲ ಎಂದು ಶಪಥ ಮಾಡಿದ್ದ. ಮಹಿಳೆಯರ ಕಾಲೇಜಿನಲ್ಲಿ ಸಹಾ ಪುರುಷರಿಗೆ ಮಾತ್ರ ಅಧ್ಯಾಪಕ ಹುದ್ದೆ.

ಸಿಸಿಲಿಯಾ ಹಣಕ್ಕಾಗಿ ತನ್ನ ತಂದೆಯ ವಯೋಲಿನ್ ಮತ್ತು ಒಡವೆಗಳನ್ನು ಅಡವಿಡಬೇಕಾದ ಸಂದರ್ಭವೂ ಬಂತು. ಇದರ ಜೊತೆಗೆ ತನ್ನ ಸಂಶೋಧನೆಯ ಕ್ಷೇತ್ರವೂ ಬದಲಾದ ನೋವು. ದುಃಖದಿಂದ ರಸ್ಸಲ್‌ಗೆ ಪತ್ರ ಬರೆದು ಶಾಪ್ಲಿಯಿಂದ ತನಗಾಗುತ್ತಿದ್ದ ಅನ್ಯಾಯ, ಯಾವುದೇ ಮಾನ್ಯತೆ ಇಲ್ಲದಿರುವುದು, ತೀರಾ ಜುಜುಬಿ ವೇತನ, ರಜಾ ದಿನಗಳೇ ಇಲ್ಲದ ಕೆಲಸ, ವಿದ್ಯಾರ್ಥಿಗಳಿಗೆ ತರಗತಿಗಳನ್ನು ತೆಗೆದುಕೊಂಡರೂ ಶಿಕ್ಷಕರ ಪಟ್ಟಿಯಲ್ಲಿ ಆಕೆಯ ಹೆಸರಿಲ್ಲದಿರುವುದು, ಎಲ್ಲದರ ಬಗ್ಗೆ ತನ್ನ ನೋವು ತೋಡಿಕೊಂಡಳು. ಪರಿಣಾಮ ಪರಿಸ್ಥಿತಿ ಕೊಂಚ ಸುಧಾರಿಸಿತು. ಆದರೆ ಮುಂದೆ ಬಂದ ಕೆಲವು ಅವಕಾಶಗಳೂ ಶಾಪ್ಲಿಯ 'ಮಧ್ಯಸ್ಥಿಕೆ'ಯಿಂದ ಸಿಸಿಲಿಯಾಳ ಕೈ ಬಿಟ್ಟುಹೋಯಿತು.

ಮುಂದಿನ ಸುಮಾರು ನಾಲ್ಕು ವರ್ಷಗಳಲ್ಲಿ ಸಿಸಿಲಿಯಾ ಮೊದಲು ದಾಖಲಿಸಿದ ಫಲಿತಾಂಶಗಳನ್ನು ಅನೇಕ ವಿಜ್ಞಾನಿಗಳು ತಮ್ಮ ಪ್ರಯೋಗಗಳ ಮೂಲಕ ನಿರೂಪಿಸಿದರು. 1929ರಲ್ಲಿ ರಸ್ಸಲ್ ತನ್ನದೇ ಆದ ಸಂಶೋಧನಾ ಪತ್ರ ಮಂಡಿಸಿ ಸೂರ್ಯನ ಅನಿಲ ಮಂಡಲದಲ್ಲಿ ಹೈಡ್ರೋಜನ್‌ನ ಸಮೃದ್ಧತೆಯನ್ನು ನಿರೂಪಿಸಿದ. ಸಿಸಿಲಿಯಾಳ ವೈಜ್ಞಾನಿಕ ವೀಕ್ಷಣೆಗಳನ್ನು ತಪ್ಪು ಎಂದು ನಿರಾಕರಿಸಿದ ಬಗ್ಗೆ ಎಲ್ಲೂ ಉಲ್ಲೇಖವೇ ಇರಲಿಲ್ಲ!. ಸೂರ್ಯನ ವಿಷಯದಲ್ಲಿ ಇದು ನಿಜವಾದರೆ ಬೇರೆ ತಾರೆಗಳಲ್ಲೂ ಇದೇ ರಾಸಾಯನಿಕ ಸಂಘಟನೆ ಇರುತ್ತದೆ ಎಂದು ಇಡೀ ಖಗೋಳ ವಿಜ್ಞಾನಿಗಳ ಸಮುದಾಯ ಒಪ್ಪಿಕೊಂಡಿತು. 1931ರ ವೇಳೆಗೆ ವಿಶ್ವದಲ್ಲಿ ಅತ್ಯಧಿಕ ಪ್ರಮಾಣದಲ್ಲಿರುವ ಧಾತು ಹೈಡ್ರೋಜನ್ ಎಂದು ಸಾಬೀತಾಯಿತು. ಆ ಹೊತ್ತಿಗೆ ಸಿಸಿಲಿಯಾರ ತರಗತಿಗಳಿಗೆ ಸೇರಿಕೊಳ್ಳಲು ಕಾಯುವವರ ಪಟ್ಟಿ ತುಂಬಾ ದೀರ್ಘವಾಗಿರುತ್ತಿತ್ತು. ಸಿಸಿಲಿಯಾ ಬರೆದ ಪುಸ್ತಕಗಳು ಪಠ್ಯಪುಸ್ತಕಗಳಾಗಿದ್ದವು.

ಆದರೆ ಹಾರ್ವರ್ಡ್‌ನಲ್ಲಿ ಆಕೆಯ ಅನಾಮಧೇಯತೆ? ಅದು ಹಾಗೇ ಮುಂದುವರೆದಿತ್ತು. ವಿಭಾಗ ಬೆಳೆದಂತೆ ಅಧ್ಯಕ್ಷರ ಸ್ಥಾನಕ್ಕೆ ಒಬ್ಬ ಪ್ರೊಫೆಸರ್‌ರ ಅವಶ್ಯಕತೆ ಇತ್ತು. ಸಿಸಿಲಿಯಾಳ ಅರ್ಹತೆ? ಎಲ್ಲರಿಗಿಂತ ಹೆಚ್ಚು. ಆಕೆಯ ನ್ಯೂನತೆ? ಉತ್ತರ ಸರಳ – ಸಿಸಿಲಿಯಾ ಗಂಡಲ್ಲ, ಹೆಣ್ಣು. ಮತ್ತೆ ಸ್ಥಾನ ತೆರವಾದಾಗ ಮತ್ತೆ ಸಬೂಬು– 'ನೀನು ರೋಹಿತದರ್ಶಕ ತಜ್ಞೆಯಲ್ಲವಲ್ಲ! (spectroscopist)'.

1933ರಲ್ಲಿ ಅಧ್ಯಕ್ಷ ಲೋವೆಲ್ ನಿವೃತ್ತಿಯಾದ ಮೇಲೆ 1938ರಲ್ಲಿ 'ಖಗೋಳ ಶಾಸ್ತ್ರಜ್ಞೆ' ಎಂದು ಮನ್ನಣೆ ದೊರಕಿತು. ಶಾಪ್ಲಿ ನಿವೃತ್ತನಾದ ಮೇಲೆ ಅವನ ಸ್ಥಾನಕ್ಕೆ ಬಂದಿದ್ದು ಸಿಸಿಲಿಯಾಳ ಜೊತೆಗೇ ಅದೇ ವಿಷಯದ ಮೇಲೆ ಪಿಎಚ್.ಡಿ. ಮಾಡಿ ನಂತರ ಸೂರ್ಯನಲ್ಲಿನ ಹೈಡ್ರೋಜನ್ ಪ್ರಮಾಣದ ಮೇಲೆ ಸಂಶೋಧನೆ ಮಾಡಿದ ಮೆಂಜೆಲ್. 1954ರಲ್ಲಿ ಆತ ಅಧಿಕಾರ ವಹಿಸಿಕೊಂಡ ಮೇಲೆ ಸಿಸಿಲಿಯಾರ ವೇತನ ನೋಡಿ ನೊಂದುಕೊಂಡು ಅದನ್ನು ಎರಡು ಪಟ್ಟು ಹೆಚ್ಚಿಸಿದ ಮತ್ತು ಶಿಕ್ಷಕರ ಪಟ್ಟಿಯಲ್ಲಿ ಆಕೆಯ

ಹೆಸರೂ ಸೇರುವಂತೆ ಮಾಡಿದ. ಈ ಹೊತ್ತಿಗೆ ಸಿಸಿಲಿಯಾ ಹಾರ್ವರ್ಡ್‌ಗೆ ಬಂದು ಮೂವತ್ತು ವರ್ಷ ಕಳೆದಿತ್ತು. ಆಕೆ ಪಿಎಚ್.ಡಿ. ವಿದ್ಯಾರ್ಥಿಗಳಿಗೆ ಗೈಡ್ ಆಗಿ, ಆಕೆಯ ಪುಸ್ತಕಗಳು ವಿಜ್ಞಾನಿಗಳಿಗೆ ಮಾರ್ಗದರ್ಶಿಗಳಾಗಿದ್ದವು.

ಕೊನೆಗೂ 1956ರಲ್ಲಿ ಸಿಸಿಲಿಯಾಗೆ ಹಾರ್ವರ್ಡ್ 'ಪೂರ್ಣ ಪ್ರಮಾಣದ ಪ್ರೊಫೆಸರ್' ಹುದ್ದೆ ನೀಡಿತು. ಹಾರ್ವರ್ಡ್ ವಿದ್ಯಾಸಂಸ್ಥೆ ಪ್ರಾರಂಭವಾಗಿ 320 ವರ್ಷಗಳಾದ ಮೇಲೆ ಮೊದಲ ಬಾರಿಗೆ ಮಹಿಳೆಯೊಬ್ಬರು 'ಪ್ರೊಫೆಸರ್' ಆದರು. ಸಿಸಿಲಿಯಾ ಖಗೋಳ ವಿಜ್ಞಾನ ವಿಭಾಗದಲ್ಲಿ ಓದುತ್ತಿದ್ದ ಪ್ರತಿಯೊಬ್ಬ ವಿದ್ಯಾರ್ಥಿನಿಗೂ ಪ್ರತ್ಯೇಕವಾಗಿ ತಮ್ಮ ಕೈ (ಎಡಗೈ) ಬರಹದಲ್ಲಿ ಆಹ್ವಾನ ಪತ್ರಿಕೆ ಬರೆದು ಕಳಿಸಿ ಅವರೆಲ್ಲರೊಂದಿಗೆ ವೀಕ್ಷಣಾಲಯದ ಗ್ರಂಥಾಲಯದಲ್ಲಿ ಈ ಐತಿಹಾಸಿಕ ಕ್ಷಣಗಳನ್ನು ಹಂಚಿಕೊಂಡರು. ವಿಭಾಗದ ಅಧ್ಯಕ್ಷರ ಸ್ಥಾನ ಸಿಸಿಲಿಯಾಗೆ ದೊರಕಿತು.

ಸಿಸಿಲಿಯಾ ಖಗೋಳ ವಿಜ್ಞಾನ ಕ್ಷೇತ್ರಕ್ಕೆ ಕೊಟ್ಟ ಕೊಡುಗೆಗಳ ಪಟ್ಟಿ ಬಲು ದೊಡ್ಡದು. ಚಂಚಲ ತಾರೆಗಳು (variable stars), ಯುಗಳ ನಕ್ಷತ್ರಗಳು (Binary Stars), ಗ್ರಹಣನಿರತ ತಾರೆಗಳು (eclipsing stars), ಅತ್ಯಂತ ಪ್ರಕಾಶಮಾನ ತಾರೆಗಳು (high luminosity stars) ಇವುಗಳೆಲ್ಲದರ ಮೇಲೆ ಆಕೆ ನಡೆಸಿದ ಅಧ್ಯಯನ ಬಹಳ ಉತ್ಕೃಷ್ಟ ಮಟ್ಟದ್ದು. ಪತಿ ಮತ್ತು ಸಹವಿಜ್ಞಾನಿ ಗಾಪೋಷ್ಕಿನ್ ಜೊತೆ ಸೇರಿ ಗುರುತಿಸಿ, ವಿಶ್ಲೇಷಣೆ ಮಾಡಿದ ಚಂಚಲತಾರೆಗಳ ಸಂಖ್ಯೆ ಸುಮಾರು ಎರಡು ಮಿಲಿಯನ್!

### ಸಿಸಿಲಿಯಾ – ಹೆಣ್ಣಾಗಿ

ಸಿಸಿಲಿಯಾ ಎಂದೂ ತಾನು ಸುಂದರಿಯರ ಪಟ್ಟಿಯಲ್ಲಿ ಸೇರಿದವಳು ಎಂದುಕೊಂಡೇ ಇರಲಿಲ್ಲ. ಆರಡಿಗೆ ಎರಡಿಂಚು ಕಮ್ಮಿ. ಅಗಲವಾದ ಮೈಕಟ್ಟು. ಅಲಂಕಾರ, ಮೇಕಪ್ಪುಗಳಿಂದ ತುಂಬ ದೂರ. ಅಮ್ಮನ ಗೆಳತಿಯರ ಮಕ್ಕಳು ದಾನಮಾಡಿದ ಬಟ್ಟೆಗಳು. ಗಂಡು ಮಕ್ಕಳೊಂದಿಗೆ ಮಾತಾಡಬಾರದು ಎಂದು ಮನೆಯಲ್ಲಿ ದಿಗ್ಬಂಧನ. ತೀರಾ ನಾಚಿಕೆ ಸ್ವಭಾವದ, ಸದಾ ಪುಸ್ತಕಗಳಲ್ಲಿ ಮುಳುಗಿರುವ 'ಬೋರಿಂಗ್' ವ್ಯಕ್ತಿ ತಾನು ಎಂಬ ಕೀಳರಿಮೆ ಸಿಸಿಲಿಯಾಳನ್ನು ಹದಿಹರೆಯದ ಸಮಯದಲ್ಲಿ ಕಾಡಿತ್ತು. ಅಪ್ಪಿತಪ್ಪಿ ಹುಡುಗರು ಮಾತನಾಡಿಸಿದರೆ ಇವಳು 'ಪ್ಲೇಟೋ'ವನ್ನು ಓದುವ ಹುಡುಗಿ ಎಂದು ತಿಳಿದಾಗ ವಿಚಿತ್ರವೊಂದನ್ನು ನೋಡುವಂತೆ ನೋಡುತ್ತಿದ್ದರಂತೆ. ಬಹುಶಃ ತಾನು ಸುಂದರವಾಗಿದ್ದಿದ್ದರೆ ಕೇಂಬ್ರಿಡ್ಜ್‌ನ ವಾತಾವರಣ ತನ್ನ ಮಟ್ಟಿಗೆ ಇನ್ನೂ ಚೆನ್ನಾಗಿರುತ್ತಿತ್ತು ಎಂದು ಆಕೆಗೆ ಅನ್ನಿಸಿತ್ತು. ಅದರಲ್ಲೂ ಹೆನ್ರಿ ಥ್ರಿಂಕಿಲ್ಲ್ ಎಂಬ ಅಧ್ಯಾಪಕ ಇವಳನ್ನು 'ಮಂದ ಬುದ್ಧಿಯವಳು' ಎಂದು ಹೀಯಾಳಿಸಿ ಪರೀಕ್ಷೆಯಲ್ಲಿ ಕಡಿಮೆ ಅಂಕ ಕೊಟ್ಟಾಗ ಸಿಸಿಲಿಯಾಗೆ ಅನ್ನಿಸಿದ್ದು – 'ತಾನು ಮೇಕಪ್ ಮಾಡಿಕೊಂಡು ಆಕರ್ಷಕವಾಗಿದ್ದಿದ್ದರೆ ಆತ ಹೀಗೆ ನಡೆದುಕೊಳ್ಳುತ್ತಿದ್ದನಾ?.'

ಅಸಲಿಗೆ ಸಿಸಿಲಿಯಾ ಮಹಾ ಮೇಧಾವಿ. ಯಾವುದೇ ಭಾಷೆಯನ್ನೂ ಸುಲಭವಾಗಿ ಕಲಿಯಬಲ್ಲವಳು. ಇಂಗ್ಲಿಷ್ ಸಾಹಿತ್ಯದ ದೊಡ್ಡ ಕೃತಿಗಳೆಲ್ಲ ಬಾಯಿ ತುದಿಯಲ್ಲಿಯೇ

ಇರುತ್ತಿತ್ತು. ಉತ್ತಮ ಸಂಗೀತಗಾರ್ತಿ. ಕ್ವಾಯಿರ್ಗಳು, ಆಪರಾಗಳು, ನಾಟಕಗಳನ್ನು ಲೀಲಾಜಾಲವಾಗಿ ನಿರ್ದೇಶಿಸುತ್ತಿದ್ದಳು. ಪ್ರಪಂಚದ ಯಾವುದೇ ಮೂಲೆಯ ಅಡುಗೆ-ಯನ್ನಾದರೂ ರುಚಿಯಾಗಿ ಮಾಡುವಷ್ಟು ನಿಪುಣೆ. ಹೆಣ್ಣಿನ ಸಹಜ ಸಂವೇದನೆ-ಗಳೆನ್ನಿಸಿಕೊಳ್ಳುವ ಭಾವನೆಗಳಿಗೆ ಆಕೆಯೂ ಹೊರತಾಗಿರಲಿಲ್ಲ. ಸಮರ್ಥ ಪತ್ನಿ, ಮಕ್ಕಳ ಮುದ್ದಿನ ಅಮ್ಮ. ಮನೆಯ ಒಪ್ಪ ಓರಣ, ಅಚ್ಚುಕಟ್ಟು ಎಲ್ಲದರಲ್ಲೂ ಪರಿಪೂರ್ಣಳು. ಒಳ್ಳೆಯ ಕವಿ, ಸಾಹಿತಿ. ನಕ್ಷತ್ರಗಳು ಅವಳ ಗೆಳತಿಯರು. ಅವುಗಳೊಂದಿಗೆ ಮಾತಾಡುತ್ತಿದ್ದಳು. ಇಡೀ ಖಗೋಳ ವಿಜ್ಞಾನವನ್ನೆ ಕಾವ್ಯಮಯವಾಗಿ ಬರೆಯುತಿದ್ದಳು. ಆಕೆ ಬರೆದ ಪಠ್ಯಪುಸ್ತಕಗಳು ಸಾಹಿತ್ಯದ ಕೃತಿಗಳು ಎನ್ನಿಸುತ್ತವಂತೆ. ಹೆಣ್ಣಾಗಿರುವುದರಲ್ಲಿ ಆಕೆಗೆ ಹೆಮ್ಮೆ ಇತ್ತು. ಆದರೆ ತನ್ನ ಹೆಣ್ಣುತನ ಬೇರೆಯವರ ದೃಷ್ಟಿಯಲ್ಲಿ ಅಸಮರ್ಥತೆಯ ಕಾರಣವಾಗಿ ಕಂಡಿದ್ದು ಮಾತ್ರ ಸಹಿಸಲಾರದ ವಿಷಯವಾಗಿತ್ತು.

ಸಿಸಿಲಿಯಾರ ಆತ್ಮಕಥೆಯಲ್ಲಿ 'ಹೆಣ್ಣಾಗಿರುವುದರ ಬಗ್ಗೆ' ಎಂಬ ಅಧ್ಯಾಯದಲ್ಲಿ ಅವರ ಅಂತರಾಳದ ತುಮುಲಗಳು, ಹೆಣ್ಣುಮನಸ್ಸಿನ ತಲ್ಲಣಗಳೆಲ್ಲ ಪದಗಳಾಗಿವೆ, ಕಥೆಗಳಾಗಿವೆ. ತಾವು ವೈಜ್ಞಾನಿಕ ಜಗತ್ತನ್ನು ಕಂಡ ಬಗೆ, ತಮ್ಮನ್ನು ಆ ಜಗತ್ತು ಕಂಡ ಬಗೆಯನ್ನು ವಿವರಿಸುವ ರೀತಿ ಮನತಟ್ಟುವ ಹಾಗಿದೆ.

ರಾಯಲ್ ಅಸ್ಟ್ರೋನೊಮಿಕಲ್ ಸೊಸೈಟಿಯವರು ಸಿಸಿಲಿಯಾಗೆ ಶ್ರದ್ಧಾಂಜಲಿ ನೀಡುವಾಗ ಅತ್ಯಂತ ಉತ್ಕೃಷ್ಟ ಮಹಿಳಾ ಖಗೋಳ ಶಾಸ್ತ್ರಜ್ಞೆ ಎಂದು ಹೊಗಳಿದ್ದರು. ಸಿಸಿಲಿಯಾರ ಆತ್ಮ 'ಮಹಿಳಾ' ಎಂಬ ಪದಕ್ಕೆ ಖಂಡಿತಾ ಮೂಗು ಮುರಿದುಕೊಂಡಿರಬಹುದು. ಆಕೆ ಜೀವನದುದ್ದಕ್ಕೂ ಕೇಳಿದ ಒಂದೇ ಪ್ರಶ್ನೆ – "ನಾನು ಹೆಣ್ಣಾಗಿರುವುದಕ್ಕೂ ನನ್ನ ವೈಜ್ಞಾನಿಕ ಸಾಧನೆಗಳಿಗೂ ಏನು ಸಂಬಂಧ?"

**ಮುಗಿಸುತ್ತಾ...**

"ನನಗೆ 'ಪ್ರಸಿದ್ಧ'ಳಾಗಬೇಕಿಲ್ಲ, 'ಶ್ರೇಷ್ಠ'ಳೆನಿಸಿಕೊಳ್ಳಬೇಕಿಲ್ಲ.. ಮನಸು ಕಣ್ಣುಗಳ ತೆರೆಯುತ್ತ, ಒತ್ತಿದ್ದ ಮುದ್ರೆಗಳನ್ನೆಲ್ಲ ಅಳಿಸುತ್ತಾ, ರೂಢಪದ್ಧತಿಗಳ ಕಳಚುತ್ತಾ ನನ್ನಷ್ಟಕ್ಕೆ ನಾನೊಂದು ಸಾಹಸ ಯಾತ್ರೆಗೆ ಹೊರಡುವೆ. ಇಲ್ಲಿ ವಿಷಯ ಏನೆಂದರೆ ನನ್ನನ್ನು ನಾನು ವಿಮೋಚನೆಗೊಳಿಸಿಕೊಳ್ಳುವುದು. ಪ್ರತಿಬದ್ಧತೆಗಳಿಲ್ಲದ ಹೊಸ ಆಯಾಮಗಳನ್ನು ಹುಡುಕುವುದು"

– ವರ್ಜೀನಿಯಾ ವೂಲ್ಫ್.

**ಆಕರಗಳು**

1. Discovery of Jeanne Baret - Glynis Ridley Crown Publishers 2010.
2. Jeanne Baret (1740-1816) Premiere femme autour de monde Imprimerie Pottier- Moulins 1987.

3. Cecilia Payne Gaposchkin, an autobiography and other recollections. Edited by Katherine Haramundanis, CAMBRIDGE University Press 1996.
4. What Stars are Made of: The Life of Cecilia Payne - Gaposchkin.- Donovan Moore, Harvard University Press 2010.

ಮತ್ತು ಅಂತರ್ಜಾಲದ ಪುಟಗಳು.



# ವಚನ ಚಳುವಳಿ ತಂದ ಸ್ತ್ರೀ ಸ್ವಾತಂತ್ರ್ಯದ ಬಳುವಳಿ


ತ್ರಿವೇಣಿ ಶ್ರೀನಿವಾಸರಾವ್

Chicago, Illinois


*

ಚಾತುರ್ವರ್ಣ್ಯ ವ್ಯವಸ್ಥೆಯಲ್ಲಿ ವರ್ಣಗಳ ಆಧಾರದ ಮೇಲೆ ವ್ಯಕ್ತಿಯೊಬ್ಬನ ಸ್ಥಾನಮಾನ ನಿರ್ಧಾರವಾಗುತ್ತಿತ್ತೆಂಬುದು ಸರ್ವವಿದಿತ. ಆದರೆ ಹೆಣ್ಣೊಬ್ಬಳು ಯಾವುದೇ ವರ್ಣಕ್ಕೆ ಸೇರಿರಲಿ, ಅವಳಿಗೆ ದೊರೆತಿದ್ದು ಎರಡನೆಯ ದರ್ಜೆಯ ಸ್ಥಾನಮಾನವೇ. ಧರ್ಮದ ಹೆಸರಿನಲ್ಲಿ, ಸಂಪ್ರದಾಯದ ಕಟ್ಟುಪಾಡಿನಲ್ಲಿ ಅವಳನ್ನು ಬಂಧಿಸಲು ಎಲ್ಲಾ ವರ್ಣಗಳ ಪುರುಷರೂ ಹಿಂದೆ ಬಿದ್ದವರಲ್ಲ.

'ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇ ತತ್ರ ದೇವತಾಃ' ಎಂಬ ಉನ್ನತ ಆರ್ಷ ವಾಕ್ಯದ ಆದೇಶವಿದ್ದಾಗ್ಯೂ ಹೆಣ್ಣನ್ನು ಆ ಔನ್ನತ್ಯಕ್ಕೇರಿಸಿದ ನಿದರ್ಶನಗಳು ಹೆಚ್ಚಿಲ್ಲ. ನಾಲ್ಕು ಗೋಡೆಗಳ ನಡುವೆ ಅವಳನ್ನು ದೇವತೆಯಾಗಿಸಿ, ಮೌಲ್ಯಗಳ ಭಾರ ಹೇರಿ ಕುಸಿಯುವಂತೆ ಮಾಡಲಾಯಿತೇ ಹೊರತು ಅವಳನ್ನು ಸಹಮಾನವಳಾಗಿ ಪುರಸ್ಕರಿಸಿದ್ದು ಕಡಿಮೆಯೇ. ಗೃಹಕೃತ್ಯಗಳನ್ನು ನೆರವೇರಿಸುವ, ಮಕ್ಕಳನ್ನು ಪಾಲಿಸಿ ಪೋಷಿಸುವ ಹೊಣೆಗಾರಿಕೆ ಹೊತ್ತ ಹೆಣ್ಣಿಗೆ ಸಾಹಿತ್ಯ ರಚಿಸಲಾಗಲೀ, ಗಂಡಿನ ಸರಿಸಮಳಾಗಿ ಕುಳಿತು ರಾಜ್ಯಭಾರದ ಹೊಣೆ ನಿರ್ವಹಿಸುವ, ಮತ್ತಿತರ ಗುರುತರ ಕೆಲಸಗಳನ್ನು ನಿರ್ವಹಿಸುವ ಅವಕಾಶವಾಗಲೀ, ಆತ್ಮವಿಶ್ವಾಸವಾಗಲೀ ಇರಲಿಲ್ಲವೆನ್ನಬಹುದು. ಸಂಸ್ಕೃತ ಗ್ರಂಥ ರಚನೆಯಲ್ಲಿ, ಪುರುಷ ವಿದ್ವಾಂಸರೊಂದಿಗೆ ವಾಕ್ಯಾರ್ಥ ಮಾಡಿದವರಲ್ಲಿ ಕೆಲವೇ ಕೆಲವು ಮಹಿಳೆಯರ, ವಿಶೇಷವಾಗಿ ಗಾರ್ಗಿ, ಮೈತ್ರೇಯಿ ಮುಂತಾದ ಬ್ರಹ್ಮವಾದಿನಿಯರ ಉದಾಹರಣೆಗಳು ಮಾತ್ರ ಕಾಣಸಿಗುತ್ತವೆ. ಉಳಿದಂತೆ, ಸಮಾಜದ ಕೆಳಸ್ತರದ ಸಾಮಾನ್ಯ ಮಹಿಳೆಯರು ಗುರುತರ ಜವಾಬ್ದಾರಿ ನಿರ್ವಹಿಸಿದ್ದು ಕಂಡುಬರುವುದಿಲ್ಲ. ಸ್ತ್ರೀಯರ ಸಾಮಾಜಿಕ ಸ್ಥಾನಮಾನ ಸುಧಾರಿಸಲು,

ಪುರುಷರ ಸರಿಸಮಾನವಾಗಿ ಸಾಹಿತ್ಯ ರಚಿಸಲು ಅವಳು ಬಹಳ ದೀರ್ಘ ಕಾಲವೇ ಉಸಿರು ಬಿಗಿಹಿಡಿದು ಕಾಯಬೇಕಾಯಿತು. ಆ ಸುದೀರ್ಘ ಕಾಯುವಿಕೆ ಅಂತ್ಯವಾಗಿದ್ದು ಬಸವಣ್ಣನವರ ಮುಂದಾಳತ್ವದಲ್ಲಿ ಪ್ರಾರಂಭವಾದ ವಚನ ಚಳುವಳಿಯಲ್ಲಿ!

**ವಚನಗಳ ಮೂಲಕ ಧರೆಗಿಳಿದ ಸುವರ್ಣ ಕಾಲ**

ಅದು ಹನ್ನೆರಡನೆಯ ಶತಮಾನ. ಜನಸ್ತೋಮವು ಜಾತಿ, ವರ್ಣ, ವರ್ಗಭೇದಗಳ ಬೇಲಿ ಮುರಿದು ಸಮತಾವಾದದ ಸುಂದರ ಸೌಧದತ್ತ ಧಾವಿಸಿದ ಕಾಲ. ಈ ಭೂಮಿಯ ಮೇಲೆ ಅಂಥಾದ್ದೊಂದು ಪವಾಡ ಸಂಭವಿಸಿದ್ದು ದಿಟವೇ ಎಂದು ಈಗಲೂ ಮೈಚಿವುಟಿಕೊಂಡು ದೃಢಪಡಿಸಿಕೊಳ್ಳಬೇಕಾದ ಅಪೂರ್ವ ಕಾಲಘಟ್ಟವದು! ಬಸವಣ್ಣ, ಅಲ್ಲಮಪ್ರಭು ಮುಂತಾದ ಹಿರಿಯ ಶರಣರ ಜೊತೆಗೆ ಸಮಾಜದ ಎಲ್ಲಾ ವರ್ಗಗಳ ಜನರೂ ಸಾಹಿತ್ಯ ರಚನೆಗೆ ಕೈಹಾಕಿದರು. 'ಕಾಯಕವೇ ಕೈಲಾಸ' ತತ್ತ್ವದ ಅಡಿಯಲ್ಲಿ, ಮೇಲು-ಕೀಳೆಂಬ ಭಾವನೆ ಅಳಿಯಿತು. ಇದೊಂದು ಜಾತಿವಿರೋಧಿ ಚಳುವಳಿಯಷ್ಟೇ ಅಲ್ಲ, ಲಿಂಗಭೇದ ವಿರೋಧಿಯೂ ಆಗಿದ್ದರಿಂದ ಧಾರ್ಮಿಕವಾಗಿ, ಸಾಹಿತ್ಯಿಕವಾಗಿ ತೀರಾ ಕೆಳಸ್ಥಾನದಲ್ಲಿದ್ದ ಸ್ತ್ರೀಯರೂ ತಮ್ಮ ಕೀಳರಿಮೆ ಕಳೆದುಕೊಂಡು ತಮ್ಮ ಅನುಭವಗಳನ್ನು ಬರಹಕ್ಕಿಳಿಸುವ ಮೂಲಕ ಸಾಹಿತ್ಯ ರಚನೆಗೆ ಕೈಹಾಕಿದರು. ಅಕ್ಕ ಮಹಾದೇವಿ ವಚನಕಾರರಲ್ಲಿ ಅಗ್ರಗಣ್ಯಳಾಗಿ ಉಳಿದ ಮಹಿಳೆಯರಲ್ಲೂ ಆತ್ಮವಿಶ್ವಾಸ ತುಂಬಲು ಕಾರಣಳಾದಳು. ಮುಕ್ತಾಯಕ್ಕ, ಆಯ್ದಕ್ಕಿ ಲಕ್ಕಮ್ಮ, ನೀಲಾಂಬಿಕೆ, ಗಂಗಾಂಬಿಕೆ, ದಲಿತ ವಚನಕಾರ್ತಿಯರಾದ ಕಾಳವ್ವ, ಕೇತಲದೇವಿ, ಕಾಮಮ್ಮ, ರೆಮ್ಮವ್ವೆ, ಲಿಂಗಮ್ಮ, ಗೊಗ್ಗವ್ವೆ ಅಂದಿನ ಪ್ರಮುಖ ವಚನಕಾರ್ತಿಯರು. ಸುಮಾರು ಮೂವತ್ತೈದು ವಚನಕಾರ್ತಿಯರು ಅನುಭವ ಮಂಟಪದಲ್ಲಿ ನಡೆಯುತ್ತಿದ್ದ ಚಟುವಟಿಕೆಗಳ ಭಾಗವಾಗಿದ್ದರು ಎಂದರೆ ಪಾತಾಳಕ್ಕೆ ಕುಸಿದುಹೋಗಿದ್ದ ಮಹಿಳೆಯರ ಸ್ಥಾನಮಾನದಲ್ಲಾಗಿದ್ದ ಸುಧಾರಣೆಯ ಬಗ್ಗೆ ಒಂದು ಅಂದಾಜು ಸಿಗಬಹುದು. ಈ ವಚನಕಾರ್ತಿಯರೂ ಕೂಡ ಸಮಾಜದ ವಿವಿಧ ಸ್ತರಗಳಿಂದ ಬಂದವರಾಗಿದ್ದರು. ಈ ಬಗೆಯ ಸಾಹಿತ್ಯ ಸೃಷ್ಟಿ ಜಗತ್ತಿನ ಬೇರೆಲ್ಲೂ ಆಗದೆ ಕನ್ನಡ ಮಣ್ಣಿನಲ್ಲಿ ಸಂಭವಿಸಿದ ವಿಸ್ಮಯವೆನ್ನಬಹುದು.

ಅನುಭವ ಮಂಟಪದಲ್ಲಿ ಸ್ತ್ರೀಯರಿಗೆ ಪುರುಷನೊಂದಿಗೆ ಸಮಾನ ನೆಲೆಯಲ್ಲಿ ಪ್ರವೇಶ ಇದ್ದಿತಲ್ಲದೇ, ಅನುಭಾವ ಗೋಷ್ಠಿಯಲ್ಲಿ ವಾದಮಂಡನೆಗೆ ಅವಕಾಶ ನೀಡಲಾಗಿತ್ತು. ಸ್ತ್ರೀಯರನ್ನು ಕೀಳಾಗಿ ಕಾಣಲು, ಅವರನ್ನು ಧಾರ್ಮಿಕ ಕಲಾಪಗಳಿಂದ ಹೊರಗಿಡಲು ಕಾರಣವಾಗಿದ್ದ ಅಂದಿನ ಸಮಾಜದಲ್ಲಿ ರೂಢಿಗತವಾಗಿದ್ದ ಕೆಲವು ಮೂಢನಂಬಿಕೆಗಳನ್ನು ನಿವಾರಿಸುವ ಪ್ರಯತ್ನಗಳಾದವು. 'ಸತಿ ಭಕ್ತೆಯಾದೊಡೆ ಹೊಲೆಗಂಜಲಾಗದು' ಎಂದು ಅಲ್ಲಮಪ್ರಭು ಘೋಷಿಸಿದನು. 'ಗುರು ಕಾರುಣ್ಯದಲ್ಲಿ ಉತ್ಪತ್ಯವಾದ ಅಜಾತಂಗೆ ಜಾತಿಸೂಚಕ ಜನನಸೂತಕ ಪ್ರೇತಸೂತಕ ರಜಸೂತಕಗಳಿಲ್ಲ' ಎಂದು ಚೆನ್ನಬಸವಣ್ಣ ಸಾರಿದನು. ಹೆಣ್ಣು ತನ್ನ ಮಾಸಿಕ ಋತುಸ್ರಾವದ ಕಾಲದಲ್ಲಿ, ಮಗುವನ್ನು ಹೆತ್ತ ಕಾಲದಲ್ಲಿ ಅವಳನ್ನು

ಅಪವಿತ್ರಳೆಂದು ಹೊರಗಿಡುವ ಆಚರಣೆಗಳನ್ನು ಶಿವಭಕ್ತೆಯರಿಗೆ ಇಲ್ಲವಾಗಿಸಿದ್ದರಿಂದ ಭಕ್ತಿಮಾರ್ಗದಲ್ಲಿ ಪುರುಷರಂತೆ ಸ್ತ್ರೀಯರೂ ಮುನ್ನಡೆಯಲು ಕಾರಣವಾಯಿತು.

ಸಂಪ್ರದಾಯದ ಹೆಸರಿನಲ್ಲಿ ಅಭಿವ್ಯಕ್ತಿ ಸ್ವಾತಂತ್ರ್ಯದಿಂದ ವಂಚಿತರಾಗಿದ್ದ ಸ್ತ್ರೀಯರೂ ಪುರುಷನಂತೆ ಸ್ವತಂತ್ರವಾಗಿ ದೇವರನ್ನು ಪೂಜಿಸಬಲ್ಲರು, ಧರ್ಮಗ್ರಂಥವನ್ನು ಓದಬಲ್ಲರು, ಮೋಕ್ಷಕ್ಕೆ ಅರ್ಹತೆಯನ್ನು ಪಡೆಯಬಲ್ಲರು, ಅವರಿಗೂ ಪುರುಷನಂತೆ ದೀಕ್ಷೆ ಹೊಂದುವ ಅಧಿಕಾರ ಇದೆ ಎಂದು ಬಸವಣ್ಣನವರು ಸಾರಿದರು. ಉಪನಯನ ಸಂದರ್ಭದಲ್ಲಿ, ತನ್ನ ಅಕ್ಕನಿಗೆ ಇಲ್ಲದ ಜನಿವಾರ ತನಗೂ ಬೇಡ ಎಂದು ಉಪನಯನ ಸಂಸ್ಕಾರವನ್ನೇ ಧಿಕ್ಕರಿಸಿದ ಬಸವಣ್ಣನವರು ಮೊತ್ತಮೊದಲ ಬಾರಿಗೆ ಮಹಿಳೆಯರ ಪರ ದನಿ ಎತ್ತಿದವರು. ಮಹಿಳೆಯರ ಕೈಗೆ ಇಷ್ಟಲಿಂಗ ಕೊಟ್ಟು ಅಧ್ಯಾತ್ಮದ ಹಾದಿಯಲ್ಲಿ ಅವರನ್ನೂ ತಮ್ಮೊಂದಿಗೆ ಕರೆದೊಯ್ದರು. ವಚನಕಾರ್ತಿಯರು ತಮ್ಮ ಅನುಭವಗಳನ್ನು ವಚನಗಳ ಮೂಲಕ ಹೊರಹೊಮ್ಮಿಸಲು ಕಾರಣರಾದರು. ಸಾಧನೆಯ ಮಾರ್ಗ ಮುಕ್ತವಾಗಿ ತೆರೆದುಕೊಂಡಾಗ, ಸಾಮಾಜಿಕವಾಗಿ ಕೆಳಸ್ತರದಲ್ಲಿದ್ದ ಮಹಿಳೆಯರು ಆಧ್ಯಾತ್ಮಿಕ ಜಗತ್ತಿಗೆ ತಮ್ಮನ್ನು ತೆರೆದುಕೊಂಡರು. ಅಕ್ಷರಸ್ಥರಾಗಿ, ತಮ್ಮ ಬದುಕಿನ ಅನುಭವಗಳಿಗೆ ವಚನಗಳ ರೂಪ ಕೊಟ್ಟರು.

**ಅಕ್ಕ ಮಹಾದೇವಿ ಎಂಬ ಅದ್ಭುತ ಸ್ತ್ರೀವಾದಿ**

ವಚನ ಚಳುವಳಿಯಲ್ಲಿ ಹಲವಾರು ದಾರ್ಶನಿಕರು, ಅನುಭಾವಿಗಳು ಕನ್ನಡನಾಡಿನಲ್ಲಿ ಉದಿಸಿದರು. ಅವರ ನಡುವೆ ಬುವಿಯ ಭಾಗ್ಯವೆಂಬಂತೆ ಲಭಿಸಿದ ಅಮೂಲ್ಯ ನಿಧಿಯೆಂದರೆ ಅಕ್ಕ ಮಹಾದೇವಿ. ಮಹಾದೇವಿ ಅಕ್ಕನಂತಹ ದಿಟ್ಟ ಮಹಿಳೆಯನ್ನು ಆ ಕಾಲಕ್ಕಿರಲೀ ಈಗಲೂ ಕಾಣುವುದು ದುರ್ಲಭವೇ. ತನ್ನ ಮನಸ್ಸಿಗೆ ಒಗ್ಗದ, ಪ್ರವೃತ್ತಿಗೆ ಒಲ್ಲದ ವೈವಾಹಿಕ ಬದುಕನ್ನು ಧಿಕ್ಕರಿಸಿ, ಇಷ್ಟದೈವ ಚೆನ್ನಮಲ್ಲಿಕಾರ್ಜುನನನ್ನು ಅರಸಿ, ಗುರಿಯತ್ತ ಸಾಗಿದ ಅಕ್ಕನ ಮಹಾಪಯಣವೇ ಸ್ತ್ರೀ ಸಂಕುಲದ ಸ್ವಾಯತ್ತತೆಗೊಂದು ಮುನ್ನುಡಿ ಬರೆಯಿತೆನ್ನಬೇಕು. ಶಿವಮೊಗ್ಗ ಜಿಲ್ಲೆಯ ಪುಟ್ಟ ಊರಾದ ಉಡುತಡಿಯಿಂದ ಬಸವಣ್ಣನ ಅನುಭವ ಮಂಟಪದೆಡೆಗೆ ಆಕೆ ನಡೆದ ದಾರಿಯಾದರೂ ಎಂಥದ್ದು?

**ಹಸಿವಾದರೆ ಊರೊಳಗೆ ಭಿಕ್ಷಾನ್ನಗಳುಂಟು**
**ತೃಷೆಯಾದರೆ ಕೆರೆ-ಭಾವಿ-ಹಳ್ಳಂಗಳುಂಟು**
**ಶಯನಕ್ಕೆ ಹಾಳುದೇಗುಲವುಂಟು**
**ಚೆನ್ನಮಲ್ಲಿಕಾರ್ಜುನಯ್ಯ ಆತ್ಮಸಂಗಾತಕ್ಕೆ ನೀನೆನಗುಂಟು!**

ಹಸಿವಿಗೆ ಭಿಕ್ಷಾನ್ನಗಳನ್ನುಂಡು, ಹಳ್ಳ ಕೊಳ್ಳಗಳಲ್ಲಿ ಹರಿಯುವ ನೀರನ್ನೇ ಕುಡಿದು, ಪಾಳು ದೇಗುಲಗಳಲ್ಲಿ ವಿಶ್ರಮಿಸಿಕೊಳ್ಳುತ್ತಾ ಕ್ರಮಿಸಿದ ದುರ್ಗಮವಾದ ಹಾದಿಯದು! ಒಂಟಿ ಹೆಣ್ಣಾಗಿ, ಕಾಡುಮೇಡುಗಳಲ್ಲಿ ಭಯವಿಲ್ಲದೆ ಅಲೆದಾಡುವ ಆ ನಿರ್ಭೀತಿ, ಆತ್ಮವಿಶ್ವಾಸ

ಅದೆಲ್ಲಿಂದ ಬಂದಿರಬಹುದು ಅಕ್ಕನಿಗೆ? ಜಗದೊಡೆಯನಾದ ಚೆನ್ನಮಲ್ಲಿಕಾರ್ಜುನನನ್ನೇ ತನ್ನ ಸಂಗಾತಿಯಾಗಿಸಿಕೊಂಡಾಗ ಮಾತ್ರ ಇಂತಹ ದಿಟ್ಟತನ ಮೈಗೂಡಿಸಿಕೊಳ್ಳಲು ಸಾಧ್ಯವಾಗಬಹುದೇನೊ!

ಅಂದಿರಲಿ, ಇಂದಿಗಾದರೂ ಏಕಾಂಗಿ ಮಹಿಳೆಯೊಬ್ಬಳು ಹೊರಹೊರಟಳೆಂದರೆ ಅವಳನ್ನು ಇರಿಯುವಂತೆ ಹಿಂಬಾಲಿಸುವ ನೋಟಗಳೆಷ್ಟು? ಮಾತಿನಲ್ಲೇ ಕುಟುಕುತ್ತಾ, ಕ್ರೂರವಾಗಿ ಕಾಡುವ ನಾಲಿಗೆಗಳೆಷ್ಟು? ಅದರಲ್ಲೂ ಅಕ್ಕನಂತಹ ಚೆಲುವೆಯಾದ ಒಂಟಿ ಯುವತಿಯನ್ನು ಬೀದಿಕಾಮಣ್ಣರು ಅದೆಷ್ಟು ಹಿಂಸಿಸಿರಬಹುದು? ಅಕ್ಕ ಅದಕ್ಕೆಲ್ಲಾ ಸೊಪ್ಪು ಹಾಕದ ದಿಟ್ಟೆ. ಆಕೆಯ ವಚನವೊಂದು ಇಂಥಾ ಕಾಮಣ್ಣರನ್ನು ಉಗ್ರವಾಗಿ ಎಚ್ಚರಿಸುತ್ತಿದೆ. ತನ್ನನ್ನು ಹೆಣ್ಣೆಂದು ಕಾಮಭಾವನೆಯಿಂದ ಕಾಣುವ ಜನರಿಗೆ ಅಕ್ಕ ತಾನು ಹೆಣ್ಣೆ ಅಲ್ಲವೆನ್ನುತ್ತಾ ತಿಳಿಯಹೇಳುತ್ತಾಳೆ.

**ಬಟ್ಟಿಹ ಮೊಲೆಯ, ಭರದ ಜವ್ವನದ, ಚೆಲುವ ಕಂಡು ಬಂದಿರಣ್ಣಾ.**
**ಅಣ್ಣಾ, ನಾನು ಹೆಂಗೂಸಲ್ಲ ; ಅಣ್ಣಾ, ನಾನು ಸೂಳೆಯಲ್ಲ.**
**ಅಣ್ಣಾ, ಮತ್ತೆ ನನ್ನ ಕಂಡು ಕಂಡು ಆರೆಂದು ಬಂದಿರಣ್ಣಾ?**
**ಚೆನ್ನಮಲ್ಲಿಕಾರ್ಜುನನಲ್ಲದ ಮಿಕ್ಕಿನ ಪುರುಷನು**
**ನಮಗಾಗದ ಮೋರೆ ನೋಡಣ್ಣಾ**

ತಾನು ಚೆನ್ನಮಲ್ಲಿಕಾರ್ಜುನನಿಗೆ ಒಲಿದವಳಾದ್ದರಿಂದ ಲೋಕದ ಪುರುಷರ ಮೋರೆಯನ್ನೂ ನೋಡಬಯಸದ ಸಾಧ್ವಿ ತಾನು ಎನ್ನುತ್ತಾಳೆ. ಸಾಮಾನ್ಯ ಅರ್ಥದಲ್ಲಿ ತಾನು ಹೆಣ್ಣೆಂಬ ಅರಿವನ್ನು ಮೀರಿದವಳು. ಆದ್ದರಿಂದ ತನ್ನನ್ನು ಹೆಣ್ತನದ ಚೆಲುವನ್ನು ಅರಸಿ ನೋಡುವುದು ವ್ಯರ್ಥ ಎನ್ನುವಲ್ಲಿ ಹೆಣ್ಣನ್ನು ಭೋಗದ ವಸ್ತುವೆಂದು ನೋಡುವ ಸಮಾಜದ ದೃಷ್ಟಿಕೋನವನ್ನು ಅಕ್ಕ ಇಲ್ಲಿ ಕಟುವಾಗಿ ವಿರೋಧಿಸುತ್ತಿದ್ದಾಳೆ.

'ಹೆಣ್ಣೊಬ್ಬಳು ಒಂಟಿಯಾಗಿ ರಾತ್ರಿಯ ಕತ್ತಲಿನಲ್ಲಿ ನಿರ್ಭಯವಾಗಿ ನಡೆದಾಡು ವಂತಾದರೆ ಅದೇ ನಿಜವಾದ ಸ್ವಾತಂತ್ರ್ಯ' ಎಂದಿದ್ದರು ಗಾಂಧಿ. ಹೆಂಗಳೆಯರ ಮೇಲೆ ಅತ್ಯಾಚಾರ, ಅನಾಚಾರಗಳು ಅವ್ಯಾಹತವಾಗಿ ನಡೆದಿರುವ ಈ ಕಾಲದಲ್ಲಿ ಗಾಂಧಿ ಕನಸಿದ ಆ ಸ್ವಾತಂತ್ರ್ಯ ಇಂದಿಗೂ ಕನಸಿನ ಗಂಟಾಗಿಯೇ ಉಳಿದಿದೆ. ಆ ಕಾಲದಲ್ಲಿಯೇ ಇಂತಹ ದುರ್ಗಮ ಪರಿಸ್ಥಿತಿಗಳನ್ನು ಯಶಸ್ವಿಯಾಗಿ ನಿಭಾಯಿಸಿದವಳು ಅಕ್ಕ ಮಹಾದೇವಿ.

**ಬೆಟ್ಟದ ಮೇಲೊಂದು ಮನೆಯ ಮಾಡಿ**
**ಮೃಗಗಳಿಗಂಜಿದಡೆಂತಯ್ಯಾ?**
**ಸಮುದ್ರದ ತಡಿಯಲೊಂದು ಮನೆಯ ಮಾಡಿ**
**ನೊರೆತೆರೆಗಳಿಗಂಜಿದಡೆಂತಯ್ಯಾ?**
**ಸಂತೆಯೊಳಗೊಂದು ಮನೆಯ ಮಾಡಿ**
**ಶಬ್ದಕ್ಕೆ ನಾಚಿದಡೆಂತಯ್ಯಾ?**

**ಚೆನ್ನಮಲ್ಲಿಕಾರ್ಜುನದೇವ ಕೇಳಯ್ಯಾ**
**ಲೋಕದೊಳಗೆ ಹುಟ್ಟಿದ ಬಳಿಕ ಸ್ತುತಿನಿಂದೆಗಳು ಬಂದಡೆ**
**ಮನದಲ್ಲಿ ಕೋಪವ ತಾಳದೆ ಸಮಾಧಾನಿಯಾಗಿರಬೇಕು.**

ಬದುಕಿನ ಬವಣೆಗಳಲ್ಲಿ ಬೆಂದು ಬಳಲಿದಾಗ ಅಕ್ಕನ ಈ ವಚನ ಮನಸ್ಸಿಗೆ ನೀಡುವ ಸಾಂತ್ವನ ಅದ್ಭುತ. ಸಣ್ಣಪುಟ್ಟ ಕಾರಣಗಳಿಗೆಲ್ಲ ಖಿನ್ನತೆಗೆ ಜಾರುವ, ಆತ್ಮಹತ್ಯೆಗೆ ಶರಣಾಗುವ ಹೆಣ್ಣು ಜೀವಗಳು ಈ ವಚನದ ಅರ್ಥ ತಿಳಿದು, ಅದರಂತೆಯೇ ಬಾಳಿದರೆ ಸರಿ; ಎಂಥಾ ಬೆಟ್ಟದಂತಹ ಸಮಸ್ಯೆಗಳೂ ಹತ್ತಿಯಂತೆ ಹಗುರವಾದಾವು. ಸಮಾಜದ ನಿಂದನೆಗಳನ್ನು ಸಹಿಸಿ, ಅವುಗಳಿಗೆ ಅಂಜದೆ, ಅಳುಕದೆ ತನ್ನ ಗುರಿ ಸೇರಿದ ಅಕ್ಕ ಹೆಣ್ಣುಗಳಿಗೆಲ್ಲಾ ನಿತ್ಯ ಆದರ್ಶ.

**ಹೆಣ್ಣು ಮಾಯೆಯೆಂಬರು ಹೆಣ್ಣು ಮಾಯೆಯಲ್ಲ!**

ಪುರಂದರದಾಸರ ಈ ಜನಪ್ರಿಯ ಪದವನ್ನು ಕೇಳದವರಾರು? 'ಯಾರು ಹಿತವರು ನಿನಗೆ ಈ ಮೂವರೊಳಗೆ? ನಾರಿಯೋ? ಧಾರಿಣಿಯೋ? ಬಲು ಧನದ ಸಿರಿಯೋ?' ಮಣ್ಣು, ಹೊನ್ನುಗಳೆಂಬ ನಿರ್ಜೀವ ವಸ್ತುಗಳ ಜೊತೆಯಲ್ಲಿ ಜೀವಂತ ವ್ಯಕ್ತಿಯಾದ ಹೆಣ್ಣನ್ನೂ ಸಮೀಕರಿಸಿ ಮಾಯೆಯೆಂದು ಜರಿಯುವ, ಮೂದಲಿಸುವ, ಮಾತಿನ ಬಾಣಗಳಿಂದ ಇರಿಯುವ ಅದೆಷ್ಟು ಹಾಡುಗಳು, ಕಥೆಗಳು, ಪುರಾಣಗಳು, ಪ್ರವಚನಗಳು ನಮ್ಮಲ್ಲಿ ಪ್ರಚಲಿತದಲ್ಲಿವೆ! ಸಂಸ್ಕೃತ ಗ್ರಂಥಗಳಿರಲಿ, ಕನ್ನಡ ಜನಪದವಿರಲಿ ಎಲ್ಲೆಡೆಯೂ ಈ ಹೆಣ್ಣೆಂಬ ಮಾಯಾಂಗನೆಯ ವರ್ಣನೆಯೇ. ಬಗೆಬಗೆಯ ನೀತಿಕಥೆಯ ಮೂಲಕ ಹೆಣ್ಣೆಂಬ ಮಾಯೆಯನ್ನು ಮೀರಲು ಇನ್ನಿಲ್ಲದ ಉಪದೇಶಗಳು. ಹೆಣ್ಣಿನ ಆಕರ್ಷಣೆಯನ್ನು ಗೆಲ್ಲಲಾಗದ ತನ್ನ ದೌರ್ಬಲ್ಯವನ್ನು ಒಪ್ಪಲಾರದೆ ಹೆಣ್ಣನ್ನೇ ಮಣಿಸುವ ನಿತ್ಯಪ್ರಯತ್ನ ಪುರುಷನದ್ದು. ತಾನೇ ಬರೆದ, ತನ್ನದೇ ಕಾನೂನು ಪುಸ್ತಕದಲ್ಲಿ ಹೆಣ್ಣನ್ನು ಹದ್ದುಬಸ್ತಿನಲ್ಲಿಡಲು ನೂರೆಂಟು ಕಟ್ಟುಪಾಡುಗಳು: ಸಕ್ಕರೆಯಿಂದ ದೂರವಿರಲಾರದ ಸಿಹಿಮೂತ್ರ ರೋಗಿಯೊಬ್ಬ ತನ್ನ ದೌರ್ಬಲ್ಯವನ್ನು ಅರಿತು ನಿವಾರಿಸಿಕೊಳ್ಳುವ ಬದಲು ಸಕ್ಕರೆಯನ್ನೇ ದೂಷಿಸಿದಂತೆ ಇದು.

ಹೆಣ್ಣನ್ನು ಮಾಯೆಯೆಂದು ಕರೆದು ಅಭ್ಯಾಸವಾದ ಸಮಾಜದ ನಾಲಿಗೆಗೆ ಅಲ್ಲಮಪ್ರಭುವಿನ ಈ ವಚನ ಬೀಗ ಹಾಕುವಂತಿದೆ. ಹೆಣ್ಣನ್ನು ಮಾಯೆಯೆಂದು ಜರಿಯುವವರ ಮೌಢ್ಯವನ್ನು ವಿರೋಧಿಸಿತ್ತಾ ಹೆಣ್ಣು ಯಾಕೆ ಮಾಯೆಯಲ್ಲ? ಆಕೆ ಮಾಯೆಯಲ್ಲ ಎಂದಾದರೆ ಮತ್ತಾವುದು ಮಾಯೆ? ಅದನ್ನು ಈ ವಚನ ಸರಳವಾಗಿ ಆದರೆ ಸ್ಪಷ್ಟ ನುಡಿಗಳಲ್ಲಿ ತಿಳಿಸುತ್ತಿದೆ.

**ಹೊನ್ನು ಮಾಯೆ ಎಂಬರು, ಹೊನ್ನು ಮಾಯೆಯಲ್ಲ.**
**ಹೆಣ್ಣು ಮಾಯೆ ಎಂಬರು, ಹೆಣ್ಣು ಮಾಯೆಯಲ್ಲ.**
**ಮಣ್ಣು ಮಾಯೆ ಎಂಬರು, ಮಣ್ಣು ಮಾಯೆಯಲ್ಲ.**
**ಮನದ ಮುಂದಣ ಆಸೆಯೆ ಮಾಯೆ ಕಾಣಾ ಗುಹೇಶ್ವರ.**

ಹೆಣ್ಣನ್ನು ಮಾಯೆ ಎಂದು ಕರೆಯುವ ಮೂಲಕ ತನ್ನ ಬಲಹೀನತೆಗೆ ಇನ್ನಾರನ್ನೋ ಹೊಣೆಯಾಗಿಸುವ, ಸುಳ್ಳೇ ದೋಷಾರೋಪಣೆ ಮಾಡುವ ಪ್ರವೃತ್ತಿಗೆ ಕಡಿವಾಣ ಹಾಕುತ್ತದೆ ಈ ವಚನ. ಮನಸ್ಸೊಂದು ದೃಢವಾಗಿದ್ದರೆ ಯಾವುದೂ ಮಾಯೆಯಾಗಿ ಕಾಡದು ಎಂದು ಕೂಗಿ ಹೇಳುವಂತಿದೆ. ಬಸವಣ್ಣನವರ ವಚನದಂತೆ, 'ಛಲ ಬೇಕು ಶರಣಂಗೆ, ಪರಧನವನೊಲ್ಲೆನೆಂಬ; ಛಲ ಬೇಕು ಶರಣಂಗೆ, ಪರಸತಿಯನೊಲ್ಲೆನೆಂಬ' ಎಂದು ಅಂತರಂಗ ಶುದ್ಧಿ, ಬಹಿರಂಗ ಶುದ್ಧಿಯುಳ್ಳವರಿಗೆ ಯಾವ ಮಾಯೆಯೂ ಕಾಡದು ಎನ್ನುವ ಮೂಲಕ ಹೆಣ್ಣಿನ ಮೇಲಿದ್ದ ಕಳಂಕವನ್ನು ನಿವಾರಿಸುವ ಪ್ರಯತ್ನವನ್ನು ಇಲ್ಲಿ ಕಾಣಬಹುದು.

ಹನ್ನೆರಡನೆಯ ಶತಮಾನದ ಉತ್ಕಟ ಮಹಿಳಾವಾದಿಯಾಗಿ ತೋರುವ ಅಕ್ಕ ಮಹಾದೇವಿಯ ವಚನಗಳಲ್ಲಿಯೂ ಹೆಣ್ಣಿನ ಸ್ಥಾನವನ್ನು ಬಹು ಎತ್ತರಕ್ಕೇರಿಸಲಾಗಿದೆ. ಅದುವರೆಗೆ ಅಧ್ಯಾತ್ಮದಲ್ಲಿ, ಸಾಹಿತ್ಯದಲ್ಲಿ ಪುರುಷ ಪ್ರಾಧಾನ್ಯವಿತ್ತು. ಹೆಣ್ಣನ್ನೂ ಉಪಭೋಗದ ವಸ್ತುವಿನಂತೆ, ಕೈಯಿಂದ ಕೈಗೆ ಬದಲಾಯಿಸಬಲ್ಲ ನಿರ್ಜೀವ ವಸ್ತುವಿನಂತೆ ನಡೆಸಿಕೊಳ್ಳುತ್ತಿದ್ದ ಸಮಾಜದ ನೀತಿಯನ್ನು ಒಪ್ಪದೆ ಪ್ರತಿಭಟನೆಯ ಕಹಳೆಯೂದಿದವಳು ಅಕ್ಕ ಮಹಾದೇವಿ. ಹೆಣ್ಣು ಮತ್ತು ಗಂಡು ಈ ಸೃಷ್ಟಿಯ ಎರಡು ಕಣ್ಣುಗಳು. ಪರಸ್ಪರ ವಿರುದ್ಧವಾಗಿದ್ದೂ ಒಂದನ್ನೊಂದು ಆಕರ್ಷಿಸುವ ಈ ಪುರುಷ–ಪ್ರಕೃತಿಯಿಂದ ತಾನೇ ಜೀವಸಂತತಿ ಮುಂದುವರೆಯುತ್ತಿರುವುದು? ಈ ಸತ್ಯವನ್ನು ಒಪ್ಪುವ ಬದಲು ಪುರುಷ ಪಕ್ಷಪಾತಿಯಾಗಿ ಹೆಣ್ಣನ್ನು ಮಾಯೆಯೆಂದು ಜರೆಯುವ ಸಮಾಜಕ್ಕೆ ಅಕ್ಕನ ಈ ವಚನ ಚಾಟಿ ಏಟನ್ನೇ ಕೊಡುವಂತಿದೆ.

**ಪುರುಷನ ಮುಂದೆ ಮಾಯೆ ಸ್ತ್ರೀಯೆಂಬ ಅಭಿಮಾನವಾಗಿ ಕಾಡಿತ್ತು.**
**ಸ್ತ್ರೀಯ ಮುಂದೆ ಮಾಯೆ ಪುರುಷನೆಂಬ ಅಭಿಮಾನವಾಗಿ ಕಾಡಿತ್ತು.**
**ಲೋಕವೆಂಬ ಮಾಯೆಗೆ ಶರಣರ ಚಾರಿತ್ರವು ಮರುಳಾಗಿ ತೋರುವುದು**
**ಚೆನ್ನಮಲ್ಲಿಕಾರ್ಜುನನೊಲಿದ ಶರಣರಿಗೆ ಮಾಯೆಯಿಲ್ಲ**
**ಮರಹಿಲ್ಲ, ಅಭಿಮಾನವೂ ಇಲ್ಲ.**

ಪುರುಷನಿಗೆ ಹೆಣ್ಣು ಮಾಯೆಯಾದರೆ ಹೆಣ್ಣಿಗೆ ಪುರುಷನೂ ಮಾಯೆಯೇ ಅಲ್ಲವೇ? 'ಸ್ತ್ರೀಯ ಮುಂದೆ ಮಾಯೆ ಪುರುಷನೆಂಬ ಅಭಿಮಾನವಾಗಿ ಕಾಡಿತ್ತು' ಎನ್ನುವಲ್ಲಿ, ಆವರೆಗೆ ವಿನಾಕಾರಣ ದೂಷಣೆಗೊಳಗಾಗುತ್ತಿದ್ದ ಹೆಣ್ಣು ಸಂಕುಲದ ಪರವಾಗಿ ಅಕ್ಕ ನಿಲ್ಲುತ್ತಾಳೆ. ಸತಿಗೆ ಪತಿಯೇ ಪರದೈವ, ಪತಿ ಸೇವೆಯಿಂದಲೇ ಹೆಣ್ಣಿಗೆ ಮುಕ್ತಿ ಇತ್ಯಾದಿ ಮೌಲ್ಯಗಳನ್ನು ಮಹಿಳೆಯ ಮೇಲೆ ಧರ್ಮದ ನಿರ್ಬಂಧದಲ್ಲಿ ಹೇರಲಾಗಿತ್ತು. ಇಂತಹ ಅಸಮಾನತೆಯ ನಿಯಮಗಳನ್ನು ಧಿಕ್ಕರಿಸಿ ಹೆಣ್ಣಿಗೂ ಪುರುಷನಂತೆ ಸ್ವತಂತ್ರವಾದ ಅಸ್ತಿತ್ವ ಇದೆ ಎಂಬುದನ್ನು ಸಾರಿ ಸ್ತ್ರೀ ಸ್ವಾತಂತ್ರ್ಯದ ಕಹಳೆಯೂದಿದವಳು ಅಕ್ಕ ಮಹಾದೇವಿ. 'ಚೆನ್ನಮಲ್ಲಿಕಾರ್ಜುನನೊಲಿದ ಶರಣರಿಗೆ ಮಾಯೆಯಿಲ್ಲ ಮರಹಿಲ್ಲ ಅನುಮಾನವು ಇಲ್ಲ' ಎನ್ನುವ ಮೂಲಕ ಹೆಣ್ಣಿನ ಸುತ್ತ ಬಿಗಿಯಾಗಿ ಸುತ್ತಿದ್ದ 'ಮಾಯೆ' ಎಂಬ ಸಂಕಲೆಯನ್ನೇ ಅಕ್ಕ ಕಿತ್ತೆಸೆದುಬಿಡುತ್ತಾಳೆ.

**ಹೊನ್ನು ಬಿಟ್ಟು ಲಿಂಗವನೊಲಿಸಬೇಕೆಂಬರು**
**ಹೊನ್ನಿಂಗೆಯೂ ಲಿಂಗಕ್ಕೆಯೂ ವಿರುದ್ಧವೇ?**
**ಮಣ್ಣಬಿಟ್ಟು ಲಿಂಗವನೊಲಿಸಬೇಕೆಂಬರು**
**ಮಣ್ಣಿಂಗೂ ಲಿಂಗಕ್ಕೂ ವಿರುದ್ಧವೇ?**
**ಹೆಣ್ಣ ಬಿಟ್ಟು ಲಿಂಗವನೊಲಿಸಬೇಕೆಂಬರು**
**ಹೆಣ್ಣಿಂಗೆಯೂ ಲಿಂಗಕ್ಕೆಯೂ ವಿರುದ್ಧವೇ?**

ಮಸಣಮ್ಮನ ಈ ದಿಟ್ಟ ವಚನವಂತೂ ಹೆಣ್ಣು ಬಿಟ್ಟು ಲಿಂಗವನೊಲಿಸಬೇಕೆಂಬರು, ಯಾಕಾಗಿ? ಹೆಣ್ಣೆಂದರೆ ದೇವರಿಗೆ ವಿರುದ್ಧವೇ? ದೇವರಿಗೆ ವಿರುದ್ಧವಲ್ಲದ ಹೆಣ್ಣನ್ನು ಕಂಡರೆ ಸಮಾಜಕ್ಕೆ ಈ ಪರಿಯ ಅಸಹನೆ ಯಾಕಾಗಿ? ಹೊನ್ನು, ಮಣ್ಣು, ಹೆಣ್ಣು ಮುಂತಾದ ಇಂದ್ರಿಯ ಸುಖವನ್ನು ತ್ಯಜಿಸಬೇಕಾಗಿಲ್ಲ. ಪ್ರಪಂಚಕ್ಕೆ ಬೆನ್ನು ಹಾಕಿ ಹಿಮಾಲಯದ ಹಾದಿ ಹಿಡಿಯಬೇಕಿಲ್ಲ. ಪರಮ ಕರುಣಾಳು ದೇವನು ಹೊನ್ನು, ಮಣ್ಣು, ಮತ್ತು ಬಡಪಾಯಿ ಹೆಣ್ಣುಗಳ ವಿರೋಧಿಯಾಗಲು ಸಾಧ್ಯವೇ? ಆದರೆ ಇವುಗಳೊಂದಿಗಿನ ಸಂಬಂಧ ದೇವಸಮ್ಮತವಾಗಿರಬೇಕು, ಪವಿತ್ರವಾಗಿರಬೇಕು, ಹೀಗಿದ್ದಲ್ಲಿ ಆತ್ಮೋನ್ನತಿಯನ್ನು ಸಾಧಿಸುವುದು ಸಾಧ್ಯ ಎಂಬುದನ್ನು ಮಸಣಮ್ಮ ತನ್ನ ವಚನದ ಮೂಲಕ ಪ್ರತಿಪಾದಿಸುತ್ತಾಳೆ.

ಹೆಂಡತಿ ಮಕ್ಕಳಿಂದ ದೂರವಾಗಿದ್ದರಷ್ಟೇ ಅಧ್ಯಾತ್ಮ ಸಾಧನೆ ಆಗುತ್ತದೆ ಎಂಬುದನ್ನೂ ನಿರಾಕರಿಸಿದ್ದು ವಚನ ಧರ್ಮ. ಹನ್ನೆರಡನೆಯ ಶತಮಾನದ ವಚನಕಾರರು, ವಚನಕಾರ್ತಿಯರು ದಾಂಪತ್ಯ ಧರ್ಮವನ್ನು ಒಪ್ಪಿ ಬದುಕಿದವರು. ಅಲ್ಲಮಪ್ರಭು, ಚೆನ್ನಬಸವಣ್ಣ, ಸಿದ್ದರಾಮ, ಅಕ್ಕ ಮಹಾದೇವಿಯರನ್ನು ಹೊರತುಪಡಿಸಿದರೆ ಉಳಿದವರೆಲ್ಲ ಸಂಸಾರಿಗಳಾಗಿದ್ದವರು. ಪತಿ ಮತ್ತು ಪತ್ನಿ ಇಬ್ಬರೂ ದಾಂಪತ್ಯದ ರಥಕ್ಕೆ ಎರಡು ಚಕ್ರಗಳು ಎಂದರಿತವರು. ದಾಸಿಮಯ್ಯನ ಈ ವಚನ ದಾಂಪತ್ಯದಲ್ಲಿ ಸಾಮರಸ್ಯ ಎಷ್ಟು ಮುಖ್ಯವೆನ್ನುವುದನ್ನು ಸಾರಿ ಹೇಳುತ್ತಿದೆ.

**ಸತಿಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ**
**ಸತಿಪತಿಗಳೊಂದಾಗದವನ ಭಕ್ತಿ**
**ಅಮೃತದೊಳು ವಿಷ ಬೆರೆದಂತೆ ಕಾಣಾ! ರಾಮನಾಥಾ**

ಒಲವಿಂದ ಒಂದಾದ ಸತಿಪತಿಗಳು ಏಕೋಭಾವದಿಂದ ಅರ್ಪಿಸುವ ಪೂಜೆ, ಸಲ್ಲಿಸುವ ನೈವೇದ್ಯ ಮಾತ್ರ ಶಿವನಿಗೆ ಮೆಚ್ಚಿಗೆಯಾಗುತ್ತದೆ, ಶಿವ ಕಾರುಣ್ಯ ಇಂಥಾ ದಂಪತಿಗಳಿಗೆ ಮಾತ್ರ ಲಭಿಸುತ್ತದೆ. ಹೊಂದಾಣಿಕೆ ಇಲ್ಲದ ದಾಂಪತ್ಯ ವಿಷ ಸಮಾನವೇ ಸರಿ ಎನ್ನುವ ಜೇಡರ ದಾಸಿಮಯ್ಯನ ದಾಂಪತ್ಯ ಸ್ವರ್ಗ ಸದೃಶವಾಗಿಯೇ ಇದ್ದಿರಬಹುದು, ದಾಸಿಮಯ್ಯ ತನ್ನ ಒಂದು ವಚನದಲ್ಲಿ ತನ್ನ ಪತ್ನಿ ದುಗ್ಗಳೆಯ ಸುಸ್ವಭಾವವನ್ನು ಹಾಡಿ ಹೊಗಳುತ್ತಾನೆ. 'ಬಂದುದನರಿದು ಬಳಸುವಳು, ಬಂದುದ ಪರಿಣಾಮಿಸುವಳು, ಬಂಧು ಬಳಗವ ಮರಸುವಳು ದುಗ್ಗಳೆಯ ತಂದು ಬದುಕಿದೆನು ಕಾಣಾ! ರಾಮನಾಥಾ' ಪತ್ನಿಯನ್ನು

ದಾಸಿಯೆಂದು ಪರಿಗಣಿಸದೆ, ಅವಳು ತನ್ನನ್ನು ಸನ್ಮಾರ್ಗದಲ್ಲಿ ಕರೆದೊಯ್ಯುವ ಆತ್ಮ ಸಂಗಾತಿ ಎಂದು ಭಾವಿಸುವ ಉನ್ನತ ಭಾವನೆ ಈ ವಚನದಲ್ಲಿ ಕಂಡುಬರುತ್ತದೆ.

**ಆಕಾರದಲ್ಲಿ ವ್ಯತ್ಯಾಸವೇ ಹೊರತು ಆತ್ಮಕ್ಕಲ್ಲ!**

ವೈದಿಕ ಧರ್ಮದಲ್ಲಿ 'ನ ಸ್ತ್ರೀ ಸ್ವಾತಂತ್ರ್ಯಮರ್ಹತಿ' ಎಂಬ ಶಾಸನದಡಿಯಲ್ಲಿ ಹೆಣ್ಣು ಎಂದೂ ಪುರುಷನ ಆಶ್ರಯದಲ್ಲಿರಬೇಕಾದವಳು. ಆದರೆ ವಚನ ಚಳುವಳಿಯ ನಂತರ ಹೆಣ್ಣಿಗೂ ಗಂಡಿನಷ್ಟೇ ಸಮಾನ ಅಧಿಕಾರ ಇದೆಯೆಂದು, ಅವನಷ್ಟು ಸ್ವಾತಂತ್ರ್ಯ ಅವಳಿಗೂ ಇದೆ ಎಂದು ಸಾರಲಾಯಿತು. ಜೇಡರ ದಾಸಿಮಯ್ಯನ ಈ ಪ್ರಸಿದ್ಧ ವಚನ ಹೆಣ್ಣು, ಗಂಡಿನ ದೇಹ ರಚನೆಯಲ್ಲಿ ಮಾತ್ರ ವ್ಯತ್ಯಾಸವಿದೆಯೇ ಹೊರತು, ವ್ಯಕ್ತಿಗಳಾಗಿ ಅವರಿಬ್ಬರೂ ಸಮಾನರು ಎಂಬ ಅಂಶವನ್ನು ಒತ್ತಿ ಹೇಳುತ್ತದೆ.

**ಮೊಲೆ, ಮುಡಿ ಬಂದಡೆ ಹೆಣ್ಣೆಂಬರು**
**ಗಡ್ಡ ಮೀಸೆ ಬಂದಡೆ ಗಂಡೆಂಬರು**
**ನಡುವೆ ಸುಳಿವ ಆತ್ಮನು**
**ಹೆಣ್ಣೂ ಅಲ್ಲ ಗಂಡೂ ಅಲ್ಲ ಕಾಣಾ! ರಾಮನಾಥ**

ಮೊಲೆ, ಮುಡಿ– ಅಂದರೆ ಉದ್ದ ಕೂದಲು ಹೆಣ್ಣಿನ ದೇಹದ ಗುರುತಾದರೆ, ಗಡ್ಡ, ಮೀಸೆಗಳು ಗಂಡಿನ ಲಕ್ಷಣಗಳು. ಇದರ ಹೊರತಾಗಿ ಆತ್ಮಗಳಲ್ಲಿ ವ್ಯತ್ಯಾಸವಿಲ್ಲ. ಕೆಲವು ಧರ್ಮಗಳಲ್ಲಿ ಪುರುಷನಿಗಿರುವ ಧಾರ್ಮಿಕ ಸ್ವಾತಂತ್ರ್ಯ ಹೆಣ್ಣಿಗಿಲ್ಲ. ಆಕೆ ಪ್ರತಿ ತಿಂಗಳೂ ರಜಸ್ವಲೆಯಾಗುವುದರಿಂದ ಅವಳು ಮೈಲಿಗೆ! ಹಾಗಾಗಿ ಯಜ್ಞ, ಪೂಜೆ ಮುಂತಾದ ಧಾರ್ಮಿಕ ಕ್ರಿಯೆಗಳಲ್ಲಿ ಅವಳ ಪ್ರವೇಶಕ್ಕೆ ನಿಷೇಧವಿದೆ. ಆದರೆ ವಚನಕಾರರ ಉದಾತ್ತ ದೃಷ್ಟಿಯಲ್ಲಿ ಹಾಗಿಲ್ಲ. ಅವರ ಪ್ರಕಾರ ದೇವನ ದೃಷ್ಟಿಯಲ್ಲಿ ಸ್ತ್ರೀ, ಪುರುಷರು ಸಮಾನರು.

**ನಿಡಿದೊಂದು ಕೋಲುವನು ಕಡಿದು ಎರಡು ಮಾಡಿ**
**ಅಡಿಯ ಹೆಣ್ಣು ಮಾಡಿ, ಒಡತಣದ ಗಂಡ ಮಾಡಿ**
**ನಡುವೆ ಹೊಸದಡೆ ಹುಟ್ಟಿದ ಕಿಚ್ಚು ಹೆಣ್ಣೋ ಗಂಡೋ ರಾಮನಾಥ.**

ಜೇಡರ ದಾಸಿಮಯ್ಯನ ಮೊದಲ ವಚನದಲ್ಲಿ ಆತ್ಮ ಹೆಣ್ಣೂ ಅಲ್ಲ, ಗಂಡೂ ಅಲ್ಲ ಎಂದು ಸಾರಿದರೆ, ಈ ಮೇಲಿನ ಎರಡನೆಯ ವಚನದಲ್ಲಿ ಮತ್ತೊಂದು ಸುಂದರ ಉದಾಹರಣೆಯ ಮೂಲಕ ಗಂಡು, ಹೆಣ್ಣಿನ ಸಮಾನತೆಯನ್ನು ಎತ್ತಿ ಹಿಡಿಯುತ್ತಾನೆ. ಕೋಲುಗಳ ಎರಡು ತುಂಡುಗಳನ್ನು ಒಂದಕ್ಕೊಂದು ಉಜ್ಜಿದಾಗ ಅದರಿಂದ ಹೊರಹೊಮ್ಮುವ ಕಿಚ್ಚಿಗೆ ಯಾವ ಲಿಂಗವೂ ಇಲ್ಲ. ಇಲ್ಲಿ ಕಿಚ್ಚನ್ನು ಜ್ಞಾನದ ದೀಪವೆಂದು ಪರಿಗಣಿಸಿದರೆ, ಜ್ಞಾನಾರ್ಜನೆಗೆ ಪುರುಷ, ಸ್ತ್ರೀಯರಿಗಿರುವ ಸಮಾನ ಅಧಿಕಾರವನ್ನು ಈ ವಚನ ಪ್ರತಿಪಾದಿಸುತ್ತದೆ.

**ಮಡದಿಯ ಪ್ರಾಣಕ್ಕೆ ಮೊಲೆ ಮುಡಿ ಇದ್ದೀತೆ?**
**ಒಡೆಯನ ಪ್ರಾಣಕ್ಕೆ ಇದ್ದೀತೆ ಯಜ್ಞೋಪವೀತ?**
**ಕಡೆಯಲ್ಲಿದ್ದ ಅಂತ್ಯಜನು ಹಿಡಿದಿದ್ದನೆ ಹಿಡಿಗೋಲ?**
**ನೀ ತೊಡಕಿಕ್ಕಿದ ತೊಡಕನೀ ಲೋಕದ ಜನರೆತ್ತ ಬಲ್ಲರೈ ರಾಮನಾಥ.**

ಜೇಡರ ದಾಸಿಮಯ್ಯನದೇ ಮತ್ತೊಂದು ವಚನ ಒಂದೊಂದು ಸಾಲಿನಲ್ಲೂ ಲಿಂಗ, ವರ್ಗ, ಜಾತಿ ಸಮಾನತೆಯನ್ನು ಅದೆಷ್ಟು ಖಚಿತವಾಗಿ ಸಾರುತ್ತಿದೆ. ಮೊದಲನೆಯ ಸಾಲಿನಲ್ಲಿ ಮಡದಿಯ ಪ್ರಾಣ ಎಂಬಲ್ಲಿ ಲಿಂಗ ಸಮಾನತೆಯ ಬಗ್ಗೆ, ಎರಡನೆಯ ಸಾಲು ಒಡೆಯ ಎಂಬಲ್ಲಿ ಮೇಲು ವರ್ಗ–ಕೆಳವರ್ಗಗಳ ನಡುವೆ ಇರುವ ಭೇದವನ್ನು ನಿರಾಕರಿಸಲಾಗಿದೆ. ಮೂರನೆಯ ಸಾಲಿನಲ್ಲಿ ಬರುವ 'ಅಂತ್ಯಜನು ಹಿಡಿದಿದ್ದನೆ ಹಿಡಿಗೋಲ?' ಎಂಬ ಪ್ರಶ್ನಿಸುವ ಮೂಲಕ ವರ್ಣಗಳ ನಡುವಿನ ಸಮಾನತೆಯನ್ನು ಎತ್ತಿಹಿಡಿಯಲಾಗಿದೆ.

ಮಡದಿಯಾಗಲೀ, ಆಕೆಯ ಕೈ ಹಿಡಿದ ಪುರುಷನಾಗಲೀ ಸಮಾನರೇ! ನಾವೇ ಮಾಡಿಕೊಂಡಿರುವ ಈ ಭೇದಭಾವಗಳು ಹುಟ್ಟಿದ ಸಂಗತಿಯಲ್ಲ, ನಾವಾಗಿಯೇ ಹೊರೆಯಾಗಿ ಹೊತ್ತುಕೊಂಡಿರುವ ಸಂಗತಿಗಳು ಎಂಬುದನ್ನು ಈ ವಚನ ಬಹಳ ಸಮರ್ಥವಾಗಿ ಸಾಧಿಸುತ್ತಿದೆ. ಅಸಮಾನತೆಯೆಂಬುದು ಸಹಜ ಪ್ರಕೃತಿಯಲ್ಲ, ಅದು ಸಾಮಾಜಿಕ ವಿಕೃತಿ. ಅದಕ್ಕೆ ದೈವದ ಬೆಂಬಲವಿಲ್ಲ. ಈ ವಚನ ಸಮಾಜದಲ್ಲಿ ಬೃಹದಾಕಾರ ರೂಪದಲ್ಲಿರುವ ಎಲ್ಲಾ ಬಗೆಯ ಅಸಮಾನತೆಗಳನ್ನೂ ಬುಡಸಹಿತ ಕಿತ್ತುಹಾಕುವಂತಿದೆ.

## ಉಪಸಂಹಾರ

ಇಷ್ಟೆಲ್ಲಾ ವಚನಕಾರ್ತಿಯರು ಧಾರ್ಮಿಕ ಸಾಮಾಜಿಕ ಕ್ಷೇತ್ರದಲ್ಲಿ ಇಷ್ಟೊಂದು ಎತ್ತರಕ್ಕೆ ಏರಲು ಆ ಕಾಲದ ಶರಣರು ಮುಖ್ಯ ಕಾರಣರಾಗಿದ್ದಾರೆ. ಬಸವಣ್ಣ ಮುಂತಾದ ವಚನಕಾರರು ಎಲ್ಲ ಕ್ಷೇತ್ರಗಳಲ್ಲೂ ಮಹಿಳೆ ಸ್ವತಂತ್ರವಾಗಿ ಬೆಳೆಯುವ ಸಾಧ್ಯತೆಯನ್ನು ಹೆಚ್ಚಿಸಿದ್ದಾರೆ. ಹೀಗೆ ಮಹಿಳೆಯರು ಸಾಂಸ್ಕೃತಿಕವಾಗಿ, ಸಾಮಾಜಿಕವಾಗಿ ಬೆಳೆದುನಿಂತಿರುವುದು ಚರಿತ್ರೆಯ ಬಹುಮುಖ್ಯ ಸಂಗತಿಯಾಗುತ್ತದೆ. ಮಹಿಳೆಯರ ಸ್ಥಾನ ಆ ಕಾಲದಲ್ಲಿ ಏರಿದ ಎತ್ತರವನ್ನು ಸಿದ್ದರಾಮನ ಈ ವಚನ ಸೂಚಿಸುತ್ತದೆ.

**ತಾ ಮಾಡಿದ ಹೆಣ್ಣು ತನ್ನ ತಲೆಯನೇರಿತ್ತು**
**ತಾ ಮಾಡಿದ ಹೆಣ್ಣು ತನ್ನ ತೊಡೆಯನೇರಿತ್ತು**
**ತಾ ಮಾಡಿದ ಹೆಣ್ಣು ಬ್ರಹ್ಮನ ನಾಲಿಗೆಯನೇರಿತ್ತು**
**ತಾ ಮಾಡಿದ ಹೆಣ್ಣು ನಾರಾಯಣನ ಎದೆಯನೇರಿತ್ತು**
**ಅದು ಕಾರಣ, ಹೆಣ್ಣು ಹೆಣ್ಣಲ್ಲ ಹೆಣ್ಣು ರಾಕ್ಷಸಿಯಲ್ಲ;**
**ಹೆಣ್ಣು ಪ್ರತ್ಯಕ್ಷ ಕಪಿಲಸಿದ್ದಮಲ್ಲಿಕಾರ್ಜುನ ನೋಡಾ!**

ಭಕ್ತಿಗೆ, ಅಧ್ಯಾತ್ಮ ಸಾಧನೆಗೆ ಹೆಣ್ಣು ಒಂದು ತೊಡಕು ಎಂಬುದು ಆವರೆಗೆ ರೂಢಿಯಲ್ಲಿದ್ದ ನಂಬಿಕೆ. ಆದರೆ ಸಿದ್ದರಾಮನ ಈ ವಚನ ಇಲ್ಲಿ ತ್ರಿಮೂರ್ತಿಗಳ ಮೂಲಕ ಹೆಣ್ಣಿನ ಪ್ರಾಮುಖ್ಯತೆಯನ್ನು ಸಾರುತ್ತಿದೆ. ತಾ ಮಾಡಿದ ಹೆಣ್ಣು ಗಂಗೆಯ ರೂಪದಲ್ಲಿ ತನ್ನ ತಲೆಯ ಮೇಲಿರಿಸಿಕೊಂಡವನು ಶಿವ; ತಾ ಮಾಡಿದ ಹೆಣ್ಣು ಸರಸ್ವತಿಯನ್ನು ನಾಲಗೆಯಲ್ಲಿರಿಸಿಕೊಂಡವನು ಬ್ರಹ್ಮ; ತಾ ಮಾಡಿದ ಹೆಣ್ಣು ಲಕುಮಿಯನ್ನು ಎದೆಯಲ್ಲಿಟ್ಟುಕೊಂಡವನು ನಾರಾಯಣ! ಹೀಗೆ ಮನುಜ ಲೋಕದಲ್ಲಿರುವ ಅಸಮಾನತೆ ದೈವಲೋಕದಲ್ಲಿಲ್ಲದೆ ಅಲ್ಲಿ ಹೆಣ್ಣು ಅಗ್ರಸ್ಥಾನ ಗಳಿಸಿದ್ದಾಳೆ. ಹಾಗಾಗಿ, ಹೆಣ್ಣನ್ನು ರಾಕ್ಷಸಿ ಎಂದು ಕರೆಯುವುದು ತಪ್ಪು, ಹೆಣ್ಣನ್ನು ಹೆಣ್ಣು ಎಂದು ಹೆಸರಿಟ್ಟು ಹೀಗಳೆಯುವುದೂ ತಪ್ಪು, ಹೆಣ್ಣು ನಮ್ಮ ಕಣ್ಣಿಗೆ ಕಾಣುವ, ಪ್ರತ್ಯಕ್ಷವಾದ ಕಪಿಲಸಿದ್ಧಮಲ್ಲಿಕಾರ್ಜುನನಲ್ಲದೆ ಬೇರಲ್ಲ ಅನ್ನುತ್ತಾ ಹೆಣ್ಣಿನ ಸ್ಥಾನವನ್ನು ಬಹು ಔನ್ನತ್ಯಕ್ಕೇರಿಸುತ್ತದೆ ಈ ವಚನ.

ನಮ್ಮ ಭಾರತೀಯ ಸಂಸ್ಕೃತಿಯಲ್ಲಿ ಹೆಣ್ಣು ಎರಡು ಅತಿರೇಕಗಳ ನಡುವೆ ಬಂಧಿಯಾಗಿದ್ದಾಳೆ. ಒಂದೋ ಆಕೆ ದೇವತೆಯಾಗಬೇಕು ಇಲ್ಲವೇ ರಕ್ಕಸಿಯಾಗಬೇಕು. ಈ ಎರಡು ಅತಿಗಳನ್ನು ಮೀರಿ ಹೆಣ್ಣನ್ನು ಇಲ್ಲಿ ಹೆಣ್ಣಾಗಿ ಕಂಡಿರುವ ಸಂದರ್ಭಗಳು ವಿರಳ. ವಚನ ಕಾಲದಲ್ಲಿ ಹೆಣ್ಣನ್ನು ಹೆಣ್ಣಾಗಿ ಕಾಣುವ, ಸಹಮಾನವಳಂತೆ ನಡೆಸಿಕೊಳ್ಳುವ ಪ್ರಯತ್ನಗಳು ನಡೆದವು. ಇಲ್ಲಿ ಆಕೆಯನ್ನು ತಾಯಿಯೆಂದು ನಮಿಸಿದ್ದಾರೆ, ಸತಿಯೆಂದು ಸಮಾನ ಸ್ಥಾನ ಕೊಟ್ಟಿದ್ದಾರೆ. ಶತಮಾನಗಳಿಂದ ಅಧ್ಯಾತ್ಮ ಕ್ಷೇತ್ರಕ್ಕೆ ಹೊರತಾಗಿದ್ದ ಹೆಣ್ಣು ಇಲ್ಲಿ ಅನುಭವ ಮಂಟಪದಲ್ಲಿ ಸ್ಥಾನ ಪಡೆದಿದ್ದಾಳೆ. ದಾಂಪತ್ಯದ, ಸಂಸಾರದ ಭಾರದಿಂದ ಸೋತು ಸುಣ್ಣವಾಗಿದ್ದ ಹೆಣ್ಣು ಇಲ್ಲಿ ಸಂತೃಪ್ತಿಯ ಜೀವನ ನಡೆಸಿದ್ದಾಳೆ. ಶತಮಾನಗಳಿಂದ ನಗಣ್ಯಳಾಗಿದ್ದ ಹೆಣ್ಣು ಇಲ್ಲಿ ಸ್ವಂತಿಕೆಯಲ್ಲಿ ಮೆರೆದಿದ್ದಾಳೆ. ಮೌನ ಗೌರಿಯಾಗಿದ್ದ ಹೆಣ್ಣು ಇಲ್ಲಿ ಮನಸ್ಸಿನ ಮಾತುಗಳನ್ನು ವಚನಗಳ ಮೂಲಕ ಹೊರಗೆಡವಿದ್ದಾಳೆ. ಅಸಮಾನತೆಯ ವ್ಯವಸ್ಥೆಯನ್ನು ಪ್ರತಿಭಟಿಸಿದ್ದಾಳೆ. ಪಾತಿವ್ರತ್ಯದ ಬೇಲಿಯಲ್ಲಿ ಗುಲಾಮಳಾಗಿದ್ದ ಹೆಣ್ಣು ಪತಿಗೆ ಮಾರ್ಗದರ್ಶನ ನೀಡುವಷ್ಟು ಪ್ರಬುದ್ಧಳಾಗಿದ್ದಾಳೆ. ಹೀಗೆ ವಚನ ಚಳುವಳಿಯ ನಂತರ ಹೆಣ್ಣು ಮಾಯೆಗೆ ಬದಲಾಗಿ ಮಾತೆಯಾಗಿದ್ದಾಳೆ. ಅಬಲೆಗೆ ಬದಲಾಗಿ ಸಬಲೆಯಾಗಿದ್ದಾಳೆ. ದಾಸಿಗೆ ಬದಲಾಗಿ ಪುರುಷನ ಆತ್ಮಸಂಗಾತಿಯಾಗಿದ್ದಾಳೆ. ಹೀಗಾಗಿ ವಚನಚಳುವಳಿಯ ನಂತರ ಮಹಿಳೆಯರನ್ನು ಕಾಣುತ್ತಿದ್ದ ಸಮಾಜದ ದೃಷ್ಟಿಕೋನ ಬಹಳಷ್ಟು ಸುಧಾರಿಸಿ, ಆ ಕಾಲ ಸ್ತ್ರೀ ಸ್ವಾತಂತ್ರ್ಯದ ಸುವರ್ಣ ಯುಗವಾಯಿತು.

**ಆಕರಗಳು:**


* ವೀರಶೈವ ಧರ್ಮ ದರ್ಶನ, ಪ್ರಧಾನ ಸಂಪಾದಕರು: ಯು. ಆರ್. ಅನಂತಮೂರ್ತಿ.
* ವಚನ ತವನಿಧಿ, ಲೇಖಕ: ಡಾ. ಹೆಚ್. ಚಂದ್ರಶೇಖರ್.
* ವಚನ ಕೃಪೆ: ಅಂತರ್ಜಾಲದ ಹಲವಾರು ತಾಣಗಳು.




# ವಲಸೆಗಾರ್ತಿಯರ ಹೆಜ್ಜೆ ಗುರುತುಗಳು

ನಳಿನಿ ಮೈಯ
Fairfax, Virginia

*

"ಒಬ್ಬಳೇ ನಾನಿಲ್ಲಿ ತಬ್ಬಿಬ್ಬುಗೊಂಡಿರುವೆ
ಮಬ್ಬು ಹರಿಯುವುದೇನಾ? ಹಬ್ಬವಾಗುವುದೇನಾ?"

"ನಾಗಮಂಡಲ" ಚಿತ್ರಗೀತೆಯ ಈ ಸಾಲುಗಳು ನನ್ನ ಮನಸ್ಸಿನಲ್ಲಿ ಹಾದು ಹೋಗುತ್ತಿವೆ, ನಾವು ಅಮೆರಿಕಾಗೆ ವಲಸೆ ಬಂದ ಶುರುವಿನ ಆ ದಿನಗಳನ್ನು ನೆನೆಯುತ್ತಿರುವಾಗ! 1969ನೆಯ ಇಸವಿ ಜನವರಿಯ ಕಡುಚಳಿಯಲ್ಲಿ ಶಿಕಾಗೊ ನಗರದ ಒಹೇರ್ ಏರ್‌ಪೋರ್ಟಿನಲ್ಲಿ ಬಂದಿಳಿದು ಕಣ್ಣು ಕಣ್ಣು ಬಿಟ್ಟ ಇಪ್ಪತ್ತರ ಹರೆಯದ ಆಸುಪಾಸಿನ ಆ ಮುಗ್ಧತೆಯನ್ನು ನೆನೆಸಿಕೊಂಡಾಗ.

ಹಾಗೆ ನೋಡಿದರೆ ಹೆಣ್ಣಿನ ಜೀವನದಲ್ಲಿ ಬಹುತೇಕ ಬಂದೇ ಬರುವ ಅತಿ ಸಹಜ ವಲಸೆ- ಮದುವೆಯಾಗಿ ಗಂಡನ ಮನೆಗೆ ಹೋಗುವುದು. ಇದುವರೆಗೂ ತನಗೆ ಒಗ್ಗಿ ಹೋಗಿದ್ದ, ತನ್ನ ಒಂದಂಶವೇ ಆಗಿದ್ದ ಎಲ್ಲವನ್ನೂ, ಎಲ್ಲರನ್ನೂ ತೊರೆದು ಗಂಡನ ಮನೆಯಲ್ಲಿ ಅಪರಿಚಿತರ ನಡುವೆ ಬಾಳು ಕಟ್ಟಿಕೊಂಡು "ಆ ಮನೆಯೇ ತನ್ನದು, ಆ ಜನರೇ ತನ್ನವರು" ಎಂದು ಬಾಳುವ ಛಾತಿ, ಧಾರಣ ಶಕ್ತಿ ಉಳ್ಳವಳು ಹೆಣ್ಣು. ಆದರೂ ಅಲ್ಲಿ ಸುತ್ತಲಿನ ಸಂಸ್ಕೃತಿ ತನ್ನದೇ, ಆಡುವ ಭಾಷೆ ತಾಯ್ನುಡಿಯೇ, ಉಡುಗೆ ತೊಡುಗೆ, ಊಟ ಉಪಚಾರ ಎಲ್ಲವೂ ಪರಿಚಿತ ಎಂಬ ಭಾವನೆಯ ಸುಖವಿತ್ತು. ತವರು ಮನೆಯವರನ್ನು ಸದ್ಯದಲ್ಲೇ ಮತ್ತೆ ನೋಡಬಹುದೆಂಬ ಭರವಸೆಯ ಇಂಬಿತ್ತು.

ಈ ಎಲ್ಲ ಪರಿಚಿತ ಜಗತ್ತನ್ನು ಬಿಟ್ಟು ಕಟ್ಟಿಕೊಂಡ ಗಂಡನ ಜೊತೆ ಬೇರೆಯೇ ದೇಶಕ್ಕೆ ಹಾರಿ ಬಂದು ಅಲ್ಲಿ ಬಾಳ್ವೆ ಮಾಡುವುದಿದೆಯಲ್ಲ, ಅದೀಗ ನಿಜವಾದ ಸವಾಲು! ಅರವತ್ತನೆಯ ದಶಕದ ಕೊನೆ ಹಾಗೂ ಎಪ್ಪತ್ತರ ದಶಕದ ಆದಿಯಲ್ಲಿ ಅಮೆರಿಕಾಗೆ ವಲಸೆ ಬಂದ ಭಾರತೀಯರು ಮೊದಲ ತಂಡದವರು. ಆ ಸಮಯದಲ್ಲಿ ಅಮೆರಿಕಾದಲ್ಲಿ ಕನ್ನಡಿಗರೇಕೆ, ಹೆಚ್ಚು ಭಾರತೀಯರೇ ಇರಲಿಲ್ಲ. ಅಪರೂಪಕ್ಕೆ ಬಿಳಿಯರ ನಡುವೆ ಕಂದು ಬಣ್ಣದವರು ಕಂಡರೆ “ನೀವು ಇಂಡಿಯನ್ನಾ?” ಅಂತ ನಾವು ಕೇಳಿಕೊಂಡು ಹೋಗುತ್ತಿದ್ದ ಕಾಲವದು! ಅವರು ಯಾರೋ ಮೆಕ್ಸಿಕನ್ ಆಗಿರಲೂಬಹುದು! ಭಾರತದಲ್ಲೂ ಈಗಿನ ಹಾಗೆ ಮನೆಮನೆಯಲ್ಲಿ ಟೆಲಿವಿಷನ್ ಇರಲಿಲ್ಲ. ಜಾಗತೀಕರಣದ ಗಾಳಿ ಬೀಸಿರಲಿಲ್ಲ. ಅಮೆರಿಕಾದ ಬಗ್ಗೆ ತಿಳಿದುಕೊಳ್ಳುವ ಯಾವ ಸಾಧನವೂ ಇರಲಿಲ್ಲ. ಪುಸ್ತಕದಲ್ಲಿ ಓದಿದ್ದೆಷ್ಟೋ ಅಷ್ಟೇ ಗೊತ್ತು! ಫೋನ್ ಸಂಪರ್ಕ ಇರಲೇ ಇಲ್ಲ. ಇನ್ನು ಕಂಪ್ಯೂಟರ್, ತಾಂತ್ರಿಕ ಸೌಲಭ್ಯಗಳು ಉಂಟುಮಾಡಿಕೊಟ್ಟ ಇ-ಮೇಲ್, ವಾಟ್ಸಾಪ್ ಯಾವುದೂ ಇಲ್ಲ! ಇದ್ದಿದ್ದು ಒಂದೇ- ಪತ್ರ ವ್ಯವಹಾರ! ಪುಟಗಟ್ಟಲೆ ಕಾಗದ ಬರೆದು ಅಪ್ಪ, ಅಮ್ಮ, ಗೆಳತಿಯರು ಎಲ್ಲರಿಗೂ ಹೇಳಬೇಕಾದ ಎಲ್ಲವನ್ನೂ ಜೋಪಾನವಾಗಿ ಅಕ್ಷರಗಳಲ್ಲಿ ಇಳಿಸಿ ಊರಿಗೆ ಪೋಸ್ಟ್ ಮಾಡುತ್ತಿದ್ದೆವು. ಅದು ಆಮೆಗತಿಯಲ್ಲಿ ಪ್ರಯಾಣ ಮಾಡಿ ಊರು ತಲುಪಲು ಮೂರು ವಾರಗಳೇ ಹಿಡಿಯುತ್ತಿತ್ತು. ಮತ್ತೆ ಅವರು ಆ ಪತ್ರ ಓದಿ ಓದಿ ಖುಷಿಪಟ್ಟು, ಜೊತೆಗೆ ಕಣ್ಣೀರು ಹನಿಸಿ ಉತ್ತರ ಬರೆಯಲು ಒಂದೆರಡು ವಾರ ಬೇಕಾಗುತ್ತಿತ್ತು. ಮತ್ತೊಮ್ಮೆ ಆಮೆಗತಿಯಲ್ಲಿ ಕಾಗದದ ಪ್ರಯಾಣ! ಅದು ನಮಗೆ ತಲುಪುವಾಗ ನಾವು ಬರೆದು ಎರಡು ತಿಂಗಳೇ ಆಗಿರುತ್ತಿತ್ತು! ಒಂದೊಂದು ಕಾಗದಕ್ಕಾಗಿ ಚಾತಕಪಕ್ಷಿಯಂತೆ ಕಾಯುತ್ತಿದ್ದ ದಿನಗಳವು! ಆ ಕಾಗದವನ್ನು ಮತ್ತೆ ಮತ್ತೆ ಓದಿ ಕಣ್ಣೀರನ್ನು ಒರೆಸಿಕೊಳ್ಳುತ್ತಿದ್ದ ದಿನಗಳವು! ಮತ್ತೆ ಆಪ್ತರ ಜೊತೆ ಆತ್ಮೀಯವಾಗಿ ಮಾತನಾಡಬೇಕಾದರೆ ವರ್ಷಗಟ್ಟಲೆ ಕಾಯಬೇಕು. ದುಡ್ಡು ಒಟ್ಟು ಮಾಡಿ ಮತ್ತೆ ಭಾರತಯಾತ್ರೆ ಮಾಡಬೇಕು!

ಅಂದಿನ ದಿನಗಳಲ್ಲಿ ಅಮೆರಿಕಾದಲ್ಲಿ ಊರಿಗೆ ಮೂರು-ನಾಲ್ಕು ದೇವಸ್ಥಾನಗಳು, ಕನ್ನಡ ಕೂಟಗಳು, ಪಟೇಲ್ ಬ್ರದರ್ಸ್ ದಿನಸಿ ಅಂಗಡಿಗಳು, ಇಂಡಿಯನ್ ರೆಸ್ಟುರಾಂಟುಗಳು ಯಾವುದೂ ಇರಲಿಲ್ಲ. ಈಗಾದರೆ ಅಮೆರಿಕನ್ ದಿನಸಿ ಅಂಗಡಿಗಳಲ್ಲೂ ಕೊತ್ತಂಬರಿ ಸೊಪ್ಪು ಸಿಕ್ಕುತ್ತದೆ. ಅನೇಕ ನಗರಗಳಲ್ಲಿ ದೀಪಾವಳಿಗೆ ಶಾಲೆಗೆ ರಜಾ ಕೊಡುತ್ತಾರೆ! ಎಷ್ಟು ಸುದೀರ್ಘ ಪಯಣ, ಯಶಸ್ವಿ ಪಯಣ ಅಮೆರಿಕಾಗೆ ಬಂದ ಭಾರತೀಯ ವಲಸೆಗಾರರದ್ದು! ಆ ಕಾಲದಲ್ಲಿ ವಲಸೆ ಬಂದ ಹೆಣ್ಣಿನ (ನನ್ನ ಮತ್ತು ಇತರರ) ತಲ್ಲಣ, ತವಕ, ಆತಂಕ, ಸಂಭ್ರಮ, ಸಂಘರ್ಷಗಳನ್ನು ಈ ಲೇಖನದಲ್ಲಿ ದಾಖಲಿಸುವ ಆಶಯ ನನ್ನದು.

* * *

## ಅಡಿಗೆಮನೆಯಲ್ಲಿ ಕನ್ನಡತನ

ನಾಗರಿಕತೆಯ ಬೆನ್ನು ಹತ್ತಿ ಉನ್ನತ ವ್ಯಾಸಂಗ, ಉತ್ತಮ ಹುದ್ದೆಗಳನ್ನು ಅರಸಿ ಬಂದವರು ನಾವು. ಈ ಇಲ್ಲಿ ಪಂದ್ಯದಲ್ಲಿ ಮಗ್ನನಾದ ಪುರುಷನ ಜಗತ್ತಿನಲ್ಲಿ ಅದರದೇ ಆದ ಆತಂಕ, ತಲ್ಲಣಗಳು ಇರುತ್ತವೆ, ಒಪ್ಪಬೇಕಾದದ್ದೇ. ಆದರೆ ಇಲ್ಲಿ ಮನೆಯಲ್ಲಿ ಒಬ್ಬಂಟಿಯಾದ ಹೆಣ್ಣಿನ ಕಡೆ ನೋಡಿ. ಅತಿ ವಿಚಿತ್ರವಾಗಿ ತೋರುವ ಹೊರ ಜಗತ್ತಿನಲ್ಲಿ ನನ್ನವರು ಅಂತ ಯಾರೂ ಇಲ್ಲ. ಸ್ನೇಹಿತೆಯರಿಲ್ಲ, ಬಂಧುಗಳಂತೂ ಇಲ್ಲವೇ ಇಲ್ಲ. ಇಂಗ್ಲಿಷ್ ಗೊತ್ತಿದ್ದರೂ ಇಲ್ಲಿಯವರ ಉಚ್ಚಾರಣೆಯೇ ಬೇರೆ! ಈ ಆಕ್ಸೆಂಟ್ ತಿಳಿಯದೆ ಅವರು ಹೇಳಿದ್ದು ಯಾವುದೂ ಅರ್ಥವಾಗುತ್ತಿಲ್ಲ. ಹೋಗಲಿ. ಮನೆಗೆಲಸದಲ್ಲಿ ಮಗ್ನಳಾಗೋಣವೆಂದರೆ ಅಡಿಗೆ ಮಾಡಲು ಯಾವ ಸಾಂಬಾರ ಪದಾರ್ಥಗಳೂ ಸಿಕ್ಕುತ್ತಿಲ್ಲ, ಉದ್ದಿನ ಬೇಳೆ, ಕಡಲೆ ಬೇಳೆ, ಕೊತ್ತಂಬರಿ, ಜೀರಿಗೆ ಏನೂ ಇಲ್ಲ. ಊರಿಂದ ತಂದ ಸಾರಿನ ಪುಡಿ, ಹುಳಿ ಪುಡಿಯನ್ನು ಜತನವಾಗಿ ಸ್ವಲ್ಪ ಸ್ವಲ್ಪವೇ ಉಪಯೋಗಿಸುತ್ತಾ ಅಡಿಗೆ ಮಾಡಬೇಕು. ಇಡ್ಲಿ ಮಾಡಲು ಇಡ್ಲಿ ಪಾತ್ರೆ ಇಲ್ಲ. ಚಕ್ಕುಲಿ ಮಾಡೋಕೆ ಒರಳಿಲ್ಲ. ತೊಗರಿ ಬೇಳೆಯ ಬದಲು ಅಮೆರಿಕಾದಲ್ಲಿ ಸಿಕ್ಕುವ ಸ್ಪ್ಲಿಟ್ ಪೀಸ್ ಎಂಬ ಬೇಳೆಯಲ್ಲಿ ಸಾರು ಮಾಡಿದ್ದಾಯಿತು. ಕೈಗೆ ಸಿಕ್ಕ ಅಮೆರಿಕನ್ ತರಕಾರಿಗಳು– ಭಾರತ ಇನ್ನೂ ಕಂಡಿರದಿದ್ದ ಬ್ರೋಕಲಿ, ಬ್ರಸೆಲ್ ಸ್ಪ್ರೌಟ್‌ಗಳನ್ನು– ಬೇಯಿಸಿ ಒಗ್ಗರಣೆ ಕೊಟ್ಟು ಕನ್ನಡತನವನ್ನು ಅಡಿಗೆ ಮನೆಯಲ್ಲಿ ಸ್ಥಾಪಿಸಿದ್ದಾಯಿತು! ಹೋಟಲುಗಳಲ್ಲಿ ಪಿಜ್ಜಾ, ಪಾಸ್ಟಾ ಮುಂತಾದವು ಸಿಕ್ಕಿದರೂ ಅವುಗಳನ್ನು ಭಾರತದಲ್ಲಿ ತಿಂದಿರಲಿಲ್ಲವಾಗಿ ಆ ರುಚಿ ಇನ್ನೂ ನಾಲಿಗೆಗೆ ಅಭ್ಯಾಸವಾಗಿರಲಿಲ್ಲ. ಆ ಪಾಶ್ಚಾತ್ಯ ತಿನಿಸುಗಳೆಲ್ಲ ಭಾರತದಲ್ಲಿ ಶುರುವಾಗಿದ್ದು ಕಳೆದ ಎರಡು–ಮೂರು ದಶಕಗಳಲ್ಲಿ ತಾನೆ?

"ಅದೆಲ್ಲೋ ದೂರದಲ್ಲಿ ಒಂದು ಇಟ್ಯಾಲಿಯನ್ ಅಂಗಡಿಯಲ್ಲಿ ನಮ್ಮ ಅಡಿಗೆ ಪದಾರ್ಥಗಳು ಸಿಕ್ತಾವಂತೆ. ಅಲ್ಲಿಗೆ ಹೋಗಲು ಕಾರ್ ಇನ್ನೂ ಕೊಂಡಿಲ್ಲ. ಹೆಂಡತಿ ಇನ್ನೂ ಡ್ರೈವಿಂಗ್ ಕಲಿತಿಲ್ಲ. ಏನೋ ಒಂದಿಷ್ಟು ದುಡ್ಡು ಮಾಡಿ ಮತ್ತೆ ಇಂಡಿಯಾಗೆ ಹೋಗಿಬಿಡೋಣ" ಎಂಬ ಸಮಜಾಯಿಷಿಯೇ ನಮ್ಮ ಊರೆಗೋಲಾಗಿತ್ತು ಆ ದಿನಗಳಲ್ಲಿ.

## ಮಲ್ಲಿಗೆಯ ಕಂಪಿನಲ್ಲಿ ಮಿಂದ ಈ ಮನ, ನೆಂದ ನಯನ

ಅಮೆರಿಕಾಗೆ ಬಂದು ಮೂರು ತಿಂಗಳಾಗುತ್ತಾ ಬಂದಿತ್ತು. ಸಾರನ್ನದ ಜೊತೆ ಹಪ್ಪಳ, ಸಂಡಿಗೆ ಇಲ್ಲದೆ ಜಡ್ಡುಗಟ್ಟಿದ ನಾಲಿಗೆ, ರೇಡಿಯೊದಲ್ಲಿ ದಾಸರ ಪದ, ಭಾವಗೀತೆ ಯಾಕಿಲ್ಲ? ಎಂದು ಮರುಗುವ ಕಿವಿ, ಆಪ್ತರ ಜೊತೆ ಹರಟೆ ಕೊಚ್ಚಬೇಕು, ಮಲ್ಲಿಗೆ ಮುಡಿದು ಸಂಭ್ರಮಿಸಬೇಕು ಎಂಬ ಎಲ್ಲ ಆಸೆಗಳನ್ನೂ ಅದುಮಿ ಜೀವನ ಸಾಗುತ್ತಿದೆ. ಏಪ್ರಿಲ್ ತಿಂಗಳು ಬಂತು. ಚಳಿ ಕಡಿಮೆಯಾಗಿದೆ. ನಮಗೆ ಮನೆ ಬಾಡಿಗೆಗೆ ಕೊಟ್ಟ ಮಾಲಿಕ, ನೆರೆಹೊರೆಯವರು ಎಲ್ಲರೂ ಸ್ನೇಹ, ವಿಶ್ವಾಸದಿಂದಲೇ ನಡೆದುಕೊಳ್ತಾ ಇದ್ದಾರೆ.

ನಾವೂ ಪ್ರತಿಯಾಗಿ ಅದೇ ಸ್ನೇಹ, ವಿಶ್ವಾಸದ ಮುಗುಳ್ನಗೆಯಲ್ಲಿ ಮಾತನಾಡಿಸುತ್ತೀವಿ. ಆದರೂ ತಾಯ್ನಾಡಿನ ಆತ್ಮೀಯತೆ, ಆ ಬಾಂಧವ್ಯ ಇಲ್ಲಿ ಸಾಧ್ಯವಿಲ್ಲ ಅನ್ನಿಸುತ್ತಿದೆ. ನನ್ನವರು ಕೆಲಸ ಮಾಡುವ ಆರ್ಗಾನ್ ಲ್ಯಾಬೊರೇಟರಿಯಲ್ಲಿ ಸಹೋದ್ಯೋಗಿಯಾದ ಶ್ರೀಧರ ಮತ್ತು ಅವರ ಪತ್ನಿ ರಾಧಾ ಎಂಬ ತಮಿಳು ದಂಪತಿಗಳ ಪರಿಚಯವಾಗಿದ್ದು ಖುಷಿ ತಂದಿತ್ತು.

ಇದ್ದಕ್ಕಿದ್ದಂತೆ ಊರಿಂದ ಟೆಲಿಗ್ರಾಮ್ ಬಂದಿತು– ನನ್ನ ಮೈದುನನಿಂದ. “ತಂದೆಯವರು ಹೋಗಿಬಿಟ್ಟರು. ಕೂಡಲೆ ಹೊರಟು ಬಾ” ಅಂತ! ಏನು ಮಾಡಬೇಕೆಂದೇ ತಿಳಿಯದೆ ದಿಗ್ಭ್ರಮೆಯಾಯಿತು ನಮಗೆ! ವಿಷಯ ತಿಳಿದ ಶ್ರೀಧರ ಮತ್ತು ರಾಧಾ “ನೀವು ಇಂಡಿಯಾಗೆ ಹೋಗಿ. ನಳಿನಿ ನಮ್ಮ ಮನೆಯಲ್ಲಿ ಇರಬಹುದು ನೀವು ವಾಪಸ್ಸಾಗುವವರೆಗೂ. ಆ ಬಗ್ಗೆ ಚಿಂತಿಸಬೇಡಿ” ಎಂದು ಧೈರ್ಯ ತುಂಬಿದರು. ಅಂತೆಯೇ ನಾನು ಎರಡು ವಾರಗಳ ಮಟ್ಟಿಗೆ ಅವರ ಮನೆಯಲ್ಲಿ ಉಳಿದೆ. ಇವರು ಭಾರತಕ್ಕೆ ಹೋಗಿ ಅಂತ್ಯಕ್ರಿಯೆಗಳನ್ನು ಮಾಡಿ ಪೂರೈಸಿದರು.

ನನ್ನವರು ವಾಪಸ್ಸಾದ ಮರುದಿನ ಯಥಾಪ್ರಕಾರ ಕೆಲಸಕ್ಕೆ ಹೋಗಿದ್ದರು. ಅವರು ತಂದಿದ್ದ ಸೂಟ್ ಕೇಸ್ ಬಿಚ್ಚಿ ಕೊಳೆ ಬಟ್ಟೆಗಳನ್ನೆಲ್ಲ ತೆಗೆದಿಟ್ಟೆ. ಅಲ್ಲಿ ನನಗಾಗಿ ತಂದ ಹಲವು ಹೊಸ ಸೀರೆಗಳು, ಅಮ್ಮ ಕಳಿಸಿದ ಚಕ್ಕುಲಿ, ಉಂಡೆಗಳು, ಅತ್ತೆಯವರು ಕಳಿಸಿದ್ದ ಚಟ್ನಿಪುಡಿ, ಮೆಣಸಿನಪುಡಿ ಎಲ್ಲವೂ ಇದ್ದವು. ಆ ಪರಿಮಳ ಹದವಾಗಿ ತೇಲಿ ಬಂದು ಏನೋ ಒಂದು ಬಗೆಯ ಸಂತೃಪ್ತಿ, ನೆಮ್ಮದಿಯನ್ನು ನೀಡಿತು.

ಕ್ಯಾಬಿನ್ ಬ್ಯಾಗನ್ನೂ ತೆಗೆದು ನೋಡೋಣ ಅಂತ ಜಿಪ್ಪರ್ ಎಳೆದ ತಕ್ಷಣ ಒಳಗಿಂದ ಮಲ್ಲಿಗೆಯ ಘಮಲು ತೇಲಿ ಬಂದು ನಮ್ಮ ಪುಟ್ಟ ಮನೆಯ ತುಂಬಾ ಹರಡಿಕೊಂಡಿತು! ಆಗಿನ ಕಾಲದಲ್ಲಿ ಫಾರಿನ್ ಪ್ರಯಾಣ ಮಾಡುವಾಗ ಮಲ್ಲಿಗೆಯ ಹಾರ ಹಾಕಿ ಶುಭ ಕೋರುವುದು ಪದ್ಧತಿಯಾಗಿತ್ತು. ಹಾಗೆಯೇ ಯಾರೋ ಹಾಕಿದ ಮಲ್ಲಿಗೆಯ ಹಾರ ಇಲ್ಲಿ ನಮ್ಮ ಮನೆಯವರೆಗೂ ಬಂದಿತ್ತು. ಹೂಗಳು ಬಾಡಿದ್ದವು, ಆದರೂ ಆ ಪರಿಮಳ ನಾನು ಕಳೆದುಕೊಂಡಿದ್ದನ್ನೆಲ್ಲ ಎದೆ ಬಗೆದು ತೋರಿಸಿತ್ತು. ಇಂತಹ ಗಂಧಕ್ಕೆ ಮನಸ್ಸಿನ ಆಳದಲ್ಲಿ ಹುದುಗಿದ ಭಾವನೆಗಳನ್ನು ಬಡಿದೆಬ್ಬಿಸುವ ಶಕ್ತಿ ಇರುತ್ತದೆ! ಅಲ್ಲಿ ತಾಯ್ನಾಡಿನಲ್ಲಿ ಲಂಗ ದಾವಣಿಯುಟ್ಟು ಹೂ ಮುಡಿದು ಸಂಭ್ರಮದಲ್ಲಿ ಅಕ್ಕ ತಂಗಿಯರ ಜೊತೆ ನಲಿದಾಡಿದ್ದು, ದೇವಸ್ಥಾನಗಳಲ್ಲಿ ವಿಜೃಂಭಣೆಯ ಪೂಜೆಗಳು, ಮುತ್ತೈದೆಯರು “ಅರಿಸಿನ-ಕುಂಕುಮಕ್ಕೆ ಬನ್ನಿ” ಎಂದು ಕರೆದಿದ್ದು, ಸೀಮಂತ, ಮದುವೆ... ಎಷ್ಟೆಲ್ಲ ನೆನಪುಗಳು ಈ ಮಲ್ಲಿಗೆ ಕಂಪಿನ ಹಾದಿ ಹಿಡಿದು ಬಂದು ನನ್ನ ಭಾವಕೋಶದಲ್ಲಿ ನೆಲೆಸಿವೆ! ಆ ಹಾರವನ್ನು ಅಪ್ಪಿಕೊಂಡ ನನ್ನ ಕಣ್ಣಲ್ಲಿ ಧಾರಾಕಾರವಾಗಿ ನೀರು ಹರಿದಿತ್ತು. ಸಾಧ್ಯವಾದಷ್ಟು ಬೇಗ ವಾಪಸಾಗಬೇಕೆಂಬ ನಿರ್ಧಾರ ಗಟ್ಟಿಯಾಗಿತ್ತು.

## I don't like him, but I love him

"ಐ ಡೋಂಟ್ ಲೈಕ್ ಹಿಮ್ ಬಟ್ ಐ ಲವ್ ಹಿಮ್." ಈ ವಾಕ್ಯದ ಅರ್ಥವನ್ನು, ಆಳವನ್ನು ಅರಿಯಬಲ್ಲವಳು ಹೆಣ್ಣು ಮಾತ್ರ! ಹಾಗೂ ಹೆಂಗರುಳು ಹೊಂದಿದ ಗಂಡು. ಇದರ ಹಿನ್ನೆಲೆಯ ಕಥೆ ಹೀಗಿದೆ–

ನನ್ನವರು ಕೆಲಸ ಮಾಡುತ್ತಿದ್ದ ಆರ್ಗಾನ್ ಲ್ಯಾಬೊರೇಟರಿಗೆ ಹೊಸದಾಗಿ ಕೇರಳ ಮೂಲದ ನಟೇಶ್ ಎಂಬಾತ ಸೇರಿದ್ದರು. ಅವರ ಪತ್ನಿ ಗೀತಾ (ಹೆಸರುಗಳನ್ನು ಬದಲಾಯಿಸಲಾಗಿದೆ). ಆಕೆ ಒಮ್ಮೊಮ್ಮೆ ಭೇಟಿಯಾದಾಗ ತನ್ನ ಗಂಡನ ಬಗ್ಗೆ ಹೇಳಿಕೊಳ್ಳುತ್ತಿದ್ದಳು. ಮನೆಯಲ್ಲಿ ಫೋನ್ ರಿಂಗ್ ಆದರೆ ಆಕೆ ಎತ್ತುವ ಹಾಗಿಲ್ಲವಂತೆ. ನಟೇಶ್ ಅವರು ಹೊರಗಿನಿಂದ ಮನೆಗೆ ಫೋನ್ ಮಾಡಿದರೆ ಒಮ್ಮೆ ಎರಡು ರಿಂಗ್ ಆದ ತಕ್ಷಣ ಹ್ಯಾಂಗ್ ಅಪ್ ಮಾಡಿ ಮತ್ತೆ ಕಾಲ್ ಮಾಡುತ್ತಿದ್ದರಂತೆ. ಆಗ ಮಾತ್ರ ಆಕೆ ಎತ್ತಬಹುದಂತೆ! ಹೆಂಡತಿ ದಪ್ಪ ಆಗಬಾರದು ಅಂತ ಮನೆಯಲ್ಲಿ ಸಾಧ್ಯವಾದಷ್ಟು ಕಡಿಮೆ ತಿಂಡಿ ತಿನಿಸು ಇಡ್ತಾರಂತೆ. ಏನಾದರೂ ಹೆಚ್ಚಿಗೆ ಇದ್ದರೂ ತಾವು ಕೆಲಸಕ್ಕೆ ಹೋಗುವಾಗ ಕಾರಿನಲ್ಲಿ ಇಟ್ಟುಕೊಂಡು ಹೋಗಿಬಿಡ್ತಾರಂತೆ! "ಇದೆಂಥ ಕಂಟ್ರೋಲಿಂಗ್ ಮನುಷ್ಯ! ಛೆ, ಪಾಪದ ಹೆಂಗಸು" ಅನ್ನಿಸುತ್ತಿತ್ತು ನನಗೆ. ಹೊರಗಿನ ಪ್ರಪಂಚ ಹೇಗೇ ಇದ್ದರೂ ಮನೆಯಲ್ಲಿ ಗಂಡನ ಬೆಂಬಲ ನನಗಿದೆ ಎಂಬ ಭದ್ರತೆ ಮನಸ್ಸಿಗೆ ನೆಮ್ಮದಿ ನೀಡಿತ್ತು ನನಗೆ. ಅವಳಿಗೆ ಅದೂ ಇಲ್ಲ!!!

ಅವರು ಇನ್ನೊಂದು ಕೆಲಸ ಹಿಡಿದು ಬೇರೆ ಊರಿಗೆ ಹೋದರು. ಆದರೂ ವೃತ್ತಿ ಸಂಪರ್ಕ ಇದ್ದೇ ಇತ್ತು– ಅವರ ಸಹೋದ್ಯೋಗಿಗಳ ಮೂಲಕ. ಕಡೆಗೊಮ್ಮೆ ಬಂದ ಸುದ್ದಿ– ನಟೇಶ್ ಹೆಂಡತಿಗೆ ಬೆಲ್ಟಿನಲ್ಲಿ ಹೊಡೆದು ತುಂಬ ಪೆಟ್ಟಾಗಿ ಆಕೆ ಆಸ್ಪತ್ರೆಗೆ ಹೋಗಬೇಕಾಯಿತಂತೆ. ವಿಷಯ ತಿಳಿದ ಇತರ ಅಮೆರಿಕನ್ ಮಹಿಳೆಯರು ಒಂದೆರಡು ದಿನ ಬಿಟ್ಟು ನಟೇಶ್ ಇಲ್ಲದಿದ್ದಾಗ ಅವರ ಮನೆಗೆ ಹೋಗಿ "ಅವನನ್ನು ಬಿಟ್ಟುಬಿಡು. ಸ್ವತಂತ್ರವಾಗಿ ಬದುಕಲು ನಾವು ನಿನಗೆ ಸಹಾಯ ಮಾಡ್ತೀವಿ" ಎಂದು ಆಶ್ವಾಸನೆ ನೀಡಿದರಂತೆ. ಗೀತಾ ಒಪ್ಪಲಿಲ್ಲವಂತೆ. ಆಗ ಆಕೆ ಹೇಳಿದ್ದು I don't like him, but I love him.

ಏನು ಇದರ ಅರ್ಥ! ಅಂತ ಅಮೆರಿಕನ್ ಮಹಿಳೆಯರಿಗೆ ಆಶ್ಚರ್ಯವಾಗಿತ್ತು. ಇದು ಒಬ್ಬ ತಾಯಿ ತನ್ನ ಮಗನ ಬಗ್ಗೆಯೂ ಹೇಳಬಹುದಾದ ಮಾತು. ಮಗನ ವರ್ತನೆ ಅವಳಿಗೆ ಸರಿಬೀಳದಿರಬಹುದು. ಅವನು ಕಳ್ಳನೋ, ಕುಡುಕನೋ ಏನಾದರೂ ಆಗಿರಬಹುದು. ಅದಕ್ಕೇ ಅವನನ್ನು ಕಂಡರೆ ಇಷ್ಟವಿಲ್ಲ, ನಿಜ. ಆದರೆ ಯಾವ ಕಾರಣಕ್ಕೂ ಅವನನ್ನು ಪ್ರೀತಿಸುವುದನ್ನು ಬಿಟ್ಟುಬಿಡಲಾರಳು ಆಕೆ. ಏಕೆಂದರೆ ಅದು ಬೇಷರತ್ತಾದ ಪ್ರೀತಿ! ಅನ್‌ಕಂಡಿಷನಲ್ ಲವ್!

ಕೆಲ ವರ್ಷಗಳ ನಂತರ ಶಿಕಾಗೊ ವಲಯದಲ್ಲಿ ಅನೇಕ ಭಾರತೀಯ ಮಹಿಳೆಯರು ಕೈ ಜೋಡಿಸಿ ಇಂಥ ಮನೆ ತಪ್ಪಿದ ಹೆಣ್ಣುಗಳಿಗಾಗಿ "ಅಪನಾ ಘರ್" ಎಂಬ ಸಂಸ್ಥೆಯನ್ನು

ಪ್ರಾರಂಭಿಸಿದರು. ಅಲ್ಲಿ ಗಂಡನ ಜೊತೆ ಬಾಳಲಾಗದೆ ಬಿಟ್ಟು ಬಂದ ಹೆಂಗಸರು ಕೆಲ ಕಾಲ ತಂಗಿದ್ದು ತಮ್ಮ ಕಾಲ ಮೇಲೆ ತಾವು ನಿಂತುಕೊಳ್ಳುವ ಹಾಗೆ ಮಾಡುವ ಸೌಲಭ್ಯಗಳನ್ನು ಕಲ್ಪಿಸಲಾಗಿತ್ತು. ಒಂದು ಹೆಣ್ಣಿನ ಅಸಹಾಯಕತೆಯನ್ನು, ದೀನ ಸ್ಥಿತಿಯನ್ನು ಅರ್ಥ ಮಾಡಿಕೊಳ್ಳಬಲ್ಲವಳು ಇನ್ನೊಂದು ಹೆಣ್ಣು! ಶುರುವಿನಲ್ಲಿ ಸರಕಾರದ ಅನುದಾನ ಮುಂತಾದ ಯಾವುದೇ ಆರ್ಥಿಕ ನೆರವು ಇಲ್ಲದೆ ಕೇವಲ ವೈಯಕ್ತಿಕ ಡೊನೇಶನ್‌ಗಳ ಬುನಾದಿಯ ಮೇಲೆ ನಿಂತಿದ್ದ ಈ ಸಂಸ್ಥೆಗೆ ಕೆಲವು ವರ್ಷಗಳ ನಂತರ ಸ್ಥಳೀಯ ಸರಕಾರವೂ ಕೈ ಜೋಡಿಸಿ ಆರ್ಥಿಕ ಬೆಂಬಲ ನೀಡಿತು. ಈ ಸಂಸ್ಥೆಯನ್ನು ಶುರು ಮಾಡಿದ ಹೆಂಗಸರ ಛಲ, ಆತ್ಮ ವಿಶ್ವಾಸ, ಅನುಕಂಪ ತುಂಬಿದ ಹೃದಯ ನೆನೆಸಿಕೊಂಡಾಗ "ಹ್ಯಾಟ್ಸ್ ಆಫ್" ಅನ್ನಿಸಿಬಿಡುತ್ತೆ!

**ಕರಿಮಣಿ ಕಡಿದಾಗ....**

ಶ್ಯಾಮಲ ಸಾಧು ಸ್ವಭಾವದ ಹೆಣ್ಣು. ವಯಸ್ಸು ನಲವತ್ತು ದಾಟಿತ್ತು. ಎರಡು ಹದಿ ಹರಯದ ಮಕ್ಕಳು. ಮಗಳು ಕನ್ನಡ ಶಾಲೆಗೆ ಬರುತ್ತಿದ್ದಳು. ಹಾಗಾಗಿ ಪರಿಚಯವಾಯಿತು. ನಾನು ಅಲ್ಲಿ ಶಿಕ್ಷಕಿಯಾಗಿದ್ದೆ. ಒಮ್ಮೆಲೆ ಆಕೆ ತುಂಬ ಸೋತಂತೆ ಕಾಣಿಸಿಕೊಳ್ಳೋಕೆ ಶುರುವಾಯಿತು. ಕೇಳಿದರೆ "ಏನಿಲ್ಲ" ಅಂತ ಹಾರಿಕೆಯ ಉತ್ತರ ಕೊಡುತ್ತಿದ್ದರು. ಎಷ್ಟೋ ವಾರಗಳ ಮೇಲೆ ತಿಳಿದುಬಂತು– ಗಂಡನಿಗೆ ಕ್ಯಾನ್ಸರ್ ಆಗಿ ಈಗ ಸೀರಿಯಸ್ಸಂತೆ. ಆಸ್ಪತ್ರೆಯಲ್ಲಿದ್ದಾರಂತೆ. "ಯಾರಿಗೂ ಹೇಳಬೇಡ" ಅಂತ ಅವರು ಹೆಂಡತಿಗೆ ತಾಕೀತು ಮಾಡಿದ್ದರಿಂದ ತುಟಿ ಕಚ್ಚಿ, ನೋವನ್ನೆಲ್ಲ ನುಂಗಿ ಎದೆಯಲ್ಲಿ ಜ್ವಾಲಾಮುಖಿಯನ್ನಿರಿಸಿ ಇಷ್ಟು ದಿನ ತಳ್ಳಿದ್ದರು. ಈಗ ಗಂಡ ಕೋಮಾದಲ್ಲಿದ್ದಾರೆ! ಹೇಳದೆ ನಿರ್ವಾಹವಿಲ್ಲ. ವಿಷಯ ಗೊತ್ತಾದ ಮೇಲೆ ಎಲ್ಲ ಮಿತ್ರ ವೃಂದ ಆಸ್ಪತ್ರೆಗೆ ಹೋಗಿತ್ತು. ಅಲ್ಲಿ ಡಾಕ್ಟರು "ಬದುಕುವ ಭರವಸೆ ಏನೇನೂ ಇಲ್ಲ. ಸುಮ್ಮನೆ ದಿನ ನೂಕುವುದರ ಬದಲು ನೀವು ಈ ಪೇಪರಿಗೆ ಸೈನ್ ಹಾಕಿದರೆ ಅವರಿಗೆ ಹೆಚ್ಚಿನ ಲೈಫ್ ಸಪೋರ್ಟ್ ಕೊಡುವುದನ್ನು ನಿಲ್ಲಿಸುತ್ತೇವೆ" ಅಂದರು. ಗಂಡ ಸಾಯಲು ಅನುಮತಿ ನೀಡುವ ಪೇಪರಿಗೆ ಸಹಿ ಹಾಕುವ ದಾರುಣ ಸಂದಿಗ್ಧ ಯಾವ ಹೆಣ್ಣಿಗೂ ಬರಬಾರದು. ಕಣ್ಣೀರ ಕೋಡಿ ಹರಿಸುತ್ತಾ ಆಕೆ ಸೈನ್ ಮಾಡಿದ್ದರು. ಬಂಧು ಬಾಂಧವರಿಂದ ದೂರಾದ ಅಮೆರಿಕಾದಲ್ಲಿ ಗೆಳೆಯರ ಬಳಗ ಆ ಸ್ಥಾನವನ್ನು ತುಂಬಿ ಎಲ್ಲ ಬಗೆಯ ನೆರವು, ಬೆಂಬಲ ನೀಡುತ್ತದೆ. ಆಕೆಗೆ ತನ್ನ ಮನೆಯ ಹಣ ಕಾಸಿನ ವ್ಯವಹಾರದ ಬಗ್ಗೆಯೂ ಹೆಚ್ಚು ತಿಳಿದಿರಲಿಲ್ಲ. ಎಲ್ಲ ಬಗೆಯ ಸಹಾಯ ಮಿತ್ರರೇ ಮಾಡಿದರು. ಈಗ ಮಗಳು ಡಾಕ್ಟರಾಗಿದ್ದಾಳೆ. ಮಗನೂ ಒಳ್ಳೆಯ ಹುದ್ದೆಯಲ್ಲಿದ್ದಾನೆ. ಇದು ಅದಲು ಬದಲಾಗಿದ್ದರೆ? ಹೆಂಡತಿಗೆ ಕ್ಯಾನ್ಸರ್ ಆಗಿ "ಯಾರಿಗೂ ಹೇಳಬೇಡಿ" ಅಂದಿದ್ದರೆ ಮನೆ, ಮಕ್ಕಳು, ಆಸ್ಪತ್ರೆಯ ಅಲೆದಾಟ ಎಲ್ಲವನ್ನೂ ತುಟಿ ಪಿಟಕ್ಕೆನ್ನದೆ, ಯಾರಿಗೂ ಹೇಳದೆ ಸಂಭಾಳಿಸುತ್ತಿದ್ದನಾ ಗಂಡ! ಅಂತ ಅನ್ನಿಸುತ್ತದೆ ಒಮ್ಮೊಮ್ಮೆ.

## ವೃತ್ತಿ ಜೀವನ

ಅಮೆರಿಕಾದಲ್ಲಿ ಹೆಂಗಸರಿಗೆ ಮತ ಚಲಾಯಿಸುವ ಹಕ್ಕು ದೊರೆತಿದ್ದು ಕೇವಲ ಒಂದು ಶತಮಾನದ ಹಿಂದೆ- 1920ರಲ್ಲಿ! ಅದೂ ಸುಮಾರು 75 ವರ್ಷಗಳ ನಿರಂತರ ಹೋರಾಟದ ನಂತರ! ಭಾರತದಲ್ಲಿ ಇಂದಿರಾಗಾಂಧಿ ಪ್ರಧಾನಿಯ ಪಟ್ಟ ಏರಿದ್ದೂ ಆಯಿತು, ಇಳಿದಿದ್ದೂ ಆಯಿತು. ಆದರೆ ಅಮೆರಿಕಾದಲ್ಲಿ ಇನ್ನೂ ಅಧ್ಯಕ್ಷ ಸ್ಥಾನವನ್ನು ಮಹಿಳೆ ಅಲಂಕರಿಸಿಲ್ಲ! ಅಮೆರಿಕಾದಲ್ಲಿ ಅದರದೇ ಆದ ಸ್ತ್ರೀ ಸಂಬಂಧಿ ತಾರತಮ್ಯ ಮನೋಭಾವ ಇದೆ! ಈಗ ಐವತ್ತು ವರುಷಗಳ ಕೆಳಗೆ ಮಹಿಳೆಯರು ನರ್ಸ್, ಟೀಚರ್, ಕ್ಲರ್ಕ್ ಮುಂತಾದ ಉದ್ಯೋಗಗಳನ್ನು ಮಾತ್ರ ಮಾಡುತ್ತಿದ್ದರು. ಉನ್ನತ ಶಿಕ್ಷಣ ಬೇಕಾದ ವೈದ್ಯಕೀಯ, ಇಂಜಿನಿಯರಿಂಗ್ ಮುಂತಾದವಕ್ಕೆ ಹೆಚ್ಚಿಗೆ ಹೆಂಗಸರು ಹೋಗುತ್ತಿರಲಿಲ್ಲ. ಅದೇ ಕಾಲದಲ್ಲಿ ಭಾರತದಿಂದ ಅನೇಕ ವೈದ್ಯೆಯರು, ಮಹಿಳಾ ಇಂಜಿನಿಯರ್ಸ್ ಅಮೆರಿಕಾಗೆ ಬಂದರು. ಆಗ ನಾನೊಮ್ಮೆ ಫೋನ್ ಡೈರೆಕ್ಟರಿ ತೆಗೆದು ನೋಡುತ್ತಿದ್ದಾಗ ಅದರಲ್ಲಿ ವೈದ್ಯೆಯರ ಹೆಸರುಗಳು ಹೆಚ್ಚು ಭಾರತೀಯರದ್ದೇ ಆಗಿದ್ದು ನೋಡಿ ಆಶ್ಚರ್ಯವಾಗಿತ್ತು! ಈಚೀಚೆಗೆ ಅಮೆರಿಕಾದಲ್ಲೂ ಸುಧಾರಣೆಯಾಗಿ ಅಮೆರಿಕನ್ ವೈದ್ಯೆಯರೂ ಹೆಚ್ಚು ಸಂಖ್ಯೆಯಲ್ಲಿ ಕಾಣಸಿಗುತ್ತಾರೆ. ಯಾವ ದೇಶದ ಮಹಿಳೆಯೇ ಆದರೂ ಆಕೆ ವೃತ್ತಿ ಜಗತ್ತಿನಲ್ಲಿ ತನ್ನನ್ನು ತಾನೇ ಕಳೆದುಕೊಳ್ಳುವ ಹಾಗಿಲ್ಲ- ಪುರುಷರಂತೆ. ಪೆಪ್ಸಿಕೊ ಸಿಇಒ ಆಗಿದ್ದ ಇಂದ್ರಾ ನೂಯಿ ಹೇಳಿದ ಈ ಕಥೆ ನನ್ನ ಮಾತಿನ ಸತ್ಯವನ್ನು ಬಿಂಬಿಸುತ್ತದೆ. ಆಕೆ ಸಿಇಒ ಆಗಿ ನೇಮಕಳಾದ ದಿನ ಸಂತೋಷದಿಂದ ಬೀಗುತ್ತಾ ಮನೆಗೆ ಬಂದರಂತೆ. ಆಗ ಅಲ್ಲಿ ಮನೆಯಲ್ಲಿದ್ದ ಅವರ ತಾಯಿ "ಏನಿದು? ಇಷ್ಟು ತಡವಾಗಿ ಮನೆಗೆ ಬರ್ತಾ ಇದ್ದೀ! ಇಲ್ಲಿ ಮಕ್ಕಳಿಗೆ ಹಾಲು ಮುಗಿದುಹೋಗಿದೆ! ಅಷ್ಟು ಜವಾಬ್ದಾರಿ ಬೇಡವಾ ನಿನಗೆ?" ಅಂತ ರೇಗಿದ್ದರಂತೆ! ಈಕೆಯ ಹೆಸರು ಇಂದ್ರಾ ಅಲ್ಲದೆ 'ಇಂದ್ರಜಿತ್' ಆಗಿದ್ದರೆ ಮಗನ ಮೇಲೆ ರೇಗುತ್ತಿದ್ದರಾ ಆ ತಾಯಿ?

ಸಮಾಜ ಮಕ್ಕಳ ಪೋಷಣೆಯ ಜವಾಬ್ದಾರಿ ಹೆಣ್ಣಿನದು ಅಂತ ನಿರ್ಧರಿಸಿದೆ. ಆ ಹೊಣೆ ಎಷ್ಟು ಸಂತೃಪ್ತಿಯನ್ನು ಕೊಡುತ್ತದೋ ಅಷ್ಟೇ ಸಂಕಷ್ಟವನ್ನೂ ಕೊಟ್ಟೀತು ಒಮ್ಮೊಮ್ಮೆ! ಮಕ್ಕಳ ಪಠ್ಯೇತರ ಚಟುವಟಿಕೆಗಳಿಗೆ ಅವರನ್ನು ಕರೆದುಕೊಂಡು ಹೋಗುವ ಜವಾಬ್ದಾರಿಯೂ ತಾಯಂದಿರದ್ದೇ! ಭಾರತೀಯ ನಾರಿಯರಿಗಂತೂ ಹೊರಗೆ ದಿನವಿಡೀ ದುಡಿದು ಮನೆಗೆ ಬಂದ ಮೇಲೆ ಸಾರು, ತೊವ್ವೆ, ಪಲ್ಯ ಮಾಡುವ ಹೊಣೆ ಇದ್ದೇ ಇರುತ್ತಿತ್ತು ಆ ಕಾಲದಲ್ಲಿ. ದಿನದ ಇಪ್ಪತ್ತನಾಲ್ಕು ಗಂಟೆ ಸಾಕಾಗುತ್ತಿರಲಿಲ್ಲ ಉದ್ಯೋಗಸ್ಥ ಭಾರತೀಯ ಹೆಣ್ಣಿಗೆ! ಅಮೆರಿಕನ್ ಮಹಿಳೆಯರಾದರೆ ಹೊರಗಿನಿಂದ ಹ್ಯಾಂಬರ್ಗರ್, ಹಾಟ್ ಡಾಗ್ ತರಿಸಿ 'ಡಿನ್ನರ್ ಮುಗಿಯಿತು' ಅಂತ ಕೈ ಕೊಡವಿಕೊಳ್ಳಬಹುದಿತ್ತು. ಇತ್ತೀಚೆಗೆ ಬೇಕಾದಷ್ಟು ಭಾರತೀಯ ರೆಸ್ಟುರಾಂಟುಗಳು ಬಂದಿವೆ, ನಮ್ಮೆಲ್ಲರ ಟೇಸ್ಟ್ ಬಡ್‌ಗಳಿಗೆ ಅಮೆರಿಕಾದ ಪಿಜ್ಜಾ, ನೂಡಲ್ಸ್ ಎಲ್ಲ ಅಭ್ಯಾಸವಾಗಿದೆ. ಹೊರಗಿಂದ ಊಟ ತರಿಸುವ ಪರಿಪಾಠ ಭಾರತೀಯ ಸಂಸಾರಗಳಲ್ಲೂ ಸ್ವಲ್ಪಮಟ್ಟಿಗೆ ಶುರುವಾಗಿದೆ.

### ಸೀರೆ-ಕುಂಕುಮ-ಮೂಗುತಿ

ಬ್ರಿಟಿಷರು ಶತಮಾನಗಳ ಕಾಲ ನಮ್ಮನ್ನು ಆಳಿದ್ದೂ ಆಯಿತು, ಬಿಟ್ಟುಹೋಗಿದ್ದೂ ಆಯಿತು. ಈ ಅವಧಿಯಲ್ಲಿ ಕ್ರಮೇಣವಾಗಿ ಪುರುಷರ ಉಡುಗೆತೊಡುಗೆಗಳು ಬದಲಾಯಿಸಿದವು. ಕಚ್ಚೆ ಪಂಚೆ, ಲುಂಗಿ ಮುಂತಾದವು ಹೋಗಿ ಪ್ಯಾಂಟ್, ಶರ್ಟ್ ಬಂದವು, ಜುಟ್ಟು ಮಾಯವಾಗಿ ಕ್ರಾಪ್ ಕಟ್ ಬಂದಿತು. ಆದರೆ ಯಾವ ರೀತಿಯಲ್ಲೂ ತನ್ನ ಉಡುಗೆಯನ್ನಾಗಲಿ, ಕೇಶಾಲಂಕಾರವನ್ನಾಗಲಿ ಬದಲಾಯಿಸಲಿಲ್ಲ ಸ್ತ್ರೀ ವರ್ಗ (ಇತ್ತೀಚೆಗೆ ಜಾಗತೀಕರಣದ ಪ್ರಭಾವದಿಂದ ಬದಲಾವಣೆಗಳು ಬಂದಿವೆ, ನಿಜ). ಅಮೆರಿಕಾಗೆ ಬಂದ ಮೇಲೂ ಹಲವು ವರ್ಷಗಳ ಕಾಲ ನಾವು ಸೀರೆಯನ್ನೇ ಉಡುತ್ತಿದ್ದೆವು. ಕುಂಕುಮ ಇಡುತ್ತಿದ್ದೆವು. ದಾರಿಯಲ್ಲಿ, ಅಂಗಡಿಗಳಲ್ಲಿ ಜನರು ನಮ್ಮನ್ನು "ಈ ಸೀರೆ ಎಷ್ಟು ಉದ್ದ ಇದೆ? ಹೇಗೆ ಉಡುತ್ತೀರಿ? ಹಣೆಗೆ ಕುಂಕುಮ ಇಡುವುದು ಏಕೆ?" ಅಂತ ಪ್ರಶ್ನಿಸುತ್ತಿದ್ದರು. ನಮ್ಮಲ್ಲಿ ಬಹುತೇಕ ಮಹಿಳೆಯರು ಕಾಲಕ್ರಮೇಣ ಪಾಶ್ಚಾತ್ಯ ಉಡುಪುಗಳನ್ನು ತೊಡಲು ಶುರು ಮಾಡಿದೆವು. ನನಗೆ ಹೀಗೆ ಇಲ್ಲಿಯವರಂತೆ ಡ್ರೆಸ್ ಮಾಡಿಕೊಂಡಾಗ ಎಲ್ಲರೊಳಗೆ ನಾನೂ ಒಂದಾಗಿ ಕಾಣುತ್ತೇನೆ ಅಂತ ಹಾಯೆನಿಸಿತು. ಪರಕೀಯ ಪ್ರಜ್ಞೆ ಕಡಿಮೆಯಾಯಿತು. ಆದರೆ ಎಷ್ಟೋ ಜನ ಮಹಿಳೆಯರು ಕೊನೆಯವರೆಗೂ ಸೀರೆಯುಟ್ಟವರಿದ್ದಾರೆ. ಶಿಕಾಗೊದಲ್ಲಿ ನನಗೆ ಪರಿಚಯವಿದ್ದ ಇಂಥ ಮಹಿಳೆಯರು- ಲಕ್ಷ್ಮಿ ಐತಾಳ, ಶಾರದಾ ಬೈಯಣ್ಣ, ಜಯ ಸಿದ್ದಲಿಂಗಯ್ಯ ಹೀಗೇ. ಇಂಥವರು ಅಮೆರಿಕಾದ ಎಲ್ಲ ನಗರಗಳಲ್ಲೂ ಇದ್ದಾರೆ. ಅನೇಕ ಮಹಿಳೆಯರು ಹೊರಗೆ ಕೆಲಸದ ಅನ್ವೇಷಣೆಯಲ್ಲಿದ್ದಾಗ ಪಾಶ್ಚಾತ್ಯ ಉಡುಪು ಧರಿಸಬೇಕೆಂಬ ನಿಯಮವಿದ್ದರೆ ಆ ಕೆಲಸ ಬೇಡವೇ ಬೇಡ ಎಂದು ಬಿಟ್ಟದ್ದಿದೆ. ನನಗೆ ಗೊತ್ತಿದ್ದ ಶೈಲಜಾ ಎಂಬಾಕೆ ಇದಕ್ಕಾಗಿಯೇ ಇಂಡಿಯನ್ ಕಾನ್ಸುಲೇಟ್‌ನಲ್ಲಿ ಕೆಲಸ ಹಿಡಿದರು- ಅಲ್ಲಿ ಸೀರೆಗೆ ಸ್ವಾಗತವಿದೆ ಎಂಬ ಕಾರಣಕ್ಕೆ. ಆ ಕಾಲಕ್ಕೆ ಬಿಸಿ ರಕ್ತದ ನನಗೆ ಇವರೆಲ್ಲ ಯಾಕೆ ಹೀಗೆ? "ಅಪ್ಪ ನಟ್ಟ ಆಲದ ಮರ..." ಅನ್ನೋ ಥರ ಆಡ್ತಾರೆ ಅನ್ನಿಸಿತ್ತು. ಈಗ ಅನ್ನಿಸುತ್ತಿದೆ "ಹಾಗೆ ಮಾಡೋದಕ್ಕೆ ಎಷ್ಟು ದೃಢ ನಿರ್ಧಾರ, ಛಲ ಬೇಕಿತ್ತಲ್ವಾ? ಹ್ಯಾಟ್ಸ್ ಆಫ್ ಅವರಿಗೆಲ್ಲ" ಅಂತ. ನಮ್ಮಲ್ಲಿ ಬಹಳಷ್ಟು ಮಹಿಳೆಯರು ಕನ್ನಡ ಕೂಟದ ಸಮಾರಂಭಗಳು, ಪಾರ್ಟಿಗಳು, ದೇವಸ್ಥಾನ ಮುಂತಾದ ಕಡೆಗೆ ಸಂಭ್ರಮದಿಂದ ಸೀರೆಯುಟ್ಟು ಹೋಗಿ ಗೆಳತಿಯರೊಡನೆ ನಲಿದಾಡುತ್ತೀವಿ, ಭಾರತೀಯ ಸಂಸ್ಕೃತಿಯಲ್ಲಿ ಮಿಂದು ಸುಖಿಸುತ್ತೀವಿ. ಆದರೆ ದಿನ ನಿತ್ಯದ ವ್ಯವಹಾರಗಳಿಗೆ ಇಲ್ಲಿಯವರಂತೆಯೇ ಡ್ರೆಸ್ ಮಾಡಿಕೊಳ್ತೀವಿ.

### ಕನ್ನಡ ಕೂಟ

ಇಸವಿ 1972. ನಮಗೆಲ್ಲ ಎಲ್ಲಿಂದಲೋ ಒಂದು ಸುದ್ದಿ ಕಿವಿಗೆ ಬಿದ್ದಿತ್ತು- ಶಿಕಾಗೊದಲ್ಲಿ ಒಂದು ಕನ್ನಡ ಕೂಟ ಶುರು ಮಾಡ್ತಾರಂತೆ ಅಂತ. ಕನ್ನಡಿಗರು ಇರುವುದೇ ಮೂರು ಮತ್ತೊಂದು ಮಂದಿ. ಅಷ್ಟು ಜನರಿಗೆ ಎಂಥ ಕೂಟ! ಅನ್ನಿಸಿತ್ತು ನನಗೆ. ಆದರೂ ಇತರ

ಕನ್ನಡಿಗರನ್ನು ಭೇಟಿಯಾಗಬಹುದೆಂಬ ಆಸೆಯೇ ನಮ್ಮನ್ನು ಅಲ್ಲಿಗೆ ಕೊಂಡೊಯ್ದಿತ್ತು. ಶಿಕಾಗೊ ವಿಶ್ವವಿದ್ಯಾಲಯದಲ್ಲಿ ಒಂದು ಸಭಾಂಗಣದಲ್ಲಿ ಈ ಸಮಾರಂಭ. ಅಲ್ಲಿ ಸುಮಾರು ಮೂವತ್ತು-ನಲವತ್ತು ಕನ್ನಡಿಗರು ಒಟ್ಟಾಗಿದ್ದರು! ಎಲ್ಲ ಹೆಂಗಸರೂ ಸೀರೆಯುಟ್ಟು ಒಂದು ಜಡೆ ಹಾಕಿದ್ದರು. ಸಲ್ವಾರ್ ಕಮೀಜ್ ದಕ್ಷಿಣ ಭಾರತಕ್ಕೆ ಕಾಲಿಟ್ಟಿರಲಿಲ್ಲ, ಹೊಸ ಹೊಸ ಕೇಶ ವಿನ್ಯಾಸಗಳು ಶುರುವಾಗಿರಲಿಲ್ಲ. ಬಹಳಷ್ಟು ಜನ ಎಲಿಜಬಲ್ ಬ್ಯಾಚಲರ್ಸ್ ಇದ್ದರು. ಯಾರಾದರೂ ಕನ್ಯಾಪಿತೃ ಬಂದಿದ್ದರೆ ಎಷ್ಟು ಖುಷಿಪಡುತ್ತಿದ್ದರೋ! ಎಲ್ಲರೂ ಮೂವತ್ತು- ಮೂವತ್ತೈದು ವರ್ಷ ಪ್ರಾಯದ ಒಳಗಿನವರು.

ಹೀಗೆ ಅನೇಕ ನಗರಗಳಲ್ಲಿ ಆ ಕಾಲದಲ್ಲಿ ಮೊಳಕೆಯೊಡೆದ ಕನ್ನಡ ಕೂಟಗಳು ಇಂದು ಎಷ್ಟು ದೊಡ್ಡ ಮಹಾವೃಕ್ಷಗಳಾಗಿ ಬೆಳೆದು ನಿಂತಿವೆ! ಇಲ್ಲಿ ಒಂದು ಮಾತು ಹೇಳಬೇಕು. ಅಮೆರಿಕಾದಲ್ಲಿ 'ಕನ್ನಡ ಕೂಟ' ಎಂಬ ಕಾರು ನಡೆಯೋದೇ ಸ್ತ್ರೀಶಕ್ತಿ ಎಂಬ ಪೆಟ್ರೋಲಿನಿಂದ. ಹಿಂದಿನಿಂದ ರಥವನ್ನು ತಳ್ಳಿ ಮುನ್ನಡೆಸುತ್ತಿರುವವರು ಹೆಂಗಸರು. ನಾವು ಯಾವ ಕಾರಣಕ್ಕಾಗಿ ಕನ್ನಡ ಕೂಟದ ಸಮಾರಂಭಗಳಿಗೆ ಹೋಗುತ್ತೀವೋ- ಕನ್ನಡತನದ ಅನುಭವಕ್ಕಾಗಿ, ಅನುಬಂಧಕ್ಕಾಗಿ, ಸಾಂಸ್ಕೃತಿಕ ಕಾರ್ಯಕ್ರಮಗಳಿಗಾಗಿ- ಅದು ಉಂಟಾಗುವುದು ಸೀರೆಯುಟ್ಟ ಹೆಂಗಸರ ಸಂಭ್ರಮದ ನಗು, ಸಡಗರದ ಓಡಾಟದಿಂದ, ಬಾಗಿಲ ಬಳಿ ಅರಿಸಿನ, ಕುಂಕುಮ ಕೈಯಲ್ಲಿ ಹಿಡಿದು ಲಂಗ ದಾವಣಿಯುಟ್ಟು ನಗುತ್ತಾ ನಿಂತ ಹದಿಹರಯದ ಹೆಣ್ಣು ಮಕ್ಕಳಿಂದ, ವೇದಿಕೆಯ ಮೇಲೆ ನಡೆಯುವ ಸಾಂಸ್ಕೃತಿಕ ಕಾರ್ಯಕ್ರಮಗಳಿಂದ. ಈ ಕಾರ್ಯಕ್ರಮಗಳ ತಯಾರಿಗಾಗಿ ಅವರಿವರ ಮನೆಗೆ ಮಕ್ಕಳನ್ನು ಕರೆದುಕೊಂಡು ಹೋಗಿ, ಸಂಗೀತ, ನೃತ್ಯ ಪ್ರಾಕ್ಟೀಸ್ ಮಾಡಿಸಿ, ತಮ್ಮ ಮನೆಯಲ್ಲಿ ರಿಹರ್ಸಲ್ ಇಟ್ಟುಕೊಂಡು ಬಂದವರಿಗೆಲ್ಲ ಕಾಫಿ-ತಿಂಡಿ ಸರಬರಾಜು ಮಾಡಿ...ಈ ಎಲ್ಲ ಕೆಲಸಗಳು ನಡೆಯುವುದೂ ಹೆಂಗಸರಿಂದ. ಗಂಡಸರ ಸಹಯೋಗವೂ ಇರುತ್ತದೆ. ಆದರೆ ಹೆಚ್ಚಿನ ಹೊಣೆಗಾರಿಕೆ ಹೆಣ್ಣಿನ ಮೇಲೆ ಇರುತ್ತದೆ. ಕನ್ನಡ ಕೂಟದ ಬೆನ್ನೆಲುಬೇ ಹೆಂಗಸರು. ಸಂಸ್ಕೃತಿಯನ್ನು ದೇಶದಿಂದ ದೇಶಕ್ಕೆ, ಕಾಲದಿಂದ ಕಾಲಕ್ಕೆ ದಾಟಿಸುವವಳು ಹೆಣ್ಣು. ಆದರೆ ಅವಳು ಹೆಸರಿಗಾಗಿ ಹಂಬಲಿಸುವವಳಲ್ಲ. ಹಿನ್ನೆಲೆಯಲ್ಲಿದ್ದುಕೊಂಡೇ ಕೆಲಸ ಮಾಡುವವಳು. ಮುಂದಾಳಾಗಿ ಸಾರಥ್ಯ ವಹಿಸುವವರು ಖಂಡಿತ ಬೇಕು. ಒಪ್ಪಿಕೊಳ್ಳೋಣ. (ಬೆರಳೆಣಿಕೆಯಷ್ಟು ಹೆಂಗಸರು ಮುಂದಾಳತ್ವ ವಹಿಸಿ ಅಧ್ಯಕ್ಷರಾಗಿದ್ದಾರೆ.) ಆದರೆ ಹಿಂದಿನಿಂದ ರಥ ತಳ್ಳುತ್ತಿರುವ ಮಹಿಳೆಯರನ್ನು ಮರೆಯಬಾರದು. ಕನ್ನಡ ಕೂಟಗಳ ಶೈಶವದಲ್ಲಿ ಎಲ್ಲ ಸಮಾರಂಭಗಳಿಗೆ ದೊಡ್ಡ ದೊಡ್ಡ ಪಾತ್ರೆಗಳಲ್ಲಿ ಅಡಿಗೆ ಮಾಡಿ ತರುತ್ತಿದ್ದವರೂ ಹೆಂಗಸರೇ. ಇಂಗು ತೆಂಗಿನ ಪರಿಮಳ ಸೂಸುವ ಭಾರಿ ಗಾತ್ರದ ಪಾತ್ರೆಗಳನ್ನು ಹೊತ್ತು, ಸೀರೆಯ ನಿರಿಗೆಗಳನ್ನು ಚಿಮ್ಮಿಸುತ್ತಾ, ನಸುನಗುತ್ತಾ ಬರುತ್ತಿದ್ದ ಗೆಳತಿಯರು ನೆನಪಾಗುತ್ತಾರೆ.

ವೈದೇಹಿಯವರ ಒಂದು ಕವನ ಹೀಗಿದೆ-

## ತಿಳಿದವರೇ...ಹೇಳಿ

ಕಾವ್ಯದ ಬಗ್ಗೆ ತಿಳಿದವರೇ ಹೇಳಿ
ನನಗೆ ಕಾವ್ಯ ಗೊತ್ತಿಲ್ಲ
ತಿಳಿ ಸಾರು ಗೊತ್ತು
ತಿಳಿಸಾರು ಎಂದರೆ ಏನೆಂದುಕೊಂಡಿರಿ?
ಅದಕ್ಕೂ ಬೇಕು ಒಳಗೊಂದು
ಜಲತತ್ವ-ಗಂಧ ತತ್ವ
ಕುದಿದು ಹದಗೊಂಡ ಸಾರ ತತ್ವ
ಇತ್ತು ಸಾರಿನ ಪಾತ್ರೆ ಮೂಲೆಯಲ್ಲಿ
ನಂಗದೆಯೂ ನಂಗಿದಂತಿದ್ದ
ಬೂದಿ ಮುಚ್ಚಿದ ಕೆಂಡದೊಲೆಯ ಮೇಲೆ
ಕಾಯುತ್ತಿದ್ದಂತೆ. ಕಾದರೇನು?

ಮಾಂಸದಡುಗೆಯ ಕಿಡಿಮಿಂಚು ವಗ್ಗರಣೆಯ
ಬಡಿಸುವ ಝಣ್ ಝಣ್ ನಡಿಗೆಯವರ
ಲಘುನಗೆ ಬಗೆ ವಿನಿಮಯ ಒಡ್ಡೋಲಗದಲ್ಲಿ
ತೆಳ್ಳನೆಯ ತಿಳಿ ಸಾರು ಹಾಗೆಯೇ ಇತ್ತು
ಬೆಳಗಿಂದ

ನಂಗದೆಯೂ ನಂಗಿದಂತಿದ್ದ ಕೆಂಡದೊಲೆಯ ಮೇಲೆ
ಕುದಿಕುದಿದು ಬತ್ತಿ
ರಾತ್ರಿಯಾದರೂ ಹಳಸದೆ..

ಕಾವ್ಯದ ಬಗ್ಗೆ ದೊಡ್ಡಕೆ ತಿಳಿದವರೆ
ಹೇಳಿ, ಗೊತ್ತೆ ತಿಳಿ ಸಾರು ನಿಮಗೆ?
ಕ್ಷಮಿಸಿ, ಗೊತ್ತಿಲ್ಲ ಕಾವ್ಯ ನನಗೆ

ಲಗ್ಜುರಿ ಹೋಟಲುಗಳಲ್ಲಿ ಸಮವಸ್ತ್ರ ಧರಿಸಿದ ಸರ್ವರುಗಳು ಅಲಂಕೃತ ಹರಿವಾಣಗಳಲ್ಲಿ ತಂದು ಬಡಿಸುವ ತಂದೂರಿ ಚಿಕನ್ನಿನ ಆಡಂಬರವಿಲ್ಲ ಸಾರಿಗೆ. ಅದು ದಿನ ನಿತ್ಯದ ಅಡಿಗೆ. ಕೆಂಡದೊಲೆಯ ಮೇಲೆ ಕುದ್ದು, ಕುದ್ದು, ರಾತ್ರಿಯಾದರೂ ಹಳಸದೆ ಉಣ್ಣುವವರಿಗೆಂದೇ ಕಾಯುತ್ತಿರುವ ತಿಳಿ ಸಾರು ಹಿನ್ನೆಲೆಯಲ್ಲಿದ್ದುಕೊಂಡೇ ಕೆಲಸ ಕಾರ್ಯಗಳನ್ನು ನಿಭಾಯಿಸಿ ಆಡಂಬರವನ್ನು ಬಯಸದ, ಅವಜ್ಞೆಗೆ ಒಳಗಾದ ಹೆಣ್ಣನ್ನು ಎಷ್ಟು ಚೆನ್ನಾಗಿ ಬಿಂಬಿಸುತ್ತದೆ!

ಇದು ಒಂದು ಹೆಣ್ಣಿನ ಕಥೆಯಲ್ಲ, ಕನ್ನಡ ಕೂಟದ ಕಥೆ. ಒಂದು ಕನ್ನಡ ಕೂಟದ ಕಥೆಯಲ್ಲ, ಅಮೆರಿಕದಾದ್ಯಂತ ಎಪ್ಪತ್ತರ ದಶಕದಲ್ಲಿ ಹುಟ್ಟಿಕೊಂಡ ಎಲ್ಲ ಕನ್ನಡಕೂಟಗಳ ಕಥೆ. ಕೇವಲ ಕನ್ನಡ ಕೂಟದ ಕಥೆಯೂ ಅಲ್ಲ, ಆ ಕಾಲದಲ್ಲಿ ಅಮೆರಿಕಾದಲ್ಲಿ ಹುಟ್ಟಿದ ಎಲ್ಲ ಭಾರತೀಯ ಸಂಘ ಸಂಸ್ಥೆಗಳ ಕಥೆ. ಅಂದು ನಡೆಯುತ್ತಿದ್ದ "ವಲಸೆ" ಎಂಬ ಪ್ರಕ್ರಿಯೆಯನ್ನು ಅರ್ಥ ಮಾಡಿಸುವ, ಹೊಸ ದೇಶದಲ್ಲಿ ಭಾರತೀಯತೆಯ ಛಾಪು ಮೂಡಿಸುವುದರಲ್ಲಿ ಹೆಣ್ಣು ವಹಿಸಿದ ಮಹತ್ತರವಾದ ಪಾತ್ರವನ್ನು ಸಾಬೀತುಗೊಳಿಸುವ ಕಥೆ.

**ಪಾರ್ಟಿಗಳು**

ಕನ್ನಡ ಕೂಟ ಅಂದರೆ ಒಂಥರಾ 'ಅಮ್ಮನ ಸೀರೆ' ಇದ್ದಂತೆ. ಒಂದು ಮಗು ಅಮ್ಮನಿಲ್ಲದಾಗ ಅವಳ ಸೀರೆಯನ್ನೇ ಎದೆಗಪ್ಪಿಕೊಂಡು ಸಾಂತ್ವನ ಕಂಡುಕೊಂಡ ಹಾಗೆ ತಾಯ್ನಾಡಿನಿಂದ ದೂರಾದ ನಾವು ಈ ಕನ್ನಡ ಕೂಟಗಳಲ್ಲಿ ಕನ್ನಡತನದ ಹಸಿವನ್ನು ನೀಗಿಸಿಕೊಳ್ಳುತ್ತೇವೆ. ಕನ್ನಡ ಸಂಸ್ಕೃತಿಯನ್ನು ಮನದಣಿಯೆ ಅನುಭವಿಸಿ ಆನಂದಿಸುತ್ತೇವೆ. ಅಲ್ಲದೆ ಮನೆಗಳಲ್ಲಿ ನಡೆಯುವ ಪಾರ್ಟಿಗಳೂ ಈ 'ಅಮ್ಮನ ಸೀರೆ'ಯ ಕೆಲಸವನ್ನು ಮಾಡುತ್ತವೆ. ಹೆಚ್ಚಾಗಿ ಅಮೆರಿಕನ್ನಡಿಗರು ಮನೆಗಳಲ್ಲಿ ಇಟ್ಟುಕೊಳ್ಳುವ ಈ ಸಣ್ಣ ಸಣ್ಣ ಪಾರ್ಟಿಗಳಲ್ಲಿ ಪಾಟ್‌ಲಕ್ ಪದ್ಧತಿ ರೂಢಿಯಲ್ಲಿದೆ– ಅಂದರೆ ಅತಿಥಿಗಳೂ ಒಂದೊಂದು ಐಟಮ್ ಅಡಿಗೆ ಮಾಡಿ ತರುವುದು. ಆಗ ಪಾರ್ಟಿ ಕೊಡುತ್ತಿರುವ ಮನೆಯ ಗೃಹಿಣಿಗೆ ಸ್ವಲ್ಪ ಕೆಲಸ ಕಡಿಮೆಯಾಗಿ ಆಕೆಯೂ ಬಿಡುವಾಗಿ ಎಂಜಾಯ್ ಮಾಡಲು ಸಾಧ್ಯವಾಗುತ್ತದೆ. ಅಡಿಗೆ ಮಾಡುವುದಕ್ಕೆ, ಪಾತ್ರೆ ತೊಳೆಯುವುದಕ್ಕೆ ಹೊರಗಿಂದ ಜನ ಸಿಕ್ಕದ ಈ ದೇಶದಲ್ಲಿ ಪಾಟ್‌ಲಕ್ ರಿವಾಜು ಒಳ್ಳೆಯದೇ. ಇಂತಹ ಪಾರ್ಟಿಗಳಲ್ಲಿ ಹೆಂಗಸರು ಹೆಚ್ಚಾಗಿ ಸೀರೆ ಅಥವಾ ಇತರ ಭಾರತೀಯ ಉಡುಗೆಯಲ್ಲೇ ಬರುತ್ತಾರೆ. ಇಲ್ಲಿಯೂ ಸೀರೆಯುಟ್ಟು ಘಮಘಮ ಪರಿಮಳ ಸೂಸುವ ಪಾತ್ರೆಗಳನ್ನು ಹೊತ್ತು ನಸುನಗುತ್ತಾ ಬರುವ ಹೆಂಗಳೆಯರು ಆತ್ಮೀಯವಾದ ಕನ್ನಡ ವಾತಾವರಣವನ್ನು ಸೃಷ್ಟಿಸುತ್ತಾರೆ. ಈ ಪಾರ್ಟಿಗಳಲ್ಲಿ ಗಂಡಸರದ್ದೇ ಒಂದು ಗುಂಪು ಇರುತ್ತದೆ. ಅವರೆಲ್ಲ ಒಂದು ಕಡೆ ಕುಳಿತು ಅರ್ಧಂಬರ್ಧ ಇಂಗ್ಲಿಷ್–ಕನ್ನಡದಲ್ಲಿ ಸ್ಟಾಕ್ ಮಾರ್ಕೆಟ್, ಪಾಲಿಟಿಕ್ಸ್ ಮುಂತಾದವುಗಳ ಬಗ್ಗೆ ಮಾತಾಡ್ತಾ ಇರ್ತಾರೆ. ಅದರೆ ಇಲ್ಲಿ ಬನ್ನಿ ಹೆಂಗಸರ ಗುಂಪಿನ ಕಡೆಗೆ. ಇಲ್ಲಿ ಮಕ್ಕಳ ತುಂಟತನದ ಬಗ್ಗೆ, ಸೀರೆ ಒಡವೆಗಳ ಬಗ್ಗೆ, ಅಡಿಗೆ ರೆಸಿಪಿ ಬಗ್ಗೆ ಹೆಚ್ಚಾಗಿ ಕನ್ನಡದಲ್ಲೇ ಮಾತು ಕಥೆ ನಡೆಯುತ್ತಿರುತ್ತದೆ. ಹೆಣ್ಣು ಎಲ್ಲಿ ಹೋದರೂ ತನ್ನ ಹೆಣ್ತನವನ್ನು ಬಿಟ್ಟುಕೊಡುವುದಿಲ್ಲ. ಕನ್ನಡ ಕೂಟಗಳಲ್ಲೂ, ಮನೆಯ ಪಾರ್ಟಿಗಳಲ್ಲೂ ಸೀರೆಯದ್ದೇ ಕಾರುಭಾರು! ದೇವಸ್ಥಾನಗಳಲ್ಲೂ ಅದೇ ಕಥೆ! ಅಲ್ಲಿ ದೇವರಿಗೆ ಹೂ ಮಾಲೆ ಕಟ್ಟುವುದರಿಂದ ಹಿಡಿದು ಅಡಿಗೆ ಮನೆಯ ಮೇಲ್ವಿಚಾರಣೆಯವರೆಗೂ ಹೆಣ್ಣಿನ ಕೈವಾಡ. ಎಲ್ಲೆಲ್ಲೂ 'ಅಮ್ಮನ ಸೀರೆ'ಯಾಗಿ ಹೆಣ್ತನದ ಛಾಯೆ!

### ಅಮೆರಿಕದಲ್ಲೂ 'ಅಭಿಮಾನ್' ಸಿನೆಮಾ

ಗಂಡನಿಗೆ ಜನಪ್ರಿಯತೆ, ಮನ್ನಣೆ, ಗೌರವ ಸಿಕ್ಕಿದಾಗ ಹೆಂಡತಿ ಬೀಗುತ್ತಾಳೆ. ಆದರೆ ಹೆಂಡತಿಗೆ ಮನ್ನಣೆ, ಸನ್ಮಾನ ದೊರಕಿದಾಗ? ನಿಮಗೆ 'ಅಭಿಮಾನ್' ಚಿತ್ರ ನೆನಪಿರಹುದು. ಪ್ರಖ್ಯಾತ ಸಂಗೀತಗಾರ ಸುಬೀರ್ ಕುಮಾರ್ (ಅಮಿತಾಭ್ ಬಚ್ಚನ್) ಹಳ್ಳಿಯ ಮುಗ್ಧ ಹೆಣ್ಣನ್ನು ಮದುವೆಯಾಗುತ್ತಾನೆ. ಅವಳೂ ಉತ್ತಮ ಸಂಗೀತಗಾರ್ತಿ. ಸಂಗೀತದಲ್ಲಿ ಅವಳ ಜನಪ್ರಿಯತೆ, ಹೆಸರು ತನ್ನದನ್ನೂ ಮೀರಿ ಬೆಳೆದಾಗ ಅವನಲ್ಲಿ ಅಸೂಯೆ ಹೆಡೆಯಾಡುತ್ತದೆ. ಗಂಡನೇ ಸರ್ವಸ್ವ ಎಂದು ತಿಳಿದಿದ್ದ ಆಕೆ ಹಾಡುವುದನ್ನೇ ಬಿಟ್ಟುಬಿಡುವುದಕ್ಕೂ ಸಿದ್ಧಳಾಗಿರುತ್ತಾಳೆ. ಗಂಡ-ಹೆಂಡತಿ ಅನಿವಾರ್ಯವಾಗಿ ದೂರಾಗುತ್ತಾರೆ... ಹೀಗೆ ಹೋಗುತ್ತದೆ ಕಥೆ. ಇದು ಕೇವಲ ಚಿತ್ರಕಥೆಯಲ್ಲ. ಎಲ್ಲಿ ಹೆಣ್ಣಿಗೆ ಯಶಸ್ಸು, ಜನಪ್ರಿಯತೆ ಸಿಕ್ಕುತ್ತದೋ ಅಲ್ಲೆಲ್ಲ ಇದನ್ನು ಕಾಣಬಹುದು. ನನ್ನ ಗೆಳತಿಯೊಬ್ಬಳು ವಿವಿಧ ಕೆಲಸ, ಕಾರ್ಯಗಳಲ್ಲಿ ಪಾಲ್ಗೊಂಡು ಬಹಳ ವರ್ಚಸ್ಸನ್ನು ಹೊಂದಿದ್ದಳು. ಕನ್ನಡಕೂಟದ ಕಾರ್ಯಕಾರಿ ಸಮಿತಿಯಲ್ಲೂ ಇದ್ದಳು. ಒಮ್ಮೆ ಅವರ ಮನೆಯಲ್ಲಿ ಸಾಹಿತಿಯೊಬ್ಬರ ಉಪನ್ಯಾಸವನ್ನು ಏರ್ಪಡಿಸಲಾಗಿತ್ತು. ಅವಳ ಒತ್ತಾಯದ ಮೇರೆಗೆ ಬೇರೆ ಸಭಾಂಗಣ ಗೊತ್ತುಮಾಡದೆ ಅವರ ಮನೆಯಲ್ಲೇ ಇಟ್ಟುಕೊಂಡಿದ್ದು. ಉಪನ್ಯಾಸ ಮುಗಿದ ಮೇಲೆ ಸಂಭಾವನೆ ನೀಡಲು ಕವರ್ ಒಂದನ್ನು ಫಲ, ಪುಷ್ಪಗಳಿರುವ ಹರಿವಾಣದಲ್ಲಿಟ್ಟು "ಅವರಿಗೆ ಕೊಡು" ಎಂದೆ. ಇದ್ದಕ್ಕಿದ್ದಂತೆ ಅವಳ ಮುಖದಲ್ಲಿ ಆತಂಕ, ಚಿಂತೆಯ ಗೆರೆಗಳು ಕಾಣಿಸಿಕೊಂಡವು. "ಬೇಡ, ನಳಿನಿ. ಮನೆಯವರೇ ಕೊಡಲಿ" ಎಂದಳು. ಆತ ಅಂಥ ಸಕ್ರಿಯ ಸದಸ್ಯರಾಗಿರಲಿಲ್ಲ ನಮ್ಮ ಕನ್ನಡ ಕೂಟದಲ್ಲಿ. ಅಲ್ಲದೆ ತನ್ನ ಮನೆಯಲ್ಲೇ ಉಪನ್ಯಾಸ ಇಟ್ಟುಕೊಳ್ಳುವಂತೆ ಒತ್ತಾಯಿಸಿದ್ದೂ ಆಕೆಯೇ. ಅದಕ್ಕಾಗಿ ಮನೆಯನ್ನು ಸಜ್ಜುಗೊಳಿಸಿದ್ದೂ ಆಕೆಯೇ. ತಿಂಡಿ ತೀರ್ಥದ ವ್ಯವಸ್ಥೆ ಮಾಡಿದ್ದೂ ಅವಳೇ! ಆದರೂ... ಈ ಗಂಡು-ಹೆಣ್ಣಿನ ಸಂಬಂಧದ ಬ್ಯಾಲೆನ್ಸ್ ಎಷ್ಟು ನಾಜೂಕಿನದು! ಸ್ವಲ್ಪವೂ 'ಗಂಡ'ನ ಪ್ರತಿಷ್ಠೆಗೆ ಧಕ್ಕೆ ಬರಬಾರದು! ಈ ಬಗ್ಗೆ ಅವರ ಮನೆಯಲ್ಲಿ ಮುಂಚೆಯೂ ಮಾತಿನ ಚಕಮಕಿ ನಡೆದಿತ್ತು ಎಂಬ ಭಾವನೆ ಬಂದಿತ್ತು ನನಗೆ ಆಕೆಯ ಪ್ರತಿಕ್ರಿಯೆಯನ್ನು ನೋಡಿದಾಗ. ಇದು ಒಂದು ಮನೆಯ ಕಥೆಯಲ್ಲ. ಅಥವಾ ಕೇವಲ ಭಾರತೀಯ ಹೆಣ್ಣಿನ ಸಮಸ್ಯೆಯೂ ಅಲ್ಲ. ಮನೆಮನೆಯಲ್ಲಿ ಜೋಪಾನವಾಗಿ ಗಂಡನ 'ಇಗೊ' ಸಂಭಾಳಿಸುತ್ತಿದ್ದಾರೆ ಹೆಂಗಳೆಯರು ಇಂದಿಗೂ.

### ಅಮೆರಿಕೆಯಲ್ಲಿ ತಾಯ್ತನ

ಹೆಣ್ಣಿಗೆ ತವರಿನ ಹಂಬಲ ತೀವ್ರವಾಗಿ ಕಾಡುವುದು ಯಾವಾಗ?- ಗರ್ಭಿಣಿಯಾದಾಗ. ಅಮ್ಮನ ಕೈಯಡಿಗೆ ನೆನಪಾಗುತ್ತದೆ, ಅಮ್ಮನ ವಾತ್ಸಲ್ಯ ನೆನೆದು ಕಣ್ಣು ತುಂಬುತ್ತದೆ. ಈಗ ಅಂಥ ಸಮಯದಲ್ಲಿ ಮಗಳನ್ನು ನೋಡಿಕೊಳ್ಳಲು ಭಾರತದಿಂದ ತಾಯಿ ಬರುತ್ತಾಳೆ. ಅಮೆರಿಕಾ ಅಂದರೆ ನೆರೆಮನೆ ಎಂಬ ಭಾವನೆ ಎಲ್ಲರಿಗೂ. ಆದರೆ ನಲವತ್ತು ವರ್ಷಗಳ

ಹಿಂದೆ ಹೀಗಿರಲಿಲ್ಲ. ಇಂಗ್ಲಿಷ್ ಬಾರದ ತಾವು ಅಮೆರಿಕಾಗೆ ಹೋಗಿ ಸಂಭಾಳಿಸುವುದಾದರೂ ಹೇಗೆ? ಎಂಬ ಭಯ, ಆತಂಕ ಎಲ್ಲರಿಗೂ. ನಮ್ಮ ತಲೆಮಾರಿನಲ್ಲಿ ಬಹಳಷ್ಟು ಹೆಂಗಸರು ತಂದೆ ತಾಯಿಯರ ಆಸರೆ, ನೆರವು ಇಲ್ಲದೆ ಮಕ್ಕಳನ್ನು ಹೊತ್ತು, ಹೆತ್ತವರು. ಆದರೆ ಅಂಥ ಸನ್ನಿವೇಶಗಳಲ್ಲೂ ತಾಯ್ತನದ ವಾತ್ಸಲ್ಯ ಅವರ ಮೇಲೆ ನೆರಳು ಹಾಸಿದೆ. ಪುರೋಹಿತರು, ದೇವಸ್ಥಾನ ಒಂದೂ ಅಮೆರಿಕಾದಲ್ಲಿ ಇಲ್ಲದಿದ್ದ ಆ ಕಾಲದಲ್ಲಿ ಸೀಮಂತ, ಆರತಿ ಮುಂತಾದವು ಇಲ್ಲದಿದ್ದರೂ ಇನ್ನೊಂದು ಹೆಣ್ಣು ಜೀವ "ಬೇಬಿ ಶವರ್" ಅಂತ ಒಂದು ಕಾರ್ಯಕ್ರಮ ಮನೆಯಲ್ಲಿ ಇಟ್ಟುಕೊಂಡು ಹತ್ತಾರು ಜನರನ್ನು ಕರೆದು ಉಡುಗೊರೆಗಳನ್ನು ಕೊಟ್ಟು ತಾಯಿ, ಅತ್ತೆ, ಚಿಕ್ಕಮ್ಮ ಮುಂತಾದ ಹಿರಿಯ ಮುತ್ತೈದೆಯರ ಸ್ಥಾನವನ್ನು ತುಂಬಿದ್ದುಂಟು. ಮಗು ಹುಟ್ಟಿದ ಮೇಲೆ ದೋಸೆ ಹಿಟ್ಟು, ಚಟ್ನಿ, ಪಲ್ಯ, ಸಾರು ಮುಂತಾದವನ್ನು ಮನೆಗೆ ತಂದುಕೊಟ್ಟು ಪ್ರೀತಿಯಿಂದ ವಿಚಾರಿಸಿಕೊಂಡದ್ದುಂಟು. ನನಗೂ ಹಾಗೇ ಲಕ್ಷ್ಮಿ ಐತಾಳರು ಮನೆಗೆ ಬಂದು ವಿಚಾರಿಸಿಕೊಂಡಿದ್ದು ನೆನಪಾಗುತ್ತಿದೆ. ಜೀವನದ ಒಂದು ಭಾವೋತ್ಕಂಠತೆಯ ಸಮಯದಲ್ಲಿ ಹೆಣ್ಣಿನ ಭಾವಲೋಕದ ನಿರ್ವಾತವನ್ನು ಅರ್ಥ ಮಾಡಿಕೊಂಡು ತಾಯಿಯ ಸ್ಥಾನವನ್ನು ತುಂಬುವವಳು ಮತ್ತೊಂದು ಹೆಣ್ಣು! ಹೀಗೆ ಸಹಾಯ ನೀಡುವಾಕೆಯ ಪತಿಯೂ ಪೂರಕವಾಗಿ ಸಹಕರಿಸುತ್ತಾರೆ ಎಂಬುದೂ ನಿಜ. ಲಕ್ಷ್ಮಿಯ ಪತಿ 'ನಾಗ ಐತಾಳ' ಎಂಬ ಹೆಣ್ಣು ಹೃದಯದ ಗಂಡುಗಲಿ ನನ್ನ ಒಡಹುಟ್ಟಲ್ಲದ ಅಣ್ಣನಾಗಿ, ಗೆಳೆಯನಾಗಿ, ಮಾರ್ಗದರ್ಶಿಯಾಗಿ ಜೀವನದ ಉದ್ದಕ್ಕೂ ಹರಿಸಿದ ವಾತ್ಸಲ್ಯ ಧಾರೆಯನ್ನು ಮರೆಯಲಾದೀತೆ?

ಅಮ್ಮನ ಪ್ರೀತಿ ಎಂದಾದರೂ ಸವಕಲಾದೀತೆ? ಅದು ಎಷ್ಟು ಸನಾತನವೋ ಅಷ್ಟೇ ವಿನೂತನ. ನಡುರಾತ್ರಿಯಲ್ಲಿ ಮಗು ಅತ್ತಿತು ಎಂದು ಎದ್ದು ಹಾಲೂಡಿಸುವಾಗಲೆಲ್ಲ ನನಗೆ ಅಮ್ಮನ ನೆನಪಾಗುತ್ತಿತ್ತು. ಕೆಲವು ತಿಂಗಳ ಹಿಂದೆ ಭಾರತಕ್ಕೆ ಭೇಟಿ ಕೊಟ್ಟಾಗ ತಂಗಿಯ ಬಾಣಂತನ ನಡೆಯುತ್ತಿತ್ತು ತವರಿನಲ್ಲಿ. ರಾತ್ರಿ ಮಗು ಎದ್ದರೆ ಅಮ್ಮ ಅದನ್ನು ತೊಟ್ಟಿಲಿನಿಂದ ತೆಗೆದು ತಂಗಿಯ ಕೈಗೆ ಕೊಡುತ್ತಿದ್ದಳು. ಮಗುವಿಗೆ ಅವಳು ಹಾಲೂಡಿಸುತ್ತಿರುವಾಗ ಅಮ್ಮ ಪಕ್ಕದಲ್ಲೇ ಕುಳಿತು ಮೊಮ್ಮಗನ ಪಾದಗಳನ್ನು ಸವರುತ್ತಲೋ ಕೈಗೆ ಮುತ್ತಿಡುತ್ತಲೋ ಮುದ್ದಿನ ಮಳೆ ಕರೆಯುತ್ತಿದ್ದಳು. ಈ ಹೊರದೇಶದಲ್ಲಿ ಪರದೇಶಿ ನಾನು ಮಧ್ಯರಾತ್ರಿಯಲ್ಲಿ ಒಬ್ಬಳೇ ಕುಳಿತು ಹಾಲೂಡಿಸುತ್ತಿದ್ದೀನಿ ಅನ್ನಿಸಿ ಕಣ್ಣು ಹನಿಗೂಡಿತ್ತು.

### ಅಧ್ಯಾಯದ ಪರಿಸಮಾಪ್ತಿ

ಇದೀಗ ಒಂದು ಭವ್ಯ ಅಧ್ಯಾಯದ ಸಮಾರೋಪ ಹತ್ತಿರವಾಗುತ್ತಿದೆ. "ಅವರು ಹೋಗಿಬಿಟ್ಟರಂತೆ", "ಇವರಿಗೆ ಸೀರಿಯಸ್ಸಂತೆ"...ಮುಂತಾದ ಸುದ್ದಿಗಳೇ ಬರುತ್ತಿವೆ ಮೊದಲ ತಂಡದ ವಲಸೆಗಾರರ ಬಗ್ಗೆ. ಹೆಚ್ಚಾಗಿ ಮಡದಿಯರು ವಯಸ್ಸಿನಲ್ಲಿ ಚಿಕ್ಕವರಾದ್ದರಿಂದ, ಹಾಗೂ ಪ್ರಕೃತಿ ಹೆಣ್ಣು ಜೀವಕ್ಕೆ ಹೆಚ್ಚಿನ ಧಾರಣ ಶಕ್ತಿ ನೀಡಿರುವುದರಿಂದ ಗಂಡನನ್ನು

ನೋಡಿಕೊಳ್ಳುತ್ತಿರುವ ವಯಸ್ಸಾದ ಹೆಂಗಳೆಯರು ಬಹಳಷ್ಟು ಜನ ಇದ್ದಾರೆ. ಯಾರ ಕೈ ಹಿಡಿದು ಎಲ್ಲವನ್ನೂ ಬಿಟ್ಟು ಹೊಸ ದೇಶಕ್ಕೆ ಬಂದಿದ್ದರೋ ಅವರೇ ಹೊಸ್ತಿಲ ಬಳಿ ನಿಂತು ವಿದಾಯ ಹೇಳುತ್ತಿದ್ದಾರೆ! "ಏನೇ ಆದರೂ ಅವರನ್ನು ನರ್ಸಿಂಗ್ ಹೋಮ್‌ಗೆ ಹಾಕುವುದಿಲ್ಲ" ಎಂದು ಹೆಣಗಾಡುತ್ತಿರುವ, ಹೋರಾಡುತ್ತಿರುವ ಪರಿಚಯಸ್ಥರನ್ನು, ಗೆಳತಿಯರನ್ನು ನೆನೆಯುತ್ತಿರುವಾಗ ಕಣ್ಣು ತುಂಬುತ್ತದೆ. ಅದೇ ಮಾತೃ ಶಕ್ತಿ, ನಿರ್ವ್ಯಾಜ ಪ್ರೇಮ ಅವರೆಲ್ಲರ ಕೈ ಹಿಡಿದು ನಡೆಸುತ್ತಿದೆ. "ನಿನಗೆ ಬೇರೆ ಹೆಸರು ಬೇಕೆ? ಸ್ತ್ರೀ ಎಂದರೆ ಅಷ್ಟೇ ಸಾಕೆ?" ಎಂದ ಕವಿ ಶಿವರುದ್ರಪ್ಪನವರ ಮಾತು ಸಿ. ಅಶ್ವತ್ಥ್ ಅವರ ದನಿಯಾಗಿ ಹೃದಯದಲ್ಲಿ ಮಾರ್ದನಿಸುತ್ತಿದೆ.

ಇದೋ, ಇಲ್ಲಿವೆ ನಮ್ಮ– ಅಂದರೆ ಅಮೆರಿಕಾಗೆ ಬಂದ ಮೊದಲ ತಂಡದ ಭಾರತೀಯ ವಲಸೆಗಾರ್ತಿಯರ– ಹೆಜ್ಜೆ ಗುರುತುಗಳು. ಈಗ ಸ್ವಲ್ಪ ಮಾಸಿದಂತೆ ಕಾಣುತ್ತಿವೆ. ಆದರೂ ಅಲ್ಲಿ ಪಾದ ಊರಿದ್ದ ಕಡೆ ಮರಳನ್ನು ಮುಟ್ಟಿದರೆ ಒಸರುವುದು ಪ್ರೀತಿಯ ಒರತೆಯೇ.



# ‘ಹಿಜಾಬ್’ನ ರಾಧಿಕಾ–ಒಂದು ಸ್ತ್ರೀವಾದೀ ಅನಿಸಿಕೆ

ಇಂಗ್ಲಿಷ್ ಮೂಲ: **ಪ್ರಜ್ಞಾ ಕಾಗಿನೆಲೆ;** Dallas, Texas
ಕನ್ನಡಕ್ಕೆ: **ಸತ್ಯಪ್ರಕಾಶ್ ಕಾಗಿನೆಲೆ;** Dallas, Texas

*

ಗುರುಪ್ರಸಾದ ಕಾಗಿನೆಲೆ ಅವರ ಕಾದಂಬರಿ ‘ಹಿಜಾಬ್’ನ ಶೀರ್ಷಿಕೆಯನ್ನು ಓದಿದಾಗಲೇ ಈ ಕಾದಂಬರಿ ಸಮಾಜದಲ್ಲಿ ಸ್ತ್ರೀಯರ ಸ್ಥಾನಮಾನವನ್ನು ಪರೀಕ್ಷಿಸುವುದನ್ನೇ ತನ್ನ ಕೇಂದ್ರವಸ್ತು ಮಾಡಿಕೊಂಡಿದೆ ಎಂದು ಗೋಚರವಾಗುತ್ತದೆ. ಆದರೆ, ಕಾದಂಬರಿಯನ್ನು ಓದುತ್ತಾ ಹೋದಾಗ ಇಲ್ಲಿರುವ ಸ್ತ್ರೀಪಾತ್ರಗಳು ಒಂದು ಮಾದರಿಯಲ್ಲಿ ಚಿತ್ರಿತವಾಗಿರುವುದು ವ್ಯಕ್ತವಾಗುತ್ತದೆ. ಬಹಳಷ್ಟು ಪಾತ್ರಗಳು ಇಡೀ ಕಾದಂಬರಿಯಲ್ಲಿ ಬಹುಕ್ಷಿಪ್ರವಾಗಿ ಬಂದು ಹೋಗುತ್ತವೆ. ಕೆಲವು ಪಾತ್ರಗಳು ಇದ್ದಕ್ಕಿದ್ದಂತೆ ತೀರಿಹೋದರೆ ಇನ್ನು ಕೆಲವು ಕಥೆಯ ಮುಖ್ಯ ಎಳೆಯಿಂದ ಮರೆಯಾಗಿ ಹೋಗುತ್ತವೆ. ಈ ರೀತಿ ‘ಬಂದುಹೋಗು’ವ ಸ್ತ್ರೀಪಾತ್ರಗಳ ನಡುವೆ ಚೇತೋಹಾರಿಯಾಗಿ ಚಿತ್ರಿತವಾಗಿರುವುದು ಡಾ. ರಾಧಿಕಾಳ ಪಾತ್ರ. ಕಾದಂಬರಿಯಲ್ಲಿ ಬರುವ ಬೇರೆ ಹೆಂಗಸರ ಜತೆಗಿನ ಆಕೆಯ ಸಂಬಂಧಗಳು ಹಾಗೂ ಆಕೆಯ ಕೆಲಸದಲ್ಲಿ ಆಕೆ ತೆಗೆದುಕೊಳ್ಳುವ ಕೆಲವು ನಿರ್ಧಾರಗಳು ವಿಶಿಷ್ಟವಾಗಿ ಕಾಣಿಸುತ್ತದೆ.

ಕಾದಂಬರಿಯ ಶುರುವಿನಲ್ಲಿ ರಾಧಿಕಾ ಸ್ಥಾಪಿತ ಮಾದರಿಯ ಆಧುನಿಕ ಸಮಾಜದ ‘ಕೂಲ್ ಗರ್ಲ್’ ಆಗಿ ಕಾಣಿಸುತ್ತಾಳೆ. ಆಕೆಯಲ್ಲಿ ಬೇರೆಯವರನ್ನು ಆಕರ್ಷಿಸುವ ಸಹಜ ಸೌಂದರ್ಯವಿದೆ. ತನ್ನ ಜತೆಯಲ್ಲಿರುವವರ ಬಯಕೆ, ಭಾವನೆಗಳಿಗೆ ಸಹಜವಾಗಿ ಸ್ಪಂದಿಸುವ ಆದರೆ ಯಾವುದನ್ನೂ ತಲೆಕೆಡಿಸಿಕೊಳ್ಳುವಷ್ಟು ಹಚ್ಚಿಕೊಳ್ಳದ ನಿರ್ವಿಕಾರತೆಯಿದೆ. ಈಕೆಯಲ್ಲಿ ತನಗೆ ಬೇಕಾದುದನ್ನು ಪಡಕೊಳ್ಳಲು ಬೇರೆಯವರನ್ನು ಪಕ್ಕಕ್ಕೆ ದಬ್ಬಿ ಮುಂದೆ ಹೋಗಲೂ

ಹೇಸದ ಧಾರ್ಷ್ಟ್ಯವಿದೆ. ಆಸ್ಪತ್ರೆಗೆ ಬರುವ 'ಸಂಘಾಲಿ' ಹೆಂಗಸರ ಹೋರಾಟವನ್ನು ನೋಡಿ ನಕ್ಕು ಮುಂದುವರೆಯುವ ತಣ್ಣನೆಯ ಕ್ರೌರ್ಯವಿದೆ.

ಆರಂಭದಲ್ಲಿ ಲೇಖಕರು ಪ್ರಸ್ತುತಪಡಿಸಿರುವ ರೀತಿ ಒಂದು ಸ್ತರದಲ್ಲಿ ವಿಶಿಷ್ಟವೆನಿಸಿದರೂ ಈ 'ಕೂಲ್ ಗರ್ಲ್' ಚಿತ್ರಣ ಕೂಡ ಒಂದು ಬಗೆಯ ಸ್ಟೀರಿಯೋಟೈಪ್ ಅನಿಸುತ್ತದೆ. ಮತ್ತು ಆಕೆಯ ಪರಿಸ್ಥಿತಿಯಲ್ಲಿ ಅವಳ ಧಾರ್ಷ್ಟ್ಯ, ಕ್ರೌರ್ಯ ಅವಶ್ಯವೆನಿಸುತ್ತದೆ. ಗಂಡಾಳ್ವಿಕೆ ಪ್ರಬಲವಾಗಿರುವ ಆಕೆಯ ಕೆಲಸದಲ್ಲಿ ಆಕೆಗೆ ಇದು ರಕ್ಷಾಕವಚವಾಗಿ ನಿಲ್ಲುತ್ತದೆ. ಆಕೆಯ ಹೊಂದಾಣಿಕೆಯ ಗುಣ, ಆಕೆಯ ವೈಯಕ್ತಿಕ ಬದುಕು ಮತ್ತು ವೃತ್ತಿಯಲ್ಲಿ ಸಮಾಜ ವಿಧಿಸಿರುವ ಹೆಣ್ಣಿನ ಪಾತ್ರರೂಢಿಗೆ ಅವಶ್ಯವಾದ 'ಟೂಲ್' ಆಗಿದೆ. ಸ್ತ್ರೀವಾದೀ ದೃಷ್ಟಿಕೋನದಿಂದ ನೋಡಿದಾಗ ಈ ಘಟ್ಟದಲ್ಲಿ ರಾಧಿಕಾ ಸಮಾಜ ಆರೋಪಿಸಿರುವ ಸ್ಟೀರಿಯೋಟಿಪಿಕಲ್ ಆಧುನಿಕ ಹೆಣ್ಣಾಗಿ ಕಾಣುತ್ತಾಳೆ.

ಕತೆ ಮುಂದುವರೆದಂತೆ ಈ ಪಾತ್ರಕ್ಕೆ ಇರುವ ಬಹು ಆಯಾಮ ವ್ಯಕ್ತವಾಗುತ್ತಾ ಹೋಗುತ್ತದೆ. ರಾಧಿಕಾ ತನ್ನ ಹುಟ್ಟೂರಿನಿಂದ, ಬೆಳೆದುಬಂದ ಸಂಸ್ಕೃತಿಯಿಂದಷ್ಟೇ ಅಲ್ಲ ತನ್ನ ಪ್ರಿಯಕರನಿಂದಲೂ ದೂರವಾಗಿದ್ದುಕೊಂಡು ಇಬ್ಬರು ಗಂಡು ರೂಮ್‌ಮೇಟುಗಳ ಜತೆ ವಾಸಿಸುತ್ತಿರುತ್ತಾಳೆ. ಈ ಘಟ್ಟದಲ್ಲಿ ಹೆಣ್ಣಿನ ಹೋರಾಟದ ಇನ್ನೊಂದು ಆಯಾಮ ಗೊತ್ತಾಗುತ್ತದೆ. ಇಲ್ಲಿಯೂ ಕೂಡ ಆಕೆಯ 'ಕೂಲ್ ಗರ್ಲ್' ಪಟ್ಟ ತಥಾಕಥಿತ ಲಿಂಗಾಧಾರಿತ ಸಮಾಜದಲ್ಲಿ ತನ್ನ ಮಿತಿಯಲ್ಲಿಯೇ ತನ್ನತನವನ್ನು ನಿಭಾಯಿಸುವ ಸೂಕ್ಷ್ಮಕವಚವಾಗಿ ಕಾಣುತ್ತದೆ.

ರಾಧಿಕಾಳ ಒಂಟಿತನವೊಂದೇ ಸಾಕು, ಹೆಣ್ಣಿನಿಂದ ಸಮಾಜ ಏನು ನಿರೀಕ್ಷಿಸುತ್ತದೆ ಎಂಬ ಧೋರಣೆಯನ್ನು ಪರೀಕ್ಷಿಸಲು. ಕಾದಂಬರಿಯ ಮುಂದಿನ ಭಾಗದಲ್ಲಿ ಪುರುಷರೇ ಪ್ರಧಾನವಾಗಿರುವ ವೃತ್ತಿಯಲ್ಲಿರುವ ವಲಸೆ ಹೆಣ್ಣು ರಾಧಿಕಾ 'ನಾರ್ಮಲ್' ಆಗಿ ಬದುಕಲು ಹೇಗಿರಬೇಕು ಎಂದು ಅಪೇಕ್ಷಿಸುವ ಸಮಾಜದ ರೂಢಿಗತ ವಿಚಾರಗಳನ್ನು ನಿರ್ವಚಿಸುವಂತೆ ಈ ಪಾತ್ರ ಬೆಳೆಯುತ್ತಾ ಹೋಗುತ್ತದೆ. ಸಾಂಪ್ರದಾಯಿಕ ಸಮಾಜದಲ್ಲಿ ಹೆಂಗಸರು ತಮ್ಮದೇ ಆದ ಆವರಣಗಳನ್ನು ಕಟ್ಟಿಕೊಳ್ಳಲು ಪಡಬೇಕಾದ ಪಡಿಪಾಟಲನ್ನು ರಾಧಿಕಾಳ ಪಾತ್ರ ಬಿಂಬಿಸುತ್ತದೆ.

ಮಹಮದ್ ಮಹಮದ್‌ನಂತಹ ವ್ಯಕ್ತಿಯ ಜತೆಗಿನ ಮುಖಾಮುಖಿ ಗಂಡಾಳ್ವಿಕೆಯ ಸಮಾಜದಲ್ಲಿ ಅಂತರ್ಗತವಾಗಿರುವ ಶಕ್ತಿ ರಾಜಕಾರಣಕ್ಕೆ ಉದಾಹರಣೆಯಾಗಿದೆ. ರಾಧಿಕಾಳ ಸ್ಥಿರತೆ ದಬ್ಬಾಳಿಕೆಯ ವಿರುದ್ಧ ಸೆಟೆದು ನಿಲ್ಲುವ ಸ್ತ್ರೀಶಕ್ತಿಯನ್ನು ಧ್ವನಿಸುತ್ತದೆ.

ಕಾದಂಬರಿಯ ಮುಂದಿನ ಭಾಗದಲ್ಲಿ ವೈಯಕ್ತಿಕ ಹಾಗೂ ವೃತ್ತಿಜೀವನದಲ್ಲಿ ತಾನೆದುರಿಸುವ ಸವಾಲುಗಳಿಂದ ರಾಧಿಕಾಳ ಜೀವನದ ದೆಸೆ ಬದಲಾಗುತ್ತದೆ. ಸಂಬಂಧಗಳಲ್ಲಾಗುವ ಪಲ್ಲಟಗಳಿಂದ ಆಕೆಯ ದೌರ್ಬಲ್ಯಗಳು ಕಾಣಿಸತೊಡಗುತ್ತವೆ. ಕಾದಂಬರಿಯಲ್ಲಿ ಒಂದು ಸಂದರ್ಭದಲ್ಲಿ ನಿರೂಪಕನಿಗೆ ಆಕೆ ಮುತ್ತಿಡುವ ಹೃದಯಸ್ಪರ್ಶಿ ಸನ್ನಿವೇಶವಿದೆ. ಗಟ್ಟಿ ಎಂದು ಅಲ್ಲಿಯವರೆಗೆ ಬಿಂಬಿತವಾಗಿದ್ದ ಪಾತ್ರದ ಅಸಹಾಯಕತೆ

ಮತ್ತು ದೌರ್ಬಲ್ಯಗಳು ಈ ಘಟನೆಯಲ್ಲಿ ಎದೆ ಕರಗುವ ಹಾಗೆ ನಿರೂಪಿತಗೊಂಡು ಆಕೆಯ ಪಾತ್ರಕ್ಕಿರುವ ವಿವಿಧ ಮಜಲುಗಳ ಪರಿಚಯ ನಮಗಾಗುತ್ತದೆ. ಇದುವರೆವಿಗೂ 'ಕೂಲ್‌ಗರ್ಲ್' ಎಂಬಂತೆ ಚಿತ್ರಿತವಾಗಿರುವ ಆಕೆಯ ಇಮೇಜಿಗೆ ಇದು ವ್ಯತಿರಿಕ್ತವಾದರೂ ಆಕೆಯನ್ನು ಇನ್ನೂ ಹೆಚ್ಚು ಮನುಷ್ಯಳನ್ನಾಗಿ ಮಾಡಿದೆ. ಅಷ್ಟೇ ಅಲ್ಲ, ಗಟ್ಟಿತನವಾಗಲೀ, ಅಸಹಾಯಕತೆಯಾಗಲೀ ಯಾವುದೇ ರೂಢಿಗತ ಇಮೇಜಿನಿಂದ ಹೊರಬರುವ ಶಕ್ತಿ ಆಕೆಗಿದೆ ಎಂಬುದು ಇಲ್ಲಿ ವ್ಯಕ್ತವಾಗುತ್ತದೆ.

ನಿರೂಪಕನಿಗೆ ರಾಧಿಕಾ ಕಾರಿನಲ್ಲಿ ಮುತ್ತಿಡುವ ಘಳಿಗೆಯಲ್ಲಿ ಓದುಗನಿಗೆ ರಾಧಿಕಾಳ ಬಗ್ಗೆ ಸಹಾನುಭೂತಿ ಉಕ್ಕುತ್ತದೆ. ನಂತರದ ಆಕೆಯ ವೈಯಕ್ತಿಕ ಮತ್ತು ವೃತ್ತಿಜೀವನದ ಹೋರಾಟದಲ್ಲಿ ಆಕೆ 'ಕೇವಲ ಮನುಷ್ಯ'ಳಾಗಿ ಹೋರಾಡುವುದು ಓದುಗನಿಗೆ ವ್ಯಕ್ತವಾಗುತ್ತದೆ. ಕರುಣೆ, ಸಹಾನುಭೂತಿಗಳು ಸ್ತ್ರೀವಾದೀ ಥೀಮುಗಳ ಹರಹನ್ನು ಮತ್ತು ಹೆಂಗಸರ ಬಹು ಆಯಾಮದ ಹೋರಾಟವನ್ನು ಗಮನಿಸದ ಸಮಾಜದ ಅಲಕ್ಷ್ಯವನ್ನು ಅರಿಯಲು ಬೇಕಾದ ಮುಖ್ಯ ಮನಸ್ಥಿತಿಗಳು. ರಾಧಿಕಾಳ ಬಗ್ಗೆ ಓದುಗನಿಗೆ ಉಕ್ಕುವ ಕರುಣೆ, ಸಹಾನುಭೂತಿಗಳು ಆಕೆಯಿರುವ ಸಮಾಜದ ಮತ್ತು ಆಕೆಯ ಪರಿಸ್ಥಿತಿಯ ಪ್ರತಿಬಿಂಬವಾಗಿ ಕಾಣುತ್ತದೆ.

ಕಾದಂಬರಿಯ ಕೊನೆ ಬಹಳ ನಾಟಕೀಯವಾಗಿ ಬಂದಿದೆ. ಇಲ್ಲಿ ಸಿಸೇರಿಯನ್ ಸೆಕ್ಷನ್ ಒಂದು ನಿರಪಾಯಕಾರಿ ಶಸ್ತ್ರಚಿಕಿತ್ಸೆ ಎಂದು ಸಂಘಾಲಿ ಹೆಂಗಸರನ್ನು ನಂಬಿಸಲು ಆಶಾ ಮತ್ತು ಹಬೀಬಾ ಎಂಬ ಇಬ್ಬರು ಸಂಘಾಲಿ ಹೆಂಗಸರ ಮೇಲೆ ಟೀವಿ ಚಾನೆಲೊಂದರಲ್ಲಿ 'ಲೈವ್ ಸಿಸೇರಿಯನ್ ಸೆಕ್ಷನ್' ಮಾಡುವ ಹೊಣೆ ರಾಧಿಕಾಳದ್ದಾಗುತ್ತದೆ. ಆಕೆಯ ನೈತಿಕತೆ, ವೃತ್ತಿಪರತೆ, ಜವಾಬ್ದಾರಿ ಮತ್ತು ಸ್ವಾರ್ಥ ಎಲ್ಲವೂ ಒಂದೇ ವೇದಿಕೆಯಲ್ಲಿ ಸಾರ್ವಜನಿಕವಾಗಿ ಪರೀಕ್ಷಿಸಲ್ಪಡುತ್ತದೆ. ತನ್ನ ಗುರಿ ಸಾಧಿಸಬೇಕಾದರೆ ಒಬ್ಬ ಹೆಣ್ಣು ಇಂಥ ಸನ್ನಿವೇಶದಲ್ಲಿ ಏನು ಮಾಡಬೇಕಾಗಬಹುದು ಎಂಬುದನ್ನು ಒರೆಗಿಡಲಾಗುತ್ತದೆ.

ಕಾದಂಬರಿಯ ಈ ಸನ್ನಿವೇಶದಲ್ಲಿ ಸ್ತ್ರೀ ಸಬಲೀಕರಣ ಎಂಬ ಹೋರಾಟದಲ್ಲಿ ಹೆಂಗಸರು ತಮಗೆ ಸವಾಲು ಅನಿಸಬಹುದಾದ ಅನೇಕ ಅಸ್ಪಷ್ಟ ನೈತಿಕ ನಿಲುವುಗಳ ಜತೆ ಮುಖಾಮುಖಿಯಾಗುವುದು ನಮ್ಮ ಅರಿವಿಗೆ ಬರುತ್ತದೆ. ರಾಧಿಕಾಳ ಪಾತ್ರ ಇಲ್ಲಿ ಇನ್ನೂ ಸಂಕೀರ್ಣವಾಗಿದೆ. ಅಷ್ಟೇ ಅಲ್ಲ ಈ ಹೋರಾಟದಲ್ಲಿ ಹೆಣ್ಣು ಎದುರಿಸಬೇಕಾದ ವ್ಯವಸ್ಥೆ ಮತ್ತು ಆಕೆಯ ಸ್ವಾಯತ್ತತೆಯ ನಿಲುವುಗಳು ಎಷ್ಟು ಸಂಕೀರ್ಣವಾಗಿ ಒಂದಕ್ಕೊಂದು ಬೆಸೆದುಕೊಂಡಿದೆ ಎಂಬುದು ಸ್ಪಷ್ಟವಾಗುತ್ತಾ ಹೋಗುತ್ತದೆ. ಇಲ್ಲಿ ತನ್ನ ವೈಯಕ್ತಿಕ ಹಾಗೂ ವೃತ್ತಿಯ ಮಿತಿಗಳ ನಡುವೆಯೂ ರಾಧಿಕಾ ಸಮಾಜ ಹೆಣ್ಣಿಗೆ ಒದಗಿಸಿರುವ ನಾರ್ಮ್‌ಗಳನ್ನು ಮುರಿಯುತ್ತಾಳೆ. ಸ್ತ್ರೀಯರು ತಮಗೆ ಹಾಕಿರುವ ನೈತಿಕ ಮಿತಿಗಳನ್ನು ದಾಟಲು ಮಾಡಬೇಕಾದ ಕ್ಲಿಷ್ಟವಾದ ಆಯ್ಕೆಗಳು ಓದುಗರಿಗೆ ಗೋಚರಿಸುತ್ತವೆ.

ಸಮಾಜದ ನಿರೀಕ್ಷೆ ಮತ್ತು ಏಕಾಕಿತನವನ್ನು ಎದುರಿಸುತ್ತಲೇ ರಾಧಿಕಾಳ ಪಾತ್ರ ಶಕ್ತಿಯುತವಾಗಿ ಅರಳುತ್ತದೆ. ಸಮಾಜ ಹೆಣ್ಣಿಗಿಟ್ಟಿರುವ ಸ್ಟೀರಿಯೋಟೈಪುಗಳನ್ನು ಮತ್ತು

ಹೆಣ್ಣಿನಿಂದ ಮಾಡುವ ನಿರೀಕ್ಷೆಗಳನ್ನು, ಪ್ರತಿಕೂಲ ಪರಿಸ್ಥಿತಿಯಲ್ಲಿಯೂ ಆಕೆ ಎದುರಿಸುವ ರೀತಿ ಯಾವುದೇ ಘೋಷಣೆಗಳಿಲ್ಲದೇ ಹೆಣ್ಣಿನ ಶಕ್ತಿಯನ್ನು ಪ್ರತಿನಿಧಿಸುತ್ತದೆ. ಆಕೆಯ ವೈಯಕ್ತಿಕ ಹಾಗೂ ವೃತ್ತಿಬದುಕಿನ ನಿರ್ಣಯಗಳು ಆಕೆ ಸಮಾಜ ತನಗೆ ಹಾಕಿದ ಸವಾಲುಗಳನ್ನು ಎದುರಿಸುವ ಬೆಳಕಿನಲ್ಲಿ ಹೊಸ ಪರಿಪ್ರೇಕ್ಷ್ಯವನ್ನು ಪಡೆಯುತ್ತವೆ. ಏಕಾಕಿತನ ಹಾಗೂ ಪ್ರತಿಕೂಲ ಪರಿಸ್ಥಿತಿಯನ್ನು ಎದುರಿಸುವ ಆಕೆ ಮಹಿಳಾ ಸಬಲೀಕರಣಕ್ಕೆ ಮಾದರಿಯಾಗಿ ನಿಲ್ಲುತ್ತಾಳೆ. ಸಮಾಜ ಹಾಕಿದ ಮಿತಿಯನ್ನು ಮೀರಿ ನಿಲ್ಲುತ್ತಾಳೆ.

ಒಟ್ಟಾರೆ ಹೇಳುವುದೆಂದರೆ 'ಹಿಜಾಬ್' ಕಾದಂಬರಿಯಲ್ಲಿ ರಾಧಿಕಾ ತನ್ನ ಸ್ಥಾಪಿತ 'ಕೂಲ್ ಗರ್ಲ್' ಮಾದರಿಯನ್ನು ತಾನೇ ಮೀರುತ್ತಾಳೆ. ಆಕೆಯ ಪಾತ್ರ ಸ್ತ್ರೀವಾದೀ ಥೀಮುಗಳಾದ ಅಚಲತೆ, ಏಕಾಕಿಯಾಗಿಯೂ ಬದುಕಬಲ್ಲ ಸಾಮರ್ಥ್ಯ ಮತ್ತು ಸಬಲೀಕರಣಗಳನ್ನು ಪ್ರತಿಪಾದಿಸುತ್ತದೆ. ತನ್ನ ವೃತ್ತಿ, ಸಹೋದ್ಯೋಗಿಗಳು ಮತ್ತು ಆಕೆಯ ಪರಿಣತಿ ಕ್ಷೇತ್ರದಲ್ಲಿ ಆಕೆ ತೆಗೆದುಕೊಳ್ಳುವ ನಿರ್ಣಯಗಳಿಂದ ಗಂಡಾಳ್ವಿಕೆಯ ಸಮಾಜದ ನಿಲುವುಗಳನ್ನು ಆಕೆ ನೇರವಾಗಿ ಪ್ರಶ್ನಿಸುತ್ತಾಳೆ. ಇತರೇ ಸ್ತ್ರೀವಾದೀ ಥೀಮುಗಳನ್ನು ರಾಧಿಕಾಳ ಪಾತ್ರದ ಮೂಲಕ ಪರೀಕ್ಷಿಸಲು ಓದುಗರಿಗೆ ಈ ಕಾದಂಬರಿಯು ಒಂದು ಕಿಟಕಿಯಾಗಿ ನಿಲ್ಲುತ್ತದೆ.

ರಾಧಿಕಾ ಪರಿಪೂರ್ಣ ವ್ಯಕ್ತಿ ಎಂದು ಎಲ್ಲಿಯೂ ಚಿತ್ರಿತವಾಗಿಲ್ಲ. ಆಕೆ ಕೆಲವೊಮ್ಮೆ ಕಟುವೆನಿಸುತ್ತಾಳೆ. ತನ್ನ ಪ್ರಿಯಕರನಿಗೆ ಈಕೆ ಯಾವತ್ತೂ ಪೂರಾ ನಿಷ್ಠಳಲ್ಲ. ಕಾದಂಬರಿಯ ಕೊನೆಯಲ್ಲಿ ತನಗಿಂತ ಅಸಹಾಯಕ ಮಹಿಳೆಯರ ಪರಿಸ್ಥಿತಿಯನ್ನು ತನ್ನ ಅನುಕೂಲಕ್ಕೆ ಬಳಸಿಕೊಳ್ಳುವುದಕ್ಕೆ ಈಕೆ ಹಿಂಜರಿಯುವುದಿಲ್ಲ. ಆಕೆಯ ವಿಕಸನ ಸ್ಟೀರಿಯೋಟೈಪಿನಿಂದ ಹೊರಬರುವ, ತನ್ನತನವನ್ನು ಒಪ್ಪಿಕೊಳ್ಳುವ, ಮಹಿಳೆಯರನ್ನು ಸಬಲ ಮಾಡುವ ಸಂಬಂಧಗಳನ್ನು ಬೆಳೆಸುವ ಸ್ತ್ರೀ ಕಥನವಾಗಿದೆ. ಆಕೆಯ ಮಿತಿಗಳು ಆಕೆಯಲ್ಲಿನ ಸ್ತ್ರೀಗೆ ಎಂದೂ ಕೊರೆಯಾಗದೆ ಆಕೆಯ ಪಾತ್ರದ ಸಂಕೀರ್ಣತೆಯನ್ನು ಬಿಂಬಿಸುತ್ತವೆ. ಸಮಾಜ ವಿಧಿಸಿದ ಮಿತಿಗಳನ್ನು ಮೀರಲು ಮಹಿಳೆ ಪರಿಪೂರ್ಣಳಾಗಲೇಬೇಕಿಲ್ಲ ಎಂಬುದನ್ನು ಈಕೆಯ ಪಾತ್ರ ಸಮರ್ಥವಾಗಿ ಬಿಂಬಿಸುತ್ತದೆ.

❑

# ದೇವಿ-ಮಾಯೆ: ದೇಶಕಾಲಧರ್ಮಾತೀತ ಸ್ತ್ರೀ ಲಹರಿ

**ಪೂರ್ಣಿಮಾ ಕಶ್ಯಪ್**
Dallas, Texas

*

ಹೀಗೊಂದು ದಿನ, ಅಲ್ಲೊಂದು ಸಾಹಿತ್ಯಾಸಕ್ತ ಸಹೃದಯರ ಸಭೆ. ಭಾಗವಹಿಸಿದವ-ರಲ್ಲೊಬ್ಬರು ಪ್ರಕೃತಿಯ ರೂಪಕಗಳ ಹಿನ್ನೆಲೆಯಲ್ಲಿ ಸ್ತ್ರೀಸಂಕಟವನ್ನು ಮುನ್ನೆಲೆಗೆ ತರುವ ಕವನವೊಂದನ್ನು ಓದಿದರು. ಅಲ್ಲಿಯವರೆಗೆ ಪ್ರಶಾಂತವಾಗಿದ್ದ ಸಭೆ ಈಗ ಭೋರ್ಗರೆವ ಮಹಾಪೂರ! ತಮ್ಮ ಮನೆಯ ಹೆಣ್ಣುಮಕ್ಕಳ ಬಗ್ಗೆ ಅತೀವ ಮಮತೆ, ಭರವಸೆ, ಹೆಮ್ಮೆಯಿರುವ; ಸ್ತ್ರೀಯರನ್ನು ಅತ್ಯಂತ ಗೌರವದಿಂದ ಕಾಣುವ ಸಂಭಾವಿತರೇ ಇವರೆಲ್ಲರೂ ಅದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ. ಸ್ತ್ರೀಯರಿಗೆ ಆಗಿರುವ, ಆಗುತ್ತಿರುವ ಅನ್ಯಾಯವನ್ನು ಮುಕ್ತವಾಗಿಯೇ ಒಪ್ಪಿಕೊಂಡರೂ ಸಹ ಪ್ರತಿರೋಧ ನ್ಯಾಯವಾಗಿದ್ದರೂ ಅದು ನಯವಾಗಿಯೇ ಇರಬೇಕು ಎಂದು ಅರಿವಿದ್ದೋ, ಅರಿವಿಲ್ಲದೆಯೋ ನಂಬಿಕೊಂಡವರು! ಅಲ್ಲೊಂದು ಇಲ್ಲೊಂದು ಅಪವಾದದ ಹೊರತಾಗಿ ಸಭೆಯ ಒಟ್ಟು ಅಭಿಪ್ರಾಯ ಸ್ತ್ರೀವಾದವೆನ್ನುವ ಮಾಯೆಗೆ ಸಿಲುಕದಿದ್ದರೆ ಸ್ತ್ರೀ 'ದೇವಿ'!

ಸಭೆ ಎಲ್ಲಿ ನಡೆಯಿತು? ಭಾರತದಲ್ಲೋ, ಅಮೆರಿಕೆಯಲ್ಲೋ, ವಿಶ್ವದ ಇನ್ಯಾವುದೋ ಮೂಲೆಯಲ್ಲೋ? ಕವನದಲ್ಲೇನಿತ್ತು, ಬರೆದವರಾರು, ಓದಿದವರಾರು, ಪ್ರತಿಕ್ರಯಿಸಿದವರು ಯಾರು, ಹೆಂಗಸರೋ, ಗಂಡಸರೋ? ಇವೆಲ್ಲ ಕುತೂಹಲಗಳನ್ನು ಬದಿಗಿಟ್ಟು ನೋಡಿದರೆ ಅಥವಾ ಮತ್ತಷ್ಟು ಕೆದಕಿ ನೋಡಿದರೂ ಸರಿಯೇ, ಕಂಡದ್ದು ಒಂದೇ! ಸ್ತ್ರೀ ಸಂವೇದನೆಯ ಅರಿವಿನ ಕೊರತೆ!! ಹಾಗೆ ನೋಡಿದರೆ, ಈ ಘಟನೆ ದೇಶ-ಕಾಲ-ಧರ್ಮ-ವರ್ಗ-ಭಾಷಾತೀತವಾಗಿ ಎಲ್ಲಿ ನಡೆದರೂ ಪರಿಣಾಮ ಒಂದೇ ಇರಬಹುದೇನೋ!

ಅಂದಹಾಗೆ, ಸುಮ್ಮನೆ ನಿಮ್ಮ ಕುತೂಹಲ ತಣಿಸುವುದಕ್ಕಾಗಿ ಹೇಳುತ್ತೇನೆ – ಇಲ್ಲಿ ಕವನ ಬರೆದವರು ಸ್ತ್ರೀಲಿಂಗಿ, ಓದಿದವರು ಪುಲ್ಲಿಂಗಿಯಾದರೆ, ಪ್ರತಿಕ್ರಯಿಸಿದವರಲ್ಲಿ ಎಲ್ಲರೂ ಇದ್ದರು!

ಈ 'ಸ್ತ್ರೀ' ನಿಜಕ್ಕೂ ಯಾರು, ಅವಳು ಬಯಸುವುದೇನು? 'ಮೀನಿನ ಹೆಜ್ಜೆಯ ಕಾಣಲಾಗದು, ಹೆಣ್ಣಿನ ಮನಸನು ಅರಿಯಲಾಗದು' ಎನ್ನುವಂತಹ ಅಸೂಕ್ಷ್ಮ ಗಾದೆಗಳನ್ನು ನಂಬಿ ಅವಳನ್ನು ಅರಿಯುವ ಪ್ರಬುದ್ಧ ಪ್ರಯತ್ನವನ್ನು ಮಾಡದಿದ್ದುದರಿಂದಲೇ ಪ್ರಗತಿಪಥದಲ್ಲಿ ಶತಶತಮಾನಗಳು ನಡೆದರೂ ಕೂಡ ಈ ಪ್ರಶ್ನೆಗಳು ಇನ್ನೂ ಜೀವಂತವಾಗಿರುವುದು! ಪ್ರತಿ ಜೀವಿಯೂ ತಿಳಿಯಬೇಕಿರುವುದು ಅತ್ಯಂತ ಸರಳವಾಗಿಯೇ ಇದೆ. ಸ್ತ್ರೀಯನ್ನು ದೇವಿಯೆಂದು ಉತ್ಸವ ಮಾಡುವುದೂ ಬೇಡ. ಮಾಯೆ ಎಂದು ಉದಾಸೀನ ಮಾಡುವುದೂ ಬೇಡ! ಸಮಾನತೆಯೆನ್ನುವುದು ಯಾರದೋ ಉದಾರ ಮನಸಿನ ಕೊಡುಗೆಯಲ್ಲ, ಪ್ರತಿಯೊಬ್ಬರಿಗೂ ಇರಬೇಕಾದ ಸಹಜ ತಿಳಿವಳಿಕೆ! ದೈಹಿಕ ಕಾರಣಗಳಿಂದ ಸಮಾನತೆಯ ನೆಲೆ ಬೇರೆಬೇರೆಯಾದರೂ, ಬೌದ್ಧಿಕ ಕೋನದಿಂದ ಸಮಾನತೆ ಅಸಾಧ್ಯವೇ?

ಈ ಸಮಾನತೆಯ ನೆಲೆಯನ್ನು ಮತ್ತಷ್ಟು ವಿಸ್ತರಿಸಿ ನೋಡೋಣ. ಗಂಡು ಮತ್ತು ಹೆಣ್ಣಿನ ಅಂಗಾಂಗ ರಚನೆ ವಿಭಿನ್ನ ಮತ್ತು ಅದರಿಂದಾಗಿ ಅವರ ದೈಹಿಕ ಬಲವೂ ವಿಭಿನ್ನ ಎನ್ನುವುದು ನಿರ್ವಿವಾದ. ಹಾಗೆ ನೋಡಿದರೆ, ಗಂಡು-ಗಂಡು ಮತ್ತು ಹೆಣ್ಣು-ಹೆಣ್ಣುಗಳ ನಡುವೆಯೂ ದೈಹಿಕ ಸಾಮರ್ಥ್ಯವು ಭಿನ್ನವಾಗಿಯೇ ಇರುತ್ತವೆ. ಅನೇಕ ಉದ್ಯಮಗಳಲ್ಲಿ, ಆಟೋಟಗಳಲ್ಲಿ, ಕ್ರೀಡಾಪಂದ್ಯಗಳಲ್ಲಿ ವೇತನ ಸಮಾನತೆಯ ಮಾತೆತ್ತಿದರೆ ಅದನ್ನು ಕೇವಲ ದೈಹಿಕ ನೆಲೆಯಲ್ಲಿ ಮಾತ್ರ ಪ್ರಶ್ನಿಸಲಾಗುತ್ತದೆ. ಒಂದು ಗಂಡು ಮಾಡುವ ಎಲ್ಲಾ ಕೆಲಸಗಳನ್ನೂ ಅದೇ ಪರಿಮಾಣದಲ್ಲಿ ಹೆಣ್ಣೂ ಮಾಡಬಲ್ಲಳೇ? ಎಂದು. ಒಬ್ಬ ಬಲಶಾಲಿ ಗಂಡಸು/ಹೆಂಗಸು ಮಾಡುವ ಎಲ್ಲ ಕೆಲಸಗಳನ್ನೂ ಒಬ್ಬ ಸಾಧಾರಣ ಗಂಡಸು/ಹೆಂಗಸು ಹೇಗೆ ಮಾಡಲು ಸಾಧ್ಯವಿರುವುದಿಲ್ಲವೋ ಅದೇ ರೀತಿ ಈ ತರ್ಕವೂ ಅರ್ಥಹೀನವಲ್ಲವೇ? ದೈಹಿಕ ಸಾಮರ್ಥ್ಯದ ಕಿಂಚಿತ್ ಅಂಶವೂ ಬೇಕಿರದ ಬೌದ್ಧಿಕ ಕೆಲಸಗಳಲ್ಲಿಯೂ ಲಿಂಗಾಧಾರಿತ ವೇತನ ತಾರತಮ್ಯ ಇರುವುದು ಸುಳ್ಳಲ್ಲವಲ್ಲ!

ಹೆಣ್ಣನ್ನು ಪೂಜ್ಯ ಅಥವಾ ದಾಸ್ಯ ಭಾವದ ವಿಶೇಷಣ-ವೈಪರೀತ್ಯಗಳಿಲ್ಲದೆ ಸಹಜವಾಗಿ ಕಾಣುವ, ಸ್ಪಂದಿಸುವ ಅಭಿಲಾಷೆಯೇ ಸ್ತ್ರೀವಾದದ ಮೂಲ ಆಶಯವಲ್ಲವೇ? ಮತ್ತು ಇದರ ಅರಿವಿನಿಂದ ನಮ್ಮ ಭಾವನೆ, ನಡವಳಿಕೆಗಳಲ್ಲಿ ಕಂಡುಕೊಳ್ಳುವ ಬದಲಾವಣೆಯೇ ಸ್ತ್ರೀ ಸಂವೇದನೆಯ ಮೊದಲ ಹೆಜ್ಜೆ ಎನ್ನಬಹುದು. ಇನ್ನು ಮುಂದಿನ ಪ್ರಶ್ನೆ – ಈ ಅರಿವು ಬೇಕಾಗಿರುವುದು ಯಾರಿಗೆ? ಖಂಡಿತವಾಗಿಯೂ ಪುರುಷರಿಗೆ ಬೇಕು. ಸ್ತ್ರೀಯರಿಗೆ ಅದಾಗಲೇ ಇರುವುದೇ ಎಂದು ಕೇಳಿದರೆ, 'ಇಲ್ಲ' ಎಂದು ನಿಸ್ಸಂಶಯವಾಗಿ ಹೇಳಬಹುದು. ಕೆಲವೇ ಕೆಲವರನ್ನು ಹೊರತುಪಡಿಸಿದರೆ ಲಿಂಗಾತೀತವಾಗಿ ಪ್ರತಿಯೊಬ್ಬರಿಗೂ ಈ ಶಿಕ್ಷಣ ಬೇಕಿದೆ. ಇದಕ್ಕೆ ಪೂರಕವಾಗಿ ಕೆಲವು ಘಟನೆಗಳನ್ನು ನೋಡೋಣ.

ಪ್ರಖ್ಯಾತ ಗಾಯಕರೊಬ್ಬರ ಸಂಗೀತ ಸಂಜೆ. ಕನ್ನಡದ ಹೆಸರಾಂತ ಚಲನಚಿತ್ರ ನಾಯಕರ (ಗಮನಿಸಿ, ಗಾಯಕರ ಹೆಸರೇ ಎತ್ತದೆ ಬರೀ ನಾಯಕರಿಗೆ ಮಣೆ – ಅದು ಮತ್ತೊಂದು ವಿಷಯ) ಜನಪ್ರಿಯ ಹಾಡುಗಳನ್ನು ಆರಿಸಿ ಆರಿಸಿ ಪ್ರಸ್ತುತಪಡಿಸುತ್ತಿದ್ದರು. ಸಭಿಕರಿಗೆ ಭರ್ಜರಿ ಮನರಂಜನೆ. ಅವರಲ್ಲಿ ನಿರ್ಭೀತರೊಬ್ಬರು ಗಾಯಕರನ್ನು ವಿನಂತಿಸಿದರು– "ಬರೀ ನಾಯಕರುಗಳನ್ನೇ ಹೆಸರಿಸಿ ಅವರ ಹಾಡು ಅಂತ ಹೇಳ್ತೀರಲ್ಲಾ, ನಾಯಕಿಯರ ಹಾಡು ಅಂತ ಯಾವುದೂ ಇಲ್ಲವೇ?" ಗಾಯಕರಿಗೆ ಸ್ವಲ್ಪ ಕಸಿವಿಸಿಯಾದರೂ ಚಾಲಾಕಿನಿಂದ ಪರಿಸ್ಥಿತಿಯನ್ನು ನಿಭಾಯಿಸಿದರು. ಹಿಂದಿನ ಸಾಲಿನಿಂದ ತೂರಿಬಂತು ಕುಹಕ 'ಒಳ್ಳೆ ಫೆಮಿನಿಸ್ಟುಗಳು, ಸುಮ್ನೆ ಕ್ಯಾತೆ ತೆಗೀತಾರೆ. ನೀನು ಇಂಥವರ ಜೊತೆ ಎಲ್ಲಾ ಸೇರಬೇಡ. ಸಂಸಾರ ಹಾಳಾಗುತ್ತೆ'. 'ಅಯ್ಯೋ ಬಿಡಿ, ನಂಗೆ ಅಷ್ಟೂ ಗೊತ್ತಾಗಲ್ವಾ, ನಮ್ಮನೇಲಿ ಸರಿಯಾಗಿ ಬೆಳೆಸಿದಾರೆ!' ಎನ್ನುವ ಮಾರುತ್ತರದೊಂದಿಗೆ, ಮೌಲಿಕ ಪ್ರಶ್ನೆಯೊಂದು ಕ್ಯಾತೆಯಾಗಿ ತೆರೆಮರೆಗೆ ಸರಿದು ಕಾರ್ಯಕ್ರಮ ಭರಪೂರ ಯಶಸ್ವಿಯಾಗಿ, ಜನರು ಕುಣಿದು ಕುಪ್ಪಳಿಸಿದರು. 'ತೆರೆಯೋ ಬಾಗಿಲನು' ಎಂದು ಕಾದುಕುಳಿತ ದೇವಿಯನ್ನೂ 'ದೂರದಿಂದ ಬಂದಂಥಾ ಸುಂದರಾಂಗನ' ಮನರಂಜಿಸಿದ ಮಾಯೆಯನ್ನೂ ಜನ ಚಪ್ಪಾಳೆ ತಟ್ಟಿ ಹುರಿದುಂಬಿಸಿದರು. 'ಆಭಾಸವಾಯಿತೇನೋ' ಎಂದು ನಿರ್ಭೀತರು ನೊಂದುಕೊಂಡರು! 'ಈ ಮನರಂಜನೆ ಕಾರ್ಯಕ್ರಮಕ್ಕೆಲ್ಲಾ ಅಷ್ಟೊಂದು ಪ್ರಾಮುಖ್ಯತೆ ಕೊಡಬಾರದು, ತುಂಬಾ ಸೂಕ್ಷ್ಮವಾದರೆ ಕಷ್ಟ' ಎಂದರು ಮತ್ತೊಬ್ಬ ಹಿತೈಷಿ. ಇರಬಹುದೇನೋ!

**ಮತ್ತೊಂದು ಘಟನೆ:** ಸ್ಥಳೀಯ ಸಾಂಸ್ಕೃತಿಕ ಸಂಘ, ಅದಕ್ಕೊಂದು ಸಮಿತಿ, ಕೆಲವು ಸದಸ್ಯರು ಮತ್ತು ಒಬ್ಬ ಮುಖ್ಯಸ್ಥರು. ಕಲಾಪಗಳು ನಡೆದಾಗ ಸಹಜವಾಗಿಯೇ ಅಭಿಪ್ರಾಯ ಭೇದವಿತ್ತು, ಕೆಲವರು ಮುಖ್ಯಸ್ಥರಿಗೆ 'ಹೂಂ' ಎಂದರೆ, ಕೆಲವರು 'ಊಹೂಂ' ಎಂದರು. ಒಂದು ಸಮೀಕ್ಷೆಯಲ್ಲಿ ಯೋಜನೆಯನ್ನು ವಿವರಿಸಿ, ಮುಖ್ಯಸ್ಥರಾಗಿ ಹೆಣ್ಣು ಹೆಸರನ್ನೂ, 'ಊಹೂಂ' ಎಂದವರ ಪಟ್ಟಿಯಲ್ಲಿ ಗಂಡು ಹೆಸರುಗಳನ್ನೂ ಹಾಕಿದಾಗ ಮುಖ್ಯಸ್ಥರು ಎಲ್ಲರನ್ನೂ ವಿಶ್ವಾಸಕ್ಕೆ ತೆಗೆದುಕೊಂಡು ಕೆಲಸಮಾಡಬೇಕೆಂದು ಸಲಹೆ ಬಂತು. ಮತ್ತೊಂದು ಸಮೀಕ್ಷೆಯಲ್ಲಿ ಅದೇ ಯೋಜನೆಯನ್ನು ವಿವರಿಸಿ, ಮುಖ್ಯಸ್ಥರಾಗಿ ಗಂಡು ಹೆಸರನ್ನೂ, 'ಊಹೂಂ' ಎಂದವರ ಪಟ್ಟಿಯಲ್ಲಿ ಹೆಣ್ಣು ಹೆಸರುಗಳನ್ನೂ ಹಾಕಿದಾಗ 'ಎರಡು ಜಡೆಗಳ' ಉದಾಹರಣೆಯ ಸಮೇತ ಮುಖ್ಯಸ್ಥರ ಮೇಲೆ ಅನುಕಂಪ ಹರಿದುಬಂತು. ಜೊತೆಗೆ 'ಹೂಂ' ಪಟ್ಟಿಯಲ್ಲಿ ಇರಬಹುದಾದ ಹೆಣ್ಣುಗಳ ಮೇಲೆ 'ಅಯ್ಯೋ ಪಾಪ, ಎಷ್ಟು ಚೆನ್ನಾಗಿ ಹೊಂದಿಕೊಳ್ಳುತ್ತಾರೆ' ಎನ್ನುವ ಮೆಚ್ಚುಗೆಯೂ ಬಂತು. 'ಊಹೂಂ' ಎಂದವರ ಕುರಿತು 'ಅಲ್ಲಾ, ಹೆಣ್ಣು ಮಕ್ಕಳಾಗಿ ಅಷ್ಟು ಮಾತಾಡುವುದೇ? ಎಷ್ಟು ಧೈರ್ಯ? ಏನು ಮಾಡಿದರೂ ನಮಗೆ ಆ ರೀತಿ ಮಾತಾಡಲು ಬರುವುದಿಲ್ಲ' ಎಂದು ಉಳಿದ ಹೆಣ್ಣುಗಳೇ ಟೀಕಿಸಿದರೆಂಬಲ್ಲಿಗೆ ದೇವೀಪುರಾಣದ ಮತ್ತೊಂದು ಅಧ್ಯಾಯವು ಮುಗಿಯಿತು. ಈ 'ಇಡೀ ಉದಾಹರಣೆಯೇ ಕಾಲ್ಪನಿಕ' ಎನ್ನುತ್ತೀರಾ, ಇರಬಹುದು! ನೈಜವಾಗಿ ನಡೆಯುವುದಿಲ್ಲ ಎನ್ನುತ್ತೀರಾ?

ಆತ್ಮವಿಶ್ವಾಸವು ಗಂಡಸಿಗೆ ಅಭಿಮಾನವೆಂದು ಪುರಸ್ಕೃತ, ಹೆಂಗಸಿಗೆ ಅಹಂಕಾರವೆಂದು ತಿರಸ್ಕೃತ!

ಮೊನ್ನೆ ಕಛೇರಿಯಲ್ಲಿ 'ಮಹಿಳೆಯರ ಕೂಟ'. ವಿವಿಧ ಹುದ್ದೆಗಳಲ್ಲಿರುವ, ವಿವಿಧ ಹಿನ್ನೆಲೆಗಳಿಂದ ಬಂದ ಹೆಣ್ಣುಗಳು ತಮ್ಮ ಮುಂದಿರುವ ಸವಾಲುಗಳನ್ನು, ತಮ್ಮ ಗೊಂದಲಗಳನ್ನು ಹಂಚಿಕೊಳ್ಳುವ ಒಂದು ವೇದಿಕೆ. ಹೊಸದಾಗಿ ಬಂದ ಮಹಿಳಾ ಸಿ.ಟಿ.ಓ.ಗೆ ತನ್ನ ದಕ್ಷತೆ ಮತ್ತು ಕ್ಷಮತೆಯನ್ನು ಸಾಬೀತು ಮಾಡುವುದರ ಜೊತೆ ತನ್ನ ತಾಂತ್ರಿಕ ನಿಪುಣತೆಯನ್ನೂ ಕೂಡ ನಿರೂಪಿಸಬೇಕಾದ ಅನಿವಾರ್ಯ. A male CTO is assumed to be technically sound, A female CTO is assumed to be technically not so good! ಅಲ್ಲಿ ಚರ್ಚೆಗೆ ಬಂದ ಒಂದು ವಿಷಯ – ಮದುವೆ, ಮನೆ, ಮಕ್ಕಳ ಜೊತೆ ಹೊರಗಿನ ಕೆಲಸವನ್ನೂ ನಿಭಾಯಿಸಿಕೊಂಡು, ಉನ್ನತ ಸ್ಥಾನಕ್ಕೇರಿದರೂ 'ಕಛೇರಿಯ ಕಿರೀಟ ಮನೆಯಲ್ಲಿ ಬೇಡ, ಮನೆಯಲ್ಲಿ ನೀನೊಬ್ಬ ಗೃಹಿಣಿ. ಮೊದಲು ಹಾಲು ತಾ' ಎನ್ನುವ ಹಿತೋಪದೇಶ. ಇದು ನಮ್ರತೆಯ ವಿಷಯವೇ ಆದರೂ, ಮಗಳಿಗೆ ಕೊಟ್ಟ ಅದೇ ಉಪದೇಶವನ್ನು ಮಗನಿಗೂ ಕೊಡುವರೇ ಎನ್ನುವುದು ಪ್ರಶ್ನೆ. ಕಛೇರಿಯಲ್ಲಿ ಆ ರೀತಿಯ ಉನ್ನತ ಮಟ್ಟಕ್ಕೇರದಿದ್ದರೂ, ಸ್ವಾವಲಂಬಿಯಾಗುವ ಹುಮ್ಮಸ್ಸಿನಲ್ಲಿ ಕೆಲಸ ಮಾಡುತ್ತಾ ದೈನಂದಿನ ಜಂಜಾಟಗಳಲ್ಲಿ ಮುಳುಗಿ Superwoman syndromeನಲ್ಲಿ ಸಿಕ್ಕುಬಿದ್ದಿರುವ ಉಳಿದ ಮಹಿಳೆಯರಿಗೆ ಇದರಿಂದ ದೊರಕಿದ್ದೇನು?

ಇದು ಕೇವಲ ಯಾವುದೋ ಪುರಾತನ ಕಾಲದ, ಅಥವಾ ಯಾವುದೋ ಒಂದು ದೇಶ, ಧರ್ಮ, ಜನಾಂಗ ಅಥವಾ ವರ್ಗದ ಸಮಸ್ಯೆಯಾಗಿದೆಯೇ? ಚಿಕಿತ್ಸಕ ದೃಷ್ಟಿಯಿಂದ ವಿಶ್ಲೇಷಿಸಿದರೆ ಇದು ಸಾರ್ವಕಾಲಿಕ, ಸಾರ್ವತ್ರಿಕ ಸಮಸ್ಯೆಯಾಗಿಯೇ ಕಾಣುತ್ತದೆ. ಆಧುನಿಕರಾಗಿ ನಾವು ಇದನ್ನೆಲ್ಲಾ ಮೀರಿದ್ದೇವೆ ಎನ್ನುವವರಲ್ಲೂ ಅಪ್ರಜ್ಞಾಪೂರ್ವಕವಾಗಿ ವಿರೋಧಾಭಾಸ ಇರುವುದು ಕಂಡುಬರುತ್ತದೆ.

ಇತ್ತೀಚೆಗೆ ಭಾರತಕ್ಕೆ ಹೋಗಿ ಬಂದ ಅಮೆರಿಕನ್ ಸಹೋದ್ಯೋಗಿಯೊಬ್ಬಳು ತನ್ನ ಪ್ರವಾಸದ ಅನುಭವಗಳನ್ನು ಹೇಳಿದಳು. ಸೀರೆ ಉಟ್ಟು ಕಚೇರಿಗೆ ಹೋದಾಗ ಸಿಕ್ಕ ಮರ್ಯಾದೆಯೂ, ಶಾಪಿಂಗ್ ಮತ್ತು ತಿರುಗಾಟದಲ್ಲಿ ಪರಂಗಿ ಹೆಣ್ಣೆಂದು ಮೈಕೈತಾಗಿಸಿದ ವಿರೋಧಾಭಾಸಗಳೂ ಅವಳನ್ನು ಚಕಿತಳಾಗಿಸಿದ್ದವು. ನಿಜವೇ, "ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇ ತತ್ರ ದೇವತಾಃ। ಯತ್ರೈತಾಸ್ತು ನ ಪೂಜಂತೇ ಸರ್ವಾಸ್ತತ್ರಾ ಫಲಾಃ ಕ್ರಿಯಾಃ" ಎಂದ ಮನುಸ್ಮೃತಿಯಲ್ಲಿ "ಪಿತಾ ರಕ್ಷತಿ ಕೌಮಾರೇ ಭರ್ತಾ ರಕ್ಷತಿ ಯೌವನೇ। ರಕ್ಷಂತಿ ಸ್ಥಾವಿರೇ ಪುತ್ರಾಃ ನ ಸ್ತ್ರೀ ಸ್ವಾತಂತ್ರ್ಯಮರ್ಹತಿ" ಎನ್ನುವ ಉಲ್ಲೇಖವೂ ಕಂಡುಬರುತ್ತದೆ! ಇದನ್ನು ತಪ್ಪಾಗಿ ಅರ್ಥೈಸಲಾಗಿದೆ ಎನ್ನುವ ವಾದಗಳೂ ಹೇರಳವಾಗಿವೆ. ಆದರೆ, ಖೇದಕರವಾದ ಸಂಗತಿಯೆಂದರೆ ಈ ಸಮರ್ಥನೆಗಳಲ್ಲೂ ಅವಳು ಹೆಚ್ಚು ಕಾಣಸಿಗುವುದು "ಹೊನ್ನು, ಮಣ್ಣು"ಗಳೆಂಬ ಭೋಗವಸ್ತುಗಳ ಸಾಲಿನಲ್ಲಿಯೇ ಹೊರತು ಅವಳಿಗೆ ಸ್ವತಂತ್ರ ಅಸ್ತಿತ್ವವಿಲ್ಲ. 'ನಾರೀಸ್ತನಭರ ನಾಭೀದೇಶಂ' ನೋಡುವುದರಿಂದ

ಪುರುಷನಿಗೆ ಮೋಹಾವೇಶವಾಗುತ್ತದೆ, 'ತತ್ತ್ವಮಸಿ' ಎನ್ನುವ ಆತ್ಮಬೋಧವು ಪುರುಷನಿಗೆ ಮಾತ್ರ ಅದು ಹೇಗೆ ಸೀಮಿತವಾಯಿತೋ?

ಕೇವಲ ಸನಾತನ ಧರ್ಮದ ಸ್ತ್ರೀಯರಿಗೆ ಮಾತ್ರ ಈ ದುಃಸ್ಥಿತಿಯೆಂದೇನಿಲ್ಲ. ಇಡೀ ಜಗತ್ತಿನ ಯಾವುದೇ ಮೂಲೆಯಲ್ಲಿ ಹುಡುಕಿದರೂ ಅವಳ ಉಪಸ್ಥಿತಿ ಕೇವಲ ಆಜ್ಞಾಧಾರಕಳೆಂದೋ ಅಥವಾ ಭೋಗವಸ್ತುವೆಂದೋ! ಧಾರ್ಮಿಕ, ಆರ್ಥಿಕ, ಸಾಮಾಜಿಕ, ಲೈಂಗಿಕ, ಸಾಹಿತ್ಯಿಕ, ಸಾಂಸ್ಕೃತಿಕವಾಗಿ... ಹೀಗೆ ಎಲ್ಲ ರಂಗಗಳಲ್ಲಿಯೂ ಇಲ್ಲಿಯವರೆಗೂ ಅವಳದು "Second Sex"! ("One is not born, but rather becomes, a woman." - Simone De Beauvoir') ಮುಸ್ಲಿಂ ಮಹಿಳೆಯರ ಸಂಕಟಗಳು ಇಡೀ ಜಗತ್ತಿಗೆ ತಿಳಿದಿರುವುದೇ ಆಗಿದೆ. ಇನ್ನು ಚರ್ಚುಗಳ ಲಿಂಗ ತಾರತಮ್ಯವೂ ಹೊಸ ವಿಷಯವೇನಲ್ಲ. ಒಟ್ಟಿನಲ್ಲಿ, ಸ್ತ್ರೀಸಂಕೋಲೆಯ ಸರಪಣಿಯನ್ನು ಅವಳ ಗರ್ಭಕ್ಕೂ ಸೇರಿಸಿ ಹೆಣೆದು ಬಿಗಿಯುವುದರಲ್ಲಿ ಯಾವ ಧರ್ಮ, ದೇಶಗಳೂ ಹಿಂದೆ ಬಿದ್ದಿಲ್ಲ!

ಇದು ಮೇಲೆ ಹೇಳಿದ ಅಮೇರಿಕನ್ ಸಹೋದ್ಯೋಗಿಯು ಕಂಡುಕೊಂಡ ಸತ್ಯವೂ ಕೂಡ. ತನ್ನ ಜನ್ಮಭೂಮಿಯಾದ ಅಮೆರಿಕೆಯ ಮಹಿಳೆಯರ ಪರಿಸ್ಥಿತಿಯೂ ಅವಳಿಗೆ ಗೊತ್ತು. ಪ್ರಜಾಪ್ರಭುತ್ವದ ಅತ್ಯುತ್ತಮ ನಿದರ್ಶನ, ವ್ಯಕ್ತಿಸ್ವಾತಂತ್ರ್ಯದ ಶಿಖರವೆಂದುಕೊಂಡಿರುವ ಅವಳ ದೇಶದಲ್ಲಿ ಇಲ್ಲಿಯವರೆಗೆ ಒಬ್ಬ ಮಹಿಳೆಯೂ ಅಧ್ಯಕ್ಷೆಯಾಗಿಲ್ಲ! ಬಹು ಕಾಲದವರೆಗೆ ಇಲ್ಲಿಯ ಮಹಿಳೆಯರಿಗೆ ಮತದಾನದ ಹಕ್ಕೇ ಇರಲಿಲ್ಲ, ಪ್ರತಿಷ್ಠಿತ ವಿಶ್ವವಿದ್ಯಾಲಯಗಳಲ್ಲಿ ಪ್ರವೇಶವೂ ಇರಲಿಲ್ಲ. ಅಷ್ಟೇ ಏಕೆ, ಇತ್ತೀಚೆಗೆ ಹೆಣ್ಣಿನ ಕುರಿತು ಅತಿ ನಿಕೃಷ್ಟವಾಗಿ ಮಾತಾಡಿದವನೂ ಆರಿಸಿಬಂದ ಅಧ್ಯಕ್ಷನಾಗಿ, ಎದುರಾಳಿ ಹೆಣ್ಣಾದ್ದರಿಂದ! ಜಗತ್ತಿನ ಅತಿಬಲಿಷ್ಠ ರಾಷ್ಟ್ರವೊಂದಕ್ಕೆ ಯಃಕಶ್ಚಿತ್ ಸ್ತ್ರೀಯೊಬ್ಬಳು ಅಧ್ಯಕ್ಷಳಾಗುವುದೆಂದರೇನು? ತೃತೀಯ ಜಗತ್ತಿನಲ್ಲಿ ಆಗಿಬಿಟ್ಟರೇನು, ದೊಡ್ಡ ವಿಷಯವೇ! ಓಹ್ ಜೀಸಸ್! ಮತದಾರರು ಕಾಪಾಡಿದರು!

ಆರ್ಥಿಕ, ಸಾಮಾಜಿಕವಾಗಿ ಮಹಿಳೆಯರ ಪರಿಸ್ಥಿತಿ ತಿಳಿದುದೇ ಆಗಿದೆ. ಅದನ್ನು ಮತ್ತೆ ಮತ್ತೆ ಮಾತಾಡುವುದರಲ್ಲಿ ಈಗ ಯಾವ ಅರ್ಥವೂ ಉಳಿದಿಲ್ಲ. ಇನ್ನು ಲೈಂಗಿಕ ದೌರ್ಜನ್ಯದ ವಿಷಯ ಮಾತಾಡುವುದೂ ನಿಷಿದ್ಧವೇ! ಎಲ್ಲ ಕಾಲದ ಯುದ್ಧಗಳಲ್ಲೂ ಹೆಣ್ಣಿನದು ಜೀವಂತ ನರಕ. ಈ ಘೋರಗಳಲ್ಲಿ ಸತಿಯಾದವರೆಷ್ಟು, ಸೈನಿಕರ ಲೈಂಗಿಕದಾಹಕ್ಕೆ ಬಲಿಯಾದವರೆಷ್ಟು? ಹೆಣ್ಣಿನ ದೇಹವನ್ನು ಭೋಗಿಸುವುದರಿಂದ ಒಂದು ಕುಟುಂಬ, ಕುಲ ಮತ್ತು ರಾಜ್ಯವನ್ನು ಆಳಬಹುದೆಂಬ ಹೇಯ ಕ್ರೌರ್ಯಕ್ಕೆ ಎಲ್ಲಿಯೂ ಎಂದಿಗೂ ಯಾವ ಮಿತಿಯೂ ಇಲ್ಲ. ದುರದೃಷ್ಟವಶಾತ್ ಈ ಸಂಗತಿ ಪುರಾಣ, ಇತಿಹಾಸಗಳೊಂದಿಗೆ ವಾಸ್ತವದಲ್ಲೂ ಅಡೆತಡೆಯಿಲ್ಲದೆ ಸಾಗಿದೆ. ಬಲಿಪಶುವೇ ಶಿಕ್ಷೆ ಅನುಭವಿಸುವ ಅತ್ಯಾಚಾರ ಪ್ರಕರಣಗಳು, ಕನಿಷ್ಠ ಘನತೆಯನ್ನೂ ಕರುಣಿಸದ ನ್ಯಾಯಾಲಯಗಳೂ, ಹುಚ್ಚುಪ್ರೇಮವನ್ನು ಒಪ್ಪದಿದ್ದರೆ ನಡೆಯುವ ಆಸಿಡ್ ದಾಳಿಗಳೂ ಒಂದೇ, ಎರಡೇ ಈ ಬೀಭತ್ಸಗಳು. ಪುರುಷ ಪ್ರಾಮುಖ್ಯತೆಯ ಹಿನ್ನೆಲೆ, ಸಾಮಾಜಿಕ ಕಾರಣಗಳು ಏನೇ ಇದ್ದರೂ ಈ

ದಬ್ಬಾಳಿಕೆಯನ್ನು ಸಹಿಸಲು ಸಾಧ್ಯವೇ ಇಲ್ಲ. ವೈಜ್ಞಾನಿಕವಾಗಿ, ವೈಚಾರಿಕವಾಗಿ ಮುನ್ನಡೆಯುತ್ತಾ ಸಾಗಿರುವ ಮನುಜಕುಲ ಮಾನವಿಕವಾಗಿ ಅದೇಕೆ ಇಷ್ಟೊಂದು ಹಿಂದೆ?

ಲೈಂಗಿಕ ದೌರ್ಜನ್ಯದ ಮುಖಗಳು ಹಲವು. ಆಂಗಿಕ ಬಲಾತ್ಕಾರ ಒಂದೆಡೆಯಾದರೆ, ಸದ್ದಿಲ್ಲದೇ ನಡೆಯುವ ಕಿರುಕುಳಗಳು ಸಾವಿರಾರು. ಬೈಗುಳ ಪದಗಳನ್ನು ನೋಡಿ... ತಾಯಿ, ಅಕ್ಕ, ಹೆಂಡತಿ.. ಒಟ್ಟಿನಲ್ಲಿ ಹೆಣ್ಣನ್ನು ನಿಂದಿಸುವ ಪದಗಳೇ! ಬೆದರಿಕೆಗಳು– ಈ ರೀತಿ ಮಾಡದಿದ್ದರೆ ಹೆಂಡತಿ, ಅಕ್ಕ–ತಂಗಿ, ಅಮ್ಮನಿಗೆ ಮಾನಭಂಗ, ಅತ್ಯಾಚಾರ! ಮಾನಭಂಗ– ಆ ಪದದಲ್ಲೇ ಇಂತಹ ವಿಪರ್ಯಾಸ, ತಪ್ಪು ಮಾಡಿದವರ ಮಾನವಲ್ಲವೇ ಹೋಗಬೇಕಿರುವುದು! ಇನ್ನು ಈ ಕಾಲದ ಹೊಸ ಅಪಾಯಗಳೆಂದರೆ– ಸ್ವಾತಂತ್ರ್ಯದ ಹೆಸರಿನಲ್ಲಿ ಅವಳೊಬ್ಬಳು ಪ್ರದರ್ಶನದ ಬೊಂಬೆ, Arm candy! ಬೆತ್ತಲೆ ಪೂಜೆ – ಬೆತ್ತಲೆ ನೃತ್ಯ – ಬೆತ್ತಲೆ ಮೆರವಣಿಗೆ ಇವೆಲ್ಲವೂ ವಿವಿಧ ರೀತಿಯ ಶೋಷಣೆಗಳೇ! ಸಿನೆಮಾಗಳಲ್ಲಿ ನಟೀಮಣಿಯರು ಬೀಚಿನಲ್ಲಿ ಈಜುಬಟ್ಟೆ ಧರಿಸುವುದು ಸಾಂದರ್ಭಿಕ ವ್ಯಕ್ತಿಸ್ವಾತಂತ್ರ್ಯ–ವೆನ್ನುವುದು ನಿಜವೇ ಆದರೂ, ಅಲ್ಲಿಯ ಕುಣಿತಗಳು ಯಾವ ಪುರುಷಾರ್ಥಕ್ಕೆ ಎನ್ನುವುದು ಮಾತ್ರ ಮುಚ್ಚಿಟ್ಟ ಗುಟ್ಟಲ್ಲ!

ಸಿನಿಮಾ ಮತ್ತು ಸಾಹಿತ್ಯ ಲೋಕದಲ್ಲಿ ಇಣುಕಿದರೆ ಅಲ್ಲಿಯ ಪರಿಸ್ಥಿತಿಯೂ ಭಿನ್ನವಾಗಿಲ್ಲ. ಹಿಂದಿನ ಕೆಲವು ಕ್ಲಾಸಿಕ್‌ಗಳನ್ನು 'ಸ್ತ್ರೀ ಸಂವೇದನೆ'ಯ ಬೂದುಗಾಜಿನಲ್ಲಿ ನೋಡಿದರೆ ನಿರಾಸೆಯೇ ಕಾದಿದೆ. ಸೀಮಿತ ಚೌಕಟ್ಟಿನಲ್ಲಿ ಸ್ತ್ರೀಯರನ್ನು ಬಂಧಿಸುವ, ದೈವತ್ವವನ್ನು ಆರೋಪಿಸಿ ಆಕಾಶಕ್ಕೇರಿಸಿ – ಇಲ್ಲವೇ ಮಾಯೆಯನ್ನಾಗಿಸಿ ಪಾತಾಳಕ್ಕಿಳಿಸುವ ಉದಾಹರಣೆಗಳೇ ಹೆಚ್ಚು ಸಿಗುತ್ತವೆ. ಅಹಂಕಾರಿ ಗಂಡಸನ್ನು ತ್ಯಾಗ, ಸಹನೆ, ಪ್ರೇಮದಿಂದ ಹೆಣ್ಣು ಒಲಿಸಿಕೊಳ್ಳಬೇಕು; ಅಹಂಕಾರಿ ಹೆಣ್ಣನ್ನು ದಂಡನೆ, ಅವಮಾನ, ಬಲಾತ್ಕಾರ ಮತ್ತು ನಿರ್ಲಕ್ಷ್ಯದಿಂದ ಗಂಡು ಪಳಗಿಸಬೇಕು! ಇದು ಎಲ್ಲ ಲೋಕದ ನಿಯಮ!! ಉದಾಹರಣೆಗಳನ್ನು ಹೆಸರಿಸುವುದು ಕಷ್ಟವಲ್ಲವಾದರೂ ಪಟ್ಟಿ ಬಲು ದೊಡ್ಡದೇ ಆಗುತ್ತದೆ. ಹಾಗೆಂದು ಇದಕ್ಕೆ ಅಪವಾದಗಳೂ ಇಲ್ಲವೆಂದಿಲ್ಲ – ಹಲವಾರು ಮಹಿಳೆಯರು ಮತ್ತು ಕೆಲವು ಪುರುಷರೂ ಕೂಡ ಸ್ತ್ರೀಯನ್ನು ಮಾನವತೆಯ ದೃಷ್ಟಿಯಿಂದ ಕಂಡಿದ್ದಾರೆ. 'ಹೆಣ್ಣು ಮಾಯೆಯಲ್ಲ' ಎಂದು ಸಾರಿದ ಅಲ್ಲಮನಿದ್ದಾನೆ, ಅಮೃತಮತಿಯನ್ನು ಅತ್ಯಂತ ಸಂಯಮದಿಂದ ಕಾಣುವ ಜನ್ನ 'ಸ್ತ್ರೀ ಚರಿತಮದೇಮ್? ಕಳೆಯಲರಿದು ಪೆಂಡಿರಕೃತಕಮ್' ಎಂದು ಸಾರಾಸಗಟಾಗಿ ಹೇಳಬಲ್ಲ ವಿರೋಧಾಭಾಸದವನೂ ಆಗಿದ್ದಾನೆ. ದ್ರೌಪದಿಯ ಮೂಲಕ 'ಸ್ತ್ರೀಮತವನುತ್ತರಿಸಲಾಗದೆ ಧರ್ಮಶಾಸ್ತ್ರದೊಳು?' ಎಂದು ಪ್ರಶ್ನಿಸಿದ ಕುಮಾರವ್ಯಾಸನೂ ಇದ್ದಾನೆ. 'ಪತಿಯ ಪಾದಾಂಬುಜದೊಳು ಭಕ್ತಿಗೈವುದು ಸತಿಯರ ಧರ್ಮದ ಸಾರ'ವೆಂದೊರೆದ ಸಂಚಿಯ ಹೊನ್ನಮ್ಮನ ಜೊತೆಜೊತೆಯೇ ಮೆಲುವಾಗಿಯೋ, ಗಟ್ಟಿದನಿಯಲ್ಲಿಯೋ ಪ್ರತಿರೋಧಿಸಿದವರೂ ಕಾಲಾನುಕಾಲದಲ್ಲಿ ಸೀಮಿತ ಸಂಖ್ಯೆಯಲ್ಲಿ ಕಂಡಿದ್ದಾರೆ. ಇಷ್ಟಾಗಿಯೂ ಸುಧಾರಣೆ ನಿರೀಕ್ಷಿಸಿದ ಮಟ್ಟದಲ್ಲಿಲ್ಲವೆಂದೇ ಹೇಳಬೇಕು.

ಈ ಎಲ್ಲಾ ಉದಾಹರಣೆ, ಆಲೋಚನೆ ಮತ್ತು ವಿಶ್ಲೇಷಣೆಗಳಲ್ಲಿ ಇರುವ ಬಲುದೊಡ್ಡ ಅಪಾಯವೆಂದರೆ– ಸ್ತ್ರೀವಾದ ಮತ್ತು ಸಮಾನತೆಯ ಪ್ರಶ್ನೆ ಬಂದೊಡನೆ 'ಪುರುಷದ್ವೇಷಿ' ಎನ್ನುವ ಹಣೆಪಟ್ಟಿ ಹಚ್ಚಿಬಿಡುವುದು. ಸ್ತ್ರೀವಾದವೆನ್ನುವುದು ಅತಿರೇಕಕ್ಕೆ ಹೋದ ಉದಾಹರಣೆಗಳೂ ಇಲ್ಲದಿಲ್ಲ. ತನ್ನ ಮೇಲಿನ ದೌರ್ಜನ್ಯವನ್ನು ನೆನೆಸಿಕೊಂಡು ಪ್ರಶ್ನಿಸುತ್ತಾ ಹೋದಾಗ ಮನಸ್ಸು ಕಹಿಯಾಗದೇ ವಿಧಿಯಿಲ್ಲ. ಆದರೆ, ಅದನ್ನೇ ನೆಪವಾಗಿಸಿಕೊಂಡು ಮತ್ತೊಂದು ಜೀವಿಯನ್ನು ಅಲಕ್ಷಿಸುವುದು ಕೂಡಾ ಅಹಂಕಾರವಾಗುತ್ತದೆ. ತನ್ನ ಮೇಲಿನ ಶೋಷಣೆಯನ್ನು ವಿರೋಧಿಸುತ್ತಾ ಮತ್ತೊಂದು ವರ್ಗವನ್ನು ದ್ವೇಷಿಸುವುದರಲ್ಲಿ ಯಾವುದೇ ಪ್ರಯೋಜನವಿಲ್ಲ. ಮೊದಲಿಗೆ ಈ ಸಮಾನತೆಯನ್ನು ಬೇಡುವುದು, ಕೊಡುವುದು, ಅದಕ್ಕಾಗಿ ಹೋರಾಡುವುದು.. ಇವೆಲ್ಲವೂ ವಿಷಾದನೀಯ!

ಈ ಸಮಸ್ಯೆಗೆ ಕಾರಣಗಳೇನು ಎಂದು ಯೋಚಿಸಿದರೆ ಬಹುತೇಕ ಜನರಿಗೆ ಇದರ ಅರಿವಿಲ್ಲದೇ ಇರುವುದೇ ಆಗಿದೆ. ನಾರಿಯರು Second Sex ಅಲ್ಲ ಎನ್ನುವ ತಿಳಿವಳಿಕೆ ಲಿಂಗಭೇದವಿಲ್ಲದೆ ಬರಬೇಕಿದೆ. ಈ ನಿಟ್ಟಿನಲ್ಲಿ ಮುಂದಿನ ಪೀಳಿಗೆ ಯೋಚಿಸುತ್ತಿರುವುದು ಒಳ್ಳೆಯ ಬೆಳವಣಿಗೆ. ಇನ್ನೊಂದು ಸಮಾಧಾನದ ಸಂಗತಿಯೆಂದರೆ ಅನೇಕರು ತಮ್ಮ ಆಲೋಚನೆಗಳಲ್ಲಿ, ನಡವಳಿಕೆಯಲ್ಲಿ, ಕಲೆಯಲ್ಲಿ, ಸಾಹಿತ್ಯ ಕೃತಿಗಳಲ್ಲಿ ಮತ್ತು ಸಿನಿಮಾಗಳಲ್ಲಿ ಈ ಸಂವೇದನೆಯನ್ನು ಸಕಾರಾತ್ಮಕವಾಗಿ ಪ್ರಕಟಿಸಿದ್ದಾರೆ. ಈ ಶಿಕ್ಷಣ ದೇಶ, ಧರ್ಮ, ವರ್ಗ ಮತ್ತು ಲಿಂಗಾತೀತವಾಗಿ ಅಕ್ಷರಸ್ಥರು, ಅನಕ್ಷರಸ್ಥರು, ಪ್ರತಿಯೊಬ್ಬರಿಗೂ ದೊರಕಬೇಕಿದೆ. "ಸ್ತ್ರೀಚರಿತಮದೇಮ್? ಕೃತಕಮಲ್ಲಂ!"

**ನೀನು ದೇವಿ**
**ನೀನು ಮಾಯೆ**
**ಹೊನ್ನ ಶೂಲ ಹೊಗಳಿಕೆ!**
**ಶತಮಾನಗಳ ಶೃಂಖಲೆ!?**

**ಒಮ್ಮೆ ಪೂಜ್ಯ**
**ಒಮ್ಮೆ ದಾಸ್ಯ**
**ಏಕೆ ಈ ಇಬ್ಬಗೆ?**
**ನಗುವುದೇ ಈ ಮರುಳಿಗೆ!?**

**ಹೊನ್ನು ಮಣ್ಣು ಸಾಲಿನಲ್ಲಿ**
**ನಿಲ್ಲಬೇಕೇ ಹೆಣ್ಣು?**
**ಜೀವಮಿಡಿತ ಭಾವಸೆಳೆತ**
**ತೆರೆಯಬಹುದೇ ಒಳಗಣ್ಣು!?**

**ಬೇಡ ದೇವಿಯ ಸಿಂಹಾಸನ**
**ಬೇಡ ಮಾಯೆಯ ಲಾಂಛನ**
**ವಿಶೇಷವಿಲ್ಲ ವಿಷಾದ ಸಲ್ಲ**
**ಇರಲಿ ಸಮಾನ ಸ್ಪಂದನ.**

ಒಂದು ದೇಶ, ಜನಾಂಗ, ಸಂಸ್ಕೃತಿಯನ್ನು ಅರಿಯಲು ಹೇಗೆ ಅಲ್ಲಿಯ ಭಾಷೆಯ ಅರಿವಿನ ಅಗತ್ಯವಿದೆಯೋ ಅದೇ ರೀತಿ ಹೆಣ್ಣಿನ ಮನಸ್ಸನ್ನು ಅರಿಯಲು "ಸ್ತ್ರೀ ಸಂವೇದನೆ" ಎನ್ನುವ ಒಂದು ಭಾಷೆಯ ಅಗತ್ಯವಿದೆ. ಅದರ ಸೊಬಗು, ಲಯ, ಲಿಪಿ ಮತ್ತು ವ್ಯಾಕರಣದ ಜೊತೆಗೆ ಭಾವದ ಹದ ತಿಳಿದಾಗ ಅವಳು ದೇವಿ, ಮಾಯೆಯ ರೂಪಕ್ಕೆ ಸೀಮಿತಳಾಗದೆ ಸಹಜ ರಾಗದ್ವೇಷಗಳಿಂದ ಕೂಡಿದ ಸಹಜೀವಿಯಾಗಿ ಸ್ವೀಕೃತಳಾಗುತ್ತಾಳೆ. ಮತ್ತು ಅವಳು ಬಯಸುವುದು ಕೇವಲ ಅಷ್ಟನ್ನು ಮಾತ್ರ!

ಈ ಜೀವಪರ ಸಂವೇದನೆಯ ಪಟ್ಟಕದ ಮೂಲಕ ಹಾದುಬಂದ ಹೊಸ ಅರಿವಿನ ವರ್ಣಪಟಲ ಜೀವಿಯೊಂದು ಲಿಂಗಾತೀತವಾಗಿ ತನ್ನತನವನ್ನು ಕಂಡುಕೊಳ್ಳಲು ನೆರವಾಗಲಿ.



# ಶೋಷಿತ ಹೆಣ್ಣಿನ ಪುನಶ್ಚೇತನ:
# ಸವಾಲುಗಳ ಅವಲೋಕನ

**ರವಿ ಗೋಪಾಲರಾವ್**
San Jose, California

*

ಅವಳು ಜನಿಸಿದ್ದೇ ಬಡತನದಲ್ಲಿ. ಹಿಂದೂ ಸಮಾಜದ ಅಸ್ಪೃಶ್ಯತೆಯ ತುಚ್ಛ, ನಿರ್ಗತಿಕ ಸಂಸಾರದಲ್ಲಿ. ಸಹಿಸಲಾರದ ಅತ್ಯಾಚಾರ, ದೌರ್ಜನ್ಯ, ಅಸಹಾಯಕತೆಯಲ್ಲೂ ಸಮಾಜದ ವಿರುದ್ಧ ಬಂಡೆದ್ದು ದುಷ್ಕೃತ್ಯ ಮಾಡಿದವರನ್ನು ತಾನೇ ಕೊಂದು ಸೇಡು ತೀರಿಸಿಕೊಂಡ ದಲಿತ ಹೆಣ್ಣು. ನ್ಯಾಯಕ್ಕೆ ತಲೆಬಗ್ಗಿ ಶರಣಾಗಿ, ಕಠಿಣ ಕಾರಾಗೃಹವನ್ನು ಅನುಭವಿಸಿದ ಧೀರ ಮಹಿಳೆ. ತನ್ನ ಮೂವತ್ತೇಳೇ ವರ್ಷಗಳ ಜೀವನದಲ್ಲಿ ಶೋಷಿತ ಹೆಣ್ಣಿನ ಸ್ಥಾನದಿಂದ ಅಂತ್ಯ ಪಡೆದು ಪುನಶ್ಚೇತನ ಗಳಿಸಿ ಶೋಷಿತ ಜನರ ಪ್ರತಿನಿಧಿಯಾಗಿ ರಾಜಕೀಯದಲ್ಲಿ ಮೆರೆದ ದಿಟ್ಟ ಹೆಣ್ಣು. ದುರದೃಷ್ಟವಶಾತ್ ಮೇಲ್ಜಾತಿಯ ದ್ವೇಷ ಅಭಿಯಾನದ ಗುಂಡಿಗೆ ಬಲಿಯಾದ ಅಭಾಗ್ಯ ಹೆಣ್ಣು. ಆದರೂ ಕೊನೆಯಲ್ಲಿ ಜೀವನದ ಅತ್ಯಂತ ವಿಷಾದಕರ ಸಂಗತಿ ಏನು ಮತ್ತು ಮುಂದಿನ ಜನ್ಮದಲ್ಲಿ ಏನಾಗಲು ಬಯಸುತ್ತೀರಿ ಎನ್ನುವ ಪ್ರಶ್ನೆಗಳಿಗೆ ಆಕೆ ಉತ್ತರಿಸಿದ್ದು, “ವಿದ್ಯೆ ಕಲಿಯಲು ಆಗಲಿಲ್ಲವೆಂಬ ವ್ಯಥೆ” ಮತ್ತು “ಏನೇ ಆದರೂ ಹೆಣ್ಣಾಗಿ ಮಾತ್ರ ಹುಟ್ಟಬಾರದೆಂಬ ಆಸೆ.” ಇದು ‘ದರೋಡೆಕೋರರ ರಾಣಿ’ ಎಂದೇ ಹೆಸರು ಪಡೆದ ಫೂಲನ್‌ದೇವಿಯ ಸಂಕ್ಷಿಪ್ತ ಜೀವನ ಯಾತ್ರೆ.

ಫೂಲನ್‌ದೇವಿಯ ಕತೆ ಯಾವುದೇ ರಸಿಕತೆಯಿಂದ ಕೂಡಿದ ಕತೆ ಅಲ್ಲ. ಬಹಳಷ್ಟು ಮಾನವ ನೋವುಗಳ ಕತೆ. ಒಂದು ಹೆಂಗಸಿನ ಸಂಘರ್ಷದ ಕತೆ. ಯಾವ ರೀತಿ ಫೂಲನ್‌ದೇವಿಯ ಕಥೆಯನ್ನು ಅರ್ಥ ಮಾಡಿಕೊಳ್ಳಬೇಕಾಗಿತ್ತೋ ಅದನ್ನು ಯಾರೂ ಅರ್ಥ ಮಾಡಿಕೊಳ್ಳಲೇ ಇಲ್ಲ ಎಂದರೆ ಬಹುಶಃ ತಪ್ಪಾಗಲಾರದು. ನಮ್ಮ ಇತಿಹಾಸದಲ್ಲಿ

ಆ ರೀತಿ ಸಂಘರ್ಷ ಅನುಭವಿಸುವ ವ್ಯಕ್ತಿಗಳು ಎಷ್ಟೋ ಜನರು ಬಂದು ಹೋಗುತ್ತಾರೆ, ಆದರೆ ಅವರನ್ನು ನಾವು ಮರೆತುಬಿಡುತ್ತೇವೆ. ಇತಿಹಾಸದಲ್ಲಿ ಉಳಿವವರು ಕೇವಲ ಒಂದೋ ಎರಡೋ ವ್ಯಕ್ತಿಗಳು. ಅಂತಹ ವ್ಯಕ್ತಿಯ ಕತೆಯನ್ನು ಆಧಾರವಾಗಿಟ್ಟು-ಕೊಂಡು ಬರೆದ ಲಘುಲೇಖನವಿದು.

ನಾನು ಫೂಲನ್‌ದೇವಿಯ ದಾರುಣ ಕತೆಯನ್ನು ಇಲ್ಲಿ ವಿವರಿಸಲು ಪ್ರಯತ್ನಿಸುವುದಿಲ್ಲ. ಏಕೆಂದರೆ ಈ ದಿಟ್ಟ ಮಹಿಳೆಯ ಆತ್ಮಚರಿತ್ರೆಯನ್ನು ಪುಸ್ತಕವಾಗಿ, ಚಲನಚಿತ್ರವಾಗಿ, ಕಿರುತೆರೆಯಲ್ಲಿ, ಜಾನಪದ ಗೀತೆಗಳಲ್ಲಿ, ನಾಟಕಗಳಲ್ಲಿ, ಚಿತ್ರಕಲೆಗಳಲ್ಲಿ, ಕರಕುಶಲ ವಸ್ತುಗಳ ಮೂಲಕ ಎಲ್ಲ ಮಾಧ್ಯಮದಲ್ಲೂ, ಪರದೇಶಗಳ ಮತ್ತು ಭಾರತದ ಶೈಕ್ಷಣಿಕ ಸಂಶೋಧಕರ ವಿಷಯಗಳಲ್ಲಿಯೂ, ತುಲನೆ ಮಾಡಿದ್ದಾರೆ. ಆದ್ದರಿಂದ ನಾನು ಇಲ್ಲಿ ಅವಳ ವ್ಯಕ್ತಿ ಚಿತ್ರಣವನ್ನೇ ನಿಮ್ಮ ಮುಂದಿಡುವುದರ ಜೊತೆಗೆ ಯಾವ ಹಂತದಲ್ಲಿ ಮತ್ತು ಹೇಗೆ ಅವಳು ತನ್ನ ಶೋಷಿತ ಸ್ಥಿತಿಯಿಂದ ಹೊರಬಂದು ಪುನಶ್ಚೇತನ ಗಳಿಸಿದಳು, ಆ ಪ್ರಕ್ರಿಯೆಯಲ್ಲಿ ಯಾವ ಸವಾಲುಗಳು ಉದ್ಭವಿಸುತ್ತವೆ ಎನ್ನುವುದರ ಅವಲೋಕನವನ್ನೇ ಈ ಲೇಖನದ ಗುರಿ ಮಾಡಿಕೊಂಡಿದ್ದೇನೆ. ಫೂಲನ್‌ದೇವಿಯು ಹೇಗೆ ಜಾತಿಯ ಕಳಂಕ, ಆರ್ಥಿಕ ಶೋಷಣೆ ಮತ್ತು ಲಿಂಗಭೇದಗಳಂಥ ವಿದ್ಯಮಾನಗಳಿಗೆ ಸ್ಪಂದಿಸಿದಳು ಮತ್ತು ತನ್ನದೇ ಪ್ರತಿರೋಧಕ ಸಿದ್ಧಾಂತಗಳನ್ನು ಅಳವಡಿಸಿಕೊಂಡಳು ಎಂದು ಅವಲೋಕಿಸುವ ಪ್ರಯತ್ನವನ್ನು ಕೂಡ ಮಾಡಿದ್ದೇನೆ.

**ಸವಾಲುಗಳು:**

ಶೋಷಣೆಗೊಳಗಾದ ಹೆಣ್ಣು ನ್ಯಾಯಗಳಿಸಲು ಪ್ರತೀಕಾರದ ಮಾರ್ಗದಲ್ಲಿ ನಡೆದರೆ ತಪ್ಪೇ? ಶೋಷಿತ ಹೆಣ್ಣು ಪುನಶ್ಚೇತನಗೊಂಡು ಗೌರವಾನ್ವಿತ ವ್ಯಕ್ತಿಯಾಗಬೇಕಾದರೆ ಪುರುಷರ ಮತ್ತು ಸಮಾಜದ ಬೆಂಬಲ ಬೇಕೇ? ಮಲ್ಲಾಹ್ ಮತ್ತು ಠಾಕೂರರ ಸಮಾಜದಲ್ಲಿ ಅತ್ಯಾಚಾರಗಳು ನಡೆಯುತ್ತಿದ್ದರೂ ಆ ಹಳ್ಳಿಯಲ್ಲಿ ಅದನ್ನು ಎದುರಿಸಲು ಯಾರೂ ಇರಲಿಲ್ಲವೇ? ಆ ಠಾಕೂರ್ ಸ್ತ್ರೀಯರು ಮತ್ತೊಬ್ಬ ಹೆಣ್ಣಿನ ಮೇಲಾದ ಅತ್ಯಾಚಾರಗಳ ಬಗ್ಗೆ ಏಕೆ ಸುಮ್ಮನಿದ್ದರು? ಅಥವಾ ಅವರ ಧ್ವನಿ ಯಾರಿಗೂ ಕೇಳಿಸಲಿಲ್ಲವೇ? ಆ ಸಮಾಜದಲ್ಲಿ ಎಲ್ಲ ಮಹಿಳೆಯರೂ ದಲಿತರಂತೆಯೇ? ದಲಿತ ಮಹಿಳೆಯರು ಯಾವ ಕಾರಣಕ್ಕಾಗಿ ತಾವು ಅತ್ಯಾಚಾರಕ್ಕೆ ಒಳಗಾದರೂ ಬೇರೆಯವರೊಡನೆ ಹೇಳಿಕೊಳ್ಳುವುದಿಲ್ಲ? ಫೂಲನ್‌ದೇವಿಯ ಪ್ರತೀಕಾರದ ಹಿಂಸಾಕೃತ್ಯದಲ್ಲಿ ನೈತಿಕತೆಯ ನ್ಯಾಯ ಅದಲುಬದಲಾಗಿ ವಿಧವೆಯರಾದ ಅದೇ ಠಾಕೂರ ಸ್ತ್ರೀಯರು ಮತ್ತೊಮ್ಮೆ ಶೋಷಿತರಾದರೇ?

ಈ ಪ್ರಶ್ನೆಗಳಿಗೆ ಉತ್ತರ ಹುಡುಕಲು ಈ ಕೆಳಗಿನ ನಾಲ್ಕು ಮುಖ್ಯ ವಿವರಣೆಯನ್ನು ಕೊಡುವುದರ ಜೊತೆಗೆ ಫೂಲನ್‌ದೇವಿಯ ಅನನ್ಯ ಸಾಧನೆ ಮತ್ತು ಮನೋಗತವನ್ನು ಓದುಗರ ಮುಂದಿಟ್ಟಿದ್ದೇನೆ: ಶೋಷಿತ ದಲಿತ ಮಹಿಳೆ, ಅತ್ಯಾಚಾರಿ ಪುರುಷರು, ಪ್ರತೀಕಾರ ಮತ್ತು ಪುನಃಶ್ಚೇತನ ಗಳಿಸಿದ ಹೆಣ್ಣು.

**ಶೋಷಿತ ದಲಿತ ಮಹಿಳೆ:**

ಯಾವ ಸಮಾಜವು ಹೆಣ್ಣಿಗೆ ತಾನು ಮತ್ತೆ ಹೆಣ್ಣಾಗಿ ಮಾತ್ರ ಹುಟ್ಟಬಾರದೆಂಬ ಆಶಯ ಮೂಡಿಸುತ್ತದೆಯೋ ಅಂತಹ ಸಮಾಜ ತನ್ನೊಳಗಿರುವ ಕಟು ಸತ್ಯವನ್ನು ವ್ಯಾಖ್ಯಾನಿಸಲು ಅನರ್ಹ ಸಮಾಜ ಎಂದು ಹೇಳಬಹುದು. ಅಂತಹುದೇ ಸಮುದಾಯದಲ್ಲಿ ಹುಟ್ಟಿದ್ದು ಫೂಲನ್‌ದೇವಿ. ಸ್ವಾತಂತ್ರ್ಯಾನಂತರ ಬೇರೆಡೆಗಿಂತ ಹೆಚ್ಚಾಗಿ ಬಿಹಾರ ಮತ್ತು ಉತ್ತರ ಪ್ರದೇಶ ರಾಜ್ಯಗಳ ಕೆಲವೊಂದು ಪ್ರಾಂತಗಳಲ್ಲಿ ದಲಿತರ ಸ್ಥಿತಿ, ಅದರಲ್ಲೂ ದಲಿತ ಮಹಿಳೆಯರ ಸ್ಥಿತಿ ಶೋಚನೀಯವೇ ಆಗಿತ್ತು. ಸತ್ಯ ಹೇಳಬೇಕೆಂದರೆ ಅಲ್ಲಿ ಮಹಿಳೆಯರೇ ದಲಿತರು. ದಲಿತ ಸಮಾಜವೇ ಮಹಿಳೆಯರನ್ನು ತಮ್ಮ ಮೇಲಾದ ಅತ್ಯಾಚಾರ ಮತ್ತು ಹಿಂಸಾಚಾರಕ್ಕೆ ಅವರೇ ಜವಾಬ್ದಾರಿಯುತರೆಂದು ಹಿಂದಿನಿಂದಲೂ ಹೇಳುತ್ತಿರುವುದರ ಜೊತೆಗೆ ಅವರ ಅಶಕ್ತತೆ ಮತ್ತು ಅಶುದ್ಧತೆಯೇ ಕಳಂಕವೆಂದು ಸ್ವನಿಂದನೆಗೆ ಎಡೆ ಮಾಡಿಕೊಡುತ್ತದೆ. ಫೂಲನ್‌ದೇವಿ ಮತ್ತು ಇತರ ದಲಿತ ಸ್ತ್ರೀಯರ ಹೇಳಿಕೆಯ ಪ್ರಕಾರ, ಬಿಹಾರ್ ರಾಜ್ಯದಲ್ಲಿ ಮೇಲ್ಜಾತಿಯ ಪುರುಷರು ದಲಿತ ಹೆಣ್ಣು ಮಕ್ಕಳನ್ನು ಅವರ ತಂದೆ ತಾಯಿಗಳಿಂದ ಕಸಿದುಕೊಂಡು ಅತ್ಯಾಚಾರ ಅಥವಾ ಲೈಂಗಿಕ ಕಿರುಕುಳ ಕೊಡುವುದು ಬಹಳವೇ ಸಾಮಾನ್ಯ. ಅಷ್ಟೇ ಏಕೆ, ಮೇಲ್ಜಾತಿಯ ಪುರುಷರ ಮುಂದೆ ದಲಿತ ಮಹಿಳೆ ಸುಳಿದಾಡುವುದೇ ತಪ್ಪೆಂದು ತಮ್ಮ ಮಕ್ಕಳಿಗೆ ಬೋಧಿಸುವ ದಲಿತ ಮಹಿಳೆಯರೂ ಸಾಮಾನ್ಯ. ಇಂತಹ ಘಟನೆಗಳು ಮತ್ತು ಮನೋಭಾವ, ಸಮಾಜದಲ್ಲಿ ದಲಿತ ಮಹಿಳೆಯರ ಕೆಳಸ್ಥಿತಿ ಮತ್ತು ಮಾನವ ಘನತೆಗೆ ಮತ್ತೊಬ್ಬ ಮಾನವ ತೋರಿಸುವ ಉಪೇಕ್ಷೆಗಳಿಗೆ ಸಾಕ್ಷ್ಯ ಒದಗಿಸಿವೆ. ಆದರೆ ಫೂಲನ್‌ದೇವಿಯ ಬಹುತೇಕ ವರುಷಗಳೇ ಈ ರೀತಿಯ ಸಮುದಾಯದಲ್ಲಿ ಕಳೆದುಹೋದರೂ, ಅವಳ ಶೋಷಿತ ಜೀವನದ ಬಗ್ಗೆ ಸಕಾರಾತ್ಮಕ ತಿರುವು ಕೊಟ್ಟ ಕೆಲವು ದಲಿತ ಸಮುದಾಯದ ಜಾನಪದ ಗೀತೆಗಳನ್ನು ಕೇಳಿದಾಗ ಅವಳ ಹುಟ್ಟು, ಬಾಲ್ಯ ಮತ್ತು ಹರೆಯದ ಬಗ್ಗೆ ಒಂದು ನಿಜ ಜೀವನದ "ದೇವಿ" ಚಿತ್ರಣ ಮೂಡುತ್ತದೆ:

**"ಸುಮ್ಮನೆ ಫೂಲನ್‌ದೇವಿ ಹುಟ್ಟುವುದಿಲ್ಲ,**
**ಸುಮ್ಮನೆ ಎಲ್ಲರೂ ಫೂಲನ್‌ದೇವಿ ಆಗಲು ಸಾಧ್ಯವಿಲ್ಲ**
**ಒಂದಲ್ಲ ನೂರು ಬಾರಿ ಹುಡುಕು**
**ನದಿ, ನದಿಯಲ್ಲಿ ಸಿಗದಿದ್ದರೆ ಸಮುದ್ರದಲ್ಲಿ ಹುಡುಕು**
**ಬೀಸಿದ ಕಲ್ಲಿನ ರಭಸದಿಂದಲೇ ಒಡೆಯುವುದು ಗಾಜು**
**ಒಡೆಯಲಿ ಕಲ್ಲು ಗಾಜಿನ ರಭಸಕೆ**
**ಅಂತಹದನು ಹುಡುಕು**
**ಸಿಗುವಳು ಫೂಲನ್‌ದೇವಿ"**

ಮತ್ತೆ ಕೆಲವು ಜನಪದ ಗೀತೆಗಳು ಆಕೆಯನ್ನು ನ್ಯಾಯದ ಸಂಕೇತವಾಗಿ ಬಳಸಿಕೊಂಡಿವೆ. ವಾಸ್ತವ ಮತ್ತು ಕಲ್ಪನೆಯನ್ನು ಸೇರಿಸಿ ಹೆಣೆದಿರುವ ಇಂತಹ ಗೀತೆಗಳು, ನಡೆದಿರುವ ಇತಿಹಾಸವನ್ನೇ ಹಾಡಾಗಿ ಹರಿಯಬಿಟ್ಟಿವೆ. ಹಾಗಾಗಿ ಒಂದು ಸಾದೃಶ್ಯ ದಲಿತ ಸಮಾಜವನ್ನೇ ನಿರ್ಮಿಸಿ ಫೂಲನ್ ದೇವಿಯನ್ನು ವೀರ ಸ್ತ್ರೀಯೆಂದು ಸಾರುತ್ತವೆ. ಕತೆಯ ಪ್ರತಿ ಹಂತದಲ್ಲೂ ಅವಳ ಹಿಂದಿನ ವಾಸ್ತವ ಕತೆಗಿಂತಲೂ ಅವಳ ಭವಿಷ್ಯತ್ಕಾಲದ ಪುನರ್ನಿರ್ಮಾಣವೇ ಮುಖ್ಯವಾಗಿ ಕಾಣುತ್ತವೆ. ಉದಾಹರಣೆಗೆ, ಅವಳು ಯಾರಿಗೂ ಭಯಪಡುವುದಿಲ್ಲ ಮತ್ತು ಅವಳು ಎಂದಿಗೂ ಅನ್ಯಾಯವನ್ನು ಸಹಿಸುವುದಿಲ್ಲ ಎನ್ನುವ ಭೂತ-ಭವಿಷ್ಯ ಕಾಲದ ಒಂದಕ್ಕೊಂದು ಪೂರಕವಾಗುವ ಘಟನೆಗಳನ್ನು ಒತ್ತಿಹೇಳುತ್ತವೆ. ವಾಸ್ತವದಲ್ಲಿ ಫೂಲನ್‌ದೇವಿಯ ನೈಜ ಗುಣವೇ ಬೇರೆ.

ಅನಕ್ಷರಸ್ಥಳಾದ ಫೂಲನ್‌ದೇವಿ ದಲಿತ ಮಹಿಳೆಯರ ಬಗ್ಗೆ ತನ್ನ ವೈಯಕ್ತಿಕ ಅನಿಸಿಕೆಗಳನ್ನು ವ್ಯಕ್ತಪಡಿಸುತ್ತಾ "ದಲಿತ ಮಹಿಳೆಯರು ಕೋಮಲ, ಮಮತೆಯುಳ್ಳವರು! ಎಷ್ಟೊಂದು ದಯಾಮಯಿಗಳು ಅಂದರೆ ಬೇರೆಯವರಿಗೆ ಭಾವಪೂರ್ವಕವಾಗಿ ತಮ್ಮ ಪ್ರಾಣವನ್ನೇ ಕೊಡಬಲ್ಲವರವರು. ಮಹಿಳೆಯರ ಸಂಪತ್ತು ಅವಳ ಮಾನ. ಯಾವಾಗ ಅದನ್ನು ಬೇರೆಯವರು ಕಸಿದುಕೊಳ್ಳುತ್ತಾರೋ ಆಗ ಮಹಿಳೆಯರಿಗೆ ಬೆಂಕಿಯಲ್ಲಿ ಬೀಳುವುದು, ಪ್ರಾಣಹತ್ಯೆ ಮಾಡಿಕೊಳ್ಳುವ ಇಚ್ಛೆ, ಅಥವಾ ದುಷ್ಕರ್ಮಿಗಳನ್ನು ಕೊಂದುಬಿಡುವ ಯೋಚನೆಗಳು ಸಹಜ," ಎಂದು ಭಾವನಾತ್ಮಕವಾಗಿ ಹೇಳಿರುವುದು ಒಂದು ಮಹತ್ವವುಳ್ಳ ಸಂಗತಿ. ಏಕೆಂದರೆ ಆಕೆಯಲ್ಲಿ ಮಾನವ ಸಹಜವಾಗಿ ಸ್ಪಂದಿಸುವ ಮನೋಭಾವನೆಗಳೇ ಇರುವುದರ ಜೊತೆಗೆ ಆತ್ಮಗೌರವ ಕಾಪಾಡಿಕೊಳ್ಳಲು ತನ್ನ ಪ್ರಾಣವನ್ನೇ ಒತ್ತೆ ಇಟ್ಟು ದುಷ್ಕರ್ಮಿಗಳ ಮೇಲೆ ಪ್ರತೀಕಾರ ತೀರಿಸಿಕೊಳ್ಳುವ ದೃಢ ನಿಶ್ಚಯ ಕೂಡ ಇದೆ. ಈ ಕಾರಣಕ್ಕಾಗಿ ಫೂಲನ್‌ದೇವಿ ಹರೆಯದ ವಯಸ್ಸಿನಿಂದಲೂ ಒಂದೆಡೆ ಅಮಾಯಕ-ಳಾಗಿಯೂ ಮತ್ತೊಂದು ಸಂದರ್ಭಗಳಲ್ಲಿ ಮೇಲ್ಜಾತಿಯ ಪುರುಷರ ಮೇಲೆ ಬಂಡಾಯಗಾರ ಮನೋವೃತ್ತಿಯವಳಾಗಿಯೇ ಬೆಳೆದದ್ದು ಸ್ಪಷ್ಟವಾಗುತ್ತದೆ. ಈ ದ್ವಂದ್ವವೇ ಅವಳು ಮುಂದೆ ಬಂದೂಕು ಹಿಡಿದು ನಿರ್ದಯಿ ದರೋಡೆಕೋರಳಾದ ಕಾರಣಗಳಿಗೆ ಸೂಕ್ಷ್ಮ ಸೂಚನೆ ಕೊಡುತ್ತದೆ ಎಂದು ನಾವು ಯೋಚಿಸಿದರೆ ಬಹುಶಃ ತಪ್ಪಾಗಲಾರದು. ಏಕೆಂದರೆ ಅವಳ ಮೇಲೆ ಅತ್ಯಾಚಾರವೆಸಗಿದ ದುಷ್ಕರ್ಮಿಗಳೆಲ್ಲರೂ ಪುರುಷರೇ.

**ಅತ್ಯಾಚಾರಿ ಪುರುಷರು**

ಬಡತನ ಮತ್ತು ಆಸ್ತಿಯ ವಹಿವಾಟಿನಲ್ಲಿ ಸಿಕ್ಕಿಹಾಕಿಕೊಂಡ ತಂದೆ ತನ್ನ ಹನ್ನೊಂದು ವರ್ಷದ ಮಗಳನ್ನು ಮೂವತ್ತಮೂರು ವರ್ಷದ ವಿಧುರನೊಬ್ಬನಿಗೆ ಕನ್ಯಾದಾನದ ಹೆಸರಿನಲ್ಲಿ ಕೊಟ್ಟು ಮಗಳ ಜವಾಬ್ದಾರಿಯನ್ನು ಕೈ ತೊಳೆದುಕೊಳ್ಳುವುದು ದಲಿತ ಸಮುದಾಯಕ್ಕೆ ಹೊಸದೇನಲ್ಲ. ಆದರೆ ಫೂಲನ್‌ದೇವಿಯನ್ನು ಮದುವೆಯಾದ ಅತ್ಯಾಚಾರಿ

ಗಂಡು ತನ್ನ ಕಾಮುಕತೆಯನ್ನು ಪೂರೈಸಿಕೊಳ್ಳಲು ಮಾಡಿದ ಅಕೃತ್ಯಗಳ ಬಗ್ಗೆ ಬರೆಯುವುದು ಮತ್ತು ಓದುವುದೂ ಮೃದುಹೃದಯಗಳಿಗೆ ಮಾತ್ರವಲ್ಲ, ಕಟುಕರಿಗೂ ಸಾಧ್ಯವಿಲ್ಲ. ಆ ಕೃತ್ಯಗಳನ್ನನುಭವಿಸುವಾಗ ತಾನು ಗುಡಿಗಳ ಕಲ್ಲಿನ ಮೂರ್ತಿಗಳಂತಾಗಿಬಿಡಲಿ, ಯೋಚನೆಗಳೇ ಬರದಂತಾಗಲಿ, ಯಾವುದನ್ನೂ ಕೇಳದಂತಾಗಲಿ, ಯಾವುದನ್ನೂ ನೋಡದಂತಾಗಲಿ ಎಂದು ಆಶಿಸುವ ಬಾಲಕಿಯ ಆಕ್ರಂದನವನ್ನು ಯಾರೂ ಕೇಳಲು ಇರಲಿಲ್ಲ ಆ ಗಂಡನ ಮನೆಯಲ್ಲಿ. ಕೆಲವು ವರ್ಷಗಳ ನಂತರ ಗಂಡನ ಮನೆಯಿಂದ ತಪ್ಪಿಸಿಕೊಂಡು ಮನೆಗೆ ಹಿಂತಿರುಗಿದರೂ, ಹಳ್ಳಿಯ ಸರಪಂಚನ ಕಡೆಯವರು ಇಬ್ಬರು ಅವಳ ತಂದೆ, ತಾಯಿ, ಚಿಕ್ಕ ಸಹೋದರಿ ಮತ್ತು ಸಹೋದರನ ಮುಂದೆ, ಅವಳದೇ ಮನೆಯಲ್ಲಿ ಅತ್ಯಾಚಾರ ಮಾಡಿದ ಘೋರ ಕೃತ್ಯಕ್ಕೂ ಹಳ್ಳಿಯ ಜನ ಯಾರೂ ಹೆದರಿಕೆಯಿಂದ ಪೊಲೀಸರಿಗೆ ದೂರುಕೊಡಲು ಮುಂದೆ ಬರಲಿಲ್ಲ.

ಫೂಲನ್‌ದೇವಿಯ ಜೀವನದಲ್ಲಿ ಎಲ್ಲ ಪುರುಷರು ಅವಳನ್ನು ಭೋಗದ ವಸ್ತುವಾಗಿಯೇ ಕಂಡವರು; ಹನ್ನೊಂದು ವರ್ಷಕ್ಕೆ ಅವಳನ್ನು ಮದುವೆಯಾದ ಫೂಲನಳ ಅತ್ಯಾಚಾರಿ ಗಂಡ, ಹಳ್ಳಿಯ ಮುಖ್ಯಸ್ಥನ ಅತ್ಯಾಚಾರಿ ಪುತ್ರ, ಹಳ್ಳಿಯ ಅತ್ಯಾಚಾರಿ ಪೊಲೀಸರು, ಮೇಲ್ಜಾತಿಯ ದರೋಡೆಕೋರರ ಮುಖ್ಯಸ್ಥ ಅತ್ಯಾಚಾರಿ ಬಾಬು ಗುಜ್ಜರ್, ಅವಳನ್ನು ಅಪಹರಿಸಿ ಅತ್ಯಾಚಾರವೆಸಗಿದ ಠಾಕುರ್ ಶ್ರೀರಾಮ್ ಮತ್ತು ಲಾಲಾರಾಮ್‌ನ ಗ್ಯಾಂಗ್, ಎಲ್ಲರೂ ಅವಳ ಜೀವನವನ್ನು ಕನಿಕರದಲ್ಲಿ ಮುಳುಗಿಸಿದವರು. ಆದರೆ ಅವಳ ಹೃದಯವನ್ನು ಕಲ್ಲು ಮಾಡಿದ್ದು, ಬಹುಶಃ ಶ್ರೀರಾಮ್ ಮತ್ತು ಲಾಲಾರಾಮ್ ಅವಳನ್ನು ನಗ್ನ ಮಾಡಿ ಹಳ್ಳಿಯ ಕಿರುರಸ್ತೆಗಳಲ್ಲಿ ಎಲ್ಲರ ಮುಂದೆ ಓಡುವಂತೆ ಮಾಡಿದ ಘಟನೆ. ದಲಿತ ಹೆಣ್ಣಿನ ಮೇಲೆ ಕೊನೆಯೇ ಇಲ್ಲದ ಅತ್ಯಾಚಾರ ಮತ್ತು ಶಾರೀರಿಕ ದೌರ್ಜನ್ಯದಿಂದ ಮೇಲ್ಜಾತಿಯ ಗಂಡುಗಳು ಪಡೆದುಕೊಂಡಿದ್ದಾದರೂ ಏನು? ಪುರುಷಬಲದಿಂದ ಬಂಧಿಸಿದ ದಲಿತ ಹೆಣ್ಣಿನ ದೇಹವನ್ನು ತಮ್ಮ ಹತೋಟಿಯಲ್ಲಿ ಇಟ್ಟುಕೊಂಡು, ಸಮಾಜದ ಜಾತಿ ಪದ್ಧತಿಯ ಮೂಲಕ ಯಾರು ಪ್ರಬಲರು ಎನ್ನುವುದನ್ನು ಸ್ಥಾಪಿಸುವ ಒಂದು ದಾರುಣ ಕೃತ್ಯವನ್ನು ಮಾಡಿದರು ಅಷ್ಟೇ!

ಇಂತಹ ಪುರುಷರ ಮಧ್ಯೆ ತನ್ನ ಹರೆಯತನವನ್ನು ಕಳೆದ ಫೂಲನ್‌ದೇವಿಗೆ ಕ್ಷಣಕಾಲದ ನೆಮ್ಮದಿ ಸಿಕ್ಕಿದ್ದು ವಿಕ್ರಂ ಮಲ್ಲಾಹ್ ಎನ್ನುವ ಅವಳ ಜಾತಿಯ ದಲಿತನೊಬ್ಬನಿಂದ ಮಾತ್ರ. ಗಜ್ಜರ್ ಎನ್ನುವ ದರೋಡೆಕೋರರ ಗುಂಪಿನಲ್ಲಿ ಇದ್ದವನು ವಿಕ್ರಂ. ಅವನು ಅವಳ ವಿಶ್ವಾಸ ಗೆದ್ದು ಅವಳಿಗೆ ಬಂದೂಕ ಚಲಾಯಿಸುವುದು ಮತ್ತು ದರೋಡೆಕೋರರ ಜೀವನದ ಶೈಲಿಗೆ ಹೊಂದಿಕೊಳ್ಳಲು ಅವಳಿಗೆ ಸಹಾಯ ಮಾಡಿದ ವ್ಯಕ್ತಿ. ಅವರಿಬ್ಬರ ಮಧ್ಯೆ ಪ್ರಣಯದ ಜೊತೆ ಒಬ್ಬರಿಗೊಬ್ಬರು ಸಹಾಯ ಮಾಡುವ ಅನುಭೂತಿ ಬೆಳೆದಿತ್ತು. ಆದರೆ ಒಂದು ದಿನ ಮುಖ್ಯಸ್ಥ ಗಜ್ಜರ್ ಫೂಲನ್ ಮೇಲೆ ಅತ್ಯಾಚಾರವೆಸಗುವ ಸಮಯದಲ್ಲಿ ಕೋಪಗೊಂಡ ವಿಕ್ರಂ ಅವನನ್ನು ಗುಂಡಿಕ್ಕಿ ಕೊಲ್ಲುತ್ತಾನೆ. ವಿಕ್ರಂ ಮುಖ್ಯಸ್ಥನಾಗಿ ದರೋಡೆಕೋರರ ಕೆಲಸದಲ್ಲಿ ಮುಂದುವರೆಯುತ್ತಾನೆ. ಸಹಭಾಗಿಯಂತೆ ಫೂಲನಳಿಗೂ

ಅರ್ಧಮುಖ್ಯಸ್ಥ ಸ್ಥಾನವನ್ನು ಕೊಡುವಷ್ಟು ಉಪಕಾರಿ ವಿಕ್ರಂ. ಆದರೆ ಆ ಸಮಯದಲ್ಲಿ ದರೋಡೆಕೋರರ ಗುಂಪಿಗೆ ಶ್ರೀರಾಮ್ ಮತ್ತು ಲಾಲಾರಾಮ್ ಜೈಲುವಾಸ ಮುಗಿಸಿಕೊಂಡು ಮತ್ತೆ ಸೇರುತ್ತಾರೆ. ವಿಕ್ರಂನನ್ನು ಕೊಂದು ತಮ್ಮ ಹಗೆ ತೀರಿಸಿಕೊಳ್ಳುತ್ತಾರೆ. ಅವಳನ್ನು ಅಪಹರಿಸಿ ಠಾಕೂರರ ದುಷ್ಟರ ಕೂಟ ಅವಳನ್ನು ಬೆಹ್ಮಾಯಿ ಎನ್ನುವ ಹಳ್ಳಿಯೊಂದರಲ್ಲಿ ನಿರಂತರವಾಗಿ ಅತ್ಯಾಚಾರ ಮಾಡುತ್ತಾರೆ. ಅಲ್ಲಿಂದ ತಪ್ಪಿಸಿಕೊಂಡು ಫೂಲನ್ ಬಾಬಾ ಮುಸ್ತಾಕಿನ್ ಎನ್ನುವವನ ಆಶ್ರಯ ಪಡೆದು ಮಾನ್‌ಸಿಂಗ್ ಎನ್ನುವವನ ದರೋಡೆಕೋರರ ಗುಂಪು ಸೇರುತ್ತಾಳೆ. ವಿಕ್ರಂನ ಸಾವಿನ ನಂತರ ಫೂಲನ್‌ದೇವಿ ತನ್ನದೇ ದರೋಡೆಕೋರರ ಗುಂಪಿಗೆ ಮುಖ್ಯಸ್ಥೆ ಆಗುತ್ತಾಳೆ. ವಿಧಿಲಿಖಿತವೋ ಎನ್ನುವಂತೆ ಒಂದು ಶೋಷಿತ ಹೆಣ್ಣು ಪುರುಷ–ಪ್ರಮುಖವಾದ ದರೋಡೆ ಕೆಲಸದಲ್ಲಿ ತೊಡಗುತ್ತಾಳೆ. ಅಂದಿನಿಂದ ಅವಳ ಜೀವನವೇ ಬದಲಾಗುತ್ತದೆ. ದುಷ್ಕರ್ಮಿಗಳನ್ನು ಕೊಂದುಬಿಡುವ ಪ್ರತೀಕಾರದ ಛಾಯೆ ಕಂಡುಬರುತ್ತದೆ.

**ಪ್ರತೀಕಾರ**

ದರೋಡೆಕೋರರ ಗುಂಪಿಗೆ ನಾಯಕಿ ಆದರೂ, ಫೂಲನ್‌ದೇವಿಯ ದ್ವಂದ್ವ ಗುಣಗಳನ್ನು ಪರಿಶೀಲಿಸುವುದು ಅಷ್ಟೇನೂ ಕಷ್ಟದ ಕೆಲಸವಲ್ಲ: ಒಂದು ಕಡೆ ರಾಬಿನ್ ಹುಡ್ ತರಹ ಶ್ರೀಮಂತರ ಹಣವನ್ನು ದೋಚಿ ಬಡಬಗ್ಗರಿಗೆ ಕೊಡುವುದು, ಮತ್ತೊಂದು ಕಡೆ ತನಗೆ ಮತ್ತು ತನ್ನ ದಲಿತ ಸಮುದಾಯಗಳ ಮೇಲೆ ಅತ್ಯಾಚಾರ ಮಾಡಿದವರನ್ನು ಶಿಕ್ಷಿಸಿ ತನ್ನದೇ ನ್ಯಾಯಾಂಗ ಕ್ರಮಗಳನ್ನು ಜಾರಿಗೆ ತರುವುದು, ಎರಡೂ ರೀತಿಯ ವಿಭಿನ್ನ ಪ್ರಕ್ರಿಯೆಗಳಿಗೆ ಒಂದೇ ರೀತಿ ಸ್ಪಂದಿಸುತ್ತಿದ್ದಳು. ಶೋಷಿತ ಹೆಣ್ಣು ಬಂದೂಕ ಹಿಡಿದು ಡಕಾಯಿತಳಾಗಲು ಅವಳದೇ ಸಮರ್ಥನೆ ಇತ್ತು: "ಡಕಾಯಿತರು ತಾವು ತಾವಾಗಿಯೇ ಬಂದೂಕು ಹಿಡಿದರೆಂದು ನೀವೆಂದುಕೊಂಡಿದ್ದರೆ ಮತ್ತೊಮ್ಮೆ ಯೋಚಿಸಿ. ನಾನೇನು ಚಂಬಲ್ ಘಾಟಿನಲ್ಲೇ ಹುಟ್ಟಿ ಬೆಳೆದವಳು ಅಂದುಕೊಂಡಿದ್ದೀರೇನು? ನನಗೂ ತಂದೆ ತಾಯಿ ಬಂಧು ಬಳಗವಿತ್ತು. ಶಿಕ್ಷಣವೇ ಇಲ್ಲದ ನನಗೆ ನಾನು ದೊಡ್ಡವಳಾದ ತಕ್ಷಣ ನಮ್ಮ ತಂದೆ ತಗೋ, ಈ ಬಂದೂಕು ಚಲಾಯಿಸಲು ಕಲಿತುಕೋ ಅಂತ ಪಾಠ ಹೇಳಿಕೊಡಲಿಲ್ಲ. ನಾನು ನಾನಾಗಲು ನಮ್ಮ ಸಮಾಜವೇ ಕಾರಣ."

ಜನಪದ ಗೀತೆಗಳಲ್ಲಿ ಅವಳ ದರೋಡೆಕೋರ ಜೀವನದ ಒಂದು ಘಟನೆಯನ್ನು ಹೀಗೆ ವಿವರಿಸಿದೆ:

**"ಫೂಲನಳ ಗುಂಪು ಹಿಡಿದವು ಬಂದೂಕ**
**ಕೆಂಪು ವಸ್ತ್ರದ ಮುಂಡಾಸು ಧರಿಸಿ ನಡೆದಳು**
**ಬೆಹ್ಮಾಯಿ ಹಳ್ಳಿಯ ಕಡೆಗೆ**
**ಎಲ್ಲಿ ಅವಳ ಅತ್ಯಾಚಾರವೆಸಗಿದರೋ ಠಾಕೂರರು**

**ಅಲ್ಲಿ ಇಪ್ಪತ್ತೊಂದು ಠಾಕುರರನು ಕೊಂದಳಂದು ಫೂಲನ್‌ದೇವಿ**
**ರಕ್ತದಲಿ ಓಕುಳಿಯನೇ ಆಡಿದಳು**
**ಯಮುನಾ ನದಿಯೇ ಕೆಂಪಾಯಿತು ಅಂದು**
**ಅವಳ ವರ್ಷಗಳ ಕೋಪ ತೀರಿತಂದು ಪ್ರತೀಕಾರದಲಿ"**

ದಾಖಲೆಗಳ ಪ್ರಕಾರ ಫೂಲನ್‌ದೇವಿ ಕೊಂದದ್ದು ಇಬ್ಬರು ಠಾಕುರರನ್ನು ಮಾತ್ರ, ಆದರೆ ಉದ್ವೇಗದಲ್ಲಿ ಮಿಕ್ಕವರನ್ನು ಕೊಂದದ್ದು ಅವಳ ಗುಂಪಿನ ದರೋಡೆಕೋರರು. ಪ್ರತೀಕಾರದ ಮಾರ್ಗದಲ್ಲಿ ಒಮ್ಮೆ ಹೆಜ್ಜೆ ಇಟ್ಟಮೇಲೆ ಹಿಂದೆಗೆಯುವುದು ಕಷ್ಟಸಾಧ್ಯವಾದರೂ, ಫೂಲನ್‌ದೇವಿಗೆ ಅರಿವಾದದ್ದು, ಅವಳದೇ ದಲಿತ ಸಮುದಾಯ ಅವಳನ್ನು ಬೆಂಬಲಿಸುತ್ತಿದೆ ಎನ್ನುವ ಸತ್ಯ. ಆದರೆ ಪ್ರತೀಕಾರ, ಬೂದಿ ಮುಚ್ಚಿದ ಕೆಂಡದಿಂದ ಆಗುವ ಅನಾಹುತದಂತೆ ಶೀಘ್ರದಲ್ಲಿಯೇ ತಾಪ ಹರಡುತ್ತಿತ್ತು. ಪೋಲೀಸರು ದರೋಡೆಕೋರರ ಗುಂಪಿನ ಹಿಂದೆ ಬಿದ್ದಿದ್ದರು. ನ್ಯಾಯದ ದೃಷ್ಟಿಯಲ್ಲಿ ಫೂಲನ್‌ದೇವಿ ಒಬ್ಬ ಕೊಲೆಪಾತಕಿ. ಆದರೆ ಅವಳ ಮನೋಗತದಲ್ಲಿ ತನ್ನ ಮಾನ ಅಪಹರಿಸಿದ ಮೇಲ್ಜಾತಿಯವರನ್ನು ಕೊಲ್ಲುವುದು ಸಹಜವೇ ಹೊರತು ಬೇರೆ ದಾರಿಯಿರಲಿಲ್ಲ. ಜೊತೆಗೆ ದಲಿತ ಸಮುದಾಯದ ಅಭಿಪ್ರಾಯದಲ್ಲೂ ಕೂಡ ಶೋಷಿತ ಹೆಣ್ಣು ಸೇಡು ತೀರಿಸಿಕೊಳ್ಳುವುದು ತಪ್ಪೆಂಬ ಭಾವ ವ್ಯಕ್ತವಾಗಿರಲಿಲ್ಲ. ಪುರುಷರ ಅತ್ಯಾಚಾರದಿಂದ ಹೃದಯವೇ ಕಲ್ಲಾಗಿದ್ದ ಫೂಲನ್‌ದೇವಿಗೆ ತಾನು ಕೊಲೆ ಪಾತಕಿ, ಆದ್ದರಿಂದ ಸುಸಂಸ್ಕೃತರ ತಿರಸ್ಕಾರಕ್ಕೆ ಮತ್ತು ಸಮಾಜದ ನ್ಯಾಯಕ್ಕೆ ತಾನು ಮಣಿಯಬೇಕೆಂಬ ಅನಿಸಿಕೆ ಮೂಡಲೇ ಇಲ್ಲ. ಅವಳು ಮನೋವಿಕೃತ ಕಾಯಿಲೆಗೆ ಬಲಿಯಾಗಿ ಠಾಕುರರನ್ನು ಕೊಲ್ಲಲಿಲ್ಲ. ಯಾವ ವಿಕೃತಕಾಮಿ ಪುರುಷರು ತನ್ನ ಮೇಲೆ ಅತ್ಯಾಚಾರವೆಸಗಿದರೋ ಅವರನ್ನು ಕೊಲ್ಲುವುದರಲ್ಲಿ ಯಾವ ತಪ್ಪಿದೆ ಎನ್ನುವುದು ಅವಳ ತರ್ಕವಾಗಿತ್ತು. ಆಕೆ ಆ ಅತ್ಯಾಚಾರಗಳ ಬಗ್ಗೆ ಕೋಪಗೊಂಡಿದ್ದಂತೂ ಸಹಜ, ಸಮರ್ಥನೀಯ; ಆದರೆ ಆ ಕೋಪದ ಕಾರಣದಿಂದ ಮೇಲ್ಜಾತಿಯ ನಿರ್ದೋಷಿಗಳ ಮೇಲೆ ತಾನೂ ಅತ್ಯಾಚಾರ ಮಾಡುವ ವ್ಯಕ್ತಿಯಲ್ಲ. ಅಂದರೆ ಅವಳ ಪ್ರತೀಕಾರದ ಹರವು ಮತ್ತು ಗಂಭೀರತೆ ದೋಷಿಗಳ ಮೇಲೆಯೇ. ಅವಳು ಮತ್ತು ಅವಳ ಸಂಗಡಿಗ ದರೋಡೆಕೋರರು ಮಾಡಿದ ಇಪ್ಪತ್ತೊಂದು ಠಾಕೂರರ ಕೊಲೆಯ ಅಂತಿಮ ಪರಿಣಾಮ, ಆಘಾತಗಳು ಆಗಿದ್ದು ಮಹಿಳೆಯರ ಮೇಲೆಯೇ. ಒಂದು ಸಣ್ಣ ಹಳ್ಳಿಯಲ್ಲಿ ಇಪ್ಪತ್ತೊಂದು ಗೃಹಿಣಿಯರು ಅಸಹಾಯಕ ವಿಧವೆಯರಾದ ಕ್ರೂರ ಘಟನೆಗೆ ತಾನು ಕಾರಣಳು ಎನ್ನುವುದು ಅವಳ ಅರಿವಿಗೇ ಬಾರದಿರಲು ಇರಬಹುದಾದ ಕಾರಣಗಳನ್ನು ಹಲವು ರೀತಿ ಅವಲೋಕಿಸಬಹುದು. ಒಂದು, ಅವಳ ಹಿಂಸಾಕೃತ್ಯದಲ್ಲಿ ನೈತಿಕತೆಯ ನ್ಯಾಯ ಅದಲುಬದಲಾಗಿ ವಿಧವೆಯರಾದ ಅದೇ ಠಾಕೂರ್ ಸ್ತ್ರೀಯರು ಮತ್ತೊಮ್ಮೆ ಶೋಷಿತರಾದರೇ? ಎರಡು, ಈ ಕೃತ್ಯವನ್ನು ತಾನೇ ವಕೀಲೆ, ತಾನೇ ನ್ಯಾಯಮೂರ್ತಿ, ತಾನೇ ತಪ್ಪಿತಸ್ಥರನ್ನು ಗಲ್ಲಿಗೇರಿಸುವವಳೂ ಆಗಿ ಎಲ್ಲವನ್ನೂ ತನ್ನ ಸ್ವಾಧೀನದಲ್ಲೇ ನೆರವೇರಿಸಿದ್ದು ಸರಿಯೇ? ಮೂರು, ಈ ಹೀನ

ಕೃತ್ಯ, ಅವಳ ಕೋಮಲತೆ ಮತ್ತು ಅಮಾಯಕತೆಯ ಮೇಲೆ ಯಾವ ಮಾನಸಿಕ ಪ್ರಭಾವ ಬೀರಿರಬಹುದು? ನಾಲ್ಕು, ಅದು ಪಶ್ಚಾತ್ತಾಪದಲ್ಲಿ ಕೊನೆಗೊಂಡು ಅವಳ ಮುಂದಿನ ಜೀವನದ ಶೈಲಿಯನ್ನು ಬದಲಾಯಿಸಿತೇ? ಮೊದಲನೇ ಪ್ರಶ್ನೆಗೆ ಉತ್ತರ ಖಂಡಿತವಾಗಿಯೂ ಆ ಠಾಕೂರ ಸ್ತ್ರೀಯರು ಶೋಷಿತರಾದರೆಂದು ಹೇಳಬಹುದು. ಏಕೆಂದರೆ ಫೂಲನ್‌ದೇವಿಯ ಜೊತೆಗೂಡಿ ದಲಿತ ಸಮುದಾಯವೇ ಬಂಡೆದ್ದು ಜಾತಿಯಲ್ಲಿ ಶ್ರೇಣಿ ವ್ಯವಸ್ಥೆಯನ್ನು ವಿಪರ್ಯಯಗೊಳಿಸಿ ಆ ಠಾಕೂರ ಸ್ತ್ರೀಯರನ್ನು ಆರ್ಥಿಕ ಶೋಷಣೆಗೆ ಒಳಮಾಡಿತ್ತು. ನ್ಯಾಯ ಇಲಾಖೆಗಳೂ ಕೂಡ ಅವರಿಗೆ ನಷ್ಟ ಪರಿಹಾರ ಕೊಡದೆ ಅವರನ್ನು ಮತ್ತಷ್ಟು ಅಧೋಗತಿಗೆ ತಳ್ಳಿದವು. ಎರಡನೇ ಪ್ರಶ್ನೆಗೆ ಉತ್ತರ, ದರೋಡೆಕೋರರ ನಾಯಕಿಯಾಗಿ ತಾನು ಕೈಗೊಂಡ ಕಾರ್ಯವನ್ನು ತನ್ನದೇ ಕರಾರುಗಳಿಗೆ, ತನ್ನದೇ ಅಲಿಖಿತ ನ್ಯಾಯದಲ್ಲಿ ಪೂರ್ತಿಗೊಳಿಸುವುದು ನಾಯಕತ್ವದ ಸಂಕೇತವಾಗಿತ್ತು. ನಾಲ್ಕನೆಯ ಪ್ರಶ್ನೆಗೆ ಉತ್ತರ, ಪಶ್ಚಾತ್ತಾಪಕ್ಕಿಂತ ಹೆಚ್ಚಾಗಿ ಆ ಕೃತ್ಯದ ನಂತರ ಪೊಲೀಸರು ಅವಳ ಇಡೀ ದರೋಡೆಕೋರರ ಗುಂಪನ್ನು ವ್ಯವಸ್ಥಿತವಾಗಿ ನಿರ್ನಾಮ ಮಾಡಿದ ಕಾರಣ ಅವಳಿಗೆ ಬೇರೆ ದಾರಿ ಕಾಣದೆ ಕಾನೂನಿಗೆ ಶರಣಾಗತಳಾಗ ಬೇಕಾಯಿತು. ಮುಂದೆ ಈ ಲೇಖನದಲ್ಲಿ ವಿಶ್ಲೇಷಿಸಿರುವಂತೆ ಈ ಒಂಟಿತನ ಮತ್ತು ದೀರ್ಘ ಕಾರಾಗೃಹವಾಸದಿಂದ ಅವಳಲ್ಲಿ ಬದಲಾವಣೆ ಕಂಡುಬಂದಿತು ಎಂದರೆ ತಪ್ಪಾಗಲಾರದು.

**ಪುನಶ್ಚೇತನ**

ಪುನಶ್ಚೇತನದ ಹಿನ್ನೆಲೆಯ ಪ್ರಕ್ರಿಯೆ ಬಹಳಷ್ಟು ಅವಳದೇ ಆತ್ಮಸಾಧನೆ ಆದರೂ ತನ್ನೊಡನೆ ಸ್ಪಂದಿಸುವವರ ಜೊತೆಗೂಡಿ ಕಾರ್ಯ ಸಾಧಿಸುವ ಛಲ ಕೂಡ ಸೇರಿದೆ. ಡಕಾಯಿತಳಾಗುವ ಹಂತದಲ್ಲಿ ಪೂಲನ್ ಮತ್ತು ವಿಕ್ರಂ ನಡುವೆ ಪರಸ್ಪರ ಪೂರಕವಾದ ಶಕ್ತಿಯ ಪ್ರದರ್ಶನವನ್ನು ನಾವು ಕಾಣಬಹುದು. ನಂತರ ಮಾನ್‌ಸಿಂಗ್ ಜೊತೆ ಕೂಡ ಇದೆ ರೀತಿಯ ಸಮ್ಮಿಶ್ರಣವನ್ನು ಕಾಣುತ್ತೇವೆ. ವಿಕ್ರಂ ಮತ್ತು ಮಾನ್‌ಸಿಂಗ್ ಇಲ್ಲದಿದ್ದರೆ ಫೂಲನ್ ತನ್ನ ಕಾಲ ಮೇಲೆ ತಾನು ನಿಂತ ಮಹಿಳೆ ಆಗುತ್ತಿದ್ದಳೇ ಎನ್ನುವ ಪ್ರಶ್ನೆಗೆ ಕೂಡ ಈ ಪರಸ್ಪರ ಸಹಯೋಗ ಸಮರ್ಥನೆ ಕೊಡುತ್ತದೆ. ಫೂಲನ್‌ದೇವಿಯ ಪುನಶ್ಚೇತನದ ಮೊದಲ ಅಧ್ಯಾಯಕ್ಕೆ ಕಾರಣ ಅವಳ ಕಾರ್ಯಸಾಧನೆಗೆ ಸ್ಪಂದಿಸಿ ಜೊತೆಗೂಡಿದ ಪುರುಷ ಕೂಡ ಎಂಬುದನ್ನು ಇಲ್ಲಿ ಗಣನೆಗೆ ತಂದುಕೊಳ್ಳಬಹುದು.

ಪ್ರತೀಕಾರದಲ್ಲಿ ಗೆಲುವು ಪಡೆದ ಮೇಲೆ ಫೂಲನ್‌ದೇವಿಗೆ ದೊರೆತದ್ದು, ಹಿಂದೆ ಯಾವ ಹೆಣ್ಣೂ ಗಳಿಸದ, "ದರೋಡೆಕೋರರ ರಾಣಿ" ಎನ್ನುವ ಬಿರುದು ಮಾತ್ರ! ಸ್ಥಳೀಯ ದಲಿತರಿಗೆ ಅವಳ ಬಗ್ಗೆ ಗೌರವ, ಗೌರವಕ್ಕಿಂತ ಭಯ, ಭಯಕ್ಕಿಂತ ಅವಳು ಕೊಡುತ್ತಿದ್ದ ಬಳುವಳಿ, ಬಳುವಳಿಗಿಂತ ಅವಳು ತುಂಬುತ್ತಿದ್ದ ಸ್ಥೈರ್ಯ ಮುಖ್ಯವೆನಿಸಿದವು. ಶೋಷಿತ ಜನರ ಮನೋಭಾವ ಹೇಗಿರುತ್ತೆ ಅಂದರೆ ಅವರಿಗೆ ಯಾರಾದರೂ ನಾವು

ನಿಮ್ಮ ಜೊತೆ ಇದ್ದು ಸಹಾಯಮಾಡುತ್ತೇವೆ ಅಥವಾ ನಿಮ್ಮ ಯಾವುದೇ ಕಷ್ಟಗಳನ್ನು ನಮ್ಮೊಡನೆ ಹಂಚಿಕೊಳ್ಳಬಹುದು ಎಂದು ಹೇಳಿದರೆ ಇಡೀ ಸಮಾಜದ ಸ್ಥೈರ್ಯವೇ ಹೆಚ್ಚಾಗುತ್ತೆ. ಘೂಲನ್‌ದೇವಿ ತಾನು ದರೋಡೆಕೋರಳಾಗಿ ಬಡಜನರಿಗೆ ಆಶ್ವಾಸನೆ ಕೊಡುತ್ತಿದ್ದುದನ್ನು ನೋಡಿದರೆ ಅವಳ ಸಮುದಾಯದ ಜನರಿಗೆ ಅವಳ ಮೇಲೆ ವಿಶ್ವಾಸ ಬರಲು ಮುಖ್ಯ ಕಾರಣವಾಯಿತು. ಆದರೆ ಈ ತಪ್ಪಿತಸ್ಥೆಯ ಹಿಂದೆ ಇಡೀ ರಾಜ್ಯದ ಪೊಲೀಸ್ ಸಿಬ್ಬಂದಿ ಕಾರ್ಯಗತವಾಗಿದ್ದರೂ ಅವಳನ್ನು ಬಂಧಿಸಲು ಅಸಮರ್ಥವಾಗಿದ್ದವು. ಇಡೀ ನಾಡಿನಲ್ಲಿ ಅವಳ ಕ್ರೌರ್ಯವನ್ನು ತೆಗಳಿ ಅವಳನ್ನು ದ್ವೇಷಿಸುವವರೇ ಹೆಚ್ಚು ಮಂದಿ ಇದ್ದರು. ತಾನು ಶೋಷಿತ ಹೆಣ್ಣು ನಿಜ, ಆದರೂ ತನ್ನನ್ನು ಜನ ದ್ವೇಷಿಸುತ್ತಾರೆ ಎನ್ನುವ ಅರಿವು ಅವಳಿಗಿತ್ತು. ಹಾಗೆಂದ ಮಾತ್ರಕ್ಕೆ ತಲೆಮರೆಸಿಕೊಂಡು ದೇಶ ಬಿಟ್ಟುಹೋಗುವಳೇ? ಜೀವನದಲ್ಲಿ ಸವಾಲುಗಳು ಬರುತ್ತಲೇ ಇರುತ್ತವೆ. ಬಿರುಗಾಳಿ, ಭೂಕಂಪ ಎಲ್ಲ ಆಗುತ್ತಲೇ ಇರುತ್ತವೆ. ಸಾವು ಬಂದರೆ ಶ್ರಮದಿಂದ ಬರುವ ನಿದ್ದೆಯಲ್ಲೇ ಸಾಯುವೆನು ಹೊರತು ಅಂಜುವುದಿಲ್ಲ ಎನ್ನುವ ಸಂಕಲ್ಪ ಅವಳದು. ಸಾವನ್ನು ಬಹಳವೇ ಸಮೀಪದಿಂದ ನೋಡಿದ ಹೆಣ್ಣು ಅವಳು. ಒಂದು ಕ್ಷಣ ಸಾವಿನಿಂದ ಬಚಾವು ಆದಳು ಎನ್ನುವುದರಲ್ಲಿ ಮತ್ತೊಂದು ಕ್ಷಣದಲ್ಲಿ ಅದು ಜೀವವನ್ನೇ ಕಸಿದುಕೊಳ್ಳಬಹುದು ಎನ್ನುವ ಭಯದಲ್ಲಿ ಇದ್ದದ್ದೇ ಹೆಚ್ಚು. ಈ ಬೆಕ್ಕು ಇಲಿ ಆಟದಲ್ಲಿ ಸೋತಿದ್ದು ಪೊಲೀಸರೇ! ಪ್ರಪಂಚವೇ ಕೌತುಕದಿಂದ ಕಾಯುತ್ತಿದ್ದ ಘೂಲನ್‌ದೇವಿಯ ದಸ್ತಗಿರಿಯ ಬದಲು ಅವಳು ತನ್ನದೇ ಷರತ್ತುಗಳನ್ನು ಒಡ್ಡಿ ಕೊನೆಗೆ ನ್ಯಾಯಾಂಗಕ್ಕೆ ಶರಣಾದಳು.

ಹನ್ನೊಂದು ವರ್ಷಗಳ ಕಠಿಣ ಶಿಕ್ಷೆಯ ಪರ್ಯಟನದೊಂದಿಗೆ ಅವಳ ಪುನಃಶ್ಚೇತನದ ಎರಡನೆಯ ಅಧ್ಯಾಯ ಪ್ರಾರಂಭವಾಯಿತು. ಆದರೆ ಅವಳು ಎಂತಹ ಮಹಿಳೆಯೆಂದರೆ, ಯಾರಿಗೂ ಸಮಜಾಯಿಷಿ ಕೊಡುತ್ತಿರಲಿಲ್ಲ. ಘೂಲನ್‌ದೇವಿ ಒಂದು ಹಸುಳೆಯ ತರಹ ತನ್ನ ಮೇಲಾದ ಅತ್ಯಾಚಾರವನ್ನು, ಅತ್ಯಾಚಾರದ ಘಟನೆಗಳನ್ನು ಕೂಡ ನಗುನಗುತ್ತಲೇ ಹೇಳಿಬಿಡುತ್ತಿದ್ದಳು. ಕಷ್ಟಗಳನ್ನು ಇಂತಹ ಲಘುಹಾಸ್ಯದ ಮೂಲಕ ನಿಭಾಯಿಸಿಕೊಳ್ಳುವ ಕಲೆಯನ್ನು ಕರಗತಮಾಡಿಕೊಳ್ಳುವುದು ಪುನಶ್ಚೇತನದ ಮೊದಲ ಹಂತ. ಜೈಲಿನಲ್ಲಿ ಕುಳಿತು ಇನ್ನೊಬ್ಬ ಹೆಣ್ಣಿನ ಸಹಾಯದಿಂದ ತನ್ನ ಆತ್ಮಕತೆಯನ್ನು ನಿರೂಪಿಸಿ ಅದು ಪುಸ್ತಕವಾಗಿ ಪ್ರಕಟಣೆಗೊಂಡಿದ್ದೂ ಕೂಡ ಅವಳ ಪುನಶ್ಚೇತನಕ್ಕೆ ನಾಂದಿಯಾಯಿತು ಎಂದು ಹೇಳಬಹುದು. ಅನಕ್ಷರತೆ ಮತ್ತು ವಿದ್ಯೆ ಕಲಿಯದ ವಿಷಾದ ಕಾಡಿತಾದರೂ ಮನಸ್ಸಿನಲ್ಲಿ ಹುದುಗಿದ ಭಾವನೆಗಳನ್ನು ನಿಸ್ಸಂಕೋಚವಾಗಿ ಹಂಚಿಕೊಂಡಿದ್ದರಿಂದ ಅವಳ ನ್ಯೂನತೆಗಳಿಗೆ ಚಿಕಿತ್ಸಕ ಮೌಲ್ಯ ದೊರಕಿದಂತಾಯಿತು. ಜೈಲಿನ ನಾಲ್ಕು ಗೋಡೆಗಳ ಮಧ್ಯೆ ಸಕಾರಾತ್ಮಕ ದೃಷ್ಟಿಯಿಂದಲೇ ತನ್ನ ಎದೆಯ ಮೇಲಿನ ಭಾರ ಕಳೆದುಕೊಂಡದ್ದೂ ಕೂಡ ಸಹಾಯವಾಯಿತು. ನಂತರದ ಹಂತಗಳಲ್ಲಿ ಅವಳು ಜೈಲಿನಿಂದ ಬಿಡುಗಡೆ ಹೊಂದಿ ರಾಜಕೀಯಕ್ಕೆ ಇಳಿಯುವ ಹೊತ್ತಿಗಾಗಲೇ ಬೌದ್ಧಮತವನ್ನು ಸ್ವೀಕರಿಸಿದ್ದಳು. ಬೌದ್ಧಧರ್ಮವನ್ನು ಸ್ವೀಕರಿಸಲು ಅವಳಿಗೆ ಕಷ್ಟವೇ ಆಗಿರಬೇಕು. ಏಕೆಂದರೆ ಬೌದ್ಧಧರ್ಮದ

ಕಠಿಣ ಶಿಸ್ತು, ಅದರೊಳಗೆ ಹಾಸುಹೊಕ್ಕಾಗಿರುವ ಅಹಿಂಸೆ, ಶಾಕಾಹಾರಿ ಪದ್ಧತಿಗಳನ್ನು ಅರಿತು ಅದರಂತೆ ನಡೆಯಲು ಒಂದಿಷ್ಟಾದರೂ ಅದರ ಬಗ್ಗೆ ಯೋಚಿಸಿರಬೇಕು. ಆ ಹಂತಕ್ಕೆ ಬರಲು ಮೊದಲು ಜ್ಞಾನದೀಕ್ಷೆಯನ್ನು ಪಡೆದಿರಬೇಕು. ಶಾರೀರಿಕ, ಮಾನಸಿಕ ಮತ್ತು ಸಮಾಜದಲ್ಲಿ ಆಕೆ ಚಿಕ್ಕಹುಡುಗಿಯಾಗಿ, ಕಿಶೋರಿಯಾಗಿ, ಹೆಣ್ಣಾಗಿ ಅನುಭವಿಸಿದ ಹಿಂಸಾಕೃತ್ಯವನ್ನು ಬೌದ್ಧಧರ್ಮದ ಅನುಯಾಯಿ ಆಗಿ ಮರೆಯಲು ಸಾಧ್ಯವಾಯಿತೇ? ಸಾಧ್ಯವಿರಬಹುದು. ಆದರೆ ಬೇರೊಂದು ರೀತಿಯಾಗಿ ವಿಶ್ಲೇಷಿಸಿದಾಗ ಆಕೆ ಹಿಂದೂ ಸಮಾಜದ ಜಾತಿ ಪದ್ಧತಿಯಲ್ಲಿ ಬೇಸತ್ತಿದ್ದಂತೂ ಕಂಡುಬರುತ್ತದೆ. ಅದರ ಬೀಭತ್ಸ ರೂಪವನ್ನು ಕಣ್ಣಾರೆ ಕಾಣುವುದರ ಜೊತೆಗೆ ಅವಳಿಗೆ ಅನುಭವಕ್ಕೂ ಬಂದಿತ್ತು. ಅಂತಹ ವ್ಯವಸ್ಥೆಯಿಂದ ಹೊರ ಬಂದಾಗಲೆ ದಲಿತರ, ಅದಕ್ಕೂ ಹೆಚ್ಚಾಗಿ ಹೆಣ್ಣಿನ ಶೋಷಣೆಯನ್ನು ದೂರ ಮಾಡಲು ಸಾಧ್ಯವೆಂಬ ಅರಿವನ್ನು ಅವಳು ಮನಗಂಡಿರಬೇಕು. ಅಥವಾ ಅಂಬೇಡ್ಕರ್ ಅವರ ಈ ರೀತಿಯ ಅನಿಸಿಕೆಗಳನ್ನು ಮನದಟ್ಟು ಮಾಡಿದವರ ಒಡನಾಟ ಇದ್ದಂತೆ ಕಾಣುತ್ತದೆ. ಈ ಎಲ್ಲ ಕಾರಣಗಳಿಂದ ಆಕೆಗೂ ಹಿಂದೂ ಸಮಾಜದಿಂದ ತನ್ನನ್ನು ತಾನು ಬೇರ್ಪಡಿಸಿಕೊಂಡು ಶೋಷಿತರನ್ನು ಬೌದ್ಧಮತದಲ್ಲಿರುವಂತೆ ಯಾವುದೇ ಜಾತಿಭೇದವಿಲ್ಲದೆ ಮುಂದಕ್ಕೆ ತರಬಹುದೆಂಬ ಅರಿವಾಗಿರಬೇಕು. ದೀಕ್ಷಾಭೂಮಿ ಎನ್ನುವ ಸ್ಥಳದಲ್ಲಿ ಬೌದ್ಧಧರ್ಮವನ್ನು ಸ್ವೀಕರಿಸುವಾಗ ಆಕೆಯನ್ನು "ಕೋಪವಿಲ್ಲದ ಫೂಲನ್ ದೇವಿ, ಮೊದಲ ಬಾರಿಗೆ ಬಂದೂಕವನ್ನು ಹೆಗಲಮೇಲೆ ಏರಿಸದೆ ಮುಗುಳುನಗೆಯಲ್ಲಿ, ಓರ್ವ ಸಾಮಾಜಿಕ ಮತ್ತು ಸಾಂಸ್ಕೃತಿಕ ನ್ಯಾಯಮೂರ್ತಿಯಾಗಿ, ಮುಖ್ಯಸ್ಥಳಂತೆ ನಿಂತಿದ್ದಳು" ಎಂದು ವರ್ಣಿಸಿದ್ದವು ಅಂದಿನ ಪತ್ರಿಕೆಗಳು. ಬೌದ್ಧಧರ್ಮ ಸ್ವೀಕಾರ ಫೂಲನ್‌ದೇವಿಯ ಪುನಶ್ಚೇತನದಲ್ಲಿ ಪ್ರಮುಖ ಪಾತ್ರವಹಿಸಿದೆ ಎಂದು ಸಂಕ್ಷಿಪ್ತವಾಗಿ ಹೇಳಬಹುದು.

ರಾಜಕೀಯಕ್ಕೆ ಫೂಲನ್‌ದೇವಿಯ ಪ್ರವೇಶ ಅವಳ ಸಾಧನೆ ಎಂದು ಹೇಳುವುದು ಕಷ್ಟವೆನಿಸಿದರೂ ಅದು ಅವಳ ಪುನಶ್ಚೇತನದ ಪ್ರಕ್ರಿಯೆಯಲ್ಲಿ ಮೂರನೆಯ ಅಧ್ಯಾಯ ಎನ್ನಬಹುದು. "ನಮ್ಮ ದೇಶದಲ್ಲಿ ಬಡವರಿಗೆ ಒಂದು ನ್ಯಾಯ, ಶ್ರೀಮಂತರಿಗೆ ಮತ್ತೊಂದು ನ್ಯಾಯ ಇದೆ. ದೇಶದಲ್ಲಿ ಪರಿವರ್ತನೆ ಆಗಲೇಬೇಕು. ಯಾವ ಜಾತಿಯದೇ ನಾಯಕರಾದರೂ ಎಲ್ಲರೂ ಸೇರಿ ಬಡವರ ಬಗ್ಗೆ ಸಂಘಟನೆ ನಡೆಸಬೇಕು. ಮಹಿಳೆಯರ ವಿಷಯದಲ್ಲಿ ಆಗಬೇಕಾದ ಸುಧಾರಣೆಗಳು ಕೂಡ ಇದೇ ಮಾದರಿಯಲ್ಲಿ ಇರಬೇಕು. ಇಲ್ಲಿಯವರೆಗೂ ಮಹಿಳೆಯರು ಸತ್ಯದಲ್ಲಿ ದಲಿತರೇ." ಒಬ್ಬ ರಾಜಕಾರಣಿ ಆಗಿ ಇವು ತನ್ನ ಧ್ಯೇಯವೆಂದು ಸಾರಿ ತನ್ನ ಸ್ವಂತ ಪುನಶ್ಚೇತನದ ಮಾದರಿಯಲ್ಲೇ ಸಮಾಜವೂ ಕೂಡ ಉನ್ನತ ಗುರಿಮುಟ್ಟಬಹುದು ಎಂದು ನೀತಿಬೋಧೆ ಮಾಡಿದಳು. ಆದರೆ ಫೂಲನ್ ದೇವಿಯೇ ತಾನು ಹುಟ್ಟಿಬೆಳೆದ ಚಂಬಲ್ ಕಣಿವೆಯ ಗ್ರಾಮದಲ್ಲಿ 'ದಲಿತ ಮಹಿಳೆಯರ ಸೇನಾಪಡೆ' ಎನ್ನುವ ನಾಗರಿಕ ಎಚ್ಚರಿಕೆಯ ತಂಡಗಳನ್ನು ದಲಿತ ಹಳ್ಳಿಯವರೇ ಸ್ಥಾಪಿಸಿಕೊಳ್ಳಲು ಪ್ರೋತ್ಸಾಹಿಸಿ, ಹೆಣ್ಣುಮಕ್ಕಳಿಗೆ ಬಂದೂಕು ಉಪಯೋಗಿಸುವುದನ್ನು ಕಲಿಸುವ ಕಾರ್ಯಾಗಾರಗಳನ್ನು ಪ್ರಾರಂಭ ಮಾಡಿದಳು. ಫೂಲನ್‌ದೇವಿ ಮುಂದೆ ದಲಿತ

ಯುವಕ ಯುವತಿಯರ ಸ್ವಯಂ ರಕ್ಷಣೆಗಾಗಿ 'ಏಕಲವ್ಯ ಸೇನಾ' ಅನ್ನುವ ಪಡೆಯನ್ನೂ ಪ್ರಾರಂಭ ಮಾಡಿದಳು. ಬರಿ ಮಾತಿನಿಂದ ಕೆಲಸ ಸಾಗುವುದಿಲ್ಲ, ಜೊತೆಗೆ ಕಾರ್ಯೋಪಯೋಗಿ ವ್ಯವಸ್ಥೆಗಳನ್ನು ಮಾಡಬೇಕೆಂಬ ತರ್ಕ ಅವಳದು. ಹೆಣ್ಣು ಅಮಾಯಕಳಾಗಿಯೂ ದೌರ್ಜನ್ಯದ ವಿರುದ್ಧ ಅಗತ್ಯವಿದ್ದರೆ ಬಂದೂಕದ ಸಹಾಯ ಪಡೆಯಬಹುದು. ಇದು ಅವಳ ಪುನಶ್ಚೇತನ ಜೀವನದ ಪಯಣದಲ್ಲಿ ಕಲಿತ ಪಾಠ. ಶೋಷಣೆ ತಡೆಯಲಾರದೆ ಸಮಾಜವನ್ನೇ ಎದುರುಹಾಕಿಕೊಂಡು ತಪ್ಪು ದಾರಿಹಿಡಿದ ಡಕಾಯಿತರು ಎಲ್ಲಿ ಈಗಲೂ ಇದ್ದಾರೋ ಅವರಿಗೂ ನ್ಯಾಯ ಸಿಗಲಿ, ಅವರೂ ಕೂಡ ತನ್ನಂತೆಯೇ ಶರಣಾಗತರಾಗಲು ನ್ಯಾಯಾಂಗದ ಕ್ರಮಗಳನ್ನು ಜಾರಿಗೆ ತರಲು ಸಫಲಳಾದಳು. ಚಂಬಲ್‌ನಲ್ಲಿ ಮಾತ್ರ ಡಕಾಯಿತಿ ನಡೆಯುತ್ತಿದೆ ಅಂದುಕೊಂಡರೆ ಸಾಲದು. ದಿಲ್ಲಿಯಲ್ಲೂ ಬೇರೆ ಮಾರ್ಗಗಳಿಂದ ಎಲ್ಲ ಕಡೆ ಲೂಟಿಮಾಡುವವರೇ ಇದ್ದಾರೆ. ನಾಗರಿಕ ವರ್ತನೆ ಕೂಡ ಪುನಶ್ಚೇತನಗೊಳ್ಳಲಿ ಎನ್ನುವುದು ಅವಳ ಆಶಯವಾಗಿತ್ತು. ಡಕಾಯಿತ ಜೀವನಕ್ಕೆ ವಿರುದ್ಧವಾಗಿ, ದಿನದಲ್ಲಿ ಒಂದು ಬಾರಿ ಒಬ್ಬರಿಗೋ ಇಬ್ಬರಿಗೋ ಸಹಾಯ ಮಾಡಿದರೆ ಅದೇ ಸಾರ್ಥಕ ಬದುಕಾಗುತ್ತದೆ ಎನ್ನುವ ದೃಢ ನಂಬಿಕೆಯನ್ನು ಬೆಳೆಸಿಕೊಂಡಳು. ರಾಜಕೀಯದಲ್ಲಿ ತನ್ನ ಸುತ್ತಮುತ್ತಲು ಆಗುತ್ತಿದ್ದ ಎಷ್ಟೊಂದು ವಿಚಾರಗಳು ಅವಳ ಪ್ರಜ್ಞೆಗೆ ಬರುತ್ತಲೇ ಇರಲಿಲ್ಲ. ಉದಾಹರಣೆಗೆ ಪ್ರಪಂಚದ ಬೇರೆ ಬೇರೆ ದೇಶಗಳ ಪತ್ರಿಕೋದ್ಯಮಿಗಳು ಅವಳ ಬಗ್ಗೆ ಅವರದೇ ಭಾಷೆಯಲ್ಲಿ ಏನು ಬರೆಯುತ್ತಿದ್ದರು ಎನ್ನುವುದಾಗಲಿ, ಯಾರು ತನ್ನ ಕಥೆಯನ್ನು ತಿರುಚಿ ತಮ್ಮ ಸ್ವಂತ ಲಾಭಕ್ಕಾಗಿ ಬಳಸಿಕೊಳ್ಳುತ್ತಿದ್ದರು ಎನ್ನುವ ವಿಚಾರಗಳಾವುವೂ ಅವಳ ಗಮನಕ್ಕೆ ಬರುತ್ತಿರಲಿಲ್ಲ. ವಿದೇಶದ ಪುಸ್ತಕ ಮತ್ತು ಹಿಂದಿ ಸಂಚಿಕೆಗಳಲ್ಲಿ ತನ್ನ ಫೋಟೋಗಳು ಮುದ್ರಿತವಾಗುವುದನ್ನು ಕಂಡು ಸಂತೋಷಪಡುತ್ತಿದ್ದಳು ಅಷ್ಟೇ! ಅವಳಲ್ಲಿದ್ದ ಪ್ರತೀಕಾರದ ಬದಲು ಮತ್ತೆ ಅಮಾಯಕಳಾಗಿ ಪುನಶ್ಚೇತನಗೊಂಡಿದ್ದಳು. ಹಿಂದೂಸ್ಥಾನದ ಎಲ್ಲ ಶೋಷಿತ ಜನಾಂಗಕ್ಕೂ ಆಕೆ ತೋರಿಸಿಕೊಟ್ಟದ್ದೆಂದರೆ "ನಾವು ಯಾವಾಗ ಸಂಕಲ್ಪ ಮಾಡುತ್ತೇವೆಯೋ ಆಗ ತಪ್ಪುಗಳನ್ನು ಮತ್ತು ದೌರ್ಜನ್ಯವನ್ನು ಎದುರಿಸಿ ಸಮಾಜವನ್ನು ಸತ್ಯದ ನೇರದಾರಿಯಲ್ಲಿ ಹೋಗಲು ಅನುವು ಮಾಡಿಕೊಡಬಹುದು." ಒಂದು ವೇಳೆ ಆಕೆಯ ಹತ್ಯೆ ಆಗದೆ ಇಂದಿಗೂ ಜೀವಿತವಾಗಿದ್ದರೆ ಬಹುಶಃ ತನ್ನ ಸಮುದಾಯದ ಅತಿ ದೊಡ್ಡ ಪುನಶ್ಚೇತನಗೊಂಡ ಪ್ರತಿನಿಧಿ ಆಗುತ್ತಿದ್ದಳು. ಅವಳು ನಂಬಿದ ವ್ಯಕ್ತಿಯೇ ಅವಳನ್ನು ಗುಂಡಿಟ್ಟು ಕೊಲ್ಲುವುದು ಅವಳ ದೌರ್ಭಾಗ್ಯವೋ ಅಥವಾ ನಮ್ಮ ಸಮಾಜದ ಅನೀತಿಯೋ ಎಂದು ಗೊತ್ತಿಲ್ಲ.

**ಮುಕ್ತಾಯ:**

ಫೂಲನ್‌ದೇವಿ ಹಂತ ಹಂತವಾಗಿ ನಿರ್ದಿಷ್ಟ ದಿಕ್ಕಿನಲ್ಲಿ ಸಾಗಿ, ಶೋಷಿತ ಹೆಣ್ಣಿನ ಸ್ಥಾನದಿಂದ ಸಮಾಜದಲ್ಲಿ ಉನ್ನತ ಸ್ಥಾನ ಪಡೆದ ಕತೆ ರೋಚಕ. ಇದರಲ್ಲಿ ಪುನಶ್ಚೇತನ ಒಂದು ಪ್ರಭಾವಿ ಪ್ರಕ್ರಿಯೆ ಮತ್ತು ಸಾಧನ. ಎಲ್ಲ ಶೋಷಿತರಿಗೂ ಆ ಪ್ರಕ್ರಿಯೆಯ ಬಗ್ಗೆ ಒಂದೇ ರೀತಿಯ ಹತೋಟಿ ಇರಲು ಸಾಧ್ಯವಿಲ್ಲ. ಈ ಪುಟಿದೇಳುವ ಪ್ರಕ್ರಿಯೆಯಿಂದಲೇ

ಸಮುದಾಯದ ಜನಪದದಲ್ಲಿ "ದೇವಿ" ಎಂದು ಬಿರುದು ಪಡೆದದ್ದು ಫೂಲನ್‌ದೇವಿಯ ಆತ್ಮಸಾಧನೆ. ಆದರೆ ತನ್ನ ಮೇಲೆ ಅತ್ಯಾಚಾರ ಮಾಡಿದ ದುಷ್ಕರ್ಮಿಗಳ ಮೇಲಿನ ಪ್ರತೀಕಾರವೇ ಅವಳನ್ನು ಹೊರಗಿನ ಪ್ರಪಂಚಕ್ಕೆ ಕುಖ್ಯಾತಳನ್ನಾಗಿ ಪರಿಚಯ ಮಾಡಿಕೊಟ್ಟಿದ್ದು! ಶೋಷಿತ ದಲಿತ ಹೆಣ್ಣು ಮೇಲ್ಜಾತಿಯ ಪುರುಷರನ್ನು ಸಾಲಾಗಿ ನಿಲ್ಲಿಸಿ ಬಂದೂಕಿನಿಂದ ಕೊಂದದ್ದು ಕೆಲವರಿಗೆ ಕ್ರೌರ್ಯ, ಮತ್ತೆ ಕೆಲವರಿಗೆ ನ್ಯಾಯಸಮ್ಮತ. ತನ್ನ ಕ್ರೌರ್ಯದಿಂದ ಇತರ ಸ್ತ್ರೀಯರೇ ಶೋಷಿತರಾದಾಗ ಅವಳು ಮಾಡಿದ ಕೆಲಸಕ್ಕೆ ಸಮರ್ಥನೆ ಇದೆಯೇ? ಸರಿ ತಪ್ಪಿನ ಸವಾಲುಗಳನ್ನು ಅವಲೋಕನ ಮಾಡಲು ಈ ಲೇಖನ ನಿಷ್ಪಕ್ಷಪಾತದಲ್ಲಿ ಫೂಲನ್‌ದೇವಿಯ ವೈಯಕ್ತಿಕ ವ್ಯಕ್ತಿಚಿತ್ರಣ ನೀಡಿದೆ. ಈ ಚಿತ್ರಣದಲ್ಲಿ ಮೇಲ್ನೋಟಕ್ಕೆ ಅವಳು ಅಮಾಯಕತೆ ಮತ್ತು ಕ್ರೌರ್ಯದ ದ್ವಂದ್ವದಲ್ಲಿ ಸಿಲುಕಿದ್ದರೂ, ಕೊನೆಗೆ ಕಂಬಳಿಹುಳ ಚಿಟ್ಟೆ ಆಗುವ ರೀತಿಯಲ್ಲಿ ರೂಪಾಂತರಗೊಂಡು ಸಮಾಜಕ್ಕೆ ಉಪಯುಕ್ತ ವ್ಯಕ್ತಿ ಆಗುತ್ತಾಳೆ. ಈ ಪರ್ಯಟನೆಯ ಅನ್ವೇಷಣೆಯಲ್ಲಿ ಮುಖ್ಯವಾಗಿ ವ್ಯಕ್ತವಾಗುವುದು ಅವಳ ಕಷ್ಟಸಹಿಷ್ಣುತೆ, ದೃಢತೆ ಮತ್ತು ತನ್ನೊಡನೆ ಸ್ಪಂದಿಸುವವರ ಸಹಾಯ ಯಾಚಿಸಿ ಕಾರ್ಯ ಸಾಧಿಸುವ ಛಲ. ಇದಕ್ಕಾಗಿ, ಪುರುಷರ ಮತ್ತು ಸಮಾಜದ ಬೆಂಬಲವನ್ನು ಪಡೆದದ್ದಲ್ಲದೆ ಧಾರ್ಮಿಕ ಪರಿವರ್ತನೆಯ ಮೂಲಕ ಹಿಂದಿನ ಪ್ರತೀಕಾರ ಮನೋವೃತ್ತಿಯನ್ನು ಸಕಾರಾತ್ಮಕವಾಗಿ ಬದಲಾಯಿಸಿಕೊಳ್ಳಲು ಫೂಲನ್‌ದೇವಿಗೆ ಸಾಧ್ಯವಾಯಿತು.

**Reference:**


1. The Bandit Queen of India: An Indian Woman's Amazing Journey from Peasant to International Legend, by Phoolan Devi 2003 Internet Archive.
2. Gestures of Cultural Justice: Narrative Justice for Phoolan Devi in Epic Recounting February 2022 Economic and Political Weekly 57(9).
3. Devi, Phoolan (1996). Cuny, Marie-Therese; Rambali, Paul (eds.). I, Phoolan Devi: The autobiography of India's bandit queen. London: Little, Brown and Company. ISBN 0-316-87960-6.
4. India's Bandit Queen: the True Story of Phoolan Devi, by Sen, Mala.
5. Outlaw: India's Bandit Queen and Me, by Moxham, Roy, 2010.
6. 'From Heroic Durga to the Next Victim of an Oppressive Patriarchal Indian Culture: Too Many Variants of Phoolan Devi's Biography'. Cracow Indological Studies. 20 (2): 257–280.
7. Several YouTube and Internet Media interviews with Phoolan Devi.
8. "Bandit Queen," Hindi Film directed by Shekar Kapoor.




# ಸ್ತ್ರೀ ಸಂವೇದನೆ

**ಸಿ. ಎಂ. ರಾಮಕೃಷ್ಣ**
Voorhees, New Jersey

*

ಸಂಸ್ಕೃತಭಾಷೆಯ "ಸಂವೇದನ" ಶಬ್ದಕ್ಕೆ ಗ್ರಹಿಕೆ, ಅರಿವು, ಭಾವನೆ, ಅನುಭವ, ಬವಣೆ, ಇತ್ಯಾದಿ ಅರ್ಥಗಳಿವೆ. ಹೆಂಗಸರ, ಹೆಣ್ಮಕ್ಕಳ ಬವಣೆಗೆ ಮತಗಳು (religions), ಅದರಲ್ಲೂ ಮತಾಂಧತೆ, ಮೂಢನಂಬಿಕೆಗಳು ಬಹುಮಟ್ಟಿಗೆ ಕಾರಣ. ಮೊದಲು, ಈ ಮತಗಳ ಹುಟ್ಟಿಗೆ ಒಂದು ಸಂಭಾವ್ಯ ಹಿನ್ನೆಲೆ, ಮಾರ್ಗವನ್ನು ಪರಿಶೀಲಿಸೋಣ. ಮತಗಳು ಏನಿದ್ದರೂ, ನಮ್ಮ ಅತ್ಯಂತ ಪ್ರಾಚೀನ ಮಾನವನು, ಸೂರ್ಯ, ಚಂದ್ರ, ಕಾಡ್ಗಿಚ್ಚು (ಬೆಂಕಿ), ಚಂಡಮಾರುತ (ಗಾಳಿ), ಸುರಿಮಳೆ/ ಪ್ರವಾಹ (ನೀರು), ಮುಂತಾದ ಪ್ರಕೃತಿಶಕ್ತಿಗಳ, ಮತ್ತು ವಾತ್ಸಲ್ಯ, ಪ್ರೇಮ, ರತ್ಯಾಸೆ, ಜನನ, ಜ್ಞಾನ/ವಿದ್ಯೆ, ರೋಗ, ಸಾವು, ಮುಂತಾದ ನೈಸರ್ಗಿಕ ಅದ್ಭುತಗಳ ವಿಚಾರವಾಗಿ ತನಗೆ ಅನಿವಾರ್ಯವಾಗಿದ್ದ ಅಜ್ಞಾನದಿಂದ, ಪ್ರತಿಯೊಂದು ಪ್ರಕೃತಿಬಲಕ್ಕೂ, ಪ್ರತಿಯೊಂದು ನೈಸರ್ಗಿಕ ಘಟನೆಗೂ ತನಗೆ ತಿಳಿಯದ ಅಥವಾ ತಿಳಿಯಲಾಗದ ಯಾವುದೋ ಒಂದು ಅಪ್ರಾಕೃತ ಶಕ್ತಿಯು ಕಾರಣವಾಗಿರಬೇಕು ಎಂದು (ತಪ್ಪಾಗಿ) ಊಹಿಸಿ, ಒಂದೊಂದು ಪ್ರಕೃತಿಬಲಕ್ಕೂ, ಒಂದೊಂದು ಪ್ರಾಕೃತಿಕ ಘಟನೆಗೂ ಒಂದೊಂದು ದೇವರನ್ನು, ಬಹುಮಟ್ಟಿಗೆ ತನ್ನದೇ ರೂಪವನ್ನು ಕೊಟ್ಟು, ಕಲ್ಪಿಸಿದನು. ಈ ಪ್ರಕಾರ, ಮಾನವನು ಅನೇಕ ದೇವರುಗಳನ್ನು ತಾನೇ ಕಲ್ಪಿಸಿ, ಆ ದೇವರುಗಳ ಅಸ್ತಿತ್ವದಲ್ಲಿ ನಂಬಿಕೆ ಇಟ್ಟನು. [ಇದಕ್ಕೆ ಒಂದು ಪುರಾತನವಾದುದೇ ಆದ ಆಧಾರವಿದೆ: ವೇದಗಳಲ್ಲಿ ವರ್ಷಿಷ್ಠವಾದ (oldest) ಋಗ್ವೇದದಲ್ಲಿ ಬರುವ ನಾಸದೀಯ ಸೂಕ್ತದ 6ನೇ ಶ್ಲೋಕವು ಹೀಗೆ ಹೇಳುವುದು:

**ಯಾರಿಗೆ ಗೊತ್ತು; ಯಾರಿಗೆ ಹೇಳಲು ಸಾಧ್ಯ**
**ಇದೆಲ್ಲಾ ಎಲ್ಲಿಂದ ಬಂತು; ಸೃಷ್ಟಿಯು ಹೇಗಾಯಿತು? (ಎಂದು!)**
**ದೇವರುಗಳೇ ('ದೇವಾಃ') ಸೃಷ್ಟಿಯಾದ ಮೇಲೆ ಬಂದರು; (ಎಂದ ಮೇಲೆ)**
**ಇದು ಎಲ್ಲಿಂದ ಸಂಭವಿಸಿತು ಎಂದು ಯಾರಿಗೆ ತಾನೇ ಸತ್ಯವಾಗಿ ತಿಳಿದಿದೆ?]**

ಕಾಲಕ್ರಮದಲ್ಲಿ ಈ ನಂಬಿಕೆಯು ಬೇರೂರಿ, ತಾನೇ ಭಾವಿಸಿ ಕಲ್ಪಿಸಿದ ದೇವರುಗಳ ಅಸ್ತಿತ್ವವು ಸತ್ಯವೆಂದೇ ಅಂಗೀಕರಿಸಿದನು. ಈ ನಂಬಿಕೆಯು ತಲೆಮಾರಿನಿಂದ ತಲೆಮಾರಿಗೆ ವರ್ಗಾವಣೆಯಾಯಿತು. ಈ ಪ್ರಕಾರ, ತಾನೇ ಊಹಿಸಿಕೊಂಡು ಕಲ್ಪಿಸಿದ ದೇವರುಗಳಿಗೆ ಪ್ರಾಚೀನ ಮಾನವನು, ತನಗೆ ತಿಳಿದ ಸುಗುಣಗಳನ್ನಷ್ಟೇ ಅಲ್ಲದೆ, ತನ್ನ ದುರ್ಗುಣಗಳನ್ನೂ ಆರೋಪಿಸಿದನು. ಬಹುಶಃ ಈ ಕಾರಣದಿಂದ, ಮಾನವನಿಗೆ ತಾನೇ ಕಲ್ಪಿಸಿದ ದೇವರುಗಳಲ್ಲಿ ಭಯವು ಹುಟ್ಟಿತು: ಆ ದೇವರುಗಳಿಗೆ ಯಾವ ಕಾರಣದಿಂದಲಾದರೂ ಕೋಪ ಬಂದರೆ ಅಥವಾ ಅಸಮಾಧಾನವಾದರೆ, ತನಗೆ ಕೆಡುಕಾಗುವುದೆಂದೂ, ಅದಕ್ಕಾಗಿ ದೇವರುಗಳನ್ನು ಪೂಜಾ–ಪ್ರಾರ್ಥನೆಗಳಿಂದ ತಣಿಸಿದರೆ, ತನಗೆ ಒಳ್ಳೆಯದಾಗುವುದೆಂದೂ ಭಾವಿಸಿದನು. ಆ ಭಾವನೆಯ ಪ್ರಕಾರ, ಅನೇಕ ಪೂಜಾವಿಧಿಗಳನ್ನೂ, ಶಾಸ್ತ್ರಗಳನ್ನೂ, ಮಂತ್ರಗಳನ್ನೂ ರಚಿಸಿದನು. ಮತ್ತೆ, ತನ್ನ ಚರ್ಯೆಯಲ್ಲಿ ಲೋಕಕ್ಕೆ ಅಹಿತವಾದುದು ಪಾಪಕಾರ್ಯವೆಂದೂ, ಲೋಕಕ್ಕೆ ಹಿತವಾದುದು ಪುಣ್ಯಕಾರ್ಯವೆಂದೂ ವಿಭಾಗಿಸಿ, ಅವುಗಳಿಗೆ ಅನುಗುಣವಾಗಿ ನರಕ, ಸ್ವರ್ಗಾದಿಗಳನ್ನು ಊಹಿಸಿ ಕಲ್ಪಿಸಿದನು. ನಂತರ ಪ್ರಾಯಶಃ, ಪ್ರಾಣೋನ್ಮುಖನಾದವನ ಮತ್ತು ಅವನ ಬಂಧುಮಿತ್ರರ ಮಾನಸಿಕ ಸಾಂತ್ವನಕ್ಕಾಗಿ, ಆತ್ಮವನ್ನು ಭಾವಿಸಿ ಕಲ್ಪಿಸಿದನೆಂದು ತೋರುವುದು. (ಋಗ್ವೇದದಲ್ಲಿ ಆತ್ಮದ ಕಲ್ಪನೆಯೇ ಇಲ್ಲ ಎನ್ನುವುದು ಗಮನಾರ್ಹ!)

ಈ ಪ್ರಕಾರ ಮಾನವನು ಮತವನ್ನು ಸ್ಥಾಪಿಸಿದನು. "ಹಾಡು ಹಲವಂಗ" ಎನ್ನುವ ಗಾದೆಯಂತೆ ಕಾಲಾಂತರದಲ್ಲಿ, ಕೆಲವು ಮತಸ್ಥಾಪಕರು ಇದ್ದ ಮತದ ಉಪಶಾಖೆ–ಯನ್ನಾಗಿಯೋ ಸಂಸ್ಕರಣವಾಗಿಯೋ ಅಥವಾ ಪ್ರತಿಸ್ಪರ್ಧಿಯಾಗಿಯೋ ಬೇರೆ ಬೇರೆ ಮತಗಳನ್ನು ಸ್ಥಾಪಿಸಿದರು. ಕಾಲಕ್ರಮದಲ್ಲಿ, ಈ ಮತಗಳಲ್ಲಿ ಅನೇಕ ಸೂತ್ರ–ನಿಯಮಾದಿಗಳು ವಿಧಿಸಲ್ಪಟ್ಟುವು. ಈ ವಿಧಿ–ನಿಯಮಾದಿಗಳೆಲ್ಲಾ ಪ್ರಾಯಿಕವಾಗಿ ಪುರುಷಪ್ರಣೀತ ಎನ್ನುವುದರಲ್ಲಿ ಅತಿಶಯವೇನಿಲ್ಲ. ಆದುದರಿಂದಲೇ, ಈ ವಿಧಿ–ನಿಯಮಾದಿಗಳ ಅನುಸರಣೆಯಲ್ಲಿನ ತೀವ್ರತೆಯನ್ನು ಬಹುಮಟ್ಟಿಗೆ ಹೆಣ್ಮಕ್ಕಳು, ಹೆಂಗಸರು ಅನುಭವಿಸುವುದು. ಈ ವಿಧಿ–ನಿಯಮಾದಿಗಳು ಬಹುತೇಕವಾಗಿ ಮೂಢನಂಬಿಕೆಗಳು. ಈ ನಂಬಿಕೆಗಳನ್ನು ಮುಖ್ಯವಾಗಿ ಹಿರಿಯರು ಒತ್ತಾಯಿಸುತ್ತಿದ್ದರು. ಕಾಲಾಂತರದಲ್ಲಿ ಅನೇಕ ನಂಬಿಕೆಗಳು ಪದ್ಧತಿಗಳಾಗಿ ಮಾರ್ಪಟ್ಟವು. ನಂಬಿಕೆ–ಪದ್ಧತಿಗಳಲ್ಲಿ ಕೆಲವು ಅನಪಕಾರಿ. ಉದಾಹರಣೆಗೆ: ಪೂಜಾ–ಪ್ರಾರ್ಥನೆಗಳು. ಇನ್ನು ಕೆಲವು ಹೀನ ಮತ್ತು ಕ್ರೂರ. ಉದಾಹರಣೆಗೆ: ದೇವರಿಗೆ ಹರಕೆ ಮಾಡುವುದರಿಂದ, ಅವಿವಾಹಿತ ಹೆಣ್ಮಕ್ಕಳನ್ನು ತಂದೆತಾಯಿಯರೇ ಬಸವಿ ಬಿಡುವುದು (ದೇವಸ್ಥಾನಗಳಿಗೆ ದೇವದಾಸಿಯರನ್ನಾಗಿ ಸಮರ್ಪಿಸುವುದು). ಅರ್ಥಾತ್, ಆ ಹೆಣ್ಮಕ್ಕಳನ್ನು

ಜೀವಾವಧಿ ವೇಶ್ಯೆಯರನ್ನಾಗಿ ಮಾಡುವುದು. ಈ ಪದ್ಧತಿಯು ಇನ್ನೂ ಕೆಲವು ಕಡೆ ಜಾರಿಯಲ್ಲಿರುವುದಾಗಿ ತೋರುವುದು. ಮತ್ತೆ ಕೆಲವು ನಂಬಿಕೆ–ಪದ್ಧತಿಗಳು ಬಹುಮಟ್ಟಿಗೆ ಅಪಾಯಕಾರಿ. ಉದಾಹರಣೆಗೆ: ಹಿಂದೆ ಭಾರತ ದೇಶದಲ್ಲಿ ರೂಢಿಯಲ್ಲಿದ್ದ ಸಹಗಮನ ಪದ್ಧತಿ.

ಮೊದಲು ನಮ್ಮ ಹಿಂದೂಮತದಲ್ಲಿ ಹಿಂದೆ ಇದ್ದ, ಕೆಲವು ಕಡೆ ಇನ್ನೂ ಇರುವ ಕೆಲವು ಪದ್ಧತಿಗಳನ್ನು ಪರಿಶೀಲಿಸೋಣ. ನಮ್ಮ ಸಮಾಜದಲ್ಲಿ ಮುಟ್ಟಾದ ಹೆಣ್ಣನ್ನು ರಜಸ್ವಲೆ ಎಂದು ಕರೆಯಲಾಗಿತ್ತು. ರಜಸ್ಸು ಎಂದರೆ ಧೂಳು, ಕೊಳಕು, ಮಲಿನ, ಮುಟ್ಟು (ಋತುಸ್ರಾವ) ಇತ್ಯಾದಿ ಅರ್ಥಗಳು. ಆ ಕಾರಣದಿಂದ ಮುಟ್ಟಾಗಿರುವ ಹೆಣ್ಣು ಮೈಲಿಗೆ ಎಂದು ಆ ಹೆಣ್ಣನ್ನು ಮೂರು ದಿವಸ, ಒಳಗೆ ಸೇರಿಸದೆ ಪ್ರತ್ಯೇಕವಾಗಿ ಇರಿಸುತ್ತಿದ್ದರು. ಮುಟ್ಟಾದಾಗ, ಹೆಣ್ಣಿನ ದೈಹಿಕ ರಕ್ಷಣೆ (bodily immunity) ಕಡಿಮೆಯಾಗುವ ಸಂಭಾವ್ಯತೆ ಹೆಚ್ಚು. ಆಕಾರಣ, ಆ ಹೆಣ್ಣಿಗೆ ಖಾಯಿಲೆ ಸೋಂಕಿನ ಸಾಧ್ಯತೆಯೂ ಹೆಚ್ಚುವುದು. ಆದುದರಿಂದ, ಮುಟ್ಟಿನ ದಿವಸಗಳಲ್ಲಿ, ಹೆಣ್ಣಿಗೆ ಹೆಚ್ಚು ಸಂರಕ್ಷಣೆ ಕೊಡಬೇಕು. ಅದು ಬಿಟ್ಟು, ಆ ಹೆಣ್ಣನ್ನು ಅಸ್ಪೃಶ್ಯಳಂತೆ ಪ್ರತ್ಯೇಕವಾಗಿಡಲಾಗಿತ್ತು. ಕೆಲವು ಹೆಣ್ಮಕ್ಕಳು ಮುಟ್ಟಾದಾಗ, ಮುಟ್ಟುಸೆಳೆತದಿಂದ (menstrual cramp) ಬಾಧೆಪಡುತ್ತಾರೆ. ಕೆಲವು ವೇಳೆ ಮುಟ್ಟುಸೆಳೆತದ ನೋವನ್ನು ತಡೆಯಲಾಗದೆ, ಅಳುವುದೂ ಉಂಟು. ಅಂತಹ ಸಮಯದಲ್ಲಿ ಸಹ ಹತ್ತಿರ ಹೋಗಿ ಆ ಹೆಣ್ಣನ್ನು ಆದರಿಸಿ, ಸಾಂತ್ವನಗೊಳಿಸಲು ಯಾರೂ ಹೋಗುತ್ತಿರಲಿಲ್ಲ. ನಾವು ಚಿಕ್ಕವರು ಹೋಗಿ ಸಮಾಧಾನಪಡಿಸುವುದಕ್ಕೂ ಹಿರಿಯರು ನಮ್ಮನ್ನು ಬಿಡುತ್ತಿರಲಿಲ್ಲ. ಅದೊಂದು ಅವೈಚಾರಿಕ, ಅವೈಜ್ಞಾನಿಕ ಪದ್ಧತಿ. ಆದರೂ, ಈ ಪದ್ಧತಿಯನ್ನು ಇನ್ನೂ ಕೆಲವು ಮನೆಗಳಲ್ಲಿ, ಅದೂ ಕೆಲವು ವೈದ್ಯವಿಶಾರದರ ಮನೆಗಳಲ್ಲಿ, ಕಟ್ಟಿನಿಂದಾಚರಿಸುವುದು ಬಹಳ ಸೋಜಿಗ.

ಹೀಗೆಯೇ, ಒಬ್ಬ ಹೆಂಗಸು, ಗಂಡನನ್ನು ಕಳೆದುಕೊಂಡ ಮೊದಲ ಹತ್ತು–ಹನ್ನೆರಡು ದಿವಸ, ನಾನಾ ವಿಧ ಹೀಯಾಳಿಕೆಗೆ ಗುರಿಯಾಗುತ್ತಾಳೆ. ಈ ಹೇಯ ವರ್ತನೆಯು ಕೋಮು ಅಥವಾ ಜಾತಿಗೆ ಅನುಸಾರವಾದುದು. ಕೆಲವು ಕೋಮುಗಳಲ್ಲಿ ನವವಿಧವೆಯರ ತಲೆಯನ್ನು ಮುಂಡಿಸುತ್ತಾರೆ. ಇದೂ ಒಂದು ಹೆಂಗಸರಿಗೆ ಮಾಡುವ ಕ್ರೂರ ಅವಹೇಳನ. ಹಿಂದೂ ಶಾಸ್ತ್ರಗಳ ಪ್ರಕಾರ ಹೆಣ್ಮಕ್ಕಳ ಪುನರ್ವಿವಾಹವು ಸಮ್ಮತವಾದರೂ, ಕಾರಣಾಂತರದಿಂದ ಕಾಲಾಂತರದಲ್ಲಿ ವಿಧವಾವಿವಾಹವು ಹಿಂದೂ ಸಮಾಜದಲ್ಲಿ ನಿಷೇಧವಾಯಿತು. ತಾರುಣ್ಯದಲ್ಲೇ ವಿಧವೆಯಾದ ಹೆಣ್ಣು ಪುನಃ ಮದುವೆಯಾಗದಂತೆ ಮಾಡಲು ಆ ಹೆಣ್ಣಿನ ತಲೆಯನ್ನು ಬಲವಂತವಾಗಿ ಮುಂಡಿಸಲು ಪ್ರಾರಂಭವಾಯಿತೆಂದು ತೋರುವುದು. ಈಗ ಆ ಕ್ರೂರ ಪದ್ಧತಿಯು ಬಹುಮಟ್ಟಿಗೆ ಇಲ್ಲವಾಗಿದೆ. ಎಲ್ಲದಕ್ಕಿಂತ ಅತ್ಯಂತ ಕ್ರೂರ ಪದ್ಧತಿಯು ಸತಿ ಅಥವಾ ಸಹಗಮನ ಆಗಿತ್ತು. ಇದರಲ್ಲಿ ಮೂಢನಂಬಿಕೆ ಮತ್ತದರ ನಿರ್ದಯ ಪರಿಣಾಮವು ವ್ಯಕ್ತವಾಗಿತ್ತು. ಆತ್ಮ, ಸ್ವರ್ಗ ಇರುವುವು ಎಂಬ ಮೂಢನಂಬಿಕೆಯಿಂದ, ಮೃತಿಹೊಂದಿದ ಗಂಡನ ಚಿತೆಯನ್ನೇರಿ ಹೆಂಡತಿಯೂ ಗಂಡನ

ದೇಹದೊಡನೆ ಸಜೀವವಾಗಿ ಸುಟ್ಟು ಭಸ್ಮವಾಗುತ್ತಿದ್ದಳು. ಅದರಿಂದ ಅವಳ ಆತ್ಮವೂ, ಅವಳ ಗಂಡನ ಆತ್ಮದೊಂದಿಗೆ ಸ್ವರ್ಗಕ್ಕೆ ಹೋಗುವುದೆಂಬ ಒಂದು ಕುರುಡುನಂಬಿಕೆ. ಈ ಸಹಗಮನ ಪದ್ಧತಿಯು ಮೊದಲು ಸ್ವೇಚ್ಛೆಯಾಗಿತ್ತು. ಯಾವಾಗ ನವವಿಧವೆಯರು ಸಹಗಮನಮಾಡಲು ಒಪ್ಪುತ್ತಿರಲಿಲ್ಲವೋ, ಆಗ ಅದು ಬಲಾತ್ಕರಿತವಾಯಿತು. ಕೊನೆಗೆ, ಸಮಾಜಸುಧಾರಕ ಶ್ರೀ (ರಾಜ) ರಾಮ್ ಮೋಹನ್ ರಾಯ್ ಅವರು ಇಂಡಿಯಾದ ಮೊದಲನೇ ಗವರ್ನರ್ ಜೆನರಲ್ ಆಗಿದ್ದ, ಲಾರ್ಡ್ ವಿಲಿಯಂ ಬೆಂಟಿಂಕ್‌ರವರ ಸಹಾಯದಿಂದ ಆ ಕ್ರೂರ ಸಹಗಮನ ಪದ್ಧತಿಯನ್ನು (04 ಡಿಸೆಂಬರ್ 1829ರಂದು) ರದ್ದುಪಡಿಸಿದರು.

ನಮ್ಮ ಹಿಂದೂ ಸಮಾಜದಲ್ಲಿ ಇನ್ನೊಂದು ದುಷ್ಟ ಪದ್ಧತಿ 'ವರದಕ್ಷಿಣೆ' ಇದೆ. ಇದೂ ಒಂದು ಸ್ತ್ರೀ–ಪುರುಷ ಅಸಮಾನತೆಯ ಪದ್ಧತಿ. ಭಾರತೀಯ ದಂಡ ಸಂಹಿತೆ (ಇಂಡಿಯನ್ ಪೀನಲ್ ಕೋಡ್) ಪ್ರಕಾರ, ವರದಕ್ಷಿಣೆಯನ್ನು ಕೊಡುವುದು, ತೆಗೆದುಕೊಳ್ಳುವುದು ಅಪರಾಧವಾದರೂ, ಭಾರತದಲ್ಲಿ ಕೆಲವು ಕಡೆ, ವರದಕ್ಷಿಣೆ ಕೊಡಲಿಲ್ಲ ಅಥವಾ ಕೊಟ್ಟ ವರದಕ್ಷಿಣೆ ಸಾಲದು ಎಂದು, ಮದುವೆಯಾಗಿ ಮನೆಗೆ ಬಂದ ಹೆಣ್ಮಕ್ಕಳನ್ನು ತೀವ್ರವಾದ ಕಿರುಕುಳಕ್ಕೆ ಗುರಿಮಾಡುವುದು, ಅಥವಾ ಇನ್ನೂ ದುಷ್ಟತರವಾಗಿ ಖೂನಿ ಮಾಡುವ / ಸುಟ್ಟುಹಾಕುವ ರಾಕ್ಷಸೀಕೃತ್ಯವು ಇಂದೂ ಜಾರಿಯಲ್ಲಿದೆ ಎನ್ನುವುದು ಬಹು ಶೋಚನೀಯ.

ಮುಸ್ಲಿಂ ಪಂಗಡದಲ್ಲಂತೂ, ಹೆಂಗಸರಿಗೆ ಯಾವ ವಿಧವಾದ ಹಕ್ಕೂ ಇಲ್ಲದಿರುವಂತೆ ಕಾಣುವುದು. ಒಂದು ಹೆಣ್ಣು ನೀತಿಗೆಟ್ಟವಳೆಂದು ಅಥವಾ ದಾಂಪತ್ಯದ್ರೋಹಿ ಎಂಬ ಸಂದೇಹ ಬಂದರೇ ಸಾಕು ಆಗ, ಆಕೆಯ ಗಂಡನೋ, ತಂದೆಯೋ, ಅಥವಾ ಅಣ್ಣತಮ್ಮಂದಿರೋ, ಮನೆತನದ ಮರ್ಯಾದೆಯನ್ನು ಕಾಪಾಡಲು, ಅವಳನ್ನು ಖೂನಿ ಮಾಡಬಹುದೆಂದು ಮತನಿಯಮವು ಇದೆಯಂತೆ. ಅದಕ್ಕೂ ಹೇಯತರವಾಗಿ, ನೀತಿಗೆಟ್ಟವಳೆಂದು ಗುಮಾನಿ ಬಂದ ಹೆಣ್ಣನ್ನು ಸಾರ್ವಜನಿಕರು, ಸಮಾಜದ ಮರ್ಯಾದೆಯನ್ನು ಉಳಿಸಲು, ಕಲ್ಲುಗಳನ್ನು ಹೊಡೆದು ಸಾಯಿಸಬೇಕೆಂದೂ ವಿಧಿ ಇದೆಯಂತೆ. ಈ ಕ್ರೂರ ಪದ್ಧತಿಗಳು, ಅಪರೂಪವಾದರೂ, ಇನ್ನೂ ಕೆಲವು ಮುಸ್ಲಿಂ ಕೋಮುಗಳಲ್ಲಿ ಜಾರಿಯಲ್ಲಿರುವುದು ಶೋಚನೀಯ. ಮತ್ತೆ, ತನಗೆ ಇಷ್ಟವಿಲ್ಲದ ಗಂಡನನ್ನು ಹೆಂಡತಿಯು ವಿವಾಹವಿಚ್ಛೇದನ ಮಾಡುವಹಾಗಿಲ್ಲ. ಆದರೆ, ಅದೇ ಒಬ್ಬ ಮುಸ್ಲಿಂ ಗಂಡಸಿಗೆ, ಯಾವ ಕಾರಣದಿಂದಲೇ ಆದರೂ, ಅವನ ಹೆಂಡತಿಯು ಇಷ್ಟವಿಲ್ಲದಿದ್ದರೆ, ಅವನು ಮೂರು ಸಲ 'ತಲಾಕ್ ತಲಾಕ್ ತಲಾಕ್' ಎಂದು ಹೇಳಿ, ವಿವಾಹವಿಚ್ಛೇದನ ಮಾಡಬಹುದು. ಇವುಗಳ ಜೊತೆಗೆ, ನಿರಂತರವಾದ ಇನ್ನೊಂದು ವಿಧಿ ಇದೆ: ಮುಸ್ಲಿಂ ಹೆಂಗಸರು ತಮ್ಮ ಮುಖವನ್ನು ಪರಪುರುಷರಿಗೆ ತೋರಿಸಬಾರದು ಎಂದು. ಆ ಕಟ್ಟಳೆಯಿಂದ, ಮುಸ್ಲಿಂ ಹೆಂಗಸರು ಸದಾ ತಮ್ಮ ಮುಖವನ್ನಷ್ಟೇ ಅಲ್ಲದೆ ಅವರ ಯಾವ ಅವಯವಗಳೂ

ಪರಪುರುಷರಿಗೆ ಕಾಣದಿರುವ ಹಾಗೆ, ತಮ್ಮ ಇಡೀ ದೇಹವನ್ನೇ ಮುಚ್ಚುವ ಒಂದು ಬುರ್ಕವನ್ನು ಧರಿಸಿರಬೇಕು. ಆ ಬುರ್ಕವು ಒಂದು ರೀತಿಯ ಚಲಿಸುವ ಸೆರೆಮನೆ. ಅದನ್ನು ನೆನಸಿಕೊಂಡರೇ, ಉಸಿರು ಕಟ್ಟುವುದು!

*

ಆಫ್ರಿಕಾ ಖಂಡವಂತೂ ಸ್ತ್ರೀಕಿರುಕುಳದ ಕೊಪ್ಪರಿಗೆ. ಬಹುಮಟ್ಟಿಗೆ ಎಲ್ಲರಿಗೂ ತಿಳಿದಿರುವ ಬಲಾತ್ಕರಿತ ಭಗಾಙ್ಕುರಛೇದನವು (female genital mutilation or FGM) ಆಫ್ರಿಕದ ಕೆಲವು ದೇಶಗಳಲ್ಲಿ ಇನ್ನೂ ಜಾರಿಯಲ್ಲಿದೆ. ಈ ಕ್ರೂರ ಪದ್ಧತಿಯು, ಹೆಣ್ಮಕ್ಕಳು, ಹೆಂಗಸರು ಸುರತದ ಸವಿಯನ್ನು ಅನುಭವಿಸದಿರಲಿ ಎಂಬ ಉದ್ದೇಶದಿಂದ ಎಂದು ತೋರುತ್ತೆ. ಹಾಗೆ ಸುರತದ ಸವಿಯನ್ನು ಅನುಭವಿಸದಿದ್ದರೆ, ಹೆಣ್ಮಕ್ಕಳು ವ್ಯಭಿಚಾರವನ್ನು ಮಾಡಲಾರರು ಎಂದು ಎಣಿಕೆ ಇರಬಹುದು. ಈ ಪದ್ಧತಿಯು ಈಗಲೀಗ ಸ್ವಲ್ಪ ಕಡಿಮೆಯಾಗುತ್ತಲಿದೆ. ವಿಶ್ವಸಂಸ್ಥೆಯು ಈ ಅಮಾನುಷ ಪದ್ಧತಿಯನ್ನು ಮಾನವಹಕ್ಕಿನ ಉಲ್ಲಂಘನೆ; ಅದು ಮಾನವಹಕ್ಕಿನ ವಿಷಯ ಎಂದು ಘೋಷಿಸಿದೆ. ಆಫ್ರಿಕದ, ಬುಡಕಟ್ಟು ಜನಗಳ ಪರಸ್ಪರ ವ್ಯಾಜ್ಯದಲ್ಲಿ, ಶತ್ರುಪಕ್ಷದ ಹೆಣ್ಮಕ್ಕಳ, ಹೆಂಗಸರ ಮೇಲೆ ಅತ್ಯಾಚಾರ ನಡೆಸುವುದು, ಹಠಸಂಭೋಗ ಮಾಡುವುದು, ಇತ್ಯಾದಿಗಳು ಇಂದಿಗೂ ನಡೆಯುತ್ತಿವೆ. ಇರಾನ್, ಆಫ್ಘಾನಿಸ್ತಾನ್, ಸೌದಿ ಅರೇಬಿಯ ಮುಂತಾದ ತೀವ್ರಗಾಮಿ (radical) ಮುಸ್ಲಿಮ್ ದೇಶಗಳಲ್ಲಿ ಇಂದಿಗೂ ಹೆಣ್ಮಕ್ಕಳಿಗೆ, ಹೆಂಗಸರಿಗೆ ಕೇವಲ ಮೂಲಭೂತ ಹಕ್ಕುಗಳು ಸಹ ಇಲ್ಲದಿರುವುದು ಬಹು ಶೋಚನೀಯ. ಆಫ್ಘಾನಿಸ್ತಾನ್‌ನಲ್ಲಂತೂ ಹೆಣ್ಮಕ್ಕಳಿಗೆ, ಹೆಂಗಸರಿಗೆ ವಿದ್ಯೆ ಕಲಿಯುವ ಹಕ್ಕೂ ಇಲ್ಲ.

ಹೆಣ್ಮಕ್ಕಳನ್ನು ಅದರಲ್ಲೂ ಬಡಹೆಣ್ಮಕ್ಕಳನ್ನು – ಗಂಡ್ಮಕ್ಕಳನ್ನೂ ಸಹ – ಸಂಭೋಗಕ್ಕಾಗಿ ಅಪಹರಿಸುವುದು, ಅಪಹರಿಸಿದ ಹೆಣ್ಮಕ್ಕಳನ್ನು ವೇಶ್ಯಾವಾಟಿಕೆಗಳಲ್ಲಿ ಬಲವಂತವಾಗಿ ಕೂಡಿಹಾಕುವುದು (ಲೈಂಗಿಕದಾಸ್ಯ) – ಈ ರೀತಿಯ ಕ್ರೂರ ವ್ಯವಹಾರವು ಪ್ರಪಂಚದ ಅನೇಕ ದೇಶಗಳಲ್ಲಿ, ಮುಂದುವರಿದ ಅಮೆರಿಕ, ಯೂರೋಪ್ ದೇಶಗಳಲ್ಲಿಯೂ ಸಹ, ಅವ್ಯಾಹತವಾಗಿ ಜಾರಿಯಲ್ಲಿದೆ ಎನ್ನುವ ಸಂಗತಿಯು ಮನಸ್ಸನ್ನು ವ್ಯಾಕುಲಗೊಳಿಸುವುದು.

*

ಹೆಚ್ಚು ಮುಂದುವರಿದ ಅಮೆರಿಕದಲ್ಲಿ, ಈಗ, ಹೆಣ್ಮಕ್ಕಳ / ಹೆಂಗಸರ ಗರ್ಭಪಾತದ ಹಕ್ಕಿಗೆ (Abortion Rights), ಸ್ತ್ರೀಯರ ಪ್ರತ್ಯುತ್ಪಾದನಹಕ್ಕಿಗೆ (Reproductive Rights) ಹರಡುತ್ತಿರುವ ವಿರೋಧವು ಸಂಪೂರ್ಣವಾಗಿ ಮತಸಂಬಂಧವಾದುದು; ಅರ್ಥಾತ್ ಜೀವಪರವಾದಿ ಬಲಪಂಥಿ ಕ್ರೈಸ್ತಮತ ಸಂಬಂಧವಾದುದು. ಅಮೆರಿಕದಲ್ಲಿ ಇಂದಿನವರೆಗೂ, ಒಬ್ಬ ಮಹಿಳೆಯೂ ರಾಷ್ಟ್ರದ ಅಧ್ಯಕ್ಷಪದವಿಯನ್ನು ಅಲಂಕರಿಸಲು ಸಾಧ್ಯವಾಗಿಲ್ಲದಿರುವುದು ಹಾಸ್ಯಾಸ್ಪದ! ಅಷ್ಟೇ ಅಲ್ಲದೆ, 21ನೇ ಶತಮಾನವು ಪ್ರಾಪ್ತವಾದರೂ, "ಸಮಾನ ಹಕ್ಕುಗಳ

ಸುಧಾರಣೆ"ಯ ಮಸೂದೆಯನ್ನು (Equal Rights Amendment or ERA) ಅಂಗೀಕರಿಸದಿರುವುದು ಇನ್ನೂ ಅವಮಾನಕರ!

*

ಈಗ, ಕೆಲವು ದೇಶಗಳಲ್ಲಿ, ಅಮೆರಿಕದ ಕೆಲವು ಸಂಸ್ಥಾನಗಳಲ್ಲಿಯೂ ಸಹ, ಸ್ತ್ರೀಯರ ಹಕ್ಕಿಗೆ ವಿರೋಧವು ಇರುವುದಷ್ಟೇ ಅಲ್ಲದೆ, LGBTQ ಜನರ ಹಕ್ಕನ್ನು ಪರಿಗಣಿಸುವುದೇ ಇಲ್ಲ ಎನ್ನುವ ಮಸೂದೆಗಳು ಅಂಗೀಕರಿಸಲ್ಪಡುತ್ತಿವೆ. ಈ ವಿರೋಧವೂ ಸಹ ಮತಸಂಬಂಧಿತವಾದುದೇ; ಮುಖ್ಯವಾಗಿ, ಬಲಪಂಥೀಯ ಕ್ರೈಸ್ತಮತದವರಿಂದಲೇ ಉಂಟಾದುದು. ಕೆಲವು ಸಂಪ್ರದಾಯನಿಷ್ಠ ದೇಶಗಳಲ್ಲಿಯೂ LGBTQ ಜನರ ಮೂಲಭೂತ ಹಕ್ಕಿಗೆ ವಿರೋಧವು ಸಾಧಾರಣವಾಗಿ ಸಾಂಪ್ರದಾಯಿಕರಿಂದಲೇ ಬಂದಿರುವುದು.

*

ಸ್ತ್ರೀ-ಪುರುಷರಲ್ಲಿರುವ ಅಸಮಾನತೆ ಹೋಗಬೇಕಾದರೆ, ಒಂದು ಮುಖ್ಯವಾದ ಅವಶ್ಯಕತೆ ಹೆಣ್ಮಕ್ಕಳ ವಿದ್ಯಾಭ್ಯಾಸ. ವಿದ್ಯಾರ್ಜಿತ ಕುಟುಂಬಗಳಲ್ಲಿ ಸ್ತ್ರೀ-ಪುರುಷ ಅಸಮಾನತೆಯು ಬಹುಮಟ್ಟಿಗೆ ಕಮ್ಮಿಯಾಗಿದೆ. ಆದರೆ, ಹೆಣ್ಮಕ್ಕಳ ವಿದ್ಯಾಭ್ಯಾಸವಷ್ಟೇ ಸಾಲದು. ಸ್ತ್ರೀ-ಪುರುಷ ಅಸಮಾನತೆಯು ವಿದ್ಯಾವಂತರಲ್ಲಿಯೂ, ವಿದ್ಯಾವಂತ ಗಂಡ-ಹೆಂಡತಿಯರಲ್ಲಿಯೂ ಕಂಡುಬರುವುದು. ಆದುದರಿಂದ, ಮಕ್ಕಳು ಬೆಳೆಯುವಾಗಲೇ ತಂದೆ-ತಾಯಿಯರು ತಮ್ಮ ಹೆಣ್ಣು-ಗಂಡು ಮಕ್ಕಳಲ್ಲಿ ಪಕ್ಷಪಾತವಿಲ್ಲದೆ ಸಮಾನತೆಯಿಂದ ವರ್ತಿಸುವುದು ಹೆಚ್ಚು ಆವಶ್ಯಕ. ಹೆಣ್ಣು ಮಕ್ಕಳಲ್ಲಿ ಧೈರ್ಯವನ್ನು ತುಂಬಬೇಕು. ಶಾಲಾ-ಕಾಲೇಜ್‌ಗಳಲ್ಲಿ – ಮುಖ್ಯವಾಗಿ ಪ್ರಾಥಮಿಕ, ಮಾಧ್ಯಮಿಕ ಶಾಲೆಗಳಲ್ಲಿ – ವಿದ್ಯಾರ್ಥಿ, ವಿದ್ಯಾರ್ಥಿನಿಯರು ಪರಸ್ಪರ ಗೌರವದಿಂದ, ಪರಸ್ಪರ ಸಹಾನುಭೂತಿಯಿಂದ ನಡೆದುಕೊಳ್ಳುವುದನ್ನು ಕಲಿಸಬೇಕು; ಚಿಕ್ಕ ವಯಸ್ಸಿನಿಂದಲೇ ಸ್ತ್ರೀ-ಪುರುಷ ಸಮಾನತೆಯನ್ನು ರೂಢಿಸಬೇಕು. ಗಂಡಸರಲ್ಲಿ ಹೆಚ್ಚು ಸ್ವಾಭಾವಿಕವಾದ ಪುರುಷತ್ವಪ್ರದರ್ಶಕ (macho) ವರ್ತನೆಯನ್ನು ನಯವಾಗಿ ವಿರೋಧಿಸಬೇಕು. ಆ ಪ್ರವೃತ್ತಿಯನ್ನು ಯಾವ ರೀತಿಯಲ್ಲೂ ಪ್ರೋತ್ಸಾಹಿಸಬಾರದು.



# ಚಾಮರಾಜಪೇಟೆ ಮಹಿಳೆಯರು

ಇಂಗ್ಲಿಷ್ ಮೂಲ: **ಲೀಲಾ ರಾವ್-ಹೆಗಡೆ;** Naperville, Illinois
ಕನ್ನಡಕ್ಕೆ: **ಶಂಕರ ಹೆಗಡೆ;** Naperville, Illinois

*

"ಚಾಮರಾಜಪೇಟೆ ಮಹಿಳೆಯರು" ನಾನು ಚಿಕ್ಕವಳಿದ್ದಾಗ ಹತ್ತಿರದಿಂದ ನೋಡಿದ, ನನ್ನ ಸ್ಮೃತಿಪಟಲದಲ್ಲಿ ಇನ್ನೂ ಅಚ್ಚಳಿಯದೇ ಉಳಿದ ಚಿಂತನಯೋಗ್ಯ ಸ್ತ್ರೀಯರು. ಇವರು ಬೆಂಗಳೂರಿನ ಚಾಮರಾಜಪೇಟೆಯ 5ನೇ ಮೇನ್ ರೋಡಿನಲ್ಲಿರುವ 18ನೇ ನಂಬರ್ ಮನೆಯ ಅಂಗವಾಗಿದ್ದರು. ಈ ಮಹಿಳೆಯರ ಬಗೆಗಿನ ನೆನಪುಗಳು ನನ್ನ 6ರಿಂದ 14 ವಯಸ್ಸಿನ ಅಂದರೆ ಸುಮಾರು 1958ರಿಂದ 1967ರ ಸಮಯದ್ದು. ಇಂದು ನಾನು ನನ್ನ ಬಾಲ್ಯದ ದಿನಗಳನ್ನು ಮೆಲಕು ಹಾಕುತ್ತ ಹಿಂತಿರುಗಿ ನೋಡಿದಾಗ ಹೇಗೆ ಸಮಯ ಬದಲಾಗಿದೆ ಮತ್ತು ಸ್ತ್ರೀಯರ ಮಹತ್ವವನ್ನು ಕುರಿತು ನನ್ನ ಮತ್ತು ಒಟ್ಟಿನ ಸಮಾಜದ ಗ್ರಹಿಕೆ ಮಾರ್ಪಡುತ್ತಿದೆ ಎಂಬುದನ್ನು ಮನಗಾಣುತ್ತಿದ್ದೇನೆ.

ಚಾಮರಾಜಪೇಟೆಯ ಮನೆ ನನ್ನ ಮುತ್ತಜ್ಜನ ಮನೆ. ಪ್ರಸಿದ್ಧ ವಕೀಲರು ಮತ್ತು ಹೈಕೋರ್ಟ್ ನ್ಯಾಯಾಧೀಶರು ಆಗಿದ್ದ ನನ್ನ ಮುತ್ತಜ್ಜ 1930ರಲ್ಲಿ ಈ ಮನೆಯನ್ನು ಕಟ್ಟಿಸಿದ್ದರು. 1961ರಲ್ಲಿ ಅವರು ನಿಧನವಾಗುವ ತನಕವೂ ಈ ಮನೆಯಲ್ಲಿಯೇ ವಾಸವಾಗಿದ್ದರು. ನನಗೆ ಅವರ ಪರಿಚಯವಾಗುವ ಹೊತ್ತಿಗೆ ಅವರಿಗೆ ಅವರ ಮೊದಲ ಹೆಂಡತಿಯಿಂದ ಒಬ್ಬ ಮಗಳು ಮತ್ತು ಇಬ್ಬರು ಗಂಡುಮಕ್ಕಳು, ಹಾಗೂ ಎರಡನೆಯ ಹೆಂಡತಿ ಶಾರದಮ್ಮ ಅವರಿಂದ ಇಬ್ಬರು ಹೆಣ್ಣುಮಕ್ಕಳು ಇದ್ದರು. ನನಗೆ ಆರು ವರ್ಷವಾಗಿ, ಮುತ್ತಜ್ಜನ ಮನೆ ಮತ್ತು ಅಲ್ಲಿಯ ಜನರ ನೆನಪುಗಳು ರೂಪಿತವಾಗುತ್ತಿರುವ ಹೊತ್ತಿಗಾಗಲೆ ಮುತ್ತಜ್ಜನ ಎಲ್ಲ ಮಕ್ಕಳೂ ಮದುವೆಯಾಗಿ ಸ್ವತಂತ್ರ ಜೀವನ ನಡೆಸುತ್ತಿದ್ದರು.

ನನ್ನ ಮುತ್ತಜ್ಜನ ಹೆಸರು ಎಂ. ರಾಮಚಂದ್ರರಾವ್, ಅವರ ಹಿರಿಯ ಮಗಳು ಲಲಿತಾ, ನನ್ನ ಅಜ್ಜಿ. ನನ್ನ ತಾಯಿ ಸುಮಾರು ಒಂದು ವರ್ಷದವಳಿದ್ದಾಗ ನನ್ನ ಅಜ್ಜಿ ನಿಧನರಾದರು. ಆಗ ಅವರಿಗೆ ಮದುವೆಯಾಗಿ ಒಂದೆರಡು ವರ್ಷ ಮಾತ್ರ ಅಗಿತ್ತೇನೋ. ತಾಯಿಯನ್ನು ಕಳೆದುಕೊಂಡ ಮಗುವನ್ನು, ಅಂದರೆ ನನ್ನ ತಾಯಿಯನ್ನು ಅವಳ ಅಜ್ಜಿಯರು ತಮ್ಮ ಚಾಮರಾಜಪೇಟೆಯ ಮನೆಗೆ ಕರೆದೊಯ್ದು ಪ್ರೀತಿಯಿಂದ ಬೆಳೆಸಿದರು. ಶಾರದಮ್ಮನ ಇಬ್ಬರು ಮಕ್ಕಳಾದ ಪದ್ಮಾವತಿ ಮತ್ತು ಇಂದಿರಾ ಅವರು ನನ್ನ ತಾಯಿಗಿಂತ ಕೆಲವೇ ವರ್ಷ ದೊಡ್ಡವರಾಗಿದ್ದರು. ಇವರೇ ನನ್ನ ತಾಯಿಗೆ ಸಹೋದರಿ ಸಮಾನರಾಗಿ ಬೆಳೆದರು. ಮದುವೆಯಾಗುವ ತನಕವೂ ನನ್ನ ತಾಯಿ ಅಲ್ಲಿಯೇ ಇದ್ದರು. ಪದ್ಮಾವತಿ ಮತ್ತು ಇಂದಿರಾ ಅವರ ಮಕ್ಕಳು ನಿಜ ಸಂಬಂಧದಲ್ಲಿ ನನಗೆ ಚಿಕ್ಕಮ್ಮ–ಚಿಕ್ಕಪ್ಪರಾಗಬೇಕು. ಆದರೆ ಇವರೆಲ್ಲ ನನ್ನ ಸಮವಯಸ್ಕರಾದ್ದರಿಂದ ಅವರೊಂದಿಗೆ ನನ್ನ ಒಡನಾಟ ಸಹ–ಸಹೋದರ–ಸಹೋದರಿಯರಂತೆ ಬೆಳೆಯಿತು. ಪ್ರತಿ ವರ್ಷ ಬೇಸಿಗೆ ರಜೆಗೆ ನಾವೆಲ್ಲ ಚಾಮರಾಜಪೇಟೆ ಮನೆಯಲ್ಲಿ ಸೇರುತ್ತಿದ್ದೆವು. ಆ ಮನೆಯಲ್ಲಿ ಕಳೆದ ಅಂದಿನ ದಿನಗಳ ನೆನಪುಗಳು ನನ್ನ ಅತ್ಯಂತ ಸಂತೋಷದ ದಿನಗಳಾಗಿದ್ದವು. ಸಹ–ಸಹೋದರರುಗಳಾದ ಕುಮಾರ್ ಮತ್ತು ಪಂಡ್ರಿನಾಥ ಅವರು 1958ರ ಹೊತ್ತಿಗಾಗಲೇ ಕಾಲೇಜು ಸೇರಿದ್ದರು. ಅವರೊಂದಿಗಿನ ಒಡನಾಟ ಅಷ್ಟಾಗಿ ನೆನಪಿಲ್ಲ. ನನ್ನ ಉಳಿದ ಸಹ ಸಹೋದರ–ಸಹೋದರಿಯರಾದ ಸೂರಜ್, ಸಾಯಿದೀಪ್, ಮತ್ತು ವಿಜಯಲಕ್ಷ್ಮಿಯವರು ಉತ್ತರ ಭಾರತದ exotic ನಗರಗಳಿಂದ ಬರುತ್ತಿದ್ದರು. ಮೈನಿಂಗ್ ಇಂಜನೀಯರ್ ಆಗಿದ್ದ ಅವರ ತಂದೆ ಉತ್ತರ ಭಾರತದಾದ್ಯಂತ ವಿವಿಧ ನಗರಗಳಲ್ಲಿರುವ ತಾಮ್ರ ಮತ್ತು ವಜ್ರದ ಗಣಿಗಳಲ್ಲಿ ಕೆಲಸ ಮಾಡುತ್ತಿದ್ದರು. ಈ ನನ್ನ ಸಹ–ಸಹೋದರರು ಹಿಂದಿ ಮಾತನಾಡುವುದು, ಮನೆ–ಶಿಕ್ಷಣ ಮುಂತಾದ ತಮ್ಮ ವಿಶಿಷ್ಟ ಅನುಭವಗಳನ್ನು ನನ್ನೊಡನೆ ಹಂಚಿಕೊಳ್ಳುತ್ತಿದ್ದರು. ನಾನು, ನನ್ನ ಅಕ್ಕ ಮತ್ತು ತಮ್ಮ ಬೇಸಿಗೆ ರಜೆಗೆ ಕೊಯಿಮತ್ತೂರಿನಿಂದ ಬೆಂಗಳೂರಿಗೆ ಹೋಗುತ್ತಿದ್ದೆವು. ನಾವೆಲ್ಲ ಒಂದೆಡೆ ಸೇರಿ ನಮ್ಮ ಅಜ್ಜನ ಮನೆಯಲ್ಲಿ ತುಂಬ ಖುಶಿಯಿಂದ ಕಳೆಯುತ್ತಿದ್ದೆವು. ಮನೆಯ ಹಿರಿಯರು ಊರಿನಲ್ಲಿರುವ ತಮ್ಮ ಸಂಬಂಧಿಕರ ಮನೆಗಳ ಭೆಟ್ಟಿಗೆ ಹೋದಾಗ ನಾವು ಮಕ್ಕಳು ಮನೆಯಲ್ಲಿಯೋ, ಸಮೀಪದ ಪಾರ್ಕಿನಲ್ಲಿಯೋ ಆಟ ಆಡಿ ಆನಂದಿಸುತ್ತಿದ್ದೆವು. ಹಿರಿಯರು ನಮಗೆ ಸಮೀಪದ ಮಿತ್ರಾ ಬೇಕರಿಯಿಂದ ಮಿಠಾಯಿ ಕೊಂಡುಕೊಳ್ಳಲಿಕ್ಕೋ ಅಥವಾ ಸಿನೇಮಾಕ್ಕೆ ಹೋಗಲಿಕ್ಕೋ ಹಣ ಕೊಡುತ್ತಲಿದ್ದರು. ಬಾಲ್ಯದ ನೆನಪುಗಳು, ಸಂತೋಷಕರವಿರಲಿ ಅಥವಾ ದುಃಖಕರವಾಗಿರಲಿ ಮನಸ್ಸಿನಲ್ಲಿ ಸ್ಪಷ್ಟವಾಗಿ ಅಚ್ಚಳಿಯದೆ ಉಳಿದುಕೊಂಡಿರುತ್ತವೆ. ಇನ್ನೂ ಚಿಕ್ಕವರಾಗಿದ್ದ ನಮ್ಮ ಅಂದಿನ ದಿನಗಳನ್ನು ನೆನೆಸಿಕೊಂಡರೆ ಹೆಚ್ಚಿನ ದಿನಗಳು ಸಂತೋಷದಾಯಕವೇ ಆಗಿದ್ದವು ಎನ್ನಿಸುತ್ತದೆ.

ಶಾರದಮ್ಮನ (ಅವಳನ್ನು ನಾವು ಬೆಂಗಳೂರು ಅವ್ವ ಎಂದು ಕರೆಯುತ್ತಿದ್ದೆವು) ಬಗ್ಗೆ ಬರೆಯುವ ಮೊದಲು ನನ್ನ ಮುತ್ತಜ್ಜನವರ ಬಗ್ಗೆ ಒಂದೆರಡು ಮಾತುಗಳನ್ನು

ಹೇಳಬೇಕು. ಅವರು ಅತ್ಯಂತ ಶಿಸ್ತಿನ, ತೀಕ್ಷ್ಣ ಬುದ್ಧಿಯ ಮತ್ತು ಫ್ಯಾಶನ್ ಪ್ರಜ್ಞೆಯ ವ್ಯಕ್ತಿಯಾಗಿದ್ದರು. ಅವರು ಪ್ರತಿದಿನ ಆಹ್ನಿಕವನ್ನು ತಪ್ಪದೆ ಮಾಡುವವರೂ, ಸಸ್ಯಾಹಾರಿಯೂ ಆಗಿದ್ದರೂ ಉಳಿದೆಲ್ಲ ದೃಷ್ಟಿಯಿಂದ ಪಾಶ್ಚಾತ್ಯ ಜೀವನಶೈಲಿಯವರಾಗಿದ್ದರು. ಪ್ರತಿ ದಿನ ಕೆಲಸಕ್ಕೆ ಅವರು ಧರಿಸುತ್ತಿದ್ದ ಸೂಟು ಕಮರ್ಶಿಯಲ್ ಸ್ಟ್ರೀಟಿನ ಪ್ರಸಿದ್ಧ ದರ್ಜಿಯಿಂದ ಅವರಿಗಾಗಿಯೇ ಹೊಲಿಗೆಯಾಗಿ ಬರುತ್ತಿತ್ತು. ಅವರ ಎರಡೂ ಪಾದಗಳಲ್ಲಿ ಆರು-ಆರು ಬೆರಳುಗಳಿದ್ದವು. ಹಾಗಾಗಿ ಅವರ ಶೂಗಳನ್ನು ಕೂಡ ಅವರಿಗಾಗಿಯೇ ವಿಶೇಷವಾಗಿ ತಯಾರಿಸಬೇಕಿತ್ತು. ಅವರ ಹತ್ತಿರ ಹಲವು ಜೊತೆ ಶೂಗಳಿದ್ದವು. ಅವುಗಳನ್ನೆಲ್ಲ ಹೊಳೆಯುವಂತೆ ಪಾಲಿಶ್ ಮಾಡಿ ಅವರ ಡ್ರೆಸಿಂಗ್ ರೂಮಿನಲ್ಲಿ ನೀಟಾಗಿ ಜೋಡಿಸಿ ಇಡಲಾಗುತ್ತಿತ್ತು. ಅವರು ಬೆಂಗಳೂರಿನ ಸೆಂಚುರಿ ಕ್ಲಬ್ಬಿನ ಸ್ಥಾಪಕ ಸದಸ್ಯರಲ್ಲೊಬ್ಬರು. ಬಿಲಿಯರ್ಡ್ ಅವರ ಮೆಚ್ಚಿನ ಹವ್ಯಾಸವಾಗಿದ್ದಿತು. ಪ್ರತಿ ದಿನ ಬೆಳಗ್ಗೆ ಅವರು ಸ್ಟಾರ್ಚ್ ಹಾಕಿದ ಕಾಲರಿದ್ದ ಬಿಳಿ ಶುಭ್ರ ಶರ್ಟು, ಸೂಟು, ಮೈಸೂರು ಪೇಟಾ ಧರಿಸಿ ಷೋಫರ್ ಡ್ರೈವ್ ಮಾಡುತ್ತಿದ್ದ ತಮ್ಮ ಪ್ರಿಸ್ಟೀನ್, ಆಲಿವ್-ಗ್ರೀನ್ ಬಣ್ಣದ ಮೋರಿಸ್-8 ಕಾರಿನಲ್ಲಿ ಕೋರ್ಟಿಗೆ ಹೋಗುತ್ತಿದ್ದರು. ಸುತ್ತಲಿನ ಸಮಾಜ ಮತ್ತು ಕುಟುಂಬದ ಸದಸ್ಯರು ಅವರನ್ನು ಸಹಜವಾಗಿಯೇ ಅತ್ಯಂತ ಗೌರವದಿಂದ ಕಾಣುತ್ತಿದ್ದರೆಂದು ನಾನು ಹೇಳಬೇಕಾಗಿಲ್ಲ. ಅವರು ಸ್ನೇಹಪರ ವ್ಯಕ್ತಿಯಾಗಿದ್ದರು. ಆದರೆ ಹೆಚ್ಚು ಹೊತ್ತು ಕಾರ್ಯನಿರತರಾಗಿರುತ್ತಿದ್ದರಿಂದ ಮಕ್ಕಳೊಂದಿಗೆ ಅವರ ಸಂಪರ್ಕ, ಮಾತುಕತೆಗಳು ಔಪಚಾರಿಕ ಮಟ್ಟಕ್ಕೆ ಸೀಮಿತವಾಗಿದ್ದವು. ಮನೆಯ ಉಳಿದ ಸದಸ್ಯರಂತೆ ನಾನೂ ಅವರನ್ನು ಭಯಭಕ್ತಿಯಿಂದ ಕಾಣುತ್ತಿದ್ದೆ. ಅವರು ತುಂಬಾ ಕರುಣಾಮಯಿ ಆಗಿದ್ದರೆಂದೂ, ಕಷ್ಟದಲ್ಲಿರುವ ಸ್ನೇಹಿತರಿಗೆ ಹಾಗೂ ಸಂಬಂಧಿಕರಿಗೆ ಯಾವಾಗಲೂ ಸಹಾಯಮಾಡುತ್ತಲಿದ್ದರೆಂದು ನಾನು ನನ್ನ ತಾಯಿಯಿಂದ ಅನೇಕ ಸಲ ಕೇಳಿದ್ದೇನೆ. ಅದೂ ಅಲ್ಲದೆ ಅವರು ಬುದ್ಧಿವಂತ ಬಡ ಬ್ರಾಹ್ಮಣ ಹುಡುಗನೊಬ್ಬನಿಗೆ ಅವನು ಇಂಜನೀಯರಿಂಗ್ ಡಿಗ್ರಿ ಮುಗಿಸುವ ತನಕವೂ ಆರ್ಥಿಕ ಸಹಾಯ ಮಾಡಿದ್ದಲ್ಲದೆ ಆತನಿಗೆ ತಮ್ಮ ಮಗಳು ಪದ್ಮಾಳನ್ನು ಕೊಟ್ಟು ಮದುವೆ ಮಾಡಿಕೊಟ್ಟಿದ್ದರು. ಅವರ ಎರಡನೆಯ ಮಗಳು ಕಲಿಯಲು ಅಭಿರುಚಿ ಇದ್ದು ಶಾಲಾಶಿಕ್ಷಣ ಮುಂದುವರಿಸಲು ಬಯಸಿದಾಗ ಅದಕ್ಕೆ ಅಡ್ಡಿ ಮಾಡದೆ ಶಿಕ್ಷಣ ಮುಂದುವರಿಸಲು ಪ್ರೋತ್ಸಾಹಿಸಿದರು. ನನ್ನ ತಾಯಿಗೆ ಸಂಗೀತದ ಒಲವಿರುವುದನ್ನು ಕಂಡು ಮುತ್ತಜ್ಜ ಅವಳಿಗೆ ಸಂಗೀತ ಕಲಿಯಲು ಅನುವು ಮಾಡಿಕೊಟ್ಟರು. ನನ್ನ ತಾಯಿ ಚಿಕ್ಕಂದಿನಲ್ಲಿಯೇ ಟೈಫಾಯಿಡ್ ಜ್ವರದಿಂದ ಬಳಲಿ ಬದುಕುಳಿದರು. ನಂತರ ಪರೋಟಿಡ್ (ಲಾಲಾರಸ ಗ್ರಂಥಿ) ಬಾವು, ಮುಂದೋಳಿನ ಮೂಳೆ ಮತ್ತು ಎರಡೂ ಕಾಲುಗಳ ಶಿನ್ ಮೂಳೆಗಳ ಆಸ್ಟಿಯೋಮೈಲಿಟಿಸ್ (ಮೂಳೆಯಲ್ಲಿ ಸೋಂಕು)ಗಳಿಂದ ಬಳಲಿದರು. ಆಗಿನ್ನೂ ಆಂಟಿಬಯೋಟಿಕ್ ಬಳಕೆಗೆ ಬಂದಿರಲಿಲ್ಲ. ಆ ಸಮಯದಲ್ಲಿ ನನ್ನ ತಾಯಿಯ ಹುಣ್ಣಿನ ಡ್ರೆಸ್ಸಿಂಗ್ ಬದಲಿಸಲು ಡಾಕ್ಟರ ಕ್ಲಿನಿಕ್ಕಿಗೆ ನನ್ನ ಮುತ್ತಜ್ಜ ತಮ್ಮ ಅಮೂಲ್ಯವಾದ ಮೋರಿಸ್-8 ಕಾರಿನಲ್ಲಿ ಪ್ರತಿ ದಿನ ಅವಳನ್ನು ಕಳಿಸಿಕೊಟ್ಟು ಪ್ರೀತಿಯಿಂದ ನೋಡಿಕೊಂಡರು. ಇವುಗಳನ್ನು ಗಮನಿಸಿದರೆ

ನನ್ನ ಮುತ್ತಜ್ಜ ಸ್ತ್ರೀಯರನ್ನು ಪುರುಷರಷ್ಟೇ ಗೌರವದಿಂದ ನಡೆಸಿಕೊಂಡರೆಂಬುದು ತಿಳಿಯುತ್ತದೆ.

ಬೆಂಗಳೂರು ಅವ್ವನೊಂದಿಗೆ (ಶಾರದಮ್ಮನೊಂದಿಗೆ) ನನಗೆ ಹೆಚ್ಚಿನ ಒಡನಾಟವಿತ್ತು. ಚಾಮರಾಜಪೇಟೆ ಮನೆಯ ಮಾತೃದೇವತೆಯಾದ (ಮೇಟ್ರಿಯಾರ್ಚ್) ಅವಳು ಮನೆಯ ಸಂಸಾರವನ್ನು ದಕ್ಷತೆ ಮತ್ತು ದಯಾಪರತೆಯಿಂದ ತೂಗಿಸಿದಳು. ಅವಳಿಗೆ ತೀಕ್ಷ್ಣವಾದ ಹೈಪೋಥೈರಾಯ್ಡ್ ಇದ್ದ ಕಾರಣ ದೇಹದ ತೂಕ ಹೆಚ್ಚಾಗಿ ಅವಳಿಂದ ಹೆಚ್ಚಿನ ಚಟುವಟಿಕೆಗಳು ಸಾಧ್ಯವಾಗುತ್ತಿರಲಿಲ್ಲ. ಥೈರಾಯ್ಡ್ ರಿಪ್ಲೇಸ್ಮೆಂಟ್ ಔಷಧಿಯಿಂದ ಇದನ್ನು ಸರಿಪಡಿಸ-ಬಹುದಾಗಿದ್ದರೂ, ಅವಳು ಯಾವುದೇ 'ಇಂಗ್ಲಿಷ್/ಬ್ರಿಟಿಷ್' ಔಷಧಿಗಳನ್ನು ತೆಗೆದುಕೊಳ್ಳಲು ನಿರಾಕರಿಸಿದಳು. ಅವಳಿಗೆ ಇಂಗ್ಲಿಷ್ ಕಲಿಸಲು ಬರುತ್ತಿದ್ದ ಟ್ಯೂಟರ್‌ನಿಗೂ ಅವಳು ಅದೇ ರೀತಿಯ ತಿರಸ್ಕಾರವನ್ನು ತೋರಿಸಿದಳು. ಅಡುಗೆಯವರು ಅವಳಿಗೆ ಪ್ರತ್ಯೇಕವಾಗಿ ಟೊಮ್ಯಾಟೊ ಹಾಕಿರದ ಸಾರು ಮಾಡುತ್ತಿದ್ದುದು ನನಗೆ ನೆನಪಿದೆ. ಏಕೆಂದರೆ (ನೀವು ಊಹಿಸಿದಂತೆ) ಇಂಗ್ಲಿಷ್ ತರಕಾರಿ/ಹಣ್ಣು ಟೊಮ್ಯಾಟೊ ಅವಳಿಗೆ ನಿಷಿದ್ಧವಾಗಿತ್ತು. ಮುಂಜಾನೆ ತಡವಾಗಿ ಎದ್ದು ಕೆಲಸದ ಲಕ್ಷ್ಮಮ್ಮ ನೀರು ಹದ ಮಾಡಿಟ್ಟ ಬಚ್ಚಲಿಗೆ ಹೋಗಿ ಸ್ನಾನ ಮಾಡಿ "ಮಡಿ" ಸೀರೆ, ಕುಪ್ಪಸ ಧರಿಸಿ ನೇರವಾಗಿ ಪೂಜಾ ಕೋಣೆಗೆ ಹೋಗುತ್ತಿದ್ದಳು. ಒಂದು ತಾಸಿನ ದೀರ್ಘ ಪೂಜೆ ಮುಗಿಯುವ ಹೊತ್ತಿಗೆ ಊಟದ ಸಮಯವಾಗುತ್ತಿತ್ತು. ಊಟದ ನಂತರ ಅವಳು ಸ್ವಲ್ಪ ಹೊತ್ತು ವಿಶ್ರಾಂತಿ ಪಡೆಯುತ್ತಿದ್ದಳು. ನಿದ್ರೆಯಿಂದ ಎಚ್ಚೆತ್ತ ಮೇಲೆ, ಅವಳು ತನ್ನ ಕೂದಲನ್ನು ನೀರು ಸಿಂಪಡಿಸಿ ನೀಟಾಗಿ ಬಾಚಿಕೊಂಡು, ಹಣೆಗೆ ಡಾಲರ್ ಗಾತ್ರದ ಕುಂಕುಮ ಇಟ್ಟು ಅಲಂಕರಿಸಿಕೊಂಡು ಸಿದ್ಧವಾಗುತ್ತಿದ್ದಳು. ನಂತರ ತಕ್ಲಿಯಿಂದ ಪೂಜಾ ಕೋಣೆಯ ದೀಪಗಳಿಗಾಗಿ ಹತ್ತಿಯ ನೆಣೆಗಳನ್ನು ತಯಾರಿಸುತ್ತಿದ್ದಳು. ಆಗಲೇ ಮನೆಯಲ್ಲಿ ವಿದ್ಯುತ್ ಸೌಕರ್ಯವಿತ್ತು. ಅವರ ಹೆಣ್ಣುಮಕ್ಕಳು ಮತ್ತು ನನ್ನ ತಾಯಿ ಚಾಮರಾಜಪೇಟೆ ಮನೆಗೆ ಭೇಟಿ ನೀಡಿದಾಗ, ಅವರು ಗಂಟೆಗಟ್ಟಲೆ 'ಗಟ್ಟಾ ಬಾರಾ' ಆಟ ಆಡುತ್ತ ಸಂತೋಷದಲ್ಲಿ ಸಮಯ ಕಳೆಯುತ್ತಿದ್ದರು. ಹೆಚ್ಚಾಗಿ ಅವಳು ಮನೆಯ ಮುಂಭಾಗದ ಜಗುಲಿಯಲ್ಲಿ ಕುರ್ಚಿಯ ಮೇಲೆ ಕುಳಿತು ತನ್ನ ಕಾರುಭಾರ ನಡೆಸುತ್ತಿದ್ದಳು. ಹೂವು, ಹಣ್ಣು ಮತ್ತು ತರಕಾರಿ ಮಾರುವವರು ತಮ್ಮ ಸಾಮಾನುಗಳನ್ನು ಮಾರಲು, ಮತ್ತು ನೆರೆಹೊರೆಯವರ ಸುದ್ದಿಗಳನ್ನು ಒಪ್ಪಿಸಲು ಮನೆ ಎದುರು ಬರುತ್ತಿದ್ದರು. ಅವರಿಗೆ ಶಾರದಮ್ಮ ಲಿಂಬೂ ಪಾನಕ ಮತ್ತು ಅಂದಿನ ಟಿಫಿನ್‌ಗೆ ತಯಾರಿಸಿದ ತಿಂಡಿಗಳನ್ನು ಕೊಡುತ್ತಿದ್ದಳು. ಬೆಂಗಳೂರು ಅವ್ವನಿಗೆ ಯಾವತ್ತೂ ದುರಾಸೆಯ ಭಾವನೆ ಇರಲಿಲ್ಲ. ನನ್ನ ಅಜ್ಜ ತೀರಿಕೊಂಡ ನಂತರವೂ ಆಕೆಗೆ ಸರ್ಕಾರದ ಪಿಂಚಣಿ ಬರುತ್ತಿದ್ದುದರಿಂದ ಆರ್ಥಿಕ ಕೊರತೆ ಇರಲಿಲ್ಲ. ಅವಳು ಸ್ವಭಾವತಃ ಉದಾರಳಾಗಿದ್ದಳು. ಮೊಮ್ಮಕ್ಕಳೊಂದಿಗೆ ಸ್ನೇಹಪರಳಾಗಿದ್ದಳು. ನಾವು ಅವಳಿಗಾಗಿ ಏನಾದರೂ ಚಿಕ್ಕ-ಪುಟ್ಟ ಕೆಲಸ ಮಾಡಿಕೊಟ್ಟಾಗ ಅವಳು ನಮಗೆ ಉದಾರವಾಗಿ ಬಕ್ಷೀಸ್ ಕೊಡುತ್ತಿದ್ದಳು. ಅವಳ 'ಶಾರದೆ' ಹೆಸರಿಗೆ ವಿರುದ್ಧವಾಗಿ ಅವಳಿಗೆ ಜ್ಞಾನದ ಬಾಯಾರಿಕೆ ಇದ್ದಂತಿರಲಿಲ್ಲ, ಈ ಕೊರತೆಯನ್ನು

ಅವಳು ತನ್ನ ಪ್ರೀತಿ ಮತ್ತು ದಯೆಯಿಂದ ನೀಗಿಸಿದ್ದಳು. ಅಷ್ಟು ಶ್ರೀಮಂತಿಕೆಯಿದ್ದರೂ ಆಕೆ ತನ್ನ ಮನೆಯ ಕೆಲಸದವರನ್ನು ಎಂದೂ ದರ್ಪದಿಂದ ನಡೆಸಿಕೊಳ್ಳಲಿಲ್ಲ. ಒಂದು ದಿನವೂ ಅವಮಾನಿಸಿರಲಿಲ್ಲ.

ಜಾನಕಮ್ಮಗಾರು ಎಂದರೆ ನನಗೆ ಸ್ವಲ್ಪ ಭಯವಿದ್ದರೂ ಅವಳನ್ನು ಗೌರವಿಸುತ್ತಿದ್ದೆ. ನನ್ನ ಅಜ್ಜಿಯ ಮನೆಗೆ ಅವಳು ತಿಂಡಿ ಮತ್ತು ಕಾಫಿ ತಯಾರಿಸಲು ಬರುತ್ತಿದ್ದಳು. ಅವಳು ಅತ್ಯಂತ ಅಚ್ಚುಕಟ್ಟಿನ ಮಹಿಳೆಯಾಗಿದ್ದಳು. ಅವಳು ಸಾಮಾನ್ಯವಾಗಿ ಮಂದಸ್ಮಿತಳಾಗಿದ್ದು ಯಾವಾಗಲೂ ನೀಟಾಗಿ ಸಿಂಗರಿಸಿಕೊಳ್ಳುತ್ತಿದ್ದಳು. ಅವಳ ಕೂದಲು ಎಂದೂ ಅಡ್ಡತಿಡ್ಡಾ ಆದದ್ದಿಲ್ಲ. ತನ್ನ ಪಾಲಿನ ಕೆಲಸವನ್ನು ತುಂಬಾ ದಕ್ಷತೆಯಿಂದ ಮಾಡುತ್ತಿದ್ದಳು. ಚಾಮರಾಜಪೇಟೆ ಮನೆಯಲ್ಲಿ ಕಾಫಿ-ತಿಂಡಿ ತಯಾರಿಸಲು ಒಂದು ಪ್ರತ್ಯೇಕ ಕೋಣೆ ಇತ್ತು. ಅಲ್ಲಿ ಜಾನಕಮ್ಮಗಾರು ಕಲ್ಲಿದ್ದಲು ಒಲೆ (ಚುಲಾ) ಹೊತ್ತಿಸಿ ಅದರ ಮೇಲೆ ಬ್ರೆಡ್ಡಿನ ಟೋಸ್ಟ್ ತಯಾರಿಸುತ್ತಿದ್ದಳು. ಟೋಸ್ಟಿಗೆ "ಬ್ರೌನ್ ಅಂಡ್ ಪೌಲ್ಸನ್" ಬೆಣ್ಣೆ ಸವರಿ, ಕಾಫಿಯೊಂದಿಗೆ ಒಂದು ಟ್ರೇನಲ್ಲಿ ನನ್ನ ಅಜ್ಜನ ಡ್ರೆಸ್ಸಿಂಗ್ ರೂಮಿಗೆ ತೆಗೆದುಕೊಂಡು ಹೋಗಿ ಇಟ್ಟು ಬರುತ್ತಿದ್ದಳು. ನಂತರ ಅವಳು ನಮ್ಮನ್ನು ನೋಡಿಕೊಳ್ಳುತ್ತಿದ್ದಳು. ಧ್ವನಿಯೆತ್ತದೆ ಸಾವಧಾನದಿಂದಲೇ ನಮ್ಮಲ್ಲಿ ಶಿಸ್ತನ್ನು ಕಾಪಾಡಿಕೊಳ್ಳುತ್ತಿದ್ದಳು. ಚಕ್ಕುಲಿ, ಕೋಡಬಳೆ ಇತ್ಯಾದಿ ಟಿಫಿನ್ ಐಟಮ್‌ಗಳನ್ನು ತಯಾರಿಸಲು ಅವಳು ಕೆಲವೊಮ್ಮೆ ಮಧ್ಯಾಹ್ನ ಕೂಡ ಬರುತ್ತಿದ್ದಳು. ಚಾಮರಾಜಪೇಟೆಯಿಂದ ದೂರದಲ್ಲಿರುವ ತನ್ನ ಕುಟುಂಬದೊಂದಿಗೆ ಅವಳು ವಾಸಿಸುತ್ತಿದ್ದಳು. ಅವಳ ಹೆಸರು ಜಾನಕಿ ಅಂದರೆ ಸೀತೆ ಎಂದಿದ್ದರೂ ರಾಮಾಯಣದ ಸೀತೆಯಂತೆ ಅವಳ ಜೀವನದಲ್ಲಿ ಏರು-ಪೇರು ಇರಲಿಲ್ಲ. ಅವಳ ಜೀವನವು ಅವಳ ನಿಯಂತ್ರಣದಲ್ಲಿತ್ತು. ಇಂದು ನಾನು ಹಿಂತಿರುಗಿ ನೋಡಿದಾಗ, ಅವಳು ತನ್ನ ಪಾಲಿಗೆ ಬಂದ ಜೀವನಕ್ಕೆ ಚೆನ್ನಾಗಿ ಹೊಂದಿಕೊಂಡಿದ್ದಳು ಮತ್ತು ತನಗೊದಗಿದ ಅವಕಾಶವನ್ನು ಸಮರ್ಥವಾಗಿ ಬಳಸಿಕೊಂಡು ಸಂತೋಷವಾಗಿದ್ದಳು ಎಂದನಿಸುತ್ತದೆ. ಇದು ನಾವೆಲ್ಲರೂ ಅವಳಿಂದ ಕಲಿಯಬಹುದಾದ ಪಾಠ.

ಇನ್ನೊಬ್ಬ ಮಹಿಳೆ ಅಮ್ಮೈಯಮ್ಮಗಾರು (ಅವಳ ನಿಜವಾದ ಹೆಸರು ಅನಸೂಯ). ವಿಧವೆಯಾದ ಅವಳು ಚಾಮರಾಜಪೇಟೆ ಮನೆಯಲ್ಲಿ ನನ್ನ ಅಜ್ಜಿಯ ಜೊತೆಗಾರ್ತಿಯಾಗಿ ವಾಸಿಸುತ್ತಿದ್ದಳು. ಅವಳು ಆತ್ಮಪ್ರಶಂಸೆ ಅಥವಾ ಸ್ವ-ಪ್ರಚಾರದ ಸ್ವಭಾವದವಳಾಗಿದ್ದಳು, ಅದರೆ ಅವಳ ಹೇಳಿಕೆಗಳನ್ನು ಬೆಂಬಲಿಸತಕ್ಕ ಯಾವ ಕೌಶಲ್ಯಗಳೂ ಅವಳಲ್ಲಿರಲಿಲ್ಲ. ಆದರೂ ಹೇಗೆ ಮಾಡಬೇಕೆಂಬ ಗಂಧಗಾಳಿಯಿಲ್ಲದಿದ್ದ ಕೆಲಸಗಳನ್ನು ಕೂಡ ತಾನೇ ಮಾಡುತ್ತೇನೆ ಎಂದು ಮುಂದೆ ಬರುತ್ತಿದ್ದಳು. ಪರಿಣಾಮವಾಗಿ ಕೈಗೆತ್ತಿಕೊಂಡ ಕೆಲಸವನ್ನು ಸಂಪೂರ್ಣ ಕೆಡಿಸಿಬಿಡುತ್ತಿದ್ದಳು. ಅವಳಿಗೆ ಇತರರ ಟೀಕೆಯನ್ನು ಸಹಿಸಿಕೊಳ್ಳುವ ತಾಳ್ಮೆ ಇರಲಿಲ್ಲ. ಕೆಲಸ ಕೆಟ್ಟಾಗ ಇತರರು ಏನಾದರೂ ಅಂದರೆ ತನಗೆ ಅನ್ಯಾಯ ಅಗುತ್ತಿದೆ ಎಂದು ದೂರುತ್ತ, ಅದು ನಿಜವಿರಲಿ ಅಥವಾ ಅವಳ ಕಲ್ಪನೆಯೇ ಇರಲಿ, ಅಳುವುದನ್ನು ಕಂಡಿದ್ದೇನೆ. ತಾನು ಜೀವನದಲ್ಲಿ ಸುತ್ತಮುತ್ತಲಿನ ಜನರ ಬಲಿಪಶುವಾಗುತ್ತಿದ್ದೇನೆ

ಅಂದುಕೊಳ್ಳುತ್ತಿದ್ದಳು. ಅಷ್ಟೇ ಅಲ್ಲ ಅದನ್ನು ಪದೇ-ಪದೇ ಹೇಳಿಕೊಳ್ಳುತ್ತಿದ್ದಳು. ಅವಳು ವಿಧವೆಯಾದರೂ ಕೇಶ-ಮುಂಡನ ಮಾಡಿಸಿಕೊಂಡಿರಲಿಲ್ಲ, ಅಲ್ಲದೆ ಅವಳಿಗೆ ಮನೆಯ ಯಾವ ಭಾಗಕ್ಕೂ ಪ್ರವೇಶದ ನಿರ್ಬಂಧ ಇರಲಿಲ್ಲ. ಅವಳಿಗೆ ಇನ್ನಾರೂ ದಿಕ್ಕಿಲ್ಲದಿದ್ದುದರಿಂದ ನನ್ನ ಅಜ್ಜಿ ಅವಳಿಗೆ ಆಶ್ರಯ ಕೊಟ್ಟಿದ್ದಳೆಂದು ಕಾಣುತ್ತದೆ. ಅವಳ ಹೆಸರು ಪ್ರಸಿದ್ಧ ಪೌರಾಣಿಕ ಮಹಿಳೆ ಅನಸೂಯ ಎಂದಾಗಿದ್ದರೂ ಅವಳು ಚಾಮರಾಜಪೇಟೆ ಮನೆಯ ಅತ್ಯಂತ ಅಸಹಾಯಕ ವ್ಯಕ್ತಿಯಾಗಿದ್ದಳು. ಅವಳು ನನ್ನ ಅಜ್ಜಿಯ ಔದಾರ್ಯದಿಂದ ಬದುಕುಳಿದಳು ಎಂದು ನನ್ನ ನಂಬಿಕೆ.

ಇಂದು ವಯಸ್ಕಳಾದ ನಾನು ಅಮ್ಮೈಯಮ್ಮಗಾರುವನ್ನು ನೆನಪಿಸಿಕೊಂಡರೆ ನನ್ನ ಭಾವನೆಗಳು ಮಿಶ್ರಿತವಾಗಿವೆ. ಅವಳು ಯಶಸ್ವಿಯಾಗಿ ಮಾಡುತ್ತಿದ್ದ ಒಂದೇ ಒಂದು ಕೆಲಸವೆಂದರೆ ಇತರರ ಮೇಲೆ ಕೈಚಳಕ ತೋರಿಸುವದು. ಇದೇ ಕಾರಣದಿಂದ ನನಗೆ ಅವಳು ಇಷ್ಟವಾಗುತ್ತಿರಲಿಲ್ಲ. ಬಹುಶಃ ನನ್ನೀ ಅನಿಸಿಕೆ ಆ ಸಮಯದಲ್ಲಿ ನಡೆದ ಒಂದು ವಿಶಿಷ್ಟ ಘಟನೆಯಿಂದಿದ್ದಿರಲೂ ಬಹುದು. ಒಮ್ಮೆ ಅವಳು ನನ್ನ ಸಹ-ಸಹೋದರ, ನನ್ನ ಚಿಕ್ಕ ತಮ್ಮ ಮತ್ತು ನನ್ನನ್ನು ಸರ್ಕಸ್ಸಿಗೆ ಕರೆದುಕೊಂಡು ಹೋಗಲು ತಾನಾಗಿ ಮುಂದೆ ಬಂದಳು. ನನ್ನ ಪಾಲಕರು ಎಲ್ಲರ ಟಿಕೇಟುಗಳಿಗೂ ಸಾಕಾಗುವಷ್ಟು ಹಣ ಕೊಟ್ಟು ಕಳಿಸಿದ್ದರು. ಆದರೆ ಅವಳ ಮನಸ್ಸಿನಲ್ಲಿ ಯಾಕೆ ಮಕ್ಕಳಿಗೆ ಪೂರ್ಣ ಬೆಲೆಯ ಟಿಕೆಟ್ ಖರೀದಿಸಬೇಕು ಅನಿಸಿರಬೇಕು. ಅದಕ್ಕಾಗಿ ನಮ್ಮ ಹತ್ತಿರ ನಮ್ಮ ನಮ್ಮ ವಯಸ್ಸನ್ನು ಸುಳ್ಳೇ ಕಡಿಮೆ ಹೇಳಿಸಿ, ನನಗೆ ಮತ್ತು ನನ್ನ ಸಹ-ಸಹೋದರನಿಗೆ ಅರ್ಧಬೆಲೆ ಟಿಕೇಟು ಖರೀದಿಸಿ, ನಾಲ್ಕು ವರ್ಷದ ನನ್ನ ಚಿಕ್ಕ ತಮ್ಮನನ್ನು ಎತ್ತಿಕೊಂಡು ಪುಕ್ಕಟೆಯಾಗಿ ಪ್ರವೇಶ ಪಡೆದಿದ್ದಳು. ಬಹುಶಃ ಇದರಿಂದ ಅವಳು ಉಳಿಸಿದ ಹಣ ಕೆಲವೇ ರೂಪಾಯಿಗಳಿಷ್ಟಿರಬಹುದು, ಆದರೂ ಈ ಘಟನೆ ನನ್ನ ಮನಸ್ಸಿನಲ್ಲಿ ಅವಳ ಬಗ್ಗೆ ಒಂದು ರೀತಿಯ ಕೆಟ್ಟ ಭಾವನೆ ಹುಟ್ಟಿಸಿ ಇಂದಿಗೂ ಉಳಿದುಕೊಂಡುಬಿಟ್ಟಿದೆ. ಅವಳ ಅಂದಿನ ಪರಿಸ್ಥಿತಿ ನನಗೇ ಎದುರಾಗಿದ್ದರೆ ನನ್ನ ವರ್ತನೆ ಭಿನ್ನವಾಗಿರುತ್ತಿತ್ತೇ ಎಂಬ ಭರವಸೆ ಇಲ್ಲ ಎಂದು ನನ್ನ ಒಳಮನಸ್ಸು ಕೆಲವೊಮ್ಮೆ ಹೇಳುತ್ತದೆ.

ಕೊನೆಯದಾಗಿ ನಾನು ನಮ್ಮನ್ನು ಅತ್ಯಂತ ವಿಸ್ಮಯಗೊಳಿಸಿದ ಮಹಿಳೆಯ ಬಗ್ಗೆ ಹೇಳಹೊರಟಿದ್ದೇನೆ. ಅವಳ ಹೆಸರು ಲಕ್ಷ್ಮಿ. ನಮಗೆ ಅವಳ ಪರಿಚಯ ಲಕ್ಷಮ್ಮಗಾರು ಎಂದು. ಅವಳು ಚಾಮರಾಜಪೇಟೆ ಮನೆಗೆ ಪ್ರತಿದಿನ ಕೆಲಸಕ್ಕೆ ಬರುತ್ತಿದ್ದ ಮುಖ್ಯ ಅಡುಗೆಯವಳು. ನನ್ನ ಅಜ್ಜಿಯ ಸ್ನಾನಕ್ಕಾಗಿ ಬಿಸಿನೀರು ಸಿದ್ಧಪಡಿಸಿಡುವುದು, ಹಾಗೂ ಅಜ್ಜಿಯ ಮಡಿ ಸೀರೆ, ಕುಪ್ಪಸಗಳನ್ನು ಎತ್ತಿಡುವುದು ಕೂಡ ಅವಳ ಜವಾಬ್ದಾರಿಯಾಗಿತ್ತು. ಕೇಶಮುಂಡನ ಮಾಡಿಸಿಕೊಂಡ ಬಾಲವಿಧವೆಯಾದ ಅವಳು ಆಗಿನ ಸಂಪ್ರದಾಯದಂತೆ ಒಂದೇ ಬಟ್ಟೆಯನ್ನು ಧರಿಸಬೇಕಾಗಿದ್ದಿತು. ಪ್ರತಿದಿನ ಆಕೆ ಕೆಂಪು ಬಣ್ಣದ ಒಂದು ನೂಲಿನ ಸೀರೆಯನ್ನು ಮಾತ್ರ ಮೈಗೆ ಸುತ್ತಿಕೊಂಡು, ಅದರ ಸೆರಗಿನಿಂದ ಬೋಳಿಸಿದ ತಲೆಯನ್ನು ಮುಚ್ಚಿಕೊಳ್ಳುತ್ತಿದ್ದಳು. ಅವಳು ಮನೆಯ ಪಕ್ಕದ ಬಾಗಿಲಿನಿಂದ ಒಳಹೊಕ್ಕು,

ನೇರವಾಗಿ ಹಿಂದಿನ ಅಂಗಳಕ್ಕೆ ಬರುತ್ತಿದ್ದಳು. ಇದು ಮನೆಯ ಬಲಭಾಗದ ವಿಸ್ತಾರವಾದ ಪ್ರದೇಶವಾಗಿತ್ತು. ಅಂಗಳದ ನೆಲವನ್ನು ಗ್ರಾನೈಟ್ ಕಲ್ಲಿನ ಪರಸಿಗಳಿಂದ ನಿರ್ಮಿಸಲಾಗಿತ್ತು. ಪಾತ್ರೆಗಳನ್ನು ತೊಳೆಯಲು ಮತ್ತು ಬಟ್ಟೆಗಳನ್ನು ಒಗೆಯಲು ಅಲ್ಲಿ ನಲ್ಲಿಗಳಿದ್ದವು. ಬಚ್ಚಲುಮನೆಗೆ ಕೂಡ ಇಲ್ಲಿಂದ ನೇರ ಪ್ರವೇಶವಿತ್ತು.

ಬೆಳಿಗ್ಗೆ 8 ಗಂಟೆಯ ಸುಮಾರಿಗೆ ಬರುತ್ತಿದ್ದ ಅವಳು ಕಾರಿಡಾರ್ ಮೂಲಕ ಸೀದಾ ಅಡುಗೆಮನೆಗೆ ಹೋಗುತ್ತಿದ್ದಳು. ಅಲ್ಲಿ ಇಟ್ಟಿದ್ದ ನನ್ನ ಅಜ್ಜಿಯ ಹಿಂದಿನ ದಿನದ ಮಲಿನವಾದ ಸೀರೆ, ಕುಪ್ಪಸ ಮತ್ತು ಟವೆಲ್‌ಗಳನ್ನು ತೆಗೆದುಕೊಂಡು, ತನ್ನ ಬಟ್ಟೆಯನ್ನು ಕೇವಲ ಒಂದೆರಡು ಗಜಗಳಷ್ಟು ಉದ್ದದ ಹಳೆಯ ಕೆಂಪು ಸೀರೆಗೆ ಬದಲಾಯಿಸಿಕೊಂಡು ಅಂಗಳದಲ್ಲಿರುವ ನಲ್ಲಿಯ ಸ್ಥಳಕ್ಕೆ ಹೋಗುತ್ತಿದ್ದಳು. ಅಲ್ಲಿ ಅಜ್ಜಿಯ ಬಟ್ಟೆಗಳನ್ನು ಒಗೆದ ಬಳಿಕ ತಾನು ತಣ್ಣೀರಿನಲ್ಲಿ ಸ್ನಾನ ಮಾಡುತ್ತಿದ್ದಳು. ಇನ್ನೂ ಒದ್ದೆ ಬಟ್ಟೆಯಲ್ಲೇ ತುಳಸಿ ಕಟ್ಟೆ ಸುತ್ತಿ ಅಡುಗೆಮನೆಗೆ ಬರುತಿದ್ದಳು. ಈ ಎಲ್ಲಾ ಕೆಲಸಗಳನ್ನು ಮಾಡುತ್ತಿದ್ದಾಗ ಅವಳು ನಿರಂತರವಾಗಿ ಪ್ರಾರ್ಥನೆಗಳನ್ನು ಹೇಳಿಕೊಳ್ಳುತ್ತಿದ್ದಳು. ಒದ್ದೆಯಾದ ಬಟ್ಟೆಯಿಂದ ಮುಚ್ಚಿದ ಅವಳ ಸ್ಥೂಲ ದೇಹ ಇತರರಿಗೆ ಹೇಗೆ ಕಂಡೀತೆಂಬ ಬಗ್ಗೆ ಅವಳಿಗೆ ಸ್ವಲ್ಪವೂ ಪರಿವೆ ಇರುತ್ತಿರಲಿಲ್ಲ. ಆ ರೀತಿ ಇರುವ ಅವಳ ನಿರಾಡಂಬರತೆ ಕಂಡು ನಾನು ಮತ್ತು ನನ್ನ ಸೋದರಸಂಬಂಧಿಗಳು ಮನಸ್ಸಿನಲ್ಲಿಯೇ ಮುಸುಮುಸು ನಗುತ್ತಿದ್ದೆವು. ನಂತರ ಅವಳು ಮನೆಯ ಹಿಂಭಾಗದಲ್ಲಿರುವ ಅಡುಗೆಮನೆಗೆ ಹಿಂತಿರುಗಿದ ಬಳಿಕ, ಪಕ್ಕದ ಕೋಣೆಯಲ್ಲಿ ತನ್ನ ಒದ್ದೆಯಾದ ಸೀರೆಯನ್ನು ಒಣಹಾಕಿ, ಒಣಗಿದ ತನ್ನ ಕೆಂಪು ಸೀರೆಗೆ ಬದಲಾಯಿಸಿಕೊಳ್ಳುತ್ತಿದ್ದಳು. ಹೀಗೆ ಮಾಡುತ್ತಿದ್ದಾಗ ಮೈಲಿಗೆ ಆಗದಂತೆ ಕಾಳಜಿ ವಹಿಸುತ್ತಿದ್ದಳು. ಅಷ್ಟೊತ್ತಿಗೆ ನನ್ನ ಅಜ್ಜಿ ತನ್ನ ಮಗಳನ್ನು ಅಥವಾ ಹಿರಿಯ ಸೋದರ ಸಂಬಂಧಿಯೊಬ್ಬಳನ್ನು ಅಂದಿನ ಮಧ್ಯಾಹ್ನ ಮತ್ತು ರಾತ್ರಿಯ ಊಟದ ಮೆನುವಿನ ಬಗ್ಗೆ ಅವಳೊಡನೆ ಮಾತನಾಡಲು ಕಳುಹಿಸುತ್ತಿದ್ದರು. ಪ್ರತಿಯಾಗಿ ಲಕ್ಷಮ್ಮಗಾರು ಆ ದಿನದ ಅಡುಗೆಗೆ ಎಷ್ಟು ಅಕ್ಕಿ, ಬೇಳೆ ಇತ್ಯಾದಿ ಸಾಮಗ್ರಿ ಬೇಕೆಂದು ಹೇಳಿ ಕಳುಹಿಸುತ್ತಿದ್ದಳು. ಸೌದೆ ಒಲೆಯ ಮೇಲೆ ಅಡುಗೆ ಮಾಡಿ ಮಧ್ಯಾಹ್ನ 12 ಗಂಟೆಯ ಹೊತ್ತಿಗೆ ಊಟವನ್ನು ತಯಾರಿಸುತ್ತಿದ್ದಳು. ಅಡುಗೆಗೆ ಬೇಕಾದ ಎಲ್ಲಾ ಮಸಾಲೆಗಳನ್ನು ಅವಳು ತಾನೇ ಸ್ವತಃ ತಾಜಾ ಆಗಿ ರುಬ್ಬಿಕೊಳ್ಳುತ್ತಿದ್ದಳು. ಲಕ್ಷಮ್ಮಗಾರು ಕೆಲಸದಲ್ಲಿ ಬಹುಮಟ್ಟಿಗೆ ದಕ್ಷಳಾಗಿದ್ದಳು. ಹಬ್ಬ ಮತ್ತು ಗ್ರಹಣದಂತಹ ಕೆಲವು ಸಂದರ್ಭಗಳಲ್ಲಿ ಊಟ-ತಿಂಡಿಗಳ ಸಮಯ ಬದಲಾಗುತ್ತಿತ್ತು. ಇದರಿಂದ ಮಧ್ಯಾಹ್ನದ ಊಟ ತಡವಾದಾಗ ನಾವು ಮಕ್ಕಳು ನಿರಾಶೆಗೊಂಡು ಕಾಯುತ್ತಿದ್ದೆವು.

ನಾವು ಊಟದ ಮನೆಯಲ್ಲಿ ನಮ್ಮ ನಮ್ಮ ತಾಟು ಅಥವಾ ಬಾಳೆ ಎಲೆ ಜೊತೆ ಊಟಕ್ಕೆ ಕುಳಿತಾಗ ಲಕ್ಷಮ್ಮಗಾರು ನಮಗೆ ಊಟ ಬಡಿಸುತ್ತಿದ್ದಳು. ನನ್ನ ಅಜ್ಜಿ ತಾಟಿನಲ್ಲಿ ಊಟ ಮಾಡುತ್ತಿರಲಿಲ್ಲ. ಅವರ ಊಟಕ್ಕೆ ಬಾಳೆ ಎಲೆ ಬೇಕಾಗಿತ್ತು. ಅದು ಸಿಗದಿದ್ದಾಗ ಲಕ್ಷಮ್ಮಗಾರು ಅಜ್ಜಿಗಾಗಿ ಬಾದಾಮಿ ಎಲೆಗಳಿಂದ ಊಟದ ಎಲೆ ತಯಾರಿಸಿಕೊಡುತ್ತಿದ್ದಳು.

ಲಕ್ಷಮ್ಮಗಾರು ಊಟ ಬಡಿಸುವಾಗ ಅನ್ನ ಮತ್ತು ಮೇಲೋಗರಗಳನ್ನು ಎಲೆ ಅಥವಾ ತಾಟಿಗೆ ತಾಗದಂತೆ ಎತ್ತರದಿಂದ ಹಾಕುತ್ತಿದ್ದಳು. ಇದು ಕೆಲವೊಮ್ಮೆ ಸುತ್ತ-ಮುತ್ತ ಎರಚುತ್ತಿತ್ತು. ಆದರೂ 'ಮಡಿ'ಯನ್ನು ಕಾಯ್ದುಕೊಳ್ಳಲು ಅವಳಿಗೆ ಹೀಗೆ ಬಡಿಸುವುದು ಅನಿವಾರ್ಯ-ವಾಗಿದ್ದಿತು. ನಾವು ಚಿಕ್ಕವರಿದ್ದಾಗ ಅವಳು ತಯಾರಿಸುತ್ತಿದ್ದ ಅಡುಗೆಯನ್ನು ಉಣ್ಣುತ್ತಿದ್ದರೂ ಅವಳು ಕಷ್ಟಪಟ್ಟು ತಯಾರಿಸಿದ ಅಡುಗೆಯನ್ನು ಎಂದೂ ಪ್ರಶಂಸಿಸುತ್ತಿರಲಿಲ್ಲ. ಇದಕ್ಕೆ ವ್ಯತಿರಿಕ್ತವಾಗಿ ಅವಳ ಉದ್ದವಾಗಿ ಬೆಳೆದ ಕಾಲಿನ ಉಗುರಿನ ಬಗೆಗೊ ಅಥವಾ ಅವಳು ಟೊಮೇಟೋವನ್ನು "ಟೊಂಬೆಟ್ಟೋ" ಎಂದು ಕರೆಯುತ್ತಿರುವ ಬಗ್ಗೆಯೋ ಟೀಕೆ ಮಾಡುತ್ತಿದ್ದೆವು.

ಮಧ್ಯಾಹ್ನದ ಮೇಲೆ ಅವಳು ಹಪ್ಪಳ-ಸಂಡಿಗೆ ಮಾಡುವುದರಲ್ಲಿ ನಿರತಳಾಗಿರುತ್ತಿದ್ದಳು. ಹಪ್ಪಳ-ಸಂಡಿಗೆಗೆ ಬೇಕಾಗುವ ಅಕ್ಕಿ-ಬೇಳೆಯನ್ನು ಅಡುಗೆಗೆ ಕೊಟ್ಟ ಅಕ್ಕಿ-ಬೇಳೆಯಲ್ಲಿ ಒಂದೆರಡು ಹಿಡಿ ತೆಗೆದಿಟ್ಟುಕೊಳ್ಳುವಳೆಂದು ನನ್ನ ಅಜ್ಜಿಗೆ ತಿಳಿದಿತ್ತು ಮತ್ತು ಒಪ್ಪಿಗೆಯಿತ್ತು. ಹೀಗೆ ತಯಾರಿಸಿದ ಹಪ್ಪಳ-ಸಂಡಿಗೆಗಳನ್ನು ಮಾರಾಟ ಮಾಡಿ ತನ್ನ ಬಿಡಿ ಖರ್ಚಿಗಾಗಿ ಉಳಿಸಿಕೊಳ್ಳುತ್ತಿದ್ದಳು.

ಸಂಜೆಯ ಅಡುಗೆ ಮುಗಿಸಿ ಬದಿಗಿಟ್ಟು, ಅಡುಗೆಮನೆ ಸ್ವಚ್ಛಮಾಡಿ ಲಕ್ಷಮ್ಮಗಾರು ಕೆಲ ಮೈಲು ದೂರದಲ್ಲಿರುವ ಶಂಕರಮಠಕ್ಕೆ ನಡೆದುಕೊಂಡು ಹೋಗುತ್ತಿದ್ದಳು. ಅವಳು ಅಲ್ಲಿಯ ಹೂತೋಟದಲ್ಲಿ ಸ್ವಲ್ಪ ಹೊತ್ತು ಕೆಲಸ ಮಾಡಿ ಸಂಜೆಯ ಭಜನೆ ಮತ್ತು ಹರಿಕಥೆಗಳಿಗೆ ಸೇರಿಕೊಳ್ಳುತ್ತಿದ್ದಳು. ಅವಳು ತನ್ನ ತಮ್ಮನ ಮನೆಯ ಒಂದು ರೂಮಿನಲ್ಲಿ ವಾಸಿಸುತ್ತಿದ್ದಳು. ಅವಳ ಗಳಿಕೆಯ ಹೆಚ್ಚಿನ ಭಾಗವೆಲ್ಲ ಮಠಕ್ಕೆ ಮತ್ತು ತಮ್ಮನ ಕುಟುಂಬದ ಖರ್ಚಿಗೆ ಹೋಗುತ್ತಿತ್ತು.

ಅವಳು ಚಾಮರಾಜಪೇಟೆ ಮನೆಯ ಕೆಲಸವನ್ನು ಎಂದೂ ತಪ್ಪಿಸಿದ್ದಿಲ್ಲ. ಅವಳು ಸ್ವಲ್ಪ ಎತ್ತರದ ಧ್ವನಿಯಲ್ಲಿ ಮಾತನಾಡುತ್ತಿದ್ದರೂ ಸದಾ ಹರ್ಷಚಿತ್ತದಿಂದಿರುತ್ತಿದ್ದಳು. ಅವಳು ಕಣ್ಣೀರು ಸುರಿಸುತ್ತಿದ್ದ ಒಂದೇ ಒಂದು ಸಮಯವನ್ನು ನಾವು ನೋಡಿದ್ದು ನಾವು ಮಕ್ಕಳು ಬೇಸಿಗೆ ಸೂಟಿ ಮುಗಿಸಿ ನಮ್ಮ ನಮ್ಮ ಊರುಗಳಿಗೆ ಹಿಂತಿರುಗುವಾಗ ಮಾತ್ರ. ಆ ದಿನ ಅವಳು ನಾವು ಹೊರಡುವತನಕವೂ ತಡವಾಗಿ ಉಳಿದು, ಹೊರಡುವ ಮೊದಲು ನನ್ನ ತಾಯಿಗೆ ಸ್ವಲ್ಪ ಹಪ್ಪಳ ಕೊಟ್ಟು, ಮೇಲಿಂದ-ಮೇಲೆ ಬರುತ್ತಿರಿ ಎಂದು ಹೇಳಿ ನಮ್ಮನ್ನು ಬೀಳ್ಕೊಡುತ್ತಿದ್ದಳು.

ನಾನಿಂದು ಲಕ್ಷಮ್ಮಗಾರು ಅವಳನ್ನು ನೆನಪಿಸಿಕೊಂಡಾಗ ಅಂದಿನ ದಿನಗಳಲ್ಲಿ ನಾನು ಅವಳ ನಿಷ್ಠೆಯನ್ನು ಎಂದೂ ಪ್ರಶಂಸಿಸಿಲ್ಲ ಎಂದು ಪಶ್ಚಾತ್ತಾಪವೂ, ನಾಚಿಕೆಯೂ ಆಗುತ್ತದೆ. ನಾನು ಅವಳೊಂದಿಗೆ ಒಂದು ಪ್ರೀತಿಯ ಮಾತನಾಡಿದ್ದಿಲ್ಲ. ಉಳಿದ ಹಿರಿಯರ ಪಾದಮುಟ್ಟಿ ನಮಸ್ಕರಿಸಿದಂತೆ ಅವಳಿಗೆ ನಮಸ್ಕರಿಸಲಿಲ್ಲ. ಅವಳನ್ನು ಗೌರವದಿಂದ ಕಾಣಲಿಲ್ಲ. ನಿಜವಾಗಿಯೂ ಅವಳು ನಮ್ಮೆಲ್ಲರ ಗೌರವ, ಪ್ರೀತಿಗೆ ಅರ್ಹಳಾಗಿದ್ದಳು. ಅಂದಿನ ಪರಿಸ್ಥಿತಿಯಲ್ಲಿ ಅವಳ ಜೀವನ ಅತ್ಯಂತ ಕಷ್ಟಕರವಾಗಿದ್ದಿರಬೇಕು. ಆದರೂ

ಅವಳು ಶಿಸ್ತು, ಧೈರ್ಯ ಮತ್ತು ಎಲ್ಲರೊಡನೆ ಪ್ರೀತಿಯಿಂದ ಬಾಳಿದಳು. ಅವಳ ಹೆಸರು ಲಕ್ಷ್ಮಿ ಎಂದಿದ್ದರೂ ಜಗತ್ತು ಅವಳಿಗೆ ಕೊಟ್ಟಿದ್ದು ಅತಿ ಕಡಿಮೆ, ಬದಲಾಗಿ ಅವಳು ತನ್ನ ಜೀವನದಲ್ಲಿ ಬಂದ ಎಲ್ಲರೊಡನೆಯೂ, ಧನಲಕ್ಷ್ಮಿಯಂತೆ ಉದಾರವಾಗಿ ನಡೆದುಕೊಂಡಳು. ಅಂದಿನ ಸಮಾಜ ವಿಧವೆಯರನ್ನು ಅಷ್ಟು ಕ್ರೂರವಾಗಿ ನಡೆಸಿಕೊಳ್ಳಬಾರದಾಗಿತ್ತೆಂದು ಅನಿಸುತ್ತದೆ. ಹಾಗಿಲ್ಲದಿದ್ದರೆ ಅವಳ ಜೀವನ ಹೇಗಿರುತ್ತಿತ್ತೇನೋ?

ನಾನಿಂದು ದೂರ ದೇಶದಲ್ಲಿದ್ದು ಈ ಹಳೆಯ ನೆನಪುಗಳನ್ನು ತಮ್ಮೊಡನೆ ಹಂಚಿಕೊಳ್ಳುವ ಕಾರಣವಿಷ್ಟೇ: ಸ್ತ್ರೀಯರಿಗೆ ಮತ್ತು ಪುರುಷರಿಗೆ ಸಮಾಜದಲ್ಲಿ ಭಿನ್ನ-ಭಿನ್ನ ನಿಯಮಗಳು ಅನ್ವಯಿಸುತ್ತದೆ ಎಂಬುದನ್ನು ಮನಗಂಡಿದ್ದೇನೆ. ಬಾಲ್ಯವಿವಾಹಗಳು ಎಂದೋ ಮರೆಯಾಗಿದ್ದರೂ, 1960ರ ದಶಕದಲ್ಲಿ ಕೂಡ ವಿಧವೆಯರ ಮೇಲಾಗುತ್ತಿರುವ ದೌರ್ಜನ್ಯ ಮತ್ತು ಅವರಿಗಿದ್ದ ನಿರ್ಬಂಧಗಳನ್ನು ನೆನೆಸಿಕೊಂಡರೆ ತುಂಬ ನೋವಾಗುತ್ತದೆ. ಹೆಂಡತಿ ಸತ್ತ ಮೇಲೆ ಗಂಡಸರು ಮರು-ಮದುವೆಯಾಗುವುದು ಸರ್ವೇ ಸಾಮಾನ್ಯವಾದರೂ ಗಂಡನನ್ನು ಕಳೆದುಕೊಂಡ ವಿಧವೆಯರಿಗೆ ಮರು-ಮದುವೆಯನ್ನು ಯೋಚಿಸುವುದೂ ಅಸಾಧ್ಯ. ನನ್ನ ಮುತ್ತಜ್ಜನ ಮೊದಲ ಹೆಂಡತಿ ತೀರಿಕೊಂಡಾಗ ಅವರಿಗೆ ಬೆಳೆಯುತ್ತಿರುವ ಮಕ್ಕಳಿದ್ದರು. ಅವರು ಮರುಮದುವೆಯಾಗಿ ತುಂಬುಜೀವನ ಬಾಳಿದರು. ನನ್ನ ತಾಯಿಯ ತಂದೆಯವರು ಹೆಂಡತಿ ಸತ್ತ ಬಹಳ ವರ್ಷಗಳ ತನಕ ಮರುಮದುವೆಯಾಗಲಿಲ್ಲ. ಆಗಿನ್ನೂ ಅವರಿಗೆ ಮದುವೆಯಾಗಿ ಸ್ವಲ್ಪ ವರ್ಷಗಳಾಗಿದ್ದರಿಂದ ಹೆಂಡತಿಯ ಅಗಲಿಕೆಯನ್ನು ಸಹಿಸಿಕೊಳ್ಳಲು ಕೆಲ ಸಮಯ ಹಿಡಿಯಿತು. ಅವರೂ ಕೂಡ ಕಾಲಾಂತರದಲ್ಲಿ ಅದ್ಭುತ ಮಹಿಳೆಯೊಬ್ಬಳನ್ನು ಮದುವೆಯಾಗಿದ್ದರು. ಅವರಿಗೆ ಎರಡನೆಯ ಮದುವೆಯಿಂದ ಮಕ್ಕಳಾಗಲಿಲ್ಲ.

ನನ್ನ ಇಬ್ಬರು ಅಜ್ಜಂದಿರು ಆಗಿನ ಕಾಲದ ಪದ್ಧತಿಯನ್ನೇ ಅನುಸರಿಸಿದರು. ಅವರು ಒಳ್ಳೆಯ ವ್ಯಕ್ತಿಗಳಾಗಿದ್ದರು. ಆದರೆ ಸಮಾಜ ಅವರ ಆವಶ್ಯಕತೆಗಳನ್ನು ಒಪ್ಪಿಕೊಂಡು ಸಹಕರಿಸಿತು ಮತ್ತು ಅವರು ತುಂಬುಜೀವನ ಬಾಳಲು ಸಹಾಯ ಮಾಡಿತು. ಇದಕ್ಕೆ ಬದಲಾಗಿ ಅಂದಿನ ದಿನಗಳಲ್ಲಿ ಸ್ತ್ರೀಯರನ್ನು ಕುರಿತು ಆ ತರದ ತಿಳಿವಳಿಕೆಯಾಗಲೀ, ಅವರಿಗೆ ಬೇರೆ ಆಯ್ಕೆಯಾಗಲೀ ಇರಲಿಲ್ಲ. ವಿಧವೆಯರನ್ನು ಸಮಾಜದಿಂದ ಹೊರತಳ್ಳಲಾಯಿತು. ಅಷ್ಟೇ ಅಲ್ಲದೆ ಅವರ ಮೇಲೆ ಅತ್ಯಾಚಾರ ಎಸಗುವದು, ಅವರು ಗರ್ಭಿಣಿಯರಾದರೆ ಏಕಪಕ್ಷೀಯವಾಗಿ ಶಿಕ್ಷಿಸುವದು ಸಾಮಾನ್ಯವಾಗಿತ್ತು.

ಕಳೆದ 70 ವರ್ಷಗಳಲ್ಲಿ ಪರಿಸ್ಥಿತಿ ಬದಲಾಗುತ್ತಿದೆ. ಆದರೆ ಈ 21ನೇ ಶತಮಾನ-ದಲ್ಲಿಯೂ ಎಷ್ಟು ಸೂಕ್ಷ್ಮ ಪಕ್ಷಪಾತಗಳು ನಮ್ಮನ್ನು ಆಳುತ್ತಿವೆ ಹಾಗೂ ಭವಿಷ್ಯವು ನಮ್ಮ ಬಗ್ಗೆ ಏನು ಅಭಿಪ್ರಾಯ ತಳೆಯಬಹುದು ಎಂದು ನನಗೆ ಆಶ್ಚರ್ಯವಾಗುತ್ತದೆ. ಜಗತ್ತು ಸ್ತ್ರೀಯರ ಅಂದರೆ ನಮ್ಮ ತಾಯಂದಿರ, ಅಕ್ಕ-ತಂಗಿಯರ, ಹಾಗೂ ಎಲ್ಲಾ ಹೆಣ್ಣುಮಕ್ಕಳ ಸಮಾನತೆಯತ್ತ ಮುಂದುವರಿಯಲಿ ಎಂಬುದೇ ನನ್ನ ಪ್ರಾಮಾಣಿಕ ಆಶಯ.



# ಸ್ತ್ರೀ ಸಮಾನತೆಗಾಗಿ ಹೋರಾಡಿದ ಧೀರ ಮಹಿಳೆ
# Ruth Bader Ginsburg

**ವತ್ಸ ಕುಮಾರ್**
Houston, Texas

*

**ಲೇಖನದ ಉದ್ದೇಶ:**

ಇಡೀ ವಿಶ್ವದಲ್ಲಿ ಶತಮಾನಗಳಿಂದ ಸ್ತ್ರೀ ಸ್ವಾತಂತ್ರ್ಯ, ಸ್ತ್ರೀ ಸಮಾನತೆ, ಸ್ತ್ರೀಯರ ಏಳಿಗೆಗೆ ಅನ್ಯಾಯವಾಗುತ್ತಿದೆ ಎಂಬ ಕಾರಣದಿಂದ, ನೂರಾರು ಸ್ತ್ರೀಯರು, ಸ್ತ್ರೀಯರ ಸ್ಥಿತಿಗತಿಗಳು ಉತ್ತಮಗೊಳ್ಳಬೇಕೆಂಬ ಕಾರಣದಿಂದ ಹೋರಾಟ ನಡೆಸುತ್ತಿರುವ ವಿಷಯವನ್ನು ಮತ್ತೆ ಇಲ್ಲಿ ಉಲ್ಲೇಖಿಸುವ ಅಗತ್ಯವಿಲ್ಲ. ವಿದ್ಯಾಭ್ಯಾಸ, ಹೆಚ್ಚಿನ ವ್ಯಾಸಂಗ, ನೌಕರಿ, ರಾಜಕೀಯ, ಸಮಾಜ ಸೇವೆ ಇತ್ಯಾದಿ ಎಲ್ಲಾ ಕ್ಷೇತ್ರಗಳಲ್ಲಿ, ಸ್ತ್ರೀಯರಿಗೆ ಸಾಕಷ್ಟು ಅವಕಾಶ ಸಿಗದೆ ಇರುವುದು, ಹಾಗೇನಾದರೂ ಅವಕಾಶ ಸಿಕ್ಕಲ್ಲಿ, ಸ್ತ್ರೀ ತನ್ನ ಹಕ್ಕು ಬಾಧ್ಯತೆಗಳಿಗಾಗಿ ಗಂಡಿನೊಡನೆ ಹೋರಾಡುವುದು, ಕಡೆಯಲ್ಲಿ ಸೋಲೊಪ್ಪಿ ಸುಮ್ಮನಾಗುವುದು... ಹೀಗೇ ಸ್ತ್ರೀ ತನ್ನ ಅಸಹಾಯಕತೆಯಿಂದಾಗಿ, ಮುಂದುವರೆಯಲು ಸಾಧ್ಯವಾಗದೆ ಕೂಡುವುದು ಸರ್ವವಿದಿತವಾದರೂ, ನೂರಾರು ಸ್ತ್ರೀಯರು ತಮ್ಮ ಅಸಹಾಯಕತೆಯನ್ನು ಬದಿಗಿರಿಸಿ, ಸ್ತ್ರೀ ಸಮೂಹಕ್ಕೆ ದಾರಿ ದೀಪವಾಗಿ ಶ್ರಮಿಸಿದ್ದಾರೆ. ಈ ವಿಷಯವನ್ನು ಆಳವಾಗಿ ಪರೀಕ್ಷಿಸಿ, ಹಲವಾರು ಹೊಸ ವಿಷಯಗಳನ್ನು ಬೆಳಕಿಗೆ ತರುವುದು ಈ ಲೇಖನದ ಉದ್ದೇಶ. ನೊಬೆಲ್ ಬಹುಮಾನವನ್ನು ಎರಡು ಬಾರಿ ಗಳಿಸಿದ ಮೇರಿ ಕ್ಯೂರಿಯಂತ ವಿಜ್ಞಾನಿಗೂ ಸಹ ಉಚ್ಚ ವ್ಯಾಸಂಗ ಮಾಡಲು ಅವಕಾಶವನ್ನು ತನ್ನ ಹುಟ್ಟಿದ ಊರು ನಿರಾಕರಿಸಿದಾಗ,

ಧೈರ್ಯ ಕೆಡದ ಮೇರಿ ಕ್ಯೂರಿ, ಪ್ಯಾರಿಸ್ ವಿಶ್ವವಿದ್ಯಾನಿಲಯದಲ್ಲಿ ವಿದ್ಯಾಭ್ಯಾಸವನ್ನು ಮುಂದುವರೆಸಿದ ಕಥೆ, ಬಹಳಷ್ಟು ಜನರಿಗೆ ತಿಳಿದಿರಲಾರದು. ಇಂಥದೊಂದು ಸ್ಫೂರ್ತಿದಾಯಕ ವಿಷಯವೇ, ಈ ಲೇಖನದ ಉದ್ದೇಶ.

**Ruth Bader Ginsburg ಯಾರು?**

ಇಪ್ಪತ್ತನೆಯ ಶತಮಾನದಲ್ಲಿ, ಅಮೆರಿಕದ ಒಂದು ಮಧ್ಯಮ ವರ್ಗದ ಕುಟುಂಬದಲ್ಲಿ ನ್ಯೂ ಯಾರ್ಕ್‌ನಲ್ಲಿ ಜನಿಸಿ, ಅಮೆರಿಕದ ಸುಪ್ರೀಮ್ ಕೋರ್ಟಿನ ಮುಖ್ಯ ನ್ಯಾಯಾಧೀಶರಾಗಿ ನಿವೃತ್ತಿ ಹೊಂದಿದ ಗಿನ್ಸ್ ಬರ್ಗ್, ಕೇವಲ ಐದು ಅಡಿ ಎತ್ತರದ, ತೆಳು ಮೈಕಟ್ಟಿನ, ಮೃದು ಭಾಷೆಯ, ಜ್ಯೂಯಿಶ್ ಸಂಪ್ರದಾಯದ ಮನೆಯಲ್ಲಿ ಹುಟ್ಟಿ, ನ್ಯೂ ಯಾರ್ಕ್ ಪರಿಸರದಲ್ಲಿ ಬೆಳೆದು, ವಾಷಿಂಗ್ಟನ್ ಡಿ.ಸಿ.ಯಲ್ಲಿ ಇಹಲೋಕ ತ್ಯಜಿಸಿದ, ಒಂದು ಅಪೂರ್ವ ಶಕ್ತಿ, ಚೇತನ.

ಸುಮಾರು 200 ನ್ಯಾಯಾಧೀಶರು ಬಂದು ಹೋಗಿರುವ ರಾಷ್ಟ್ರದ ಸುಪ್ರೀಮ್ ಕೋರ್ಟಿನಲ್ಲಿ, ಇದುವರೆಗೆ ನ್ಯಾಯಾಧೀಶರಾಗಿ ಕೆಲಸ ಮಾಡಿರುವ ಸ್ತ್ರೀ ನ್ಯಾಯಾಧೀಶರ ಸಂಖ್ಯೆ ಕೇವಲ 6 ಮಾತ್ರ!!

**ನಾಲ್ಕು ನೂರು ವರ್ಷಗಳ ಹಿಂದೆ ವಿಶ್ವದ ಸ್ತ್ರೀ ವಿದ್ಯಾರ್ಥಿಗಳ ಪರಿಸ್ಥಿತಿ:**

ಅತ್ಯಂತ ಪ್ರಾಚೀನ ಕಾಲದ, ಇಟಲಿ, ಫ್ರಾನ್ಸ್, ಜರ್ಮನಿ ಮೊದಲಾದ ಯೂರೋಪಿನ ಪ್ರಮುಖ ರಾಷ್ಟ್ರಗಳ ವಿಶ್ವವಿದ್ಯಾನಿಲಯಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ, ಪ್ರಾರಂಭದ ಸುಮಾರು 700 ವರ್ಷಗಳಷ್ಟು ಕಾಲ, ಈ ವಿದ್ಯಾಸಂಸ್ಥೆಗಳು ಸ್ತ್ರೀಯರಿಗೆ ಪ್ರವೇಶದ ಅವಕಾಶ ಕೊಡುತ್ತಿರಲಿಲ್ಲ ಎಂಬ ವಿಷಯ ತಿಳಿಯುತ್ತದೆ. ಕ್ಯಾಥೊಲಿಕ್ ಚರ್ಚ್‌ಗಳಲ್ಲಿ ಕೆಲಸ ಮಾಡುತ್ತಿದ್ದ ಪಾದ್ರಿಗಳೆಲ್ಲ ಪುರುಷರೇ ಆಗಿದ್ದು, ಸ್ತ್ರೀಯರಿಗೆ ಯಾವ ಕೆಲಸವನ್ನೂ ಸಹ ಕೊಡುತ್ತಿರಲಿಲ್ಲ. ಹಾಗಿದ್ದ ಮೇಲೆ ಅವರಿಗೆ ಹೆಚ್ಚಿನ ವಿದ್ಯಾಭ್ಯಾಸ ಏಕೆ ಬೇಕು? ಮನೆ ಜವಾಬ್ದಾರಿ, ಮಕ್ಕಳನ್ನು ಸಂರಕ್ಷಿಸುವುದು ಸ್ತ್ರೀಯರ ಕೆಲಸ ಎಂದ ಮೇಲೆ, ಅವರಿಗೆ ಹೊರಗಿನ ಕೆಲಸ ಅನಗತ್ಯ ಎನಿಸಿರಬೇಕು. ವಿಶ್ವವಿದ್ಯಾಲಯಗಳು ಫಿಲಾಸಫಿ, ಥಿಯಾಲಜಿ ಮುಂತಾದ ವಿಷಯಗಳನ್ನು ಬೋಧಿಸಿ, ಸ್ತ್ರೀಯರ ಜೀವನೋಪಾಯಕ್ಕೆ ಉಪಯುಕ್ತವಾದ ವಿಷಯಗಳನ್ನು ಅಳವಡಿಸಿಕೊಂಡಿರಲಿಲ್ಲ. ಜಗತ್ಪ್ರಸಿದ್ಧವಾಗಿರುವ ಆಕ್ಸ್‌ಫರ್ಡ್ ಮತ್ತು ಕೇಂಬ್ರಿಡ್ಜ್ ವಿದ್ಯಾ ಸಂಸ್ಥೆಗಳು ಕೂಡ, 19ನೆಯ ಶತಮಾನದವರೆಗೆ ಸ್ತ್ರೀ ವಿದ್ಯಾರ್ಥಿಗಳಿಗೆ ಪ್ರವೇಶಕ್ಕೆ ಅನುವು ಕೊಡುತ್ತಿರಲಿಲ್ಲ ಎಂಬ ಸಂಗತಿ ನಿಜಕ್ಕೂ ವಿಷಾದಕರ ಎನ್ನಬಹುದು. ಕಾರಣಗಳು ಏನೇ ಇದ್ದರು, ಇಂತಹ ಸಂಸ್ಥೆಗಳು ಸ್ತ್ರೀ ವಿದ್ಯಾಭ್ಯಾಸದ ಕಡೆಗೆ ಕಣ್ಣು ಹಾಯಿಸಲಿಲ್ಲ ಎಂಬುದು ನಿಜ. ಇಂದು ಹೆಗ್ಗಳಿಕೆಯಿಂದ ಮೆರೆಯುತ್ತಿರುವ ಈ ಸಂಸ್ಥೆಗಳು ನಡೆದು ಬಂದ ದಾರಿ ಸೋಜಿಗ ಹಾಗೂ ವಿಷಾದಕರ.

ಇಪ್ಪತ್ತನೆಯ ಶತಮಾನದ ಮಧ್ಯದ ವೇಳೆಗೆ, ಅಂದರೆ ಸುಮಾರು 1940ರ ವೇಳೆಗೆ, ಅಮೆರಿಕದ 10 ವಿಶ್ವವಿದ್ಯಾಲಯಗಳಲ್ಲಿ, 7 ಸಂಸ್ಥೆಗಳು ಕೋ-ಎಜುಕೇಷನ್ ಆಗಿದ್ದವು. 1891ರಲ್ಲಿ ಸ್ಥಾಪನೆಗೊಂಡ ಸ್ಟ್ಯಾನ್‌ಫರ್ಡ್ ಯೂನಿವರ್ಸಿಟಿ, ಪ್ರಾರಂಭದಿಂದಲೆ ಕೋ-ಎಜುಕೇಷನ್ ವಿದ್ಯಾಶಾಲೆಯಾಗಿ ಕೆಲಸ ಮಾಡುತ್ತಿದೆ. 1880ರಲ್ಲಿ ಶೇಕಡ 46 ಇದ್ದ ಕೋ-ಎಜುಕೇಷನ್ ಸಂಸ್ಥೆಗಳು, 1900ರ ವೇಳೆಗೆ ಶೇಕಡ 64ರಷ್ಟು ಆಗಿದ್ದು, ಅಲ್ಲಿಂದ ಬೆಳೆಯುತ್ತಲೆ ಬರುತ್ತಿವೆ. ಕೋ-ಎಜುಕೇಷನ್ ಸೌಲಭ್ಯ ಸ್ತ್ರೀ ವಿದ್ಯಾರ್ಥಿಗಳಿಗೆ ದೊರಕಿದ ಮಾರ್ಗ ಸುಲಭವಾಗಿರಲಿಲ್ಲ. ಸಂಪ್ರದಾಯದ ಹೆಸರಿನಲ್ಲಿ, ಸ್ತ್ರೀಯರಿಗೆ ಹೆಚ್ಚಿನ ವಿದ್ಯಾಭ್ಯಾಸ ಏಕೆ ಬೇಕು ಎನ್ನುವ ಕ್ಷುಲ್ಲಕ ಕಾರಣಗಳನ್ನು ಒಡ್ಡಿ, ನೂರಾರು ವಿದ್ಯಾ ಸಂಸ್ಥೆಗಳು ಸ್ತ್ರೀಯರಿಗೆ ಪ್ರವೇಶ ಕೊಡುತ್ತಿರಲಿಲ್ಲ. ಇಂತಹ ದುಃಸ್ಥಿತಿಯಲ್ಲೂ, ತಲತಲಾಂತರದವರೆಗೆ, ಸಾವಧಾನದಿಂದ ಕಾದಿದ್ದು, ತಮ್ಮ ಗುರಿಯನ್ನು ಕಂಡ ಸಾವಿರಾರು ಸ್ತ್ರೀಯರನ್ನು ಇಲ್ಲಿ ಸ್ಮರಿಸಬಹುದಾಗಿದೆ. ಪ್ರಸ್ತುತ ಕಾಲದಲ್ಲಿ ಸ್ತ್ರೀಯರೇ ಹೆಚ್ಚಿನ ಸಂಖ್ಯೆಯಲ್ಲಿ ವಿಶ್ವವಿದ್ಯಾಲಯಗಳಲ್ಲಿ ವಿದ್ಯಾಭ್ಯಾಸ ಮಾಡುತ್ತಿರುವುದು ಸಂತಸದ ಸುದ್ದಿ.

ಇಂದು ಎಲ್ಲ ವಿದ್ಯಾರ್ಥಿಗಳು ಅಮೆರಿಕದ ಪ್ರತಿಷ್ಠಿತ ಐವಿ ಲೀಗ್ ವಿದ್ಯಾಲಯಗಳನ್ನು ಸೇರಲು ಹಾತೊರೆಯುತ್ತಾರೆ ಎನ್ನುವುದು ತಿಳಿದ ವಿಷಯ. ಈ ಐವಿ ಲೀಗುಗಳು ನಡೆದು ಬಂದ ದಾರಿ, ರೀತಿಗಳನ್ನು ಒಮ್ಮೆ ನೋಡೋಣ ಬನ್ನಿ. 1636ರಲ್ಲಿ ಪ್ರಾರಂಭಿಸಿದ ಹಾರ್ವರ್ಡ್ ವಿದ್ಯಾಲಯ ವಿದ್ಯಾರ್ಥಿನಿಯರಿಗೆ ಪ್ರವೇಶ ಕೊಟ್ಟಿದ್ದು 1920ರಲ್ಲಿ, ಅಂದರೆ 284 ವರ್ಷಗಳ ನಂತರ! 1754ರಲ್ಲಿ ಪ್ರಾರಂಭವಾದ ನ್ಯೂ ಯಾರ್ಕಿನ ಕೊಲಂಬಿಯ ವಿದ್ಯಾಲಯವು, ವಿದ್ಯಾರ್ಥಿನಿಯರಿಗೆ 1943ರಲ್ಲಿ ಪ್ರವೇಶ ಒದಗಿಸಿತು! ಈ ವಿದ್ಯಾಲಯವು ಸುಮಾರು 189 ವರ್ಷಗಳ ಕಾಲ, ಪುರುಷರಿಗಷ್ಟೆ ಮೀಸಲಾಗಿದ್ದ ವಿದ್ಯಾಲಯವಾಗಿತ್ತು ಎಂದು ಹೇಳಬೇಕಾಗಿಲ್ಲ. 16ನೆಯ ಶತಮಾನದಲ್ಲಿ ಪ್ರಾರಂಭವಾದ ಈ ಎಲ್ಲಾ ಐವಿ ಲೀಗ್ ಸಂಸ್ಥೆಗಳು 19ನೆಯ ಶತಮಾನದವರೆಗೆ, ಅಂದರೆ ಸರಿ ಸುಮಾರು 300 ವರ್ಷಗಳ ಕಾಲ, ಸ್ತ್ರೀಯರು ಹೋರಾಟ ನಡೆಸುತ್ತಿದ್ದರೂ, ಅವರಿಗೆ ತಮ್ಮ ವಿದ್ಯಾನಿಲಯಗಳಲ್ಲಿ ಪ್ರವೇಶ ಕೊಡಲಿಲ್ಲ ಎಂಬುದು ಎಲ್ಲರೂ ಗಮನಿಸಬೇಕಾದ ಸಂಗತಿ. ಇದೇ ಕಾಲಾವಧಿಯಲ್ಲಿ, ಹಾರ್ವರ್ಡ್ ವಿದ್ಯಾಲಯವು, ತನ್ನ ಸಹೋದರಿ ಸಂಸ್ಥೆಯಾಗಿ ಹಾರ್ವರ್ಡ್ ಅನ್ನೆಕ್ಸ್ ಅನ್ನು ಸ್ತ್ರೀ ವಿದ್ಯಾರ್ಥಿಗಳಿಗೆ ಮಾತ್ರ ಎಂದು ಪ್ರಾರಂಭಿಸಿತು. ಇಲ್ಲಿ ಸ್ತ್ರೀಯರಿಗೆ ಹಾರ್ವರ್ಡ್ ಡಿಗ್ರೀಯನ್ನು ಕೊಡಲಾಗುತ್ತಿರಲಿಲ್ಲ. ಬದಲಿಗೆ, ಕೇವಲ ಒಂದು ಸರ್ಟಿಫಿಕೇಟ್ ಮುಖಾಂತರ ಈ ವಿದ್ಯಾರ್ಥಿನಿಯರನ್ನು ಹೊರಗೆ ಹಾಕುತ್ತಿದ್ದರು. ಹಾರ್ವರ್ಡ್ ಸಂಸ್ಥೆಯ ಆಶ್ರಯದಲ್ಲಿ ಹುಟ್ಟಿದ ರಾಡ್‌ಕ್ಲಿಫ್ ಎಂಬ ಕಾಲೇಜ್, ಸ್ತ್ರೀ ವಿದ್ಯಾರ್ಥಿನಿಯರಿಗೆ ಉತ್ತಮ ರೀತಿಯಲ್ಲಿ ಸಹಾಯ ಮಾಡುತ್ತಿದೆ ಮತ್ತು ಸುಲಭ ರೀತಿಯಲ್ಲಿ ಅವರಿಗೆ ವಿದ್ಯಾಭ್ಯಾಸ ಮಾಡಲು ಸಹಾಯಮಾಡುತ್ತಿದೆ ಎಂದು ಹೇಳುತ್ತಾ ತಮ್ಮ ಭುಜವನ್ನು ತಾವೇ ತಟ್ಟಿಕೊಂಡರು. ಐವಿ ಲೀಗ್ ವಿದ್ಯಾಲಯಗಳಿಗೆ ಸ್ತ್ರೀಯರನ್ನು ಸೇರಿಸಿಕೊಳ್ಳಲು ನಿರಾಕರಿಸಿ ಕೊಟ್ಟ ನೂರಾರು ಕಾರಣಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ಹೇಳಲಾಗಿದೆ.

1. ಮನೆಯಲ್ಲಿ ಮಕ್ಕಳನ್ನು ನೋಡಿಕೊಂಡು ಮನೆ ಕೆಲಸ ಮಾಡುವ ಹೆಂಗಸಿಗೆ ಹಾರ್ವರ್ಡ್‌ನಲ್ಲಿ ವ್ಯಾಸಂಗ ಮಾಡಬೇಕಾದ ಅವಶ್ಯಕತೆ ಏನಿದೆ?
2. ಒಬ್ಬ ಸ್ತ್ರೀ ಅವಕಾಶ ಪಡೆದುಕೊಳ್ಳುವ ಕಾರಣದಿಂದ ಒಬ್ಬ ಬುದ್ಧಿವಂತ ಹುಡುಗ ತನ್ನ ಜಾಗವನ್ನು ಕಳೆದುಕೊಳ್ಳಬೇಕಾಗಿದೆ.
3. ಸ್ತ್ರೀಯರು ಯಾವುದಾದರೂ ವೇಶ್ಯಾಗೃಹದಲ್ಲಿದ್ದರೆ ಉತ್ತಮ ರೀತಿಯಲ್ಲಿ ಕೆಲಸಮಾಡಬಹುದು!
4. ನಮ್ಮ ವಿದ್ಯಾಲಯದ ಹೆಸರನ್ನು ಕೆಡಿಸಲು ಸ್ತ್ರೀಯರು ಮಾಡುತ್ತಿರುವ ಸಂಚು ಇತ್ಯಾದಿ.

ಕಾರ್ನೆಲ್ ವಿದ್ಯಾಲಯದ ಕೆಲವು ಹಿರಿಯ ವಿದ್ಯಾರ್ಥಿಗಳು, ಸ್ತ್ರೀಯರಿಗೆ ಕಾಲೇಜಿನಲ್ಲಿ ಅವಕಾಶ ಕೊಟ್ಟರೆ, ತಾವು ನೀಡುತ್ತಿರುವ ಧನಸಹಾಯವನ್ನು ಸಂಪೂರ್ಣವಾಗಿ ನಿಲ್ಲಿಸಿಬಿಡುವ ಬೆದರಿಕೆಯನ್ನು ಸಹ ಒಡ್ಡಿದ್ದರು. ಇನ್ನು, ಪ್ರಿನ್ಸ್‌ಟನ್ ವಿದ್ಯಾನಿಲಯದ ಒಬ್ಬ ಮಹನೀಯರು ಹೀಗೆ ಹೇಳಿದ್ದಾರೆ 'ನಮ್ಮ ಹಳ್ಳಿಯ ಹೆಣ್ಣುಮಕ್ಕಳು ಯಾವುದಾದರೂ ವೇಶ್ಯಾಗೃಹ ಸೇರಿಕೊಂಡರೆ ಅಲ್ಲಿ ದಕ್ಷವಾಗಿ ಕೆಲಸಮಾಡಬಹುದು' ಎಂದು. ಕಾರ್ನೆಲ್ ವಿದ್ಯಾಲಯದ ಒಬ್ಬ ಮಹನೀಯರ ಮಾತು 'ಪ್ರತಿದಿನ ಈ ಬಿನ್ನಾಣದ ಯುವತಿಯರ ಜೊತೆ ನಾವು ಬೆರೆತರೆ ನಮ್ಮ ವಿದ್ಯೆ ಸಂಪೂರ್ಣ ನಾಶ' ಎಂದು. 19ನೆಯ ಶತಮಾನದಲ್ಲಿ ಇಂತಹ ಗೊಡ್ಡು ಬೆದರಿಕೆಗಳಿಗೆ ಸೊಪ್ಪು ಹಾಕದ ಐವಿ ಲೀಗ್ ಸಂಸ್ಥೆಗಳು ಇಂದು ಸಾವಿರಾರು ಸ್ತ್ರೀ ವಿದ್ಯಾರ್ಥಿನಿಯರ ಸಹಾಯದಿಂದ ನಡೆಯುತ್ತಿರುವುದು ಸಂತೋಷದ ಸುದ್ದಿ. ಇನ್ನೂ ಕೆಲವು ವಿಷಯಗಳು: ಕೆಲವು ಐವಿ ಲೀಗ್ ವಿದ್ಯಾಲಯಗಳು ಸ್ತ್ರೀಯರಿಗಾಗಿ ಪ್ರತ್ಯೇಕ ವಸತಿ ಗೃಹಗಳನ್ನು ಮಾಡಿಕೊಟ್ಟಿದ್ದರೂ, ನೀರಿನ ಹಾಗೂ ಶೌಚಾಲಯಗಳ ಬಳಕೆಗೆ, ಸುಮಾರು ದೂರ ನಡೆದುಹೋಗಬೇಕಾಗಿತ್ತು. ಒಂದು ಐವಿ ಲೀಗ್ ವಿದ್ಯಾಲಯವು, ಸೋಮವಾರ ವಿದ್ಯಾರ್ಥಿನಿಯರು ಶಾಲೆಗೆ ಬರಬೇಕಿಲ್ಲವೆಂದೂ, ಅಂದು ಅವರು ಶಾಲೆಯ ಪುರುಷ ವಿದ್ಯಾರ್ಥಿಗಳ ಬಟ್ಟೆಗಳನ್ನು ಶುದ್ಧ ಮಾಡಿಕೊಡಬೇಕೆಂಬ ಪದ್ಧತಿಯನ್ನು ಜಾರಿಗೆ ತಂದಿತ್ತು. ಇವಿಷ್ಟೂ ವಿದ್ಯಾರ್ಥಿನಿಯರು ಹೆಚ್ಚಿನ ವಿದ್ಯಾಭ್ಯಾಸ ಮಾಡಲು ಹೋದಾಗ ಅನುಭವಿಸಬೇಕಾಗಿದ್ದ ಸಮಸ್ಯೆಗಳು. ಹಾರ್ವರ್ಡ್ ವಿದ್ಯಾಲಯವು, ಪ್ರಖ್ಯಾತ ಕುಟುಂಬಗಳ ಬಿಳಿಯ ಮಕ್ಕಳಿಗೆ ಮತ್ತು ಶ್ರೀಮಂತ ಕುಟುಂಬದವರಿಗೆ ಮಾತ್ರ ಹೆಚ್ಚಿನ ವಿದ್ಯಾಭ್ಯಾಸದ ಸವಲತ್ತುಗಳನ್ನು ಮಾಡಿಕೊಡುತ್ತಿತ್ತು. ಆದರೆ, 19ನೆಯ ಶತಮಾನದ ಆದಿಯಲ್ಲಿ, ಸ್ತ್ರೀ ವಿದ್ಯಾರ್ಥಿಗಳು ಈ ಪರಿಸ್ಥಿತಿಯನ್ನು ಮೂಲೆಗೆ ಸೇರಿಸಿ, ತಮ್ಮದೇ ಆದ ಹೋರಾಟದ ಮೂಲಕ ಗೆದ್ದಿದ್ದಾರೆ. ಈ ಗೆಲುವಿಗೆ ಕಾರಣ, ಅವರು ಪಟ್ಟ ವರ್ಷಗಳ ಶ್ರಮ ಮತ್ತು ಧೈರ್ಯದಿಂದ ಬಂದ ಎಲ್ಲ ಸವಾಲುಗಳನ್ನು ಎದುರಿಸಿದ್ದು. ಇಂದು, ಸ್ತ್ರೀ ವಿದ್ಯಾರ್ಥಿಗಳ ಸಂಖ್ಯೆ ಕ್ರಮೇಣವಾಗಿ ಬೆಳೆಯುತ್ತ ಹೋಗುತ್ತಿರುವುದೇ ಅಲ್ಲದೆ, ಪುರುಷ ವಿದ್ಯಾರ್ಥಿಗಳ ಸಂಖ್ಯೆಯನ್ನ ಸಹ ಮೀರಿದೆ. 1835ರಿಂದ 1875ರ ಅವಧಿಯಲ್ಲಿ, ಮಹಿಳಾ ವಿದ್ಯಾರ್ಥಿಗಳಿಗಾಗಿ ಸ್ಥಾಪನೆಗೊಂಡ ಕಾಲೇಜುಗಳ ಸಂಖ್ಯೆ ಸುಮಾರು 50. ಇದರಿಂದಾಗಿ ಸ್ತ್ರೀ ವಿದ್ಯಾರ್ಥಿಗಳ

ಸಂಖ್ಯೆ ಉತ್ತಮಗೊಂಡರೂ ಹಲವು ವಿದ್ಯಾ ಸಂಸ್ಥೆಗಳು, ಸ್ತ್ರೀ ವಿದ್ಯಾಭ್ಯಾಸ ಒಂದು ಭಯಾನಕ ಪ್ರಯೋಗ ಎಂದು ಭಾವಿಸಿದ್ದವು.

ಪ್ರಪಂಚದಲ್ಲಿ ವಿಶ್ವವಿದ್ಯಾಲಯಗಳನ್ನು ಪ್ರವೇಶಮಾಡಿದ ಮೊದಲ ಸ್ತ್ರೀಯರು ಯಾರು ಯಾರು?

1. ಇಟಲಿಯಲ್ಲಿ Bettisia Gozzadini.
2. ಸ್ಪೇನಿನಲ್ಲಿ Beatriz Galindo.
3. ನೆದರ್‌ಲ್ಯಾಂಡ್ಸಿನಲ್ಲಿ Anna Maria van Schurman.
4. ಜರ್ಮನಿಯಲ್ಲಿ Dorothea Schlozer.
5. ಸ್ವೀಡನ್ನಿನಲ್ಲಿ Aurora Liljenroth.
6. ಉತ್ತರ ಅಮೆರಿಕದಲ್ಲಿ Elizabeth Blackwell.
7. ಯುನೈಟೆಡ್ ಕಿಂಗ್‌ಡಮ್ಮಿನಲ್ಲಿ The Edinburgh Seven.
8. ಕೆನಡಾದಲ್ಲಿ Grace Annie Lockhart.
9. ಐರ್ಲ್ಯಾಂಡಿನಲ್ಲಿ Isabel Marion W. Johnston.

**ಲಿಂಗಸಮಾನತೆ ಎಂದರೆ ಏನು?**

ಲಿಂಗಸಮಾನತೆ ಎನ್ನುವುದು ಒಂದು ಸುಧಾರಿಸಿದ, ಒಬ್ಬರನ್ನೊಬ್ಬರು ಅರ್ಥೈಸಿಕೊಂಡು ಹೊಂದಿಕೊಂಡು ಹೋಗುವ ವಾತಾವರಣ. ಲಿಂಗಸಮಾನತೆ ಬರೀ ಸ್ತ್ರೀಯರಿಗೆ ಮಾತ್ರ ಅನ್ವಯವಾಗುವಂಥದ್ದಲ್ಲ, ಅದು ಎಲ್ಲ ಜನರಿಗೆ ಅನ್ವಯಿಸುತ್ತದೆ. ಈ ವಾತಾವರಣದಲ್ಲಿ, ಪುರುಷ, ಸ್ತ್ರೀ, transgender ಅಥವಾ gender diverse ಜನರಿಗೆ ಸರಿಸಮನಾದ, ಯಾವ ಭೇದಗಳೂ ಇಲ್ಲದಿರುವ ಹಕ್ಕುಬಾಧ್ಯತೆಗಳಿಗೆ ಸಮಾನವಾಗಿ ಅವಕಾಶಗಳಿರಬೇಕು. ಇದರ ಪರಿಣಾಮ ಮಕ್ಕಳ ಮತ್ತು ಕುಟುಂಬಗಳ ಮೇಲೆ, ಎಲ್ಲ ಜಾತಿಯ, ಎಲ್ಲ ವಯಸ್ಸಿನ ಜನರ ಮೇಲೂ ಉಂಟಾಗುತ್ತದೆ.

**ಲಿಂಗಸಮಾನತೆ ನಮಗೆ ಏಕೆ ಬೇಕು?**

ಲಿಂಗಸಮಾನತೆ ಆದಷ್ಟು ಬೇಗ ಬಳಕೆಗೆ ಬರಬೇಕು. ಕಾರಣಗಳು ಹೀಗಿವೆ.

- ಸ್ತ್ರೀಯರ ಮತ್ತು ಹೆಣ್ಣು ಮಕ್ಕಳ ಮೇಲೆ ನಡೆಯುವ ಅತ್ಯಾಚಾರವನ್ನು ತಪ್ಪಿಸಬಹುದು.
- ಸಮುದಾಯದ ಆರ್ಥಿಕ ಭದ್ರತೆಗೆ ಇದು ಅತ್ಯವಶ್ಯಕ.
- ಸ್ತ್ರೀ ಪುರುಷರು ಸಮಾನ ಎಂದು ಗೌರವಿಸಿ ನಡೆದುಕೊಳ್ಳುವ ಸಮಾಜಗಳು ಎಲ್ಲರಿಗೂ ಕ್ಷೇಮಕರ.
- ಲಿಂಗಸಮಾನತೆ ಎಲ್ಲರಿಗೂ ಹುಟ್ಟಿನಿಂದ ಬಂದಿರುವ ಹಕ್ಕು. ಇದನ್ನು ಗೌರವಿಸಿ, ಆಚರಣೆಗೆ ತಂದಾಗ ಎಲ್ಲರಿಗೂ ಒಳ್ಳೆಯದಾಗುತ್ತದೆ.

**ಲಿಂಗಸಮಾನತೆಗೆ ಕೆಲವು ಉದಾಹರಣೆಗಳು:**

1. ಪ್ರಪಂಚದಾದ್ಯಂತ ಸೂಕ್ಷ್ಮವಾಗಿ ಗಮನಿಸಿದರೆ, ಮನೆಯ ಹೆಣ್ಣು, ಗಂಡಸಿಗಿಂತ ಮೂರು ಪಟ್ಟು ಹೆಚ್ಚಾಗಿ ಕೆಲಸಮಾಡುತ್ತಾಳೆ ಎಂದು ಕಂಡುಬರುತ್ತದೆ. ಮಕ್ಕಳ ಪಾಲನೆ, ಪೋಷಣೆ, ಮನೆಯವರಿಗೆಲ್ಲ ಊಟದ ವ್ಯವಸ್ಥೆ, ಮನೆಯನ್ನು ಸ್ವಚ್ಛಗೊಳಿಸುವುದು, ಇನ್ನಿತರ ಮನೆಯ ಕೆಲಸಗಳು ಹೆಣ್ಣಿನ ಮೇಲೆ ಬೀಳುತ್ತವೆ. ಮತ್ತು, ಮನೆಯ ಹೆಣ್ಣು ಹೊರಗಡೆ ಇಡೀ ದಿನ ಅಥವಾ ದಿನಕ್ಕೆ ಕೆಲವು ಘಂಟೆಗಳ ಕಾಲ ಕೆಲಸ ಮಾಡುವವಳು. ಇಂತಹ ಸಂದರ್ಭದಲ್ಲಿ, ಲಿಂಗಸಮಾನತೆ ಇದೆಯೆಂದರೆ, ಮನೆ ಕೆಲಸಗಳನ್ನು ಮನೆಯ ಎಲ್ಲರೂ ಹೆಣ್ಣು ಗಂಡುಗಳೆಂಬ ವ್ಯತ್ಯಾಸವಿಲ್ಲದೆ, ಹಂಚಿಕೊಂಡು ಮಾಡಬೇಕಾಗುತ್ತದೆ.

2. ಸಮನಾದ ಕೆಲಸಕ್ಕೆ ಸಮನಾದ ವರಮಾನ: ಒಂದೇ ರೀತಿಯ, ಒಂದೇ ಶ್ರಮದ ಕೆಲಸವನ್ನು ಸ್ತ್ರೀ ಪುರುಷರು ಒಂದೇ ರೀತಿಯಲ್ಲಿ ಮಾಡಿದರೂ, ಪುರುಷರಿಗೂ ಸ್ತ್ರೀಯರಿಗೂ ಬರುವ ವೇತನದಲ್ಲಿ ಬಹಳ ಅಂತರವಿರುವುದು ಸಾಮಾನ್ಯ ವಿಷಯ. ಲಿಂಗಸಮಾನತೆ ಅನ್ವಯಿಸುವುದಾದರೆ, ಹೆಣ್ಣು ಗಂಡು ಎಂಬ ವ್ಯತ್ಯಾಸಮಾಡದೆ, ಇಬ್ಬರಿಗೂ ಒಂದೇ ವೇತನ ದೊರಕಬೇಕು.

3. ಸ್ತ್ರೀಯರಿಗೆ ಅನ್ವಯಿಸುವಂತಹ ಅಶ್ಲೀಲ ಭಾಷೆ, ಚಿತ್ರ, ಮಾತುಗಳಿಗೆ ಖಂಡಿತ ಸ್ಥಳವಿಲ್ಲ. ಚರ್ಚಿನ ವಾತಾವರಣದಲ್ಲಾಗಲಿ, ಶಾಲಾ ಕಾಲೇಜುಗಳಲ್ಲಾಗಲಿ, ಒಟ್ಟಿಗೆ ಕೆಲಸಮಾಡುವ ಸ್ಥಳದಲ್ಲಾಗಲಿ, ಸ್ತ್ರೀ ಪುರುಷರು ನಿರ್ಭಯದಿಂದ ಕೆಲಸ ಮಾಡುವ ವಾತಾವರಣ ಇರಬೇಕು. ಚುಚ್ಚು ಮಾತು, ಪ್ರಚೋದನೆ, ಬುರುಡೆ ಮಾತುಗಳಿಗೆ ನೂರಕ್ಕೆ ನೂರರಷ್ಟು ಬಹಿಷ್ಕಾರವಿದ್ದು, ಅಂತಹ ವಿಚಾರಗಳಲ್ಲಿ ಪಾತ್ರವಹಿಸುವವರು ಯಾರೇ ಆಗಲಿ, ಶಿಕ್ಷೆಗೆ ಒಳಗಾಗಬೇಕು. ಇತ್ಯಾದಿ.

**ಲಿಂಗಸಮಾನತೆಗಾಗಿ ಹೋರಾಡಿದ ಮಹಿಳೆಯರು**

ಸ್ತ್ರೀ ಸ್ವಾತಂತ್ರ್ಯಕ್ಕಾಗಿ, ಸ್ತ್ರೀ ಸಮಾನತೆಗಾಗಿ. ಸ್ತ್ರೀಯರು ಕೆಲಸ ಮಾಡಬಲ್ಲ ಅನುಮತಿಗಾಗಿ, ಸ್ತ್ರೀಯರ ಹೆಚ್ಚಿನ ವಿದ್ಯಾಭ್ಯಾಸದ ಅವಕಾಶಕ್ಕಾಗಿ ವಿಶ್ವದ ನಾನಾ ಭಾಗಗಳಲ್ಲಿ, ಶತಮಾನಗಳಿಂದ ಹೋರಾಟ ನಡೆಸಿದವರ ಪಟ್ಟಿಯಲ್ಲಿ ನೂರಾರು ಸ್ತ್ರೀಯರನ್ನು ಗುರುತಿಸಬಹುದಾಗಿದೆ. ಆ ಪಟ್ಟಿಯಲ್ಲಿ ಕಾಣಸಿಗುವ ಕೆಲವು ಸ್ತ್ರೀಯರ ಪರಿಚಯ ಹೀಗಿದೆ.

**Sojourner Truth (1797–1883):** ಸ್ತ್ರೀಯರ ಸಮಾನತೆಗಾಗಿ ಮತ್ತು ಬುಡಕಟ್ಟಿನ ಆಧಾರದ ಮೇಲೆ ತಾರತಮ್ಯ ಮಾಡುತ್ತಿದ್ದವರ ವಿರುದ್ಧ ತೀವ್ರವಾಗಿ ಹೋರಾಟ ನಡೆಸಿದಳು. ಆಫ್ರಿಕ ದೇಶದವಳಾಗಿ, ಗರ್ಭಪಾತದ ಪರವಾಗಿ ಶ್ರಮಿಸಿದಳು.

**Susan B. Anthony (1820–1906):** ಪ್ರಭಾವಶಾಲಿಯಾಗಿ ಸಾಮಾಜಿಕ ಸೇವೆ ಮಾಡಿದ ಸ್ತ್ರೀ. 1872ರಲ್ಲಿ ಸ್ತ್ರೀಯರಿಗೆ ಮತದಾನದ ಹಕ್ಕಿಲ್ಲದ ಕಾಲದಲ್ಲಿ, ಮತ ಚಲಾಯಿಸಲು

ಹೋದಾಗ ಪೊಲೀಸರ ಬಂಧನಕ್ಕೆ ಒಳಗಾದವರು. ಹಲವಾರು ವರ್ಷಗಳ ಕಾಲ ನ್ಯಾಯಾಲಯದಲ್ಲಿ ಹೋರಾಡಿದ ಮೇಲೆ, ಸರ್ಕಾರವು ನ್ಯಾಯಾಂಗದ 19ನೆಯ ತಿದ್ದುಪಡಿ ಮೂಲಕ, ಸ್ತ್ರೀಯರಿಗೆ ಮತ ನೀಡುವ ಹಕ್ಕನ್ನು ದಯಪಾಲಿಸಿತು.

**Ida B. Wells (1862–1931):** ಒಬ್ಬ ಆಫ್ರಿಕನ್-ಅಮೆರಿಕನ್ ಪತ್ರಿಕೋದ್ಯಮಿ. ಚಿಕ್ಕ ವಯಸ್ಸಿನಿಂದ ನಾಗರಿಕರ ಹಕ್ಕು ಬಾಧ್ಯತೆಗಳಿಗೆ ಹೋರಾಟ ಮಾಡಿದವರು. National Association for the Advancement of Colored People (NAACP) ಸಂಸ್ಥೆಯ ಸ್ಥಾಪಕರಲ್ಲಿ ಒಬ್ಬರು.

**Frida Kahlo (1907–1954):** ಹುಟ್ಟಿದ್ದು ಮೆಕ್ಸಿಕೊದಲ್ಲಿ. ಸ್ತ್ರೀಯರ ಬಗ್ಗೆ ಬರವಣಿಗೆಗಳ ಮೂಲಕ ಆಗುತ್ತಿದ್ದ ಅಪಹಾಸ್ಯಗಳನ್ನು ವಿರೋಧಿಸಲು ತನ್ನ ಚಿತ್ರಕಲೆಯ ಮೂಲಕ ಹೋರಾಡಿದ ಸ್ತ್ರೀ.

**Simone de Beauvoir (1908–1986):** 1908ರಲ್ಲಿ ಪ್ಯಾರಿಸ್ಸಿನಲ್ಲಿ ಜನಿಸಿದ ಸಿಮೊನ್, ತನ್ನ ವಾಗ್ಝರಿ ಮತ್ತು ಬರವಣಿಗೆಗಳ ಮೂಲಕ ಸ್ತ್ರೀ ಸಮಾನತೆಗೆ ದುಡಿದವಳು.

**Yuri Kochiyama (1921–2014):** ತನ್ನ ಇಡೀ ಜೀವನ ರೇಸಿಸಮ್ ವಿರುದ್ಧ ಹೋರಾಟ ನಡೆಸಿದವಳು. ಹುಟ್ಟು ಸ್ಥಳ ಸ್ಯಾನ್ ಪೆಡ್ರೊ, ಕ್ಯಾಲಿಫೋರ್ನಿಯ.ಇವರ ಹೆಸರನ್ನು 2005ರಲ್ಲಿ ನೊಬೆಲ್ ಪಾರಿತೋಷಕಕ್ಕೆ ಸೂಚಿಸಲಾಗಿತ್ತು.

**Dolores Huerta (b. 1930):** Mexican American ಆದ ಇವರು ನಾಗರಿಕರ ಅಭಿವೃದ್ಧಿಗಾಗಿ ಅದರಲ್ಲಿಯೂ ರೈತರಿಗಾಗಿ ಕಾರ್ಮಿಕರ ಸಂಘಗಳನ್ನು ಕಟ್ಟುವುದು ಮತ್ತು ಸಮಾಜ ಸೇವೆಯಲ್ಲಿ ಜೀವನ ಕಳೆದವರು. ಕಾರ್ಮಿಕರ ಹಕ್ಕಿಗಾಗಿ, ವಲಸೆ ಬರುವವರ ಕ್ಷೇಮಕ್ಕಾಗಿ ಮತ್ತು ಸ್ತ್ರೀಯರ ಸಮಾನ ಅವಕಾಶಗಳಿಗಾಗಿ ಹೋರಾಡಿದವರು. ಮಾನವ ಹಕ್ಕುಗಳ (Human rights) ಹೋರಾಟಕ್ಕಾಗಿ Eleanor Roosevelt ಗೌರವ ಪ್ರಶಸ್ತಿ ವಿಜೇತರು.

**Gloria Steinem (b. 1934):** ಪತ್ರಿಕೋದ್ಯಮಿ ಮತ್ತು ಸ್ತ್ರೀ ಸ್ವಾತಂತ್ರ್ಯಕ್ಕೆ ಹೋರಾಡಿದ ಮಹಿಳೆ.

**Malala Yousafzai (b. 1997):** ಸ್ತ್ರೀ ವಿದ್ಯಾಭ್ಯಾಸಕ್ಕಾಗಿ ಹೋರಾಟ ನಡೆಸುತ್ತಿರುವ ಯುವತಿ. ನೊಬೆಲ್ ಪ್ರಶಸ್ತಿ ಪಡೆದಿರುವ ಅತ್ಯಂತ ಕಿರಿಯ ವಯಸ್ಸಿನವಳು. ಮಲಾಲ, ಪಾಕಿಸ್ತಾನದಲ್ಲಿ ತಾಲಿಬಾನ್ ಆಡಳಿತದ ಬಗ್ಗೆ ದೀರ್ಘವಾಗಿ ಬರೆದಿದ್ದಾಳೆ.

**Chimamanda Ngozi Adichie (b. 1977):** ನೈಜೀರಿಯಾದಲ್ಲಿ ಹುಟ್ಟಿ ಅಮೆರಿಕೆಗೆ ವಲಸೆ ಬಂದ Adichie, Drexel ವಿಶ್ವವಿದ್ಯಾಲಯದಲ್ಲಿ ಪದವಿ ಪಡೆದ ನಂತರ, ಲಿಂಗ ಸಮಾನತೆಗಾಗಿ ಹೋರಾಟ ನಡೆಸುತ್ತಿರುವವಳು.

**ಅಮೆರಿಕದಲ್ಲಿ ಮಹಿಳಾ ಸಮಾನತೆಗಾಗಿ ಹೋರಾಟ:**

ಅಮೆರಿಕದ ಆಡಳಿತ ಕ್ರಮದ 19ನೆಯ ತಿದ್ದುಪಡಿ ಜಾರಿಗೆ ಬಂದು ನೂರು ವರ್ಷಗಳು ಕಳೆದಿವೆ. ಸ್ತ್ರೀಯರಿಗೆ ಮತದಾನದ ಹಕ್ಕನ್ನು ನೀಡಿದ ಈ ತಿದ್ದುಪಡಿ ಬಂದು ನೂರು ವರ್ಷಗಳ ನಂತರವೂ, ಲಿಂಗ ಸಮಾನತೆಗೆ ಹೋರಾಟ ನಡೆಯುತ್ತಲೇ ಇದೆ. ಇದಕ್ಕೆ ಸ್ತ್ರೀಯರು ನೀಡುತ್ತಿರುವ ಕಾರಣಗಳು ಹೀಗಿವೆ.

- ಕೆಲಸ ಕಛೇರಿಗಳಲ್ಲಿ ಇನ್ನೂ ಲೈಂಗಿಕ ಕಿರುಕುಳ (sexual harassment) ನಡೆಯುತ್ತಲೇ ಇದೆ.
- ಸರಿಸಮನಾದ ಕೆಲಸಕ್ಕೆ ಸರಿಸಮನಾದ ವೇತನ ಸಿಕ್ಕುತ್ತಿಲ್ಲ.
- ಸ್ತ್ರೀಯರಿಗೆ ವ್ಯಾಪಾರ ವಹಿವಾಟು ನಡೆಯುವ ಸಂಸ್ಥೆಗಳಲ್ಲಿ, ಅಧಿಕಾರ ವೃಂದದಲ್ಲಿ ಸಾಕಷ್ಟು ಜವಾಬ್ದಾರಿಯುತ ಕೆಲಸ ಸಿಗುತ್ತಿಲ್ಲ.
- ರಾಜಕೀಯದಲ್ಲಿ ಸ್ತ್ರೀಯರಿಗೆ ಸಮಾನ ಸ್ಥಾನ ಸಿಗುತ್ತಿಲ್ಲ.
- ಇನ್ನಿತರ ಸಮಸ್ಯೆಗಳನ್ನು ಸ್ತ್ರೀಯರು ಇಂದಿಗೂ ಎದುರಿಸಬೇಕಾಗಿದೆ.
- ಸುಪ್ರೀಮ್ ಕೋರ್ಟ್ ಎಂಬುದು ಅಮೆರಿಕದ ಅತ್ಯುಚ್ಚ ನ್ಯಾಯಾಲಯ. ಇದುವರೆಗಿನ 200 ನ್ಯಾಯ ಮೂರ್ತಿಗಳಲ್ಲಿ, ಕೇವಲ 6 ಮಹಿಳೆಯರು ಮಾತ್ರ ನ್ಯಾಯಾಧೀಶರಾಗಿ ಕೆಲಸಮಾಡಿದ್ದಾರೆ. ಅವರುಗಳು ಯಾರು ಎಂದು ನೋಡೋಣ.
- Sandra Day o'connor 1981 – ಸೂಚಿಸಿದವರು ರಾಷ್ಟ್ರಾಧ್ಯಕ್ಷ ರೀಗನ್.
- Ruth B Ginsburg 1993 to 2020. – ಸೂಚಿಸಿದವರು ರಾಷ್ಟ್ರಾಧ್ಯಕ್ಷ ಬಿಲ್ ಕ್ಲಿಂಟನ್.
- Elena Kagan 1995 – ಸೂಚಿಸಿದವರು ರಾಷ್ಟ್ರಾಧ್ಯಕ್ಷ ಬಿಲ್ ಕ್ಲಿಂಟನ್.
- Sonia Sotomayor 2000 – ಸೂಚಿಸಿದವರು ರಾಷ್ಟ್ರಾಧ್ಯಕ್ಷ ಬರಾಕ್ ಒಬಾಮ.
- Amy Coney Barrett 2020 – ಸೂಚಿಸಿದವರು ರಾಷ್ಟ್ರಾಧ್ಯಕ್ಷ ಡೊನಾಲ್ಡ್ ಟ್ರಂಪ್.
- Ketanji Jackson 2022 – ಸೂಚಿಸಿದವರು ರಾಷ್ಟ್ರಾಧ್ಯಕ್ಷ ಜೋ ಬೈಡನ್.

**Ruth Bader Ginsburg**

ಗಿನ್ಸ್‌ಬರ್ಗ್ ಅವರು ಸಾವಿರಾರು ಸ್ತ್ರೀಯರನ್ನು ಲಿಂಗಭೇದವನ್ನು ಮರೆತು, ಸ್ತ್ರೀ ಸ್ವತಂತ್ರ ಮತ್ತು ಸಮಾನತೆಗಾಗಿ ಹೋರಾಡಲು ಹುರಿದುಂಬಿಸಿದ್ದಾರೆ. ತನ್ನದೇ ಸ್ವತಂತ್ರ ಜೀವನದಲ್ಲಿ, ಪುರುಷ ಪ್ರಧಾನವಾಗಿರುವ ವಾತಾವರಣದಲ್ಲಿ ವಿದ್ಯಾಭ್ಯಾಸದಿಂದ ಹಿಡಿದು ಎಲ್ಲ ದೆಸೆಗಳಲ್ಲಿ ಕಷ್ಟ ಪಟ್ಟಿದ್ದರೂ ಸ್ತ್ರೀಯರ ಸಮಾನತೆಗಾಗಿ ಹಗಲಿರುಳೂ ಶ್ರಮಿಸಿದವರು. ಜೀವನದ ಉದ್ದಕ್ಕೂ, ಬಂದ ಎಲ್ಲ ಕಷ್ಟಗಳನ್ನೂ ಧೈರ್ಯವಾಗಿ ಎದುರಿಸಿ, ಅಮೆರಿಕದ ಅತ್ಯುಚ್ಚ ನ್ಯಾಯಾಲಯದಲ್ಲಿ ಎರಡನೆಯ ಮತ್ತು ಜ್ಯೂಯಿಶ್ ಪಂಗಡದ ಪ್ರಪ್ರಥಮ,

ಮುಖ್ಯ ನ್ಯಾಯಾಧೀಶರಾಗಿ ಕೆಲಸ ಮಾಡಿ, ಸ್ತ್ರೀಯರಿಗೆ ಉತ್ತಮ ಮಾರ್ಗದರ್ಶನ ಮಾಡಿದವರು.

ಮಾರ್ಚ್ 15, 1933ರಂದು, ನ್ಯೂ ಯಾರ್ಕಿನ ಬ್ರೂಕ್ಲಿನ್‌ನಲ್ಲಿ ಜ್ಯೂಯಿಶ್ ಕುಟುಂಬದಲ್ಲಿ ಜನನ. ತಂದೆ Nathan Bader, ಅಮೆರಿಕಾಗೆ ವಲಸೆ ಬಂದವರು. ತಾಯಿ Celia amster bader ನ್ಯೂ ಯಾರ್ಕಿನಲ್ಲಿ ಹುಟ್ಟಿಬೆಳೆದವರು. ರುಥ್ ತನ್ನ ಹೈಸ್ಕೂಲ್ ವಿದ್ಯಾಭ್ಯಾಸವನ್ನು ಬ್ರೂಕ್ಲಿನ್ ಜೇಮ್ಸ್ ಹೈಸ್ಕೂಲ್‌ನಲ್ಲಿ ಮುಗಿಸಿ, ಮುಂದೆ ಓದಲು ಕಾರ್ನೆಲ್ ವಿಶ್ವವಿದ್ಯಾನಿಲಯವನ್ನು ಸೇರಿ, ಸರ್ಕಾರಗಳು ಹೇಗೆ ಕೆಲಸ ಮಾಡುತ್ತವೆ ಎಂಬ ವಿಷಯವನ್ನು ಅಭ್ಯಸಿಸಿ, 1954ರಲ್ಲಿ, ಅತ್ಯುನ್ನತ ದರ್ಜೆಯಲ್ಲಿ ಡಿಗ್ರೀ ಪಡೆದರು. ಅದೇ ಕಾಲೇಜಿನಲ್ಲಿ ಓದುತ್ತಿದ್ದ ಮಾರ್ಟಿನ್ ಎಂಬುವರ ಪರಿಚಯವಾಗಿ, ಕೆಲವು ದಿನಗಳ ನಂತರ ಅವರನ್ನು ವಿವಾಹವಾದರು. ಮುಂದಿನ 56 ವರ್ಷಗಳ ಕಾಲ ಅವರ ವಿವಾಹ ಜೀವನ ಸಾಗಿ, 2010ರಲ್ಲಿ, ಮಾರ್ಟಿನ್ ಕಾಲವಶದಿಂದ ಮುಕ್ತಾಯವಾಯಿತು. ಅವರ ದಾಂಪತ್ಯ ಜೀವನ ಅಷ್ಟೇನೂ ಸುಲಭವಾಗಿರಲಿಲ್ಲ. 1944ರಲ್ಲಿ ಮಗಳು ಜೇನ್ ಆಗಮನ, ತದನಂತರದಲ್ಲಿ ಮಾರ್ಟಿನ್ ಅಮೆರಿಕದ ಮಿಲಿಟರಿ ಸೇರಬೇಕಾಯಿತು. ಮಿಲಿಟರಿಯಲ್ಲಿ 2 ವರ್ಷಗಳ ಸೇವೆ ನಂತರ, ಬಿಡುಗಡೆ ಹೊಂದಿ ಮರಳಿದ ಮೇಲೆ, ಹಾರ್ವರ್ಡ್ ವಿಶ್ವವಿದ್ಯಾಲಯಕ್ಕೆ ಸೇರಿದಾಗ, ಗಿನ್ಸ್‌ಬರ್ಗ್ ಸಹಾ ಹಾರ್ವರ್ಡ್ ವಿದ್ಯಾಲಯವನ್ನು ಸೇರಿದರು. ಹಾರ್ವರ್ಡ್ ಕಾಲೇಜಿಗೆ ಸೇರಿದ ನಂತರ ಗಿನ್ಸ್‌ಬರ್ಗ್ ಅವರಿಗೆ ಜೀವನ ನಿಭಾಯಿಸುವುದರ ಅರಿವಾಯಿತು. ಲಾ ಕಾಲೇಜಿನಲ್ಲಿ, 500 ಜನ ಪುರುಷರ ನಡುವೆ, ಕೇವಲ 9 ಜನ ಸ್ತ್ರೀ ವಿದ್ಯಾರ್ಥಿಗಳಿದ್ದು, ಹುಡುಗರಿಂದ ಲೇವಡಿ, ಅಪಹಾಸ್ಯಗಳನ್ನು ಸಹಿಸಬೇಕಾಗಿತ್ತು. ಕಾಲೇಜಿನ ಪ್ರೊಫೆಸರ್ ಒಬ್ಬರು ತಮ್ಮ ಕಾಮದಾಸೆಯನ್ನು ತೋಡಿಕೊಂಡು, ಗಿನ್ಸ್‌ಬರ್ಗ್ ಸಹಕರಿಸಿದರೆ, ಪರೀಕ್ಷೆಯಲ್ಲಿ ತೇರ್ಗಡೆ ಮಾಡಿಸುವುದಾಗಿ ಸಹಾ ಹೇಳಿದರಂತೆ. ಸಹ ವಿದ್ಯಾರ್ಥಿಗಳಂತೂ, ಈ 9 ಜನ ಸ್ತ್ರೀ ವಿದ್ಯಾರ್ಥಿಗಳನ್ನು ರೇಗಿಸುವುದು, ಚುಚ್ಚು ಮಾತಾಡುವುದು ಮಾಡುತ್ತಲೇ ಇದ್ದರೂ, ಇವುಗಳ ಕಡೆ ಗಮನ ಕೊಡದೆ, RBG ತನ್ನ ವಿದ್ಯಾಭ್ಯಾಸವನ್ನು ಸತತವಾಗಿ ಮುಂದುವರೆಸಿ, ಹೆಚ್ಚಿನ ಅಂಕಗಳನ್ನು ಗಳಿಸಿ, 500 ವಿದ್ಯಾರ್ಥಿಗಳ ತರಗತಿಯಲ್ಲಿ, ಪ್ರಥಮ ಸ್ಥಾನ ಗಳಿಸಿದ್ದು ಒಂದು ಸಾಹಸವೇ ಸರಿ. ಪ್ರತಿಷ್ಠಿತ ಹಾರ್ವರ್ಡ್ ಲಾ ರೆವ್ಯೂ ಸಮಾಜದ ಸದಸ್ಯರಾಗಿ ಆಯ್ಕೆಯಾದ ಹೆಗ್ಗಳಿಕೆ ಗಿನ್ಸ್‌ಬರ್ಗ್ ಅವರದು. 1950ರಲ್ಲಿ ಕ್ಯಾನ್ಸರ್ ಬೇನೆಯಿಂದ ತಾಯಿ ತೀರಿಕೊಂಡ ಕಾರಣದಿಂದ, ಗಿನ್ಸ್‌ಬರ್ಗ್ ತಮ್ಮ ಹೈಸ್ಕೂಲ್ ಗ್ರಾಜುಯೇಷನ್‌ನಲ್ಲಿ ಸಹ ಭಾಗವಹಿಸಲಾಗಿರಲಿಲ್ಲ. 1956ರಲ್ಲಿ ಒಂದು ಅಪಘಾತವನ್ನು ಎದುರಿಸಬೇಕಾಯಿತು. ಪತಿ ಮಾರ್ಟಿನ್ ಕ್ಯಾನ್ಸರ್ ರೋಗಕ್ಕೆ ಗುರಿಯಾಗಿ ಆಸ್ಪತ್ರೆ ಸೇರಿದ ಕಾರಣದಿಂದ, ಅವರ ಶುಶ್ರೂಷೆಗಾಗಿ ನಿಂತ ಗಿನ್ಸ್‌ಬರ್ಗ್, ಮಗಳು ಜೇನ್‌ಳ ಯೋಗಕ್ಷೇಮ ಗಮನಿಸುವುದರ ಜೊತೆಗೆ, ತನ್ನ ವಿದ್ಯಾಭ್ಯಾಸವನ್ನೂ ಮುಂದುವರೆಸುತ್ತ, ಮಾರ್ಟಿನ್ ಅವರ ಶಾಲೆಯಲ್ಲಿ ಅವರಿಗಾಗಿ ನೋಟ್ಸ್ ಬರೆದುಕೊಳ್ಳುವುದು ಇತ್ಯಾದಿ ಎಲ್ಲಾ ಕೆಲಸಗಳನ್ನೂ ನಿಭಾಯಿಸ

ಬೇಕಾಗಿತ್ತು. ಸ್ವಲ್ಪ ಕಾಲಾವಕಾಶದಲ್ಲೆ ಗುಣಮುಖರಾದ ಮಾರ್ಟಿನ್ ಅವರು, ತಮ್ಮ ಲಾ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ, ನ್ಯೂ ಯಾರ್ಕಿನಲ್ಲಿ ಒಂದು ಲಾ ಸಂಸ್ಥೆಯಲ್ಲಿ ಕೆಲಸ ಪ್ರಾರಂಭ ಮಾಡಿದಾಗ, ಸಂಸಾರದ ಸಲುವಾಗಿ ಗಿನ್ಸ್‌ಬರ್ಗ್, ನ್ಯೂ ಯಾರ್ಕಿನ ಕೊಲಂಬಿಯ ವಿಶ್ವವಿದ್ಯಾಲಯಕ್ಕೆ 1956ರಲ್ಲಿ ವರ್ಗಾವಣೆ ಹೊಂದಿ, 1959ರಲ್ಲಿ ತಮ್ಮ ಶಾಲೆಯಲ್ಲಿ ಮೊಟ್ಟ ಮೊದಲನೆಯ ಸ್ಥಾನದಲ್ಲಿ ಉತ್ತೀರ್ಣರಾದರು. ಇಂತಹ ಪ್ರತಿಭಾವಂತರಾಗಿದ್ದರೂ, ಸ್ತ್ರೀ ಎಂಬ ಕಾರಣಕ್ಕಾಗಿ ಅವರಿಗೆ ಕೆಲಸ ಕೊಡಲು ಯಾರೂ ಮುಂದೆ ಬರಲಿಲ್ಲ.

ಯು. ಎಸ್. ಡಿಸ್ಟ್ರಿಕ್ಟ್ ಜಡ್ಜ್ Edmund Palmiene ಅವರ ಕೈ ಕೆಳಗೆ 1959ರಿಂದ 1961ರ ವರೆಗೆ ಕ್ಲರ್ಕಿಂಗ್ ಮಾಡಿದ ಬಳಿಕ, ಅವರಿಗೆ ಕೊಲಂಬಿಯ ಲಾ ಸ್ಕೂಲಿನಲ್ಲಿ ರೀಸರ್ಚ್ ಅಸೋಸಿಯೇಟ್ ಆಗಿ ಕೆಲಸ ದೊರಕಿ ಅದೇ ಸಂಸ್ಥೆಯ ಅಂತರರಾಷ್ಟ್ರೀಯ ವ್ಯವಹಾರಗಳ ಬಗ್ಗೆ ರೀಸರ್ಚ್ ಮಾಡುವ ಕೆಲಸ ಅವರದಾಗಿತ್ತು. ಒಂದು ವರ್ಷದ ನಂತರ ಅಸೋಸಿಯೇಟ್ ಡೈರೆಕ್ಟರಾಗಿ ಮತ್ತೊಂದು ವರ್ಷ ಕೆಲಸ ಮಾಡಿದರು. 1963ರಲ್ಲಿ ರಟ್ಗರ್ಸ್ ವಿಶ್ವವಿದ್ಯಾನಿಲಯದಲ್ಲಿ ಪ್ರೊಫೆಸರ್ ಕೆಲಸ ದೊರಕಿ ಕಾಲೇಜಿನ ವಿದ್ಯಾರ್ಥಿಗಳಿಗೆ ಪಾಠ ಮಾಡುವ ಅವಕಾಶ ದೊರಕಿ, 1972ರವರೆಗೆ ಈ ಕೆಲಸವನ್ನು ಮುಂದುವರಿಸಿದರು. ಇದೇ ಸಮಯದಲ್ಲಿ American Civil Liberties Union (ACLU)ನಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಾ, 1971ರಲ್ಲಿ Women's Rights Project ಎಂಬ ಸಂಸ್ಥೆಯ ಹುಟ್ಟಿಗಾಗಿ ಶ್ರಮದಿಂದ ದುಡಿದರು. ಅದೇ ವರ್ಷ ಕೊಲಂಬಿಯ ವಿಶ್ವವಿದ್ಯಾಲಯಕ್ಕೆ ಹಿಂದಿರುಗಿ ಬಂದು, 1972ರಲ್ಲಿ, ಅಲ್ಲಿಯ ಪೂರ್ಣ ಸಮಯದ ಪ್ರೊಫೆಸರ್ ಆದ ಪ್ರಪ್ರಥಮ ಮಹಿಳೆಯಾದರು. ಗಿನ್ಸ್‌ಬರ್ಗ್ ಕೊಲಂಬಿಯದಲ್ಲಿ ಕೆಲಸ ಮಾಡುತ್ತಿದ್ದಾಗ, 1973ರಿಂದ 1980ರವರೆಗೆ, ACLUವಿನ General Consul ಆಗಿ ಕೆಲಸ ಮಾಡಿದರು. ಇದೇ ಸಮಯದಲ್ಲಿ, ಸ್ಟ್ಯಾನ್‌ಫರ್ಡ್ ವಿಶ್ವವಿದ್ಯಾಲಯದ Center for Advanced Studies in Behavioral Sciences ಎಂಬ ವಿಭಾಗದಲ್ಲಿ ಫೆಲೋ ಆಗಿ ನೇಮಕಗೊಂಡಿದ್ದರು. 1980ರಲ್ಲಿ ಅಧ್ಯಕ್ಷ ಜಿಮ್ಮಿ ಕಾರ್ಟರ್ ಅವರು ಗಿನ್ಸ್‌ಬರ್ಗ್ ಅವರನ್ನು US Court of Appeals for the District of Columbia Circuitಗಾಗಿ ನೇಮಿಸಿದರು. ನಂತರ 1993ರಲ್ಲಿ ಅಧ್ಯಕ್ಷ ಬಿಲ್ ಕ್ಲಿಂಟನ್ ಅವರು ಸುಪ್ರೀಮ್ ಕೋರ್ಟಿನ ಅಸೋಸಿಯೇಟ್ ಜಡ್ಜ್ ಆಗಿ ನೇಮಿಸಿದರು. ಗಿನ್ಸ್‌ಬರ್ಗ್ ಅವರು ಈ ಪದವಿಗೆ ಒಪ್ಪಿಕೊಂಡು 1993ರಲ್ಲಿ ಸುಪ್ರೀಮ್ ಕೋರ್ಟಿನಲ್ಲಿ ನ್ಯಾಯಾಧೀಶರಾಗಿ ನೇಮಕಗೊಂಡ ಎರಡನೆಯ ಸ್ತ್ರೀ ಆಗಿದ್ದು, ಜ್ಯೂಯಿಶ್ ಕಮ್ಯುನಿಟಿಯ ಪ್ರಪ್ರಥಮ ಸ್ತ್ರೀ ನ್ಯಾಯಾಧೀಶರಾದರು. ಇವರು ತಮ್ಮ ಕಾಲಾವಧಿಯಲ್ಲಿ ಸ್ತ್ರೀ ಸಮಾನತೆಗಾಗಿ ಸಲಹೆಗಾರರಾಗಿ ಅದಕ್ಕಾಗಿ ಬಹಳಷ್ಟು ಶ್ರಮಿಸಿದವರು.

**ಗಿನ್ಸ್‌ಬರ್ಗ್ ಅವರ ಜೀವನದ ಪ್ರಮುಖ ಸಾಧನೆಗಳು:**

- LBJ liberty and justice for all ಗೌರವ.
- ತನ್ನ ಜೀವನದ ಬಹುಭಾಗವನ್ನು ತೊಂದರೆಗಳನ್ನು ಅನುಭವಿಸುತ್ತಾ, ಅಹಿತಕರ

ವಾತಾವರಣದಲ್ಲಿಯೇ ಕಳೆದರೂ ಇವುಗಳಿಗೆ ಓಗೊಡದೆ, ಅಮೆರಿಕದ ಅತ್ಯುನ್ನತ ನ್ಯಾಯಾಲಯದ ನ್ಯಾಯಾಧೀಶರಾಗಿ, ಅಲ್ಲಿಯೂ ಸಹ ಸ್ತ್ರೀ ಸಮಾನತೆಗೆ ಮತ್ತು ಸ್ವತಂತ್ರಕ್ಕಾಗಿ ಹೋರಾಟ ನಡೆಸುತ್ತ, ವಿಭಜನೆಯಿಂದ ನರಳುತ್ತಿದ್ದ ಕೋರ್ಟಿನ ಆಡಳಿತವನ್ನು ಅವಿಭಾಜ್ಯ ಕುಟುಂಬವಾಗಿ ಮಾಡಿದವರು.

- ರಾಷ್ಟ್ರದ ಸುಪ್ರೀಮ್ ಕೋರ್ಟಿನ ಚರಿತ್ರೆಯಲ್ಲಿ ಎರಡನೆಯ ಸ್ತ್ರೀ ಹಾಗೂ ಜ್ಯೂಯಿಶ್ ಸಮುದಾಯದ ಮೊದಲನೆಯ ಸ್ತ್ರೀ ಆದ ನ್ಯಾಯಾಧೀಶರು.
- ಹಾರ್ವರ್ಡ್ ಮತ್ತು ಕೊಲಂಬಿಯ ವಿಶ್ವವಿದ್ಯಾನಿಲಯಗಳ ಲಾ ರಿವ್ಯೂ ಪ್ರಕಟಣೆಗಳಲ್ಲಿ ಮೊತ್ತ ಮೊದಲಿಗರಾದ ಸ್ತ್ರೀ.
- ರಟ್ಗರ್ಸ್ ವಿಶ್ವವಿದ್ಯಾನಿಲಯದ ಎರಡನೆಯ ಸ್ತ್ರೀ ಪ್ರೊಫೆಸರ್ ಹುದ್ದೆಯಲ್ಲಿದ್ದು, ಸಮಾನ ವೇತನಕ್ಕಾಗಿ ಹೋರಾಡಿದವರು.
- 1969ರಲ್ಲಿ ಸ್ತ್ರೀಯರ ಸಮಾನತೆಗಾಗಿ ಹೋರಾಡುವ ಅವಕಾಶ ತನ್ನ ಪಾಲಿಗೆ ಬಂದು, ಮೊತ್ತಮೊದಲನೆಯ ಲಾ ಪ್ರಕಟಣೆ Women's Rights Law Reporter ಎಂಬ ಪ್ರಕಟಣೆಯ ಸಂಪೂರ್ಣ ಜವಾಬ್ದಾರಿ ಹೊತ್ತು ಅದಕ್ಕಾಗಿ ಶ್ರಮಿಸಿದವರು.
- 1972ರಲ್ಲಿ ಕೊಲಂಬಿಯ ಲಾ ವಿದ್ಯಾಸಂಸ್ಥೆಯಲ್ಲಿ ಪೂರ್ಣಾವಧಿ ಪ್ರೊಫೆಸರ್ ಆಗಿ ನೇಮಕಗೊಂಡ ಪ್ರಪ್ರಥಮ ಮಹಿಳೆ.
- ಅದೇ ವರ್ಷದಲ್ಲಿ American Civil Liberties Union, ACLU ಎಂಬ ಸಂಸ್ಥೆಯ ಸಹಸ್ಥಾಪಕಿಯಾಗಿ, ನೂರಾರು ಸ್ತ್ರೀಯರ ಪರವಾಗಿ ಲಿಂಗ ಅಸಮಾನತೆಯ ಮತ್ತು ತಾರತಮ್ಯ ನಡೆಯುತ್ತಿದ್ದ ಕಾಲದಲ್ಲಿ, ಸ್ತ್ರೀಯರ ಪರವಾಗಿ ದುಡಿದವರು.
- 1970ರಲ್ಲಿ ಸ್ತ್ರೀಯರ ಪರವಾಗಿ 6 ಮೊಕದ್ದಮೆಗಳನ್ನು ಸುಪ್ರೀಮ್ ಕೋರ್ಟಿಗೆ ಸಲ್ಲಿಸಿ ವಾದಮಾಡಿ, ಅವುಗಳಲ್ಲಿ 5 ಮೊಕದ್ದಮೆಗಳಲ್ಲಿ ಗೆದ್ದವರು.
- ಕೊಲಂಬಿಯ ವಿದ್ಯಾಲಯದಲ್ಲಿ, ಮಗಳು ಜೇನ್ ಜೊತೆಯಾಗಿ, ತಾಯಿ ಮಗಳು ಇಬ್ಬರೂ ಲಾ ಡಿಪಾರ್ಟ್‌ಮೆಂಟಿನಲ್ಲಿ ಕೆಲಸಮಾಡಿದ ಮೊದಲಿಗರು.
- ತನ್ನ 60ನೆಯ ವಯಸ್ಸಿನಲ್ಲಿ ಸುಪ್ರೀಮ್ ಕೋರ್ಟಿನ ನ್ಯಾಯಾಲಯದಲ್ಲಿ ನೇಮಕಗೊಂಡ ಗಿನ್ಸ್‌ಬರ್ಗ್ ಅವರು, ಮುಂದಿನ 25 ವರ್ಷಗಳ ಕಾಲ ಆಡಳಿತದಲ್ಲಿದ್ದವರು. ಈ ಅವಧಿಯಲ್ಲಿ ಗೇ ರೈಟ್ಸ್, ಸ್ತ್ರೀ ಸ್ವತಂತ್ರ, ಸ್ತ್ರೀ ಸಮಾನತೆ, ಸಮವೇತನ ಇತ್ಯಾದಿ ಹಲವು ಹತ್ತು ಕಾರಣಗಳಿಗಾಗಿ ಹೋರಾಡಿದವರು. ದರ್ಪದಿಂದ ಅಧಿಕಾರ ನಡೆಸುತ್ತಿದ್ದ ಪುರುಷರ ವಿರುದ್ಧ, ಬಿಡದೆ ಹೋರಾಟಮಾಡಿ ಜಯ ಸಾಧಿಸಿದವರು.
- ಹೈಸ್ಕೂಲ್‌ನಲ್ಲಿ ಓದುತ್ತಿದ್ದಾಗ, ಸೆಲ್ಲೊ ನುಡಿಸುತ್ತಿದ್ದು, National Honor Society ಸದಸ್ಯರಾಗಿದ್ದವರು.
- ಕಾರ್ನೆಲ್ ವಿದ್ಯಾಲಯದಲ್ಲಿ ಅಂಡರ್ ಗ್ರಾಜುಯೇಟ್ ವಿದ್ಯಾರ್ಥಿ ಅಗಿದ್ದಾಗ ಭಾವಿ ಪತಿ ಮಾರ್ಟಿನ್ ಅವರೊಡನೆ ಸಂಪರ್ಕ ಉಂಟಾಯಿತು. ಮುಂದೆ

ಕೆಲವು ದಿನಗಳಲ್ಲಿ ಇಬ್ಬರ ಮದುವೆ ನಡೆದು, ಇಬ್ಬರೂ 56 ವರ್ಷಗಳ ಕಾಲ ಜೀವನ ನಡೆಸಿದರು. 2010ರಲ್ಲಿ ಮಾರ್ಟಿನ್ ನಿಧನದ ನಂತರವೂ, ತಮ್ಮ ಕೆಲಸ ಕಾರ್ಯಗಳನ್ನು ಗಿನ್ಸ್‌ಬರ್ಗ್ ಮುಂದುವರೆಸಿದ್ದರು. ಅವರ ದಾಂಪತ್ಯ ಜೀವನದಲ್ಲಿ ಇಬ್ಬರೂ ಸಂಸಾರದ ಜವಾಬ್ದಾರಿಯನ್ನು ಸರಿಸಮನಾಗಿ ಹಂಚಿಕೊಂಡು, ಸ್ತ್ರೀಸಮಾನತೆಗೆ ಅರ್ಥಪೂರ್ವಕವಾಗಿದ್ದು, ತಮ್ಮ ಜೀವನದಲ್ಲಿ ಹೇಳಿದಂತೆ ನಡೆಯುವವರಾಗಿದ್ದರು. ಹಾರ್ವರ್ಡ್‌ನಲ್ಲಿ ಓದುತ್ತಿದ್ದಾಗ ಮಾರ್ಟಿನ್ ಕ್ಯಾನ್ಸರ್ ಬೇನೆಯಿಂದ ಬಳಲುತ್ತಿದ್ದಾಗ, ಗಿನ್ಸ್‌ಬರ್ಗ್ ಇಡೀ ಸಂಸಾರದ ಹೊಣೆಯನ್ನು ನಿಭಾಯಿಸಿದರು ಎಂಬುದು ಎಲ್ಲರಿಗೆ ತಿಳಿದಿರಲಾರದು.

- ಕೆಲಸದಲ್ಲಿ ಇರುವ ಸ್ತ್ರೀಯರ ಹಾಗೂ ಮಕ್ಕಳಿರುವ ತಾಯಂದಿರ ಕಷ್ಟಗಳನ್ನು ಸ್ವತಃ ಅನುಭವಿಸಿದ ಗಿನ್ಸ್‌ಬರ್ಗ್, ಇಂತಹ ಪರಿಸ್ಥಿತಿಯಲ್ಲಿದ್ದ ಸ್ತ್ರೀಯರ ಸಹಾಯಕ್ಕಾಗಿ ಹೆಗಲೊಡ್ಡಿ ಸಹಾಯ ಮಾಡಿದವರು. ಗರ್ಭಿಣಿ ಸ್ತ್ರೀಯರನ್ನು ಆಗಿನ ಪುರುಷ ಸಮಾಜ ನಡೆಸಿಕೊಳ್ಳುತ್ತಿದ್ದ ರೀತಿ, ಮಾಡುತ್ತಿದ್ದ ತಾರತಮ್ಯಗಳು ಅವರಿಗೇನೂ ಹೊಸದಾಗಿರಲಿಲ್ಲ. ಈ ಪರಿಸ್ಥಿತಿಯನ್ನು ಅವರು ಸ್ವತಃ ರಟ್ಗರ್ಸ್‌ನಲ್ಲಿ ಪ್ರೊಫೆಸರ್ ಅಗಿದ್ದಾಗ ಅನುಭವಿಸಿದ್ದರು.
- ತಮ್ಮ 87ನೆಯ ವಯಸ್ಸಿನಲ್ಲಿ ಕಾಲವಾದ ಗಿನ್ಸ್‌ಬರ್ಗ್, ಸ್ವಂತ ಜೀವನದಲ್ಲಿ ಮೂರು ಬಾರಿ ಕ್ಯಾನ್ಸರ್ ಮತ್ತು ಹೃದಯದ ಶಸ್ತ್ರಚಿಕಿತ್ಸೆಯನ್ನು ಅನುಭವಿಸಿದ್ದರು.

**ಅವರ ಕೆಲವು ಆಯ್ದ ಆಣಿಮುತ್ತುಗಳನ್ನು ಇಲ್ಲಿ ಕೊಡಲಾಗಿದೆ.**

- ನಮ್ಮ ತಾಯಿ ನಮಗೆ ಪದೇ ಪದೇ ಹೇಳುತ್ತಾ ಇದ್ದ ಮಾತೆಂದರೆ, ಮೊದಲಿಗೆ ಉತ್ತಮ ಸ್ತ್ರೀಯಾಗಿರು ನಂತರ ಸ್ವತಂತ್ರವಾಗಿರುವುದನ್ನು ಕಲಿ.
- ಸ್ತ್ರೀ ಸ್ವಾತಂತ್ರ್ಯವೆಂದರೆ, ಪುರುಷರೂ ಕೂಡ ಎಲ್ಲ ಕೆಲಸಗಳನ್ನು, ಮುಂದಿನ ಜನಾಂಗವನ್ನು ಸರಿಯಾದ ರೀತಿಯಲ್ಲಿ ಬೆಳೆಸುವ ಕರ್ತವ್ಯವನ್ನು ಸರಿಸಮನಾಗಿ ಹಂಚಿಕೊಳ್ಳುವುದು.
- ಸ್ತ್ರೀ ಸ್ವಾತಂತ್ರ್ಯವನ್ನು ಹಿಡಿತದಲ್ಲಿ ಇಟ್ಟುಕೊಳ್ಳುವ ಪ್ರಭುತ್ವವು (State), ಸ್ತ್ರೀ ಸ್ವಾತಂತ್ರ್ಯಕ್ಕೆ ಬೆಲೆ ಕೊಡಲಾರದು.
- ಸಮಾಜದಲ್ಲಿ ಏನಾದರೂ ಬದಲಾವಣೆ ಮಾಡಬೇಕೆಂದಿದ್ದರೆ, ಲಗಾಮು ಹಿಡಿದಿರುವವರ ಸ್ನೇಹ ಅತಿ ಮುಖ್ಯ.
- ತನ್ನ ಅರಿವಿಲ್ಲದೆ ಮಾಡುವ ಸ್ತ್ರೀ ಅಸಮಾನತೆಯನ್ನು ಕಂಡುಹಿಡಿಯುವುದು ಬಹಳ ಕಷ್ಟ.
- ನಿನಗೆ ಅತಿ ಮುಖ್ಯವಾದ ಕಾರಣಗಳಿಗೆ ಮಾತ್ರ ಹೋರಾಡು. ಆದರೆ ಹೋರಾಟದ ರೀತಿ ಎಲ್ಲರ ಸಹಕಾರ ಸಂಪಾದಿಸುವ ರೀತಿಯಲ್ಲಿದ್ದರೆ ಬಹಳ ಉತ್ತಮ.

ನ್ಯಾಯಾಧೀಶರಾಗಿದ್ದ ಕಾಲದಲ್ಲಿ ಗಿನ್ಸ್‌ಬರ್ಗ್ ಸ್ತ್ರೀ ಸಮಾನತೆಗಾಗಿ ಬಹಳ ಹುಮ್ಮಸ್ಸಿನಿಂದ ಶ್ರಮಿಸಿದರು. ಸುಪ್ರೀಮ್ ಕೋರ್ಟಿನ ನ್ಯಾಯಾಧೀಶರಾಗಿ ನೇಮಕಗೊಂಡ ನಂತರ ತಮ್ಮ ಸ್ವಂತ ಜೀವನದಲ್ಲಿ ಅನೇಕ ಸಮಸ್ಯೆಗಳನ್ನು ಎದುರಿಸಿದರು. ಹೃದಯ ಚಿಕಿತ್ಸೆ, ಲಂಗ್ ಕ್ಯಾನ್ಸರ್, ಪ್ಯಾನ್‌ಕ್ರಿಯಾಟಿಕ್ ಕ್ಯಾನ್ಸರ್‌ಗಳಿಂದ ಅನೇಕ ದಿನಗಳು ಆಸ್ಪತ್ರೆಯಲ್ಲಿ ಕಳೆಯಬೇಕಾಯಿತು. ನವೆಂಬರ್ 2018ರಲ್ಲಿ ಆಫೀಸಿನಲ್ಲಿ ಬಿದ್ದ ಕಾರಣದಿಂದ 3 ಮೂಳೆಗಳು ಮುರಿದಿದ್ದವು. ಜುಲೈ 2020ರಲ್ಲಿ ಕ್ಯಾನ್ಸರ್ ಬೇನೆಗೆ ಕಿಮೊ ಚಿಕಿತ್ಸೆ ಪಡೆಯಬೇಕಾದ್ದರಿಂದ, ಇನ್ನು ಮುಂದೆ ಕೆಲಸ ಮಾಡಲು ಸಾಧ್ಯವಿಲ್ಲವೆಂದು ಹೇಳಿದರು. ಸೆಪ್ಟೆಂಬರ್ 18, 2020ರಂದು, ಕ್ಯಾನ್ಸರ್ ಮಾರಿಯಿಂದ ಬಿಡಿಸಿಕೊಳ್ಳಲಾಗದ ಗಿನ್ಸ್‌ಬರ್ಗ್, ತಮ್ಮ ಇಹಲೋಕದ ವ್ಯಾಪಾರ ಮುಗಿಸಿದರು. ಅಂದು, ಸ್ತ್ರೀ ಸಮಾನತೆಗಾಗಿ ಹೋರಾಡಿದ ಒಂದು ಪ್ರಜ್ವಲ ಜ್ಯೋತಿ ನಂದಿಹೋಯಿತು. ಗಿನ್ಸ್‌ಬರ್ಗ್ ಈ ರಾಷ್ಟ್ರದ ಗುರುತಾಗಿದ್ದರು, ಸ್ತ್ರೀ ಸಮಾನತೆಗಾಗಿ ಹೋರಾಡಿದ ಒಬ್ಬ ಧೀರ ಮಹಿಳೆಯಾಗಿದ್ದರು, ನೂರಾರು ಸ್ತ್ರೀಯರಿಗೆ ಮಾರ್ಗದರ್ಶಕರಾಗಿದ್ದರು.

**ಗ್ರಂಥ ಋಣ:**


1. Ruth Bader Ginsburg "A life" by Jane Sherron De Hart.
2. Remember the Ladies: 100 Great American Women -by Cheryl Harness.
3. "My Own Words" by Ruth Bader Ginsburg.
4. "Notorious RBG" by Irin Carmon & Shana Knizhnik.




# ಸ್ತ್ರೀವಾದದಲ್ಲಿ ಪುರುಷರ ಪಾತ್ರ

**ವಸುಂಧರಾ ಕಂದಾಚಾರ್**
Albuquerque, New Mexico

*

ಇಪ್ಪತ್ತೊಂದನೆಯ ಶತಮಾನದ ಕಾಲುಭಾಗದ ಗೆರೆಯನ್ನು ಮುಟ್ಟಲಿದ್ದೇವೆ. ಪ್ರಪಂಚದಾದ್ಯಂತ ರಾಜಕೀಯ, ಸಾಮಾಜಿಕ ಮತ್ತು ತಾಂತ್ರಿಕ ರಂಗಗಳಲ್ಲಿ ಅನೇಕ ಬದಲಾವಣೆಗಳಾಗಿವೆ. ಮಹಿಳೆಯರು ಪ್ರತಿ ನಿತ್ಯವೂ ಹೊಸ ರಂಗಗಳಲ್ಲಿ ಪಾಲ್ಗೊಂಡು ಹೆಸರು ಮಾಡುತ್ತಿದ್ದಾರೆ. ಹೆಣ್ಣುಮಕ್ಕಳು ಗಂಡುಮಕ್ಕಳಷ್ಟೇ ವಿದ್ಯಾವಂತರಾಗುತ್ತಿದ್ದಾರೆ, ಆರ್ಥಿಕ ಸ್ವಾವಲಂಬನೆಯನ್ನು ಸಾಧಿಸುತ್ತಿದ್ದಾರೆ, ಸ್ತ್ರೀಯರ ಪರವಾಗಿರುವ ಅನೇಕ ಕಾನೂನು ಕಾಯಿದೆಗಳು ಜಾರಿಗೆ ಬಂದಿವೆ. ಆದರೂ ಎಲ್ಲ ರಂಗಗಳಲ್ಲಿಯೂ ಸ್ತ್ರೀಯರು ಉನ್ನತ ಮಟ್ಟದ ಅಧಿಕಾರವಿರುವ ಸ್ಥಾನಗಳಲ್ಲಿ ಕಾಣಿಸುತ್ತಿಲ್ಲ, ಸ್ತ್ರೀಪುರುಷರಿಗೆ ಸಮಾನವಾದ ಸಂಬಳಗಳು ಸಿಗುತ್ತಿಲ್ಲ, ಅಲ್ಲದೆ ಮನೆಗೆಲಸಗಳನ್ನು ಈಗಲೂ ಸ್ತ್ರೀಯರೇ ಹೆಚ್ಚಾಗಿ ಮಾಡುತ್ತಿದ್ದಾರೆ ಎಂಬ ವರದಿಗಳೂ ಬರುತ್ತಿವೆ. ಈ ಹಿನ್ನೆಲೆಯಲ್ಲಿ ಸ್ತ್ರೀವಾದ ಎಂದರೆ ಏನು, ಇದು ದೈನಂದಿನ ಜೀವನದಲ್ಲಿ ಯಾವ ರೀತಿ ಅನ್ವಯವಾಗುತ್ತದೆ, ಇದರಲ್ಲಿ ಪುರುಷರ ಪಾತ್ರವೇನು ಎಂಬ ಬಗ್ಗೆ ವಿಶ್ಲೇಷಿಸುವುದು ಈ ಲೇಖನದ ಉದ್ದೇಶವಾಗಿದೆ.

ಸ್ತ್ರೀವಾದವು ಮೂಲಭೂತವಾಗಿ ಎಲ್ಲರಿಗೂ ಸಮಾನವಾದ ಹಕ್ಕುಗಳು ಮತ್ತು ಅವಕಾಶಗಳು ಇರಬೇಕು ಎಂದು ಪ್ರತಿಪಾದಿಸುತ್ತದೆ. ಆಧುನಿಕ ಕಾಲದಲ್ಲಿ ಪುರುಷ–ಸ್ತ್ರೀ ಮಾತ್ರವಲ್ಲದೆ ಬೇರೆ ಯಾವುದೇ ಲಿಂಗ ಸಂಬಂಧಿತ ಅಸ್ಮಿತೆಯನ್ನು ಹೊಂದಿರುವವರನ್ನೂ ಸೇರಿಸಿ ಎಲ್ಲರಿಗೂ ಸಮಾನವಾದ ಹಕ್ಕುಗಳು ಮತ್ತು ಅವಕಾಶಗಳೂ ಇರಬೇಕು ಎಂದು

ವಿಸ್ತರಿಸಲಾಗಿದೆ. ಈ ಹಕ್ಕುಗಳನ್ನು ಸಾಧಿಸಲು ಅನೇಕ ಸಾಮಾಜಿಕ ಮತ್ತು ರಾಜಕೀಯ ಚಳವಳಿಗಳು ಹುಟ್ಟಿಕೊಂಡಿವೆ, ಇಪ್ಪತ್ತನೆಯ ಶತಮಾನದ ಅರವತ್ತರ ದಶಕದಲ್ಲಿ ಹುಟ್ಟಿಕೊಂಡ ಸ್ತ್ರೀ ವಿಮೋಚನಾ ಚಳವಳಿ (Women's Liberation Movement) ಮತ್ತು ಇತ್ತೀಚೆಗಿನ 'ಮೀ ಟೂ' ಚಳವಳಿ ಮುಖ್ಯ ಉದಾಹರಣೆಗಳು. ಸ್ತ್ರೀವಾದವು ತಲೆತಲಾಂತರದಿಂದ ಬಂದಿರುವ ನಂಬಿಕೆ, ಪದ್ಧತಿಗಳ ಬುಡವನ್ನು ಅಲುಗಿಸುತ್ತದಾದ್ದರಿಂದ ಇದಕ್ಕೆ ಬಲವಾದ ಪ್ರತಿಭಟನೆಯನ್ನು ಪುರುಷರಲ್ಲಷ್ಟೇ ಅಲ್ಲದೆ ಸ್ತ್ರೀಯರಲ್ಲೂ ಕಾಣುತ್ತೇವೆ. ಈ ಪ್ರತಿಭಟನೆಯನ್ನು ಸ್ತ್ರೀವಾದಿಗಳ ಮೇಲೆ ಆಗುವ ಹಲ್ಲೆಗಳು, ಸ್ತ್ರೀವಾದದ ಬಗೆಗಿನ ಅಪಪ್ರಚಾರದಲ್ಲಿ ಕಾಣುತ್ತೇವೆ. ಉದಾಹರಣೆಗೆ, ಸ್ತ್ರೀವಾದಿಗಳು 'ಪುರುಷದ್ವೇಷಿಗಳು' ಎಂಬ ಆರೋಪವನ್ನು ನಾವೆಲ್ಲಾ ಕೇಳಿದ್ದೇವೆ. ಸ್ತ್ರೀವಾದಿ ಚಳವಳಿಗಳ ಗುರಿಗಳು ಆಯಾ ಕಾಲಗಳ ಅವಶ್ಯಕತೆಗಳಿಗೆ ಅನುಗುಣವಾಗಿ ಬದಲಾಗುತ್ತಿರುತ್ತವೆ. ಉದಾಹರಣೆಗೆ, ಹತ್ತೊಂಬತ್ತನೆಯ ಶತಮಾನದಲ್ಲಿ ಪಾಶ್ಚಾತ್ಯ ದೇಶಗಳಲ್ಲಿ ಸ್ತ್ರೀಯರು ಚುನಾವಣೆಗಳಲ್ಲಿ ಮತ ಚಲಾಯಿಸುವ ಹಕ್ಕನ್ನು ಸಂವಿಧಾನಗಳಲ್ಲಿ ಸೇರಿಸಬೇಕೆಂಬ ಉದ್ದೇಶವಿತ್ತು. ಈ ಹಕ್ಕು ಈಗ ಪ್ರಪಂಚದ ಬಹುತೇಕ ಎಲ್ಲ ದೇಶಗಳಲ್ಲೂ ಇರುವುದಕ್ಕೆ ಹತ್ತೊಂಬತ್ತನೆಯ ಶತಮಾನದಲ್ಲಿ ನಡೆದ ಈ ಚಳವಳಿಯು ಮೂಲ ಕಾರಣ ಎಂದು ಗಮನಿಸಬೇಕು. ಇಪ್ಪತ್ತನೆಯ ಶತಮಾನದ ಸ್ತ್ರೀ ವಿಮೋಚನಾ ಚಳವಳಿಯು ಸಾಮಾಜಿಕ ರಾಜಕೀಯವಾಗಿ ಸ್ತ್ರೀಯರು ಎದುರಿಸುವ ತಾರತಮ್ಯದ ಬಗ್ಗೆ ತಿಳಿವಳಿಕೆಯನ್ನು ಹರಡಿ ಅನೇಕ ಬದಲಾವಣೆಗಳನ್ನು ತಂದಿತು, ಉದಾಹರಣೆಗೆ, ಅಮೇರಿಕಾದಲ್ಲಿ 1974ರಿಂದ ಮಹಿಳೆಯರು, ಮದುವೆಯಾಗಿರಲಿ ಆಗಿಲ್ಲದಿರಲಿ, ಗಂಡ/ಸೋದರ/ತಂದೆ ಯಾರ ಅಪ್ಪಣೆಯೂ ಇಲ್ಲದೆ ಸ್ವತಂತ್ರವಾಗಿ ಬ್ಯಾಂಕುಗಳಲ್ಲಿ ಖಾತೆಗಳನ್ನು ತೆರೆಯುವ ಹಕ್ಕನ್ನು ಪಡೆದುಕೊಂಡರು. ಇಪ್ಪತ್ತೊಂದನೆಯ ಶತಮಾನದ 'ಮೀ ಟೂ' ಚಳವಳಿಯು ಮುಖ್ಯವಾಗಿ ಸ್ತ್ರೀಯರು ಉದ್ಯೋಗ ಕ್ಷೇತ್ರಗಳಲ್ಲಿ ಹಾಗೂ ದೈನಂದಿನ ಜೀವನದಲ್ಲಿ ಎದುರಿಸುವ ಲೈಂಗಿಕ ಶೋಷಣೆಗಳ ಬಗ್ಗೆ ತಿಳಿವಳಿಕೆಯನ್ನು ತಂದಿತು. ಅಲ್ಲದೆ ಹೆಣ್ಣುಮಕ್ಕಳಿಗೆ ಚಿಕ್ಕವಯಸ್ಸಿನಿಂದಲೇ ಗಣಿತ, ಕಂಪ್ಯೂಟರ್ ಕೋಡ್, ಇತ್ಯಾದಿ ವಿಷಯಗಳನ್ನು ಕಲಿಯುವಷ್ಟು ಬುದ್ಧಿವಂತರು ತಾವಲ್ಲ ಎಂಬ ತಪ್ಪು ಭಾವನೆ ಹುಟ್ಟುವುದನ್ನು ಗಮನಕ್ಕೆ ತಂದಿತು. ಈ ಕಾರಣದಿಂದ ಹೆಣ್ಣುಮಕ್ಕಳಿಗೆ ಕೋಡಿಂಗ್ ಕಲಿಸುವುದಕ್ಕೆಂದು ಅನೇಕ ಲಾಭಾಪೇಕ್ಷೆಯಿಲ್ಲದ ಸಂಸ್ಥೆಗಳು ಹುಟ್ಟಿಕೊಂಡಿವೆ. ಹೀಗೆ ಸ್ತ್ರೀವಾದಿ ಚಳವಳಿಗಳು ಅನೇಕ ಸ್ತ್ರೀಪರವಾದ ಸಾಮಾಜಿಕ ಹಾಗೂ ರಾಜಕೀಯ ಬದಲಾವಣೆಗಳನ್ನು ತಂದಿವೆ.

ಸ್ತ್ರೀವಾದಿಗಳ ಬಗ್ಗೆ ಜನಸಾಮಾನ್ಯರಲ್ಲಿ ಅನೇಕ ತಪ್ಪಾದ ತಿಳಿವಳಿಕೆಗಳಿವೆ, ಕುಚೋದ್ಯದ ಮಾತುಗಳು ಪ್ರಚಲಿತವಾಗಿವೆ. ಸ್ತ್ರೀವಾದಿಗಳೆಂದರೆ 'ಸ್ಲೀವ್‌ಲೆಸ್ ಬ್ಲೌಸ್ ತೊಟ್ಟು ಕಾಲಿನ ಮೇಲೆ ಕಾಲು ಹಾಕಿಕೊಂಡು ಕಾಫಿ ಕುಡಿಯುವ ಮಹಿಳೆಯರು' ಎಂದು ಉನ್ನತ ವಿದ್ಯಾಭ್ಯಾಸ ಮಾಡಿರುವ ಗಂಡಸರು ನನಗೆ ಹೇಳಿ ನಕ್ಕಿದ್ದಿದೆ. ಇತ್ತೀಚೆಗೆ ಯೂಟ್ಯೂಬ್‌ನಲ್ಲಿ ಪಂಡಿತರೊಬ್ಬರು 'ಗಂಡ ಸತ್ತ ಮೇಲೆ ಅವರಿವರ ಮನೆಯಲ್ಲಿ ಮುಸುರೆ ತಿಕ್ಕಿ ಮಕ್ಕಳನ್ನು ಬೆಳೆಸಿದ ಮಹಿಳೆಯನ್ನು ಲಿಬರೇಟೆಡ್ ಮಹಿಳೆ ಅನ್ನಬಹುದು. ಇಂಥ ಮಹಿಳೆಯು

ಪಾರ್ಟಿಗಳಲ್ಲಿ ಅಥವಾ ಸಾಮಾಜಿಕ ಜಾಲತಾಣಗಳಲ್ಲಿ ತೊಡಗಿಸಿಕೊಂಡಿರುವ ಮಹಿಳೆಯರಿಗಿಂತ ಹೆಚ್ಚು ಲಿಬರೇಟೆಡ್' ಎಂದು ಭಾಷಣವೊಂದರಲ್ಲಿ ನುಡಿದಿದ್ದನ್ನು ನೋಡಿದೆ. ಇದನ್ನು ಯಾರು ಹೇಳಿದರು ಎಂಬುದು ಮುಖ್ಯವಲ್ಲ, ಯಾಕೆಂದರೆ ಈ ಮನೋಭಾವದ ಮಾತುಗಳನ್ನು ನಾವೆಲ್ಲರೂ ಅನೇಕ ಸಾರಿ ಕೇಳಿದ್ದೇವೆ. ಆದರೆ ಈ ಎರಡು ಹೇಳಿಕೆಗಳು ನನ್ನ ಮನಸ್ಸಿನಲ್ಲಿ ನಿಂತು, ಅನೇಕ ಭಾವನೆಗಳನ್ನೂ, ಅಭಿಪ್ರಾಯಗಳನ್ನೂ, ವಾದಗಳನ್ನೂ ಹುಟ್ಟುಹಾಕಿವೆ. ಇವುಗಳನ್ನೆಲ್ಲಾ ಮಥಿಸಿ ನೋಡಿದಾಗ, ಸ್ತ್ರೀವಾದದ ಬೆಂಬಲದಿಂದ ಸ್ತ್ರೀಯರು ಮುಂದೆ ಹೋಗುತ್ತಿರುವಾಗ ಪುರುಷರು ಮಾನಸಿಕವಾಗಿ, ಬೌದ್ಧಿಕವಾಗಿ ಸ್ತ್ರೀಯರ ಬೆಳವಣಿಗೆಯನ್ನು ಅರ್ಥಮಾಡಿಕೊಳ್ಳದಿರುವುದಲ್ಲದೆ ಅವರ ಬೆಳವಣಿಗೆಯಲ್ಲಿ ಭಾಗಿಗಳೂ ಆಗದಿರುವುದು ಸ್ಪಷ್ಟವಾಗಿ ಕಾಣುತ್ತದೆ, ಆತಂಕಕ್ಕೆ ಎಡೆಮಾಡಿಕೊಡುತ್ತದೆ. ಈ ಹಿನ್ನೆಲೆಯಲ್ಲಿ ಸ್ತ್ರೀವಾದದಲ್ಲಿ ಪುರುಷರ ಪಾತ್ರವೇನು ಎಂಬ ಬಗ್ಗೆ ನನ್ನ ಕೆಲವು ಅನಿಸಿಕೆಗಳನ್ನು ಇಲ್ಲಿ ಹಂಚಿಕೊಂಡಿದ್ದೇನೆ.

'ಸ್ತ್ರೀವಾದಿಗಳೆಂದರೆ ಸ್ಲೀವ್‌ಲೆಸ್ ಬ್ಲೌಸ್ ತೊಟ್ಟು ಕಾಲಿನ ಮೇಲೆ ಕಾಲು ಹಾಕಿಕೊಂಡು ಕಾಫಿ ಕುಡಿಯುವ ಮಹಿಳೆಯರು' ಎಂಬ ಹೇಳಿಕೆಯನ್ನು ಪರಿಶೀಲಿಸೋಣ. ತಮ್ಮ ನಂಬಿಕೆಗಳನ್ನೂ ನಡವಳಿಕೆಗಳನ್ನೂ ಪ್ರಶ್ನಿಸುವ ಪ್ರಸಂಗ ಎದುರಾದಾಗ, ಇದಕ್ಕೆ ಕಾರಣವಾದ ವಾದಗಳನ್ನೂ ಮನುಷ್ಯರನ್ನೂ ಅಪಹಾಸ್ಯ ಮಾಡುವುದು ಮನುಷ್ಯ ಸ್ವಭಾವವಾಗಿದೆ. ತಕ್ಷಣದಲ್ಲಿ 'ಸ್ಲೀವ್‌ಲೆಸ್ ತೊಟ್ಟು ಕಾಲಿನ ಮೇಲೆ ಕಾಲು ಹಾಕಿಕೊಂಡು ಕಾಫಿ ಕುಡಿಯುವ' ಚಿತ್ರವು ತಮಾಷೆಯೆಂದು ಅನೇಕರಿಗೆ ನಗು ತರಬಹುದು. ಆದರೆ ಇದರಲ್ಲಿ ಸ್ತ್ರೀಯರ ವಿರುದ್ಧವಾದ ಎಷ್ಟೊಂದು ಭಾವನೆಗಳು ತುಂಬಿಕೊಂಡಿವೆ, ನೋಡಿ. ಮೊದಲನೆಯದು, ಸ್ತ್ರೀಯರ ಉಡುಗೆ. ಯಾವ ಉಡುಗೆ ಸರಿ, ಯಾವ ಉಡುಗೆ ಸರಿಯಲ್ಲ ಎಂಬ ಬಗ್ಗೆ ಅದೆಷ್ಟು ಪೂರ್ವಗ್ರಹ ಪೀಡಿತ ಅಭಿಪ್ರಾಯಗಳು ಹರಿದಾಡುತ್ತವೆ! ದಿನವಹಿ ತೊಡುವ ಕೇವಲ ಉಡುಗೆಯ ಆಧಾರದ ಮೇಲೆ, ಇವಳು 'ಸರಿ', ಇನ್ನೊಬ್ಬಳು 'ಸರಿಯಲ್ಲ' ಎಂಬ ನಿರ್ಧಾರಗಳನ್ನು ಎಸೆಯುವ ಹಕ್ಕು ಯಾರಿಗೂ ಇಲ್ಲ. ಆಧುನಿಕ ಜಗತ್ತಿನ ಸಂವಿಧಾನಗಳಲ್ಲಿ ಎಲ್ಲ ಪ್ರಜೆಗಳಿಗೂ ಅಭಿವ್ಯಕ್ತಿ ಸ್ವಾತಂತ್ರ್ಯವಿದೆ, ಉಡುಗೆ ತೊಡುಗೆಗಳೂ ಒಂದು ರೀತಿಯ ಅಭಿವ್ಯಕ್ತಿಯಾಗಿದೆ. ಆದರೆ ಇಲ್ಲಿ ನಾವು ಕೇಳಬೇಕಾಗಿರುವ ಪ್ರಶ್ನೆ ಇದರ ಅರಿವು ಪುರುಷರಿಗಿದೆಯೇ ಎಂಬುದು. ಸ್ತ್ರೀಯರು ತೊಡುವ ಉಡುಗೆಗಳ ಸುತ್ತ ಇರುವ ಬೇಲಿಗಳು ಹೇಗೆ ಸ್ತ್ರೀಯರ ಸ್ವಾತಂತ್ರ್ಯವನ್ನು ಕುಗ್ಗಿಸುತ್ತದೆ ಎಂಬುದನ್ನು ಅರ್ಥ ಮಾಡಿಕೊಂಡಿದ್ದಾರೆಯೇ? ಸ್ತ್ರೀಯರು ತೊಡುವ 'ಪ್ರಚೋದನಕಾರಿ' ಉಡುಗೆಗಳ ಕಾರಣ ಅವರ ಮೇಲೆ ಲೈಂಗಿಕ ಹಲ್ಲೆಗಳಾಗುತ್ತವೆ ಎಂದು ಹೇಳುವ ಪ್ರತೀತಿಯಿದೆ. ಮೀ ಟೂ ಚಳವಳಿಯ ನಂತರದ ದಿನಗಳಲ್ಲಿ, 'ನೀನು ಯಾವ ಬಟ್ಟೆಯನ್ನು ತೊಟ್ಟಿದ್ದೆ' ('what were you wearing') ಎಂಬ ಪ್ರದರ್ಶನಗಳು ನಡೆದಿವೆ, ಈ ಪ್ರದರ್ಶನಗಳಲ್ಲಿ ಲೈಂಗಿಕ ಹಲ್ಲೆಗೊಳಗಾದ ಸಮಯದಲ್ಲಿ ಮಹಿಳೆಯರು ತೊಟ್ಟಿದ್ದ ಉಡುಗೆಗಳನ್ನು ಪ್ರದರ್ಶಿಸಲಾಗುತ್ತದೆ. ಈ ಉಡುಗೆಗಳನ್ನು ನೋಡಿದಾಗ, ಲೈಂಗಿಕ ಹಲ್ಲೆಗೂ ಮಹಿಳೆಯರು ತೊಡುವ ಉಡುಗೆಗೂ

ಯಾವ ಸಂಬಂಧವೂ ಇಲ್ಲ ಎಂಬುದು ಸಾಬೀತಾಗುತ್ತದೆ. ಮಹಿಳೆಯರ ಮೇಲೆ ಅತ್ಯಾಚಾರಗಳ ಸುದ್ದಿಗಳನ್ನು ಓದಿದಾಗ, ತಪ್ಪಿತಸ್ಥರಿಗೆ ಕಠಿಣವಾದ ಶಿಕ್ಷೆಯಾಗಬೇಕು ಎಂಬ ಬಗ್ಗೆ ಅನೇಕ ವಾದವಿವಾದಗಳು ಏಳುತ್ತವೆ. ಇಂಥ ತಪ್ಪು ಮಾಡಿದರೆ ತಮಗೆ ಕಠಿಣವಾದ ಶಿಕ್ಷೆಯಾಗಬಹುದು ಎಂಬ ಹೆದರಿಕೆಯಿಂದ ಈ ರೀತಿಯ ದೌರ್ಜನ್ಯಗಳು ಕಡಿಮೆಯಾಗಬಹುದು ಎಂಬ ದೃಷ್ಟಿಕೋನದಲ್ಲಿ ಸ್ವಲ್ಪ ಸತ್ಯವಿರಬಹುದು, ಆದರೆ ಸ್ತ್ರೀಯರ ಮೇಲೆ ದೌರ್ಜನ್ಯವನ್ನು ಮಾಡಿ ಅವರನ್ನು ಕುಗ್ಗಿಸಬಹುದು ಎಂಬ ಮನೋಭಾವದಲ್ಲಿಯೂ ಬದಲಾವಣೆ ಆಗಬೇಕಾಗಿದೆ. ಅಷ್ಟೇ ಅಲ್ಲದೆ, ದೌರ್ಜನ್ಯಕ್ಕೆ ಒಳಗಾಗಿರುವ ಮಹಿಳೆಯರಿಗೆ ಯಾವಾಗಲೂ ನ್ಯಾಯಾಲಯದಲ್ಲಿ ನ್ಯಾಯ ದೊರಕುವುದಿಲ್ಲ, ಇದಕ್ಕೆ ಮುಖ್ಯ ಕಾರಣ ಸಾಕ್ಷಿಯಿಲ್ಲದಿರುವುದು. ಮಹಿಳೆಯರು ದೌರ್ಜನ್ಯ, ಶೋಷಣೆಗಳಿಗೆ ಒಳಗಾದಾಗ ಅವುಗಳ ವಿಡಿಯೋ ಚಿತ್ರಣವನ್ನೂ ಮಾಡುವುದು ಹೇಗೆ ಸಾಧ್ಯ? ತಮಗೆ ಶೋಷಣೆಯಾಗಿದೆ ಎಂದು ಹೇಳಿಕೊಂಡಾಗ ಯಾರೂ ನಂಬುವುದಿಲ್ಲವೆಂದು ಅನೇಕ ಮಹಿಳೆಯರು ಅವುಗಳ ಬಗ್ಗೆ ಮಾತಾಡುವುದೇ ಇಲ್ಲ. ಮಹಿಳೆಯರು ನಿರಂತರವಾಗಿ ಎದುರಿಸುವ ಈ ಸವಾಲನ್ನು 'ಮೀ ಟೂ' ಚಳವಳಿಯು ಮುಂಚೂಣಿಗೆ ತಂದಿತು. ಡೊನಾಲ್ಡ್ ಟ್ರಂಪ್ ಅಮೇರಿಕಾದ ಅಧ್ಯಕ್ಷರಾಗಿ ಅಧಿಕಾರ ಸ್ವೀಕರಿಸಿದ ಮಾರನೆಯ ದಿನ ಅಮೇರಿಕಾದಲ್ಲಿ ಸುಮಾರು ನಾಲ್ಕು ಮಿಲಿಯನ್ ಮಹಿಳೆಯರು ಪ್ರತಿಭಟನೆಯಲ್ಲಿ ಪಾಲ್ಗೊಂಡರು. ಇಷ್ಟೇ ಅಲ್ಲದೆ ಪ್ರಪಂಚದ ಎಲ್ಲಾ ಖಂಡಗಳೂ ಸೇರಿದಂತೆ 600ಕ್ಕೂ ಹೆಚ್ಚು ಪ್ರತಿಭಟನೆಗಳು ಇದೇ ದಿನ ನಡೆದವು. ಸ್ತ್ರೀಯರನ್ನು ಅಪಮಾನಿಸುವ ಮಾತುಗಳನ್ನು ಜಂಭದಿಂದ ಹೇಳಿಕೊಂಡಿದ್ದ ಟ್ರಂಪ್ ಅಧ್ಯಕ್ಷರಾದಾಗ 'ಮಹಿಳೆಯರ ಹಕ್ಕುಗಳು ಮಾನವೀಯ ಹಕ್ಕುಗಳು' ಎಂಬ ಸಂದೇಶವನ್ನು ಆ ಹೊಸ ಆಡಳಿತಕ್ಕೆ ಮುಟ್ಟಿಸುವುದು ಈ ಪ್ರತಿಭಟನೆಯ ಮುಖ್ಯ ಉದ್ದೇಶವಾಗಿತ್ತು. ಈ ಪ್ರತಿಭಟನೆಯು ಪ್ರಪಂಚದಾದ್ಯಂತ ಎಷ್ಟು ಜನ ಮಹಿಳೆಯರು ಒಂದಲ್ಲ ಒಂದು ರೀತಿಯಲ್ಲಿ ಅನ್ಯಾಯ, ದೌರ್ಜನ್ಯ, ಶೋಷಣೆಗೆ ಒಳಗಾಗಿದ್ದಾರೆ ಎಂಬುದನ್ನು ತೋರಿಸುತ್ತದೆ. ಆದರೆ ಅದೇ ಸಂಖ್ಯೆಯಲ್ಲಿ ಶೋಷಣೆ ಮಾಡಿದ ಪುರುಷರು ಶಿಕ್ಷೆಗೊಳಗಾಗಿಲ್ಲ! ಇದು ಇಪ್ಪತ್ತೊಂದನೆಯ ಶತಮಾನದಲ್ಲಿ ನ್ಯಾಯ ವ್ಯವಸ್ಥೆಯ ಮುಂದಿರುವ ಸವಾಲು.

ನ್ಯಾಯ ವ್ಯವಸ್ಥೆಯು ಈ ಸಮಸ್ಯೆಗಳಿಗೆ ಹೊಸ ಪರಿಹಾರಗಳನ್ನು ಹುಡುಕುವವರೆಗೆ, ಈ ರೀತಿಯ ಹಿಂಸೆಗಳಿಗೆ ಒಳಗಾದ ಮಹಿಳೆಯರಿಗೆ ಸಹಾಯವನ್ನು ಒದಗಿಸಲು ಲಾಭಾಪೇಕ್ಷೆಯಿಲ್ಲದ ಸಂಘ ಸಂಸ್ಥೆಗಳ ಸೃಷ್ಟಿಯಾಗಬೇಕಾಗುತ್ತದೆ. ಇದೇ ಸಮಯದಲ್ಲಿ ಇನ್ನಷ್ಟು ಪ್ರಶ್ನೆಗಳೇಳುತ್ತವೆ. 'ಪ್ರಚೋದನಕಾರಿ' ಉಡುಗೆಯನ್ನು ತೊಟ್ಟ ಹೆಂಗಸರ ಮೇಲೆ ಹಲ್ಲೆ ಮಾಡಬಹುದು ಎಂಬ ಅರಿವು ಪುರುಷರಿಗೆ ಬರುವುದು ಎಲ್ಲಿಂದ ಮತ್ತು ಯಾರಿಂದ? ಈ ಮಾತುಕತೆಗಳು ಯಾವ ವಯಸ್ಸಿನಲ್ಲಿ, ಯಾವ ಸಂದರ್ಭಗಳಲ್ಲಿ ನಡೆಯುತ್ತವೆ? ಈ ಪ್ರಶ್ನೆಗಳಿಗೆ ಉತ್ತರಗಳು ಪುರುಷರಿಂದಲೇ ಬರಬೇಕಾಗಿವೆ. ಈ ವಿಷಯವನ್ನು ಒಳಗೊಂಡ ಲೇಖನಗಳೂ ಕಥೆಗಳೂ ಸಿನಿಮಾಗಳೂ ಹೊರಬಂದು, ಜನಸಾಮಾನ್ಯರಲ್ಲಿ ಇವುಗಳ

ಬಗ್ಗೆ ಚರ್ಚೆಯಾಗಿ, ತಿಳಿವಳಿಕೆ ಹೆಚ್ಚಿದಾಗ ಸಮಾಜದಲ್ಲಿ ಅನೇಕ ಸ್ತ್ರೀಪರ ಬದಲಾವಣೆಗಳಾಗುವ ಸಾಧ್ಯತೆಯಿದೆ.

ಎರಡನೆಯದಾಗಿ, 'ಕಾಲಿನ ಮೇಲೆ ಕಾಲು ಹಾಕಿಕೊಂಡು' ಕೂತಿರುವ ಮಹಿಳೆಯ ಚಿತ್ರವನ್ನು ನೋಡಿ. ಈ ರೀತಿ ಕೂರುವುದು ಹೀಗೆ ಕೂತವರ ದರ್ಪದ ಸಂಕೇತವೆಂದು ಪರಿಭಾವಿಸುತ್ತೇವೆ. ಸಮಾಜದಲ್ಲಿ ಮಹಿಳೆಯು 'ತಗ್ಗಿ ಬಗ್ಗಿ' ನಡೆದುಕೊಳ್ಳಬೇಕೆಂಬ ಅಪೇಕ್ಷೆಯಿದೆ. ತಮ್ಮ ಬಗ್ಗೆ ಹೆಮ್ಮೆಯಾಗಲೀ ಜಂಭವಾಗಲೀ ತೋರಿಸುವ ಹೆಣ್ಣಿಗೆ ಅವಳ ಸ್ಥಾನವೇನೆಂದು ಗಂಡೊಬ್ಬನು ನೆನಪಿಸುವುದನ್ನು ನಾವು ಅನೇಕ ಸಿನಿಮಾಗಳಲ್ಲಿ ನೋಡಿದ್ದೇವೆ. ಇದನ್ನು ವಿರೋಧಿಸಿ ಮಾತಾಡುವ ಸ್ತ್ರೀಯರು ಅನೇಕರಿದ್ದಾರೆ, ಆದರೆ ಇದನ್ನು ವಿರೋಧಿಸಿ ಮಾತಾಡುವ ಪುರುಷರಿದ್ದಾರೆಯೇ? ಇಲ್ಲಿ ನಾವು ಗಮನಿಸಬೇಕಾದ ಇನ್ನೊಂದು ಅಂಶವಿದೆ. ಜಂಭದ ಹೆಣ್ಣಿಗೆ ಬುದ್ಧಿ ಕಲಿಸುವ ಚಿತ್ರಗಳನ್ನು ತಯಾರಿಸುವವರೂ ಗಂಡಸರೇ ಆಗಿದ್ದಾರೆ. ಇಂಥ ಚಿತ್ರಕತೆಗಳನ್ನು ಬರೆಯಲು ಅವರಿಗಿರುವ ಸ್ಫೂರ್ತಿಯಾದರೂ ಏನು? ಪ್ರೇಕ್ಷಕರು (ಪ್ರೇಕ್ಷಕಿಯರೂ?) ನೋಡಿ ಆನಂದಿಸುವರೆಂದೇ? ಈ ಪ್ರೇಕ್ಷಕರು ಯಾರು? ಅವರಿಗೆ ಇದರಿಂದ ಆನಂದ ಆಗುವುದು ಯಾಕೆ? ಈ ಪ್ರಶ್ನೆಗಳಿಗೂ ಪುರುಷರೇ ಉತ್ತರಗಳನ್ನು ಕೊಡಬೇಕಾಗಿದೆ. ಇತ್ತೀಚೆಗೆ ಬಂದಿರುವ ಅತ್ಯಂತ ಜನಪ್ರಿಯವಾದ ಮತ್ತು ಪ್ರಶಸ್ತಿಗಳನ್ನೂ ಪಡೆದಿರುವ ವಿಭಿನ್ನ ಚಿತ್ರ, 'ಕಾಂತಾರ'. ಈ ಚಿತ್ರದ ಕಥೆಯಲ್ಲಿ, ಚಿತ್ರೀಕರಣದಲ್ಲಿ ಅನೇಕ 'ನವೀನ' ಎನ್ನಬಹುದಾದ ಅಂಶಗಳಿವೆ, ಆದರೆ ಚಿತ್ರದ ನಾಯಕನು ನಾಯಕಿಯನ್ನು ಒಲಿಸಿಕೊಳ್ಳುವುದು ಮಾತ್ರ ಗುಹೆಗಳಲ್ಲಿ ವಾಸವಿದ್ದ ಆದಿಮಾನವನಂತೆ. ಇದೇಕೆ ಹೀಗೆ? ಎಲ್ಲ ಚಿತ್ರ ನಿರ್ದೇಶಕರೂ ನಿರ್ಮಾಪಕರೂ ತಮ್ಮ ಚಿತ್ರಗಳನ್ನು ತಯಾರಿಸುವಾಗ ತಮ್ಮ ಚಿತ್ರಗಳಲ್ಲಿರುವ ಸ್ತ್ರೀಪಾತ್ರಗಳ ಬಗ್ಗೆ ಕಾಳಜಿ ವಹಿಸುವ ಕಾಲ ಬರುವುದು ಯಾವಾಗ? ಈ ಪ್ರಶ್ನೆಗಳಿಗೆ ಅನೇಕ ಉತ್ತರಗಳಿರಬಹುದು, ಅವುಗಳಲ್ಲಿ ಒಂದು ಉತ್ತರದಲ್ಲಿ ಪುರುಷರಲ್ಲಿ ಸ್ತ್ರೀಯರ ಬಗೆಗಿನ ಧೋರಣೆಯು ಬದಲಾಗುವ ಅವಶ್ಯಕತೆ ಇರುತ್ತದೆ. ಕೇವಲ ಮಹಿಳೆಯರಲ್ಲದೆ ಪುರುಷ ವಿಮರ್ಶಕರೂ ತಮ್ಮ ವಿಮರ್ಶೆಗಳಲ್ಲಿ ಸ್ತ್ರೀಪರ ದೃಷ್ಟಿಯನ್ನು ಅಳವಡಿಸಿಕೊಳ್ಳುವ ಅಭ್ಯಾಸವನ್ನು ಈ ಶತಮಾನದಲ್ಲಿ ಮಾಡಿಕೊಳ್ಳಬೇಕಾಗಿದೆ. ಪುರುಷರನ್ನು ಮೀರಿದ ಬೆಳವಣಿಗೆಯನ್ನು ಸ್ತ್ರೀಯೊಬ್ಬಳಲ್ಲಿ ಕಂಡಾಗ, ಅವಳ ಉಡುಗೆತೊಡುಗೆಗಳನ್ನು, ಅವಳಿಗೆ ಮದುವೆಯಾಗಿದೆಯೋ ಇಲ್ಲವೋ, ಮಕ್ಕಳಿದ್ದಾರೆಯೋ ಇಲ್ಲವೋ, ಒಳ್ಳೆಯ ತಾಯಿಯೂ ಹೌದೋ ಅಲ್ಲವೋ ಎಂದೆಲ್ಲಾ ಅವಳಲ್ಲಿ ತಪ್ಪುಗಳನ್ನು ಹುಡುಕುವುದನ್ನು ಬಿಟ್ಟು, ಅವಳ ಸಾಧನೆಯನ್ನು ಗೌರವಿಸುವ ಉದಾಹರಣೆಗಳು ಬರಹಗಳಲ್ಲಿ ಮತ್ತು ಸಿನಿಮಾಗಳಲ್ಲಿ ಬೇಕಾಗಿವೆ. ಈಗಾಗಲೇ ಅನೇಕ ಹೆಣ್ಣುಮಕ್ಕಳು ಸಾಮಾಜಿಕ ಜಾಲತಾಣಗಳಲ್ಲಿ ಈ ದೃಷ್ಟಿಕೋನವಿರುವ ವಿಡಿಯೋಗಳನ್ನು ಹಾಕಿದ್ದಾರೆ.

ಮೂರನೆಯದಾಗಿ, ಒಬ್ಬ ಮಹಿಳೆ ಕಾಲಿನ ಮೇಲೆ ಕಾಲು ಹಾಕಿ ಕುಳಿತು ಕಾಫಿ ಕುಡಿಯುವ ಚಿತ್ರ, ಮಹಿಳೆಯೊಬ್ಬಳು ತನ್ನ ವೈಯಕ್ತಿಕ ಬೇಕುಬೇಡಗಳನ್ನು ನಿರ್ಲಕ್ಷಿಸಿ, ತನ್ನ ಅಲಂಕಾರದ ಬಗ್ಗೆ ಗಮನ ಕೊಡದೆ, ಇತರರಿಗಾಗಿ ದುಡಿಯುವ ಚಿತ್ರವು ಎಲ್ಲರ

ಅಕ್ಷಿಪಟಲದಲ್ಲೂ ಅಚ್ಚೊತ್ತಿರುತ್ತದೆ. ಆದರೆ ಮಹಿಳೆಯೊಬ್ಬಳು ಯಾವ ಸಮರ್ಥನೆಯಾಗಲೀ ಕ್ಷಮೆಯಾಗಲೀ ಹೇಳಿಕೊಳ್ಳದೆ, ಕೆಲಸವನ್ನು ಮಾಡದೆ ಕೂತು ಕಾಫಿಯನ್ನು ಸವಿಯುವ ಚಿತ್ರವು ಕೆಲವರನ್ನು ಕಂಗೆಡಿಸುತ್ತದೆ. ಇದೇ ಸಂದರ್ಭದಲ್ಲಿ ನಾನು ಮೇಲೆ ಉಲ್ಲೇಖಿಸಿರುವ ಇನ್ನೊಂದು ಹೇಳಿಕೆಯ ಬಗ್ಗೆ ಯೋಚಿಸಿ: 'ಗಂಡ ಸತ್ತ ಮೇಲೆ ಅವರಿವರ ಮನೆಯಲ್ಲಿ ಮುಸುರೆ ತಿಕ್ಕಿ ಮಕ್ಕಳನ್ನು ಬೆಳೆಸಿದ ಮಹಿಳೆಯನ್ನು ಲಿಬರೇಟೆಡ್ ಮಹಿಳೆ ಅನ್ನಬಹುದು, ಇಂಥ ಮಹಿಳೆಯು ಪಾರ್ಟಿಗಳಲ್ಲಿ ಅಥವಾ ಸಾಮಾಜಿಕ ಜಾಲತಾಣಗಳಲ್ಲಿ ತೊಡಗಿಸಿಕೊಂಡಿರುವ ಮಹಿಳೆಯರಿಗಿಂತ ಹೆಚ್ಚು ಲಿಬರೇಟೆಡ್'. ಇಲ್ಲೂ ದೈಹಿಕವಾಗಿ ಮಾನಸಿಕವಾಗಿ ಕಷ್ಟಪಡುವ ಮಹಿಳೆಗೇ ಪಾರ್ಟಿಗಳಲ್ಲಿ ಖುಷಿಪಡುವ ಮಹಿಳೆಗಿಂತ ಹೆಚ್ಚಿನ ಸ್ಥಾನ. ಇದರಲ್ಲಿ ನಾಲ್ಕು ಅಂಶಗಳಿವೆ: ಒಂದು, ಯಾರು ಹೆಚ್ಚು ಯಾರು ಕಡಿಮೆ ಎಂಬ ನಿರ್ಧಾರ; ಎರಡನೆಯದು, ಸುಖವಾಗಿರುವ ಮಹಿಳೆ ಏನೋ ತಪ್ಪು ಮಾಡುತ್ತಿದ್ದಾಳೆ; ಮೂರನೆಯದು, ಯಾರು ಲಿಬರೇಟೆಡ್ ಯಾರು ಲಿಬರೇಟೆಡ್ ಅಲ್ಲ ಎಂಬ ನಿರ್ಧಾರ; ನಾಲ್ಕನೆಯದು, 'ಗಂಡ ಸತ್ತ ಮೇಲೆ' ಎಂಬ ಹೇಳಿಕೆ, ಗಂಡನನ್ನು 'ಬಿಟ್ಟುಬಂದವಳು', 'ವಿಚ್ಛೇದನ ಮಾಡಿದವಳು', ಈ ಎಲ್ಲರೂ ಕಷ್ಟಗಳನ್ನು ಎದುರಿಸುತ್ತಾರೆ, ಆದರೆ ಗಂಡ ಸತ್ತು ಒಂಟಿಯಾಗಿರುವ ಮಹಿಳೆಗೆ ಇವರೆಲ್ಲರಿಗಿಂತ ಹೆಚ್ಚಿನ ಸ್ಥಾನ. ಈ ನಿರ್ಧಾರಗಳನ್ನು ಮಾಡುವ ಹಕ್ಕು ಪುರುಷರಿಗೆ ಎಲ್ಲಿಂದ ಬಂತು? ರಾಮನಿಂದ ಹಿಡಿದು ಮೋದಿಯವರೆಗೆ ಹೆಂಡತಿಯನ್ನು ಬಿಟ್ಟು ಹೋಗುವ ಗಂಡಸಿನ ಬಗ್ಗೆ ಅವಹೇಳನ ಕೇಳಿಬರುವುದಿಲ್ಲವೇಕೆ? ಯಾವ ರೀತಿಯ ಗಂಡಸಿನ ಸ್ಥಾನ ಇನ್ಯಾವ ರೀತಿಯ ಗಂಡಸಿನ ಸ್ಥಾನಕ್ಕಿಂತ ಹೆಚ್ಚಿನದು? ಈ ರೀತಿಯ ಶ್ರೇಣೀಕರಣದಿಂದ ಸಾಧಿಸುವುದಾದರೂ ಏನನ್ನು? ಎಲ್ಲ ಮನುಷ್ಯರಿಗೂ ಜೀವನದಲ್ಲಿ ಕಷ್ಟಗಳು ಎದುರಾಗುತ್ತವೆ, ಅವುಗಳಿಗೆ ತಮ್ಮದೇ ಆದ ರೀತಿಯಲ್ಲಿ ಪರಿಹಾರಗಳನ್ನೂ ಕಂಡುಕೊಳ್ಳುತ್ತಾರೆ. ಈ ಪರಿಹಾರಗಳು ಇನ್ನೊಬ್ಬರಿಗೆ ಸಹ್ಯವಾಗದಿದ್ದರೆ ಅವರನ್ನು ಕುರಿತು ಅವಹೇಳನ ಮಾಡುವುದರ ಬದಲು ಆ ಕಷ್ಟಕಾಲದಲ್ಲಿ ಅವರಿಗೆ ನೆರವಾಗುವುದು ಹೇಗೆ ಎಂಬ ಬಗ್ಗೆ ಯೋಚಿಸಿದರೆ ಹೆಚ್ಚು ಉಪಯೋಗವಾಗುತ್ತದೆ. ನೆರವು ನೀಡಲು ಸಾಧ್ಯವಿಲ್ಲದಿದ್ದರೆ, ಅವಹೇಳನ ಮಾಡದೆ ಸುಮ್ಮನಿರುವುದೂ ಒಂದು ರೀತಿಯ ಸಹಾಯವೇ ಆಗಿರುತ್ತದೆ.

ಇಲ್ಲಿ ನಾವು 'ಗೃಹಭಂಗ' ಕಾದಂಬರಿಯನ್ನು ನೆನೆಸಿಕೊಳ್ಳಬಹುದು. ಎಸ್. ಎಲ್. ಭೈರಪ್ಪ ಬರೆದಿರುವ ಈ ಕಾದಂಬರಿಯಲ್ಲಿ ನೂರು ವರ್ಷಗಳ ಹಿಂದಿನ ಗ್ರಾಮೀಣ ಬದುಕಿನ ಚಿತ್ರಣವಿದೆ. ನಡತೆ, ವ್ಯಕ್ತಿತ್ವಗಳ ದೃಷ್ಟಿಯಿಂದ ಶ್ಲಾಘನೀಯವೆನಿಸುವ ಒಂದು ಗಂಡು ಪಾತ್ರವೂ ಇರದಿರುವುದು ಈ ಕಾದಂಬರಿಯ ವೈಶಿಷ್ಟ್ಯವಾಗಿದೆ. ಈ ಕಾದಂಬರಿಯ ನಾಯಕಿಯಾದ ನಂಜಮ್ಮನು ತುಂಬಾ ಕಷ್ಟಗಳನ್ನು ಅನುಭವಿಸಿದರೂ ತನ್ನ ಕುಟುಂಬದ ಏಳಿಗೆಗಾಗಿ ದುಡಿಯುತ್ತಾಳೆ. ಎರಡು ಸಂದರ್ಭಗಳಲ್ಲಿ ಮಾತ್ರ ಬಂಡೇಳುತ್ತಾಳೆ, ಒಮ್ಮೆ ಅವಳ ವಿರುದ್ಧ ಪಂಚಾಯತಿ ಕರೆದ ಸಂದರ್ಭದಲ್ಲಿ ಮತ್ತು ಇನ್ನೊಮ್ಮೆ ಅವಳ ಮಗಳ ಮದುವೆಯ ವಿಷಯದಲ್ಲಿ ಅವಳ ತಂದೆಯ ಅಭಿಪ್ರಾಯದ ವಿರುದ್ಧ ಹೋಗಿ,

ವಿದ್ಯಾವಂತನಾದ ಗಂಡಿನೊಡನೆ ಮಗಳ ಮದುವೆಯನ್ನು ಮಾಡುತ್ತಾಳೆ. ಇಲ್ಲಿ ಗಮನಿಸಬೇಕಾದ ಮುಖ್ಯವಾದ ಅಂಶವೆಂದರೆ, ನಂಜಮ್ಮನಿಗೆ ದೊರೆತ ಬೆಂಬಲ ಮತ್ತು ಸಹಾಯ, ಮುಖ್ಯವಾಗಿ, ಶಾನುಭೋಗಿಕೆಯ ಲೆಕ್ಕಗಳನ್ನು ಬರೆಯಲು ಕಲಿಸಿದ ದೇವರಸಯ್ಯನವರ ಸಹಾಯ. ನಂಜಮ್ಮ ಎದುರಿಸಿದ ಕಷ್ಟಗಳನ್ನೇ ಎದುರಿಸಿದ ಸಾತು ಅವಳ ಗಂಡನನ್ನು ಬಿಟ್ಟು ಬೇರೊಬ್ಬನನ್ನು ಮದುವೆಯಾಗುತ್ತಾಳೆ, ಇವಳಿಗೂ ತನ್ನ ತಾಯಿಯ ನಿರಂತರ ಬೆಂಬಲವಿತ್ತು. ಇಲ್ಲಿ ನಂಜಮ್ಮನ ಆಯ್ಕೆ ಸರಿಯೋ ಸಾತುವಿನ ಆಯ್ಕೆ ಸರಿಯೋ ಎಂದು ಕೇಳುವುದರ ಬದಲು, ಇವರಿಬ್ಬರ ಆಯ್ಕೆಗಳನ್ನೂ ಗೌರವಿಸಬೇಕಾಗುತ್ತದೆ.

ನಾಲ್ಕನೆಯದಾಗಿ, 'ಸ್ಲೀವ್‌ಲೆಸ್ ಬ್ಲೌಸ್ ತೊಟ್ಟು ಕಾಲಿನ ಮೇಲೆ ಕಾಲು ಹಾಕಿ ಕೂತು ಕಾಫಿ ಕುಡಿಯುವ' ಸ್ತ್ರೀವಾದಿಯ ಚಿತ್ರವನ್ನು ಸೃಷ್ಟಿಸುವ ಹಿಂದಿನ ಮರ್ಮವೇನು? ಈ ರೀತಿಯ ಚಿತ್ರಣವನ್ನು ಮಾಡಿ, ಅವರು ಹಾಗೆ ಕೂತಿರುವುದೇ ತಪ್ಪೆನ್ನುವ ಭಾವನೆಯನ್ನು ತಂದು, ಅವರು ಯಾವ ವಿಷಯದ ಬಗ್ಗೆ ಚರ್ಚಿಸುತ್ತಿದ್ದರು ಎನ್ನುವುದನ್ನು ಮರೆಸುವುದು.

ಸ್ತ್ರೀಸ್ವಾತಂತ್ರ್ಯದ ಬಗ್ಗೆ ಅವರೇನು ಹೇಳಿರಬಹುದು ಎಂಬ ಬಗ್ಗೆ ಯಾರೂ ಕುತೂಹಲವನ್ನು ತೋರಿಸಬೇಕಾಗಿಲ್ಲ. ಅಲ್ಲದೆ ಅವರು 'ಕಷ್ಟಪಟ್ಟು ದುಡಿಯದೆ' 'ಕಾಲಿನ ಮೇಲೆ ಕಾಲು ಹಾಕಿ' ಕುಳಿತಿರುವುದರಿಂದ ಅವರು ಮಾಡುತ್ತಿರುವ ಕೆಲಸಕ್ಕೆ ಗೌರವ ಕೊಡಬೇಕಾಗಿಲ್ಲ ಎಂಬ ಭಾವ ಇಲ್ಲಿರುತ್ತದೆ. ಮಹಿಳೆಯರು ಬೌದ್ಧಿಕ ಚರ್ಚೆಯನ್ನೂ ಮಾಡಬಲ್ಲರು ಎಂಬ ಮಾತನ್ನು ಒಪ್ಪಿಕೊಳ್ಳಲು ಈ ರೀತಿಯ ಪೂರ್ವಕಲ್ಪಿತ ಅಭಿಪ್ರಾಯಗಳನ್ನು ಬಿಟ್ಟುಕೊಡಬೇಕಾಗುತ್ತದೆ. ಸಾಮಾಜಿಕ ಕಟ್ಟುಪಾಡುಗಳ ಒಳಗೇ ದುಡಿಯುತ್ತಾ ಆಗೊಮ್ಮೆ ಈಗೊಮ್ಮೆ ಬಂಡೇಳುವ ನಂಜಮ್ಮನಂತೆ ಬದುಕುವುದರಿಂದ ಸ್ತ್ರೀ ಸ್ವಾತಂತ್ರ್ಯವನ್ನು ಸಾಧಿಸಲು ಸಾಧ್ಯವಿಲ್ಲ. ಸ್ತ್ರೀಯರನ್ನು ಆರ್ಥಿಕವಾಗಿ, ಸಾಮಾಜಿಕವಾಗಿ ಮಾನಸಿಕವಾಗಿ ಸೀಮಿತಗೊಳಿಸುವ ಈ ಕಟ್ಟುಪಾಡುಗಳನ್ನು ಮೀರಿ ಬೆಳೆದಾಗ ಮಾತ್ರ ಸ್ತ್ರೀ ಸ್ವಾತಂತ್ರ್ಯವನ್ನು ಸಾಧಿಸಲು ಸಾಧ್ಯ. ಆದರೆ, ಈ ಕಟ್ಟುಪಾಡುಗಳನ್ನು ಮೀರಿ ಬೆಳೆಯಲು ಸಾಂವಿಧಾನಿಕ ಹಕ್ಕುಗಳು ಇಲ್ಲದೆ ಇದ್ದಾಗ, ಮಹಿಳೆಯರು ಸಾಮಾಜಿಕ ಮತ್ತು ಸಾಂಪ್ರದಾಯಿಕ ಆಚಾರಗಳ ಚೌಕಟ್ಟಿನೊಳಗೇ ಸಾಧ್ಯವಾಗುವ ಆಯ್ಕೆಗಳನ್ನು ಮಾಡಬೇಕಾಗುತ್ತದೆ. ನಂಜಮ್ಮನು ತನ್ನ ಮಗಳಿಗಾಗಿ ಮಾಡಿದ ಆಯ್ಕೆ ಇದೇ ರೀತಿಯದು. ಸಾಂಸಾರಿಕ ಜವಾಬ್ದಾರಿಗಳನ್ನು ನಿಭಾಯಿಸಲು ಶಕ್ತನಾಗಿರುವ ಗಂಡೊಬ್ಬನೊಂದಿಗೆ ಪಾರ್ವತಿಯ ಮದುವೆಯನ್ನು ಮಾಡುವುದರ ಮೂಲಕ ತನ್ನ ಮಗಳಿಗೆ ಸುಖವಾದ ಬದುಕನ್ನು ಅರಸಿದಳು. ಈ ಕಾದಂಬರಿಯಲ್ಲಿ ಇತರ ಪಾತ್ರಗಳಿಗೆ ಇಂಥ ಆಯ್ಕೆ ಸಾಧ್ಯವಿರಲಿಲ್ಲ, ಹೀಗಾಗಿ ಈ ಕಾದಂಬರಿಯು ಮಹಿಳೆಯರಿಗೆ ಶಿಕ್ಷಣ, ಉದ್ಯೋಗ ಮತ್ತು ಸ್ವಾವಲಂಬನೆ ಎಷ್ಟು ಮುಖ್ಯ ಮತ್ತು ಇವು ಸಾಧ್ಯವಾಗುವುದಕ್ಕೆ ಸಾಮಾಜಿಕ ಮತ್ತು ರಾಜಕೀಯ ಬದಲಾವಣೆಗಳು ಬೇಕಾಗುತ್ತವೆಂದು ತೋರಿಸುತ್ತದೆ.

ಈಗ, ಐದನೆಯದಾಗಿ ಹಾಗೂ ಕೊನೆಯದಾಗಿ, ಈ ಎರಡೂ ಹೇಳಿಕೆಗಳನ್ನು ಮಾಡಿದವರು ಅವರವರ ಕ್ಷೇತ್ರಗಳಲ್ಲಿ ಉನ್ನತ ಮಟ್ಟದಲ್ಲಿರುವವರು, ಬುದ್ಧಿವಂತರು. ಆದರೆ ಸ್ತ್ರೀವಾದವನ್ನು ಸಕ್ರಿಯವಾಗಿ ಓದಿ, ವಿಶ್ಲೇಷಿಸಿ ಅರ್ಥಮಾಡಿಕೊಂಡವರಲ್ಲ. ಕಾಲೇಜುಗಳಲ್ಲಿ ದೊರಕುವ ಪದವಿಗಳನ್ನು ಗಳಿಸಿ ಬುದ್ಧಿವಂತರೆನಿಸಿಕೊಂಡವರಿಗೂ, ಪಂಡಿತರೆನಿಸಿಕೊಂಡವರಿಗೂ ತಮ್ಮ ಸುತ್ತ ದಿನನಿತ್ಯ ನಡೆಯುವ ಸ್ತ್ರೀ ಶೋಷಣೆಯ ಬಗ್ಗೆ ಇರುವ ಅಜ್ಞಾನ ಎಷ್ಟಿದೆ ಎಂದು ತೋರಿಸುತ್ತದೆ. ಅಷ್ಟೇ ಅಲ್ಲ, ಸ್ತ್ರೀವಾದದ ವಿಷಯಗಳ ಮೇಲೆ ಮಹಿಳೆಯರು ಬರೆದಿರುವ, ಬರೆಯುತ್ತಿರುವ ಪ್ರಬಂಧಗಳನ್ನಾಗಲೀ ಪುಸ್ತಕಗಳನ್ನಾಗಲೀ ಪುರುಷರು ಓದುತ್ತಿಲ್ಲವೆಂಬುದೂ ಅರ್ಥವಾಗುತ್ತದೆ. ಸ್ತ್ರೀವಾದವಲ್ಲದೆ ಇತರ ಸ್ತ್ರೀ ಪ್ರಧಾನ ಕಥಾವಸ್ತುಗಳಿರುವ ಕಥೆ, ಕಾದಂಬರಿಗಳು ಅಥವಾ ಸಿನಿಮಾಗಳಲ್ಲಿ ಪುರುಷರು ಹೆಚ್ಚಾಗಿ ತೊಡಗಿಸಿಕೊಳ್ಳದಿರುವುದೂ ಇದಕ್ಕೆ ಕಾರಣವಿರಬಹುದು. ಹೀಗಾಗಿ, ನಾವು ಎರಡು ರೀತಿಯ ಬದಲಾವಣೆಗಳನ್ನು ಅಪೇಕ್ಷಿಸಬಹುದಾಗಿದೆ. ಒಂದು, ಸ್ತ್ರೀಪರ ಲೇಖನಗಳನ್ನೂ ಸಿನಿಮಾಗಳನ್ನೂ ಇದಕ್ಕೂ ನಮಗೂ ಯಾವ ಸಂಬಂಧವೂ ಇಲ್ಲ ಎಂದು ಓದುವ/ನೋಡುವ ಗೋಜಿಗೆ ಹೋಗದಿರುವುದರ ಬದಲು ಒಂದೇ ಸಮಾಜದಲ್ಲಿ, ಒಂದೇ ಮನೆಯಲ್ಲೂ ಸಹ ಪುರುಷರೂ ಸ್ತ್ರೀಯರೂ ಇಬ್ಬರೂ ಇರುವುದರಿಂದ, ಸ್ತ್ರೀಯರ ಬೆಳವಣಿಗೆಗೆ ಮಾರಕವಾಗಿರುವ ಸಾಮಾಜಿಕ, ಧಾರ್ಮಿಕ, ರಾಜಕೀಯ ನಿಲುವುಗಳ್ಯಾವುವು, ಅವುಗಳನ್ನು ನಿವಾರಿಸುವುದು ಹೇಗೆ ಎಂಬ ಬಗ್ಗೆ ಆಗುವ ಚರ್ಚೆಗಳಲ್ಲಿ ಪುರುಷರೂ ಪಾಲ್ಗೊಳ್ಳಬೇಕಾಗಿದೆ. ಎರಡನೆಯದು, ಯಾವುದಾದರೂ ಮಹಿಳೆಯ ಶೋಷಣೆಯೋ ಅವಮಾನವೋ ತಮ್ಮ ಮುಂದೆಯೇ ಆದಾಗ, ಪುರುಷರು ಇದರ ವಿರುದ್ಧ ದನಿಯೆತ್ತುವುದು. ಮಹಿಳೆಯರು ಎದುರಿಸುವ ಅನೇಕ ಅಸಮಾನತೆಗಳನ್ನು ನಿವಾರಿಸಲು ಪುರುಷರು ಮಹಿಳೆಯರೊಂದಿಗೆ ನಿಂತು ಅವರ ಸಹಭಾಗಿಗಳಾಗಬಹುದು ಎಂಬ ಮಾತನ್ನು ಶೆರಿಲ್ ಸ್ಯಾಂಡ್‌ಬರ್ಗ್ ತಮ್ಮ 2013ರಲ್ಲಿ ಪ್ರಕಟವಾದ 'ಲೀನ್ ಇನ್' ಎಂಬ ಪುಸ್ತಕದಲ್ಲಿ ಹೇಳಿದ್ದಾರೆ.

ಇತ್ತೀಚೆಗೆ ಎಚ್‌ಬಿಓ ಮ್ಯಾಕ್ಸ್‌ನಲ್ಲಿ ಪ್ರಸಾರವಾದ "ವೈಟ್ ಲೋಟಸ್" ಎಂಬ ಧಾರಾವಾಹಿಯು ಜನಪ್ರಿಯತೆಯನ್ನು ಪಡೆದಿದೆ. ಈ ಧಾರಾವಾಹಿಯ ಒಂದು ವೈಶಿಷ್ಟ್ಯವೆಂದರೆ, ಎರಡು ವಿರುದ್ಧವಾದ ಧೋರಣೆಗಳನ್ನು ಹೊಂದಿರುವ ಪಾತ್ರಗಳು ಊಟತಿಂಡಿಗಳನ್ನು ತಿನ್ನುವ ಸಮಯದಲ್ಲಿ ಒಂದೇ ಮೇಜಿನ ಮುಂದೆ ಕೂತಿರುವಾಗ ಅವರಾಡುವ ಮಾತುಗಳಲ್ಲಿ ಅವರ ನಡುವಿನ ಭಿನ್ನಾಭಿಪ್ರಾಯಗಳನ್ನು ಹೊರತರುವುದು. ಈ ಧಾರಾವಾಹಿಯ ಎರಡನೆಯ ಸಾಲಿನ ಕಂತುಗಳಲ್ಲಿ ಎರಡು ವಿಭಿನ್ನವಾದ ರೀತಿಯ ದಂಪತಿಗಳಿದ್ದಾರೆ, ಇವರು ಪ್ರವಾಸಕ್ಕೆಂದು ಸಿಸಿಲಿಗೆ ಬಂದಿದ್ದಾರೆ. ಈತನ್ ಮತ್ತು ಹಾರ್ಪರ್ ದಂಪತಿಗಳು ಕಷ್ಟದಲ್ಲಿ ಬೆಳೆದು ಇದೀಗ ಶ್ರೀಮಂತಿಕೆಯನ್ನು ಹೊಂದಿದ್ದಾರೆ. ಹಾರ್ಪರ್ ಆಧುನಿಕ ಮತ್ತು ಸ್ವತಂತ್ರ ಮನೋಭಾವದ ಹೆಣ್ಣು, ತನ್ನ ಗಂಡನೊಂದಿಗೆ ತಾನು ಸರಿಸಮಳೆಂಬ ಭಾವನೆಯಿರುವವಳು. ಕ್ಯಾಮ್ರನ್ ಮತ್ತು ಡಾಫ್ನಿ ತುಂಬಾ ಸಿರಿವಂತರು

ಮತ್ತು ಅತ್ಯಂತ ಸಂತೋಷವಾಗಿರುವ ಜೋಡಿಯಂತೆ ಕಂಡುಬರುತ್ತಾರೆ. ಡಾಫ್ನಿಗೆ ತನ್ನ ಗಂಡನ ವಿವಾಹೇತರ ಚಟುವಟಿಕೆಗಳ ಅರಿವಿದ್ದರೂ ತನ್ನ ಮೇಲೆ ಅತಿಯಾದ ಪ್ರೀತಿಯನ್ನು ತೋರಿಸುವ ಕಾರಣದಿಂದಲೋ ಇಲ್ಲಾ ಅವರಿಗಿರುವ ಎರಡು ಮಕ್ಕಳ ಕಾರಣದಿಂದಲೋ ಅವಳೂ ತನ್ನ ಗಂಡನ ಮೇಲೆ ಪ್ರೀತಿಯನ್ನು ತೋರಿಸಿಕೊಂಡು ಅವನ ನಡವಳಿಕೆಯಿಂದ ಅವಳ ಮೇಲೆ ಯಾವ ಪರಿಣಾಮವೂ ಇಲ್ಲವೆಂಬಂತೆ ನಡೆದುಕೊಳ್ಳುತ್ತಾಳೆ. ಆದರೆ ತನ್ನದೇ ಆದ ರೀತಿಯಲ್ಲಿ ಪ್ರತೀಕಾರವನ್ನೂ ಮಾಡುತ್ತಾಳೆ, ಇದೇ ಕಾರಣಕ್ಕೆ ಅವಳು ಹಾರ್ಪರ್ ಜೊತೆ ಒಂದು ದಿನದ ಮಟ್ಟಿಗೆ ಹತ್ತಿರದ ಇನ್ನೊಂದು ಊರಿಗೆ ಹೋಗಿ, ಅನಿರೀಕ್ಷಿತವೆಂಬಂತೆ ಆ ರಾತ್ರಿ ಅಲ್ಲೇ ಕಳೆಯುವುದಾಗಿ ಗಂಡನಿಗೆ ಹೇಳುತ್ತಾಳೆ, ಅತ್ಯಧಿಕ ಬೆಲೆಯ ಹಳೆಯ ಕಾಲದ ಅರಮನೆಯೊಂದರಲ್ಲಿ ತಂಗುತ್ತಾಳೆ. ತನಗಿರುವ ಶ್ರೀಮಂತಿಕೆಯ ಬಲದಿಂದ ಅವಳು ಈ ರೀತಿ ಆಗಾಗ ನಡೆದುಕೊಳ್ಳುವುದರಿಂದ ಅವಳಿಗೆ ಒಂದು ರೀತಿಯ ಸಮಾಧಾನವಾಗುತ್ತದೆ. ಇದು ನೇರ ಮಾತಿನ, ನೇರ ನಡವಳಿಕೆಯ ಹಾರ್ಪರಳಿಗೆ ತುಂಬಾ ವಿಚಿತ್ರವೆನಿಸುತ್ತದೆ. ಡಾಫ್ನಿಗೆ ತನ್ನ ಗಂಡನ ಬಗ್ಗೆ ಅಸಮಾಧಾನವಿದ್ದರೆ ಅವನನ್ನು ಬಿಟ್ಟು ಹೋಗುವ ಬದಲು ಈ ರೀತಿಯ ನಾಟಕಗಳನ್ನು ಆಡುವುದು ಬಾಲಿಶವೆಂದು ಅವಳಿಗೆ ತೋರುತ್ತದೆ. ಅಲ್ಲದೆ, ಅವರ ಅತೀ ಪ್ರೀತಿಯ ಮಾತು, ನಡತೆ, ಹಾವಭಾವಗಳ ಹಿಂದೆ ತುಂಬಾ ಅಸಮಾಧಾನವಿದೆಯೆಂದು ಅವಳಿಗೆ ಖಚಿತವಾಗುತ್ತದೆ.

ಕ್ಯಾಮ್ರನ್ ಮತ್ತು ಈತನ್ ಕಾಲೇಜಿನ ದಿನಗಳಿಂದ ಸ್ನೇಹಿತರು, ಆದರೆ ಆತ್ಮೀಯರಾದ ಗೆಳೆಯರೇನಲ್ಲ, ಅವರಿಬ್ಬರ ನಡುವೆ ಸೂಕ್ಷ್ಮವಾದ ಘರ್ಷಣೆಯಿದೆ. ಅವರ ಹೆಂಡತಿಯರು ಹತ್ತಿರದ ಇನ್ನೊಂದು ಊರಿಗೆ ಹೋಗಿ ಆ ರಾತ್ರಿ ಹಿಂದಿರುಗುವುದಿಲ್ಲವೆಂದು ತಿಳಿದ ಮೇಲೆ ಕ್ಯಾಮ್ರನ್ ಇಬ್ಬರು ವೇಶ್ಯೆಯರೊಂದಿಗೆ ಆ ರಾತ್ರಿಯನ್ನು ಕಳೆಯುತ್ತಾನೆ, ಈತನ್ ಕೂಡ ತನ್ನಂತೆಯೇ ಈ 'ಅವಕಾಶ'ವನ್ನು ಉಪಯೋಗಿಸಬೇಕು ಎಂಬುದು ಅವನ ಅಪೇಕ್ಷೆಯಾಗಿರುತ್ತದೆ, ಆದರೆ ಈತನ್ ಈ ಚಟುವಟಿಕೆಗಳಲ್ಲಿ ಪಾಲ್ಗೊಳ್ಳುವುದಿಲ್ಲ. ಡಾಫ್ನಿ ಮತ್ತು ಹಾರ್ಪರ್ ಹಿಂತಿರುಗಿದಾಗ, ಇವರಿಬ್ಬರೂ ಏನೂ ನಡೆದಿಲ್ಲವೆಂಬಂತೆ ನಟಿಸುತ್ತಾರೆ. ಹಾರ್ಪರ್ ಅನೇಕ ಬಾರಿ ಈತನ್ ಹತ್ತಿರ ಅವರು ಆ ರಾತ್ರಿ ಏನು ಮಾಡಿದರೆಂದು ಕೇಳುತ್ತಾಳೆ, ಅವನು ನಡೆದ ಘಟನೆಗಳನ್ನು ಬಿಟ್ಟುಕೊಡುವುದಿಲ್ಲ. ಕೊನೆಗೆ ಹಾರ್ಪರ್, ಅವಳಿಗೆ ದೊರಕಿದ್ದ ಒಂದು ಸಾಕ್ಷಿಯನ್ನು ತೋರಿಸಿ ಕೇಳಿದಾಗ ಈತನ್ ನಡೆದದ್ದನ್ನು ವಿವರಿಸುತ್ತಾನೆ. ಇಲ್ಲಿ ನಾವು ಗಮನಿಸಬೇಕಾಗಿರುವುದು ಈತನ್ ತನ್ನ ಗೆಳೆಯನನ್ನು ಬಿಟ್ಟುಕೊಡದೆ ಅವರ ನಡುವಿನ 'ಬ್ರೋ ಕೋಡ್' ಅನ್ನು ಎತ್ತಿ ಹಿಡಿಯುವುದು. ಗೆಳೆಯರ ನಡುವೆ ಇರುವ ಅಲಿಖಿತ ಒಪ್ಪಂದಗಳನ್ನು 'ಬ್ರೋ ಕೋಡ್' ಎಂದು ಕರೆಯುತ್ತಾರೆ. ಹೆಂಡತಿಯ ಮೇಲೆ ಪ್ರೀತಿ ಗೌರವಗಳಿದ್ದರೂ ಸ್ನೇಹಿತನನ್ನು ಬಿಟ್ಟುಕೊಡುವುದಕ್ಕೆ ಇವನು ಇಷ್ಟು ಹಿಂಜರಿಯುವುದು ಯಾತಕ್ಕಾಗಿ? ಇದೇ ರೀತಿ ಅನೇಕ ಗಂಡಸರು ತಮ್ಮ ತಾಯಿ, ಸೋದರ, ಸ್ನೇಹಿತ, ಹೀಗೆ ಹಲವಾರು ಸಂಬಂಧಗಳನ್ನು ಹೆಂಡತಿಗಿಂತ ಹೆಚ್ಚು ವಹಿಸಿಕೊಳ್ಳುವುದನ್ನು ನಾವು ನಮ್ಮ ಸುತ್ತಲೂ ನೋಡಿದ್ದೇವೆ. ಈ ನಡವಳಿಕೆಯನ್ನು

ಪುರುಷರ ದೃಷ್ಟಿಕೋನದಿಂದ ಸಾಮಾಜಿಕ ಮತ್ತು ಮನೋವೈಜ್ಞಾನಿಕ ಹಿನ್ನೆಲೆಯಲ್ಲಿ ವಿಶ್ಲೇಷಿಸುವ ಬರಹಗಳ ಅವಶ್ಯಕತೆ ಈಗಿದೆ.

'ಗೃಹಭಂಗ'ದ ಸ್ತ್ರೀ ಪಾತ್ರಗಳು ಪಡುವ ಅನೇಕ ಬವಣೆಗಳಿಗೆ ಒಟ್ಟಾರೆ ಸಮಾಜದ ಆರ್ಥಿಕ ಏಳಿಗೆ, ಸ್ತ್ರೀಯರ ಆರ್ಥಿಕ ಸ್ವಾತಂತ್ರ್ಯ, ಸ್ತ್ರೀಯರ ಆರ್ಥಿಕ ಸ್ವಾವಲಂಬನೆ ಪರಿಹಾರಗಳಾಗಬಹುದೆಂದು ಹೇಳಬಹುದು. ಆದರೆ ಈ ಎಲ್ಲಾ ಸ್ವಾತಂತ್ರ್ಯಗಳೂ ಇರುವ ಹಾರ್ಪರ್ ಮತ್ತು ಡಾಫ್ನಿಯರ ಗಂಡಂದಿರೂ ಮಾನಸಿಕವಾಗಿ ಭಾವನಾತ್ಮಕವಾಗಿ ಅವರಿಗೆ ಹತ್ತಿರವಾಗಿಲ್ಲ. ಸ್ತ್ರೀ ಸ್ವಾತಂತ್ರ್ಯವನ್ನು ಸಾಧಿಸಲು ಸ್ತ್ರೀಯರಿಗೆ ಆರ್ಥಿಕ ಸ್ವಾವಲಂಬನೆ ಸಾಧ್ಯವಾಗಬೇಕು ಎಂಬುದನ್ನು ನಾವೆಲ್ಲರೂ ಒಪ್ಪುತ್ತೇವೆ. ಆದರೆ ಇದೊಂದರಿಂದಲೇ ಸ್ತ್ರೀ–ಪುರುಷರ ನಡುವಿನ ಸಮಾನತೆಯನ್ನು ಸಾಧಿಸಲು ಸಾಧ್ಯವಿಲ್ಲ. ಇದರಿಂದ ಪುರುಷರಿಂದ ಹೆಣ್ಣಿಗಾಗಬಹುದಾದ ಶೋಷಣೆಯನ್ನು ಒಂದು ಘಟ್ಟದವರೆಗೆ ನಿವಾರಿಸಬಹುದು. ಆದರೆ ಯಾವತ್ತಿನವರೆಗೆ ಪುರುಷರ ಮನಸ್ಸಿನಲ್ಲಿ ಹೆಣ್ಣಿನ ಬಗ್ಗೆ ಅವರು ತಮಗೆ ಸರಿಸಮಾನರು ಎಂಬ ತಿಳಿವಳಿಕೆ ಬರುವುದಿಲ್ಲವೋ, ಅಲ್ಲಿಯವರೆಗೆ ಸಮಾನತೆಯು ಸಂವಿಧಾನಗಳಲ್ಲಿ ಬರೆದಿಟ್ಟಿರುವ ತೋರಿಕೆಯ ಮಾತಾಗಿ ಮಾತ್ರ ಇರುತ್ತದೆ.

ಸ್ತ್ರೀ–ಪುರುಷರ ನಡುವಿನ ಅಸಮಾನತೆ ಕೇವಲ ವೈಯಕ್ತಿಕ ಸಂಬಂಧಗಳ ಮೇಲೆ ಪ್ರಭಾವ ಬೀರುವುದಿಲ್ಲ, ಎಲ್ಲ ಕಾರ್ಯಕ್ಷೇತ್ರಗಳಲ್ಲಿ ಪುರುಷರೇ ಪ್ರಧಾನವಾಗಿರುವಾಗ, ಉನ್ನತ ಸ್ಥಾನಗಳಲ್ಲಿರುವಾಗ, ಸ್ತ್ರೀಯರಿಗೆ ಉದ್ಯೋಗಗಳಲ್ಲಿಯೂ ಈ ಅಸಮಾನತೆಯ ಕಾರಣ ಅನೇಕ ಸವಾಲುಗಳು ಎದುರಾಗುತ್ತವೆ. ಪುರುಷರಷ್ಟೇ ವಿದ್ಯಾಭ್ಯಾಸ, ಅನುಭವ ಇರುವ ಸ್ತ್ರೀಯರಿಗೆ ಅದೇ ಉದ್ಯೋಗಕ್ಕೆ ಪುರುಷರಿಗಿಂತ ಕಡಿಮೆ ಸಂಬಳವಿರುತ್ತದೆ. ಅಮೇರಿಕಾದಲ್ಲಿ ಸಿಈಓ ಸ್ಥಾನಗಳಲ್ಲಿ 'ಜಾನ್' ಎಂಬ ಹೆಸರಿರುವ ಪುರುಷರ ಸಂಖ್ಯೆಯು ಇದೇ ಸ್ಥಾನದಲ್ಲಿರುವ ಒಟ್ಟು ಸ್ತ್ರೀಯರ ಸಂಖ್ಯೆಗಿಂತ ಹೆಚ್ಚಿದೆ ಎಂದು ತೋರಿಸಿದ್ದಾರೆ. ಇಲ್ಲಿಯವರೆಗೆ ಜ್ಞಾನಪೀಠ ಪ್ರಶಸ್ತಿ ಪಡೆದಿರುವ ಬರಹಗಾರ್ತಿಯರ ಸಂಖ್ಯೆ ಕೇವಲ ಎಂಟು. ನೂರಿಪ್ಪತ್ತಕ್ಕೂ ಹೆಚ್ಚು ವರ್ಷಗಳ ಇತಿಹಾಸವಿರುವ, ಇಲ್ಲಿಯವರೆಗೆ ಒಂಭೈನೂರಕ್ಕೂ ಹೆಚ್ಚು ಮಂದಿ ಗಳಿಸಿರುವ ನೊಬೆಲ್ ಪ್ರಶಸ್ತಿಗಳಲ್ಲಿ ಈ ಪ್ರಶಸ್ತಿಯನ್ನು ಗಳಿಸಿರುವ ಮಹಿಳೆಯರ ಸಂಖ್ಯೆ ಕೇವಲ ಅರವತ್ತು. ಮನೆಗೆಲಸಗಳನ್ನು ಮಾಡಿ, ಹೊರಗೆ ಉದ್ಯೋಗವನ್ನೂ ಮಾಡಿ, ಮಕ್ಕಳನ್ನೂ ಹೆತ್ತು ಅವರನ್ನು ನೋಡಿಕೊಳ್ಳುವುದಕ್ಕೆ ಅತ್ಯಧಿಕ ಸಮಯವನ್ನು ಮುಡಿಪಾಗಿಡುವ ಜವಾಬ್ದಾರಿಗಳು ಸ್ತ್ರೀಯರ ಮೇಲಿದ್ದು, ಅನೇಕ ಸ್ತ್ರೀಯರು ಅದರಲ್ಲೂ ಚಿಕ್ಕ ಮಕ್ಕಳಿಗೆ ತಾಯಿಯಾಗಿರುವವರು ತಮ್ಮ ಉದ್ಯೋಗಗಳನ್ನು ಬಿಟ್ಟುಕೊಡುವುದು ಸಾಮಾನ್ಯವಾಗಿಬಿಟ್ಟಿದೆ. ಇಪ್ಪತ್ತೊಂದನೆಯ ಶತಮಾನದಲ್ಲಿ ಇದಷ್ಟೇ ಅಲ್ಲದೆ ವೃತ್ತಿಜೀವನದಲ್ಲಿ ಮಹಿಳೆಯರ ಬೆಳವಣಿಗೆಯು ಕುಂಠಿತವಾಗುವುದಕ್ಕೆ ಕಾರಣಗಳ್ಯಾವುವು ಎಂಬ ಬಗ್ಗೆ ಅನೇಕ ಚರ್ಚೆಗಳು, ಚಿಂತನೆಗಳು ನಡೆದಿವೆ.

ವಿದ್ಯಾಭ್ಯಾಸ ಮುಗಿಸಿ ಉದ್ಯೋಗ ಪ್ರಾರಂಭಿಸಿ ತಮ್ಮ ವೃತ್ತಿಗಳಲ್ಲಿ ಉನ್ನತಿಯನ್ನು ಪಡೆಯಲು ಪ್ರಯತ್ನಪಡುವ ಸಮಯದಲ್ಲೇ ತಮಗೆ ತಕ್ಕವನಾದ ಗಂಡನನ್ನು ಆರಿಸಿ,

ಮಕ್ಕಳನ್ನೂ ಹೆತ್ತು ಸಂಸಾರವನ್ನು ಬೆಳೆಸುವುದನ್ನೂ ಒಟ್ಟಿಗೇ ಮಾಡಬೇಕಾಗಿರುವುದರಿಂದ ಇಂದಿನ ಯುವತಿಯರ ಮೇಲಿರುವ ಒತ್ತಡವು ಅತ್ಯಧಿಕವಾಗಿದೆ. ಇವೆಲ್ಲದರೊಂದಿಗೆ ಅಮೇರಿಕಾದಲ್ಲಿ ಅಬಾರ್ಷನ್ ಹಕ್ಕುಗಳು, ಮೈಬಣ್ಣದ ಆಧಾರದ ಮೇಲೆ ನಡೆಯುವ ಪಕ್ಷಪಾತದ ವಿರುದ್ಧ, ಸ್ತ್ರೀಯರ ಮೇಲೆ ನಡೆಯುವ ಅನ್ಯಾಯ ದೌರ್ಜನ್ಯಗಳ ವಿರುದ್ಧ ಚಳವಳಿಗಳಲ್ಲೂ ಭಾಗವಹಿಸಬೇಕಾಗಿದೆ. ಇವೆಲ್ಲದರೊಂದಿಗೆ ಹವಾಮಾನ ಬದಲಾವಣೆಗೆ ಸಂಬಂಧಿಸಿದ ಚಳವಳಿಗಳನ್ನೂ ಸೇರಿಸಿದರೆ, ಇಂದಿನ ಯುವ ಪೀಳಿಗೆಯ ಮೇಲೆ ಹಿಂದೆಂದೂ ಇರದಷ್ಟು ಗಂಭೀರವಾದ ಒತ್ತಡವಿರುವುದು ಕಾಣುತ್ತದೆ. ಆದರೆ ಇಲ್ಲಿರುವ ಸೋಜಿಗದ ವಿಷಯವೆಂದರೆ, ಇವೇ ಒತ್ತಡಗಳು ಗಂಡು ಮಕ್ಕಳ ಮೇಲೂ ಇವೆ, ಆದರೆ ಅವರ ವೃತ್ತಿಜೀವನದ ಬೆಳವಣಿಗೆ ಈ ಕಾರಣಗಳಿಂದ ಕುಂಠಿತವಾಗುವುದಿಲ್ಲ. ಚಿಕ್ಕಮಕ್ಕಳಿರುವ ತಂದೆಗೆ ಕೆಲಸ ಕೊಡಲು ಯಾರೂ ಹಿಂಜರಿಯುವುದಿಲ್ಲ, ಆದರೆ ಚಿಕ್ಕಮಕ್ಕಳಿರುವ ತಾಯಿಗೆ ಕೆಲಸ ಕೊಡಲು ಹಿಂಜರಿಕೆಯಿದೆ. ಈ ರೀತಿಯ ತಾರತಮ್ಯ ತೋರಿಸುವುದು ತಪ್ಪೆಂದು ಕಾನೂನುಗಳಿದ್ದರೂ ಈ ನಡವಳಿಕೆಯು ಇನ್ನೂ ಜಾರಿಯಲ್ಲಿದೆ. ಇದನ್ನು ನಿವಾರಿಸಲು ಮಾಡಬೇಕಾದ ಬದಲಾವಣೆಗಳನ್ನು ಜಾರಿಗೆ ತರಲು ಅನೇಕ ಕಂಪನಿಗಳು ಪ್ರಯತ್ನಿಸುತ್ತಿವೆ. ಈ ಶತಮಾನದಲ್ಲಿ ಉದ್ಯೋಗ ಕ್ಷೇತ್ರದಲ್ಲಿ ಆಗಬೇಕಾಗಿರುವ ಅನೇಕ ಸ್ತ್ರೀಪರ ಬದಲಾವಣೆಗಳಲ್ಲಿ ಇದೂ ಒಂದಾಗಿದೆ.

ಅಮೇರಿಕಾದಲ್ಲಿ 'Girls Who Code' ಎಂಬ ಸಂಸ್ಥೆಯನ್ನು ಸ್ಥಾಪಿಸಿರುವ ಭಾರತೀಯ ಮೂಲದ ಸ್ತ್ರೀವಾದಿ, ರೇಶ್ಮ ಸೌಜಾನಿ ಇತ್ತೀಚೆಗೆ ಮಾಡಿದ ಒಂದು ಭಾಷಣದಲ್ಲಿ, ಮಹಿಳೆಯರೇ ಉದ್ಯೋಗ ಸಂದರ್ಶನಗಳ ಸಮಯದಲ್ಲಿ ಸಮಪ್ರಮಾಣದ ಸಂಬಳಗಳಿಗಾಗಿ ತಮ್ಮ ಮೇಲಧಿಕಾರಿಗಳೊಂದಿಗೆ ಸಮಾಲೋಚಿಸಬೇಕು ಎಂಬ ಒತ್ತಡವನ್ನು ಅವರ ಮೇಲೆ ಹೇರಬಾರದು ಎಂದು ಹೇಳಿದ್ದಾರೆ. ಬದಲಾಗಿ, ಕಂಪನಿಗಳು ತಾವಾಗಿಯೇ ಸ್ತ್ರೀಪುರುಷರಿಬ್ಬರಿಗೂ ಸಮಾನವಾದ ಸಂಬಳಗಳನ್ನು ಕೊಡುವ ಯೋಜನೆಯನ್ನು ಹಾಕಿಕೊಳ್ಳಬೇಕು ಎಂದು ಹೇಳಿದ್ದಾರೆ. ಸಮಾನಾವಕಾಶವನ್ನು ಬಯಸಿರುವ ಸ್ತ್ರೀಯರೆಲ್ಲರಿಗೂ ಮೊದಲಿನಿಂದಲೂ 'ಪುರುಷರು ಮಾಡುವ ಕೆಲಸಗಳನ್ನೆಲ್ಲಾ ಸ್ತ್ರೀಯರೂ ಸ್ವತಂತ್ರವಾಗಿ ಮಾಡಿ ತೋರಿಸಬೇಕು' ಎಂಬ ಒತ್ತಡವನ್ನು ಹೇರಲಾಗಿದೆ. ಎಷ್ಟೋ ಸಂದರ್ಭಗಳಲ್ಲಿ ಸ್ತ್ರೀಯರಿಗೆ ಅನೇಕ ಕೆಲಸಗಳನ್ನು ಕೊಡುವ ಪರಿಪಾಠವೇ ಇಲ್ಲದೆ, ಇತ್ತ ಕೆಲಸಗಳನ್ನು ಮಾಡುವ ಅವಕಾಶವಿಲ್ಲದೆ, ಅತ್ತ ಈ ಕೆಲಸಗಳನ್ನು ಮಾಡದೆ ಸ್ವಾತಂತ್ರ್ಯವನ್ನೂ ಸಾಧಿಸಲಾಗದೆ ಮಹಿಳೆಯರು ಒದ್ದಾಡಿದ್ದಾರೆ. ಉದ್ಯೋಗದ ರಂಗದಲ್ಲೂ ಸ್ತ್ರೀಪರವಾದ ಬದಲಾವಣೆಗಳನ್ನು ಕಾಣಲು ಪುರುಷರ ದೃಷ್ಟಿಕೋನವು ಬದಲಾಗಬೇಕಾಗಿದೆ. ಆದರೆ ಇದಕ್ಕಾಗಿ ಕಾಯುತ್ತಾ ಕುಳಿತುಕೊಳ್ಳದೆ, ಅಧಿಕ ಸಂಖ್ಯೆಯಲ್ಲಿ ಮಹಿಳಾ ನೇತಾರರನ್ನು ಬೆಳೆಸಲು ಅನೇಕ ಸ್ತ್ರೀ ನೇತೃತ್ವದ ಸಂಸ್ಥೆಗಳು ಶ್ರಮಿಸುತ್ತಿವೆ.

ಸ್ತ್ರೀಪರವಾದ ಬರಹಗಳು, ಚಲನಚಿತ್ರಗಳು, ವಿಡಿಯೋಗಳು, ಇವೆಲ್ಲವನ್ನೂ ಇಲ್ಲಿಯವರೆಗೆ ಹೆಚ್ಚಾಗಿ ಮಹಿಳೆಯರೇ ಬರೆದಿದ್ದಾರೆ ಅಥವಾ ನಿರ್ಮಿಸಿದ್ದಾರೆ. ಇದಕ್ಕೆ

ಒಂದು ಕಾರಣ ಮಹಿಳೆಯರಿಗೆ ತಮ್ಮ ಹಕ್ಕುಗಳನ್ನು ಅರ್ಥಮಾಡಿಕೊಳ್ಳಲು ಪ್ರೇರೇಪಿಸುವುದು. ಮಹಿಳೆಯರಾಗಲೀ ಪುರುಷರಾಗಲೀ ಯಾರೇ ಆಗಿರಲಿ, ತಮ್ಮ ಹಕ್ಕುಗಳ ಬಗ್ಗೆ ಮಾಹಿತಿ, ತಿಳಿವಳಿಕೆ ಇಲ್ಲದಿದ್ದರೆ ಅವರ ಜೀವನ ಸುಧಾರಿಸುವುದು ಸಾಧ್ಯವಾಗುವುದಿಲ್ಲ. ಅಲ್ಲದೆ, ಜೀವನದಲ್ಲಿ ನಡೆಯುವ ಘಟನೆಗಳಲ್ಲಿ ಯಾವುವು ಸ್ತ್ರೀಯರ ಹಕ್ಕುಗಳನ್ನು ಉಲ್ಲಂಘಿಸುತ್ತಿವೆ ಎಂಬುದರ ಬಗ್ಗೆ ತಿಳಿವಳಿಕೆ ಸ್ತ್ರೀಯರಿಗೇ ಇರದಿದ್ದರೆ, ಅವರು ಈ ಹಕ್ಕುಗಳು ತಮ್ಮ ಜೀವನಕ್ಕೆ ಒದಗಿಸುವ ಸೌಕರ್ಯಗಳನ್ನು ಉಪಯೋಗಿಸಿಕೊಳ್ಳುವ ಅವಕಾಶವನ್ನು ಕಳೆದುಕೊಳ್ಳಬಹುದು. ಸ್ತ್ರೀ ಎಂಬ ಕಾರಣಕ್ಕೆ ಮನೆಕೆಲಸ ಮತ್ತು ಮಕ್ಕಳು ಮಾತ್ರ ಅವರ ಜವಾಬ್ದಾರಿ, ಬೇರೆ ಯಾವ ಕೆಲಸವನ್ನೂ ಮಾಡಲು ಸ್ತ್ರೀಯರು ಅರ್ಹರಲ್ಲ ಎಂಬ ನಂಬಿಕೆಯಿದ್ದ ಕಾಲದಿಂದ ನಾವಿಂದು ಬಹು ದೂರ ಬಂದಿದ್ದೇವೆ. ಆದರೆ ಸ್ತ್ರೀಯರು ಮಾತ್ರ ಸಮಾನತೆಯನ್ನು ಸಾಧಿಸುವ ಕೆಲಸಗಳನ್ನು ಮಾಡಬೇಕು ಎಂಬುದು ತಪ್ಪಾದ ಕಲ್ಪನೆ. ಇದರಲ್ಲಿ ಪುರುಷರ ಸಹಭಾಗಿತ್ವವೂ ಮುಖ್ಯವಾಗಿದೆ. ಆಧುನಿಕ ಸಮಾಜದಲ್ಲಿ ಸ್ತ್ರೀಯರು ಎದುರಿಸುವ ತಾರತಮ್ಯಗಳನ್ನು ಅರ್ಥಮಾಡಿಕೊಂಡು ಸ್ತ್ರೀಪರ ಧೋರಣೆಯನ್ನು ಬೆಳೆಸಿಕೊಳ್ಳುವ ಸವಾಲು ಇಪ್ಪತ್ತೊಂದನೆಯ ಶತಮಾನದಲ್ಲಿ ಪುರುಷರ ಮುಂದಿದೆ.



# ವೀಣಾ ಶಾಂತೇಶ್ವರ ಮತ್ತು ವೈದೇಹಿ ಅವರ ಕತೆಗಳ ಸ್ತ್ರೀ ಪಾತ್ರಗಳು

**ಶಂಕರ ಹೆಗಡೆ**
Naperville, Illinois

*

ವೀಣಾ ಶಾಂತೇಶ್ವರ ಮತ್ತು ವೈದೇಹಿ ಇಬ್ಬರೂ ಪ್ರಮುಖ ಸ್ತ್ರೀವಾದಿ ಲೇಖಕರು. ಇಬ್ಬರೂ ಕನ್ನಡ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಗಣನೀಯ ಕೃಷಿ ಮಾಡಿದ್ದರೂ ಸಣ್ಣಕತೆಗಳ ಕ್ಷೇತ್ರದಲ್ಲಿ ಹೆಸರು ಮಾಡಿದವರು. ಇವರ ಬಹುಮಟ್ಟಿನ ಸಣ್ಣ ಕತೆಗಳು ಹೆಣ್ಣನ್ನೇ ಕೇಂದ್ರವಾಗಿಟ್ಟುಕೊಂಡು ಅವಳ ವ್ಯಕ್ತಿತ್ವದ ವಿವಿಧ ಮುಖಗಳನ್ನು ಅನಾವರಣಗೊಳಿಸುತ್ತ ಜೀವನದ ಹಲವು ಮೂಲಭೂತ ಪ್ರಶ್ನೆಗಳನ್ನು ಚರ್ಚಿಸುತ್ತವೆ. ಪುರುಷ ಪ್ರಧಾನ ಸಾಮಾಜಿಕ ವ್ಯವಸ್ಥೆಯಲ್ಲಿ ಸ್ತ್ರೀಯರು ಅನುಭವಿಸುತ್ತಿರುವ ದೈಹಿಕ ಮತ್ತು ಮಾನಸಿಕ ನೋವುಗಳನ್ನು ನೇರವಾಗಿ, ಅಥವಾ ಸೂಚಿತವಾಗಿ ಚಿತ್ರಿಸುತ್ತವೆ. ಈ ಲೇಖಕಿಯರ ಹೆಚ್ಚಿನ ಕತೆಗಳು ಹಿಂದಿನ ಶತಮಾನದ 60ರಿಂದ 90ರ ದಶಕಗಳಲ್ಲಿ ಬರೆದವುಗಳು. ವೀಣಾ ಶಾಂತೇಶ್ವರ ಅವರ ಮೊದಲ ಕಥಾಸಂಕಲನ "ಮುಳ್ಳುಗಳು" ಪ್ರಕಟವಾದದ್ದು 1968ರಲ್ಲಾದರೆ, ವೈದೇಹಿಯವರ ಮೊದಲ ಕಥಾಸಂಕಲನ "ಮರ ಗಿಡ ಬಳ್ಳಿ" 1979 ರಲ್ಲಿ ಪ್ರಕಟವಾಯಿತು. ವೈದೇಹಿಯವರ ಕತೆಗಳ ಸಂಖ್ಯೆಗೆ ಹೋಲಿಸಿದರೆ ವೀಣಾ ಅವರು ಪ್ರಕಟಿಸಿದ ಕತೆಗಳ ಸಂಖ್ಯೆ ಅರ್ಧಕ್ಕಿಂತ ಕಡಿಮೆ. ಆದರೂ ಇಬ್ಬರೂ ಕನ್ನಡ ಸಾಹಿತ್ಯದಲ್ಲಿ ಎಬ್ಬಿಸಿದ ಅಲೆ, ಉಂಟುಮಾಡಿದ ಪರಿಣಾಮ ಅಗಾಧವಾದುದು.

ಈ ಲೇಖಕಿಯರ ಕತೆಗಳನ್ನು ಕುರಿತು ಹಲವು ಹಿರಿಯ ವಿಮರ್ಶಕರು ಸುಮಾರು 15-20 ವರ್ಷಗಳ ಹಿಂದೆಯೇ ವಿವಿಧ ಮುಖಗಳಿಂದ ಸಾಕಷ್ಟು ವಿಶದವಾಗಿ ಚರ್ಚಿಸಿದ್ದಾರೆ. ಕಾಲು ಶತಮಾನದ ನಂತರ ಈ ಕತೆಗಳ ಬಗ್ಗೆ ಬರೆಯುವಲ್ಲಿ ಒಬ್ಬ ಸಾಮಾನ್ಯ ಓದುಗನಾದ ನನ್ನ ಉದ್ದೇಶವೇನು ಎಂಬ ಪ್ರಶ್ನೆ ಸಹಜವಾಗಿಯೇ ಉದ್ಭವಿಸುತ್ತದೆ. ನನ್ನ ಕುತೂಹಲ ಇಷ್ಟೇ: ಇಂದಿನ 21ನೇ ಶತಮಾನದಲ್ಲಿ ಸ್ತ್ರೀಯರ ಸ್ಥಿತಿ-ಗತಿ ಈ ಕತೆಗಳಲ್ಲಿ ಇರುವುದಕ್ಕಿಂತ ಹೆಚ್ಚು ಸುಧಾರಿಸಿದೆಯೇ? ಸುಧಾರಿಸಿದ್ದರೆ 20ನೇ ಶತಮಾನದ ಈ ಕತೆಗಳು ಮತ್ತು ಇತರ ಸ್ತ್ರೀಸಂವೇದನಾ ಕತೆಗಳು ಎಷ್ಟರಮಟ್ಟಿಗೆ ಪರಿಣಾಮ ಮಾಡಿವೆ? ಸರಿಸುಮಾರು ಅರ್ಧ ಶತಮಾನದಿಂದ ದೇಶದಿಂದ ಹೊರಗೆ ವಾಸಿಸುತ್ತಿರುವ ನಾನು ಈ ಪ್ರಶ್ನೆಗಳಿಗೆ ನಿಖರವಾಗಿ ಉತ್ತರಿಸಲಾರೆ. ಬದಲಿಗೆ ಈ ಲೇಖನದಲ್ಲಿ ವೀಣಾ ಮತ್ತು ವೈದೇಹಿಯವರ ಆಯ್ದ ಕತೆಗಳಲ್ಲಿ ಚಿತ್ರಿತವಾದ ಸ್ತ್ರೀ ಪಾತ್ರಗಳನ್ನು ನಾನು ಕಂಡಂತೆ ಪ್ರಸ್ತುತಪಡಿಸುವ ಪ್ರಯತ್ನ ಮಾಡಿದ್ದೇನೆ. ಇದು ಯಾವ ದೃಷ್ಟಿಯಿಂದಲೂ ಕತೆಗಳ ವಿಮರ್ಶೆಯಲ್ಲ ಎಂಬುದನ್ನು ಸ್ಪಷ್ಟಪಡಿಸುತ್ತೇನ. ಇದರಿಂದ, ಇಂದಿನ ಸಮಾಜದಲ್ಲಿ ಕರ್ನಾಟಕದ ಮಹಿಳೆಯರ ಸ್ಥಿತಿ-ಗತಿಗಳ ಆಳವಾದ ಪರಿಚಯ ಇರುವ ಓದುಗರು ಮೇಲಿನ ಪ್ರಶ್ನೆಗೆ ಉತ್ತರ ಕಂಡುಕೊಳ್ಳಲು ಸಹಾಯವಾಗಬಹುದು ಎಂಬುದು ನನ್ನ ಆಶಯ.

ವೈದ್ಯೆ ಮತ್ತು ಪ್ರಸಿದ್ಧ ಲೇಖಕಿ ಡಾ. ಎಚ್. ಎಸ್. ಅನುಪಮಾ ಅವರು ಇತ್ತೀಚೆಗೆ ಒಂದೆಡೆ "ಇಂದಿನ ಹೆಣ್ಣು ನೈಸರ್ಗಿಕ ಹೆಣ್ಣಲ್ಲ. ಸಮಾಜ ಗಂಡು, ಮತ್ತು ಹೆಣ್ಣು ಹೇಗಿರಬೇಕೆಂದು ಒಂದು ನಿರ್ದಿಷ್ಟ ಚೌಕಟ್ಟನ್ನು ನಿರ್ಮಿಸಿದೆ. ಹೆಣ್ಣು ಆ ಚೌಕಟ್ಟಿನಲ್ಲಿ ತುರುಕಿ, ತುರುಕಿ ಇಟ್ಟುಕೊಂಡುಬಿಟ್ಟಿದೆ" ಎನ್ನುತ್ತಾರೆ. ಬಹುಶಃ ಹಲವು ದೃಷ್ಟಿಯಿಂದ ಇದು ಇಂದಿಗೂ ಸತ್ಯ ಎನ್ನಿಸುತ್ತದೆ. ಈ ಚೌಕಟ್ಟೇ ಹೆಣ್ಣಿನ ಮೇಲಾಗುತ್ತಿರುವ ಶೋಷಣೆ, ದೌರ್ಜನ್ಯಗಳಿಗೆ ಮುಖ್ಯ ಕಾರಣ. ಒಂದು ಸಂಗತಿ ಅಂದರೆ ಇಂದು ಸ್ತ್ರೀಯರು ಹೆಚ್ಚು ಹೆಚ್ಚು ವಿದ್ಯಾವಂತರಾಗುತ್ತಿದ್ದಾರೆ. ಉದ್ಯೋಗಸ್ಥ ಮಹಿಳೆಯರ ಸಂಖ್ಯೆ ಹೆಚ್ಚಾಗುತ್ತಿದೆ. ಜೈವಿಕ ಮತ್ತು ತಾಂತ್ರಿಕ ತಂತ್ರಜ್ಞಾನಗಳಲ್ಲಿ ಆದ, ಅಗುತ್ತಿರುವ ಪ್ರಗತಿ ಕೂಡ ಜನಜೀವನದ ಮೇಲೆ ಸಾಕಷ್ಟು ಬದಲಾವಣೆ ತಂದಿದೆ. ಇದು ಸ್ತ್ರೀಯರ ಸ್ಥಿತಿ-ಗತಿಗಳ ಮೇಲೂ ಸ್ವಲ್ಪ ಮಟ್ಟಿಗಾದರೂ ಸುಧಾರಣೆ ತಂದಿದೆ ಎನ್ನಬಹುದು.

ವೀಣಾ ಶಾಂತೇಶ್ವರ ಮತ್ತು ವೈದೇಹಿ ಇಬ್ಬರೂ 1945ನೇ ಇಸ್ವಿ ಫೆಬ್ರುವರಿ ತಿಂಗಳಲ್ಲಿ 10 ದಿನಗಳ ಅಂತರದಲ್ಲಿ ಜನಿಸಿದವರು. ಆದರೂ ಇವರಿಬ್ಬರೂ ಬೆಳೆದ ವಾತಾವರಣ ಸಾಕಷ್ಟು ಭಿನ್ನವಾಗಿದೆ ಎನ್ನಬಹುದು. ವೀಣಾ ಅವರ ಜನನ ಬಾಗಲಕೋಟೆಯಲ್ಲಾಗಿದ್ದರೂ ಒಮ್ಮೆ ಕಾಲೇಜು ಶಿಕ್ಷಣಕ್ಕೆಂದು ಧಾರವಾಡಕ್ಕೆ ಬಂದ ಬಳಿಕ ಅಲ್ಲಿಯೇ ಖಾಯಂ ಆಗಿ ನೆಲೆಸಿದರು. ವೈದೇಹಿಯವರು ಕುಂದಾಪುರದಲ್ಲಿ ಜನಿಸಿ, ಅಲ್ಲಿಯೇ ಕಾಲೇಜು ಶಿಕ್ಷಣ ಪಡೆದು ವಿವಾಹವಾಗುವ ತನಕವೂ ಅಲ್ಲಿಯೇ ನೆಲೆಸಿದ್ದರು. ಮದುವೆಯ ನಂತರ ಕೆಲವರ್ಷ ಶಿವಮೊಗ್ಗೆಯಲ್ಲಿದ್ದು ಈಗ ಉಡುಪಿ-ಮಣಿಪಾಲ ಪ್ರದೇಶಕ್ಕೆ ವರ್ಗಾಯಿಸಿ-ದ್ದಾರೆನಿಸುತ್ತದೆ. ವೀಣಾ ಅವರ ತಂದೆ ಪ್ರೊಫೆಸರ್ ಮತ್ತು ಆಯುರ್ವೇದ ತಜ್ಞರಾಗಿದ್ದರೆ

ವೈದೇಹಿಯವರ ತಂದೆ ವಕೀಲರಾಗಿದ್ದರು. ಇಬ್ಬರ ತಾಯಂದಿರೂ ಸುಶಿಕ್ಷಿತ ಗೃಹಿಣಿಯರಾಗಿದ್ದರು. ಬೆಳೆಯುತ್ತಿದ್ದಾಗ ಅವರೇ ಕೆಲವೊಮ್ಮೆ ಹೇಳಿದಂತೆ ಇಬ್ಬರ ಮನೆಯಲ್ಲಿಯೂ ಸಾಹಿತ್ಯ ಪೋಷಕ ವಾತಾವರಣವಿದ್ದಿತು. ವೀಣಾ ಅವರು ಇಂಗ್ಲಿಷ್ ಸಾಹಿತ್ಯದಲ್ಲಿ ಉಚ್ಚ ಶಿಕ್ಷಣ ಪಡೆದು ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿಯೂ, ನಂತರ ಪ್ರಿನ್ಸಿಪಾಲರಾಗಿಯೂ ದುಡಿದವರು. ವೈದೇಹಿಯವರು ಕಾಲೇಜು ಡಿಗ್ರಿ ಪಡೆದಿದ್ದರೂ ವೃತ್ತಿ ಜೀವನಕ್ಕೆ ಇಳಿಯಲಿಲ್ಲ. ಅವರೇ ಸಂದರ್ಶನವೊಂದರಲ್ಲಿ ಹೇಳಿದಂತೆ ಇಂಗ್ಲಿಷ್ ಸಾಹಿತ್ಯವನ್ನು ಹೆಚ್ಚಾಗಿ ಅಭ್ಯಸಿಸಿದವರಲ್ಲ. ವೀಣಾರವರು ತಮ್ಮ ಬಾಲ್ಯವನ್ನು ನೆನಪಿಸಿಕೊಳ್ಳುತ್ತ, "ನನ್ನ ಕೌಟುಂಬಿಕ ಹಿನ್ನೆಲೆ, ಬಾಲ್ಯ, ಶಿಕ್ಷಣ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಪರಿಸರ ಇವುಗಳ ಬಗ್ಗೆ ಹಿಂದಿರುಗಿ ನೋಡಿದಾಗೆಲ್ಲ ನನ್ನ ಎಲ್ಲ ಸಮಕಾಲೀನ ಹೆಣ್ಣುಮಕ್ಕಳಿಗಿಂತ ನಾನು ಬಹಳಷ್ಟು ಹೆಚ್ಚಿನ ಅನುಕೂಲತೆಗಳನ್ನು ಹೊಂದಿದ್ದೆ ಎಂದು ಎನ್ನಿಸುತ್ತದೆ" ಎಂದು ಹೇಳಿದ್ದಾರೆ. ವೈದೇಹಿ ಅವರು ಆಗಾಗ ಮನೆಗೆ ಬರುತ್ತಿದ್ದ ಪರಿಚಯದ ಹೆಂಗಸರು, ತಂದೆಯ ಕಕ್ಷಿದಾರರು, ಹಾಲು, ಹೂವು, ಹಣ್ಣು ಮಾರಲು ಬರುತ್ತಿದ್ದವರು, ಎಲ್ಲರೊಂದಿಗೆ ಹತ್ತಿರದಿಂದ ಮಾತನಾಡಿ ಅವರ ಕತೆಗಳನ್ನು, ಕಷ್ಟ–ಸುಖಗಳನ್ನು ಆಸಕ್ತಿಯಿಂದ ಕೇಳುತ್ತ ಬೆಳೆದವರು. ವೈದೇಹಿಯವರ ಕಣ್ಣು, ಕಿವಿ ಮತ್ತು ನೆನಪಿನ ಶಕ್ತಿ ಅಗಾಧವಾದುದು. ವೈದೇಹಿಯವರಿಗೆ ಆತ್ಮೀಯ ಅಲ್ಲದಿರುವ ಅನುಭವವೇ ಇಲ್ಲ. ಬಾಲ್ಯದ ಆ ಎಲ್ಲ ನೆನಪುಗಳು ವೈದೇಹಿಯವರ ಮನದಲ್ಲಿ ಆಳವಾಗಿ ಅಚ್ಚೊತ್ತಿ ಕುಳಿತಿವೆ; ಅವು ಎಷ್ಟಿವೆಯೆಂದರೆ ಇಷ್ಟು ಕತೆಗಳನ್ನು ಬರೆದ ನಂತರವೂ ಇನ್ನೂ ಹಲವು ಕತೆಗಳಿಗೆ ಸಾಕಾಗುವಷ್ಟು ನೆನಪುಗಳು ಅಂತರಾಳದಲ್ಲಿ ಹುದುಗಿಕೊಂಡಿವೆ ಎನ್ನುತ್ತಾರೆ ಅವರು.

ವೀಣಾ ಅವರ ಕತೆಗಳು ಇಂದಿನ ಪೀಳಿಗೆಯ ತರುಣ ಮಹಿಳೆಯರ ಕತೆಗಳು. ಅವರ ಕಥಾನಾಯಕಿಯರು ಕಾಲೇಜು ಡಿಗ್ರಿ ಪಡೆದವರು. ಪಟ್ಟಣಗಳಲ್ಲಿ ವಾಸಿಸುವವರು. ಉದ್ಯೋಗಸ್ಥರು. ಎಲ್ಲ ಪಾತ್ರಗಳೂ ಸ್ವತಂತ್ರ ಮನೋಧರ್ಮದವರಾಗಿದ್ದು ಕೆಲಮಟ್ಟಿಗೆ ಸಂಪ್ರದಾಯದ ಕಟ್ಟು–ಕಟ್ಟಳೆಗಳನ್ನು ತಿರಸ್ಕರಿಸುತ್ತಿರುವವರು. ಕೆಲವರು ಕಾಲೇಜಿನಲ್ಲಿದ್ದಾಗಲೇ ಸ್ತ್ರೀ–ಸ್ವಾತಂತ್ರ್ಯಕ್ಕಾಗಿ ಹೋರಾಡಬೇಕೆಂದು ಮಹತ್ವಾಕಾಂಕ್ಷೆ ಇಟ್ಟುಕೊಂಡವರು. ಇವರ ಕತೆಗಳಲ್ಲಿ ಹೆಣ್ಣು ಮಾನಸಿಕ ಅಥವಾ ದೈಹಿಕವಾಗಿ ಶೋಷಣೆಗೆ ಒಳಗಾಗುವದು ಗಂಡು–ಹೆಣ್ಣಿನ ಲೈಂಗಿಕ ಸಂಬಂಧವನ್ನು ಕುರಿತದ್ದಾಗಿದೆ. ಇಲ್ಲಿ ಹೆಣ್ಣಿನ ಮೇಲೆ ದೌರ್ಜನ್ಯವಾಗುವುದು ಗಂಡನಿಂದ, ಅಥವಾ ಪ್ರೇಮಿಯಿಂದ, ಅಥವಾ ಇತರ ಗಂಡಸರಿಂದ. ಯಾವ ಕತೆಯೂ ತಂದೆ ಮತ್ತು ಮಗಳು ಅಥವಾ ತಾಯಿ ಮತ್ತು ಮಗ ಇವರ ನಡುವಿನ ಹಿಂಸೆಯ ಸಂಬಂಧ ಕುರಿತಾಗಿ ಇಲ್ಲ. ಪ್ರಸಿದ್ಧ ವಿಮರ್ಶಕ ಎಚ್. ಎಸ್. ರಾಘವೇಂದ್ರರಾವ್ ಅವರು ವೀಣಾ ಅವರ ಕತೆಗಳ ಬಗ್ಗೆ ಬರೆಯುತ್ತ "ಹೆಂಗಸರನ್ನು ಅವರು ಇರುವ ಹಾಗೆ, ಯಾರ ನಿರೀಕ್ಷೆಗಳಿಗೂ ತಲೆಬಗ್ಗದೆ, ಯಾವ ರಿಯಾಯಿತಿಗಳನ್ನೂ ತೋರಿಸದೆ ಚಿತ್ರಿಸಿದ್ದು ವೀಣಾ ಅವರ ಬಹುದೊಡ್ಡ ಸಾಧನೆ. ಅವರು ಆಧುನಿಕ ಕನ್ನಡ ಸಾಹಿತ್ಯದಲ್ಲಿ ಮೊದಲಬಾರಿಗೆ ದೇಹ, ಭಾವನೆ, ವಿಚಾರಗಳು ಮತ್ತು ತಾತ್ವಿಕತೆ ಎಲ್ಲವೂ ಒಟ್ಟಾಗಿ ಇರುವ, ಏಕಕಾಲದಲ್ಲಿ

ಇರುವ ಹೆಣ್ಣುಗಳನ್ನು ಕಟ್ಟಿಕೊಟ್ಟರು" ಎಂದಿದ್ದಾರೆ. ವೀಣಾ ಅವರ ಕತೆಗಳಲ್ಲಿ ಘಟನೆಗಳ ವಿವರಕ್ಕಿಂತ ಹೆಚ್ಚಾಗಿ ಸ್ತ್ರೀಯರ ಮಾನಸಿಕ ಸ್ಥಿತಿ, ಆತ್ಮಶೋಧನೆಯ ವಿವರ ಹೆಚ್ಚು ಕಾಣುತ್ತದೆ.

ವೀಣಾ ಅವರ ಕತೆಗಳಿಗೆ ವಿರುದ್ಧವಾಗಿ ವೈದೇಹಿಯವರ ಹಲವು ಕತೆಗಳು ತನ್ನ ಹಿಂದಿನ ಪೀಳಿಗೆಯ ಹೆಂಗಸರನ್ನು ಚಿತ್ರಿಸುತ್ತವೆ. ವೈದೇಹಿಯವರ ಬಹುಮಟ್ಟಿನ ಪಾತ್ರಗಳು, ಅವರ ಚಿಕ್ಕಂದಿನಲ್ಲಿ ಒಡನಾಡಿದ ಸ್ತ್ರೀಯರು. ಇವರೆಲ್ಲ "ಸಾಮಾನ್ಯರಲ್ಲಿ ಅಸಾಮಾನ್ಯರು". ಇವರು ಉಚ್ಚ ಶಿಕ್ಷಣ ಪಡೆದು ವೃತ್ತಿಜೀವನದಲ್ಲಿರುವ, ಅಥವಾ ವಿಶೇಷ ಸಾಧನೆ ಮಾಡಿದ ಮಹಿಳೆಯರಲ್ಲ. ಆದರೆ ಅವರು ತಮ್ಮ ಚೈತನ್ಯಶೀಲತೆ, ಧಾರಣಾಶಕ್ತಿಗಳಿಂದಾಗಿ ಅಸಾಮಾನ್ಯ ಮಹಿಳೆಯರಾಗಿ ಎದ್ದು ಕಾಣುತ್ತಾರೆ. ವೈದೇಹಿಯವರ ಬಹಳಷ್ಟು ಪಾತ್ರಗಳು ಮಾತನಾಡುವುದು ಕುಂದಾಪುರದ ಗ್ರಾಮ್ಯ ಭಾಷೆ. ಈ ಕತೆಗಳ ನಿಜವಾದ ಸ್ವಾರಸ್ಯವನ್ನು ಅನುಭವಿಸಬೇಕಾದರೆ ಧ್ವನಿ ತೆಗೆದು ಓದಬೇಕು. ಸಾಧ್ಯವಾದರೆ ಪಾತ್ರಗಳ ಮಾತಿನ ಜೊತೆ ಅವರು ಮಾಡಿರಬಹುದಾದ ಹಾವ-ಭಾವಗಳನ್ನು ಊಹಿಸಿಕೊಳ್ಳಬೇಕು. "ಕತೆ ಬರೆಯುವಾಗ ಪಾತ್ರಗಳು ಕಣ್ಣ ಮುಂದೆ ಬರಬೇಕಾದರೆ ಅವರ ಭಾಷೆಯೇ ಬೇಕು. ಇಲ್ಲದಿದ್ದರೆ ಅವರು ಕಣ್ಣಮುಂದೆ ಬರುವುದಿಲ್ಲ" ಎನ್ನುತ್ತಾರೆ ವೈದೇಹಿಯವರು.

ವೈದೇಹಿಯವರು ಚಿತ್ರಿಸಿದ ಸ್ತ್ರೀಪಾತ್ರಗಳಲ್ಲಿ ಬಾಲಕಿಯರಿದ್ದಾರೆ, ಯುವತಿಯರಿದ್ದಾರೆ, ಮದುವೆಯಾಗದ ಮತ್ತು ಆಗ ತಾನೆ ಮದುವೆಯಾದ ಮಹಿಳೆಯರಿದ್ದಾರೆ. ಗೃಹಿಣಿಯರಿದ್ದಾರೆ. ತಾಯಿ, ಮಗಳು, ಅತ್ತೆ, ಸೊಸೆ, ಅಜ್ಜಿಯರಿದ್ದಾರೆ. ಸಾಯುವ ಅಂಚಿನಲ್ಲಿರುವ ಮುದಿ ವಯಸ್ಸಿನ ಮಹಿಳೆಯರೂ ಇದ್ದಾರೆ. ಆಶಾವಾದಿಗಳಿದ್ದಾರೆ. ಸಮಾಜದ ವರ್ತನೆಯಿಂದ ನಿರಾಶೆಗೊಂಡವರಿದ್ದಾರೆ. ವೈದೇಹಿಯವರು ತಮ್ಮ ಪಾತ್ರಗಳ ಅಂತರಂಗಕ್ಕೆ ಪಾತಾಳಗರಡಿ ಹಾಕಿ ಅವರ ಅಂತರಂಗದ ಸೂಕ್ಷ್ಮಾತಿಸೂಕ್ಷ್ಮ ಭಾವನೆಗಳನ್ನು ಹೊರತರುತ್ತಾರೆ. ಇಷ್ಟು ಪದರು-ಪದರಾಗಿ ಸ್ತ್ರೀ ಪಾತ್ರಗಳನ್ನು ಅನಾವರಣಗೊಳಿಸಿದ ಇತರ ಲೇಖಕ, ಲೇಖಕಿಯರು ಇಲ್ಲವೆಂದರೆ ಅತಿಶಯೋಕ್ತಿಯಲ್ಲ.

ವೀಣಾ ಮತ್ತು ವೈದೇಹಿಯವರ ಕತೆಗಳ ಉದ್ದೇಶ ಪುರುಷಪ್ರಧಾನ ಸಮಾಜ ಸ್ತ್ರೀಯರ ಸ್ವತಂತ್ರ ಅಸ್ತಿತ್ವ, ಆಶೋತ್ತರಗಳನ್ನು ಹಿಂದಕ್ಕೆ ದಬ್ಬಿ, ಅವರ ಮೇಲೆ ತಿಳಿದೋ, ತಿಳಿಯದೆಯೋ ಎಸಗುತ್ತಿರುವ ದೌರ್ಜನ್ಯವನ್ನು ಬಯಲಿಗೆಳೆಯುವುದು. ಗಂಡು ಹೆಣ್ಣುಗಳಲ್ಲಿರುವ ಜೈವಿಕ ಭೇದವು ಸಾಮಾಜಿಕ ಅಸಮಾನತೆಗೆ ದಾರಿ ಮಾಡಿಕೊಟ್ಟಿರುವ ಸಾಮಾಜಿಕ ನಡೆವಳಿಗಳನ್ನು ಚಿತ್ರಿಸುವುದು. ಇದನ್ನು ವೈದೇಹಿಯವರ ಕತೆಗಳು, ವೀಣಾರ ಕತೆಗಳಂತೆ ನೇರವಾಗಿ ಮಾಡದೆ, ದೈನಂದಿನ ಬದುಕಿನ ಸಣ್ಣ ಸಣ್ಣ ವಿವರಗಳಲ್ಲಿ ಓದುಗರಿಗೆ ಅರಿವಾಗುವಂತೆ ಮಾಡುತ್ತಾರೆ. ವೀಣಾ ಅವರ ಕತೆಗಳನ್ನು ಓದುತ್ತಿದ್ದಂತೆ ಅವರು ಪುರುಷದ್ವೇಷಿಯೋ ಎಂಬಂತೆ ಭಾಸವಾಗುತ್ತದೆ. ಆದರೆ ವೀಣಾ ಅವರು ಅದನ್ನು ಅಲ್ಲಗಳೆಯುತ್ತಾರೆ. ವೈದೇಹಿ ಅವರ ಕತೆಗಳಲ್ಲಿ ಪುರುಷರ ಬಗ್ಗೆ ದ್ವೇಷವಾಗಲಿ, ಆಕ್ರೋಶವಾಗಲಿ ಕಾಣುವುದಿಲ್ಲ. ಪುರುಷರಿಂದ ಸ್ತ್ರೀಯರ ಮೇಲಾಗುತ್ತಿರುವ ದೌರ್ಜನ್ಯಗಳನ್ನು

ಮನದಟ್ಟು ಮಾಡಿ ಪ್ರೀತಿಯಿಂದ ಪುರುಷರನ್ನು ಬದಲಿಸಬೇಕೇ ಹೊರತು ವಿರೋಧಿಸಿ ಅಥವಾ ದ್ವೇಷಿಸಿ ಅಲ್ಲ ಎಂಬುದು ವೈದೇಹಿಯವರ ನಂಬಿಕೆ.

ಕತೆಗಳ ನಿರೂಪಣೆ ಮತ್ತು ಶೈಲಿಯಲ್ಲಿ ಇಬ್ಬರ ಕತೆಗಳು ಭಿನ್ನವಾಗಿದ್ದರೂ ಕೆಲವು ಸ್ತ್ರೀ ಪಾತ್ರಗಳ ದೃಷ್ಟಿಕೋನ, ಹಾಗೂ ಪುರುಷ ಪಾತ್ರಗಳ ಚಿತ್ರಣಗಳಲ್ಲಿ ಸಾಮ್ಯವನ್ನು ಕಾಣಬಹುದು. ಮುಂದಿನ ಪುಟಗಳಲ್ಲಿ ಎರಡೂ ಲೇಖಕಿಯರ ಆಯ್ದ ಕತೆಗಳನ್ನು ಸಂಕ್ಷಿಪ್ತವಾಗಿ ವಿವರಿಸುತ್ತಿದ್ದೇನೆ. ಹಾಗೆ ವಿವರಿಸುವಾಗ ನಾನು ಕಂಡ ಸಾಮ್ಯವನ್ನು ಎತ್ತಿ ತೋರಿಸುವ ಪ್ರಯತ್ನಮಾಡುತ್ತೇನೆ.

ವೀಣಾರ ಕಥೆಗಳ ಸ್ತ್ರೀ ಪಾತ್ರಗಳನ್ನು ಮದುವೆಯಾಗದವರು, ಮದುವೆಯಾಗಿ ಸಂಸಾರ ಮಾಡಿದವರು, ಹಾಗೂ ಮದುವೆಯ ಬಂಧನವಿಲ್ಲದೆ ತಾಯ್ತನದ ಬಯಕೆ ಹೊಂದಿದವರು ಎಂಬ ಮೂರು ಗುಂಪುಗಳಲ್ಲಿ ವಿಭಾಗಿಸಬಹುದು. ಈ ಎಲ್ಲ ಕತೆಗಳನ್ನು ಸಮಗ್ರವಾಗಿ ನೋಡಿದರೆ ಮದುವೆಯ ಚೌಕಟ್ಟಿನ ಒಳಗಿರಲಿ, ಅಥವಾ ಹೊರಗಿರಲಿ ಪುರುಷಪ್ರಧಾನ ಸಂಪ್ರದಾಯಸ್ಥ ಸಮಾಜದಲ್ಲಿ ಗಂಡು-ಹೆಣ್ಣಿನ ನಡುವೆ ನಿಜವಾದ ಸಮಾನತೆಯ, ಸೌಹಾರ್ದಮಯ ಸಹಬಾಳ್ವೆ ಎಂದಾದರೂ ಸಾಧ್ಯವೇ ಎಂದು ಲೇಖಕಿ ಪ್ರಶ್ನಿಸುವಂತಿದೆ.

ಮೊದಲನೆಯ ಗುಂಪಿಗೆ ಸೇರಿದ ಸ್ತ್ರೀಯರು ಪ್ರತ್ಯಕ್ಷವಾಗಿ ಗಂಡಸರ ಶೋಷಣೆಗೆ ಗುರಿಯಾಗಿಲ್ಲದಿದ್ದರೂ, ಯೌವನದಲ್ಲಿ ಗಂಡಸರ ಜೊತೆ ಆದ ನೋವಿನ ಅನುಭವದ ಫಲವಾಗಿ ಮದುವೆಯನ್ನು ತಿರಸ್ಕರಿಸಿದವರು. "ಮುಳ್ಳುಗಳು" ಕತೆ ಭಗ್ನಪ್ರೇಮಿಯೊಬ್ಬಳ ಹೊಯ್ದಾಡುವ ಮನಸ್ಸಿನ ಚಿತ್ರಣ. ಶಾಂತಿ ಸ್ವತಂತ್ರ ಮನೋಧರ್ಮದ ಯುವತಿ. ಕಾಲೇಜು ಲೆಕ್ಚರರ, ವಿದ್ಯಾರ್ಥಿನಿಯರ ಹಾಸ್ಟೆಲ್ಲಿನಲ್ಲಿ ವಾಸಿಸುತ್ತಿದ್ದಾಳೆ. ಪ್ರೇಮಿಯ ಸಂಪ್ರದಾಯಸ್ಥ, ಗೊಡ್ಡು ಮನೋಧರ್ಮ ತಿಳಿದ ಮೇಲೆ ಅವನ ಸಂಬಂಧ ಮುರಿದುಕೊಂಡಿದ್ದಾಳೆ. ಈಗೀಗ ಯಾವ ಗಂಡಸರನ್ನು ನೋಡಿದರೂ ಅವರ ದೃಷ್ಟಿ ಮುಳ್ಳಿನಂತೆ ಚುಚ್ಚುವ ಅನುಭವ ಆಗುತ್ತದೆ. ಆದರೂ ಗಂಡಸರ ಸಂಪರ್ಕವನ್ನು ಸಂಪೂರ್ಣ ನಿರಾಕರಿಸುವ ಧೈರ್ಯವೂ ಇಲ್ಲ. ಪುರುಷಪ್ರಧಾನ ಸಮಾಜದಲ್ಲಿ ಹೆಣ್ಣು ಸಂಪ್ರದಾಯಸ್ಥ ಪಾತ್ರವನ್ನು ಧಿಕ್ಕರಿಸಿ ಸ್ವತಂತ್ರವಾಗಿ ಜೀವಿಸಬೇಕು ಎಂದುಕೊಂಡರೂ ಪುರುಷರ ಸಂಪರ್ಕವನ್ನು ಸಂಪೂರ್ಣ ಕಡಿಯಲು ಅಸಾಧ್ಯ ಅನಿಸುತ್ತದೆ.

"ಅತಿಥಿ" ಕತೆ ಮಧ್ಯವಯಸ್ಸಿನ ಅವಿವಾಹಿತ, ಗಂಡಸರಿಂದ ಆಕರ್ಷಣೆ ಕಳೆದುಕೊಳ್ಳುತ್ತಿದ್ದ ಪುರುಷ ವಿರೋಧಿ ಮಹಿಳೆಯೊಬ್ಬಳ ಮಾನಸಿಕ ತುಮುಲದ ಚಿತ್ರಣ. ನಲವತ್ತೈದು ದಾಟಿರುವ ಪ್ರೊ. ಲೀಲಾಬಾಯಿ ಲೇಡೀಸ್ ಹಾಸ್ಟೆಲಿನ ವಾರ್ಡನ್. ವೃತ್ತಿಜೀವನದಲ್ಲಿ ಅಪಾರ ಗೌರವ ಪಡೆದವಳು. ಹಲವು ಸಭೆ-ಸಮಾರಂಭಗಳಿಗೆ ಅವಳನ್ನು ಅತಿಥಿಯಾಗಿ ಆಹ್ವಾನಿಸುತ್ತಾರೆ. ತನ್ನ ಸ್ವ-ಇಚ್ಛೆಯಿಂದ ಅವಿವಾಹಿತೆಯಾಗಿ ಉಳಿದ ಅವಳಿಗೆ ಇತ್ತೀಚೆಗೆ ಒಂಟಿತನ ಕಾಡಹತ್ತಿದೆ. ತಾನು ಮೊದಲಿನಿಂದಲೂ ಪುರುಷದ್ವೇಷಿ-ಯಾಗಿದ್ದೇನೇ ಎಂಬ ಸಂಶಯ ಬರುತ್ತದೆ. ಹಾಸ್ಟೆಲಿನ ಹುಡುಗಿಯರು ತಮ್ಮ ತಮ್ಮ

ಗೆಳೆಯ ಗಂಡು ಹುಡುಗರೊಡನೆ ಹೊರಗೆ ಹೋದಾಗ, ಅಥವಾ ತಮ್ಮ ಪ್ರೇಮಿಯ ಪತ್ರಕ್ಕಾಗಿ ಕಾಯುವುದು, ಪತ್ರ ಬಂದಾಗ ಗಂಟೆಗಟ್ಟಲೆ ಹಾಸಿಗೆಯಲ್ಲಿ ಬಿದ್ದುಕೊಂಡು ಓದುವುದು ಇವೆಲ್ಲ ಕಂಡು ಲೀಲಾಬಾಯಿಗೆ ಮೈ ಪರಚಿಕೊಳ್ಳುವಂತೆ ಆಗುತ್ತದೆ. ಅವರ ಮೇಲೆ ಕೋಪದ ರೂಪದಲ್ಲಿ ವ್ಯಕ್ತವಾಗುತ್ತದೆ. 'ಗಂಡುಪ್ರಾಣಿಯನ್ನು ನೋಡಿದರೆ ತನಗೆ ಹೇಳತೀರದ ಸಿಟ್ಟು ಬರುತ್ತದೆ. ಅವರು ಹೆಂಗಸರ ಮುಗ್ಧತೆಯ ದುರುಪಯೋಗ ಪಡೆಯುತ್ತಾರೆಂದೂ, ಸರ್ವಶಕ್ತಿಯನ್ನು ಪ್ರಯೋಗಿಸಿ ತಾನದನ್ನು ವಿರೋಧಿಸಬೇಕೆಂದು ಅನಿಸುತ್ತೆ" ಎಂದುಕೊಳ್ಳುತ್ತಾಳೆ.

"ಪ್ರಶ್ನೆ" ಕತೆಯ ಶಶಿಗೆ ಸುಖಮಯ ವೈವಾಹಿಕ ಜೀವನದ ಬಗ್ಗೆ ಸಂದೇಹ. ಜಗತ್ತಿನಲ್ಲಿ ಎಲ್ಲದರ ಬಗೆಗೂ ಮಧುರ ಪ್ರೀತಿ ಇದ್ದಾಗ ಅಪ್ಪ ಸೂಚಿಸಿದ ಸೋದರಮಾವನ ಮಗ ಅರುಣನನ್ನು ಮದುವೆಯಾಗಲು ನಿರಾಕರಿಸಿದಳು. ನಂತರ ಬಂದ ಇಬ್ಬರು ವರಗಳನ್ನು ನೇರವಾಗಿ ನಿರಾಕರಿಸಿದ ಮೇಲೆ ಪರಿಚಯವಾದ ನಾಲ್ಕನೆಯವನು ಬಂದ. ದೊಡ್ಡ ದೊಡ್ಡ ಕನಸಿನ ಮಾತನಾಡಿದ. ಶಶಿಯೂ ಕನಸು ಕಂಡಳು. ಒಂದು ದಿನ ಆತ ಇದಕ್ಕಿದ್ದಂತೆ ನಿರಾಕರಿಸಿದ. ಈಗ ಅವಳಿಗೆ ಮದುವೆ ಎಂಬ ಸಾಮಾಜಿಕ ಪದ್ಧತಿಯಲ್ಲಿಯೇ ನಂಬಿಗೆ ಹೊರಟುಹೋಗಿದೆ.

"ನೆನಪು...ಬರಿ ನೆನಪು" ಕತೆಯ ಪಾವನಾ ಮದುವೆಗೆ ನಿಂತ ಹುಡುಗಿ. ಮೂರ್ತಿಯೊಂದಿಗೆ ಇನ್ನೊಂದು ತಿಂಗಳಲ್ಲಿ ಮದುವೆ ನಿಶ್ಚಯವಾಗಿದೆ. ಸದ್ಯ ಮೂರ್ತಿ ತಿಂಗಳಮಟ್ಟಿಗೆ ಊರಲ್ಲಿಲ್ಲ. ಮದುವೆಯ ಬಗ್ಗೆ ಕನಸು ಕಾಣುತ್ತಿದ್ದಾಗ ಬಾಲ್ಯದ ಗೆಳೆಯ ಎಲಿಸನ್ ಪಿಂಟೋ ಮನೆಗೆ ಬರುತ್ತಾನೆ. ಬಾಲ್ಯದ ದಿನಗಳಲ್ಲಿ ಅವನೊಂದಿಗಿದ್ದ ಆಕರ್ಷಣೆ ಮತ್ತು ಹತ್ತೆಂಟು ಮಧುರ ನೆನಪುಗಳು ಮರುಕಳಿಸುತ್ತವೆ. ಆದರೆ ಇಂದು ಪ್ರಬುದ್ಧಳಾದ ಪಾವನಾ ವಿಚಲಿತವಾಗುವುದಿಲ್ಲ. "ತನ್ನ ಹಾಗೂ ಎಲಿಸನ್ ಸ್ನೇಹ ಒಂದು ಕ್ಷಣದ ಸ್ನೇಹ. ಆದರೆ ನೆನಪು ಮಾತ್ರ ಅಮರ" ಎಂದುಕೊಳ್ಳುತ್ತಾಳೆ.

"ಗಂಡಸರು" ಕಿರುಕಾದಂಬರಿಯ ನಾಯಕಿ ಶಾಂತಿ ತಾನು ಮೆಚ್ಚಿಕೊಂಡ ನಾಲ್ಕು ಗಂಡಸರು ಬೇರೆ ಬೇರೆ ಕ್ಷುಲ್ಲಕ ಕಾರಣಕ್ಕಾಗಿ ಮದುವೆಯಾಗಲು ನಿರಾಕರಿಸಿದಾಗ ಪ್ರೇಮದ ಪರಿಕಲ್ಪನೆಯಲ್ಲಿ, ಮದುವೆಯೆಂಬ ಸಾಮಾಜಿಕ ಸಂಘಟನೆಯಲ್ಲಿಯೇ ವಿಶ್ವಾಸ ಕಳೆದುಕೊಳ್ಳುತ್ತಾಳೆ.

ಎರಡನೆಯ ಗುಂಪಿನ ನಾಯಕಿಯರು ಗಂಡಂದಿರಿಂದ ನೇರವಾಗಿ ಅಥವಾ ಪರೋಕ್ಷವಾಗಿ ದೈಹಿಕ ಮತ್ತು ಮಾನಸಿಕ ಹಿಂಸೆಗೆ ಒಳಗಾಗುತ್ತಾರೆ. ಈ ಗುಂಪಿಗೂ, ವೈದೇಹಿಯವರ ಕತೆಗಳ ಎರಡನೇ ಗುಂಪಿಗೂ ಸಾಮ್ಯವನ್ನು ಕಾಣಬಹುದು. ಈ ಗುಂಪಿನ ಹೆಂಡತಿಯರು ಗಂಡಂದಿರ ದೌರ್ಜನ್ಯವನ್ನು ಮೌನದಿಂದಲೇ ಪ್ರತಿಭಟಿಸುತ್ತಿದ್ದರೂ ಮದುವೆಯಿಂದ ಹೊರಬೀಳಲಾರದ ಅಸಹಾಯಕತೆಯಿಂದ ಬಳಲುತ್ತಾರೆ.

"ಬಿಡುಗಡೆ" ಕತೆಯಲ್ಲಿ ವೈವಾಹಿಕ ಜೀವನದ ಬಗ್ಗೆ ಹಲವು ಕನಸು ಕಂಡ ಸರೋಜಾಗೆ ಮದುವೆಯಾದಾಗ ಕನಸೆಲ್ಲ ಬರೀ ಕನಸಾಗಿಯೇ ಉಳಿದು ಪತಿಯ

ದೌರ್ಜನ್ಯದ ವಾಸ್ತವತೆಯನ್ನು ಎದುರಿಸಬೇಕಾಯಿತು. ಆದರೂ ಸರೋಜ ಹಲವು ವರ್ಷ ಸಂಸಾರ ಮಾಡಿ, ಎರಡು ಮಕ್ಕಳನ್ನು ಹಡೆದು, ಅವರನ್ನು ಬೆಳೆಸಿ ಜೀವನ ನಡೆಸಿದಳು. ಕೊನೆಗೊಂದು ದಿನ ಗಂಡ ತೀರಿಕೊಂಡ. ಆಗ ಸರೋಜಳಿಗೆ ಮೈ-ಮನಸ್ಸು ಹಗುರವಾದಂತಹ ಭಾವ. ಅದೆಂಥದೋ ಬಿಡುಗಡೆಯ ಸುಖದ ಭಾವ. ಎಲ್ಲ ನೋವುಗಳಿಂದ, ಅಪಮಾನಗಳಿಂದ, ಹಿಂಸೆಯಿಂದ, ನಿರಾಶೆಯಿಂದ, ಅನ್ಯಾಯದಿಂದ, ದಬ್ಬಾಳಿಕೆಯಿಂದ ಕಳಚಿಕೊಂಡಂತಹ ಭಾವ. ಮನಸ್ಸು ಹಗುರವಾಗಿ ನೆಮ್ಮದಿಯಿಂದ ಹಾಲಿಗೆ ಸಕ್ಕರೆ ಬೆರೆಸಿ ಕುಡಿಯುತ್ತಾಳೆ.

ಬೇಜವಾಬ್ದಾರಿ ಗಂಡನೊಂದಿಗೆ ಸುಶಿಕ್ಷಿತ, ಉದ್ಯೋಗಸ್ಥ ಮಧ್ಯಮ ವರ್ಗದ ಮಹಿಳೆ ಅನುಭವಿಸುವ ಕಷ್ಟಗಳ ಪರಿಣಾಮಕಾರಿ ಚಿತ್ರಣ "ಅವಳ ಸ್ವಾತಂತ್ರ್ಯ" ಕತೆ. ಈ ಕತೆಯ ನಾಯಕಿ ವಿಮಲಾ ಕಾಲೇಜು ಓದಿದವಳು, ಉದ್ಯೋಗಸ್ಥೆ, ಆದರೂ ಗಂಡನಿಂದ ಹಿಂಸೆಗೊಳಗಾಗುತ್ತಿರುವವಳು. ಗಂಡ ಶಂಕರನಿಗೆ ಪಿ.ಡಬ್ಲ್ಯ್ಯೂ.ಡಿ. ಆಫೀಸಿನಲ್ಲಿ ಕೆಲಸ. ಮನೆಯ ಯಜಮಾನನಾಗಿ ಮಾಡಬೇಕಾದ ಕೆಲಸ ತಪ್ಪಿಸಿಕೊಳ್ಳುವುದರಲ್ಲಿ ನಿಸ್ಸೀಮ. ಬೇಕೆಂತಲೇ ಧಾರವಾಡದಿಂದ ಬೆಳಗಾವಿಗೆ ವರ್ಗ ಮಾಡಿಸಿಕೊಂಡು ವಾರದ ಐದು ದಿನಗಳನ್ನು ಅಲ್ಲಿ ಕಳೆಯುತ್ತಾನೆ. ಹಾಗಾಗಿ ಮನೆಕೆಲಸ, ನೌಕರಿ, ಮೂವರು ಮಕ್ಕಳು, ವಯಸ್ಸಾದ ಮಾವ ಇವುಗಳ ಜಗ್ಗಾಟದಲ್ಲಿ ವಿಮಲಾ ಹಣ್ಣಾಗಿ ಸೋತುಹೋಗುತ್ತಿದ್ದಾಳೆ. ಮನೆಗೆ ಬಂದ ವಾರಾಂತ್ಯದ ಎರಡು ದಿನ ಸಹ ಗಂಡ ಮನೆಕೆಲಸ ತಪ್ಪಿಸಿಕೊಳ್ಳುತ್ತಾನೆ. ಆದರೆ ದೇಹಸುಖಕ್ಕೆ ಹೆಂಡತಿ ಬೇಕು. ಕಾಲೇಜಿನಲ್ಲಿದ್ದಾಗ ಹೆಂಗಸರ ಸ್ವಾತಂತ್ರ್ಯಕ್ಕಾಗಿ ಹೋರಾಡಬೇಕೆಂದು ಆದರ್ಶದ ಕನಸು ಕಟ್ಟಿದ್ದ ಸರೋಜಳ ಕನಸು ಒಡೆದುಹೋಗುತ್ತಿದೆ. ಅಂತರರಾಷ್ಟ್ರೀಯ ಮಹಿಳಾ ವರ್ಷದ ಆಚರಣೆಯ ಸಭೆಯಲ್ಲಿ ಅತಿಥಿಯಾಗಿ ಭಾಷಣ ಮಾಡುತ್ತ ಸರೋಜಾ "ನಮ್ಮ ದೇಶಕ್ಕೆ ಸ್ವಾತಂತ್ರ್ಯ ಸಿಕ್ಕು ಕಾಲು ಶತಮಾನ ಕಳೆದು ಹೋದರೂ ನಮ್ಮ ಹೆಂಗಸರು ಮಾತ್ರ ಇನ್ನೂ ಗುಲಾಮಗಿರಿಯಲ್ಲೇ ಇದ್ದಾರೆ. ಇದಕ್ಕೆ ಕಾರಣ 25% ಸಂಪ್ರದಾಯ, 25% ಪರಿಸ್ಥಿತಿ, ಇನ್ನು 50% ಗಂಡಸರು" ಎಂಬ ವಾಸ್ತವತೆಯನ್ನು ತೆರೆದಿಡುತ್ತಾಳೆ.

"ತಿರುಗಿ ಹೋದಳು" ಕತೆಯಲ್ಲಿ ಗಂಡನ ದೌರ್ಜನ್ಯ ಸಹಿಸಿಕೊಂಡು ವೈವಾಹಿಕ ಜೀವನದಲ್ಲಿ ಉಳಿಯಬೇಕೋ, ಅದರಿಂದ ಹೊರಬೀಳಬೇಕೋ ನಡುವಿನ ಮಾನಸಿಕ ಹೊಯ್ದಾಟದ ಚಿತ್ರಣ ಇದೆ. "ನೀನ್ಯಾಕೆ ಆತನನ್ನು ಒದ್ದು ಕಳಿಸುವುದಿಲ್ಲ ಹಮೀದಾ?" ಎಂದು ಸದಾ ಗೆಳತಿಗೆ ಹೇಳುತ್ತಿದ್ದ ನಾಯಕಿ ಲಕ್ಷ್ಮಿ, ತನಗೇ ಆ ಪರಿಸ್ಥಿತಿ ಒದಗಿದಾಗ ಮನಸ್ಸಿಲ್ಲದ ಮನಸ್ಸಿನಿಂದ ಗಂಡನ ಮನೆಗೆ ತಿರುಗಿ ಹೋಗುತ್ತಾಳೆ. ಈ ಅಸಹಾಯಕತೆಯನ್ನು ವೀಣಾ ಅವರ ಇತರ ಕತೆಗಳಲ್ಲಿಯೂ ಕಾಣುತ್ತೇವೆ.

ಮದುವೆಯಾಗುತ್ತೇನೆ ಎಂಬ ಹುಸಿ ಆಶ್ವಾಸನೆ ಕೊಡುತ್ತ ಪ್ರೇಮಿಯನ್ನು ಇಪ್ಪತ್ತು ವರ್ಷ ಕಾಯಿಸಿದ "ಧೈರ್ಯವಂತ" ಎಂದು ಕರೆದುಕೊಳ್ಳುವ ಕಪಟನ ಕತೆ "ಕವಲು". ಮೀನಾಕ್ಷಿ ಸುಶಿಕ್ಷಿತ, ಉದ್ಯೋಗಸ್ಥ ಮಹಿಳೆ. ಯೌವನದಲ್ಲಿ ವಿಜಾತೀಯ ಹುಡುಗನೊಬ್ಬನನ್ನು

ಪ್ರೇಮಿಸುತ್ತಾಳೆ. ಧೈರ್ಯವಂತ ಎಂದು ಕರೆದುಕೊಳ್ಳುವ ಆತ, ಮೀನಾಕ್ಷಿಗೆ ಮದುವೆಯ ಭರವಸೆ ಕೊಡುತ್ತಲೇ ಶಾಂತಾ ಎಂಬ ಇನ್ನೊಬ್ಬಳನ್ನು ಮದುವೆಯಾಗುತ್ತಾನೆ. ಆದರೂ ಆಗಾಗ ಮೀನಾಕ್ಷಿಯನ್ನು ಭೆಟ್ಟಿಯಾಗುತ್ತ, 'ಒಂದು ದಿನ ಶಾಂತಾಳನ್ನು ಬಿಟ್ಟು ನಿನ್ನನ್ನು ಮದುವೆಯಾಗುತ್ತೇನೆ' ಎಂದು ಭರವಸೆ ಕೊಡುತ್ತ ಮೀನಾಕ್ಷಿಯ ಕನಸನ್ನು ಜೀವಂತ ಇಡುತ್ತಾನೆ. ವರ್ಷ ಕಳೆಯುತ್ತ ಹೋಗುತ್ತದೆ. ಧೈರ್ಯವಂತನಿಗೆ ಶಾಂತಿಯೊಡನೆ ಎರಡು ಮಕ್ಕಳಾಗಿ ಅವರು ಕಾಲೇಜು ಸೇರುವ ವಯಸ್ಸಾಗುತ್ತದೆ. ಆದರೂ ಆತನ ಹುಸಿ ಆಶ್ವಾಸನೆ ಮುಂದುವರಿಯುತ್ತಲೇ ಇರುತ್ತದೆ. ಆತನ ಹೆಂಡತಿ ಸತ್ತ ಮೇಲೆ 52 ವಯಸ್ಸಿನ ಆತ ಬಂದು ಮೀನಾಕ್ಷಿಯೊಡನೆ ಈಗ ರಿಜಿಸ್ಟರ್ ಮದುವೆಯಾಗೋಣ ಎನ್ನುತ್ತಾನೆ. ಇಪ್ಪತ್ತು ವರ್ಷ ಕಾಯ್ದ ಬಳಿಕ, ಅವನು ಮದುವೆಗೆ ಕೇಳುವ ಹೊತ್ತಿಗೆ ಮೀನಾಕ್ಷಿಗೆ ಜ್ಞಾನೋದಯ ಆಗುತ್ತದೆ. ಮನಸ್ಸಿನಲ್ಲಿಯೇ ಅಂದುಕೊಳ್ಳುತ್ತಾಳೆ: "ಶಾಂತಾ, ನೀನು ಖರೇನೇ ಪುಣ್ಯವಂತೆ ಕಣೆ. ನಿನ್ನ ಗಂಡ ನಿನ್ನನ್ನು ಬಹಳ ಪ್ರೀತಿಸುತ್ತಿದ್ದ. ಆದರೆ ಅದು ಅವನಿಗೆ ಹೇಗೆ ಗೊತ್ತಾಯಿತೆಂದು ನಿನಗೆ ಗೊತ್ತೇ? ನನ್ನಿಂದ ಕಣೆ. ನನ್ನಿಂದ. I was the means". ಈ ಸಲ ಅವನ ಪ್ರಪೋಜಲ್ ನಿರಾಕರಿಸಿ, "ನಮ್ಮ ದಾರಿ ಕವಲೊಡೆದಿದೆ" ಎಂದು ಹೇಳಿ ಕೆನಡಾಕ್ಕೆ ಹೊರಟುಬಿಡುತ್ತಾಳೆ.

"ದೆವ್ವ" ಒಬ್ಬ ವಿವಾಹಿತ ನಾಟಕಕಾರ ತನ್ನ ಅಂತಸ್ತಿನ ದುರುಪಯೋಗ ಪಡೆದು ನಾಟಕಗಳನ್ನು ಮೆಚ್ಚಿಕೊಂಡು ಅವನೊಂದಿಗೆ ಸಲಿಗೆಯಲ್ಲಿದ್ದ ಹಲವು ಹುಡುಗಿಯರೊಂದಿಗೆ ಅನೈತಿಕ ಸಂಬಂಧ ಬೆಳೆಸಿದ ಕತೆ. ಆದಾಗ್ಯೂ ಸ್ನೇಹಾ ದೇಶಪಾಂಡೆ ಎಂಬುವಳು ಇವನ ಬಲೆಗೆ ಬೀಳದ್ದರಿಂದ ಆತನ ಅಭಿಮಾನಕ್ಕೆ ಧಕ್ಕೆ ಆಗಿ ಬಹಳ ದಿನ ಅವಳ ದೆವ್ವ ಕಾಡಹತ್ತುತ್ತದೆ. ಕೊನೆಗೆ ಅವನಿಗಾಗಿ ಏರ್ಪಡಿಸಿದ್ದ ಸತ್ಕಾರ ಸಮಾರಂಭವೊಂದರಲ್ಲಿ ಭೆಟ್ಟಿಯಾದ ಕಾಲೇಜಿನ ಲೇಡೀಸ್ ರೆಪ್ರೆಸೆಂಟೇಟಿವ್ ಮಿಸ್ ಗೋಖಲೆ ಇವನ ಬಲೆಗೆ ಬಿದ್ದಾಗ ದೆವ್ವ ಕಾಡುವುದು ನಿಲ್ಲುತ್ತದೆ. ಮುಖ್ಯವಾಗಿ ಅಧಿಕಾರದಲ್ಲಿದ್ದವರು ಕೈಕೆಳಗಿನವರ ಮೇಲೆಸಗುವ ದೌರ್ಜನ್ಯದ ಚಿತ್ರಣ ಇಲ್ಲಿದೆ.

ವೀಣಾ ಅವರ ಕತೆಗಳಲ್ಲಿ ಸ್ತ್ರೀ ಸಂವೇದಿತ ವೈಚಾರಿಕತೆ ಕೇವಲ ಆಧುನಿಕ ಮಹಿಳೆಗೆ ಮಾತ್ರ ಸೀಮಿತವಾಗಿಲ್ಲ ಎಂಬುದಕ್ಕೆ ಜೀವಂತ ಉದಾಹರಣೆ "ನೆರಳು" ಕತೆಯಲ್ಲಿ ಬರುವ ಮಾಲತಿಯ ತಾಯಿಯ ಪಾತ್ರ. ಚಿಕ್ಕಂದಿನಲ್ಲಿ ಶೆಟ್ಟರ ಸದಾಶಿವರಾಯನನ್ನು ಪ್ರೀತಿಸಿದ್ದಳು. ಆದರೂ ಸೋದರಮಾವನ ಮಗನನ್ನು ಮದುವೆಯಾಗಬೇಕಾಯಿತು. ಹಲವು ವರ್ಷ ಸುಖವಾಗಿ ಸಂಸಾರ ಮಾಡಿದ್ದರೂ, ಸದಾಶಿವರಾಯನೊಂದಿಗಿನ ಪ್ರೀತಿ ಹೃದಯದ ಮೂಲೆಯಲ್ಲಿ ಸದಾ ಅಡಗಿ ಕುಳಿತಿತ್ತು. ಗಂಡ ತೀರಿದ ಮೇಲೆ ಇಳಿ ವಯಸ್ಸಿನಲ್ಲಿ ಆ ಯೌವನದ ಪ್ರೇಮಿ ನೆರಳಾಗಿ ಕಾಡಹತ್ತುತ್ತಾನೆ. ಮಾಲತಿಯ ಮಕ್ಕಳು ಅವಳಿಗೆ ಹುಚ್ಚಿಯ ಪಟ್ಟ ಕಟ್ಟುತ್ತಾರೆ. ತಾಯಿ ತನ್ನ ಬದುಕಿನ ಉಲ್ಲಂಘಿತ ಸತ್ಯಗಳನ್ನು ಡೈರಿಯಲ್ಲಿ ಬರೆದು ರೇಶಿಮೆ ಸೀರೆಯ ತುಂಡಿನಲ್ಲಿ ಬಚ್ಚಿಟ್ಟುಕೊಂಡಿರುತ್ತಾಳೆ. ಮಾಲತಿ ಮಕ್ಕಳ ದೂರು ತಡೆಯಲಾಗದೆ ತಾಯಿಯನ್ನು ಆಸ್ಪತ್ರೆಗೆ ಸೇರಿಸುತ್ತಾಳೆ. ತಾಯಿ

ಬಚ್ಚಿಟ್ಟುಕೊಂಡ ಡೈರಿ ಮಾಲತಿಯ ಕೈಗೆ ಸಿಕ್ಕು ಓದಿದಾಗ ತಾಯಿಯ "ಹುಚ್ಚಿನ" ನಿಜವಾದ ಕಾರಣ ತಿಳಿದು ಕಣ್ಣೀರು ಸುರಿಸುತ್ತಾಳೆ.

"ಮಕ್ಕಳು ತನ್ನನ್ನು ಕಡೆಗಣಿಸುತ್ತಿದ್ದಾರೆ" ಎಂದೆನಿಸಿ ವೃದ್ಧ, ಅಸಹಾಯಕ ಮಹಿಳೆಯರು ಪಡುವ ಸಂಕಟದಲ್ಲಿ ವೈದೇಹಿಯವರ "ಮರ, ಗಿಡ, ಬಳ್ಳಿ" ಮಂದಕ್ಕನಿಗೂ, ವೀಣಾ ಅವರ "ನೆರಳು" ಕತೆಯ ಮಾಲತಿಯ ತಾಯಿಗೂ ಸ್ವಲ್ಪಮಟ್ಟಿನ ಸಾಮ್ಯವನ್ನು ಗಮನಿಸಬಹುದು.

ಇಂದೂ ಕೂಡ ಭಾರತೀಯ ವಾತಾವರಣದಲ್ಲಿ ಕ್ರಾಂತಿಕಾರಿ ಎನ್ನಬಹುದಾದ "ಕೊನೆಯ ದಾರಿ" ಮತ್ತು "ಹೀಗೊಂದು ಕತೆ" ಕತೆಗಳನ್ನು ಮೂರನೆಯ ಗುಂಪು ಎಂದು ಕರೆದಿದ್ದೇನೆ. ಇಲ್ಲಿಯ ನಾಯಕಿಯರು ಮದುವೆ, ಗಂಡ ಎಂಬ ಬಂಧನದ ಹಂಗಿಲ್ಲದೆ ತಾಯ್ತನವನ್ನು ಬಯಸುವವರು. "ಕೊನೆಯ ದಾರಿ" ಕತೆಯ ಲೀಲಾ ವಿವಾಹಿತೆ, ಉದ್ಯೋಗಸ್ಥೆ. ತನ್ನ ಗಂಡನ ಹಿಂಸೆ, ಜಾರತನ, ಕುಡುಕತನ ತಾಳಲಾರದೆ ಆತನನ್ನು ಬಿಟ್ಟು ಒಂಟಿಯಾಗಿ ಬದುಕುತ್ತಿದ್ದಾಳೆ. ಆದರೆ ಅವಳಿಗೆ ಯಾರಿಂದಾದರೂ ಒಂದು ಮಗುವನ್ನು ಪಡೆಯಬೇಕೆಂಬ ಆಸೆ. ಡಾಕ್ಟರ ಗೋವಿಂದಮೂರ್ತಿ, ಹಾಗೂ ಫಿಲಾಸಫಿ ಪ್ರೊಫೆಸರ್ ವಿನಯ ಅವರೊಡನೆ ಸಹವಾಸ ಮಾಡಿದರೂ, ಮಗುವಿನ ವಿಚಾರ ಬಂದಾಗ ಇಬ್ಬರೂ ಹಿಂಜರಿಯುತ್ತಾರೆ. ನಿರೀಕ್ಷಿತ ದಾರಿಗಳು ಮುಚ್ಚಿಕೊಂಡಾಗ ಲೀಲಾಗೆ ನೆನಪಾದದ್ದು ಚಿಕ್ಕಂದಿನಿಂದ ಹತ್ತಿರದಿಂದ ಪರಿಚಯವಿದ್ದು ಮೆಚ್ಚಿಕೊಂಡಿದ್ದ, ತಂದೆಯ ಗೆಳೆಯ ಶಂಕರ ಗೌಡರು. ಅವರಿಗೆ ಅರ್ಧಾಂಗವಾಯುವಿನಿಂದ ಹಾಸಿಗೆ ಹಿಡಿದ ಹೆಂಡತಿ. ವಯಸ್ಸಾದರೂ ಜೀವನೋತ್ಸಾಹ, ದೇಹಶಕ್ತಿ ಕುಂದಿಲ್ಲ. "ನಿನ್ನ ಜೀವನ ಸುಖೀ ಆಗಲಿಕ್ಕೆ ನನ್ನ ಜೀವಾ ಕೊಟ್ಟೇನು" ಎಂದು ಅವರು ಹೇಳಿದ ಮಾತು ನೆನಪಾಗುತ್ತದೆ. ಅವರೇ ನನ್ನ ಕೊನೆಯ ದಾರಿ ಎಂದು ಲೀಲಾ ನಿರ್ಧರಿಸುತ್ತಾಳೆ. ಇಲ್ಲಿ ಲೀಲಾ ಗಂಡಸರನ್ನು ಧಿಕ್ಕರಿಸುವದಿಲ್ಲ. ಹೆಣ್ಣಿಗೊಂದು ಗಂಡಸರ ಆಸರೆ ಬೇಕು ಎಂಬುದನ್ನು ಒಪ್ಪಿಕೊಳ್ಳುತ್ತಾಳೆ.

"ಹೀಗೊಂದು ಕತೆ' ಯಲ್ಲಿ ಆಕೆ ಮತ್ತು ಆತ ಹತ್ತು ವರ್ಷಗಳತನಕ, ಯಾವುದೇ ಬೇಡಿಕೆ, ನಿರಾಕರಣೆ, ಅವಶ್ಯಕತೆ, ಕೊರತೆ, ನಿರೀಕ್ಷೆ, ನಿರಾಶೆ ಇಲ್ಲದ ಮುಕ್ತ ಜೀವನ ನಡೆಸುತ್ತಾರೆ. "ಗಂಡ", "ಹೆಂಡತಿ", "ತಾಯಿ", "ತಂದೆ", "ಮಕ್ಕಳು" ಈ ತರದ ನಿರರ್ಥಕ ಸಂಬಂಧಸೂಚಕ ಪದಗಳನ್ನು ಅವರಿಬ್ಬರೂ ಎಂದೂ ಬಳಸಿರಲಿಲ್ಲ. ಆಕೆ ಗರ್ಭಿಣಿಯಾಗಿ "ನಾನು ಬಸಿರಿ" ಎಂದಾಗ ಆತ ಸ್ವಾಭಾವಿಕವಾಗಿ ಅವಳು ಗರ್ಭಪಾತ ಮಾಡಿಸಿಕೊಳ್ಳುವಳೆಂದು ಊಹಿಸಿದ. ಅದಾಗದಿದ್ದಾಗ "ಮಗು ಹೆರಲು ನಮಗೆ ಅಧಿಕಾರವಿಲ್ಲ. ಕಾನೂನು ಪ್ರಕಾರ ನಾವು ಗಂಡ ಹೆಂಡತಿ ಅಲ್ಲ" ಎಂದು ವಾದಿಸಿದ. ಆಕೆ ಮಗುವನ್ನು ಕಳೆದುಕೊಳ್ಳಲು ಒಪ್ಪಲಿಲ್ಲ. ಅವರು ಬೇರಾಗಬೇಕಾಯಿತು. ಅವಳಿಗೆ ಮಗು ಆದ ಮೇಲೆ ಆತ ತಿರುಗಿ ಬಂದು ಮದುವೆಯಾಗಲು ಕೇಳಿದ. ಆತನ ಮಾತನ್ನು ಮಧ್ಯದಲ್ಲಿಯೇ ತಡೆದು ಆಕೆ "Sorry, ನನಗೀಗ ಯಾರ ಅವಶ್ಯಕತೆಯೂ ಇಲ್ಲ. ಯಾತರ ಅವಶ್ಯಕತೆಯೂ ಇಲ್ಲ. ನನಗೆ ಬೇಕಾದುದೆಲ್ಲ ನನಗೆ ಸಿಕ್ಕಿದೆ. ನಿನ್ನ ದಾರಿ ನೀನು ನೋಡಿಕೋ" ಎನ್ನುತ್ತಾಳೆ.

ವೈದೇಹಿಯವರ ಸ್ತ್ರೀ ಪಾತ್ರಗಳನ್ನು ಕೂಡ ಮೂರು ಗುಂಪುಗಳಲ್ಲಿ ವಿಭಾಗಿಸಬಹುದು. ಮೊದಲನೆಯ ಗುಂಪಿನ ಸ್ತ್ರೀಯರು ಸಂಪ್ರದಾಯಸ್ಥ, ಮಧ್ಯ ವಯಸ್ಸಿನ ಅಥವಾ ಅದನ್ನು ದಾಟಿದವರು. ಜೀವನದಲ್ಲಿ ಬಂದ ಕಷ್ಟಗಳನ್ನು, ತಮಗಾಗುತ್ತಿರುವ ಅನ್ಯಾಯಗಳನ್ನು ಮೌನವಾಗಿ ಸಹಿಸಿಕೊಂಡು ತಮ್ಮ ಪಾಲಿಗೆ ಬಂದ ಜೀವನವನ್ನು ಸ್ವೀಕರಿಸಿ ಬಾಳಿದವರು. ಈ ಕತೆಗಳಲ್ಲಿ ಗಂಡಸರು, ಮತ್ತು ಸಮಾಜ ಈ ಸ್ತ್ರೀಯರನ್ನು ಎಷ್ಟು ಅನಾದರಣೀಯವಾಗಿ ನಡೆಸಿಕೊಳ್ಳುತ್ತಿದೆ ಎಂಬುದು ಪರೋಕ್ಷವಾಗಿ ಸ್ಪಷ್ಟವಾಗುತ್ತದೆ.

ಈ ಗುಂಪಿಗೆ ಸೇರಿದ ಅತ್ಯಂತ ಪರಿಣಾಮಕಾರಿ, ಹೃದಯಂಗಮ ಕತೆ "ಪುಟ್ಟಮ್ಮತ್ತೆ ಮತ್ತು ಮೊಮ್ಮಗಳು". "ಕಲ್ಲಾಗು ಕಷ್ಟಗಳ ಮಳೆಯ ವಿಧಿ ಸುರಿಯೆ" ಎಂಬುದಕ್ಕೆ ಜ್ವಲಂತ ಉದಾಹರಣೆ ಪುಟ್ಟಮ್ಮತ್ತೆ. ಪುಟ್ಟಮ್ಮತ್ತೆ ಆರು ತಿಂಗಳು ಮಗುವಿದ್ದಾಗಲೇ ಅಪ್ಪ ಕ್ಷುಲ್ಲಕ ಕಾರಣವೊಂದಕ್ಕೆ ತಾಯಿಯನ್ನು ಬಾವಿಗೆ ಹಾಕಿ ಕೊಂದು ಊರು ಬಿಟ್ಟ. ಆಚೆಮನೆ ಅಜ್ಜಿ ಮಗುವನ್ನು ಸಾಕಿಕೊಂಡಳು. ಪುಟ್ಟಮ್ಮತ್ತೆ ಹದಿಮೂರು ವರ್ಷದವಳಿದ್ದಾಗ ಅವಳ ಅಪ್ಪ ತಿರುಗಿ ಬಂದರೆ ಅಜ್ಜಿ ಆತನನ್ನು ಮನೆಯೊಳಗೆ ಬರಲು ಬಿಡಲಿಲ್ಲ. "ಥತ್, ಪುರುಷ ಮೃಗ" ಎಂದಿತು ಅಜ್ಜಿ. ಇದ್ದಕ್ಕಿದ್ದಂತೆ ಒಂದು ದಿನ ಅಜ್ಜಿ ಚಟ್ಟವೇರಿತು. ನಂತರ ಪುಟ್ಟಮ್ಮತ್ತೆ ಮದುವೆ ಆದರೂ ಸುಖ ಕಾಣಲಿಲ್ಲ. ಪುಟ್ಟಮ್ಮತ್ತೆ ಊರಲ್ಲಿ, ಗಂಡ ಬೆಂಗಳೂರಲ್ಲಿ. ಮಗಳು ಹುಟ್ಟಿದ ದಿನವೇ ಗಂಡ ತೀರಿಕೊಂಡ ಸುದ್ದಿ ಬಂತು. ಮಗುವಿನ ಪಾಶ ಪುಟ್ಟಮ್ಮತ್ತೆಯನ್ನು ಭೂಮಿಗೆ ಕಟ್ಟಿ ಹಾಕಿತು. ರಂಗಪ್ಪನ ಮನೆಯಲ್ಲಿ ಉಳಿದುಕೊಂಡು ಅವರಿವರ ಮನೆ ಅಡಿಗೆ ಕೆಲಸದಿಂದ ಜೀವನ ಸಾಗಿಸಹತ್ತಿದಳು. ಮಗಳೂ ದೊಡ್ಡವಳಾಗಿ ರಂಗಪ್ಪನವರ ಸಹಾಯದಿಂದ ಮದುವೆ ಆಯಿತು. ಮಗಳು ಗರ್ಭಿಣಿಯಾಗಿ ಹೆರಿಗೆಯಲ್ಲಿ ತೀರಿಕೊಂಡಳು. ಮಗು ಬದುಕಿತು. ಮೊಮ್ಮಗಳು ಕಮಲಾವತಿಯನ್ನು ಸಾಕಿ ದೊಡ್ಡದು ಮಾಡಿದಳು. "ಚೋಂಟುದ್ದದ್ ಮಗೀನ್ಸ್ ಇಷ್ಟುದ್ದ ಬೆಳ್ಸ್ ಕಾರೆ ಈ ಪುಟ್ಟಮ್ಮ ಎಂಬವ್ಳ್ ಬೆನ್ನ್ ಪೂರಾ ಬಗ್ಗಿಯೇ ಹೋಯ್ತ್." ಮೊಮ್ಮಗಳು ಕಮಲಾವತಿ "ಅಜ್ಜಿ, ಯಾಕೆ ಅಷ್ಟೆಲ್ಲ ಕಷ್ಟ ಬಂದದ್ದ್? ಏನು ಉಪಯೋಗ ಆಯ್ತ್ ಅಂತೆಳಿ ಬೇಕಲೆ" ಎಂದು ಕೇಳಿದಾಗ ಅಜ್ಜಿಯ ಉತ್ತರ "ಮಗ, ಬದುಕೆಂಬುದು ನಾನು, ನೀನು ತಿಳ್ಕಂಡ ಹಾಂಗೆ ಇಲ್ಲೆ. ಮೇಲ್ಲೊಬ್ಬ ಇದ್ದ. ಕಾಂತ. ಮರ್ಯಾದೆ ಇಟ್ಕಂಬುದ ನಮ್ ಕೆಲ್ಸ. ನಂಗು ಸಣ್ಣಿದ್ನಗೇ ಅಬ್ಬೆ ಸತ್ಲ್. ನಾನೇನು ಸತ್ನ? ಬೆಳ್ದೆ, ಮದುವೆ, ಮಗು ಎಲ್ಲ ಅಯ್ಲಿಲ್ಯ? ಆ ಮೇಲೂ ನೀತಿ ನಿಯತ್ತು ಹದ್ದುಬಸ್ತಿನಾಗಿದ್ದೆ."

ಭೀಕರ ಬಡತನದಿಂದ ಮಹಿಳೆಯೊಬ್ಬಳ ಮೇಲಾಗುವ ಪರಿಣಾಮ ಚಿತ್ರಿಸುವ ಹೃದಯಸ್ಪರ್ಶಿ ಕತೆ "ಒಂದು ಕಳ್ಳ ವೃತ್ತಾಂತ". ಬಚ್ಚಮ್ಮ ಬಡವಿ. ಆದರೆ ಆಕೆಗೆ ಚೆನ್ನಾಗಿ ಉಂಡುಟ್ಟು ಬದುಕುವ ಆಶೆ. ಪರರ ಮನೆಯ ಅಡಿಗೆ ಮಾಡಿ ಜೀವಿಸುತ್ತಿರುವ ಬಚ್ಚಮ್ಮ ಆಗಾಗ ಸಣ್ಣ-ಪುಟ್ಟ ತಿಂಡಿ, ಪದಾರ್ಥಗಳನ್ನು ಬಚ್ಚಿಟ್ಟುಕೊಂಡು ತರಹತ್ತುತ್ತಾಳೆ. ಜನರಿಗೆ ಇದು ಗೊತ್ತಾಗಿ ಅವಳಿಗೆ 'ಕಳ್ಳಿ' ಯ ಪಟ್ಟ ಕಟ್ಟಿ ಪರೋಕ್ಷವಾಗಿ ಗೇಲಿ ಮಾಡಹತ್ತುತ್ತಾರೆ. ಅವಳು "ಕಳ್ಳತನ" ಬಿಟ್ಟರೂ ಜನರ ಸಂಶಯ ಹೋಗಲಿಲ್ಲ. ಇಷ್ಟೆಲ್ಲ ಗೇಲಿಗೊಳಗಾದ

ಬಚ್ಚಮ್ಮನ ಮನೋಧರ್ಮ, ಕತೆಯ ಕೊನೆಯಲ್ಲಿ ಅವಳು ವರ್ತಿಸಿದ ರೀತಿ ಅಸಹಜ ಎನ್ನಿಸುವುದಿಲ್ಲ. ಬಚ್ಚಮ್ಮನ ಮೇಲೆ ಕನಿಕರ ಬರುತ್ತದೆಯೇ ಹೊರತು ಅವಳು ಕೆಟ್ಟವಳೆನಿಸುವುದಿಲ್ಲ. ಮಂಜುನಾಥ ಬಚ್ಚಮ್ಮನ ಮಗ. ಹೋಟೆಲ್ ತೆರೆದು ಸ್ವತಂತ್ರ ಜೀವನ ನಡೆಸಿ ಅಮ್ಮನನ್ನು ಸುಖವಾಗಿಡಬೇಕೆಂಬ ಆಶೆ ಹೊತ್ತವ. ಅವಳು ಕೆಲಸಕ್ಕೆ ಹೋಗುವ ಮನೆಯ ಯಜ್ಞೇಶನ ಮದುವೆಯ ಆರತಕ್ಷತೆಯ ಪ್ರಸಂಗ. ಮದುವೆಯ ಗದ್ದಲದಲ್ಲಿ ಮಂಟಪದಲ್ಲಿದ್ದ ಬೆಳ್ಳಿಯ ಪಾತ್ರೆಗಳು ಕಳುವಾಗುತ್ತದೆ. ಜನರೆದುರೇ ಇದ್ದ ಬಚ್ಚಮ್ಮನ ಮೇಲೆ ಸಂಶಯಪಡುವಂತಿಲ್ಲ. ಯಾರು ಕದ್ದಿರಬೇಕು? ರಾತ್ರಿ ಮಲಗಿದ್ದಾಗ ಬಚ್ಚಮ್ಮನಿಗೆ ಸಂಶಯ ಬರುತ್ತದೆ. ಕೇಳಬೇಕೋ, ಬೇಡವೋ ಎಂದು ಯೋಚಿಸಿ, ಯೋಚಿಸಿ ಕೊನೆಗೆ ಕೇಳಿಯೇ ಬಿಡುತ್ತಾಳೆ. "ಮಾಣೀ, ಯಂತದೋ, ಯಾವುದು ಸರಿ ಯಾವುದು ತಪ್ಪು ಅಂತ್ಲೇ ನಂಗೆ ತೆಳಿತ್ತಿಲ್ಲೆ. ಬೆಳ್ಳಿ ಪಾತ್ರೆ ಇಲ್ಲೆ ಇಲ್ಲೆ ಅಂತಿದ್ರೊ. ನಿನ್ ಕಂಡ್ರೆ ಹೋದವ್ನೇ (ಹೋಟ್ಲ್ ಇಟ್ಟು) ಕಾಗ್ದ ಬರೀತೆ ಅಂತೆ..! ಯಂತದೇ ಇರ್ಲಿ ಗಣಪತಿನಾ ನೆನಸ್ಕೋ, ಹೋಪುದಿತ್ತ? ಕೋಡ್ಲೆ ಮನೆ ಬಿಟ್ ಹೋಗ್... ದೇವ್ರಿದ್ದ" ಎನ್ನುತ್ತಾಳೆ.

ಸಿರಿ ಎಂಬ ಮಹಿಳೆಯ ಹೃದಯಂಗಮ ಕತೆ "ಹಕ್ಕಿಲ್ಲದವರು". ಸಂಪಾದನೆ ಮಾಡದ, ಪ್ರೀತಿಯೆಂದರೆ ದೇಹ ಎಂದುಕೊಂಡಂತಹ ಗಂಡನನ್ನು ಬಿಟ್ಟು ಸಿರಿ ತವರುಮನೆ ಸೇರಿದ್ದಾಳೆ. ಬೇಜವಾಬ್ದಾರಿ ಅಣ್ಣನಿಂದ ಹಾಳುಬಿದ್ದ ತೋಟವನ್ನು ಒಂದು ಹದಕ್ಕೆ ತಂದು, ವೃದ್ಧ ತಾಯಿ, ಮರುಳು ತಂಗಿ, ಇಬ್ಬರು ಮಕ್ಕಳನ್ನು ನಿಭಾಯಿಸುತ್ತ ಸಿರಿ ತನ್ನ ಜೀವನ ನಡೆಸುತ್ತಿದ್ದಾಳೆ. ಅಷ್ಟಾದರೂ ಮದುವೆಯಾದ ಹೆಣ್ಣುಮಗಳೆಂದು ಅವಳಿಗೆ ಆಸ್ತಿಯಲ್ಲಿ ಹಕ್ಕು ಕೇಳುವಂತಿಲ್ಲ. ಬದಲಾಗಿ ಆಲಸಿಯಾಗಿ ತೋಟ ಹಾಳುಕೆಡವಿದ ಅಣ್ಣ ಇಂದು ಊರ್ಜಿತ ಸ್ಥಿತಿಗೆ ಬಂದ ಆಸ್ತಿಯ ಮೇಲೆ ತನ್ನ ಹಕ್ಕುಂಟು ಎನ್ನುತ್ತಾನೆ. ಸಿರಿಯ ಸರೀಕರಾದ, ಬಹುಶಃ ಚಿಕ್ಕಂದಿನಲ್ಲಿ ಗೆಳತಿಯರಾಗಿದ್ದ ಮೂವರು ಮಹಿಳೆಯರು ಅನಿರೀಕ್ಷಿತವಾಗಿ ಅವಳ ಮನೆಗೆ ಬರುತ್ತಾರೆ. ಇವರೆಲ್ಲ ವಿದೇಶಗಳಿಗೆ ಹೋಗಿ ಜೀವನದಲ್ಲಿ "ಯಶಸ್ಸು" ಗಳಿಸಿದವರು. ಕಣ್ಣು ಕಾಣದ ಸಿರಿಯ ತಾಯಿ ದೊಡ್ಡಕ್ಕ ಅವರ ಭೇಟಿಯನ್ನು ಆನಂದಿಸಿದರೂ ಸಿರಿಗೆ ಅವರನ್ನು ಮೊದಲಿನಂತೆ ಮಾತನಾಡಿಸಲು ಮುಜುಗರವಾಗುತ್ತದೆ. ತಾನು ಹಳ್ಳಿಯಲ್ಲಿ ಬೆಳೆದವಳು, ಅವರಂತೆ "ಯಶಸ್ಸು" ಗಳಿಸಿದವಳಲ್ಲ ಎಂಬ ಅಳುಕು. ಸಿರಿಯ ಕತೆ ಓದುತ್ತಿದ್ದಂತೆ ನನಗೇಕೋ ಮನಸ್ಸು ಹಿಂಡಿದಂತಾಯಿತು.

"ಅಲ್ಲಲ್ಲಿನ ಲೋಕದವರು" ನೀಳ್ಗತೆಯಲ್ಲಿ ವೈದೇಹಿಯವರು ಭಿನ್ನ ಭಿನ್ನ ಅಂತಸ್ತಿನ ಸ್ತ್ರೀಲೋಕವನ್ನು ಬಿಚ್ಚಿಡುತ್ತಾರೆ. ತಕ್ಕಮಟ್ಟಿಗೆ ಶ್ರೀಮಂತೆ ಲಕ್ಷ್ಮೀದೇವಮ್ಮ. ಅವಳ ಗಂಡ ಹೆಂಡತಿಯನ್ನು ಕೇಳದೆ ಆಶ್ರಯ ಕೊಟ್ಟ, ಏನೊಂದೂ ಸಹಾಯ ಮಾಡದೆ ಕುಳಿತುಕೊಂಡಿರುವ, ಲಕ್ಷ್ಮೀದೇವಮ್ಮನಿಗೆ ತಲೆನೋವಾಗಿರುವ ಬಾಲ ವಿಧವೆ ಗುಂಡಕ್ಕ, ಮನೆಯ ಕೆಲಸಕ್ಕಿದ್ದ, ಮದುವೆಯಾಗದೆ ಎರಡು ಮಕ್ಕಳ ತಾಯಿಯಾದ, ಬ್ರಾಹ್ಮಣಳಾಗಿ ಹುಟ್ಟಿದ್ದರೆ ಎಂದು ಕೆಲವೊಮ್ಮೆ ಕನಸು ಕಾಣುವ ಕೆಳಜಾತಿಯ ಮಂಜಿ, ಮನೆ ಒಳಗಿನ ಕೆಲಸಕ್ಕಿದ್ದ, ಶತ ಆಲಸಿ, ಊರವರ ಹೀಯಾಳಿಕೆಗೆ ಗುರಿಯಾದ ಬಳುವಟೆ ನಾರಾಯಣನ

ಹೆಂಡತಿ ಮಾಂಕಾಳಿ. ಈ ನಾಲ್ವರು ಹೆಂಗಸರ ಜೀವನ ತಮ್ಮ ತಮ್ಮ ಜೀವನದ ವಿವಿಧ ಘಟ್ಟಗಳಲ್ಲಿ ಯಾವಯಾವುದೋ ಕಾರಣಗಳಿಂದ ಪರಸ್ಪರ ಹೊಂದಿಕೊಂಡಿದೆ.

"ಆರತಿ ತಟ್ಟೆ", "ಸಮಾಜ ಶಾಸ್ತ್ರಜ್ಞೆಯ ಟಿಪ್ಪಣಿಗಳು", "ಗುಲಾಬಿ ಟಾಕೀಸು ಮತ್ತು ಸಣ್ಣ ಅಲೆಗಳು", "ಬಾಕಿ ಇತಿಹಾಸ" ಮುಂತಾದ ಹಲವು ಕತೆಗಳಲ್ಲಿ ಕೂಡ ಈ ಗುಂಪಿಗೆ ಸೇರಿದ ಸ್ತ್ರೀ ಪಾತ್ರಗಳನ್ನು ನೋಡುತ್ತೇವೆ. ಹೆಣ್ಣು ತಾನು ಹೆಣ್ಣಾದ್ದರಿಂದಲೇ ಕೆಲವು ರೀತಿಯ ಮುಜುಗರಗಳನ್ನು ಅನುಭವಿಸುತ್ತಾಳೆ, ನಿರ್ಬಂಧನೆಗಳಿಗೆ ಒಳಗಾಗುತ್ತಾಳೆ, ಕೆಲವು ಬಗೆಯ ಶಿಕ್ಷೆಗಳಿಗೆ ಒಳಗಾಗುತ್ತಾಳೆ. ಆದರೆ ಈ ಯಾವ ನಿಯಮಗಳೂ ಗಂಡಸರು ಎಷ್ಟೇ ದುರ್ಬಲರಾಗಿದ್ದರೂ ಅವರಿಗೆ ಅನ್ವಯಿಸುವುದಿಲ್ಲ ಎಂಬ ಧ್ವನಿ ಇಲ್ಲಿ ಮತ್ತು ಇತರ ಕತೆಗಳಲ್ಲಿ ಅಂತರ್ಗತವಾಗಿದೆ.

ಎರಡನೆಯ ಗುಂಪಿನ ಸ್ತ್ರೀಯರು ತರುಣಿಯರಿಂದ ಹಿಡಿದು ಮಧ್ಯವಯಸ್ಸಿನವರೆಗಿನ ಮಹಿಳೆಯರು. ಇವರು ಸ್ತ್ರೀಶೋಷಣೆಯ ವಿರುದ್ಧ ಸದ್ದಿಲ್ಲದೆ ಬಂಡಾಯ ಮಾಡುತ್ತಿರುವವರು. ಇವರಲ್ಲಿ ಮದುವೆಯಾಗದವರೂ, ಮದುವೆಯಾಗಿ ಕೆಲವು ವರ್ಷ ಸಂಸಾರ ಮಾಡಿದವರೂ ಇದ್ದಾರೆ. ಮೊದಲನೆಯ ಗುಂಪಿನವರಂತೆ "ಪಾಲಿಗೆ ಬಂದದ್ದು ಪಂಚಾಮೃತ" ಎಂದು ಜೀವಿಸುವವರಲ್ಲ. ಗಂಡಸರಿಂದ ತಮಗೆ ಅನ್ಯಾಯವಾಗುತ್ತಿರುವಾಗ ತಮ್ಮ ಪ್ರತಿಭಟನೆಯನ್ನು ನಿಶ್ಶಬ್ದವಾಗಿ ವ್ಯಕ್ತಪಡಿಸುವವರು. ಈ ಗುಂಪು ಕೆಲಮಟ್ಟಿಗೆ ವೀಣಾ ಅವರ ಕತೆಗಳ ಎರಡನೆ ಗುಂಪಿಗೆ ಹೋಲುತ್ತದೆಯೆನ್ನಬಹುದು. ವೈದೇಹಿಯವರು ಈ ಗುಂಪಿಗೆ ಸೇರಿದ ಹಲವು ಕತೆಗಳನ್ನು ಬರೆದಿದ್ದಾರೆ. ಇಲ್ಲಿ ಕೆಲವು ಆಯ್ದ ಕತೆಗಳನ್ನು ಉದಾಹರಿಸುತ್ತೇನೆ.

"ಸೌಗಂಧಿಯ ಸ್ವಗತಗಳು" ಕತೆಯ ಸೌಗಂಧಿ ತಂಗಿಯರ ಮದುವೆಯಾದರೂ ಇನ್ನೂ ಮದುವೆಯಾಗದ ಯುವತಿ. "ತನಗೆ ಯಾರನ್ನೂ ಪ್ರೀತಿಸಲು ಸಾಧ್ಯವಾಗಿಲ್ಲ... ಯಾರೂ ತನ್ನನ್ನು ಪ್ರೀತಿಸಲಿಲ್ಲ. ಯಾಕೆ? ಯಾಕಿರಬಹುದು? ತಾಯಿಯೆಂದಂತೆ ಗಂಡಸರನ್ನು ಆಕರ್ಷಿಸುವ ಶಕ್ತಿ ನನ್ನಲ್ಲಿಲ್ಲವೇ?" ಎಂದು ಪ್ರಶ್ನಿಸಿಕೊಳ್ಳುತ್ತಾಳೆ. ಮನೆಯಲ್ಲಿ ಉಸುರು ಕಟ್ಟುವಂತೆ ಸದಾ ರಕ್ಷಣೆಯ ನೆರಳಿನಂತಿರುವ ಅಪ್ಪ. ಸೌಗಂಧಿಗೆ ಸ್ವಾತಂತ್ರ್ಯ ಬೇಕು. ಇಲ್ಲಿದ್ದು ತನ್ನ ಸ್ವರದ ಗುರುತನ್ನು ತಾನೇ ಮರೆಯುವುದಕ್ಕಿಂತ ಒಬ್ಬಂಟಿಯಾಗಿ ದೂರದೂರಿನಲ್ಲಿ ಇರಬೇಕು ಎಂಬಂಥ ಪುಟ್ಟ ಆಸೆಯನ್ನು ಹಾಕಿಕೊಂಡು ಬೇರೆ ಊರಿಗೆ ಬಂದಳು. ಬಾಡಿಗೆಯ ಮನೆಯೊಂದರಲ್ಲಿ ಉಳಿದಳು. ಆದರೆ ಆದದ್ದೇನು? ಮನೆಯೊಡತಿ ಮತ್ತೊಬ್ಬ ಅಪ್ಪನಂತಾದಳು. ತನ್ನ ಸ್ವಾತಂತ್ರ್ಯವನ್ನು ಆಕೆ ಬಲು ನಾಜೂಕಾಗಿ ಹರಣ ಮಾಡಲು ಹವಣಿಸುತ್ತಾಳೆ. ಸ್ವಾತಂತ್ರ್ಯ ಅಪಹರಿಸುವ ರೀತಿಯೇ ಹೀಗಿರುತ್ತದೆಯೇ? ಸ್ವಾತಂತ್ರ್ಯ ಬಯಸಿ ಮನೆ ತೊರೆದ, ಕೊನೆಗೆ ನಿರಾಶೆಯಲ್ಲಿಯೇ ಮುಕ್ತಾಯವಾಗುವ ಸೌಗಂಧಿಯ ಚಿತ್ರ ಮನಮುಟ್ಟುವಂತೆ ಮೂಡಿ ಬಂದಿದೆ. ಹೆಣ್ಣಿನ ಲೈಂಗಿಕತೆಯನ್ನು ಸಹಾನುಭೂತಿಯಿಂದ, ಅಷ್ಟೇ ಸಹಜವಾಗಿ ವ್ಯಕ್ತಪಡಿಸುವ ಕತೆ.

"ಅಕ್ಕು" ಕತೆಯ ಅಕ್ಕು ಒಂದು ವಿಲಕ್ಷಣ ನಡತೆಯ ಯುವತಿ. ಮದುವೆಯಾಗಿ, ಮಕ್ಕಳನ್ನು ಹೆತ್ತು ಸುಖ ಸಂಸಾರದ ಕನಸು ಕಂಡವಳು. ಆದರೆ ಮದುವೆಯ ಮರುದಿನವೇ ಗಂಡ ಸನ್ಯಾಸಿಯ ಹಿಂದೆ ಹೊರಟುಹೋದಾಗ ಅಕ್ಕು ಅರೆಹುಚ್ಚಿಯಂತಾಗುತ್ತಾಳೆ. ಜನರೇನನ್ನುತ್ತಾರೆ ಎಂಬ ಪರಿವೆಯಿಲ್ಲದೆ, ತನ್ನದೇ ಲೋಕದಲ್ಲಿ ಇರುತ್ತಾಳೆ. ತಾನು ಗರ್ಭಿಣಿ, ಮಗು ಹೆತ್ತೆ ಇತ್ಯಾದಿ ಭ್ರಮೆಯ ಆಟ ಆಡುತ್ತಿರುತ್ತಾಳೆ. ಆದರೆ ಸ್ವಸ್ಥ ಎಂದುಕೊಂಡ ಸಮಾಜ ಅವಳನ್ನು ಕ್ರೂರವಾಗಿ ನಡೆಸಿಕೊಳ್ಳುತ್ತದೆ. ಇಲ್ಲಿ ಅಕ್ಕು ಅಸ್ವಸ್ಥಳೋ, ಅಥವಾ ಸಮಾಜವೋ ಎಂಬ ಸಂದೇಹ ಉಂಟಾಗುತ್ತದೆ.

"ಗೂಡಿನೊಳಗೊಂದು ಹಕ್ಕಿ" ಕತೆಯ ಮಾಲತಿಗೆ ಅವಳ ದಿನಚರಿಯಲ್ಲಿ ಯಾರೂ ಹಸ್ತಕ್ಷೇಪ ಮಾಡದೆ ಒಂದು ಇಡೀ ದಿನ ಕಳೆದರೆ ಹೇಗಿರುತ್ತದೆ ಎಂದು ನೋಡುವ ಆಸೆ. ಗಂಡನಿಂದ ಮನೆಯ ಹೊರಗಿಂದ ಬೀಗ ಹಾಕಿಸಿಕೊಂಡು ಯಾರ ಹಂಗಿಲ್ಲದೆ ತಾನೊಬ್ಬಳೇ ತನಗೆ ಬೇಕಾದಂತೆ ಕಳೆಯಲೆತ್ನಿಸಿದಾಗ ಆದದ್ದೇ ಬೇರೆ. ತಾನೆಂದುಕೊಂಡ ಸ್ವಾತಂತ್ರ್ಯದ "ಉದ್ರೇಕ"ದ ಅನುಭವ ಆಗಲೇ ಇಲ್ಲ. ಬದುಕು ತೀರ ಇಕ್ಕಟ್ಟಾಗಿದೆ ಎನಿಸಿತು. ತಾನು ಯಾರಿಗಾಗಿಯೋ ಬದುಕುತ್ತಿದ್ದೇನೆ, ತನಗಾಗಿಯಲ್ಲ ಎಂತೆಲ್ಲ ಸಹಾನುಭೂತಿ ಹೊಮ್ಮಿ ಹೊಮ್ಮಿ ಬಂದು ಕಣ್ಣುಗಳು ಕರಿಮೋಡಗಳಾದವು. "ಯಾವ ಕ್ಷಣಗಳೂ ಸ್ವಂತವಲ್ಲ. ಎಲ್ಲ ಬಾಡಿಗೆಯವೇ" ಎನಿಸಿತು.

"ಅಂತರಂಗದ ಪುಟಗಳು" ಜೀವನ ಸಂಗಾತಿಯನ್ನು ಆರಿಸಿಕೊಳ್ಳುವಲ್ಲಿ ತೊಳಲಾಡುತ್ತಿರುವ ಆಧುನಿಕ ಯುವತಿಯೊಬ್ಬಳ ನೈಜ ಚಿತ್ರಣ. ವೀಣಾ ಅವರ "ಪ್ರಶ್ನೆ" ಕತೆಯ ನಾಯಕಿ ಶಶಿಗೂ ಮತ್ತು ವೈದೇಹಿಯವರ ಈ ಕತೆಯ ನಾಯಕಿ ಅಚಲೆಗೂ ಸಾಮ್ಯತೆ ಕಾಣಬಹುದು. ಅಚಲೆ ನೋಡಲು ಬಂದ ಹನ್ನೊಂದು ಹುಡುಗರನ್ನು ಒಬ್ಬರ ನಂತರ ಇನ್ನೊಬ್ಬರಂತೆ, ಅವರು ಅಚಲೆಯನ್ನು ಮದುವೆಯಾಗಲು ಒಪ್ಪಿಕೊಂಡರೂ, ತಿರಸ್ಕರಿಸಿದಳು. ಅಚಲೆಗೆ "ಯಾರ ಕಣ್ಣಲ್ಲಿಯೂ ದೀಪದ ಕಾಂತಿಯನ್ನು ನಾ ಕಾಣಲಿಲ್ಲ. ಇವನ ಮಗುವನ್ನು ನಾನು ಧರಿಸಬೇಕು ಎಂಬ ಅದಮ್ಯ ಇಚ್ಛೆ ಉಂಟಾಗಲಿಲ್ಲ" ಹನ್ನೆರಡನೆಯವ ಅಚಲೆಯನ್ನು ನಿರಾಕರಿಸಿದ. ಅಚಲೆ ಇನ್ನೂ ಮದುವೆಯಾಗದೆ ಕೊಳೆಯುತ್ತಿದ್ದಾಳೆ ಎಂದು ಕನಿಕರ ಪಟ್ಟ ಪುಟ್ಟತ್ತೆ ವೆಂಕಟ ಎಂಬ ಹುಡುಗನನ್ನು ಕಳಿಸಿದಳು. ಆತನೊಡನೆ ಮನೆಯಲ್ಲಿ ಒಬ್ಬಳೇ ಇದ್ದಾಗಲೂ ಆಚಲೆ "ನಾನು ನಡುಗಲಿಲ್ಲ. ಬಿಸಿಯಾಗಲೂ ಇಲ್ಲ. ತುತ್ತತುದಿಯ ಘಟನೆ ನಡೆದು ಹರಿದುಹೋಗಬಹುದಿತ್ತು. ಆದರೆ ಅದರ ಮೂಲಾಕ್ಷರವೂ ಮೂಡಲಿಲ್ಲ". ಮದುವೆಯಾಗಲು ವೆಂಕಟ ಕೇಳಿದಾಗ "ಅಂತೂ ನಿನಗೊಂದು ಹುಡುಗಿ ಬೇಕು. ಫ್ಯಾನ್, ಫ್ರಿಜ್, ಟೇಬಲ್, ಪಾತ್ರ ಪರಡಿ, ಸೈಟು - ಇತ್ಯಾದಿಗಳಂತೆ... ಅಲ್ಲ". "ಯಾಕೆ ಹಾಗೆ ಕೇಳುತ್ತಿ? ಈಗಿನ ಹುಡುಗಿಯರಿಗೆ ಮತ್ತೆಂತ ಬೇಕು? ಹಾಗೆ. ನಾನಿದ್ದೇನಲ್ಲ? ವರ್ಷಕ್ಕೆ ಎರಡೆರಡು ಮಕ್ಕಳನ್ನು ಹೆರಲಿ ಬೇಕಾದರೆ...!"

"ನಟಿ" ಕತೆಯ ರತ್ನ ತನ್ನ ಊರಿನ ಹಲವರನ್ನು "ಪಾರ್ಸು" ಮಾಡಿ ಇತರರನ್ನು ನಗಿಸುವ ಮಹಿಳೆ. ನಿತ್ಯ ಉತ್ಸಾಹಿ. ಬಡಕಲು ದೇಹ. ಉದ್ದ ಮುಖ. ಹಣೆಯ ಮಧ್ಯ

ಸಣ್ಣದೊಂದು ಸ್ಟಿಕರ್. ಬಹುಶಃ ಒಂಟಿ ಹೆಂಗಸು. ಬೇರೆಯವರ ಅನುಕರಣೆ ಮಾಡಿ ನಗಿಸುವ ಈಕೆಯ ಒಡಲಲ್ಲಿ ನೋವು ತುಂಬಿಕೊಂಡಿರುವದನ್ನು ಲೇಖಕಿ ಕತೆಯ ಕೊನೆಯಲ್ಲಿ ಚಿತ್ರಿಸಿದ್ದಾರೆ. ಹಲವು ನಟನೆಗಳಿಂದ ನೆರೆದಿದ್ದ ಮಹಿಳೆಯರನ್ನು ನಗಿಸಿ ಕೊನೆಯಲ್ಲಿ ಕೋಣೆಯನ್ನು ಪ್ರವೇಶಿಸಿ ಬಾಗಿಲು ಹಾಕಿಕೊಳ್ಳುತ್ತಾಳೆ. ಯಾರು ಎಷ್ಟು ಕರೆದರೂ ಹೊರಗೆ ಬರುವುದಿಲ್ಲ. ಯಾಕೆಂಬ ಸುಳಿವು ಯಾರಿಗೂ ಗೊತ್ತಾಗುವದಿಲ್ಲ.

ಮೂರನೆಯ ಗುಂಪು ಚೈತನ್ಯಶಾಲಿ, ಆಶಾವಾದಿ ಯುವತಿಯರದು. ಈ ಗುಂಪಿಗೆ ಸೇರಿದ ಅತ್ಯಂತ ಯಶಸ್ವಿ ಕತೆ "ಅಮ್ಮಚ್ಚಿಯೆಂಬ ನೆನಪು". ಟಿ. ಪಿ. ಅಶೋಕ್ ಅವರು ಹೇಳುವಂತೆ "ಅಮ್ಮಚ್ಚಿಯು ವೈದೇಹಿ ಸೃಷ್ಟಿಸಿದ ಅತ್ಯಂತ ಚೈತನ್ಯಶಾಲಿ ಪಾತ್ರಗಳಲ್ಲಿ ಒಂದು. ಅವಳ ಚುರುಕುತನ, ಲವಲವಿಕೆ, ಸಂಭ್ರಮ ಕಣ್ಣು ತುಂಬುವಂಥದ್ದು. ಎಲ್ಲ ಇದ್ದೈ ಬರಗು. ಯಾವ್ದೂ ಬರ್ತಿಲ್ಲೆ ಅಂತೆಳಿ ಇಪ್ಪುದಾಗ ಎಂದು ತನ್ನ ಪುಟ್ಟ ಗೆಳತಿಗೆ ತನಗೆ ಗೊತ್ತಿದ್ದನ್ನೆಲ್ಲ ಕಲಿಸುವ ಅಮ್ಮಚ್ಚಿಯ ಪ್ರತಿಭೆ, ಎನರ್ಜಿಗಳನ್ನು ಗುರುತಿಸುವವರು ಅವಳ ಪರಿಸರದಲ್ಲಿ ಇಲ್ಲ ಅಷ್ಟೆ." ಹಾಗಿದ್ದರೂ ಮರ್ಯಾದೆಗಂಜುವ, ಸಾಂಪ್ರದಾಯಿಕ ಸಮಾಜದಲ್ಲಿ ಅಮ್ಮಚ್ಚಿ ತನಗಿಂತ ಹಲವು ವರ್ಷ ದೊಡ್ಡವನಾದ ಯಂಕಪ್ಪಯ್ಯನನ್ನು ಅನಿವಾರ್ಯವಾಗಿ ಮದುವೆಯಾಗಬೇಕಾಗುತ್ತದೆ. ಮದುವೆಯಾಗಿ ಆತನೊಂದಿಗೆ ತಿರುಪತಿಗೆ ತೆರಳುತ್ತಾಳೆ. ಕೆಲವು ತಿಂಗಳು ಕಳೆದ ಮೇಲೆ ಒಬ್ಬಳೇ ವಾಪಸಾಗುತ್ತಾಳೆ. "ಏನು ರಂಡೆ ಒಬ್ಬಳೇ! ಯಂತ ಕತೆ ಮಾಡಿಂಡೆ?" ಎಂದು ಗುಮಾನಿಯಿಂದ ಕೇಳಿದ ತಾಯಿಗೆ "ನಿನ್ ಯಂಕಪ್ಪಯ್ಯ ನೇಣು ಹಾಕಿಂಡ" ಎಂದು ನಿರಾಳ ದನಿಯಲ್ಲಿ ಉಸುರುತ್ತಾಳೆ.

ಇನ್ನೊಂದು ಉದಾಹರಣೆ "ಪುಟ್ಟಮ್ಮತ್ತೆ ಮತ್ತು ಮೊಮ್ಮಗಳು" ಕತೆಯ ಮೊಮ್ಮಗಳು ಕಮಲಾವತಿ. ಕಮಲಾವತಿ ತನ್ನ ಸುತ್ತಮುತ್ತ ಏನಾಗುತ್ತಿದೆಯೆಂದು ಸೂಕ್ಷ್ಮವಾಗಿ ಗಮನಿಸಬಲ್ಲವಳಾಗಿದ್ದಾಳೆ. ಅಷ್ಟೇ ಅಲ್ಲ, ಅದಕ್ಕೆ ತೀವ್ರವಾಗಿ ಪ್ರತಿಕ್ರಯಿಸುತ್ತಲೂ ಇದ್ದಾಳೆ. ಯಾರಿಗೂ ಕೇರು ಮಾಡದ ದಿಟ್ಟೆ ಅವಳು. ಆಕೆಗೆ ಸಿನೆಮಾ ಅಂದರೆ ಇಷ್ಟ. ಒಂದು ಕೆಲಸ ಹುಡುಕಿ, ದುಡಿದು ಅಜ್ಜಿಯನ್ನು ಸಾಕಿಕೊಳ್ಳಬೇಕೆಂಬ ಬಯಕೆ. ಚುಡಾಯಿಸಲು ಬಂದವನನ್ನು ಧೈರ್ಯದಿಂದ ತರಾಟೆಗೆ ತೆಗೆದುಕೊಳ್ಳುತ್ತಾಳೆ.

"ಅವಲಂಬಿತರು" ನಿರೂಪಕಿಯ ಎದುರು ಮನೆ ಮಗುವಾಡಿಸಲು ಬಂದ ಸುಮಾರು ಹದಿನೈದು ವಯಸ್ಸಿನ ಅಹಲ್ಯೆಯ ಕತೆ. ಮಾಲಕಿ ವೇತನ ಕೊಡದಿದ್ದರೂ, ಪ್ರೀತಿಯಿಂದ ನಡೆಸಿಕೊಳ್ಳದಿದ್ದರೂ, ಮಗುವನ್ನು ಅತ್ಯಂತ ಪ್ರೀತಿಯಿಂದ ಕಾಳಜೀಪೂರ್ವಕವಾಗಿ ನೋಡಿಕೊಳ್ಳುತ್ತಿರುವ ಹುಡುಗಿ. ಅಲ್ಲದೆ ತನ್ನದೇ ಉಜ್ವಲ ಭವಿಷ್ಯದ ಕನಸು ಕಾಣುತ್ತಿರುವ ಆಶಾವಾದಿ. ನಿರೂಪಕಿಯ ಹತ್ತಿರ "ನೋಡಿದರೆ ಶಾರದಕ್ಕನಿಗಿಂತ ನಾನು ಸಾಪಿಲ್ಲವ? ಯಾರಾದರೂ ಅವರ ಗಂಡನಿಗಿಂತ ಚಂದದವರು ನನ್ನನ್ನು ಮದುವೆಯಾದಾರು. ನಾನು ಅವರನ್ನು ಕರೆದುಕೊಂಡೇ ಒಮ್ಮೆ ಇವರ ಮನೆಗೆ ಬಂದು ಕಾಪಿ ಕುಡಿದು ಹೋದೇನು" ಎನ್ನುತ್ತಾಳೆ. ನಿರೂಪಕಿ ಹೇಳುವಂತೆ "ಹುಡುಗಿಯ ಮುಖದಲ್ಲಿ

ಪ್ರಾರ್ಥನೆಯೋ, ಛಲವೋ, ವಿಶ್ವಾಸವೋ, ಎಂತದೋ ಸ್ಪಷ್ಟ ತಿಳಿಯುತ್ತಿರಲಿಲ್ಲ. ಯಾವ ಹಿನ್ನೆಲೆಯೂ, ಮುನ್ನೆಲೆಯೂ ಇಲ್ಲದ ಆಕಾಂಕ್ಷೆಯ ಹೊಳಪು ಮಾತ್ರ ಇತ್ತು."

ವೀಣಾ ಮತ್ತು ವೈದೇಹಿ ಇಬ್ಬರೂ ಕಾಳಿದಾಸನ ಶಕುಂತಲೆಯನ್ನು ಆಧರಿಸಿ ಕತೆ ಬರೆದಿದ್ದಾರೆ. ವೀಣಾ ಅವರ "ನಿರಾಕರಣೆ" ಮತ್ತು ವೈದೇಹಿಯವರ "ಶಕುಂತಲೆಯೊಂದಿಗೆ ಒಂದು ಅಪರಾಹ್ನ" ಕತೆಯ ಹರಹು ಮತ್ತು ನಿರೂಪಣೆ ಸಂಪೂರ್ಣ ಭಿನ್ನವಾದದ್ದು. ಎರಡು ಕತೆಗಳಲ್ಲಿರುವ ಸಾಮ್ಯ ಎಂದರೆ ಶಕುಂತಲೆಯ ಸ್ವಾಭಿಮಾನಿ, ದಿಟ್ಟ ವ್ಯಕ್ತಿತ್ವದ ಚಿತ್ರಣ. ವೈದೇಹಿಯವರ ಶಕುಂತಲೆ "ದೂರ್ವಾಸರ ಶಾಪವೆಲ್ಲ ಕವಿ ಕಲ್ಪನೆ. ಕಲ್ಪನೆಯ ಕುದುರೆಗೆ ಎಂದೂ ಲಂಗುಲಗಾಮಿಲ್ಲ. ಕವಿ ಶಾಪ ಗೀಪ ಇತ್ಯಾದಿಗಳೆಲ್ಲ ಪುರುಷರ ಲಂಪಟತ್ವ ಮುಚ್ಚಿಡಲು ಹವಣಿಸಿದ, ಎಲ್ಲ ಜಾಣ ಮರೆವಿನ ಮಲ್ಲರನ್ನೂ ತನ್ನ ತೆಕ್ಕೆಯೊಳಗೆ ಸುರಕ್ಷಿತವಾಗಿರಿಸುವ ಪುರುಷ ಕಟ್ಟಿದ ವಿಸ್ಮರಣೆಯ ಕತೆ" ಎನ್ನುತ್ತಾಳೆ. "ಉಂಗುರ ತೋರಿಸಿ ಪ್ರೇಮದಾನ ಪಡೆಯುವಷ್ಟು ಶೂನ್ಯಳೇನು ನಾನು?" ಎಂದು ಸವಾಲು ಹಾಕುತ್ತಾಳೆ. ವೀಣಾ ಅವರ ಶಕುಂತಲೆ, ಮಗನ ಜೊತೆ ಅರಮನೆಗೆ ತಿರುಗಿ ಬಾ ಎಂದು ದುಷ್ಯಂತ ಕರೆದಾಗ "ನಾರಿಯ ಮಧುರ ಭಾವನೆಗಳನ್ನು ಎಗ್ಗಿಲ್ಲದೆ ಹೊಸಕಿಹಾಕುವ, ನಂತರ ಬಂದು ಕ್ಷಮೆ ಕೇಳುವ, ಆಕೆ ಕ್ಷಮಿಸಿಯೇ ಕ್ಷಮಿಸುತ್ತಾಳೆಂಬ ಖಚಿತ ನಂಬಿಕೆ ಹೊಂದಿರುವ, ಇಂತಹ ಗಂಡಸಿಗೆ ಧಿಕ್ಕಾರ!" ಎಂದುಕೊಳ್ಳುತ್ತಾಳೆ. ದುಷ್ಯಂತ ದೂರ್ವಾಸರ ಶಾಪದಿಂದ ತನಗೆ ಮರೆವು ಬಂದಿತ್ತು ಎಂದು ಸಮರ್ಥಿಸಿಕೊಳ್ಳಲು ಹೊರಟಾಗ ಶಕುಂತಲೆ "ತಾನು ಮಾಡಿದ ತಪ್ಪಿನಿಂದ ಸುಲಭವಾಗಿ ಪಾರಾಗಲು ಪುರುಷನಿಗೆ ನೂರು ದಾರಿಗಳಿವೆ. ತನ್ನ ಅನುಚಿತ ವರ್ತನೆಯಿಂದ ಬೇರೆಯವರಿಗೆ ಆಗುವ ನೋವಿನ ಹೊಣೆಯಿಂದ ತಪ್ಪಿಸಿಕೊಳ್ಳಲೂ ಆತನಿಗೆ ಹಲವು ಮಾರ್ಗಗಳಿವೆ. ಪುರುಷ ತಪ್ಪು ಮಾಡಿದನೆಂದರೆ ಸಮಾಜ ಗಂಭೀರವಾಗಿ ಪರಿಗಣಿಸುವದೂ ಇಲ್ಲ" ಎಂದುಕೊಳ್ಳುತ್ತಾಳೆ.

ವೈದೇಹಿಯವರ "ನೋಡಬಾರದು ಚೀಲದೊಳಗನು" ಎಂಬ ಕವನದ ಈ ಸಾಲುಗಳೊಂದಿಗೆ ಲೇಖನವನ್ನು ಮುಗಿಸುತ್ತೇನೆ.

**ಚೀಲದೊಳಗಿನ ಲೋಕ ಮತ್ತು ಮನಸಿನ ಲೋಕ**
**ಒಂದೆ ಎಂದೀಗ ತೂಗಿ ನೋಡುವಿರೇನು?**
**ಬೆಪ್ಪು ಕಾಪುರುಷರೇ**
**ವ್ಯರ್ಥ ಕೈನೋವೇಕೆ?**
**ತೂಗಲಾರಿರಿ ತಪ್ಪು ಸಮೀಕರಣವನು.**



# ವಂಶವೃಕ್ಷ ಮತ್ತು ಸ್ತ್ರೀಪರ ಚಿಂತನೆ

ಇಂಗ್ಲಿಷ್ ಮೂಲ: **ಶಶಾಂಕ್ ಜಯಕುಮಾರ್**; Laramie, Wyoming
ಕನ್ನಡಕ್ಕೆ: **ಜ್ಯೋತಿ ವೆಂಕಟಸುಬ್ರಹ್ಮಣ್ಯ**; Laramie, Wyoming

*

ಪರಸ್ಪರ ವಿರೋಧಾತ್ಮಕವಾದ ಸೈದ್ಧಾಂತಿಕ ಮತ್ತು ಭಾವನಾತ್ಮಕ ಆಲೋಚನಾ ಸರಣಿಗಳ ಶೋಧನೆಯೇ ಎಸ್. ಎಲ್. ಭೈರಪ್ಪನವರ 'ವಂಶವೃಕ್ಷ'ದ ಪ್ರೇರಕ ಶಕ್ತಿಯೆನ್ನಬಹುದು. ಈ ಕಥೆಯಲ್ಲಿ ಹಲವಾರು ಪಾತ್ರಗಳ ವಿಭಿನ್ನ ದೃಷ್ಟಿಕೋನಗಳ ಬಗೆಗಿನ ನಿರೂಪಣೆಯೇ ವಿಶೇಷವಾಗಿ ಎದ್ದು ತೋರುತ್ತದೆ. ಕುಟುಂಬದ ಮುಖ್ಯಸ್ಥನಾದ ಶ್ರೀನಿವಾಸ ಶ್ರೋತ್ರಿ, ಶ್ರೋತ್ರಿಯ ತೀರಿಕೊಂಡ ಮಗನ ವಿಧವೆಯಾದ ಕಾತ್ಯಾಯನಿ, ಸಂಶೋಧನಾನಿರತ ವಿದ್ವಾಂಸ ಸದಾಶಿವರಾವ್, ಆತನ ಸೇವೆಗೆಂದೇ ತನ್ನನ್ನು ಸಮರ್ಪಿಸಿಕೊಂಡ ಅವನ ಪತ್ನಿ ನಾಗಲಕ್ಷ್ಮಿ, ರಾವ್‌ನ ಎರಡನೆಯ ಪತ್ನಿ ಮತ್ತು ಅವನ ಸಹವರ್ತಿಯಾದ ಕರುಣಾ ಮತ್ತು ಇಂಗ್ಲಿಷ್ ಪ್ರಾಧ್ಯಾಪಕ ಮತ್ತು ನಾಟಕಕಾರ ರಾಜಾರಾವ್ (ರಾವ್‌ನ ತಮ್ಮ) ಇಲ್ಲಿಯ ಮುಖ್ಯ ಪಾತ್ರಗಳು. ಇಲ್ಲಿ ಯಾವುದೇ ಒಂದು ಏಕಮಾತ್ರ ಸಿದ್ಧಾಂತ ಮತ್ತಿತರ ದೃಷ್ಟಿಕೋನಗಳನ್ನು ಅತಿಕ್ರಮಿಸಿಕೊಳ್ಳುವುದಿಲ್ಲ. ಈ ಅಂಶ ಕಾದಂಬರಿಯಲ್ಲಿ ಬದುಕಿನ ಸಂಘರ್ಷಗಳ ಮತ್ತು ಕ್ರಿಯೆಗಳ ಪರಿಣಾಮಗಳ ಬಗೆಗಿನ ಸೂಕ್ಷ್ಮಾವಲೋಕನಕ್ಕೆ ಎಡೆಮಾಡಿಕೊಡುತ್ತದೆ.

ಇದು 1965ರಲ್ಲಿ ರಚಿತವಾದ ಕೃತಿಯಾದರೂ ಇಂದಿಗೂ ನಿಷಿದ್ಧ ಎಂದು ಪರಿಗಣಿಸ್ಪಡುವ ಆಲೋಚನೆಗಳನ್ನು ಮತ್ತು ಕೃತ್ಯಗಳನ್ನು ಪರಿಕಿಸುತ್ತದೆ. ಲೇಖಕ ಸ್ತ್ರೀಸಮಾನತಾವಾದ ಅಥವಾ ಸ್ತ್ರೀಪರ ಚಿಂತನೆಗಳ ಬಗ್ಗೆ ನೇರವಾಗಿ ಎಲ್ಲಿಯೂ

ಉಲ್ಲೇಖಿಸದಿದ್ದರೂ ಸ್ತ್ರೀಪರ ಚಿಂತನೆಯ ಸೂಕ್ಷ್ಮ ಹೊಳಹು ಕಥನದಲ್ಲಿ ಹಾಸುಹೊಕ್ಕಾಗಿದೆ. ವಿಧವೆ ಕಾತ್ಯಾಯನಿ ಮರುಮದುವೆಯಾಗಿ ಉನ್ನತ ವಿದ್ಯಾಭ್ಯಾಸವನ್ನು ಮುಂದುವರೆಸುತ್ತಾಳೆ. ಇತಿಹಾಸದ ವಿದ್ಯಾರ್ಥಿನಿಯಾದ ಕರುಣಾ ತನ್ನ ನಂತರವೂ ಉಳಿಯುವಂತಹ ಮಹತ್ತರ ವ್ಯಾಸಂಗಿಕ ಸಾಧನೆಗಾಗಿ ಮಾತೃತ್ವದ ಬಯಕೆಯನ್ನೇ ಬಲಿಕೊಡುತ್ತಾಳೆ.

ಶ್ರೋತ್ರಿಯ ವಿಚಾರಧಾರೆಯನ್ನು ಹೊರತುಪಡಿಸಿದರೆ ಪುಸ್ತಕದ ಬಹುಪಾಲು ಮೀಸಲಾಗಿರುವುದು ಕಾತ್ಯಾಯನಿಯ ಚಿಂತನೆಗಳಿಗೆ. ಪ್ರಾರಂಭದಲ್ಲಿ ಆಕೆ ಒಬ್ಬ ಅಸಹಾಯಕಳಂತೆ ಕಾಣಿಸುತ್ತಾಳೆ. ಆಕೆಯ ಪತಿ ಅನಿರೀಕ್ಷಿತವಾಗಿ ನದಿಯಲ್ಲಿ ಮುಳುಗಿ ಸತ್ತಾಗ ಅವರಿಬ್ಬರ ಎರಡು ವರ್ಷದ ಪುಟ್ಟ ಕಂದನನ್ನು ಸಾಕುವ ಜವಾಬ್ದಾರಿ ಒಂಟಿಯಾದ ಕಾತ್ಯಾಯನಿ ಮತ್ತವಳ ಅತ್ತೆ ಮಾವನ ಪಾಲಿಗೆ ಸೇರುತ್ತದೆ. ಮಾವ ಶ್ರೋತ್ರಿ ಉಪನಿಷದ್, ಭಗವದ್ಗೀತೆಗಳನ್ನು ಓದುವುದರಿಂದ ಅವಳ ದುರದೃಷ್ಟವನ್ನು ಸಮಚಿತ್ತಳಾಗಿ ಸ್ವೀಕರಿಸುವ ಮನೋಸ್ಥೈರ್ಯ ಬರುವುದೆಂದು ಒತ್ತಾಯಿಸಿದರೂ ತನಗೊದಗಿದ ಪರಿಸ್ಥಿತಿಯ ಕ್ರೂರ ವಾಸ್ತವತೆಯನ್ನು ಆ ರೀತಿಯಲ್ಲಿ ಅರ್ಥೈಸಿಕೊಳ್ಳುವುದಕ್ಕೆ ಕಾತ್ಯಾಯನಿಯ ಮನಸ್ಸು ಒಪ್ಪುವುದಿಲ್ಲ. ಅವಳ ದಿನಚರಿಯೆಂದರೆ ಮನೆಯನ್ನು ರಂಗೋಲಿಯಿಂದ ಸಿಂಗರಿಸುವುದು ಮತ್ತು ತನ್ನ ಪುಟ್ಟ ಮಗುವಿನೊಂದಿಗೆ ಆಟವಾಡುವುದರಲ್ಲಿ ಕಳೆಯುವುದು. ಮನೆಯ ಎಲ್ಲ ಜವಾಬ್ದಾರಿಯನ್ನೂ ಅತ್ತೆ, ಮಾವ ಮತ್ತು ಸೇವಕರು ವಹಿಸಿಕೊಳ್ಳುವುದರಿಂದ ಆಕೆ ತನ್ನ ಒಂಟಿತನವನ್ನು ನಿಭಾಯಿಸುವುದರಲ್ಲಿ ಮಾತ್ರವೇ ತನ್ನನ್ನು ತೊಡಗಿಸಿಕೊಳ್ಳುವಂತಾಗುತ್ತದೆ.

ಅಂದಿನ ಕಾಲದಲ್ಲಿ ಹೆಚ್ಚೂ ಕಡಿಮೆ ಎಲ್ಲ ವಿಧವೆಯರೂ ತಮ್ಮ ತಲೆಯನ್ನು ಬೋಳಿಸಿಕೊಂಡು ಸಾಂಪ್ರದಾಯಿಕವಾದ ಕೆಂಪು ಸೀರೆ ಧರಿಸಿ ಪ್ರಾಪಂಚಿಕ ವ್ಯವಹಾರಗಳಿಂದ ದೂರವಿರುತ್ತಿದ್ದರು. ವೈಧವ್ಯವನ್ನು ಆ ಹೆಣ್ಣುಮಕ್ಕಳ ದೋಷವೆಂದೇ ಪರಿಗಣಿಸಲಾಗುತ್ತಿತ್ತು. ಶಾಸ್ತ್ರಗಳಲ್ಲಿ ಇದಕ್ಕೆ ಯಾವುದೇ ಪುರಾವೆಯಿಲ್ಲದಿದ್ದರೂ ಸಮಾಜದಲ್ಲಿ ಪತಿ ಮತ್ತು ಪತ್ನಿಯ ಸ್ಥಾನಗಳಿಗಿದ್ದ ತಾರತಮ್ಯದಲ್ಲಿ ಇದಕ್ಕೆ ಸಾಕ್ಷಿಯಿದೆ. ಹೆಂಡತಿ ತೀರಿಹೋದರೆ ಗಂಡ ತನ್ನ ಜೀವನವನ್ನೆಲ್ಲ ಶೋಕದಿಂದ ಕಳೆಯಬೇಕೆಂದು ಯಾರೂ ಅಪೇಕ್ಷಿಸುವುದಿಲ್ಲ. ಒಬ್ಬ ವಿಧವೆ ವಿರಕ್ತಳಾಗಿ ಬದುಕುವುದಕ್ಕೆ ವಿರುದ್ಧವಾಗಿ ಆತನಿಗೆ ಯಾವುದೇ ನಿರ್ಬಂಧನಗಳಿಲ್ಲದೆ, ಯಾವುದೇ ವಿವಾದಗಳಿಲ್ಲದೆ ಮರುಮದುವೆಯಾಗಿ ಹುಟ್ಟುವ ಮಕ್ಕಳೊಂದಿಗೆ ತನ್ನ ವಂಶಾವಳಿಯನ್ನು ಬೆಳೆಸಿಕೊಂಡು ಸುಖವಾಗಿ ಬದುಕಲು ಸಾಧ್ಯವಿತ್ತು. ಆದರೆ ಹೆಣ್ಣು ಮದುವೆಯಾಗಿ ಕುಟುಂಬವೊಂದನ್ನು ಪ್ರವೇಶಿಸುವುದು ಗಂಡನ ವಂಶೋದ್ಧಾರಕ್ಕಷ್ಟೇ ಹೊರತು ತನ್ನ ವಂಶ ಬೆಳೆಸುವುದಕ್ಕಲ್ಲ!

ಕಾತ್ಯಾಯನಿ ಪ್ರಾರಂಭದಿಂದಲೂ ಈ ಪದ್ಧತಿಯನ್ನು ವಿರೋಧಿಸುತ್ತಾಳೆ. ಎಲ್ಲರಂತೆ ತಲೆ ಬೋಳಿಸದೆ, ಕೆಂಪಿಗೆ ಬದಲಾಗಿ ಬಿಳಿಯ ಸೀರೆಯುಡುತ್ತಾಳೆ. ದುಃಖತಪ್ತಳಾದರೂ ತನ್ನನ್ನು ಅದು ನುಂಗಲು ಆಕೆ ಬಿಡುವುದಿಲ್ಲ. ಮಾವ ಒತ್ತಾಯಿಸಿದಂತೆ ಶಾಸ್ತ್ರಗ್ರಂಥಗಳನ್ನು ಓದುವುದಕ್ಕೆ ಬದಲಾಗಿ ತನ್ನ ಪತಿಯ ಕಾಲೇಜಿನ ಪಠ್ಯ ಪುಸ್ತಕಗಳನ್ನು, ಆತ ಮಾಡಿಟ್ಟುಕೊಂಡ ಟಿಪ್ಪಣಿಗಳನ್ನು ಓದುತ್ತಾಳೆ. ಕೊನೆಗೆ ತಾನು ಕಾಲೇಜಿಗೆ ಸೇರಿ ತನ್ನ ಪತಿ ಅಪೂರ್ಣವಾಗಿ

ಉಳಿಸಿ ಹೋದ ಪದವಿಯನ್ನು ಪಡೆಯುವುದೇ ಅವನಿಗೆ ನೀಡಬಹುದಾದ ಶ್ರದ್ಧಾಂಜಲಿ ಎಂದು ನಿರ್ಧರಿಸುತ್ತಾಳೆ. ಕುಟುಂಬದ ಹಿರಿಯನಾದ ಮಾವನ ಒಪ್ಪಿಗೆ ಮತ್ತು ಆಶೀರ್ವಾದವನ್ನು ಬಯಸಿ ಶ್ರೋತ್ರಿಯನ್ನು ಕೇಳುತ್ತಾಳೆ.

ಶ್ರೋತ್ರಿಯ ಪತ್ನಿ ಭಾಗೀರತಮ್ಮ ಇದು ಒಪ್ಪಲು ಸಾಧ್ಯವೇ ಇಲ್ಲದ ವಿಷಯವೆಂದು ಕಠಿಣವಾಗಿ ನುಡಿಯುತ್ತಾಳೆ. ಆಕೆ ಸಂಪ್ರದಾಯ ಮತ್ತು ಶಿಷ್ಟತೆಯನ್ನು ಕಾಪಾಡುವ ಪದ್ಧತಿಗಳಲ್ಲಿ ನಂಬಿಕೆ ಇಟ್ಟವಳು. ಆಕೆಯ ಮನಸ್ಥಿತಿ ಬಹಳ ಬೇಗ ಹದಗೆಡುತ್ತದೆ. ಇದ್ದಕ್ಕಿದ್ದಂತೆ ಸಿಡುಕುವ ಸ್ವಭಾವದ ಭಾಗೀರತಮ್ಮನಿಗೆ ತಾನು ಪ್ರೀತಿಸುವವರ ಸಂತೋಷಕ್ಕಿಂತ ಸಮಾಜದಲ್ಲಿ ತಮ್ಮ ಮರ್ಯಾದೆಯನ್ನು ಕಾಪಾಡಿಕೊಳ್ಳುವುದು ಮುಖ್ಯವೆನ್ನಿಸುತ್ತದೆ. ಆದರೆ ಶ್ರೋತ್ರಿ ಇದಕ್ಕೆ ಭಿನ್ನವಾದವರು. ಆತ ತನ್ನ ಬದುಕಿನುದ್ದಕ್ಕೂ ದೃಢವಾಗಿ ಅಂಟಿಕೊಂಡಿದ್ದು 'ಧರ್ಮ'ವೊಂದಕ್ಕೆ ಮಾತ್ರ. ತಾನು ಧರ್ಮ ಎಂದು ನಂಬಿದ ತತ್ತ್ವಗಳನ್ನನುಸರಿಸಿಯೇ ಆತನ ಅಧ್ಯಯನ, ಆಲೋಚನಾಸರಣಿ ಮತ್ತು ಕಾರ್ಯಗಳೆಲ್ಲ ನಡೆಯುತ್ತಿತ್ತು. ಅದರೊಂದಿಗೇ, ಮನುಷ್ಯ ಅನೇಕ ಬಗೆಯ ಧರ್ಮಗಳನ್ನು ಪಾಲಿಸಬೇಕಾಗುತ್ತದೆ ಮತ್ತು ಪರಸ್ಪರ ವ್ಯತಿರಿಕ್ತವಾದ ಧರ್ಮಗಳೊಂದಿಗೆ ಸಾಮರಸ್ಯವನ್ನು ಕಂಡುಕೊಳ್ಳಬೇಕು ಎಂದು ಆತ ಅರಿತಿದ್ದವರು.

ಇಲ್ಲಿ ಮೆಚ್ಚಬೇಕಾದ ಅಂಶವೆಂದರೆ ಶ್ರೋತ್ರಿ ಸಂಪ್ರದಾಯಗಳನ್ನು ಧರ್ಮವನ್ನು ಅರ್ಥೈಸಿಕೊಳ್ಳುವ ಮತ್ತು ಮುಂದುವರೆಸಿಕೊಂಡು ಹೋಗುವ ಸಾಧನಗಳೆಂದು ನಂಬಿದರೂ, ಅದೇ ಸಂಪ್ರದಾಯಗಳು ಮತ್ತು ತನ್ನ ಧರ್ಮದ ಪರಿಭಾಷೆಯ ನಡುವೆ ವಿರೋಧಾಭಾಸವಿದೆ ಎನ್ನಿಸಿದರೆ ಅವನ್ನು ತ್ಯಜಿಸಲೂ ಸಿದ್ಧವಾಗುತ್ತಾರೆ. ಕಾತ್ಯಾಯನಿಯ ಕಾಲೇಜಿಗೆ ಹೋಗುವ ಕೋರಿಕೆಯನ್ನು ಆತ ನಿರಾಕರಿಸುವುದಿಲ್ಲ. ಧರ್ಮವೆನ್ನುವುದು ವೈಯಕ್ತಿಕವಾದುದು ಎನ್ನುವುದು ಶ್ರೋತ್ರಿಯ ಮುಖ್ಯ ನಂಬಿಕೆ. ಧರ್ಮದ ವೈಯಕ್ತಿಕ ನಿರೂಪಣೆಯನ್ನು ಸೂತ್ರೀಕರಿಸಿ ಅದನ್ನು ಪಾಲಿಸಬೇಕು. ಪರಿಣಾಮರೂಪದ ಕರ್ಮವನ್ನು ಅನುಭವಿಸುವುದೂ ಅವರವರ ಹೊಣೆ. ಆತ ತನ್ನ ಭಾವೋದ್ವೇಗಗಳನ್ನು ನಿಯಂತ್ರಿಸುವುದು, ಮತ್ತೊಬ್ಬರನ್ನು ಅಳೆಯುವುದನ್ನು ನಿಗ್ರಹಿಸುವುದು ಮತ್ತು ತನ್ನ ಆಚರಣೆಗಳ ಮೂಲಕ ಇತರರಿಗೆ ಮಾದರಿಯಾಗುವುದು, ಇವನ್ನೆಲ್ಲ ಆಳವಾಗಿ ನಂಬಿದವರು. ಕಾತ್ಯಾಯನಿ ಮಾವನ ಆಶೀರ್ವಾದ ದೊರಕಿದ ನಂತರ ಸಂಭ್ರಮದಿಂದ ತನ್ನ ವಿದ್ಯಾಭ್ಯಾಸವನ್ನು ಮುಂದುವರೆಸಲು ಮುಂದಾಗುತ್ತಾಳೆ.

ಇತ್ತ ಸದಾಶಿವರಾವ್ (ರಾವ್) ಮಹತ್ತರ ಯೋಜನೆಯೊಂದನ್ನು ಕೈಗೆತ್ತಿಕೊಳ್ಳುತ್ತಾನೆ. ಭಾರತದ ಸಮಗ್ರ ಸಾಂಸ್ಕೃತಿಕ ಇತಿಹಾಸವನ್ನು ಸಂಗ್ರಹಿಸುವ ಕಾರ್ಯಕ್ಕೆ ತನ್ನನ್ನು ಸಮರ್ಪಿಸಿಕೊಂಡ ಆತ ಸುಮಾರು ಐದು ಸಂಪುಟಗಳನ್ನು ರಚಿಸುವುದಕ್ಕೆ ಬೇಕಾದಷ್ಟು ಧನಸಹಾಯವನ್ನೂ ಸಂಗ್ರಹಿಸುತ್ತಾನೆ. ಮಡದಿಯಾದ ನಾಗಲಕ್ಷ್ಮಿಯನ್ನು ಸಂಪೂರ್ಣವಾಗಿ ಕಡೆಗಣಿಸುವಷ್ಟು ಮತ್ತು ಕೊನೆಗೆ ತನ್ನ ಹುಟ್ಟಿದಹಬ್ಬವನ್ನೂ ಮರೆತುಬಿಡುವಷ್ಟರ ಮಟ್ಟಿಗೆ ತನ್ನ ಕೆಲಸದ ಬಗೆಗಿನ ಒಲವು ಅವನನ್ನು ಆವರಿಸಿಕೊಂಡಿರುತ್ತದೆ. ನಾಗಲಕ್ಷ್ಮಿ ಒಂಟಿಯಾಗಿ

ತನ್ನ ಮಗುವನ್ನು ಸಾಕುತ್ತಾಳೆ. ಪತಿಯು ಆರೈಕೆ ಮಾಡುವುದಕ್ಕೆ ಅವಕಾಶ ಮಾಡಿಕೊಡಬೇಕೆಂದು ಅವನನ್ನು ಬೇಡಿಕೊಳ್ಳುತ್ತಾಳೆ. ಇದಕ್ಕೆ ರಾವ್ ಬಾಯಿಮಾತಿನಲ್ಲಿ ಒಪ್ಪಿದರೂ ಅದರ ಬಗ್ಗೆ ಗಮನ ಹರಿಸುವುದಿಲ್ಲ.

ರಾವ್ ಪ್ರವಾಸದಲ್ಲಿದ್ದಾಗ ಶ್ರೀಲಂಕಾದ ಯುವತಿ ಕರುಣಾಳನ್ನು ಭೇಟಿಯಾಗುತ್ತಾನೆ. ಈಗಾಗಲೇ ಕರುಣಾಳಿಗೆ ರಾವ್ ಕೈಗೊಂಡಿರುವ ಸಂಶೋಧನೆಯ ಬಗ್ಗೆ ಮಾಹಿತಿ ಇದ್ದು ಅವನ ಬಗ್ಗೆ ಗೌರವವಿರುತ್ತದೆ. ಪರಿಚಯವಾಗುತ್ತಿದ್ದಂತೆಯೇ ಅವರಿಬ್ಬರೂ ಒಟ್ಟಿಗೆ ಕೆಲಸ ಮಾಡುತ್ತ ಸಾಕಷ್ಟು ಸಮಯ ಜೊತೆಯಲ್ಲಿ ಕಳೆಯುತ್ತಾರೆ. ಭಾರತೀಯ ಮತ್ತು ಬೌದ್ಧ ಸಂಸ್ಕೃತಿಗಳ ಐತಿಹಾಸಿಕ ಅಂಶಗಳನ್ನು ಕುರಿತು ಚರ್ಚಿಸುತ್ತಾರೆ. ಸ್ವಲ್ಪ ಸಮಯ ಕಳೆಯುವಷ್ಟರಲ್ಲೇ ಕರುಣಾ ಆತನ ಪಿಎಚ್.ಡಿ. ವಿದ್ಯಾರ್ಥಿನಿಯಾಗಬೇಕೆಂದು ಆಸೆ ಪಡುತ್ತಾಳೆ, ಇದಕ್ಕೆ ರಾವ್‌ನ ಒಪ್ಪಿಗೆಯೂ ಸಿಗುತ್ತದೆ. ಆಕೆ ಆತನೊಂದಿಗೆ ಪ್ರವಾಸ ಮಾಡಲು ತೊಡಗಿದ ಮೇಲೆ ಅವನಿಗೆ ಕೆಲಸವಷ್ಟೇ ಬದುಕಿನ ಕೇಂದ್ರವಾಗುತ್ತದೆ. ವಿರಾಮದ ಕ್ಷಣಗಳನ್ನೂ ಬರಹವನ್ನು ಕುರಿತ ಚರ್ಚೆಯೇ ಆವರಿಸಿಕೊಳ್ಳುತ್ತದೆ. ಈ ಜೋಡಿ ದಿನವಿಡೀ ಬರೆಯುವುದರಲ್ಲಿ, ಚರ್ಚಿಸುವುದರಲ್ಲಿ ಅಥವಾ ಸಂಶೋಧನೆಯಲ್ಲಿ ನಿರತವಾಗುತ್ತದೆ.

ಕೊನೆಗೊಮ್ಮೆ ಕರುಣಾ ತನ್ನ ಊರಿಗೆ ಮರಳುತ್ತಾಳೆ. ಅವಳ ಅಗಲಿಕೆಯನ್ನು ಸಹಿಸಲು ಸಾಧ್ಯವಾಗದೆ ರಾವ್ ಪರಿತಪಿಸುತ್ತಾನೆ. ಅವಳ ಅವಶ್ಯಕತೆ ತನಗಿದೆಯೆಂದು ಅರಿತು ತನ್ನನ್ನು ಮದುವೆಯಾಗುವಂತೆ ಕರುಣಾಳನ್ನು ಕೇಳಿಕೊಳ್ಳುತ್ತಾನೆ. ಆದರೆ ಅವನಿಗೆ ನಾಗಲಕ್ಷ್ಮಿಯಿಂದ ದೂರಾಗುವ ಉದ್ದೇಶವೇನೂ ಇರುವುದಿಲ್ಲ. ಈ ಸಂಬಂಧದಲ್ಲಿ ತನ್ನದಲ್ಲದ ತಪ್ಪಿಗೆ ನಾಗಲಕ್ಷ್ಮಿ ಅನ್ಯಾಯವಾಗಿ ಶಿಕ್ಷೆ ಅನುಭವಿಸುತ್ತಾಳೆ. ಅವಳೊಂದಿಗೆ ಮದುವೆಗೆ ಮುಂಚೆ, ತನ್ನ ಚಿಕ್ಕಪ್ಪನ ಮಾತಿಗೆ ಕಟ್ಟುಬಿದ್ದ ರಾವ್ ಈ ಸಂಬಂಧವನ್ನು ನಿಭಾಯಿಸಲು ಬೇಕಾದ ಸಮಯ ಮತ್ತು ಬದ್ಧತೆಗಳು ತನ್ನಲ್ಲಿದೆಯೇ ಎಂದು ಯೋಚಿಸದೆ ಈ ಮದುವೆಗೆ ಒಪ್ಪಿಕೊಂಡಿರುತ್ತಾನೆ. ಅಂದಿನ ಸಮಾಜದಲ್ಲಿ ಒಬ್ಬ ಸುಸಂಸ್ಕೃತ ಪತ್ನಿ ನಡೆದುಕೊಳ್ಳುತ್ತಿದ್ದ ರೀತಿಯಲ್ಲೇ ನಾಗಲಕ್ಷ್ಮಿಯೂ ವರ್ತಿಸುತ್ತಾಳೆ. ಪತಿಸೇವೆಯನ್ನೇ ತನ್ನ ಬದುಕಿನ ಏಕೈಕ ಗುರಿಯಾಗಿಸುತ್ತಾಳೆ. ಆಕೆ ನೇರ ದೌರ್ಜನ್ಯಕ್ಕೆ ಗುರಿಯಾಗಲಿಲ್ಲವಾದರೂ ಆಕೆಯ ಸೇವೆ ಯಾವುದೇ ಮೆಚ್ಚುಗೆಯನ್ನೂ ಗಳಿಸುವುದಿಲ್ಲ.

ತನ್ನ ಮತ್ತು ಕರುಣಾಳ ಮದುವೆ ಕೇವಲ ಬೌದ್ಧಿಕ ಸಮಾಗಮವೆಂದು ರಾವ್ ಪ್ರತಿಪಾದಿಸಿಕೊಳ್ಳುತ್ತಾನೆ. ಅವಳೊಂದಿಗೆ ಸಾಧ್ಯವಾದಷ್ಟೂ ಸಮಯ ಸಂಶೋಧನೆಯಲ್ಲಿ ತೊಡಗಬೇಕೆಂದು ಬಯಸಿದ್ದ ಆತ ಈ ವೃತ್ತಿಪರ ಸಂಬಂಧ ಇತರರಿಗೆ ಅನುಚಿತವೆನ್ನಿಸಬಹುದೆಂದು ಹೆದರುತ್ತಾನೆ. ಆದರೆ ಕಥೆಯಲ್ಲಿ ವ್ಯಕ್ತವಾಗುವಂತೆ ಅವನ ಯೋಚನಾಲಹರಿಯೇ ಇದನ್ನು ವಿರೋಧಿಸುತ್ತದೆ. ಆತ ಇಚ್ಛೆಪಟ್ಟಲ್ಲಿ ಒಬ್ಬ ಉತ್ತಮ ಪುರುಷ ಇತಿಹಾಸಕಾರನನ್ನು ನೇಮಿಸಿಕೊಂಡು ಯೋಚನಾಧಾರೆಗಳನ್ನು ದಾಖಲಿಸ-ಬಹುದಿತ್ತು. ಅಥವಾ ಕರುಣಾ ಮಾಡುತ್ತಿದ್ದ ಎಲ್ಲಾ ಕೆಲಸಗಳನ್ನು ಮಾಡಲು ಸಹಾಯಕರನ್ನು ನೇಮಿಸಿಕೊಳ್ಳಬಹುದಿತ್ತು. ಕರುಣಾಳ ಬದಲಿಗೆ ಪುರುಷನೊಬ್ಬ ಈ ಸಂಶೋಧನೆಗೆ

ಸಹವರ್ತಿಯಾಗಿದ್ದರೆ ಬಹುಶಃ ಅವನಿಗೆ ಈ ಬಗೆಯ ಒಂಟಿತನ ಕಾಡುತ್ತಿರಲಿಲ್ಲ, ಸಾಮೀಪ್ಯಕ್ಕಾಗಿ ಹಾತೊರೆಯುತ್ತಿರಲಿಲ್ಲ ಎಂದು ಮುಂದೊಂದು ಕಡೆ ಕಾದಂಬರಿಯಲ್ಲಿ ಸ್ವತಃ ತಾನೇ ಒಪ್ಪಿಕೊಳ್ಳುತ್ತಾನೆ.

ಬಹುಪತ್ನಿತ್ವವನ್ನು ಸಹಿಸಲು ಸಾಧ್ಯವಾಗದ ಕಾರಣದಿಂದ ಮದುವೆಯಾದ ಮೇಲೆ ಕರುಣಾ ನಾಗಲಕ್ಷ್ಮಿಯೊಂದಿಗೆ ಒಂದೇ ಮನೆಯಲ್ಲಿ ವಾಸಿಸಲು ನಿರಾಕರಿಸುತ್ತಾಳೆ. ಮೊದಲಿಗೆ ಕರುಣಾಳನ್ನು ಮತ್ತೊಂದು ಮನೆಯಲ್ಲಿರಿಸಿ ರಾವ್ ನಾಗಲಕ್ಷ್ಮಿಯೊಂದಿಗೆ ಇರುತ್ತಾನೆ. ಆದರೆ ಅವನ ಕೆಲಸದ ಹೊರೆ ತೀರಾ ಹೆಚ್ಚಾಗಿದ್ದನ್ನು ಗಮನಿಸಿದ ನಾಗಲಕ್ಷ್ಮಿ ಅವನನ್ನು ಕರುಣಾಳ ಜೊತೆಯಲ್ಲಿರುವಂತೆ ಒತ್ತಾಯಿಸುತ್ತಾಳೆ. ಈ ಅಗಲಿಕೆ ನಾಗಲಕ್ಷ್ಮಿಯ ಜೀವನೋತ್ಸಾಹವನ್ನೇ ಬತ್ತಿಸುತ್ತದೆ. ಚಟುವಟಿಕೆಯ ಚಿಲುಮೆಯಾಗಿ, ಶ್ರದ್ಧೆಯಿಂದ ಮನೆಗೆಲಸಗಳನ್ನೆಲ್ಲ ನಿರ್ವಹಿಸುತ್ತಿದ್ದ ಧರ್ಮಪತ್ನಿ ನಾಗಲಕ್ಷ್ಮಿ ಮಂಕಾಗಿ ಉದಾಸೀನಳಾಗಿ ಅಡುಗೆ ಬೇಯಿಸುವ, ಮನೆಕಾಯುವ ಹೆಂಗಸಾಗುತ್ತಾಳೆ.

ಇದೇ ಸಮಯದಲ್ಲಿ ರಾವ್‌ನ ತಮ್ಮ ರಾಜಾ ರಾವ್‌ನಿಗೆ ಕಾತ್ಯಾಯನಿಯ ಪರಿಚಯವಾಗುತ್ತದೆ. ರಾಜ ಲಂಡನ್ನಿನಲ್ಲಿ ವಿದ್ಯಾಭ್ಯಾಸ ಮಾಡಿಕೊಂಡು ಬಂದ ಪ್ರಾಧ್ಯಾಪಕ, ಶೇಕ್ಸ್‌ಪಿಯರ್ ನಾಟಕಕಾರ. ಒಮ್ಮೆ ಕನಸಿನಲ್ಲಿ ಪ್ರೇರಣೆಯಾದಂತಾಗಿ ಸ್ಫೂರ್ತಿಗೊಂಡು ತನ್ಮಯತೆಯಿಂದ ಪ್ರಕೃತಿಮಾತೆಯ ಮೇಲೊಂದು ನಾಟಕ ರಚಿಸುತ್ತಾನೆ. ಆ ನಾಟಕದಲ್ಲಿ ಪಾತ್ರವಹಿಸುವಂತೆ ಕಾತ್ಯಾಯನಿಯ ಮನವೊಲಿಸುತ್ತಾನೆ. ನಾಟಕದ ತಯಾರಿ ನಡೆಯುತ್ತಿರುವಾಗ ರಾಜ ಕಾತ್ಯಾಯನಿಯನ್ನು ಪ್ರೇಮಿಸಲು ಆರಂಭಿಸುತ್ತಾನೆ. ಅವನ ಓಲೈಸುವಿಕೆ ಕಾತ್ಯಾಯನಿಗೆ ತಾನೂ ಅವನನ್ನು ಪ್ರೀತಿಸುತ್ತಿದ್ದೇನೆಂದು ಅರಿವಾಗುವಂತೆ ಮಾಡುತ್ತದೆ. ಅದರೊಂದಿಗೇ ವಿಧವೆಯಾದ ಆಕೆ ಸಾಮಾಜಿಕ ಒತ್ತಡದ ಮತ್ತು ತನ್ನ ಗಂಡನ ಕುಟುಂಬದ ಜವಾಬ್ದಾರಿಯ ವಾಸ್ತವಿಕತೆಯ ಭಾರಕ್ಕೆ ನಲುಗುತ್ತಾಳೆ. ಇತ್ತ ಪ್ರೀತಿಸುತ್ತಿದ್ದ ರಾಜನನ್ನು ಬಿಟ್ಟು ಬದುಕಲಾರದ ಅಸಹಾಯಕತೆ, ಅತ್ತ ತನ್ನ ಮನೆ ತೊರೆಯುವುದರ ಪರಿಣಾಮಗಳನ್ನು ಎದುರಿಸಲಾಗದ ತಲ್ಲಣಗಳ ಬಿಕ್ಕಟ್ಟಿನಲ್ಲಿ ಸಿಲುಕುತ್ತಾಳೆ.

ಕಥೆಯಲ್ಲಿನ ಈ ಘಟ್ಟದಲ್ಲಿ ಕಾತ್ಯಾಯನಿ ಎದುರಿಸುವ ಸಂಘರ್ಷಗಳಿಗೆ ಅವಳು ಹೆಣ್ಣು ಎಂಬ ಕಾರಣವೇ ಪ್ರಧಾನವಾಗಿ ತೋರಲಾರಂಭಿಸುತ್ತದೆ. ಒಂದು ವೇಳೆ ಕಾತ್ಯಾಯನಿ ಗಂಡಾಗಿದ್ದರೆ ಸುಲಭವಾಗಿ ಮರುಮದುವೆಯಾಗಿ ಮಗುವನ್ನೂ ತನ್ನೊಂದಿಗೆ ಇರಿಸಿಕೊಳ್ಳಬಹುದಿತ್ತು. ಲೇಖಕ ನೇರವಾಗಿ ಈ ತಾರತಮ್ಯವನ್ನು ಖಂಡಿಸುವುದಿಲ್ಲವಾದರೂ ಪುರುಷಪ್ರಧಾನ ಸಮಾಜದಲ್ಲಿ ಹೆಣ್ಣೊಬ್ಬಳು ಅನುಭವಿಸುವ ಸಂಕಟ ಇಲ್ಲಿ ಸೂಕ್ಷ್ಮವಾಗಿ ಎದ್ದು ತೋರುತ್ತದೆ. ಸ್ತ್ರೀಯೊಬ್ಬಳು ಮದುವೆಯಾಗಿ ಗಂಡನ ಕುಟುಂಬದಲ್ಲಿ ಕಾಲಿಟ್ಟಾಗ ತನ್ನದೆನ್ನುವ ಕುಟುಂಬವನ್ನು ಕಳೆದುಕೊಳ್ಳುತ್ತಾಳೆ. ನಂತರ ಅವಳ ಅಸ್ತಿತ್ವ ತನ್ನ ಗಂಡನ ವಂಶೋದ್ಧಾರಕ್ಕಾಗಿ ಮಕ್ಕಳನ್ನು ಹಡೆದುಕೊಡುವಲ್ಲಿಗೆ ಮಾತ್ರ ಸೀಮಿತವಾಗುತ್ತದೆ. ಈ ವ್ಯವಸ್ಥೆ ಮಹಿಳೆಯರನ್ನು ಪುರುಷರು ವಂಶೋದ್ಧಾರಕ್ಕಾಗಿ ಮತ್ತು ಸೇವೆಗಾಗಿ ಬಳಸಿಕೊಳ್ಳುವ ಸಾಧನವಾಗಿಸುತ್ತದೆ.

ಸಾಂಪ್ರದಾಯಿಕವಾಗಿ ಹಿಂದೂ ಸಮಾಜದ ಪಿತೃಪ್ರಧಾನ ವ್ಯವಸ್ಥೆಯಲ್ಲಿ ಕುಟುಂಬವೆಂದರೆ, ಅದರ ಮುಖ್ಯಸ್ಥನ ಅಸ್ತಿತ್ವದ ವಿಸ್ತರಣೆಯಷ್ಟೇ. ಪುರುಷನೊಬ್ಬ ಅನೇಕ ಮಹಿಳೆಯರನ್ನು ಮದುವೆಯಾದರೂ ಅವೆಲ್ಲ ಆ ಒಡೆಯನ ಸಂಸಾರವೆಂದೇ ಪರಿಗಣಿಸಲ್ಪಡುತ್ತದೆ. ಆತ ಬೇರೆ ಬೇರೆ ಸ್ತ್ರೀಯರಿಂದ ಪಡೆದ ಮಕ್ಕಳು ಅವನ ವಂಶಕ್ಕೆ ಸೇರಿದವರಾಗುತ್ತಾರೆಯೇ ಹೊರತು ಸ್ತ್ರೀಯೊಬ್ಬಳು ವಂಶವನ್ನು ಪ್ರಾರಂಭಿಸುವುದು ಸಾಧ್ಯವಿಲ್ಲ. ಇದನ್ನು ಕಾದಂಬರಿಯಲ್ಲಿ ನೇರವಾಗಿ ಎಲ್ಲೂ ಹೇಳಿಲ್ಲವಾದರೂ ಘಟನೆಗಳಲ್ಲಿ ಹುದುಗಿರುವ ಅಂತರಾರ್ಥ ಮತ್ತು ಸಾಮಾಜಿಕ ಒತ್ತಡಗಳನ್ನು ನಿರೂಪಿಸಿರುವ ಶೈಲಿಯಲ್ಲಿ ಈ ಅಸಮಾನತೆಯನ್ನು ಚಿತ್ರಿಸಿಕೊಳ್ಳಬಹುದು. ಕಾದಂಬರಿಯಲ್ಲಿ ಬರುವ ಹಲವು ಹೆಣ್ಣು ಪಾತ್ರಗಳು ತಮ್ಮ ಜೀವನದ ಮುಖ್ಯೋದ್ದೇಶವೇ ತಮ್ಮ ಕುಟುಂಬದ ಯಜಮಾನನ ಸೇವೆ ಎಂದು ನೇರವಾಗಿ ನುಡಿಯುತ್ತವೆ. ಹಾಗೂ ಅದರಲ್ಲಿ ಅವರಿಗೆ ಸಂತೋಷವಲ್ಲದೇ ಮತ್ತೇನೂ ಇಲ್ಲವೆಂದೂ ಚಿತ್ರಿಸಲಾಗಿದೆ.

ಅಂತಿಮವಾಗಿ ಕಾತ್ಯಾಯನಿ ರಾಜನನ್ನು ಮದುವೆಯಾಗಿ ಬದುಕು ತನಗೆ ನೀಡಿದ ಹೊಸ ಅವಕಾಶವನ್ನು ತೆರೆದ ಬಾಹುಗಳಿಂದ ಸ್ವೀಕರಿಸುತ್ತಾಳೆ. ಆದರೆ ದುರದೃಷ್ಟವೆಂದರೆ ಆಕೆಯ ಅತ್ತೆ ಮಾವನ ಒಪ್ಪಿಗೆ ದಕ್ಕುವುದಿಲ್ಲ. ಅವರನ್ನು ತೊರೆದು ಹೋಗುವುದು ತನಗೂ ದುಃಖದ ಸಂಗತಿಯೇ ಎಂದು ಸ್ಪಷ್ಟಪಡಿಸಿ ಅವರ ಆಶೀರ್ವಾದ ಬೇಡುತ್ತಾಳೆ ಕಾತ್ಯಾಯನಿ. ಸ್ಥಿತಪ್ರಜ್ಞತೆಯೇ ಮೂರ್ತಿವೆತ್ತಂತ್ತಿದ್ದ ಶ್ರೋತ್ರಿಯಲ್ಲಿ ಅವಳ ಬಗ್ಗೆ ಯಾವುದೇ ಕಹಿ ಭಾವನೆಗಳಿರಲಿಲ್ಲ. ಮತ್ತೊಂದೆಡೆ ಭಾಗೀರತಮ್ಮ ಸೊಸೆಯನ್ನು ಮೇಲಿಂದ ಮೇಲೆ ಅವಮಾನಿಸುತ್ತಾರೆ. ಶ್ರೋತ್ರಿ 'ಅವರವರ ಧರ್ಮ ಅವರವರದೇ ಹೊಣೆ' ಎಂದು ಸ್ಪಷ್ಟವಾಗಿ ಒತ್ತಿ ಹೇಳಿದರೂ ಭಾಗೀರತಮ್ಮ ಅವರನ್ನು ಸುಮ್ಮನಾಗುವಂತೆ ತಾಕೀತು ಮಾಡಿ ಆತ ಮಾಡಿದ ತಪ್ಪನ್ನು ಸರಿಪಡಿಸಬೇಕೆಂದು ಒತ್ತಾಯಿಸುತ್ತಾರೆ. ಕಾತ್ಯಾಯನಿಯನ್ನು ಮರಳಿ ಬರುವಂತೆ ಒತ್ತಾಯಿಸಲು ಆತ ನಿರಾಕರಿಸಿದಾಗ ಭಾಗೀರತಿ ಕೋಪದಿಂದ ಸಿಡಿದು ಅಲ್ಲಿಂದ ತೆರಳುತ್ತಾರೆ.

ಕೆಲವು ದಿನಗಳ ನಂತರ ಕಾತ್ಯಾಯನಿ ತನ್ನ ಮಗುವನ್ನು ಕರೆದೊಯ್ಯಲು ಮತ್ತೆ ಶ್ರೋತ್ರಿಗಳ ಮನೆಗೆ ಬಂದಾಗ ಆಕೆಯ ನಿರ್ದಯಿ ತಂದೆ ಮತ್ತು ಭಾಗೀರತಮ್ಮ ಅವಳನ್ನು ಹೀನಾಮಾನವಾಗಿ ನಿಂದಿಸುತ್ತಾರೆ. ಇಂತಹ (ಯಾವುದೇ ಗಂಡು ನಿರ್ದಾಕ್ಷಿಣ್ಯವಾಗಿ, ಸ್ವೇಚ್ಛೆಯಿಂದ ಮಾಡಬಹುದಾದ) ನಿರ್ಧಾರವನ್ನು ತೆಗೆದುಕೊಂಡ ಅವಳನ್ನು ಭ್ರಷ್ಟೆ ಎಂದು ಜರೆಯುತ್ತಾರೆ. ಶ್ರೋತ್ರಿ ಪರಿಸ್ಥಿತಿಯನ್ನು ಹತೋಟಿಗೆ ತಂದು ಅವರಿಬ್ಬರನ್ನು ಆಚೆಗೆ ಕಳಿಸಿ ಶಾಂತವಾಗಿ ಕಾತ್ಯಾಯನಿಯ ಜೊತೆ ಮಾತನಾಡಲು ಕೂರುತ್ತಾರೆ. ಆತನ ದೃಷ್ಟಿಕೋನದಲ್ಲಿ ಕಾತ್ಯಾಯನಿ ತನ್ನ ಗತಿಸಿದ ಪತಿಯ ಜಾಗವನ್ನು ತುಂಬಲು ಮತ್ತೊಬ್ಬನನ್ನು ಆರಿಸಿಕೊಂಡಿದ್ದಾಳೆ, ಅದರಂತೆಯೇ ತಮ್ಮ ತೀರಿಹೋದ ಮಗನ ಸ್ಥಾನದಲ್ಲಿ ಹೊಸ ಮಗನನ್ನು ಪಡೆಯುವ ಹಕ್ಕು ತಮಗೂ ಇದೆ.

ಕಾತ್ಯಾಯನಿ ತನ್ನ ಹೊಸ ಪತಿಯನ್ನು 'ಬದಲಿ ವ್ಯವಸ್ಥೆ' ಎಂದು ಪರಿಗಣಿಸುವುದಿಲ್ಲ. ಬದಲಾಗಿ ತನ್ನ ಜೀವನದ ಮುಂದುವರಿಕೆ ಎಂದು ಭಾವಿಸುತ್ತಾಳೆ. ತೀರಿಹೋದ ಪತಿಯ ಸ್ಥಾನ ತುಂಬಲು ಆಕೆ ಮತ್ತೊಬ್ಬ ಗಂಡನ ಅನ್ವೇಷಣೆಯಲ್ಲಿ ರಾಜನನ್ನು ಹುಡುಕಿರಲಿಲ್ಲ. ಅವರಿಬ್ಬರ ಪರಿಚಯ ಸಹಜವಾಗಿಯೇ ಪ್ರೇಮಕ್ಕೆ ತಿರುಗಿತ್ತು. ವ್ಯಕ್ತಿಗಳನ್ನು ಬದಲಿ ಪೂರೈಕೆ ಎಂಬ ಭಾವನೆಯಲ್ಲಿ ನೋಡುವುದು ಶೀತಲ, ವ್ಯಾವಹಾರಿಕ ವರ್ತನೆಯಾದರೂ ಅದು ಶ್ರೋತ್ರಿಯ ತತ್ತ್ವ ಸಿದ್ಧಾಂತಕ್ಕೆ ಹೊಂದುತ್ತದೆ. ಪುರುಷನ ಧರ್ಮವೆಂದರೆ ತನ್ನ ವಂಶವನ್ನು ಮುಂದುವರೆಸುವುದು ಎಂಬುದು ಶ್ರೋತ್ರಿ ನಂಬಿಕೊಂಡಿದ್ದ ತತ್ತ್ವ. ಆತನ ದೃಷ್ಟಿಯಲ್ಲಿ ಸಂಸಾರವೆಂದರೆ ಭೋಗ ಸಾಧನವಲ್ಲ, ಕರ್ಮಸಾಧನ. ಅದರ ಏಕಮೇವ ಗುರಿಯೆಂದರೆ ಸಂತಾನೋತ್ಪತ್ತಿ.

ಆದರೆ ಆತನ ಸೊಸೆ ಆ ಮಗುವನ್ನು ತನ್ನ ಮಗು ಎಂಬ ಕಾರಣದಿಂದಷ್ಟೇ ಪ್ರೀತಿಸುತ್ತಾಳೆ. ಶ್ರೋತ್ರಿಗೆ ಈ ವಿವಾದವನ್ನು ಕೋರ್ಟಿಗೆ ಎಳೆಯುವ ಉದ್ದೇಶವಿರುವುದಿಲ್ಲ. ಕಾನೂನು ರೀತ್ಯಾ ಆಕೆಯನ್ನು ತಡೆಯುವ ಹಕ್ಕು ತನಗಿಲ್ಲವಾದ್ದರಿಂದ ಕಾತ್ಯಾಯನಿ ತಾನೇ ಸ್ವತಃ ಈ ವಿಷಯದಲ್ಲಿ ನಿರ್ಧಾರ ತೆಗೆದುಕೊಳ್ಳಬೇಕೆಂದು ಶ್ರೋತ್ರಿ ತೀರ್ಪು ನೀಡುತ್ತಾರೆ. ಕಾತ್ಯಾಯನಿಯ ಮಾತೃಪ್ರೇಮಕ್ಕೂ ಮತ್ತು ಅವಳ ಮೇಲೆ ಹಿರಿಯರೆಲ್ಲ ಸೇರಿ ಹೊರಿಸಿದ ಆಪಾದನೆಯಿಂದ ಉಂಟಾದ ತಪ್ಪಿತಸ್ಥ ಮನೋಭಾವನೆಗೂ ಸೆಣೆಸಾಟ ಆರಂಭವಾಗುತ್ತದೆ. ಕೊನೆಗೆ ತಪ್ಪಿತಸ್ಥ ಮನೋಭಾವವೇ ಗೆಲ್ಲುತ್ತದೆ. ತನ್ನ ಕರುಳಿನ ಕುಡಿಯನ್ನು ಶ್ರೋತ್ರಿಯ ಮನೆಯಲ್ಲಿ ಬಿಟ್ಟು ಹೊರಟು ಧಾರಾಕಾರವಾಗಿ ಸುರಿಯುತ್ತಿದ್ದ ಮಳೆಯಲ್ಲಿ ನೆನೆಯುತ್ತ, ಬೀದಿ ಬೀದಿಗಳಲ್ಲಿ ಹುಚ್ಚಿಯಂತೆ ಅಲೆಯುತ್ತಾಳೆ. ಉಕ್ಕಿ ಹರಿಯುತ್ತಿದ್ದ ನದಿಗೆ ಸಿಕ್ಕಿ ಸಾಯುವ ಸ್ಥಿತಿಯಲ್ಲಿದ್ದ ಅವಳನ್ನು ರಾಜ ಕಾಪಾಡಿ ಮನೆಗೆ ಕರೆತರುತ್ತಾನೆ.

ಅವಳ ಮನಸ್ಸನ್ನು ತಹಬಂದಿಗೆ ತಂದ ಮೇಲೆ M.A. ಪದವಿ ಪಡೆಯುವಂತೆ ರಾಜ ಸಲಹೆ ನೀಡುತ್ತಾನೆ. ಅದನ್ನು ಮುಗಿಸಿದ ಕಾತ್ಯಾಯನಿ ಅವನಂತೆ ಪ್ರಾಧ್ಯಾಪಕಿ-ಯಾಗುತ್ತಾಳೆ. ಮುಂದೆ ಕೆಲವು ವರ್ಷಗಳ ಅವಧಿಯಲ್ಲಿ ಅವಳಿಗೆ ಮೂರು ಬಾರಿ ಗರ್ಭಪಾತವಾಗುತ್ತದೆ. ಆಕೆ ಮತ್ತೊಮ್ಮೆ ಗರ್ಭವತಿಯಾದರೆ ಆಕೆಯ ಪ್ರಾಣಕ್ಕೆ ಅಪಾಯ ಎಂದು ವೈದ್ಯರು ಎಚ್ಚರಿಸಿದ ಮೇಲೆ ರಾಜ ತಾನೇ ಸಂತಾನಹರಣ ಶಸ್ತ್ರಕ್ರಿಯೆ ಮಾಡಿಸಿಕೊಳ್ಳುತ್ತಾನೆ. ತಾನು ಮತ್ತೆ ತಾಯಿಯಾಗುವ ಅವಕಾಶ ಕಳೆದುಕೊಂಡ ಹಾಗೂ ರಾಜನಿಗೆ ಒಂದು ಮಗುವನ್ನೂ ಹೆತ್ತುಕೊಡದ ಅಸಹಾಯಕತೆ ಕಾತ್ಯಾಯನಿಯನ್ನು ಕಿತ್ತು ತಿನ್ನುತ್ತದೆ.

ಇದೇ ಸಮಯದಲ್ಲಿ ತನ್ನ ಆರೋಗ್ಯದತ್ತ ಗಮನ ಹರಿಸದೆ ನಿರಂತರ ಕೆಲಸದಲ್ಲಿ ತೊಡಗಿಸಿಕೊಂಡ ರಾವ್‌ನ ಆರೋಗ್ಯ ನಿಧಾನವಾಗಿ ಹದಗೆಡಲಾರಂಭಿಸುತ್ತದೆ. ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆಯುತ್ತಿದ್ದ ರಾವ್‌ನನ್ನು ವೈದ್ಯರು ಕೆಲಸದಿಂದ ವಿಶ್ರಾಂತಿ ತೆಗೆದುಕೊಳ್ಳದಿದ್ದರೆ ಜೀವಕ್ಕೆ ಅಪಾಯ ಎಂದು ಎಚ್ಚರಿಸುತ್ತಾರೆ. ಆತನನ್ನು ಕಾಣಲು ಬಂದ ನಾಗಲಕ್ಷ್ಮಿ ತಾನು ಆರೈಕೆ ಮಾಡಲು ಅನುಮತಿ ಕೊಡಬೇಕೆಂದು ಬೇಡಿಕೊಳ್ಳುತ್ತಾಳೆ. ಕರುಣಾ

ಇದಕ್ಕೆ ಒಪ್ಪಿಗೆ ಕೊಡದಿದ್ದಾಗ ಕಣ್ಣೀರಿಡುತ್ತಾ ತನ್ನ ಮೈದುನನ ಮನೆಗೆ ಹಿಂದಿರುಗುತ್ತಾಳೆ.

ಕಾತ್ಯಾಯನಿಯ ಮಗ ಬೆಳೆದು ಆಕೆ ಕೆಲಸ ಮಾಡುವ ಕಾಲೇಜಿನಲ್ಲಿ ಪ್ರವೇಶ ಪಡೆಯುತ್ತಾನೆ. ತಾಯಿಯ ಬಗ್ಗೆ ಅವನ ಭಾವನೆಗಳು ಸೂಕ್ಷ್ಮ ಮತ್ತು ಸಂಕೀರ್ಣವಾಗಿರುತ್ತವೆ. ಅವನ ಮನಸ್ಸು ತಾಯಿಯ ಪ್ರೀತಿ ಬಯಸುತ್ತಿದ್ದರೂ ತಾತ ಬಿತ್ತಿದ ಧರ್ಮದ ಪಾಠ ಅವನಲ್ಲಿ ಆಳವಾಗಿ ಬೇರೂರಿದ್ದರಿಂದ ಆ ಪ್ರೀತಿಯನ್ನು ಒಪ್ಪಿಕೊಳ್ಳಲು ಸಾಧ್ಯವಾಗುವುದಿಲ್ಲ. ಒಮ್ಮೆ ಭಾವೋದ್ವೇಗ ತುಂಬಿದ ಭೇಟಿಯೊಂದರಲ್ಲಿ ಕಾತ್ಯಾಯನಿ ತನ್ನನ್ನು ತಾಯಿಯೆಂದು ಅಂಗೀಕರಿಸುವಂತೆ ಬೇಡಿಕೊಂಡಾಗ ಮೌನವಾಗಿ ದೂರ ಸರಿಯುತ್ತಾನೆ. ತನ್ನ ಭಾವನೆಗಳನ್ನು ವಿಶ್ಲೇಷಣೆ ಮಾಡಿಕೊಳ್ಳಲಾಗದೆ ತಳಮಳದಿಂದ ಮತ್ತೊಂದು ಕಾಲೇಜಿಗೆ ವರ್ಗಾವಣೆ ಮಾಡಿಸಿಕೊಂಡು ಮರೆಯಾಗುತ್ತಾನೆ. ಇದು ಕಾತ್ಯಾಯನಿಗೆ ಚೇತರಿಸಿಕೊಳ್ಳಲಾಗದ ಪೆಟ್ಟು. ಬದುಕುವ ಆಸೆ ಕುಗ್ಗುತ್ತದೆ. ಕಾತ್ಯಾಯನಿ ನಿಧಾನವಾಗಿ ಕ್ಷೀಣಿಸತೊಡಗುತ್ತಾಳೆ.

ಈ ಮಧ್ಯೆ ಕರುಣಾ ಕೊನೆಗೂ ರಾವ್‌ನನ್ನು ನಾಗಲಕ್ಷ್ಮಿಯ ಆರೈಕೆಗೆ ಬಿಡಲು ಒಪ್ಪುತ್ತಾಳೆ. ಆಕೆ ಬಂದೊಡನೆ ಮನೆಯ ವ್ಯವಹಾರಗಳನ್ನೆಲ್ಲ ವಹಿಸಿಕೊಂಡಾಗ ಕರುಣಾಗೆ ತನ್ನ ತಪ್ಪಿನ ಅರಿವಾಗುತ್ತದೆ. ಆದರೆ ರಾವ್‌ನ ಹೃದಯಕ್ಕೆ ಇದನ್ನೆಲ್ಲ ಸಹಿಸುವ ಶಕ್ತಿ ಇಲ್ಲದಾಗುತ್ತದೆ. ನಾಗಲಕ್ಷ್ಮಿ ಬಂದ ಮರುದಿನವೇ ರಾವ್ ನಿಧನಹೊಂದುತ್ತಾನೆ.

ಇದೇ ಸಮಯಕ್ಕೆ ಶ್ರೋತ್ರಿಗೆ ತನ್ನ ವಂಶವೃಕ್ಷವನ್ನು ಉಳಿಸಲು, ಬೆಳೆಸಲು ತಾನು ಪಟ್ಟ ಶ್ರಮವೆಲ್ಲ ಬಹು ದೊಡ್ಡ ಮಿಥ್ಯೆಯೆಂಬ ಆಘಾತಕರ ಸತ್ಯ ತಿಳಿಯುತ್ತದೆ. ಆತನನ್ನು ಬೆಳೆಸಿದವನು ಅಸಲಿಗೆ ಶ್ರೋತ್ರಿಯ ನಿಜವಾದ ತಂದೆಯಲ್ಲ. ತನ್ನ ತಮ್ಮನಿಗೆ ಆಸ್ತಿಯಲ್ಲಿ ಪಾಲು ಸಿಗದಂತೆ ಮಾಡಲು ಶ್ರೋತ್ರಿಯ ತಂದೆ ಕಪಟ ಯೋಜನೆಯೊಂದನ್ನು ಹಾಕಿರುತ್ತಾನೆ. ಆತ ಮಗುವನ್ನು ನೀಡಲು ಅಸಮರ್ಥನಾಗಿದ್ದ ಕಾರಣ ಅವನ ಹೆಂಡತಿ ಮನೆಗೆ ಬಂದ ಗೆಳೆಯನೊಬ್ಬನನ್ನು ಒಲಿಸಿಕೊಳ್ಳುತ್ತಾಳೆ. ಆಕೆ ಬಸುರಿ ಎಂದು ತಿಳಿದಾಗ ಗಂಡ ಹೆಂಡತಿಯರಿಬ್ಬರೂ ಆ ಗೆಳೆಯನಿಗೆ ಕೊಲೆಯ ಬೆದರಿಕೆ ಹಾಕಿ ಮನೆಯಿಂದ ಓಡಿಸಿರುತ್ತಾರೆ.

ತಾನು ಮೋಸದ ಫಲವಾಗಿ ಹುಟ್ಟಿದ ಅನೈತಿಕ ಸಂತಾನ ಎಂಬ ಸತ್ಯ ಶ್ರೋತ್ರಿಯ ಪ್ರಪಂಚವನ್ನೇ ಬುಡಮೇಲಾಗಿಸುತ್ತದೆ. ಶ್ರೋತ್ರಿ ತನ್ನೆಲ್ಲ ಆಸ್ತಿಯನ್ನೂ ದಾನ ಮಾಡುತ್ತಾರೆ. ಮೊಮ್ಮಗನ ವಿದ್ಯಾಭ್ಯಾಸಕ್ಕೆ ಸಾಕಾಗುವಷ್ಟು ಮಾತ್ರ ಹಣವನ್ನು ಉಳಿಸಿಟ್ಟು ಸನ್ಯಾಸತ್ವ ಸ್ವೀಕರಿಸುತ್ತಾರೆ. ದೇಶಾಂತರಕ್ಕೆ ಹೊರಡುವ ಮುನ್ನ ಕಾತ್ಯಾಯನಿಯನ್ನು ಒಮ್ಮೆ ಭೇಟಿ ಮಾಡಲೆಂದು ತೆರಳುತ್ತಾರೆ. ಕಾಕತಾಳೀಯವಾಗಿ ಅದೇ ಸಮಯಕ್ಕೆ ಕಾತ್ಯಾಯನಿಯ ಆರೋಗ್ಯ ಬಹುಮಟ್ಟಿಗೆ ಕ್ಷೀಣಿಸಿರುತ್ತದೆ. ರಾಜ ಕಾತ್ಯಾಯನಿಯ ಮಗನಿಗೂ ಕರೆ ಕಳಿಸುತ್ತಾನೆ. ಮಗ ತಾಯಿಯ ಬಳಿಯಲ್ಲೆ ಇದ್ದು ಅವಳು ನೆಮ್ಮದಿಯಿಂದ ಪ್ರಾಣ ಬಿಡುವುದಕ್ಕೆ ಸಹಾಯ ಮಾಡುತ್ತಾನೆ. ಶ್ರೋತ್ರಿ ಅವನಿಗೆ ತಂದೆ ತಾಯಿಯರ ಚಾರಿತ್ರ್ಯವನ್ನು ಪರಿಕಿಸುವುದು ಪಾಪವೆಂದು ತಿಳಿಹೇಳಿ, ತಾಯಿಯ ಶ್ರಾದ್ಧವನ್ನು ನೆರವೇರಿಸುವಂತೆ ಸೂಚಿಸುತ್ತಾರೆ.

ಕಥೆಯಲ್ಲಿ ಶ್ರೋತ್ರಿಯ ವಂಶಾವಳಿಯ ಬಗ್ಗೆ ಬರುವ ಈ ತಿರುವು ಅನಿರೀಕ್ಷಿತವಾದರೂ ಬಹಳ ಸ್ವಾರಸ್ಯಕರವಾದುದು. ಶ್ರೋತ್ರಿಯ ವ್ಯಕ್ತಿತ್ವವನ್ನು ಕಥೆಯುದ್ದಕ್ಕೂ ಸಂಯಮ

ಮತ್ತು ಸದ್ಗುಣಗಳ ಪರಾಕಾಷ್ಠೆಯೆಂದೇ ಚಿತ್ರಿಸಲಾಗಿದೆ. ಎಂತಹ ಸವಾಲುಗಳನ್ನು ಎದುರಿಸುವ ಸಮಯದಲ್ಲೂ ಆತ ಪ್ರಲೋಭನೆಗೆ ಒಳಗಾಗುವ ದುರ್ಬಲರಲ್ಲ. ತನ್ನ ಆದರ್ಶಗಳಿಗೆ ದೃಢವಾಗಿ ಅಂಟಿಕೊಂಡವರು. ಎಂದಿಗೂ ಕೋಪಾವೇಶದಿಂದ ವರ್ತಿಸಿ ಇತರರ ಮನನೋಯಿಸಿದವರಲ್ಲ. ಇದೆಲ್ಲದರ ಹೊರತಾಗಿಯೂ ತನ್ನ ತಂದೆ ಮಾಡಿದ ಅಪರಾಧದಿಂದ ಸಂಭವಿಸಿದ ದೋಷದ ಕಾರಣದಿಂದ ತಾನು ಇನ್ನು ಮುಂದೆ ಅಭಿಮಾನದಿಂದಿರುವುದಕ್ಕೆ ಆತನ ಆದರ್ಶ ಒಪ್ಪುವುದಿಲ್ಲ. ತನ್ನ ತಂದೆಯ ಲೋಭವನ್ನು ಅರಿತ ಮೇಲೆ ಶ್ರೋತ್ರಿಗೆ ಕಾತ್ಯಾಯನಿ ತೆಗೆದುಕೊಂಡ ನಿರ್ಧಾರಗಳು ಪ್ರೀತಿಯಿಂದ ಪ್ರೇರಿತವಾದವೇ ಹೊರತು ಯಾವುದೇ ದುರುದ್ದೇಶದಿಂದಲ್ಲ ಎಂಬ ಕಾರಣಕ್ಕೆ ಆಕೆಯ ಬಗ್ಗೆ ಅಂತಃಕರಣ ಹೆಚ್ಚಾಗುತ್ತದೆ.

ವಿಧವಾ ವಿವಾಹ, ಸಂಪ್ರದಾಯಗಳನ್ನು ತ್ಯಜಿಸುವುದರ ಪರಿಣಾಮಗಳ ಸೂಕ್ಷ್ಮಾವಲೋಕನಗಳನ್ನು ಮುಖ್ಯಕತೆಯಲ್ಲಿ ಅಳವಡಿಸಿಕೊಂಡಿರುವ ಈ ಕೃತಿ ಬಿಡುಗಡೆಯಾದ ಸಮಯಕ್ಕೆ ಪ್ರಗತಿಶೀಲ ಕಾದಂಬರಿ ಎನ್ನಬಹುದು. ಹಳೆಯ ಸಂಪ್ರದಾಯಗಳನ್ನು ದೂರೀಕರಿಸಿ ಮರುವಿವಾಹವಾಗುವ ಕಾತ್ಯಾಯನಿಯನ್ನು ಎಲ್ಲೂ ಖಳನಾಯಕಿಯಂತೆ ಚಿತ್ರಿಸಿಲ್ಲ. ಕರುಣಾ ಬದುಕನ್ನು ಸಂಪೂರ್ಣವಾಗಿ ತನ್ನ ಸಾಧನೆಗಳಿಗೆ ಮುಡುಪಾಗಿಟ್ಟು ತಾಯ್ತನವನ್ನು ಬಲಿ ಕೊಟ್ಟಾಗ ತನ್ನ ಬಾಳು ವ್ಯರ್ಥವಾಯಿತೆಂದು ಕೊರಗುವುದಿಲ್ಲ. ಅನಕ್ಷರಸ್ಥೆ ಮತ್ತು ಸಾದಾಮನಸ್ಸಿನ ನಾಗಲಕ್ಷ್ಮಿಯೂ ಸೇರಿದಂತೆ ಇಲ್ಲಿನ ಸ್ತ್ರೀ ಪಾತ್ರಗಳು ಸಂಕೀರ್ಣವಾದ ಗಂಭೀರ ಚಿಂತನೆಗಳನ್ನು ಮಾಡಬಲ್ಲವರು.

ಆದರೆ ಮತ್ತೊಂದೆಡೆ ಶ್ರೋತ್ರಿಯನ್ನು ಅತ್ಯಂತ ನ್ಯಾಯಬದ್ಧನೆಂದು ಬಿಂಬಿಸಿರುವುದು ಅದರದೇ ಆದ ಗೊಂದಲವನ್ನು ಸೃಷ್ಟಿಸುತ್ತದೆ. ಸಂಪ್ರದಾಯ ಮತ್ತು ಆಧುನಿಕತೆಗಳ ನಡುವೆ ಘರ್ಷಣೆಯಾದಾಗ ವೈಯಕ್ತಿಕ ಧರ್ಮಕ್ಕೆ ಅಂಟಿಕೊಳ್ಳುವುದರಿಂದ ಆತನಿಗೆ ವಿಶೇಷ ಅನುಕೂಲವಿದೆ. ಸಮಂಜಸವೆನ್ನಿಸಿದಾಗ ಸಂಪ್ರದಾಯವನ್ನು ತಿರಸ್ಕರಿಸುವ ಶ್ರೋತ್ರಿ, ಧರ್ಮದ ನೂಲಿನೆಳೆಯ ಮೇಲೆ ನಡೆಯಲು ಅದೇ ಸಂಪ್ರದಾಯದ ಮೊರೆ ಹೋಗುತ್ತಾರೆ. ದುರದೃಷ್ಟವಶಾತ್, ಈ ಮನಸ್ಥಿತಿ ಬದಲಾಯಿಸಲು ಸಾಧ್ಯವಿರುವ ಇತರ ಸಂಪ್ರದಾಯಗಳ ಬಗ್ಗೆ ಆತನನ್ನು ಅಂಧನನ್ನಾಗಿಸುತ್ತದೆ. ಶಾಸ್ತ್ರಗ್ರಂಥಗಳಲ್ಲಿ ಶ್ರೋತ್ರಿಗಿದ್ದ ಅದಮ್ಯ ನಂಬಿಕೆ, ಅವನ ತತ್ತ್ವಗಳಲ್ಲಿ ಗಟ್ಟಿಯಾಗಿ ಬೇರೂರಿರುವ ಲಿಂಗಭೇದಭಾವ ಮತ್ತು ಜಾತಿವಾದವನ್ನು ಬಿಂಬಿಸುತ್ತದೆ. ಆತ ಧರ್ಮದಲ್ಲಿ ಅಡಕವಾಗಿರುವ ಅಸಮಾನತೆಗಳನ್ನು ಪ್ರಶ್ನಿಸಲು ಹೋಗುವುದಿಲ್ಲ.

ನಮ್ಮ ಬದುಕಿನಲ್ಲಿ ಘಟಿಸುವ ಎಲ್ಲ ವಿದ್ಯಮಾನಗಳಿಗೂ ಹಿಂದಿನ ಜನ್ಮಗಳ ನಮ್ಮ ಕರ್ಮವೇ ಕಾರಣ ಎಂಬ ಪರಿಕಲ್ಪನೆ ನಿರಾಧಾರವಾದದ್ದು. ಪುನರ್ಜನ್ಮದ ಸತ್ಯಾಸತ್ಯಗಳನ್ನೇ ನಿರೂಪಿಸಲು ಯಾವುದೇ ಸ್ಪಷ್ಟ ಪುರಾವೆಗಳಿಲ್ಲದಾಗ, ಹಿಂದಿನ ಜನ್ಮದಲ್ಲಿ ಮಾಡಿದ ಕರ್ಮಗಳನ್ನು ಹೇಗೆ ಅರ್ಥೈಸುವುದು? ಶ್ರೋತ್ರಿಯಂತಹವರು ಕುರುಡು ಸಂಪ್ರದಾಯಗಳನ್ನು ನಂಬುವುದೇ ನಿರಾಧಾರವಾದ ಸಿದ್ಧಾಂತಗಳಲ್ಲಿ ನಂಬಿಕೆಯಿಡುವುದರಿಂದ. ಆತನ ಮತ್ತು

ನಾಗಲಕ್ಷ್ಮಿಯ ಕುರುಡು ನಂಬಿಕೆಯೆಂದರೆ ಹಿಂದಿನ ಜನ್ಮದಲ್ಲಿ ಮಾಡಿದ ಪಾಪಕರ್ಮಗಳ ಫಲವಾಗಿ ಹೆಣ್ಣು ಗಂಡಿಗಿಂತ ನಿಕೃಷ್ಟಳಾಗಿ ಜನ್ಮ ತಾಳುತ್ತಾಳೆ ಎಂಬುದು.

ಈ ಬಗೆಯ ಸಿದ್ಧಾಂತಗಳ ಊರುಗೋಲಿನ ಸಹಾಯವಿಲ್ಲದೆ ಮೇಲು ಕೀಳುಗಳ ತತ್ತ್ವವನ್ನು ಪ್ರತಿಪಾದಿಸಲು ಸಾಧ್ಯವಿಲ್ಲ. ಈ ಕಥೆಯಲ್ಲಿ ಕಾತ್ಯಾಯನಿಯ ಒಂದೇ ದೋಷವೆಂದರೆ ಆಕೆ ಹೆಣ್ಣಾಗಿ ಹುಟ್ಟಿದ್ದು. ಅವಳು ಗಂಡಾಗಿ, ತೀರಿಕೊಂಡ ಅವಳ ಗಂಡ ಹೆಣ್ಣಾಗಿದ್ದರೆ ಅವಳ ಬದುಕು ಕಥೆಯಾಗಿ ನಿರೂಪಿತವಾಗುತ್ತಿರಲಿಲ್ಲ. ಆಕೆ ಹೆಚ್ಚೇನೂ ಕಳೆದುಕೊಳ್ಳದೆ, ಓದು ಮುಗಿಸಿ ಮರುಮದುವೆಯಾಗಿ ತನ್ನ ಮಗನನ್ನೂ ತನ್ನೊಂದಿಗೆ ಇರಿಸಿಕೊಳ್ಳುತ್ತಿದ್ದಳು. ಹಾಗೆಯೇ ಕರುಣಾ ಸಹಾ ರಾವ್‌ನನ್ನು ಮದುವೆಯಾಗದೆಯೇ ತನ್ನ ಸಾಧನೆಯನ್ನು ಮುಂದುವರೆಸಬಹುದಿತ್ತು. ಅವರು ಒಬ್ಬರನ್ನೊಬ್ಬರು ಪ್ರೀತಿಸಿದ್ದು ನಿಜವಾದರೂ ರಾವ್ ಈ ಸಂಬಂಧವನ್ನು ಕೆಲಸದ ಕಾರಣ ಕೊಟ್ಟು ಸಮರ್ಥಿಸಿಕೊಳ್ಳುತ್ತಾನೇ ಹೊರತು ಪ್ರೀತಿಯನ್ನಲ್ಲ. ಕರುಣಾ ಗಂಡಾಗಿದ್ದರೆ ಹೀಗಾಗುವ ಅವಕಾಶವಿರಲಿಲ್ಲ.

ಸ್ತ್ರೀವಾದಿ ದೃಷ್ಟಿಕೋನದಿಂದ ನೋಡಿದರೆ ನಿಸ್ಸಂಶಯವಾಗಿ ಕಥೆಯಲ್ಲಿನ ಹೆಣ್ಣುಮಕ್ಕಳು ತಾವು ಮಾಡದ ಅಪರಾಧಗಳಿಗೆ ಶಿಕ್ಷೆ ಅನುಭವಿಸುತ್ತಾರೆ. ಕಾತ್ಯಾಯನಿ ಮರುಮದುವೆಯಾದ ಕಾರಣಕ್ಕೆ ಮಗನನ್ನು ಕಳೆದುಕೊಂಡರೆ ನಾಗಲಕ್ಷ್ಮಿ ಯಾರೋ ಒತ್ತಾಯಿಸಿದರೆಂಬ ಕಾರಣಕ್ಕೆ ತನ್ನನ್ನು ಮದುವೆಯಾದ ಗಂಡನನ್ನು ಕಟ್ಟಿಕೊಂಡು ಶಿಕ್ಷೆ ಅನುಭವಿಸುತ್ತಾಳೆ. ಆತ ಸ್ವೇಚ್ಛೆಯಿಂದ ಮತ್ತೊಂದು ಮದುವೆಯಾಗುತ್ತಾನೆ. ಆದರೆ ನಾಗಲಕ್ಷ್ಮಿಯ ಬಾಳು ಗಂಡ ತಂದಿಟ್ಟ ಬವಣೆಗಳ ಹೊರೆಯಡಿಯಲ್ಲಿ ಸಾಗುತ್ತದೆ. ಕಾದಂಬರಿಯಲ್ಲಿ ಈ ಸ್ಥಿತಿಗೆ ಅವರು ಹೆಣ್ಣಾಗಿರುವುದೇ ಕಾರಣ ಎಂದು ನೇರವಾಗಿ ಪ್ರತಿಪಾದಿಸದಿದ್ದರೂ ಲೇಖಕ ಅದಕ್ಕೆ ಪೂರಕವಾಗಿ ಸನ್ನಿವೇಶಗಳನ್ನು ಆಯ್ದುಕೊಳ್ಳುತ್ತಾನೆ. ಆದರೆ ಕಾದಂಬರಿಯಲ್ಲಿ ಯಾವುದೇ ಪಾತ್ರಕ್ಕೂ ಸಮಾಧಾನಕರ ಅಂತ್ಯ ದೊರಕದಿರುವುದು ಇಲ್ಲಿ ಒಟ್ಟಾರೆ ಸಂದೇಶ ಗೋಜಲಾಗಿದೆ ಎಂಬ ಗೊಂದಲವನ್ನು ಸೃಷ್ಟಿಸುತ್ತದೆ. ಪುಸ್ತಕದ ಒಟ್ಟಾರೆ ಅಭಿಮತವನ್ನು ಹೇಗೆ ಅರ್ಥೈಸಿಕೊಳ್ಳುವುದೆಂದು ಓದುಗ ಕಸಿವಿಸಿಗೊಳ್ಳುವಂತಾಗುತ್ತದೆ.

ಆದಾಗ್ಯೂ, ಅಪ್ಪಟ ಭಾರತೀಯ ಸಂಸ್ಕೃತಿಯಲ್ಲಿ ಬೆಳೆದ ಲೇಖಕ ಆರು ದಶಕಗಳ ಹಿಂದೆ ಕಟ್ಟಿಕೊಟ್ಟ ಈ ಕಥೆಯಲ್ಲಿ ನಿಶ್ಚಯವಾಗಿ ಸ್ತ್ರೀ ಸಮಾನತೆಯ ಮತ್ತು ಪ್ರಗತಿಪರ ವಿಚಾರಧಾರೆಗಳಿವೆ. ಪುರುಷಪ್ರಧಾನ ಸಮಾಜ ತಮ್ಮ ಮೇಲೆ ಹೇರುವ ರೂಢಪದ್ಧತಿಗಳನ್ನು ನಿರಾಕರಿಸುವ ಮೂಲಕ ಇಲ್ಲಿನ ಸ್ತ್ರೀ ಪಾತ್ರಗಳು ಪ್ರಚಂಡ ಸ್ಥೈರ್ಯವನ್ನು ಪ್ರದರ್ಶಿಸುತ್ತವೆ. ಅವರ ಯೋಚನಾಲಹರಿ ಮತ್ತು ಪ್ರೇರಣಾಶಕ್ತಿಗಳನ್ನು ಸೂಕ್ಷ್ಮತೆಯಿಂದ ವಿಶ್ಲೇಷಿಸಲಾಗಿದೆ. ಎಲ್ಲಕ್ಕಿಂತ ಮಿಗಿಲಾಗಿ ಈ ಸ್ತ್ರೀಯರನ್ನು ಸಹಜವಾಗಿ ಮನುಷ್ಯರಂತೆ ಬಿಂಬಿಸಲಾಗಿದೆ. ಪೂರ್ವಾಚಾರಗಳನ್ನು ಧಿಕ್ಕರಿಸುವ ಅವರ ಪ್ರಯತ್ನಗಳು ತಮ್ಮ ತಪ್ಪಿಲ್ಲದೆಯೂ ಅಸಹನೀಯ ಪರಿಣಾಮಗಳನ್ನು ಅನುಭವಿಸುವುದಕ್ಕೆ ಕಾರಣವಾಗುತ್ತವೆ. ಒಟ್ಟಿನಲ್ಲಿ ವಿಸ್ತಾರವಾದ ವ್ಯಕ್ತಿಚಿತ್ರಣಗಳಿಗೆ 'ವಂಶವೃಕ್ಷ' ಒಂದು ಉತ್ತಮ ಉದಾಹರಣೆ.



# ಸ್ತ್ರೀ ಸಮಾನತೆ – ಸವೆದ ದಾರಿ, ಕ್ರಮಿಸಿದ ದೂರ

**ಡಾ. ಶಾರದ ಚೈತ್ರ**
Chicago, Illinois.

*

*Share our similarities, Celebrate our differences*
(ನಮ್ಮ ಹೋಲಿಕೆಗಳನ್ನು ಹಂಚಿಕೊಳ್ಳೋಣ, ವ್ಯತ್ಯಾಸಗಳನ್ನು ವೈಭವೀಕರಿಸೋಣ)
**—Dr. M. Scott Peck**

ಅನೇಕ ಶತಮಾನಗಳಿಂದ, ಪ್ರಪಂಚದ ಎಲ್ಲಾ ದೇಶಗಳಲ್ಲೂ, ಪೂರ್ವ–ಪಾಶ್ಚಾತ್ಯ ಎಂಬ ಭೇದವಿಲ್ಲದೆ, ಧರ್ಮ, ಜಾತಿ, ವರ್ಗ, ವರ್ಣಗಳ ವ್ಯತ್ಯಾಸವಿಲ್ಲದೆ, ಲಿಂಗ–ಭೇದ ಪದ್ಧತಿ (ಹೆಣ್ಣು ಗಂಡಿಗಿಂತಾ ಕೆಳಮಟ್ಟದವಳು) ಎನ್ನುವ ಮನಃಸ್ಥಿತಿ, ಪಿತೃಪ್ರಧಾನ ಸಮಾಜವನ್ನು ಹುಟ್ಟುಹಾಕಿತು. ಆದರೆ, ಕಳೆದ ಸುಮಾರು 128 ವರ್ಷಗಳಲ್ಲಿ ಅನೇಕ ಧೀರ ಮಹಿಳೆಯರು ಮತ್ತು ಬುದ್ಧಿವಂತ ಮಹನೀಯರು ತಮ್ಮ ಕ್ರಾಂತಿಕಾರಕ, ಅಭೂತಪೂರ್ವ ಕೊಡುಗೆಗಳಿಂದ 'ಸ್ತ್ರೀ ಸಮಾನತೆ' (Gender equality) ಎಂಬ ನ್ಯಾಯ, ತರ್ಕಬದ್ಧವಾದ ವೈಜ್ಞಾನಿಕ ಅಂಶ– ಆಧಾರಿತ ಆಲೋಚನಾಕ್ರಮ ಮತ್ತು ಅದಕ್ಕೆ ಸರಿಹೊಂದುವಂತೆ ಸಮಾಜದಲ್ಲಿ ಮಹತ್ತರ ಬದಲಾವಣೆಗಳನ್ನು ತಂದಿದ್ದಾರೆ. ಈ ಲಿಂಗಭೇದ ಪದ್ಧತಿಯ ಹುಟ್ಟು ಮತ್ತು ಈವರೆಗಿನ ಕೆಲವು ಭೂತಕಾಲದ ಬದಲಾವಣೆಗಳನ್ನು ಅವಲೋಕಿಸೋಣ.

ಸುಮಾರು 3.4 ಮಿಲಿಯನ್ ವರ್ಷಗಳ ಹಿಂದಿನಿಂದಲೂ, 'Prehistoric Cultural Stage' ಅಥವಾ 'Stone age'ನಿಂದ ಗಂಡಸು ಹೊರಗಿನಿಂದ ಬೇಟೆಯಾಡಿ ಆಹಾರ

ತರುತ್ತಿದ್ದರೆ, ಗುಹೆ ಅಥವಾ ಜೋಪಡಿಯಲ್ಲಿ ಹೆಂಗಸು ಅಡುಗೆ ಬೇಯಿಸುತ್ತಾ, ಮಕ್ಕಳನ್ನು ಹೆರುತ್ತಾ, ಸಂಸಾರವನ್ನು ಜೋಪಾನ ಮಾಡುತ್ತಿದ್ದಳು. ಈ ಕೆಲಸ ವಿಂಗಡಣೆ ಜೈವಿಕ ನಿಜಾಂಶಗಳಿಗೆ (biologic realities) ಅನುಗುಣವಾಗಿತ್ತು. ಗಂಡು ದೈಹಿಕವಾಗಿ ಶಕ್ತಿಶಾಲಿಯಾದರೆ, ಹೆಣ್ಣಿನ ದೇಹರಚನೆಯಲ್ಲಿ ಗರ್ಭಧಾರಣೆಯ ಶಕ್ತಿಯಿದೆ. ಹೀಗೆ ಪ್ರಕೃತಿಬದ್ಧವಾದ ನಿಯಮಗಳಿಂದ ಆಧಾರಿತವಾಗಿ ಮಾನವ ಸಮಾಜ ಬೆಳೆಯುತ್ತಾ ಹೋಯಿತು.

ಈ ಅಂಶಗಳೆಲ್ಲವೂ 'Scientific study of human evolution', Paleoanthropology ಆಧಾರಿತವಾಗಿವೆ. ನಾಗರಿಕತೆ, ವಿಜ್ಞಾನ ಮುಂದುವರಿದಂತೆ, ಜೀವನ ಕ್ರಮದಲ್ಲಿ ಮಾರ್ಪಾಡುಗಳಾದರೂ ಅವೆಲ್ಲವೂ ಈ ಮೂಲತತ್ವದ ತಳಹದಿಯ ಮೇಲೆ ಬೆಳೆಯತೊಡಗಿದವು. ಹೀಗೆ ಹೆಣ್ಣು ಮನೆಯ ನಾಲ್ಕುಗೋಡೆಗಳ ಮಧ್ಯೆ ಇದ್ದು, ಹೊರಗಿನ ಆರ್ಥಿಕ, ವ್ಯವಹಾರ ಪ್ರಪಂಚದಲ್ಲಿ ಭಾಗವಹಿಸದೆ, ಹೆಚ್ಚಿನ ವಿದ್ಯಾಭ್ಯಾಸವಿಲ್ಲದೆ, ಮಾನಸಿಕ, ಮತ್ತು ಬೌದ್ಧಿಕವಾಗಿ ಬೆಳೆಯಲು ಆಗಲಿಲ್ಲ. ಮನೆಯ ಹೊರಗಿನ ಪ್ರಪಂಚದಲ್ಲಿ ಭಾಗವಹಿಸುವ ಅವಕಾಶವನ್ನೇ ಅವಳಿಂದ ಕಿತ್ತುಕೊಳ್ಳಲಾಗಿತ್ತು. ವ್ಯವಸ್ಥಿತ ಧಾರ್ಮಿಕ ಪ್ರಪಂಚದಲ್ಲೂ ಪ್ರವೇಶವಿಲ್ಲ. (Priesthood in temples, Church ministers, Pope etc) ಋತುಚಕ್ರದ ಸಮಯದಲ್ಲಿ ಅಶೌಚ, ಬಸುರಿ, ಬಾಣಂತನ ಮುಂತಾದವುಗಳಿಂದ ಕೆಲವು ನಿಷೇಧಗಳಿಗೆ ಒಳಪಡುವ ಸಂಚಿನಲ್ಲೂ ಸಿಲುಕಬೇಕಾಯ್ತು.

ಹೀಗೆ ಪ್ರಕೃತಿ ಕೊಟ್ಟ ದೇಹಶಕ್ತಿ ಅಲ್ಲದೇ, ಬೌದ್ಧಿಕ, ವ್ಯಾವಹಾರಿಕ ಜ್ಞಾನದಲ್ಲಿ ಗಂಡು ಮುಂದೆ ಹೆಜ್ಜೆ ಹಾಕುತ್ತಾ ಹೋದರೆ, ಹೆಣ್ಣು ಒಂದು ಉಪಗ್ರಹದಂತೆ, ಆತನ ಸೇವೆ ಮಾಡುತ್ತಾ ಅವನ ನಿರ್ದೇಶನದಂತೆ ಹಿಂದೆ ಹೆಜ್ಜೆ ಹಾಕುತ್ತಾ ಬರಬೇಕು. ತನ್ನದೇ ಅಸ್ತಿತ್ವ ಅಥವಾ ಸ್ವಂತ ಆಸೆ ಆಕಾಂಕ್ಷೆಗಳಿಲ್ಲದ್ದು ಒಬ್ಬ ವ್ಯಕ್ತಿಯಾಗಲು ಹೇಗೆ ಸಾಧ್ಯ? ಹಾಗಾಗಿ ಹೆಣ್ಣು ಒಂದು ವಸ್ತು, ಸರಕು ಅಥವಾ 'commodity' ಆಗಿಹೋಯಿತು. ಅನ್ನದಾನ, ಭೂದಾನ, ಹಣದಾನದಂತೆ 'ಕನ್ಯಾದಾನ'ದ ಕ್ರಮವು ಜಾರಿಗೆ ಬಂತು.

ಹೆಣ್ಣು ತಂದೆಯಿಂದ ಗಂಡನಿಗೆ, ದೇಹದ ಶಕ್ತಿಬಲ ಕುಂದಿದ ಮೇಲೆ ಗಂಡುಮಗನ ಆಶ್ರಯಕ್ಕೆ ಹೋಗುವ ಪದ್ಧತಿ ಬಂದಿರಬೇಕು. 'ಕೊಟ್ಟ ಹೆಣ್ಣು ಕುಲಕ್ಕೆ ಹೊರಗೆ', ಅವಳಿಗೆ ತಂದೆಯ ಮನೆಯ ಆಸ್ತಿಯಿಲ್ಲ. ಅವಳ ಕುಲ, ಗೋತ್ರಗಳು, ಹೆಸರು ಎಲ್ಲವೂ ಗಂಡನ ಮನೆಯವರದ್ದು. ಎಲ್ಲಾ ಶಾಸ್ತ್ರ-ಸಂಪ್ರದಾಯಗಳೂ, ಅವಳ ಭವಿಷ್ಯ ಜೀವನ ನಿರ್ಧಾರಮಾಡುವುದು ಗಂಡ ಅಥವಾ ಅವನ ಕುಟುಂಬದವರು ಇತ್ಯಾದಿ.

ವರ್ಣಭೇದ ಪದ್ಧತಿಯಲ್ಲಿ ಕಪ್ಪು ಚರ್ಮದ ಮನುಷ್ಯನನ್ನು 'Slave' ಎಂಬ ಮನೋಭಾವದಲ್ಲಿ ರಸ್ತೆಯಲ್ಲಿ ಮಾರಾಟಮಾಡಿದ ಮನುಷ್ಯನ ಕ್ರೌರ್ಯದ ಮುಂದೆ 'ಹೆಣ್ಣು ಗಂಡಿಗಿಂತಾ ಕೀಳು ಅಥವಾ ಒಂದು ವಸ್ತು' ಎಂಬ ಲಿಂಗ-ಭೇದ ಪದ್ಧತಿಯೇನೂ ಅಚ್ಚರಿ ಕೊಡಬಾರದಲ್ಲವೇ?

ವಸ್ತುಸ್ಥಿತಿ ಹೀಗಿದ್ದರೂ, ಕ್ರಿಸ್ತಪೂರ್ವ ಶತಕಗಳಿಂದ ಬೇರೆ ಬೇರೆ ದೇಶಗಳಲ್ಲಿ ಅಲ್ಲೊಬ್ಬ, ಇಲ್ಲೊಬ್ಬ ಹೆಣ್ಣು ಕಲೆ, ಅಧ್ಯಾತ್ಮ, ಸಾಹಿತ್ಯ, ಶೌರ್ಯ ಮುಂತಾದ ಅನೇಕ ಕ್ಷೇತ್ರಗಳಲ್ಲಿ ತಮ್ಮ ಅದ್ಭುತ ಪ್ರತಿಭೆ ಮತ್ತು ಧೀಮಂತಿಕೆಯನ್ನು ಪಿತೃಪ್ರಧಾನ ಸಮಾಜದಲ್ಲಿ, ಪ್ರವಾಹದ ವಿರುದ್ಧ ಹೋಗಿ, ಗಾಜಿನ ಮೇಲ್ಛಾವಣಿಯನ್ನು ಒಡೆದು ಹೊಸ ಇತಿಹಾಸವನ್ನು ಸೃಷ್ಟಿಸಿದ್ದಾರೆ. ಗಾರ್ಗಿ, ಮೈತ್ರೇಯಿ, ಮೀರಾಬಾಯಿ, ಅಕ್ಕಮಹಾದೇವಿ, ಒನಕೆ ಓಬವ್ವ, ಕಿತ್ತೂರು ಚೆನ್ನಮ್ಮ ಹದಿನಾರನೆಯ ಶತಕದಲ್ಲಿ, ಸೀತೆಯ ದೃಷ್ಟಿಯಲ್ಲಿ ರಾಮಾಯಣ 'ಚಂದ್ರಬತಿ ರಾಮಾಯಣ' ಬರೆದ ಬಾಂಗ್ಲಾ ಕವಯಿತ್ರಿ ಚಂದ್ರಬತಿ ಮುಂತಾದವರು. ಗ್ರೀಸ್ ದೇಶದ ಕವಯಿತ್ರಿ Sappho ಹುಟ್ಟಿದ್ದು ಸುಮಾರು 615 BCಯಲ್ಲಿ. ಬರೆದಿದ್ದು 'ಹೆಣ್ಣಿನ ಸಂಬಂಧಗಳು, ಅವಳ ಲೈಂಗಿಕತೆ" ಬಗ್ಗೆ!

ಮರೆಯಬೇಡಿ, ಇಂದಿಗೂ ಹಲವು ದೇಶಗಳಲ್ಲಿ 'ಹೆಣ್ಣು ಲೈಂಗಿಕ ಸುಖವನ್ನು ಪಡೆಯುವುದು ಪಾಪ' ಎಂದು Female Genital Mutilation (FGM) ಎನ್ನುವ ಘೋರಕೃತ್ಯ ನಡೆಯುತ್ತಲೇ ಇದೆ.

ಹಿಂದಿನ ಸಮಾಜದಲ್ಲಿ ಹೆಂಡತಿ, ಗಂಡನೊಡನೆ ಒಂದು ಕಾನೂನು ಘಟಕ (Legal entity)ವಾಗಿದ್ದಳೇ ಹೊರತು ಅವಳಿಗೆ ಸ್ವಂತ ಮತದಾನದ ಹಕ್ಕು, ಬ್ಯಾಂಕ್‌ನಲ್ಲಿ ಗಂಡನ ಸಹಿಯಿಲ್ಲದೇ ಸ್ವಂತ ಖಾತೆಯನ್ನು ತೆಗೆಯುವ ಹಕ್ಕು, ಹಣವನ್ನು ಸಾಲವಾಗಿ ಕೊಡುವ ಅಥವಾ ತೆಗೆದುಕೊಳ್ಳುವ ಹಕ್ಕು ಮುಂತಾದ ಆರ್ಥಿಕ ವ್ಯವಹಾರಗಳ ಹಕ್ಕು, ಅತ್ಯಂತ ನಾಗರಿಕ ದೇಶ ಎಂದುಕೊಳ್ಳುವ ಅಮೆರಿಕ ದೇಶದಲ್ಲೂ 19ನೆಯ ಶತಮಾನದಲ್ಲಿ ಕೂಡ ಇರಲಿಲ್ಲ!

ಇದನ್ನೇ ವಸ್ತುವಾಗಿಟ್ಟುಕೊಂಡು 'A Doll's House' ಎಂಬ ಬಹಳ ಪ್ರಸಿದ್ಧ ನಾಟಕವನ್ನು 1879ರಲ್ಲಿ ನಾರ್ವೇಜಿಯನ್ ನಾಟಕಕಾರ Henrik Ibsen ಎಂಬ ಗಂಡಸು ಬರೆದರು.

ನೋರಾ ಇದರಲ್ಲಿ ಕಥಾನಾಯಕಿ. ತನ್ನ ಗಂಡನ ವೈದ್ಯಕೀಯ ಖರ್ಚಿಗಾಗಿ ನೋರಾ ಸಾಲ ಮಾಡಬೇಕಾಗುತ್ತದೆ. 'ಅಪ್ಪ ನನಗೆ ಹಣ ಕೊಟ್ಟಿದ್ದಾನೆ' ಎಂದು ಸುಳ್ಳು ಹೇಳಿ, ಗಂಡನ ಜೀವವನ್ನು ಉಳಿಸುವುದಕ್ಕೋಸ್ಕರ ಹಣ ಹೊಂದಿಸುತ್ತಾಳೆ. ಆದರೆ ಅದು ಅಪ್ಪ ಕೊಟ್ಟಿದ್ದಲ್ಲ. ಅಪ್ಪನ ಸಹಿಯನ್ನು ಫೋರ್ಜರಿ ಮಾಡಿ ಬ್ಯಾಂಕ್‌ನಲ್ಲಿ ಸಾಲ ತಂದಿರುತ್ತಾಳೆ. ಗಂಡ, ಮನೆ, ಮಕ್ಕಳನ್ನು ನೋಡಿಕೊಳ್ಳುತ್ತಾ, ಗುಟ್ಟಾಗಿ ಹೊರಗಡೆ ಕೆಲಸಮಾಡಿ ಸಾಲ ತೀರಿಸುತ್ತಿರುತ್ತಾಳೆ. ಹೆಣ್ಣು ಗಂಡಿನ ಸಹಾಯವಿಲ್ಲದೆ, ಬ್ಯಾಂಕ್‌ನಲ್ಲಿ ಸಾಲ ಮಾಡಿದ್ದು, ಸಾಲಕ್ಕೋಸ್ಕರ ಫೋರ್ಜರಿ ಮಾಡಿದ್ದು ಕಾನೂನುಬಾಹಿರ ಕೆಲಸ. ಬ್ಯಾಂಕ್‌ನಲ್ಲಿ ಕೆಲಸ ಮಾಡುವ ಇನ್ನೊಬ್ಬ ಗಂಡಸು ನೋರಾಳನ್ನು blackmailಗೆ ಒಳಪಡಿಸಿದಾಗ, ಅವಳ ಗಂಡನಿಗೆ ವಿಷಯ ಗೊತ್ತಾಗಿ, ಕಾನೂನುಬಾಹಿರ ಕೆಲಸಮಾಡಿದ ಹೆಣ್ಣು ತನ್ನ ಹೆಂಡತಿಯಾಗಿರುವುದಕ್ಕೆ ಮತ್ತು ತನ್ನ ಮಕ್ಕಳನ್ನು ಬೆಳೆಸುವ ಯೋಗ್ಯತೆ ಇಲ್ಲದವಳು ಎಂದು ಬೈದು 'ಮನೆ ಬಿಟ್ಟುಹೋಗು' ಎಂದು ಕಿರಚುತ್ತಾನೆ. ಪ್ರೀತಿ, ಗೌರವಗಳಿಂದ

ಗಂಡನನ್ನೂ, ಅವನ ಮಕ್ಕಳನ್ನೂ ನೋಡಿಕೊಂಡು ಸಂಸಾರ ನಡೆಸುತ್ತಿರುವ ನೋರಾಳಿಗೆ, ಜೀವನದಲ್ಲಿ ಮೊದಲ ಬಾರಿ ತನ್ನ ಗಂಡನ ಪ್ರೀತಿಯ ಆಳ ಗೊತ್ತಾಗಿ, 'ಯಾವಾಗಲೂ ನನ್ನ ಸಂಸಾರದ ಜವಾಬ್ದಾರಿಯೇ ನನ್ನ ಗುರಿ ಎಂದುಕೊಂಡು ನನ್ನ ಅವಶ್ಯಕತೆಗಳನ್ನು ನಾನು ಅರಿತೇ ಇಲ್ಲ' ಎಂದು ಜ್ಞಾನೋದಯವಾಗುತ್ತದೆ. ಮನೆಯ ಕೀಲಿಕೈಯನ್ನು ಗಂಡನ ಮುಂದೆ ಎಸೆದು ಮನೆಯಿಂದ ಹೊರಟುಹೋಗುತ್ತಾಳೆ.

ಸ್ತ್ರೀವಾದದ ಮೇಲೆ ಯೂರೋಪಿನಿಂದ ಬಂದ ಇನ್ನೊಂದು ಪ್ರಸಿದ್ಧವಾದ ಕೃತಿ The Second Sex. ಇದನ್ನು ಬರೆದದ್ದು, ಫ್ರೆಂಚ್ ಫಿಲಾಸಫರ್ Simone de Beauvoir. ವ್ಯಾಟಿಕನ್ ಆಗ ಬಹಿಷ್ಕಾರ ಹಾಕಿದ್ದ ಕೃತಿ.

**ಅಮೆರಿಕದಲ್ಲಿ ಆರಂಭವಾದ Equality movements:**

1. **Suffrage Movement:** Anti Slavery, Right to Vote (Suffrage) ಎಂದು ಶುರುವಾಗಿದ್ದು, Gender equality ಎಂದು ಆರಂಭವಾಗಲಿಲ್ಲ. 1848ರಲ್ಲಿ Elizabeth Stanton ಎನ್ನುವ ಶ್ವೇತವರ್ಣದ ಮಹಿಳಾ ಲೇಖಕಿ ಮತ್ತು ಚಳವಳಿಗಾರ್ತಿ ಆರಂಭ ಮಾಡಿದ್ದು. ಮೊದಲ ಸಂಘಟನೆ ಮತ್ತು ದಾಖಲೆ ಹೊರಬಂದ ಜಾಗ Seneca Falls, New York ಆದ್ದರಿಂದ 'Seneca Falls Convention' ಎಂಬ ಹೆಸರು ಬಂತು. 'Declaration of Sentiments' ಎಂದು ದಾಖಲೆಯ ಹೆಸರು.
2. Women's liberation movement Early 1900s
3. Black Feminism
4. The Feminist Sex Wars, late 1970's
5. Riot Grrrl, early 1990's

Women's liberation movement ನಡೆಯುತ್ತಿರುವಾಗ, ಅನೇಕ ಗಂಡಸರು ಅದನ್ನು ಮನಃಪೂರ್ವಕವಾಗಿ ಒಪ್ಪಿ ಹೆಂಗಸರ ಜೊತೆಯಾದರು. ಇದೊಂದು ಬಹಳ ಗಮನಾರ್ಹ ಸಂಗತಿ. ಈ ಕಾರಣದಿಂದ 'Women's movement' ಎನ್ನುವ ಹೆಸರು 'Feminist movement' ಎಂದು ಬದಲಾಯಿತು. ಇದಕ್ಕೆ ಸೇರಿರುವ ಗಂಡಸರನ್ನು 'Male feminist' ಎಂದು ಕರೆಯಲಾಯಿತು. ಈ ಚಳವಳಿಗಳ ಕಾರಣ, ಅಮೆರಿಕದಲ್ಲಿ 1920ರಲ್ಲಿ ಶ್ವೇತವರ್ಣದ ಮಹಿಳೆಯರು ಮತದಾನದ ಹಕ್ಕು ಪಡೆದುಕೊಂಡರು. 1965ರಲ್ಲಿ ವರ್ಣಭೇದವಿಲ್ಲದೇ ಎಲ್ಲಾ ವರ್ಣದ ಮಹಿಳೆಯರಿಗೆ ಮತದಾನ ಮಾಡುವ ಹಕ್ಕು ಬಂದಿತು.

ಹೆಣ್ಣಿನ ಮೇಲಾಗುವ ಲೈಂಗಿಕ ದೌರ್ಜನ್ಯ (Sexual Intimidation, abuse, rape) ಯಾವ ದೇಶ, ಕಾಲ, ವರ್ಗಗಳಿಗೂ ಸೀಮಿತವಾಗಿಲ್ಲ. ದೊಡ್ಡ ಸಂಘ, ಸಂಸ್ಥೆಗಳಲ್ಲಿ

ನಡೆಯುವ, ನಡೆಯುತ್ತಿರುವ ವ್ಯವಸ್ಥಿತವಾದ ಲೈಂಗಿಕ ದೌರ್ಜನ್ಯಗಳು ಹೊರಗೆ ಬರುತ್ತಿವೆ. 21st Centuryಯಲ್ಲಿ ಬಂದ ಈ ಅಲೆಗೆ 'me-too' ಎಂಬ ಹೆಸರು ಕೊಟ್ಟು ಹೆಚ್ಚು ಪ್ರಕರಣಗಳು ಹೊರಗೆ ಬರುವಂತೆ ಮಾಡಿದ ಚಳವಳಿಗಾರ್ತಿ Tarama Burke ಅವರಿಗೆ ಸ್ತ್ರೀಸಮುದಾಯ ಕೃತಜ್ಞವಾಗಿರಬೇಕು.

ಮತದಾನದ ಹಕ್ಕು ಬಂದು ಕೇವಲ 58 ವರ್ಷಗಳಾಗಿವೆ. ಇಷ್ಟು ಕಡಿಮೆ ಅವಧಿಯಲ್ಲಿ ಸ್ತ್ರೀಯರು ತಮ್ಮ ಉತ್ಸಾಹ ಮತ್ತು ಕಠಿಣ ಪರಿಶ್ರಮದಿಂದ ಬಹಳ ಉನ್ನತ ಸ್ಥಾನಕ್ಕೆ ಬಂದಿದ್ದಾರೆ. ಅವಕಾಶ, ತರಬೇತಿ, ಪ್ರೋತ್ಸಾಹ ಸಿಕ್ಕರೆ ಹೆಣ್ಣು ಗಂಡಿನ ಹಾಗೇ ಅಥವಾ ಅವನನ್ನು ಮೀರಿಸುವಷ್ಟು ಪ್ರಮಾಣದಲ್ಲಿ ಪ್ರಪಂಚದ ಎಲ್ಲಾ ಕ್ಷೇತ್ರಗಳಲ್ಲೂ ತೊಡಗಿಸಿಕೊಳ್ಳಬಲ್ಲಳು, ಸಾಧಿಸಬಲ್ಲಳು ಎಂದು ತೋರಿಸಿಕೊಟ್ಟ ಕೆಲಸ ಈಗಾಗಲೇ ಆಗಿಹೋಗಿದೆ. (There is nothing to prove anymore.) ಹೆಣ್ಣಲ್ಲಿ ಈ ಶಕ್ತಿ–ಸಾಮರ್ಥ್ಯಗಳು ಇಲ್ಲ ಎನ್ನುವ ಅನುಮಾನ ಅನೇಕ ಗಂಡುಗಳಿಗೂ, ಕೆಲವು ಸ್ತ್ರೀಯರಿಗೂ ಯಾಕೆ ಕಾಡಿತ್ತೋ ನನಗೆ ಗೊತ್ತಾಗುವುದಿಲ್ಲ.

ಅನೇಕ ಮಹಿಳೆಯರ ತ್ಯಾಗ, ಪರಿಶ್ರಮ, ಅಂತಃಬಲಗಳ ಮೇಲೆ ನಾವು ಈಗ ನಿಂತಿದ್ದೇವೆ. ಇದರಲ್ಲಿ ಹಲವಾರು Male feministಗಳೂ ಸೇರಿದ್ದಾರೆ. ನನ್ನ ಅಭಿಪ್ರಾಯದಲ್ಲಿ ದೊಡ್ಡ ಯುದ್ಧಗಳನ್ನು ಗೆಲ್ಲುವ ಕೆಲಸ ಈಗಾಗಲೇ ಆಗಿಹೋಗಿದೆ. ಈಗ ಬೇಕಾದದ್ದು ತೀಕ್ಷ್ಣವಾದ ಬುದ್ಧಿವಂತಿಕೆ, ಸೂಕ್ಷ್ಮ ದೂರದರ್ಶಿತ್ವ, ಸ್ತ್ರೀಯರು ಒಳಜಗಳ, ಹಠಮಾರಿತನ, 'Missing the forest for the trees' ಎನ್ನುವಂತೆ ಶುಷ್ಕವಿಷಯಗಳ ಬಗ್ಗೆ ಚಳವಳಿ, ಕಾನೂನು ಹೋರಾಟ ಮಾಡುತ್ತಾ ನಮ್ಮ ಸಮಯ ಹಾಗೂ ಸಂಪನ್ಮೂಲಗಳನ್ನು ಹಾಳುಮಾಡಿಕೊಳ್ಳಬಾರದು. ಒಬ್ಬ ಗಂಡಿನ ಮೇಲೆ ಒಂದು ಸುಳ್ಳು ಅತ್ಯಾಚಾರದ ಅಥವಾ 'Me-too' ಪ್ರಕರಣವನ್ನು ದಾಖಲು ಮಾಡಿದರೆ, ನಾವು 'ಸ್ತ್ರೀಸಮಾನತೆ ಮತ್ತು ಸಂವೇದನೆ'ಯ ಅಲೆಯನ್ನು ಅನೇಕ ಸಾವಿರ ಮೈಲಿ ಹಿಂದಕ್ಕೆ ಎಳೆದಷ್ಟು ಅಪಚಾರವಾಗುತ್ತದೆ. ಅನೇಕ ತಾಯಂದಿರ ತ್ಯಾಗ, ಬಲಿದಾನಗಳ ಮೇಲೆ ಕಟ್ಟಿದ್ದ ಈ ಸುಂದರ ಸೌಧವನ್ನು ನಾವೇ ಒಡೆಯುತ್ತಾ ಹೋಗಬಾರದಲ್ಲವೇ?

ಈ ಸೂಕ್ಷ್ಮವನ್ನು ಅರಿತು ಸ್ತ್ರೀ ಪುರುಷರಿಬ್ಬರೂ ಇಂದಿಗೂ ಹಲವು ನೆಲೆಗಳಲ್ಲಿ ದುರ್ಲಭವಾಗಿರುವ ಸ್ತ್ರೀ ಸಮಾನತೆಯನ್ನು ಸಾಧಿಸಲು ಒಟ್ಟಾಗಿ ಶ್ರಮಿಸಬೇಕಿದೆ.



# ಸ್ತ್ರೀ ಸಮಾನತೆ ಮತ್ತು ಸ್ತ್ರೀ ಸಂವೇದನೆ

**ಶ್ರೀಕಾಂತ ಬಾಬು**
Bridgewater, New Jersey.

*

ಪ್ರಾಣಿವರ್ಗದ ಸರಪಳಿಯ ಅತ್ಯುನ್ನತ ಸ್ಥಾನದಲ್ಲಿರುವ ಮನುಕುಲವು ನಾಗರಿಕತೆ ಬೆಳೆದಂತೆ ಭೂಮಿಯ ಸಂಪತ್ತುಗಳಿಗೆಲ್ಲಾ ತಾವೇ ಒಡೆಯರೆಂದು ಭಾವಿಸಿದ್ದಾರೆ. ಈ ಮನುಕುಲದ ಅವಿಭಾಜ್ಯ ಅಂಗಗಳಾದ ಸ್ತ್ರೀ-ಪುರುಷರಿಬ್ಬರಿಗೂ ತಮ್ಮ ಜೀವನವನ್ನು ಸಂತೋಷದಿಂದ ಕಳೆಯುವ ಅಧಿಕಾರ ಮತ್ತು ಅವಕಾಶಗಳು ಸಮಾನವಾಗಿರಬೇಕೆಂಬ ಆಶಯ ಸಮರ್ಪಕ ಮತ್ತು ಸಂಭವನೀಯ. ಆದರೆ ಹಲವಾರು ಕಾರಣಗಳಿಂದ ಸ್ತ್ರೀ ಸಮಾನತೆ ಸಾಧ್ಯವಾಗಿಲ್ಲವೆನ್ನುವುದು ಸತ್ಯ ಸಂಗತಿ. ಈ ಅಸಮಾನತೆ ಸ್ತ್ರೀಯರ ಅನೇಕ ಸಮಸ್ಯೆಗಳಿಗೆ ಕಾರಣವಾಗಿದೆ.

'ಸ್ತ್ರೀ ಸಂವೇದನೆ' ವಿಷಯದ ವ್ಯಾಪ್ತಿ ಅಗಾಧವಾದದ್ದು. ಬಹುಶಃ ಈ ಪುಸ್ತಕದಲ್ಲಿ ಇತರ ಅನೇಕ ಲೇಖನಗಳು ಈ ವಿಷಯದ ಹಲವಾರು ಮುಖಗಳನ್ನು ಪರಿಶೀಲಿಸಿರ-ಬಹುದೆಂದು ಊಹಿಸುತ್ತಾ, ನಾನು ಈ ವಿಷಯವನ್ನು ಒಂದು ಪ್ರಬಂಧ-ಪ್ರಕಾರದಲ್ಲಿ ಒಂದೆರಡು ವಿಭಿನ್ನ ಕೋನಗಳಿಂದ ಪರಿಶೀಲಿಸುವ ಪ್ರಯತ್ನವನ್ನು ಮಾಡಿದ್ದೇನೆ.

ಸಂಸ್ಕೃತ ಪದವಾದ 'ಸಂವೇದನೆ' ಅನೇಕ ಅರ್ಥ ಮತ್ತು ಭಾವಗಳನ್ನು ವ್ಯಕ್ತಪಡಿಸುತ್ತದೆ. ಇದು ಭಾವಲೋಕಕ್ಕೆ ಸಂಬಂಧಿಸಿದುದರಿಂದ ಎಲ್ಲ ಸ್ತ್ರೀಯರಿಗೆ ಸಂಬಂಧಪಟ್ಟ ಎಲ್ಲ ಭಾವನೆಗಳನ್ನೂ ಪರಿಶೀಲಿಸುವುದು ಸುಲಭಸಾಧ್ಯವಲ್ಲವೆಂಬುದನ್ನು ಅರಿತು, ಈ ಲೇಖನದಲ್ಲಿ ಸ್ತ್ರೀಸಮಾನತೆ ಮತ್ತು ಸ್ತ್ರೀಶೋಷಣೆಗಳಿಗೆ ಮುಖ್ಯ ಗಮನ ಹರಿಸುತ್ತಾ ಅದರಿಂದ ಉಂಟಾದ ಸಮಸ್ಯೆಗಳನ್ನು ಮತ್ತು ಅವುಗಳ ಪರಿಹಾರಗಳನ್ನು ಹುಡುಕುವ ಪ್ರಯತ್ನವನ್ನು ಮಾಡಿದ್ದೇನೆ.

ಮೊದಲು ಸ್ತ್ರೀಯರ ಮೂಲಭೂತ ಹಕ್ಕಾದ ಸ್ತ್ರೀ–ಪುರುಷ ಸಮಾನತೆಯನ್ನು ಸಾಧಿಸಿದ ಮೇಲೆ ಸ್ತ್ರೀಯರ ಇತರ ಸಮಸ್ಯೆಗಳಿಗೆ ಅನುಕಂಪ ಮತ್ತು ಸಹಾನುಭೂತಿಗಳಿಂದ ಸ್ಪಂದಿಸಬಹುದೆಂದು ನನ್ನ ಅನಿಸಿಕೆ.

ವಿಶ್ವದ ಮಹಿಳೆಯರ ಇಂದಿನ ಬಹುತೇಕ ಸಮಸ್ಯೆಗಳಿಗೆ ಕಾರಣ ಶತ–ಶತಮಾನಗಳ ಇತಿಹಾಸದ ವ್ಯವಸ್ಥೆಗಳು. ದುರದೃಷ್ಟವಶಾತ್ ಈ ವ್ಯವಸ್ಥೆಗಳು ಸ್ತ್ರೀಯರ ಆತ್ಮವಿಶ್ವಾಸವನ್ನು ಉಡುಗಿಸುವ ಮತ್ತು ಅವರ ಉನ್ನತಿಗೆ ಮಾರಕವಾಗುವ ವ್ಯೂಹವಾಗಿವೆ. ಈ ವ್ಯವಸ್ಥೆಗಳನ್ನು ನಿರ್ದಿಷ್ಟವಾಗಿ ಮತ್ತು ಉದ್ದೇಶಪೂರ್ವಕವಾಗಿ ಸ್ತ್ರೀಯರಿಗೆ ಅನುಕೂಲವಾಗುವಂತೆ ಬದಲಾಯಿಸಿದಲ್ಲಿ ಸ್ತ್ರೀಯರ ಬದುಕಿನಲ್ಲಿ ಉತ್ತಮ ಬದಲಾವಣೆಗಳು ಖಂಡಿತಾ ಸಾಧ್ಯ.

**ಮಾನವ ನಾಗರಿಕತೆ**

ಮಾನವ ಜನ್ಮದ ಸೃಷ್ಟಿ ಹೇಗಾಯಿತು ಎನ್ನುವ ಪ್ರಶ್ನೆಗೆ ಉತ್ತರ ನಮ್ಮ ನಂಬಿಕೆಗಳನ್ನು ಅವಲಂಬಿಸಿದೆ. ಅದು ವಿಕಾಸವಾದವಾಗಿರಬಹುದು ಅಥವಾ ದೈವ ನಿಯಾಮಕವಾಗಿರ ಬಹುದು. ಆದರೆ ಬಹುಶಃ ಎಲ್ಲರೂ ಒಪ್ಪಬಹುದಾದದ್ದು, ಸ್ತ್ರೀ–ಪುರುಷರು ಭೂಮಿಯಲ್ಲಿ ಒಟ್ಟಿಗೇ ಅವತರಿಸಿ ಇತರ ಪ್ರಾಣಿ ಸಮುದಾಯದಂತೆ ಸಂತಾನೋತ್ಪತ್ತಿಯ ಮೂಲಕ ಕಳೆದ ಸಹಸ್ರಾರು ವರ್ಷಗಳಲ್ಲಿ ನೂರಾರು ದೇಶಗಳ ವಿಭಿನ್ನ ಸಂಸ್ಕೃತಿಗಳ ಮತ್ತು ಸಂವಿಧಾನಗಳ ಸಂರಕ್ಷಣೆಯಲ್ಲಿ ಅನೇಕ ರೀತಿಯ ಪ್ರಗತಿಯನ್ನು ಸಾಧಿಸಿ ಈ ಹೊತ್ತು 8 ಬಿಲಿಯನ್ ಜನಸಂಖ್ಯೆಯನ್ನು ತಲುಪಿದೆ.

ಮಾನವ ಜನಾಂಗದ ನಾಗರಿಕತೆಯು (Mesopotamian, Indus, Chinese, Egyptian, etc. civilizations) ವಿಕಸನವಾಗಿ ನಮಗೆ ವಿವಿಧ ಪ್ರದೇಶಗಳ ಜನರ ಜೀವನ ಪದ್ಧತಿಯಲ್ಲಿನ ಸಾಮ್ಯತೆ ಮತ್ತು ವ್ಯತ್ಯಾಸಗಳು ಸ್ಪಷ್ಟವಾಗಿ ಕಾಣಸಿಗುತ್ತವೆ.

ಇತರ ಪ್ರಾಣಿವರ್ಗಗಳಲ್ಲಿರುವಂತೆ ಜೈವಿಕವಾಗಿ ಸ್ತ್ರೀ–ಪುರುಷರ ದೈಹಿಕ ವ್ಯತ್ಯಾಸಗಳನ್ನು ಗಮನಿಸಿದಲ್ಲಿ, ಒಬ್ಬ ಸ್ತ್ರೀ ಒಬ್ಬ ಪುರುಷನಷ್ಟು ಶಕ್ತಿಶಾಲಿಯಲ್ಲವೆನ್ನುವುದು ನಿರ್ವಿವಾದ. ನಾಗರಿಕತೆಯ ಆರಂಭದ ಕೆಲ ಸಹಸ್ರಮಾನಗಳು ಸ್ತ್ರೀಯರ ಪಾತ್ರ ಕೇವಲ ವಂಶಾಭಿವೃದ್ಧಿ ಮತ್ತು ಗೃಹ ಸಂಬಂಧ ಪ್ರಕ್ರಿಯೆಗಳಲ್ಲಿ ಕಳೆದಿರಬಹುದು. ನಂತರದ ಕೆಲವಾರು ಸಹಸ್ರ ವರ್ಷಗಳಲ್ಲಿ ನಾಗರಿಕತೆ ಬೆಳೆದಂತೆ ಬಂಗಾರ, ತಾಮ್ರ ಯುಗಗಳಲ್ಲಿ ಹಲವು ಸಾಮ್ರಾಜ್ಯಗಳು ಅಲ್ಲಲ್ಲಿ ತಳವೂರಿ ಜನರ ಮೂಲಭೂತ ಅವಶ್ಯಕತೆಗಳಾದ ಆಹಾರ, ವಸತಿ, ರಕ್ಷಣೆ, ಇತ್ಯಾದಿಗಳು ಪೂರೈಸಲ್ಪಟ್ಟವು. ಬಹುಶಃ ಇವುಗಳ ಜೊತೆಗೆ ಸಮಾಜ, ಭಾಷೆ, ಸಂಸ್ಕೃತಿ, ವರ್ಣ, ಜಾತಿ, ಮತ, ಗುಡಿ–ಗೋಪುರ, ದೇವರು–ಪುರೋಹಿತ, ಕಟ್ಟಲೆ, ನ್ಯಾಯಾಂಗ ಮತ್ತಿತರ ವ್ಯವಸ್ಥೆಗಳೂ ಸಹ ಆಯಾ ಪ್ರಾಂತ್ಯಗಳ ಪ್ರಚಲಿತ ಆಚರಣೆಗಳಿಗನುಸಾರವಾಗಿ ಚಾಲನೆಗೊಂಡವು.

ಮುಂದೆ ಕಬ್ಬಿಣಯುಗಕ್ಕೆ ಕಾಲಿಡುತ್ತಿದ್ದಂತೆ ಅನೇಕ ರಾಜರುಗಳ ಸಾಮ್ರಾಜ್ಯ ವಿಸ್ತಾರದ ರಾಜ್ಯಾಕಾಂಕ್ಷೆ, ಅಧಿಕಾರದ ದುರಾಸೆಗಳಿಂದ ಕಳೆದ 3000 ವರ್ಷಗಳು ಒಂದಲ್ಲ ಒಂದು

ಪ್ರದೇಶದಲ್ಲಿ ಯುದ್ಧಗಳು ನಡೆಯುತ್ತಿದ್ದುದು ಮತ್ತು ಈಗಲೂ ನಡೆಯುತ್ತಿರುವುದನ್ನು ಕಾಣುತ್ತಿದ್ದೇವೆ. ಯುದ್ಧಗಳ ನಂತರದ ವಾಸ್ತವ ಏನೆಂದರೆ ಪರಾಜಿತ ರಾಜ್ಯವು ವಿಜೇತ ರಾಜ್ಯದ ಅಧೀನತೆಗೆ ಒಳಪಟ್ಟು ತನ್ನ ಸಂಪತ್ತುಗಳ ನಷ್ಟದ ಜೊತೆಗೆ ಸ್ತ್ರೀಯರ ಮೇಲಿನ ಅತ್ಯಾಚಾರಗಳಿಂದ ಪ್ರಾದೇಶಿಕ ಜಾತಿ–ಮತ–ವರ್ಣ ವ್ಯವಸ್ಥೆಗಳ ಸಂಕರಗಳಿಗೆ ಕಾರಣವಾಗುತ್ತದೆ. ಯುದ್ಧಗಳ ಪರಿಣಾಮದಿಂದ ಅತ್ಯಂತ ಶೋಷಿಸಲ್ಪಟ್ಟ ವರ್ಗವೆಂದರೆ ಮಹಿಳೆಯರು. ವಿಶ್ವದ ಇತಿಹಾಸದಲ್ಲೆಲ್ಲ ಎಲ್ಲ ಕಡೆ ಇದು ಎದ್ದು ಕಾಣುತ್ತದೆ.

ಅಧಿಕಾರ ವ್ಯವಸ್ಥೆಗಳಲ್ಲಿ ರಾಜರುಗಳ ಜೊತೆಗೆ ಧರ್ಮ ಮತ್ತು ಧರ್ಮಗುರುಗಳ ಪ್ರಭಾವದಿಂದ ಅಲ್ಲಿನ ಸಮಾಜದ ಮೇಲಾಗುತ್ತಿದ್ದ ಪರಿಣಾಮಗಳನ್ನು ಸಹ ಗಮನಿಸಬಹುದು. ದುರ್ದೈವವೇನೆಂದರೆ ನಾಗರಿಕತೆ ಹೆಚ್ಚಿದಂತೆ ಯುದ್ಧ ಮುಖೇನ ದುರ್ಬಲ ಜನರ ಮೇಲಿನ ದೌರ್ಜನ್ಯಗಳು ಹೆಚ್ಚುತ್ತಾ ಹೋದವೇ ವಿನಾ ಸಮಾನತೆಯನ್ನು ಸಾಧಿಸಲು ಸಾಧ್ಯವಾಗಲಿಲ್ಲ. ಸ್ತ್ರೀಯರನ್ನು ಸಂರಕ್ಷಿಸಬೇಕಾದ ಧರ್ಮಗಳೂ ಸಹ ಅವರನ್ನು ರಕ್ಷಿಸಲಿಲ್ಲ.

ಆದರೆ ಯುದ್ಧಗಳಿಂದ ನಾಗರಿಕತೆಗೆ ಆಗಿರುವ ಕೆಲ ಪ್ರಯೋಜನಗಳನ್ನೂ ಸಹ ನಾವು ಅಲ್ಲಗಳೆಯುವಂತಿಲ್ಲ. ಯುದ್ಧಗಳ ಕೊಡುಗೆ ಏನೆಂದರೆ, ಯುದ್ಧವನ್ನು ಜಯಿಸಲು ನಾನಾ ರೀತಿಯ ನಿರಂತರ ವೈಜ್ಞಾನಿಕ ಅನ್ವೇಷಣೆಗಳು ನಡೆಯುತ್ತಿರುವುದು. ಈ ನೂತನ ಅನ್ವೇಷಣೆಗಳಿಂದ ಅಸ್ತಿತ್ವದಲ್ಲಿರುವ ಅನೇಕ ಸಮಸ್ಯೆಗಳಿಗೆ ಪರೋಕ್ಷವಾಗಿ ಪರಿಹಾರಗಳು ಕಂಡುಬರುವುದು. ಇವುಗಳಿಂದ ವಿಶ್ವವನ್ನು ಒಂದುಗೂಡಿಸುವ ಒಂದು ಪ್ರಯತ್ನ ಸಕ್ರಿಯವಾಗಿದೆ. ಈ ಅನ್ವೇಷಣೆಗಳ ಮೂಲಕ ರೋಗ–ರುಜಿನಗಳ ನಿರ್ಮೂಲನೆ, ನೈಸರ್ಗಿಕ ಅಪಾಯಗಳ ಮುನ್ಸೂಚನೆ, ಸಂಪನ್ಮೂಲಗಳ ಸಮರ್ಪಕ ಉಪಯೋಗ, ಸಂವಹನೆ ಮತ್ತು ಸಂಪರ್ಕಮಾಧ್ಯಮದಲ್ಲಾಗಿರುವ ಅಸಾಮಾನ್ಯ ಪ್ರಗತಿ, ಮತ್ತು ಸಾಮಾನ್ಯ ಜನರ ದೈನಂದಿನ ಜೀವನದ ಸಂಕಷ್ಟಗಳ ಪರಿಹಾರ ಇತ್ಯಾದಿಗಳು ಯಥೇಚ್ಛವಾಗಿ ನಡೆದಿವೆ. ಹಾಗಾಗಿ ಈ ಪ್ರಕ್ರಿಯೆಗಳು ಒಂದು ರೀತಿಯಲ್ಲಿ ಸ್ತ್ರೀ ಸಮಸ್ಯೆಗಳಿಗೂ ಕೆಲವು ಪರಿಹಾರವನ್ನು ನೇರವಾಗಿ ಅಲ್ಲದಿದ್ದರೂ ಪರೋಕ್ಷವಾಗಿ ಕೊಟ್ಟಿವೆಯೆಂದು ಹೇಳಬಹುದು.

## ಸ್ತ್ರೀ ಸಂವೇದನೆ

ಈ ಹಿನ್ನೆಲೆಯಲ್ಲಿ 'ಸ್ತ್ರೀ ಸಂವೇದನೆ' ವಿಷಯವನ್ನು ಪರಾಮರ್ಶಿಸೋಣ. ಸ್ಥೂಲವಾಗಿ ಸ್ತ್ರೀ ಸಂವೇದನೆಯ ಕೊರತೆಗೆ ಕಾರಣಗಳನ್ನು ಪರಿಶೀಲಿಸಿದಲ್ಲಿ, ಕೆಲವು ಅಸಮರ್ಪಕ ಸಾಮಾಜಿಕ ವ್ಯವಸ್ಥೆಗಳು ಬಾಹ್ಯದಿಂದ ಸ್ತ್ರೀಯರನ್ನು ಸಾಮಾನ್ಯ ಸಮಸ್ಯೆಗಳಾಗಿ ಬಾಧಿಸಿದರೆ, ಅವರ ಅನೇಕ ಇತರ ಅರಿವು, ಅನುಭವಗಳು ಅವರ ವೈಯಕ್ತಿಕ ಗುಣ–ಲಕ್ಷಣಗಳನ್ನು ರೂಪಿಸುತ್ತವೆ.

ಚರ್ಚೆಯ ಸಲುವಾಗಿ ವಿಷಯವನ್ನು ಈ 2 ಭಾಗ ಮಾಡಿದರೆ ಸಮಸ್ಯೆಯನ್ನು ಅರ್ಥಮಾಡಿಕೊಳ್ಳಲು ಮತ್ತು ಅದರ ಪರಿಹಾರವನ್ನು ಕಂಡುಕೊಳ್ಳಲು ಪ್ರಯತ್ನಿಸಲು ಸಾಧ್ಯವಾಗುತ್ತದೆ.

1. ಬಾಹ್ಯ ವ್ಯವಸ್ಥೆಗಳಿಂದುಂಟಾದ ಅನೇಕ ಸ್ತ್ರೀಸಮಸ್ಯೆಗಳು
2. ಆಂತರಿಕವಾದ ವೈಯಕ್ತಿಕ ಸ್ತ್ರೀಸಮಸ್ಯೆಗಳು

**1. ಬಾಹ್ಯ ವ್ಯವಸ್ಥೆಗಳಿಂದುಂಟಾದ ಸ್ತ್ರೀಸಮಸ್ಯೆಗಳು**

ನಾನಾ ರೀತಿಯ ಶೋಷಣೆಗಳು ಮತ್ತು ಅಸಮಾನತೆಗಳ ಕಾರಣದಿಂದ ಉಂಟಾಗುವ ಸ್ತ್ರೀಯರ ಸಮಸ್ಯೆಗಳು ಅನೇಕ. ಸಾಮಾಜಿಕ ವ್ಯವಸ್ಥೆಗಳು ಮತ್ತು ಸರಕಾರೀ ಕಾನೂನು ಮತ್ತು ಕಾಯಿದೆಗಳ ಪಾಲನೆಯ ಲೋಪದೋಷಗಳು ಈ ಸಮಸ್ಯೆಗಳನ್ನು ಪರಿಹರಿಸುವುದರಲ್ಲಿ ಅಸಮರ್ಥವಾಗಿವೆ.

ದೇಹಶಕ್ತಿಯಿಂದ ಪುರುಷನಿಗೆ ಸಮನಲ್ಲದ ದೈಹಿಕ ಅಸಮಾನತೆಯ ಸಲುವಾಗಿ ಮಹಿಳೆಯರು ಸಹಸ್ರಾರು ವರ್ಷಗಳಿಂದ ನಾನಾ ರೀತಿಯ ಶೋಷಣೆಗಳಿಗೆ ತುತ್ತಾಗಿದ್ದಾರೆ. ಸಬಲರು ದುರ್ಬಲರನ್ನು ಹಿಂಸಿಸುವುದು ಎಲ್ಲ ಪ್ರಾಣಿವರ್ಗದಲ್ಲೂ ಕಾಣಸಿಗುತ್ತವೆ. ಇದು ಕೇವಲ ಒಂದು ಪ್ರಾಂತ್ಯದ ಅಥವಾ ದೇಶದ ಮಹಿಳೆಯರ ಸಮಸ್ಯೆಯಲ್ಲ. ಇದೊಂದು ಜಾಗತಿಕ ಸಮಸ್ಯೆ. ಆದರೆ ದೈಹಿಕ ಅಸಮಾನತೆಯೊಂದೇ ಮಹಿಳೆಯರ ಮುಖ್ಯ ಸಮಸ್ಯೆಯಲ್ಲ. ಅದರೊಡನೆ ಅನೇಕ ಸ್ಥಳೀಯ ಕಾರಣಗಳೂ ಸೇರಿವೆ. ಉದಾಹರಣೆಗೆ ಆರ್ಥಿಕ, ಮತೀಯ, ಸಾಮಾಜಿಕ ವ್ಯವಸ್ಥೆ, ವೈವಾಹಿಕ–ಧಾರ್ಮಿಕ, ಸರಕಾರದ ವ್ಯವಸ್ಥೆ ಮತ್ತು ಕಾನೂನು, ಕಾಯಿದೆ ಪರಿಪಾಲನೆಯ ಅಸಮರ್ಥತೆ, ಇತ್ಯಾದಿಗಳು.

ಸ್ತ್ರೀಯರ ಮತ್ತು ಪುರುಷರ ಅಸಮಾನತೆಯು ಎಲ್ಲೆಡೆ ಇದೆ ಎನ್ನುವುದನ್ನು ಒಪ್ಪಲೇಬೇಕು. ಹಾಗೆಂದ ಮಾತ್ರಕ್ಕೆ ಕೇವಲ ಪುರುಷರು ಸಾಮೂಹಿಕವಾಗಿ ಉದ್ದೇಶಪೂರಿತವಾಗಿ ಮಹಿಳೆಯರೊಡನೆ ಎಲ್ಲ ದೇಶಗಳಲ್ಲೂ ದೌರ್ಜನ್ಯ ಮಾಡುತ್ತಿದ್ದಾರೆ ಮತ್ತು ಅವರೇ ಸ್ತ್ರೀಯರ ಅಸಮಾನತೆಗೆ ಕಾರಣರು ಎಂದು ಭಾವಿಸಬೇಕಿಲ್ಲ.

ಎಲ್ಲೆಲ್ಲೂ ಅಸಮಾನತೆ ಇರುವುದು ನಿಜವಾದರೂ ಈ ಅಸಮಾನತೆಯು ಎಲ್ಲ ಕಡೆ ಒಂದೇ ರೀತಿಯಾಗಿಲ್ಲ. ಅಮೆರಿಕದಲ್ಲಿ ಹೆಚ್ಚಿಲ್ಲವೆನಿಸಿದರೆ ಪಾಕಿಸ್ತಾನ, ಭಾರತದ ಕೆಲ ಪ್ರಾಂತ್ಯಗಳಲ್ಲಿ ಅಥವಾ ಸೌದಿ ಅರೇಬಿಯಾದಲ್ಲಿ ಹೆಚ್ಚಾಗಿದೆ ಎಂದೆನಿಸಬಹುದು. ಇದಕ್ಕೆ ಮುಖ್ಯ ಕಾರಣಗಳು ಹಲವಾರು. ಅವುಗಳನ್ನು ಗಮನಿಸೋಣ.

**ಸಾಮಾಜಿಕ–ಧಾರ್ಮಿಕ ವ್ಯವಸ್ಥೆ**

ಶತ–ಶತಮಾನಗಳ ಮಹಿಳೆಯರ ಕಠಿಣ ಸಮಸ್ಯೆಗಳು ಧರ್ಮದ ಹೆಸರಿನಲ್ಲಿ ಶಾಸ್ತ್ರ ಮತ್ತು ಸಂಪ್ರದಾಯಗಳ ಕಟ್ಟಳೆಗಳಿಂದ ಉತ್ಪನ್ನವಾಯಿತೆಂದರೆ ಅತಿಶಯೋಕ್ತಿಯಲ್ಲ. ಪ್ರಾಯಶಃ ಎಲ್ಲ ಧರ್ಮಗಳಲ್ಲೂ ಪಾವಿತ್ರ್ಯತೆಯ ಸೋಗಿನಲ್ಲಿ ಮಹಿಳೆಯರ ಶೋಷಣೆ ನಿರಂತರವಾಗಿ ನಡೆಯುತ್ತಿದೆ. ಮೇಲ್ನೋಟಕ್ಕೆ ಮಹಿಳೆಗೆ ಉನ್ನತ ಸ್ಥಾನ–ಮಾನಗಳನ್ನು ಧರ್ಮಗ್ರಂಥಗಳಲ್ಲಿ ತೋರಿಸಿದರೂ ಆಚರಣೆಯಲ್ಲಿ ಕಂಡು ಬರುವುದಿಲ್ಲ. ಹಿಂದೂ ಧರ್ಮದ ಬ್ರಾಹ್ಮಣವರ್ಗದಲ್ಲಿ ಮುತ್ತೈದೆ, ವಿಧವೆ, ಮತ್ತು ಒಟ್ಟಾರೆ ಸ್ತ್ರೀಯರಿಗೆ ವಿಶೇಷವಾದ

ನಿಯಮಗಳನ್ನು ಹೇರಿ ಅವರ ಸ್ವಾತಂತ್ರ್ಯವನ್ನು ಮೊಟಕುಗೊಳಿಸಿ ವಿದ್ಯೆ, ನೌಕರಿ, ಆಡಳಿತ, ಇತ್ಯಾದಿಗಳಿಂದ ಸಾವಿರಾರು ವರ್ಷಗಳು ದೂರವಿಡಲಾಗಿತ್ತು. ಮತ್ತೆ ವಿದ್ಯಾಹೀನರಾದ ಕೆಳವರ್ಗಗಳಲ್ಲಂತೂ ಮಹಿಳೆಯರಿಗೆ ಯಾವ ರೀತಿಯ ರಕ್ಷಣೆಗಳಿಲ್ಲದೆ ನಿರಂತರ ಶೋಷಣೆಗೆ ಗುರಿಯಾದರು. ಮುಸ್ಲಿಂ ಸಮುದಾಯದಲ್ಲಿ ಹೆಣ್ಣು ಕೇವಲ ಒಂದು ಭೋಗದ ವಸ್ತುವಾಗಿ ಮತ್ತು ಮಕ್ಕಳನ್ನು ಹೆರುವ ಯಂತ್ರವಾಗಿ ಬುರ್ಖಾದ ಮರೆಯಲ್ಲಿ ಅದೆಷ್ಟು ನೋವನ್ನು ಸಹಿಸಿದ್ದಾಳೋ ಅವಳಿಗೇ ಗೊತ್ತು. ಇನ್ನು ಕ್ರಿಶ್ಚಿಯನ್ ಸಮುದಾಯದಲ್ಲಿ ನನ್‌ಗಳ ಶೋಷಣೆಯ ಬಗ್ಗೆ ಘೋರ ಕಥೆಗಳನ್ನು ಕೇಳಿದ್ದೇವೆ. ಧರ್ಮಾಧಿಕಾರಿಗಳ ಸಂರಕ್ಷಣೆಯ ನೆರಳಿನಲ್ಲಿ ನತದೃಷ್ಟ ಮಹಿಳೆಯರ ಮೇಲೆ ಶತಮಾನಗಳಿಂದ ನಡೆಯುತ್ತಿರುವ ಅತ್ಯಾಚಾರಗಳಿಗೆ ಹೊರಗಿನಿಂದ ರಕ್ಷಣೆ ಕೊಡುವುದು ಇರಲಿ, ಸಾಂತ್ವನ ಕೊಡುವುದೂ ಸಾಧ್ಯವಿಲ್ಲ. ಹಾಗಾಗಿ ಜಾತಿ–ಮತ ವ್ಯವಸ್ಥೆಗಳಲ್ಲಿ ಸಿಲುಕಿರುವ ಜಗತ್ತಿನ ಬಹುಪಾಲು ಮಹಿಳೆಯರಿಗೆ ಅವರ ಧಾರ್ಮಿಕ ವ್ಯವಸ್ಥೆಗಳಲ್ಲಿ ಆಂತರಿಕ ಬದಲಾವಣೆಗಳಾದ ಹೊರತು ಇದಕ್ಕೆ ಶೀಘ್ರ ಪರಿಹಾರ ಕಾಣಬರುತ್ತಿಲ್ಲ.

**ವಿವಾಹ ಒಂದು ವರವೇ ಅಥವಾ ಶಾಪವೇ?**

'ವಿವಾಹ'ವೆನ್ನುವ ಸಂಸ್ಥೆಗೆ ಸಹಸ್ರಾರು ವರ್ಷಗಳ ಇತಿಹಾಸವಿದೆ. ವಿಶ್ವದ ಎಲ್ಲ ಸಂಸ್ಕೃತಿಗಳಲ್ಲೂ, ಎಲ್ಲ ಧರ್ಮ ಗ್ರಂಥಗಳಲ್ಲೂ ಮತ್ತು ಸಂವಿಧಾನಗಳಲ್ಲೂ ಇದರ ಪಾವಿತ್ರ್ಯತೆಯನ್ನು ಎತ್ತಿಹಿಡಿಯಲಾಗಿದೆ.

ಪ್ರಾಣಿ–ಸಾಮ್ರಾಜ್ಯದ ಆಹಾರದ ಸರಪಳಿಯ (top of animal kingdom's food chain) ಅಗ್ರದಲ್ಲಿರುವ ಮನುಷ್ಯವರ್ಗಕ್ಕೂ ಪ್ರಾಣಿಗಳಿಗೂ ಇರುವ ದೊಡ್ಡ ವ್ಯತ್ಯಾಸವೆಂದರೆ ಮನುಷ್ಯರು ತಮ್ಮ ದೈಹಿಕ ಆಮಿಷಗಳನ್ನು ನಿಯಂತ್ರಿಸಿಕೊಳ್ಳಲು ವಿವಾಹವೆನ್ನುವ ಬಂಧನದ ಮೂಲಕ ನೈತಿಕ ನಿಯಮಗಳನ್ನು ರೂಪಿಸಿಕೊಂಡಿರುವುದು. ವಂಶಾವಳಿಯ ಸೂಕ್ತ ಉತ್ತರಾಧಿಕಾರಿಗಳನ್ನು ಆರಿಸಲು ಮತ್ತು ಈ ಮೂಲಕ ವಿವಾಹ ಸಂಬಂಧಕ್ಕೆ ನೈತಿಕತೆಯನ್ನು ಕೊಡುವುದು ಇದರ ಉದ್ದೇಶ. ಸಂತಾನೋತ್ಪತ್ತಿಗೆ ವಿವಾಹದ ಅವಶ್ಯಕತೆಯಿಲ್ಲದಿದ್ದರೂ ಒಂದು ಆರೋಗ್ಯಕರ ಸಮಾಜಕ್ಕೆ ಇದರ ಅವಶ್ಯಕತೆ ಮುಖ್ಯವೆಂದು ಸಾಧಾರಣವಾಗಿ ವಿಶ್ವದ ಎಲ್ಲ ಸಂಸ್ಕೃತಿಗಳೂ ಭಾವಿಸಿ ವಿವಾಹ ಬಂಧನಕ್ಕೆ ಬೆಂಬಲವಾಗಿ ಧರ್ಮದ ಅಂಗೀಕಾರ ಮುದ್ರೆಯನ್ನು ಒತ್ತಲು ಹಲವಾರು ನಿಯಮಗಳನ್ನು ಹಾಕಿಕೊಂಡವು. ಸಾಧಾರಣವಾಗಿ ಅನೇಕ ನಿಯಮಗಳು ಸ್ತ್ರೀಯರಿಗೆ ಕಷ್ಟಕರವಾಗಿದ್ದವು. ಒಂದು ಕ್ರಮವಾದ ಸಮಾಜದ ವ್ಯವಸ್ಥೆಗೆ ಮದುವೆ ಮತ್ತು ಕುಟುಂಬಗಳು ಮೂಲಾಧಾರವಾಗಿವೆ. ವಿವಾಹವೆನ್ನುವ ಒಂದು ಸಾಮಾಜಿಕ ಬಂಧನ ಅನೇಕ ಸಮಸ್ಯೆಗಳನ್ನು ತಡೆಯಲು ಸಮರ್ಥವಾಗಿದೆ.

ಹಾಗೆಂದ ಮಾತ್ರಕ್ಕೆ ವಿವಾಹವು ಎಲ್ಲ ಸಮಸ್ಯೆಗಳಿಗೆ ಪರಿಹಾರವೆಂದು ಭಾವಿಸಲಾಗದು. ಅದಕ್ಕೆ ವ್ಯತಿರಿಕ್ತವಾಗಿ ವಿವಾಹದಿಂದ ಸಮಸ್ಯೆಗಳು ಉತ್ಪನ್ನವಾಗಬಹುದು. ಮಹಿಳೆಯರ ಹೆಚ್ಚಿನ ಸಮಸ್ಯೆಗಳು ವಿವಾಹದಿಂದ ಉತ್ಪನ್ನವಾಗಿದ್ದರೆ ಅದು ಆಶ್ಚರ್ಯವಲ್ಲ. ವಿವಾಹ

ಬಂಧನ ತಪ್ಪೆಂದು ನನ್ನ ವಾದವಲ್ಲ. 'ವಿವಾಹ' ಪ್ರಕ್ರಿಯೆಯ ಆಶಯ ಮತ್ತು ನಿರೀಕ್ಷೆ ಸಮಾಜದ ಆರೋಗ್ಯಕ್ಕೆ ಅತ್ಯವಶ್ಯ. ಆದರೆ ವೈವಾಹಿಕ ಸಂಬಂಧಗಳನ್ನು ಜಾರಿಗೊಳಿಸುವ ರೀತಿಗಳಲ್ಲಿ ಹಲವಾರು ದೋಷಗಳಿವೆ. ಅಪ್ರಾಪ್ತ ವಯಸ್ಸಿನಲ್ಲಿ ವಿವಾಹ, ಮಾನಸಿಕ ಮತ್ತು ದೈಹಿಕ ಅಸಾಮರಸ್ಯವಿರುವ ವಧು-ವರರ ಬಲವಂತವಿವಾಹ, ವೈವಾಹಿಕ ಬಂಧನಕ್ಕೆ ಸಿಲುಕಿದ ನಂತರ ಸಮಾಜದ ಹೆದರಿಕೆಯಿಂದ ಹೊರಬರಲಾರದೆ ಜೀವನಪರ್ಯಂತ ದುಃಖಿಸುವುದು, ಬೇರೇ ಕಾರಣಗಳಿಂದ ವಿಫಲವಾದ ವೈವಾಹಿಕ ಜೀವನ, ಇತ್ಯಾದಿಗಳು ವಿವಾಹವೆನ್ನುವ ಪುರಾತನ ಸಂಸ್ಥೆಗೆ ನಿರಂತರ ಸವಾಲಾಗಿವೆ. ಈ ಸಮಸ್ಯೆ ಕೇವಲ ಮಹಿಳೆಯರಿಗೇ ಸೀಮಿತವಾಗಿಲ್ಲ. ಬೇಕಾದಷ್ಟು ಗಂಡಸರಿಗೂ ಸಹ ಸಮಸ್ಯೆಯಾಗಿದೆ. ವಿವಿಧ ಧರ್ಮಗಳು ಈ ಸಮಸ್ಯೆಗಳನ್ನು ಎದುರಿಸುವಲ್ಲಿ ವಿಫಲವಾಗಿವೆ. ಆದರೆ ಪ್ರಜಾಪ್ರಭುತ್ವ ಮತ್ತು ಸಂವಿಧಾನಗಳ ರಕ್ಷಣೆಯಿಂದ ವಿವಾಹ ಬಂಧನದ ಹಾನಿಗಳಿಂದ ಸಂರಕ್ಷಿಸಲಿಕ್ಕೆ ಈಗ ಹಲವಾರು ಸಾಧನಗಳಿವೆ. ಉದಾಹರಣೆಗೆ, counselling, separation, divorce, education, job/career, legal course, abortion, etc.ಗಳಿಂದ ಪರಿಹಾರವನ್ನು ಕಂಡುಕೊಳ್ಳಬಹುದು. ಇತ್ತೀಚೆಗೆ ದೊರಕಿರುವ ಅಂಕಿ-ಅಂಶಗಳಿಂದ ನಮಗೆ ತಿಳಿಯುವ ಸಂಗತಿ ಏನೆಂದರೆ ಈಗಿನ ಯುವ ಜನಾಂಗಕ್ಕೆ ವಿವಾಹದಲ್ಲಿ ವಿಶ್ವಾಸ-ನಂಬಿಕೆಗಳು ಕಡಿಮೆಯಾಗುತ್ತಿವೆ ಮತ್ತು living-in-togetherನಂತಹಾ ಬದ್ಧತೆಯಿಲ್ಲದ (lack of commitment) ಸಂಬಂಧಗಳು ತಲೆಯೆತ್ತಿವೆ. ವೈವಾಹಿಕ ಬಂಧನವೇ ಶ್ರೇಷ್ಠ ಎನ್ನುವ ವಾದವನ್ನು ಕೇವಲ ಧಾರ್ಮಿಕ ಕಾರಣಗಳಿಂದ ಒಪ್ಪಿಕೊಳ್ಳಬೇಕಾಗಿಲ್ಲ. ಕಾಲ ಕ್ರಮೇಣ ಇದರ ಲೋಪ-ದೋಷಗಳು ಸರಿಗೊಳ್ಳುತ್ತವೆ ಎನ್ನುವುದು ನನ್ನ ನಂಬಿಕೆ.

## ರಾಜಕೀಯ ಮತ್ತು ಸರಕಾರೀ ವ್ಯವಸ್ಥೆ

ಸಹಸ್ರಾರು ವರ್ಷಗಳ ಪುರುಷಪ್ರಧಾನ ರಾಜವಂಶಗಳ ಆಳ್ವಿಕೆಯು ಬಹುಪಾಲು ಮಹಿಳೆಯರಿಗೆ ಮತ್ತು ಅವರ ಹಕ್ಕುಗಳಿಗೆ ಸಹಾಯಕವಾಗಿರಲಿಲ್ಲ, ದುರದೃಷ್ಟವಶಾತ್ ಅಲ್ಲಲ್ಲಿ ಕಾಣಬರುವ ಕೆಲವಾರು ರಾಣಿಯರ ಅಥವಾ ಸಾಮ್ರಾಜ್ಞಿಗಳ ಆಡಳಿತದಲ್ಲೂ ಸಹ ಮಹಿಳೆಯರಿಗೆ ಯಾವ ರೀತಿಯಲ್ಲೂ ಅನುಕೂಲವಾಗಿಸಿದ ಉದಾಹರಣೆಗಳಿಲ್ಲ.

ಪ್ರಜಾಪ್ರಭುತ್ವದ ವ್ಯವಸ್ಥೆ ಬಂದ ನಂತರ ಹಲವಾರು ದೇಶಗಳಲ್ಲಿ ಸಂವಿಧಾನದ ರಕ್ಷಣೆ ಮತ್ತು ಸಂಬಂಧಿಸಿದ ಕಾನೂನುಗಳ ಮೂಲಕ ಸಮಾನತೆಯನ್ನು ಸಾಧಿಸುತ್ತಿರುವ ಉದಾಹರಣೆಗಳು ಕಾಣಸಿಗುತ್ತವೆ. ಪ್ರಜಾಪ್ರಭುತ್ವ ವ್ಯವಸ್ಥೆಯೊಂದೇ ಇದಕ್ಕೆ ಸೂಕ್ತ ಮದ್ದು ಎಂದು ಹೇಳಲಾಗದು. ಏಕೆಂದರೆ ಈ ವ್ಯವಸ್ಥೆಯಲ್ಲೂ ಕೂಡ ಸಮಾನತೆಯನ್ನು ಸಂವಿಧಾನ ಮತ್ತು ಕಾನೂನುಗಳ ಮೂಲಕ ಸಾಧಿಸಲು ಮುಂದುವರಿದ ದೇಶಗಳಲ್ಲಿ ಹಲವಾರು ವರ್ಷಗಳು ಬೇಕಾಯಿತು ಎಂದು ನೆನಪಿನಲ್ಲಿಡಬೇಕು.

ನಮಗೆ ಸಿಗುವ ಅಂಶಗಳನ್ನು ಗಮನಿಸಿದಲ್ಲಿ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಸೂಕ್ತ ಕಾನೂನುಗಳ ಪರಿಪಾಲನೆಯ ಮೂಲಕ ಸ್ತ್ರೀ-ಪುರುಷರ ಸಮಾನತೆಯನ್ನು ಸಾಧಿಸಲು

ಸಾಧ್ಯ ಎನ್ನುವುದು. ಆದರೆ ಒಂದು ಅಂಶವನ್ನು ನಾವೆಲ್ಲರೂ ನೆನಪಿಟ್ಟುಕೊಳ್ಳಬೇಕು. ಹೆಣ್ಣಿನ ಸಮಸ್ಯೆಗಳು ಪರಿಹಾರವಾಗಬೇಕಾದರೆ ಮಹಿಳೆಯರು ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಉಪಯೋಗಿಸಿಕೊಳ್ಳಬೇಕು. ಉದಾಹರಣೆಗೆ ಮತ ಚಲಾಯಿಸುವುದು, ಅಧಿಕಾರವೂ ಸೇರಿದಂತೆ ಎಲ್ಲ ಸರಕಾರೀ ಅಂಗಗಳಲ್ಲೂ ಭಾಗವಹಿಸಬೇಕು – ನ್ಯಾಯಾಂಗ, ಶಾಸಕಾಂಗ, ಕಾರ್ಯಾಂಗ, ಉದ್ಯಮಗಳು ಮತ್ತು ನಾನಾ ರೀತಿಯ ವೃತ್ತಿಗಳಲ್ಲಿ. ಅಮೆರಿಕದಲ್ಲಿ ಸ್ತ್ರೀಸಮಾನತೆಯಲ್ಲಿನ ಪ್ರಗತಿಗೆ ಕಾರಣ ಇಲ್ಲಿನ ಮಹಿಳೆಯರು ಎಲ್ಲ ಕ್ಷೇತ್ರಗಳಲ್ಲೂ ಭಾಗವಹಿಸುತ್ತಿರುವುದು. Abortion, Gun controlನಂತಹ ವಿಧಾಯಕಗಳು ಬದಲಾಗಬೇಕಾದರೆ ಸ್ತ್ರೀಯರ ಒಗ್ಗಟ್ಟು ಅತ್ಯವಶ್ಯ. ಅತ್ಯಂತ ಮುಂದುವರಿದ ದೇಶವೆಂದು ಪರಿಗಣಿಸಿರುವ ಅಮೆರಿಕದಲ್ಲೂ ಕೂಡ ಅಧ್ಯಕ್ಷ ಪದವಿಯನ್ನು ಇನ್ನೂ ಮಹಿಳೆಯು ಸಾಧಿಸಿಲ್ಲವೆನ್ನುವುದನ್ನು ಗಮನಿಸಬೇಕು.

ಮಹಿಳಾ ನಾಯಕರೂ ಸಹ ಅವಕಾಶವಿದ್ದಾಗ ದುರ್ಬಲ ಮಹಿಳೆಯರ ಉದ್ಧಾರಕ್ಕಾಗಿ ಒಳ್ಳೆಯ ಕೆಲಸಗಳನ್ನು ಮಾಡಿದ ದಾಖಲೆಗಳಿಲ್ಲ. ಹಿಂದಿನ ಅನೇಕ ಸಾಮ್ರಾಜ್ಯಗಳಲ್ಲಿ – ಈಜಿಪ್ಟಿನ ಹಟ್-ಸೆಪ್-ಸಟ್, ಕ್ಲಿಯೋಪಾತ್ರ, ಇಂಗ್ಲೆಂಡಿನ ರಾಣಿಯರಾದ ಮೇರಿ, ಎಲಿಝಬೆತ್, ವಿಕ್ಟೋರಿಯಾ, ರಷ್ಯಾ, ಚೀನಾ, ಮತ್ತಿತರ ದೇಶಗಳಲ್ಲೂ ಅಲ್ಲಲ್ಲಿ ಪ್ರಬಲ ರಾಣಿಯರಿದ್ದುದನ್ನು ಗಮನಿಸಬಹುದು. ಆದರೆ ಅವರು ತಮ್ಮ ಆಳ್ವಿಕೆಯ ಕಡೆಗೆ ಗಮನ ಹರಿಸಿದರೇ ಹೊರತು ಸ್ತ್ರೀ ಸಮಾನತೆಯ ಕುರಿತಾಗಿ ಯಾವ ಸುಧಾರಣೆಗಳನ್ನೂ ಮಾಡಿದ ಉದಾಹರಣೆಗಳಿಲ್ಲ.

ಕಳೆದ ಶತಮಾನದ ಹಲವಾರು ದೇಶಗಳ ಮಹಿಳಾ ನಾಯಕರಾದ ಇಂದಿರಾಗಾಂಧಿ, ಸಿರಿಮಾವೋ ಬಂಡಾರನಾಯಿಕೆ, ಗೋಲ್ಡಾಮೀರ್, ಮಾರ್ಗರೆಟ್ ಥ್ಯಾಚರ್, ಅಕ್ವಿನೋ, ಬೆನಜಿರ್ ಭುಟ್ಟೋ, ಖಲಿದಾ ಜಿಯಾ, ಷೇಕ್ ಹಸೀನಾ, ಏಂಜಲಾ ಮರ್ಕಲ್, ಥೆರೆಸಾ ಮೇ, ಮ್ಯಾಗ್ಡಲೀನಾ ಆಂಡರ್ಸನ್, ಇತ್ಯಾದಿಗಳು ತಮ್ಮ ಅಧಿಕಾರಾವಧಿಯಲ್ಲಿ ತಮ್ಮ ತಮ್ಮ ಮತ ಬ್ಯಾಂಕುಗಳನ್ನು ಮೆಚ್ಚಿಸಲು ಜನಪ್ರಿಯ ಯೋಜನೆಗಳಿಗೆ ಗಮನಹರಿಸಿದರೇ ಹೊರತು ಸ್ತ್ರೀ ಸಮಸ್ಯೆಗಳಿಗೆ, ಸಮಾನತೆಗಾಗಿ ಹೋರಾಡಿದ ಉದಾಹರಣೆಗಳು ತುಂಬಾ ಕಡಿಮೆ. ಸ್ತ್ರೀಯರ ಸಮಸ್ಯೆಗಳಿಗೆ ಸ್ತ್ರೀ ನಾಯಕಿಯರೇ ಸ್ಪಂದಿಸದಿದ್ದಲ್ಲಿ ಕೇವಲ ಪುರುಷ ಪ್ರಧಾನ ಸಮಾಜದಿಂದ ಅಸಮಾನತೆ ಇದೆಯೆಂದು ಜರಿಯುವುದು ಅಸಮಂಜಸವಲ್ಲವೆ?

**ಬದಲಾವಣೆ, ತಂತ್ರಜ್ಞಾನ, ಜಾಗತೀಕರಣ, ಸಮೂಹ ಸಂವಹನ, ಸ್ತ್ರೀಶಕ್ತಿ, ಇತ್ಯಾದಿ**

ಕಳೆದ 5–6 ದಶಕಗಳಲ್ಲಾಗಿರುವ ತಂತ್ರಜ್ಞಾನದ ಪ್ರಗತಿಯಿಂದ ಉಂಟಾದ ಬದಲಾವಣೆಗಳು ವಿಶ್ವ ಸಮಾಜದ ಸರ್ವತೋಮುಖ ಪ್ರಗತಿಗೆ ಕಾರಣವಾಗಿದೆ. ವಿಶ್ವದಲ್ಲಾಗುತ್ತಿರುವ ಈ ಬದಲಾವಣೆಗಳು ಖಂಡಿತಾ ಮಹಿಳೆಯರಿಗೆ ಅನುಕೂಲಕರವಾಗಿವೆ. ಇಂದಿನ ಸ್ತ್ರೀ ಜಗತ್ತಿನ ಯಾವ ಭಾಗದಲ್ಲೇ ಇದ್ದರೂ ಕೈಯಲ್ಲಿ ಒಂದು ಸ್ಮಾರ್ಟ್ ಫೋನ್ ಇದ್ದರೆ ಅವಳ ಶಕ್ತಿ ಅಪರಿಮಿತ! ಕೆಲವೇ ಕ್ಷಣದಲ್ಲಿ ಸಮೂಹ ಸಂವಹನ

ಶಕ್ತಿಯ ಮೂಲಕ ಲಕ್ಷಾಂತರ ಜನರನ್ನು ತಲುಪಬಹುದು. ಹಾಗಾಗಿ ಅವಳು ಒಬ್ಬ ದುರದೃಷ್ಟಕರ ಏಕಾಂಗಿ ಅಲ್ಲ. ಇದೊಂದೇ ಅಂಶ ಅವಳ ಮಾನಸಿಕ ಶಕ್ತಿಯನ್ನು ಮತ್ತು ಆತ್ಮವಿಶ್ವಾಸವನ್ನು ಹೆಚ್ಚಿಸಬಲ್ಲದು. ಈ ಶಕ್ತಿಯನ್ನು ಸರಿಯಾಗಿ ಉಪಯೋಗಿಸಿಕೊಂಡಲ್ಲಿ ಮೇಲಿನ ಎರಡೂ ಬಾಹ್ಯ ವ್ಯವಸ್ಥೆಗಳ ಬದಲಾವಣೆ ಸಾಧ್ಯ.

**2. ಇತರ ಸ್ತ್ರೀ ಸಂಬಂಧಿತ ಸಮಸ್ಯೆಗಳು**

ಮೇಲ್ನೋಟಕ್ಕೆ ಕಾಣಬಹುದಾದ ಒಂದು ಸ್ತ್ರೀಯ ಲಕ್ಷಣಗಳು ಅವಳ ಕೆಲವು ಗುಣಗಳನ್ನು ಸೂಚಿಸಬಹುದು. ಉದಾಹರಣೆಗೆ ಸೌಜನ್ಯ, ಸೌಮ್ಯತೆ, ಸಹಾನುಭೂತಿ, ನಮ್ರತೆ, ಸೂಕ್ಷ್ಮತೆ, ಇತ್ಯಾದಿ ಗುಣಗಳು ಅವಳ ಸೂಕ್ಷ್ಮ ಸಂವೇದನೆಗಳಿಗೆ ಅನುಸಾರವಾಗಿ ಇರಬಹುದು. ಗಂಡು ಮತ್ತು ಹೆಣ್ಣು ಇಬ್ಬರಲ್ಲಿಯೂ ಕೆಲವು ಗುಣಗಳು ಹೆಚ್ಚಾಗಿ ಅಥವಾ ಕಡಿಮೆಯಾಗಿ ಇರಬಹುದು. ಅವುಗಳನ್ನು ಗಮನಿಸಿ ಅದಕ್ಕನುಸಾರವಾಗಿ ಅವರೊಡನೆ ಸಂಬಂಧದಲ್ಲಿರುವುದು ಇಬ್ಬರಿಗೂ ಶ್ರೇಯಸ್ಕರ.

ಒಬ್ಬ ಗಂಡಸಾಗಿ ನನಗೆ ಮಹಿಳೆಯರ ಸಮಸ್ಯೆ ಮತ್ತು ಸಂಕಟಗಳನ್ನೆಲ್ಲಾ ವಿವರಿಸಲು ಅಥವಾ ಪಟ್ಟಿಮಾಡಲು ಸಾಧ್ಯವಿಲ್ಲ. ನನ್ನ ಅಂದಾಜು ಇದು ಅವರ ದೈಹಿಕ ಮತ್ತು ವೈಯಕ್ತಿಕ ಮಾನಸಿಕ ಸ್ಥಿತಿಗಳಿಗೆ ಸಂಬಂಧಪಟ್ಟಿರಬಹುದು. ಇದಕ್ಕೆ ಹೊರತಾದ ಕೆಲವು ಇನ್ನಿತರ ಸಮಸ್ಯೆಗಳು ವೈಯಕ್ತಿಕವಾದ ಅಥವಾ ಒಂದೊಂದು ಸಣ್ಣ ಸಮುದಾಯಗಳಿಗೆ ಸಂಬಂಧಪಟ್ಟಿರಬಹುದಾದದ್ದು. ಇವುಗಳ ಪರಿಹಾರ ಸ್ತ್ರೀಸಮಾನತೆಯನ್ನು ಸಾಧಿಸಿದ ಮೇಲೂ ಸಾಧ್ಯವಾಗದಿರಬಹುದು. ಏಕೆಂದರೆ ಈ ತೊಡಕುಗಳಿಗೆ ಸಾಮೂಹಿಕ ಸಮಾಧಾನಗಳಿಲ್ಲದಿರಬಹುದು. ಅವುಗಳ ಪರಿಹಾರ ಅದಕ್ಕೆ ಸಂಬಂಧಪಟ್ಟವರು ಸಹಾನುಭೂತಿಯಿಂದ ಸ್ಪಂದಿಸುವುದರಿಂದ ಲಭಿಸಬಹುದು.

ಆದರೆ ಎಲ್ಲಾ ಸಮಸ್ಯೆಗಳೂ ಕೇವಲ ಹೆಣ್ಣಿಗೆ ಮಾತ್ರ ಸಂಬಂಧಿಸಿದುದಲ್ಲವೆಂದೂ ಊಹಿಸಬಹುದು. ಗಂಡಸರಿಗೂ ಹಲ-ಕೆಲವು ವೈಯಕ್ತಿಕ ಸಮಸ್ಯೆಗಳಿರಬಹುದು. ಆದರೆ ಅದಕ್ಕೆ 'ಪುರುಷ ಸಂವೇದನೆಯ ಕೊರತೆ' ಒಂದು ಪ್ರಮುಖ ಕಾರಣ ಎಂದು ಎಲ್ಲೂ ಕೇಳಿದ ನೆನಪಿಲ್ಲ. ಇದಕ್ಕೆ ಉತ್ತರ ಬಹುಶಃ ಪುರುಷ-ಪ್ರಧಾನ ಸಮಾಜದಲ್ಲಿ ಗಂಡಸರ ಸಮಸ್ಯೆಗಳಿಗೆ ಅವರು ಪರಿಹಾರವನ್ನು ಕಂಡುಕೊಳ್ಳುತ್ತಾರೆಂದು ಸ್ತ್ರೀಯರು ಹೇಳಬಹುದಲ್ಲವೆ? ಮಾನವ ಜಾತಿಯ ಎರಡು ಮುಖಗಳಾದ ಸ್ತ್ರೀ-ಪುರುಷರಿಬ್ಬರಿಗೂ ಕುಂದು-ಕೊರತೆಗಳಿರಬೇಕಲ್ಲವೇ? ಇವರಿಬ್ಬರ ಸಾಮರ್ಥ್ಯ ಮತ್ತು ನ್ಯೂನತೆಗಳಲ್ಲಿ ಹಲ-ಕೆಲವು ವ್ಯತ್ಯಾಸಗಳಿರಬಹುದು. ಆದರೆ ಕೆಲ ಗುಣಗಳಾದರೂ ಇಬ್ಬರಲ್ಲೂ ಸಮನಾಗಿ ಇರಬೇಕಲ್ಲವೆ? ಅವು ಯಾವುವು? ಸಹನ ಶಕ್ತಿ, ಪ್ರತಿರೋಧನೆ, ಆತ್ಮಸಂಯಮ, ಇತ್ಯಾದಿಗಳು. ಇನ್ನು ನ್ಯೂನತೆಗಳಿಗೆ ಸಾಮೂಹಿಕ ಅಥವಾ ಹೊರಗಿನಿಂದ ದೊರಕಿಸಬಹುದಾದ ಸಾಮಾನ್ಯ ಪರಿಹಾರ ಸಾಧ್ಯವಿಲ್ಲ. ಇದನ್ನೆದುರಿಸಲು ಆಂತರಿಕ ತಯಾರಿ ಮತ್ತು ಆತ್ಮಶಕ್ತಿ ಅವಶ್ಯ.

ಕೆಲ ಸಮಸ್ಯೆಗಳು ಮಾನಸಿಕ ಹಿಂಸೆಯಾದ ಪಕ್ಷದಲ್ಲಿ ಮಹಿಳೆಯರು ಅದನ್ನೆದುರಿಸದೆ ಸುಮ್ಮನೆ ಅನುಭವಿಸುವುದರಲ್ಲಿ ಅರ್ಥವಿಲ್ಲ. ಅವರು ಅದರ ಪರಿಹಾರಕ್ಕಾಗಿ ಪ್ರಯತ್ನ ಪಡಬೇಕು. ಇದಕ್ಕೆ ಎರಡು ರೀತಿಯ ಸಮಾಧಾನಗಳನ್ನು ಸೂಚಿಸಬಹುದು. ಮೊದಲನೆಯದು ಇದರ ಪರಿಹಾರವನ್ನು ಸಮಸ್ಯೆಯನ್ನು ಅನುಭವಿಸುತ್ತಿರುವ ಮಹಿಳೆಯರೇ ತಮಗೆ ಲಭ್ಯವಿರುವ ಉಪಕರಣಗಳನ್ನು ಉಪಯೋಗಿಸಿಕೊಂಡು ಕಂಡುಕೊಳ್ಳಬೇಕು ಅಥವಾ ತಮ್ಮ ಸಮಸ್ಯೆಗಳನ್ನು ನಂಬಿಕೆ ಇರುವವರೊಂದಿಗೆ ಸಮಾಲೋಚಿಸಿ ಪರಿಹಾರವನ್ನು ಕಂಡುಕೊಳ್ಳಬೇಕು.

**ಉಪಸಂಹಾರ**

ಕಳೆದ ಶತಮಾನದ ಕನ್ನಡದ ಖ್ಯಾತ ಸಾಹಿತಿ ಪು.ತಿ.ನ. ಅವರು ತಮ್ಮ 'ಪ್ರಾಪ್ತಿ, ಪ್ರತಿಭಟನೆ ಮತ್ತು ಪ್ರಗತಿ' ಎನ್ನುವ ಒಂದು ವಿಚಾರಾತ್ಮಕ ಪ್ರಬಂಧದಲ್ಲಿ, ಮನುಷ್ಯನ ಅಥವಾ ಮನುಕುಲದ ಪ್ರಗತಿ ಹೇಗೆ ಪ್ರಾಪ್ತಿಗಳನ್ನು ಪ್ರತಿಭಟಿಸುವ ಮೂಲಕ ನಿರಂತರವಾಗಿ ನಡೆಯುತ್ತಿದೆಯೆಂದು ಸೂಕ್ತ ಉದಾಹರಣೆಗಳ ಸಹಿತ ವಿವರಿಸುತ್ತಾರೆ. ಪ್ರಾಪ್ತಿಯಲ್ಲಿಯೇ ತೃಪ್ತರಾದರೆ ಪ್ರಗತಿಯಿಲ್ಲ. ಪ್ರಾಪ್ತಿಯನ್ನು ಪ್ರತಿಭಟಿಸಿದಾಗಲೇ ಪ್ರಗತಿ ಸಾಧ್ಯ. ಈ ಪ್ರತಿಭಟನೆಯ ಫಲವೇ ಬದಲಾವಣೆ. ಬರಿಯ ಪ್ರತಿಭಟನೆಯಿಂದ ಭಾರೀ ಬದಲಾವಣೆ ಮತ್ತು ಪ್ರಗತಿಯಾಗುವುದಿಲ್ಲ. ಅದಕ್ಕೆ ಪೂರಕವಾಗಿ ಬದಲಾವಣೆಗಳು ಅನೇಕ ನಿಟ್ಟಿನಿಂದ ಆಗಬೇಕು ಮತ್ತು ಕಾಲವು ಪಕ್ವವಾಗಬೇಕು. ಜೊತೆಗೆ ಹೆಣ್ಣನ್ನು ಮನುಷ್ಯ ಮಾತ್ರಳನ್ನಾಗಿ, ಘನತೆಯಿಂದ ಕಾಣುವ ಶಿಕ್ಷಣ ಸ್ತ್ರೀ ಪುರುಷರಿಬ್ಬರಿಗೂ ದೊರಕಬೇಕು. ಆಗ ಮಹಿಳೆಯರ ಸಮಾನತೆಯ ಜೊತೆಗೆ ಅವರ ಸರ್ವತೋಮುಖ ಪ್ರಗತಿಯು ಸಾಧ್ಯವಾಗುತ್ತದೆ. ಜೊತೆಗೆ ಸ್ವಸ್ಥಸಮಾಜವೂ ನಿರ್ಮಾಣವಾಗುತ್ತದೆ.

ನಾನು ಹುಟ್ಟಿ ಬೆಳೆದ ಹಳ್ಳಿಯಲ್ಲಿ 60ರ ದಶಕದಲ್ಲಿ ಕೇಶವನ್ನು ಸಣ್ಣ ವಯಸ್ಸಿನಲ್ಲೇ ತೆಗೆಸಿಕೊಂಡ ಅನೇಕ ವಿಧವಾ ಮಡಿ ಹೆಂಗಸರು ಮನೆಮನೆಯಲ್ಲೂ ಇದ್ದರು. ಈಗ 50 ವರ್ಷಗಳ ನಂತರ ನೋಡಿದರೆ, ಭಾರತದಲ್ಲಿ ಹುಟ್ಟಿ-ಬೆಳೆದು-ಓದಿದ ಹುಡುಗಿಯರು ನ್ಯೂ ಯಾರ್ಕ್ ನಗರಕ್ಕೆ ಸ್ವತಂತ್ರವಾಗಿ ಬಂದು ಉದ್ಯೋಗಮಾಡುತ್ತಿರುವುದನ್ನು ನೋಡಿದಾಗ ಹರ್ಷವಾಗುತ್ತದೆ. ಸಹಸ್ರಾರು ವರ್ಷ ಅಬಲೆಯರನ್ನಾಗಿಸಿ, ಹಿಂದುಳಿಸಿ ಮೂಲೆಗೆ ಸೇರಿಸಲ್ಪಟ್ಟಿದ್ದ ಆ 'ಸ್ತ್ರೀ ಶಕ್ತಿ' ಯು ಈಗ ಸ್ವತಂತ್ರ ಮತ್ತು ಆತ್ಮವಿಶ್ವಾಸದಿಂದ ವಿಜೃಂಭಿಸುತ್ತ ಪುರುಷರಿಂದ ತಾವು ಯಾವ ರೀತಿಯಲ್ಲೂ ಕಡಿಮೆಯಿಲ್ಲವೆಂದು ಸಾಬೀತುಮಾಡಿದ್ದಾರೆ!

ಮಾನವ ಜನಾಂಗದ ನಾಗರಿಕತೆಯ ಹಿನ್ನೆಲೆಯೊಂದಿಗೆ ಈ ಲೇಖನವನ್ನು ಆರಂಭಿಸಿದ ಉದ್ದೇಶ, ಸ್ತ್ರೀ ಸಮಾನತೆಗೆ ಸಂಬಂಧಿಸಿದ ಸಮಸ್ಯೆಯ ನಿಜವಾದ ಪರಿಹಾರ ವಿಕಾಸದಿಂದ ಮಾತ್ರ ಸಾಧ್ಯ. ಈ ವಿಕಾಸವನ್ನು ಹಲ ಕೆಲವು ವ್ಯವಸ್ಥೆಗಳ ಬದಲಾವಣೆಗಳಿಂದ ಕ್ಷಿಪ್ರವಾಗಿ ತರಲಿಕ್ಕೆ ಸಾಧ್ಯ. ಆದರೆ ಶತಮಾನಗಳ ಇತಿಹಾಸವಿರುವ ಕೆಲವು ಅನಿಷ್ಟ ಪದ್ಧತಿಗಳನ್ನು ತೆಗೆದುಹಾಕುವುದು ಸುಲಭವಲ್ಲ.

ಸ್ತ್ರೀಸಮಾನತೆ ಖಂಡಿತಾ ಸಾಧ್ಯ. ಎಲ್ಲ ಕ್ಷೇತ್ರಗಳಲ್ಲೂ ಸಮಾನತೆ ಸಾಧಿಸಲು ಮಹಿಳೆಯರಿಂದ ಪರಿಕ್ರಮಿಸಬೇಕಾದ ದಾರಿ ಇನ್ನೂ ಅಪಾರವಾಗಿದೆ. ಆದರೆ ಮಾರ್ಗ ಮತ್ತು ಗುರಿ ಸ್ಪಷ್ಟವಾಗಿದೆ. ಈಗ ಬೇಕಾಗಿರುವುದು ಅವರಲ್ಲಿ ಒಗ್ಗಟ್ಟು ಮತ್ತು ಅಚಲವಾದ ಆತ್ಮವಿಶ್ವಾಸ.

ವಿದ್ಯಾಭ್ಯಾಸ, ಆರ್ಥಿಕ ಸ್ವಾತಂತ್ರ್ಯ, ಪ್ರಜಾಪ್ರಭುತ್ವ, ಸಂವಿಧಾನ ಮತ್ತು ಕಾನೂನಿನ ರಕ್ಷಣೆಗಳಿಂದ ಮಹಿಳೆಯರಿಗೆ ಸಮಾನ ಸ್ಥಾನಮಾನಗಳು ಖಂಡಿತಾ ದೊರೆಯುವುದರ ಜೊತೆಗೆ ಒಂದು ಆರೋಗ್ಯಕರ ಸಮಾಜ ನಿರ್ಮಾಣವಾಗುವುದರಲ್ಲಿ ಸಂದೇಹವಿಲ್ಲ.

ಪು.ತಿ.ನ. ಅವರು ಹೇಳಿದಂತೆ ಪ್ರಾಪ್ತಿಯಲ್ಲಿ ಸುಖವಿದೆ. ಆದರೆ, ಪ್ರತಿಭಟನೆಯಲ್ಲಿ ಪ್ರಗತಿಯಿದೆ! ಆಯ್ಕೆ ನಮ್ಮದು. ಸ್ತ್ರೀಯರು ಒಗ್ಗಟ್ಟಾಗಿ ತಮ್ಮ ಹಕ್ಕುಗಳಿಗಾಗಿ ಹೋರಾಡಬೇಕು ಮತ್ತು ಪುರುಷರು ಅದನ್ನು ವಿಶೇಷವೆಂದು ಪರಿಗಣಿಸದೆ ಸಹಜವೆಂದು ಮನಗಾಣಬೇಕು. ಬಹುಶಃ ಮುಂದಿನ ಕೆಲ ದಶಕಗಳಲ್ಲಿ ಯಾವುದೇ ಅನಗತ್ಯ ಯುದ್ಧಗಳು ಸಂಭವಿಸದಿದ್ದಲ್ಲಿ ಸ್ತ್ರೀ ಸಮಾನತೆಯು ಖಂಡಿತಾ ಸಾಧ್ಯವಾಗುತ್ತದೆ.

ವಿಶ್ವದ ಒಟ್ಟು ಜನಸಂಖ್ಯೆಯ ಅರ್ಧಭಾಗದಷ್ಟಿರುವ ಮಹಿಳೆಯರಿಗೆ ಪುರುಷರಷ್ಟೇ ಸ್ವಾತಂತ್ರ್ಯ, ಅಧಿಕಾರ, ಹಕ್ಕು ಕೊಡಬೇಕಾದ್ದು ಕರ್ತವ್ಯವಷ್ಟೇ ಅಲ್ಲ, ನ್ಯಾಯ ಕೂಡ. ಕೊನೆಯದಾಗಿ ಮಹಿಳೆಯರೂ ಕೂಡ ಪುರುಷರಿಗೆ ಸರಿಸಮಾನವಾಗಿ ನಿಂತು ಈ ಭೂಮಿಯ ನಾಗರಿಕ ಸಮಾಜದ ಉನ್ನತಿಗೆ ಕಾರಣರಾಗಲಿ ಎಂದು ಹಾರೈಸುವ ಆಶಯದೊಂದಿಗೆ ಈ ಲೇಖನವನ್ನು ಮುಗಿಸುತ್ತೇನೆ.



# ಮರಿಯಾಳ ಜೊತೆ ರಾತ್ರಿಯ ಪಯಣ

**ಶ್ರೀಧರ ಕುಲಕರ್ಣಿ**
Boston, Massachusetts

*

ಒಂದು ಕ್ಷಣ ಕಾರಿನ ರಿಯರ್ ವ್ಯೂ ಮಿರರ್‌ದತ್ತ ನೋಡಿದೆ. ಅದೇ ಕ್ಷಣ ಅವಳೂ ನನ್ನತ್ತ ನೋಡುತ್ತಾಳೆಂದುಕೊಂಡಿರಲಿಲ್ಲ. ತಕ್ಷಣ ಮುಖದ ಮೇಲೆ ಬಲವಂತದ ಮುಗುಳ್ನಗೆ ತಂದುಕೊಂಡೆ. ಮರುಕ್ಷಣವೇ ಕಿಟಕಿಯಿಂದಾಚೆ ನೋಡತೊಡಗಿದೆ. ಬಾಸ್ಟನ್ ಶಹರದ ಲೋಗನ್ ಏರ್‌ಪೋರ್ಟ್‌ನ ದೀಪಗಳೆಲ್ಲಾ ಹಿಂದೆ ಕಾಣತೊಡಗಿದವು. ಇನ್ನೇನು ಮುಂದೆ ಬಿಗ್ ಡಿಗ್ ಪ್ರಾಜೆಕ್ಟ್ ಮುಖಾಂತರ ಸಮುದ್ರದಲ್ಲಿ ಕೊರೆದ ಸುರಂಗದಲ್ಲಿ ಕಾರು ಸಾಗುವುದಿತ್ತು. ಕಾರಿಗಿಂತ ವೇಗವಾಗಿ ನನ್ನ ವಿಚಾರಗಳು ಓಡಲಾರಂಭಿಸಿದವು. ಮುಂದೆ ಕುಳಿತಿದ್ದ ಮರಿಯಾಳ ಬಗ್ಗೆ ಯೋಚಿಸತೊಡಗಿದೆ. ಸುಮಾರು 20–25 ವರ್ಷದವಳಿರಬಹುದು ಎಂದುಕೊಂಡೆ. ಹೂವಿನ ಚಿತ್ರಗಳಿದ್ದ ಟ್ಯಾಂಕ್ ಟಾಪ್ ಹಾಗೂ ಅರ್ಧ ತೊಡೆಯವರೆಗಿದ್ದ ಜೀನ್ಸ್ ಸ್ಕರ್ಟ್ ಹಾಕಿಕೊಂಡಿದ್ದ ಸುಂದರಿ. ಅವಳ ಮುಖದ ಫೀಚರ್ಸ್ ನೋಡಿದರೆ ಅವಳು ಮೂಲತಃ ದಕ್ಷಿಣ ಅಮೆರಿಕಾದವಳಿರಬಹುದು ಎನಿಸಿತು. ಮರಿಯಾ ರಾತ್ರಿ ಎರಡು ಗಂಟೆಗೆ ಏರ್‌ಪೋರ್ಟ್‌ನಿಂದ 25 ಮೈಲಿ ದೂರದಲ್ಲಿರುವ ನನ್ನ ಮನೆಗೆ ನನ್ನನ್ನು ಮುಟ್ಟಿಸಲು ಬಂದ ಊಬರ್ ಚಾಲಕಿ. ಮಿಲುವಾಕೀ ಶಹರದಿಂದ ರಾತ್ರಿ ಬಾಸ್ಟನ್ ಏರ್‌ಪೋರ್ಟ್‌ಗೆ ಬಂದ ತಕ್ಷಣ ಊಬರ್ ಆಪ್‌ನಲ್ಲಿ ಕಾರಿಗಾಗಿ ಹುಡುಕಿದೆ. ಮುಂದೆ ಹತ್ತು ಕ್ಷಣಗಳಲ್ಲಿ ಮರಿಯಾಳ ಕಾರಿನ ಬುಕಿಂಗ್ ಬಂದಿತ್ತು. ಅವಳ ಹೋಂಡಾ ಸಿವಿಕ್ ಕಾರು ಮತ್ತು ಅವಳ ವಿವರಗಳು ನನಗೆ ಮತ್ತು ನನ್ನ ವಿವರಗಳು ಅವಳಿಗೆ ಮುಟ್ಟಿದವು. ಸಿಟಿಯಿಂದ 25 ಮೈಲಿ ದೂರದ ಸಬರ್ಬ್ಸ್‌ನಲ್ಲಿರುವ ನನ್ನ ಮನೆಗೆ

ನನ್ನನ್ನು, ಒಂಟಿ ಗಂಡಸನ್ನು, ಒಬ್ಬಳೇ, ಅದೂ ರಾತ್ರಿ ಎರಡು ಗಂಟೆಗೆ ಕರೆದೊಯ್ಯಲು ಹೇಗೆ ತಾನೇ ಒಪ್ಪಿದಳು? ಹುಬ್ಬಳ್ಳಿಯಲ್ಲಿ ಹಾಗೂ ಬೆಂಗಳೂರಿನಲ್ಲಿ ರಾತ್ರಿ ಕರೆದರೆ ಬರಲು ಒಲ್ಲೆ ಎನ್ನುವ ರಿಕ್ಷಾ ಚಾಲಕರು ನೆನಪಾದರು. ಅವಳ ಅಪ್ಪ ಹಾಗೂ ಅಮ್ಮ ಅವಳಿಗೆ ರಾತ್ರಿ ಕೆಲಸದ ಮೇಲೆ ಹೋಗಬೇಡಾ, ಹೋದರೂ ಗಂಡಸು ಗ್ರಾಹಕರನ್ನು ಕರೆದೊಯ್ಯಲು ಒಪ್ಪಿಕೊಳ್ಳಬೇಡಾ, ಒಪ್ಪಿಕೊಂಡರೂ ನಗರದ ಪರಿಧಿಯ ಹೊರಗೆ, ನಿರ್ಜನ ಪ್ರದೇಶಗಳಿಗೆ ಮಾತ್ರ ಹೋಗಲೇಬೇಡಾ ಎಂದು ಹೇಳಿರಲಿಕ್ಕಿಲ್ಲವೇ? ಅಲ್ಲ, ಇವಳಿಗಾದರೂ ಈ ವಿಚಾರ ಬಂದಿರಲಿಕ್ಕಿಲ್ಲವೇ? ನನ್ನನ್ನು ಕರೆದುಕೊಂಡು ಹೊರಟ ಸ್ಥಳ ಸುರಕ್ಷಿತವೇ? ಊಬರ್ ಆಪ್‌ನಲ್ಲಿ ನನ್ನ ಬುಕಿಂಗ್ ಸ್ವೀಕರಿಸುವಾಗ ಅವಳಿಗೆ ಕೇವಲ ನನ್ನ ಹೆಸರು ಮಾತ್ರ ಗೊತ್ತಿತ್ತು. ನಾನು ನೋಡಲು ಹೇಗಿರುವೆ? ನನ್ನ ಸ್ವಭಾವ ಹೇಗಿರಬಹುದು? ನಾನು ಅವಳಿಗೆ ಏನಾದರೂ ಮಾಡಿದರೆ? ಇದೆಲ್ಲ ಅವಳ ತಲೆಯಲ್ಲಿ ಬರಲಿಲ್ಲವೇ? ಅಷ್ಟೊತ್ತಿಗೆ ಕಾರು ಸುರಂಗದ ಹೊರಬಂದಿತ್ತು. ಊರಿನ ರಸ್ತೆಬದಿಯ ದೀಪಗಳು ಉರಿಯುತ್ತಿದ್ದವು. ಮತ್ತೆ ಒಂದು ಸಾರಿ ಹೊರಳಿ ಕಾರಿನ ರಿಯರ್ ವ್ಯೂ ಮಿರರ್ ಕಡೆ ನೋಡಿದೆ. ಅವಳ ದೃಷ್ಟಿ ರಸ್ತೆಯ ಮೇಲಿತ್ತು. ನಾನು ಮತ್ತೆ ಕಿಟಕಿಯ ಹೊರಗೆ ನೋಡತೊಡಗಿದೆ. ಮಿಲುವಾಕೀಯಲ್ಲಿ ಸಿಕ್ಕಿದ್ದ ಕೇಟ್ ನೆನಪಾದಳು.

2019ರ ಜುಲೈ ತಿಂಗಳಿನಲ್ಲಿ ಮಿಲುವಾಕೀ ನಗರದಲ್ಲಿ ಒಂದು ತಂತ್ರಜ್ಞಾನ ಸಂಸ್ಥೆಯ ಐದು ದಿನಗಳ ಶೈಕ್ಷಣಿಕ ಕಾರ್ಯಕ್ರಮದ ವ್ಯವಸ್ಥೆ ಅಲ್ಲಿಯ ವಿಶ್ವವಿದ್ಯಾಲಯದಲ್ಲಿ ಆಯೋಜಿಸಲಾಗಿತ್ತು. ಇದು ವಿಶ್ವವಿದ್ಯಾಲಯಗಳಲ್ಲಿ ಕಲಿಸುವ ಪ್ರಾಧ್ಯಾಪಕರಿಗಾಗಿ ವಿಶೇಷವಾದ 'Train the Trainer' ತರಬೇತಿ ಕಾರ್ಯಕ್ರಮವಾಗಿತ್ತು. ನಾನು ಬಾಸ್ಟನ್ ಯುನಿವರ್ಸಿಟಿಯಲ್ಲಿ ಕಲಿಸುತ್ತಿರುವುದರಿಂದಾಗಿ ಈ ಹೆಚ್ಚಿನ ತರಬೇತಿಗೆಂದು ಹೊರಟು ನಿಂತೆ. ವಿಶ್ವವಿದ್ಯಾಲಯದ ಪ್ರಾಧ್ಯಾಪಕರಿಗೆ ಈ ಕಾರ್ಯಕ್ರಮ ಉಚಿತವಾಗಿತ್ತು. ಅದರ ಮೇಲೆ ಅದೇ ಮಿಲುವಾಕೀಯಲ್ಲಿ ನನ್ನ ಕಸಿನ್, ವಿನಾಯಕ ದೀಕ್ಷಿತ ಇರುತ್ತಿದ್ದುದರಿಂದ ವಸತಿ ಮತ್ತು ಊಟದ ಖರ್ಚೂ ಇರಲಿಲ್ಲ. ಆದರೆ ಹೋಗಿ ಬರುವ ವೆಚ್ಚ ನನ್ನದೇ ಆಗಿದ್ದರಿಂದ ಆದಷ್ಟು ಕಡಿಮೆ ದರದ ವಿಮಾನ ಯಾತ್ರೆಗೆ ಪ್ರಯತ್ನ ಮಾಡಿದೆ. ಜಾಸ್ತಿ ದುಡ್ಡೂ ಖರ್ಚಾಗಬಾರದು, ಹಾಗೆಯೇ ಎಲ್ಲಾ ತರಹದ ಅನುಕೂಲಗಳೂ ಬೇಕು, ಹೇಗೆ ಸಾಧ್ಯ? ಅಲ್ಲವೇ? ಆದರೂ ಮನುಷ್ಯ ಪ್ರಯತ್ನ, ಬಿಡಲು ಸಾಧ್ಯವೇ? ಕಡೆಗೆ ಸ್ವಲ್ಪ ಕಷ್ಟವಾದರೂ ಚಿಂತೆಯಿಲ್ಲ, ದುಡ್ಡು ಉಳಿಸುವುದು ಮುಖ್ಯ ಎಂಬ ನಿರ್ಣಯಕ್ಕೆ ಬಂದೆ. ಬೆಳಿಗ್ಗೆ 6 ಗಂಟೆಯ ವಿಮಾನದಲ್ಲಿ ಮಿಲುವಾಕೀ ಬದಲಾಗಿ ಶಿಕಾಗೋ ಮಿಡ್‌ವೇ ವಿಮಾನ ನಿಲ್ದಾಣಕ್ಕೆ ಹೋಗುವುದು ಎಂದು ನಿರ್ಧರಿಸಿದೆ. ಅದಕ್ಕಾಗಿ ಮನೆಯಿಂದ ಬೆಳಿಗ್ಗೆ 4 ಗಂಟೆಗೆ ಬಿಡಬೇಕಾಯಿತು. ಅಷ್ಟೇ ಅಲ್ಲ, ಬರುವಾಗ ಶಿಕಾಗೋದಿಂದ ರಾತ್ರಿ ಹತ್ತು ಗಂಟೆಯ ವಿಮಾನ, ಅದು ಬಾಸ್ಟನ್‌ಗೆ ಬರುವ ಹೊತ್ತಿಗೆ ರಾತ್ರಿ 2 ಗಂಟೆ. ನಾಲ್ಕು ದುಡ್ಡು ಉಳಿಸಲು ಪಡುವ ಶ್ರಮ ನಿಮಗೂ ಚಿರಪರಿಚಿತ ತಾನೇ?

ಕೇಟ್‌ಳ ಬಗ್ಗೆ ಹೇಳಬೇಕೆಂದುಕೊಂಡವನ ಮನಸ್ಸು ಮತ್ತೆಲ್ಲೋ ಸುತ್ತುತ್ತಿದೆ. ಇರಲಿ. ಮಿಲುವಾಕೀಯಲ್ಲಿ ಐದು ದಿನಗಳ ಶಿಬಿರದ ನಂತರ, ಕಡೆಯ ದಿನ, ಶುಕ್ರವಾರ, ವಿಶ್ವವಿದ್ಯಾಲಯದಿಂದ ನೇರವಾಗಿ ರೇಲ್ವೆ ನಿಲ್ದಾಣಕ್ಕೆ ಹೋಗಬೇಕಿತ್ತು. ಅಲ್ಲಿಂದ ರೈಲಿನಲ್ಲಿ ಶಿಕಾಗೋದ ಓಹೇರ್ ವಿಮಾನ ನಿಲ್ದಾಣಕ್ಕೆ ಹೋಗುವುದಿತ್ತು. ವಿಶ್ವವಿದ್ಯಾಲಯದಿಂದ ನಡೆಯಲಾರಂಭಿಸಿದೆ. ಅರ್ಧ ದಾರಿಯವರೆಗೂ ನಡೆದೆ. ಅಮೇರಿಕಾದ ಆ ಭಾಗದಲ್ಲಿ ಬೇಸಿಗೆ ಕಾಲ ಎಂದರೆ 25 ಡಿಗ್ರಿ ಸೆಂಟಿಗ್ರೇಡ್. ಅದಕ್ಕೆ ಪೂರಕವಾಗಿ ಲೇಕ್ ಮಿಷಿಗನ್‌ಗುಂಟ ಸುಂದರವಾದ ಇಳಿದಾರಿ. ಅದರ ಮೇಲೆ ನಡೆಯುವ ಸಂತಸವೇ ಬೇರೆ. ಆದರೂ, ಅರ್ಧದಾರಿಯ ಹೊತ್ತಿಗೆ ಅಂಗಿಯೆಲ್ಲಾ ತೋಯ್ದು ತೊಪ್ಪಡಿಯಾಗಿತ್ತು. ನಡೆದದ್ದು ಸಾಕೆಂದು ಊಬರ್ ಕರೆದೆ. ಮುಂದೆ ಮೂರು ನಿಮಿಷಗಳ ನಂತರ ತನ್ನ ಫಾರ್ಡ್ ಎಸ್ಕೇಪ್ ಕಾರಿನಲ್ಲಿ, ಕೇಟ್, ಸುಮಾರು ಐವತ್ತು ವರ್ಷದ ಬಿಳಿಯ ಹೆಂಗಸು, ನನ್ನ ಪಕ್ಕ ಬಂದು ನಿಂತಳು. ನಾನು ಕಾರಿನಲ್ಲಿ ಕುಳಿತ ತಕ್ಷಣವೇ ಅವಳ ಹರಟೆ ಶುರುವಾಯಿತು. ನನ್ನ ಜೊತೆ ಕೇಟ್ ತುಂಬಾ ಸಹಜವಾಗಿ ಮಾತನಾಡಲು ಆರಂಭಿಸಿದಳು. ನಾನು ಎಲ್ಲಿಗೆ ಹೊರಟಿರುವೆ, ಎಲ್ಲಿಯವನು, ಏತಕ್ಕೆ ಬಂದಿದ್ದೆ, ಏನು ಕೆಲಸ ಮಾಡುವೆ, ಇತ್ಯಾದಿ. ನನಗೋ ಊರಿನಲ್ಲಿರುವ ಹೇರ್ ಸಲೂನ್‌ನಲ್ಲಿ ಕುಳಿತಂತೆ ಅನಿಸತೊಡಗಿತು. ನಿಮಗೂ ಈ ಸನ್ನಿವೇಶ ಪರಿಚಿತ ತಾನೇ? ಹಜಾಮತಿಗೆಂದು ಸಲೂನಿಗೆ ಹೋದರೆ ಅಲ್ಲಿ ಕೆಲಸ ಮಾಡುವ ಹೆಂಗಸರು ಕೂದಲು ಕತ್ತರಿಸುತ್ತಾ ಹರಟೆ ಹೊಡೆಯುವ ಪರಿಯೇ ಬೇರೆ! ವೀಕೆಂಡಿನಲ್ಲಿ ಏನು ಪ್ಲಾನೂ? ಮನೆಯಲ್ಲಿ ಯಾರೆಲ್ಲ ಇರುವರು? ಮಕ್ಕಳು ಏನು ಕಲಿಯುತ್ತಿದ್ದಾರೆ? ಒಂದೇ, ಎರಡೇ? ಅಮೇರಿಕಾಕ್ಕೆ ಬಂದ ಹೊಸದರಲ್ಲಿ ಇದು ತುಂಬಾ ವಿಚಿತ್ರವೆನಿಸುತ್ತಿತ್ತು. 'ಎಷ್ಟ ಮಾತಾಡತೀಯ ತಾಯಿ, ಸುಮ್ಮನ ಕೂದಲಾ ಕಟ್ ಮಾಡಿ ಕಳಸು, ಇಷ್ಟ ವ್ಯಾಳ್ಯಾದಾಗ ಇನ್ನೂ ನಾಕ ಮಂದಿ ಹಜಾಮತಿ ಮಾಡಬಹುದು ನೀನು' ಎಂದು ಸ್ವಗತದಲ್ಲಿ ಹೇಳಿಕೊಳ್ಳುತ್ತಿದ್ದೆ. ಈಗ ಸಲೂನಿಗೆ ಹೋದಾಗ ಯಾರಾದರೂ ಮಾತನಾಡದೆ ಹಾಗೆಯೇ ಕೂದಲ ಕತ್ತರಿಸುತ್ತಿದ್ದರೆ ಏನಿವಳು ಇಷ್ಟೊಂದು ಒರಟು ಆಗಿದ್ದಾಳೆ, ಏನಾದರೂ ಆಗಿರಬಹುದೋ ಎಂದುಕೊಳ್ಳುವೆ. ರೋಮ್‌ನಲ್ಲಿ ರೋಮನ್ ಆಗಿಬಿಟ್ಟಿದ್ದೆ.

ಇರಲಿ, ಕೇಟ್ ವಿಷಯಕ್ಕೆ ಬರೋಣ. ನನ್ನ ಬಗ್ಗೆ ಎಲ್ಲ ಕೇಳಿ ತಿಳಿದುಕೊಂಡ ಮೇಲೆ ಅವಳು ತನ್ನ ಬಗ್ಗೆ ಹೇಳಲು ಶುರುಮಾಡಿದಳು. ತಾನು ಮಿನಿಯಾಪೊಲಿಸ್‌ನಲ್ಲಿ ಹುಟ್ಟಿ, ಬೆಳೆದಿದ್ದು, ನಂತರ ಶಿಕಾಗೋದಲ್ಲಿ ಕೆಲಸ ಮಾಡಿದ್ದು, ಇರುವ ಒಬ್ಬ ಮಗಳು ಡೆಟ್ರಾಯ್ಟ್‌ನಲ್ಲಿ ನರ್ಸ್ ಆಗಿರುವುದು, ಇತ್ಯಾದಿ. ನನಗೆ ಆಶ್ಚರ್ಯವಾಗಿದ್ದು ಯಾವಾಗ ಎಂದರೆ ಅವಳ ಕೆಲಸದ ಬಗ್ಗೆ ತಿಳಿದುಕೊಂಡಾಗ. ಕೇಟ್ 25 ವರ್ಷ ಒಂದು ಕಂಪನಿಯಲ್ಲಿ Interior Designer ಆಗಿ ಕೆಲಸ ಮಾಡಿದ್ದಳಂತೆ. ಈಗ ಕೆಲ ವರ್ಷಗಳಿಂದ ತನ್ನದೇ ಸ್ವಂತ ಪ್ರಾಕ್ಟಿಸ್ ಮಾಡುತ್ತಿದ್ದಾಳಂತೆ. ಅಂದು ಬೆಳಿಗ್ಗೆ ತನ್ನ ಕ್ಲೈಂಟ್‌ಗೋಸ್ಕರವಾಗಿ ಒಂದು ಸುಂದರ ಸೆಂಟರ್ ಟೇಬಲ್‌ಅನ್ನು ಶಿಕಾಗೋದಲ್ಲಿ ಹುಡುಕಿ ಅಲ್ಲಿಂದ ತನ್ನ ಗಾಡಿಯಲ್ಲಿ

ಹಾಕಿಕೊಂಡು ಬಂದಳಂತೆ. ತನ್ನ ವೃತ್ತಿಯಲ್ಲಿ ಬಹಳಷ್ಟು ಸುಂದರವಾದ ಭಾರತೀಯ ಕಲಾಕೃತಿಗಳನ್ನು ಬಳಸಿದ್ದಾಳೆಂದು ಹೇಳಿದಳು. ಕಡೆಗೆ ಅವಳು ಕೆಲಸದ ಮೇಲೆ ಹಾಗೂ ಸ್ವಂತದ ಪ್ರವಾಸದ ಮೇಲೆ ಭಾರತಕ್ಕೆ 2–3 ಸಾರಿ ಹೋಗಿ ಬಂದಿದ್ದನ್ನು ನೆನಪಿಸಿಕೊಂಡಳು. ಅದನ್ನೆಲ್ಲ ಕೇಳಿ ನಾನು ದಂಗಾಗಿಹೋದೆ. ಇಷ್ಟೆಲ್ಲಾ ಇರುವವಳು ಟ್ಯಾಕ್ಸಿ ಡ್ರೈವರ್ ಯಾಕಾದಳು ಎಂದು ತಲೆ ಕೆಡಿಸಿಕೊಂಡೆ. ಬಾಯಿ ಬಿಟ್ಟು ಕೇಳಲು ಧೈರ್ಯವಾಗಲಿಲ್ಲ. ಅವಳನ್ನು ನೋಡಿದರೆ ಹಣಕಾಸಿನ ಚಿಂತೆ ಇದ್ದಂತೆ ಕಾಣಲಿಲ್ಲ. ಸ್ವಂತ ಮನೆ, ಸ್ವಂತ ಉದ್ಯೋಗ, ಮಕ್ಕಳ ಜವಾಬ್ದಾರಿ ತೀರಿದೆ, ಹೀಗಿರುವಾಗ ಊಬರ್ ಏಕೆ ಎಂದು ವಿಚಾರ ಮಾಡುವುದೇ ನಮ್ಮ ಸಮಸ್ಯೆ. ಯಾಕಿರಬಾರದು ಎಂದು ನಾವು ಎಂದೂ ಅಂದುಕೊಳ್ಳುವುದಿಲ್ಲ. ಕಡೆಗೂ ಕೇಳಿಯೇಬಿಟ್ಟೆ. ಅದಕ್ಕೆ ಅವಳು ನಸುನಕ್ಕು 'ನಾನು ಸ್ವಂತದ ಕೆಲಸ ಶುರು ಮಾಡಿದಾಗಿನಿಂದ, ನನ್ನ ಮಗಳು ಗೂಡಿನಿಂದ ಹಾರಿಹೋದಾಗಿನಿಂದ, ನನ್ನ ಕೈಯಲ್ಲಿ ಬಹಳ ಸಮಯ ಉಳಿಯತೊಡಗಿತು. ಯಾವಾಗಲೂ ಜನರ ನಡುವೆ ಸಮಯ ಕಳೆದ ನನಗೆ ಮನೆಯಲ್ಲಿ ಒಬ್ಬಳೇ ಕುಳಿತುಕೊಳ್ಳುವುದು ಹಿಂಸೆ ಎನಿಸತೊಡಗಿತು. ಹೇಗೂ ಸ್ವಂತದ ಕಾರಿದೆ, ಸಾಕಷ್ಟು ಸಮಯವಿದೆ, ಜನರೊಂದಿಗೆ ಮಾತನಾಡುವ ಇಚ್ಛೆ ಇದೆ, ಊರು, ಕೇರಿ, ದಾರಿ ಎಲ್ಲ ಪರಿಚಯದ್ದಿದೆ, ಊಬರ್ ಕಂಪನಿಯವರು ಯಾವಾಗ ಬೇಕಾದಾಗ ಕೆಲಸ ಮಾಡಲು ಬಿಡುತ್ತಾರೆ, ಯಾಕೆ ಮಾಡಬಾರದು? ಅದರ ಜೊತೆ ನಾಲ್ಕು ದುಡ್ಡು ಸಂಪಾದಿಸಿದರೆ ಇನ್ನೂ ಒಳ್ಳೆಯದೇ ತಾನೇ?' ಎಂದಳು. ನಾಲ್ಕು ಜನ ಏನನ್ನಬಹುದು ಎನ್ನುವ ಚಿಂತೆ ಅವಳಿಗೆ ಇದ್ದಂತೆ ಕಾಣಲಿಲ್ಲ. 'ಇಕಿಗೇನ ಧಾಡಿ ಆಗೆದ್ರಿ, ರಗಡ ರೊಕ್ಕಾ ಮಾಡ್ಯಾಳ, ಆರಾಮಿರೂದ ಬಿಟ್ಟ ಟ್ಯಾಕ್ಸಿ ಓಡಸ್ತಾಳಂತ, ಕಲಿಯುಗ ನೋಡ್ರಿ' ಎಂದು ವ್ಯಂಗ್ಯ ಮಾತನಾಡುವವರು ಹತ್ತಿರದಲ್ಲೆಲ್ಲೂ ಕಾಣಲಿಲ್ಲ. ನಾನೇನಾದರೂ ಹಾಗೆ ಅಂದುಕೊಂಡೆನೇ ಎಂದು ನನ್ನನ್ನೇ ಪ್ರಶ್ನಿಸಿಕೊಂಡೆ. Implicit bias ಬಗ್ಗೆ ಓದಿದ ಎಲ್ಲ ಸಾಹಿತ್ಯ ಕಣ್ಣ ಮುಂದೆ ಸುಳಿದುಹೋಯ್ತು. ಬರಾಕ್ ಒಬಾಮ 'My views on gay marriage are evolving' ಎಂದು ಹೇಳಿದ್ದು ನೆನಪಾಯಿತು. ಅವನೇ ಹಾಗೆ ಹೇಳಿರುವಾಗ ನಾನೇನು ಮಹಾ ಎಂದುಕೊಂಡೆ. ಹಾಗೆ ಯೋಚಿಸುವಾಗ ಹದಿನೈದು ವರ್ಷಗಳ ಹಿಂದೆ ನನ್ನ ಮಗಳ ಕಿಂಡರ್‌ಗಾರ್ಟನ್ ಶಿಕ್ಷಕಿ Ms. Wolfram ನೆನಪಾದಳು. ದಿನದ ವೇಳೆ ಆಶ್‌ಲ್ಯಾಂಡ್ ಊರಿನ ಪ್ರೈಮರಿ ಶಾಲೆಯಲ್ಲಿ ಕಲಿಸಿ ಸಂಜೆಗೆ ಹಾಗು ವಾರಾಂತ್ಯದಲ್ಲಿ ಪಕ್ಕದ ಫ್ರೇಮಿಂಗ್‌ಹಾಮ್ ಶಹರದ British Beer Company ಎನ್ನುವ ರೆಸ್ಟೋರಾಂಟ್ನಲ್ಲಿ ವೈಟ್ರೆಸ್ ಆಗಿ ಕೆಲಸ ಮಾಡುತ್ತಿದ್ದಳು. ಈಗ ಬಿಡಿ, ಆದರೆ ಆಗ ನಾವು ಈ ದೇಶಕ್ಕೆ ಬಂದು ಕೇವಲ ಐದು ವರ್ಷಗಳಾಗಿದ್ದವು. Honest pay for honest work, ಯಾವ ಕೆಲಸವೂ ಕೀಳಲ್ಲ, ಇತ್ಯಾದಿ ಮಾತುಗಳನ್ನು ಕೇಳಿದ್ದುಂಟು, ಆದರೆ ಅದನ್ನು ಯಾವುದೇ ಹೆದರಿಕೆ, ಮುಜುಗರ, ಹಾಗೂ ಕೀಳರಿಮೆ ಇಲ್ಲದೆ ಸಾಧಿಸಿ ತೋರಿಸಿದ್ದನ್ನು ಅಲ್ಲಿಯವರೆಗೆ ಕಂಡಿರಲಿಲ್ಲ. ಇಂತಹ ಒಂದೊಂದು ಸನ್ನಿವೇಶಗಳು, ಅನುಭವಗಳು ನಮ್ಮನ್ನು ಪಕ್ವ ಮಾಡುತ್ತವೆ, ಅಲ್ಲವೇ? ಬಹುಶಃ ಇಂತಹ ಅನುಭವಗಳಿಂದಲೇ

ಬರಾಕ್ ಒಬಾಮನ ದೃಷ್ಟಿಕೋನಗಳು ವಿಕಸಿತವಾಗಿರಬಹುದೇನೊ. ಹೀಗೆ ದಿಟ್ಟತನ ತೋರಿ ತಮಗೆ ಸರಿ ಎನ್ನಿಸಿದ್ದನ್ನು ಮಾಡಲು ಧೈರ್ಯಸ್ಥ ಜನರೇನೋ ಬೇಕು, ಆದರೆ ಅದನ್ನು ಅನುವು ಮಾಡಿಕೊಡುವ ಉದಾರ ಬುದ್ಧಿಯ ಸಮಾಜವೂ ಬೇಕು. ಇವೆರಡೂ ಒಂದಕ್ಕೊಂದು ಪೂರಕ. ನಾಳೆ ನನ್ನ ಮಗಳು ಈ ಥರಾ ಅಸಾಂಪ್ರದಾಯಿಕ ದಾರಿ ಹಿಡಿದರೆ ನಾನು ಬೇಡ ಎನ್ನಬೇಕೇ? ಇಂತಹ ಮಾರ್ಗ ಅನುಸರಿಸಿದ ಜನ ಸಂತೋಷದಿಂದಿಲ್ಲವೇ? ಇಂಥ ಜನ ಜೀವನದಲ್ಲಿ ಮುಂದೆ ಬಂದಿಲ್ಲವೇ? ಅಷ್ಟೂ ಮೀರಿ ಅವಳಿಗೆ ಬೇಡವೆನ್ನಲು ನಾನು ಯಾರು? ಈ ಪ್ರಶ್ನೆಗಳು ಇನ್ನೊಬ್ಬರ ಬಗ್ಗೆ ಯೋಚಿಸಿದಾಗ ಕಠಿಣವಲ್ಲ, ಆದರೆ ನಮ್ಮವರ ಬಗ್ಗೆ ಈ ಪ್ರಶ್ನೆ ಬಂದಾಗ ನಮ್ಮ ಪ್ರತಿಕ್ರಿಯೆ ಬೇರೆಯೇ ಇರುತ್ತದೆ ಅಲ್ಲವೇ? ಒಬ್ಬ ಕಿರಣ್ ಬೇಡಿ ಐಪಿಎಸ್ ಪಾಸಾಗುವುದಲ್ಲ, ಒಬ್ಬ ಸುಧಾಮೂರ್ತಿ ಜೆಆರ್‌ಡಿ ಟಾಟಾಗೆ ಪತ್ರ ಬರೆಯುವುದಲ್ಲ, ಇಂತಹ ಅಸಹಜ ಹೆಜ್ಜೆಗಳು, ಅಸಾಮಾನ್ಯ ಆಯ್ಕೆಗಳು, ಜನಸಾಮಾನ್ಯರಲ್ಲಿ ಯಾವುದೇ ಹೆದರಿಕೆ ಹಾಗೂ ಮುಜುಗರ ಇಲ್ಲದೆ ಬರಬೇಕು. ಪ್ರತಿಯೊಂದು ಸಮಾಜವೂ ಈ ದೀರ್ಘದಾರಿಯಲ್ಲಿ ಬೇರೆ ಬೇರೆ ಹಂತದಲ್ಲಿವೆ. ಅಮೇರಿಕಾ ಆಗಲಿ, ಭಾರತವಾಗಲಿ ಅವುಗಳದೇ ವೇಗದಲ್ಲಿ ಮುಂದುವರೆಯಬೇಕು. ಯಾರು ಏನನ್ನು ಕಲಿಯಬೇಕು, ಹೇಗೆ ವ್ಯವಹರಿಸಬೇಕು, ಏನು ಕೆಲಸ ಮಾಡಬೇಕು, ಯಾವ ತರಹದ ಜೀವನ ನಡೆಸಬೇಕು ಎಂದು ಯಾರು ಹೇಳಬೇಕು? ಅಥವಾ ಮುಖ್ಯವಾದ ಪ್ರಶ್ನೆ ಎಂದರೆ ಯಾರಿಗೆ ಆ ಅಧಿಕಾರ ಇದೆ, ಅಥವಾ ಯಾರಿಗಾದರೂ ಆ ಅಧಿಕಾರ ಇರಬೇಕೆ? ಮತ್ತೆ ನನ್ನ ಹಾಗು ಮರಿಯಾಳ ರಾತ್ರಿಯ ಪಯಣಕ್ಕೆ ಬರೋಣ. ಅವಳು ಈ ಕೆಲಸ ಮಾಡಬೇಕೆ? ಇಷ್ಟು ರಾತ್ರಿ ಟ್ಯಾಕ್ಸಿ ಓಡಿಸಬೇಕೇ? ಇಂತಹ ಚಿಕ್ಕ ಬಟ್ಟೆ ಹಾಕಿಕೊಳ್ಳಬೇಕೇ? ಅವಳು ಇದನ್ನೆಲ್ಲಾ ಯಾಕೆ ಮಾಡುತ್ತಿರಬಹುದು? ನಾಲ್ಕು ಜನ ಏನನ್ನಬಹುದು?

ಮರಿಯಾಳ ಕಾರು ಬಾಸ್ಟನ್ ಡೌನ್‌ಟೌನ್ ದಾಟಿ ಮುಂದೆ ಸಾಗಿತ್ತು. ಅವಳನ್ನು ಮಾತನಾಡಿಸಬೇಕು, ಅವಳ ಬಗ್ಗೆ ತಿಳಿದುಕೊಳ್ಳಬೇಕು, ಅವಳ ಪರಿಸ್ಥಿತಿ ಅರ್ಥ ಮಾಡಿಕೊಳ್ಳಬೇಕು ಎಂಬ ಕುತೂಹಲ ಜಾಸ್ತಿಯಾಯಿತು. ಐವತ್ತು ವರ್ಷದ ಬಿಳಿಯ ಹೆಣ್ಣುಮಗಳು ಕೇಟ್ ತನ್ನ ಜೀವನದ ಎಷ್ಟೋ ವಿಷಯಗಳನ್ನು ಹೇಳಿದ್ದಳು. ಅವಳಿಗೆ ಹೋಲಿಸಿದರೆ 25 ವರ್ಷದ ಲಟಿನೊ (ದಕ್ಷಿಣ ಅಮೇರಿಕ) ಹೆಂಗಸು ಮರಿಯಾಳ ಪರಿಸ್ಥಿತಿ ತುಂಬಾ ಬೇರೆ ಇರಬಹುದು ಎಂದುಕೊಂಡೆ. ರಾತ್ರಿ ಎರಡು ಗಂಟೆಗೆ ಅವಳ ಜೀವನದ ಬಗ್ಗೆ ಕೇಳುವುದು ದಡ್ಡತನವಲ್ಲವೇ? ಅದೃಷ್ಟವಶಾತ್ ಅದೇ ಸಮಯದಲ್ಲಿ ರಸ್ತೆಯ ಎಡಬದಿಗೆ ಬಾಸ್ಟನ್ ಯುನಿವರ್ಸಿಟಿಯ ಕ್ಯಾಂಪಸ್ ಕಾಣಿಸಿತು. 'This is where I work' ಎಂದೆ. ಅವಳಿಂದ ಏನಾದರೂ ಪ್ರತಿಕ್ರಿಯೆ ಬರಬಹುದೇನೋ ಎಂದು ಆಶಿಸಿದೆ. ಅವಳು ನನ್ನನ್ನು ನಿರಾಸೆಗೊಳಿಸಲಿಲ್ಲ. 'Oh nice! Are you a Professor?' ಎಂದು ಉತ್ಸುಕತೆಯಿಂದ ಕೇಳಿದಳು. ಅಲ್ಲಿ ನಾನು ಏನು ಮಾಡುತ್ತೇನೆ ಎನ್ನುವುದನ್ನು ಸ್ವಲ್ಪ ಸಂಕ್ಷಿಪ್ತವಾಗಿ ವಿವರಿಸಿದೆ. 'Wow, you must be very busy!' ಎಂದಳು. ನಂತರ ಒಂದೆರಡು ನಿಮಿಷಗಳವರೆಗೆ ನಿಶ್ಶಬ್ದ. ಅಲ್ಲಿಗೆ ನಮ್ಮ ಸಂವಾದ ಮುಗಿಯಿತು

ಎಂದುಕೊಂಡೆ. ಅಷ್ಟರಲ್ಲಿ 'I am a junior at Worcester State' ಎಂದಳು. 'Oh, nice!' ಎಂದೆ. ಮುಂದೆ ಸಮಯ ವ್ಯರ್ಥಮಾಡದೆ 'What is your major?' ಎಂದು ಮಾತುಕತೆಯನ್ನು ಮುಂದುವರೆಸಲು ಪ್ರಯತ್ನಪಟ್ಟೆ. 'Chemistry' ಎಂದಳು ಮರಿಯಾ. 'ನನಗೆ Chemistry ಎಂದರೆ ತುಂಬಾ ಇಷ್ಟ, ನನ್ನ ತಂದೆ–ತಾಯಿ ಗ್ವಾಟಮಾಲಾ ದೇಶದಿಂದ ಸರಹದ್ದು ಪಾರು ಮಾಡಿ ಬಂದವರು. ನನ್ನ ಸೋದರತ್ತೆ ಇಲ್ಲಿಯ ಲಾರೆನ್ಸ್ ಶಹರದಲ್ಲಿ ಇದ್ದಿದ್ದರಿಂದ ನಾನು ಇಲ್ಲಿಗೆ ಬಂದೆ. ಮೊದಮೊದಲಿಗೆ ತುಂಬಾ ಕಷ್ಟವಾಯಿತು, ಆದರೆ ಮರಳಿ ಗ್ವಾಟಮಾಲಾಕ್ಕೆ ಹೋಗುವ ಸಾಧ್ಯತೆಯೇ ಇರಲಿಲ್ಲ, ಆದ್ದರಿಂದ ಪರಿಶ್ರಮಪಟ್ಟು ಓದಿದೆ. AP Chemistryಯಲ್ಲಿ ತುಂಬಾ ಚೆನ್ನಾಗಿ ಮಾಡಿದೆ. ನನ್ನ ಗುರುಗಳೆಲ್ಲಾ ನೀನು ಒಳ್ಳೆಯ ಟೀಚರ್ ಆಗ್ತೀಯಾ, ಕಾಲೇಜಿಗೆ ಹೋಗು ಎಂದರು. ಕಾಲೇಜ್ ಕಲಿಯುವುದು ಮುಗಿದ ಮೇಲೆ ಲಾರೆನ್ಸ್‌ನಲ್ಲಿಯೇ ಶಿಕ್ಷಕಿಯಾಗುವೆ ಎಂದು ಹೇಳಿದಳು. ಅವಳು ಇದನ್ನೆಲ್ಲಾ ಹೇಳುವಾಗ ಅವಳ ಧ್ವನಿಯಲ್ಲಿ ಒಂದು ಹುರುಪಿತ್ತು. ಜೀವನದಲ್ಲಿ ಏನೋ ಸಾಧಿಸುವ ಉತ್ಸಾಹವಿತ್ತು. ನಾನೂ ಶೈಕ್ಷಣಿಕ ಉದ್ಯಮದಲ್ಲಿರುವುದರಿಂದ ನನ್ನೆದುರು ತನ್ನ ಮುಂದಿನ ಯೋಜನೆಗಳನ್ನು ಹೇಳಲು ಅವಳಿಗೆ ಏನೋ ಖುಶಿ ಆದಂತೆ ಅನಿಸಿತು. ನಮ್ಮಿಬ್ಬರ ಮಧ್ಯದ ಗೋಡೆ ಸರಿದಿತ್ತು. ನಾನು ನನ್ನ ಮಗಳ ಬಗ್ಗೆ ಮಾತಾಡಿದೆ, ಅವಳು ಅವಳ ತಂಗಿಯ ಬಗ್ಗೆ ಹೇಳಿದಳು. ನನ್ನ ವೃತ್ತಿ, ನನ್ನ ಮಾತುಗಳು ಅವಳಿಗೆ ನನ್ನ ಮೇಲೆ ಒಳ್ಳೆಯ ಭಾವನೆ ಮೂಡಿಸಿದಂತಿತ್ತು. ಹೀಗೆ ಹರಟೆ ಹೊಡೆಯುತ್ತಿದ್ದಂತೆ ನಮ್ಮ ಮನೆ ಬಂದಾಗಿತ್ತು. 'Good luck with your college Maria' ಎಂದೆ. 'Thank you' ಎನ್ನುತ್ತಾ ಅವಳು ಮುಗುಳ್ನಕ್ಕು ಗಾಡಿಯನ್ನು ಹೊರಳಿಸಿ ಹೊರಟಳು. ಅವಳಿಗೆ ಮುಂದೆ ಉನ್ನತ ವಿದ್ಯಾಭ್ಯಾಸ ಮಾಡು ಎಂದು ಹೇಳಬೇಕಿತ್ತು, ಯಾವ ಕಾಲೇಜು ಅವಳಿಗೆ ಒಳ್ಳೆಯದು ಎಂದೆಲ್ಲ ವಿಚಾರ ಮಾಡುತ್ತ ಮನೆಯ ಬಾಗಿಲು ತೆರೆದೆ. ಕಾಕತಾಳೀಯ–ವೆನ್ನುವಂತೆ ಕಮಲಹಾಸನ್ ಅವರ ಹಳೆಯ ಚಿತ್ರ ಮರಿಯಾ ಮೈ ಡಾರ್ಲಿಂಗ್‌ನಲ್ಲಿನ 'ನಗುವ ಹೂವಂತೆ ಸೊಗಸು ಹೊಳೆವ ಹೊನ್ನಂತೆ ಮನಸು' ನೆನಪಿಗೆ ಬಂತು. ರಾತ್ರಿ ತುಂಬಾ ತಡವಾಗಿದ್ದರಿಂದ ತುಂಬಾ ಮೃದುವಾಗಿ ಅದನ್ನು ಹಾಡುತ್ತ ಸದ್ದಿಲ್ಲದಂತೆ ಮೇಲೆ ನಡೆದೆ.

ಏರ್‌ಪೋರ್ಟಿಗೆ ಅಂದು ರಾತ್ರಿ ಮರಿಯಾಳ ಬದಲಿಗೆ ಒಬ್ಬ ಗಂಡಸು ಊಬರ್ ಟ್ಯಾಕ್ಸಿ ತೆಗೆದುಕೊಂಡು ಬಂದಿದ್ದರೆ ನಾನು ಅವನ ಬಗ್ಗೆ ಇಷ್ಟೊಂದು ಯೋಚಿಸುತ್ತಿದ್ದೆನೇ? ಅವನ ಜೊತೆ ಇಷ್ಟೊಂದು ಆತ್ಮೀಯತೆಯಿಂದ ಮಾತನಾಡುತ್ತಿದ್ದೆನೇ? ಬಹುಶಃ ಇಲ್ಲ. ಆದರೆ 'Honest pay for honest work' ಎಂಬ ತತ್ವವನ್ನು ವಿಮರ್ಶಿಸಿದಾಗ ಮರಿಯಾ, ಕೇಟ್, ಒಬ್ಬ ಗಂಡಸು, ನನ್ನ ಮಗಳು, ಅಥವಾ ನಾನು, ಇವರೆಲ್ಲರ ನಡುವೆ ಏನಾದರೂ ವ್ಯತ್ಯಾಸ ಇದೆಯೇ? ವ್ಯತ್ಯಾಸ ಇರಬೇಕಾದರೂ ಏಕೆ? ಜೀವನ, ಸಮಾಜ, ಅಷ್ಟೊಂದು ಸರಳವಲ್ಲ, ಒಪ್ಪಿದೆ. ಆದರೆ ಯಾಕಾಗಬಾರದು? ಹನಿ ಹನಿ ಕೂಡಿದರೆ ಹಳ್ಳ ಅಲ್ಲವೇ? Let us start with ourselves in shedding these prejudices. ನೀವೇನಂತೀರಾ?



# ಗರತಿಯ ಹಾಡುಗಳು ಮತ್ತು ಸ್ತ್ರೀ ಸಂವೇದನೆ

**ಸರಿತಾ ನವಲಿ**
West Windsor, New Jersey

*

**ಪ್ರಸ್ತಾವನೆ:** 'ಜಾನಪದ ಜನವಾಣಿಯ ಬೇರು, ಕವಿವಾಣಿಯ ಹೂವು' ಎನ್ನುವ ಬಿ.ಎಂ.ಶ್ರೀ.ಯವರ ಮಾತು ಅರ್ಥಪೂರ್ಣವಾಗಿದ್ದು ಜಾನಪದ ಭಾಷೆಯ ಗಟ್ಟಿತನವನ್ನು ಎತ್ತಿ ತೋರಿಸುತ್ತದೆ. ಜಾನಪದರ ಬದುಕಿನ ಅನುಭವವು ಕಲಾತ್ಮಕ ರೂಪವನ್ನು ಪಡೆದು ಜಾನಪದ ಸಾಹಿತ್ಯವಾಗಿ ಇಂದಿಗೂ ನಮ್ಮ ಸಂಸ್ಕೃತಿಯ ಭಾಗವಾಗಿದೆ. ಪ್ರಾಚೀನ–ವೆನಿಸಿಕೊಳ್ಳುವ ಜಾನಪದ ಸಾಹಿತ್ಯ, ಆಧುನಿಕ ಬದುಕಿಗೆ ಪ್ರೇರಕವೂ ಆಗಿ, 'ಜಾನಪದದಲ್ಲಿರುವುದೆಲ್ಲ ಜೀವನದಲ್ಲಿದೆ, ಜೀವನದ ಸಮಸ್ತವೂ ಜಾನಪದದಲ್ಲಿದೆ' ಎನ್ನುವ ಮಾತನ್ನು ಒಪ್ಪಿಕೊಳ್ಳುವಂತೆ ಮಾಡುತ್ತದೆ. ಜನಪದ ಎನ್ನುವುದು ಜನಸಮೂಹ ಆಡಳಿತವೆಂದು ಗುರುತಿಸಲ್ಪಡುತ್ತದೆ. ದೇಶೀಯ ನೆಲೆಗಟ್ಟಿನ ಭಾಷಾ ಸೊಗಡಿನಿಂದ ಕೂಡಿದ ಜಾನಪದ ಸಾಹಿತ್ಯ, ಮೌಖಿಕ ಸಾಹಿತ್ಯವಾಗಿ ಬಾಯಿಂದ ಬಾಯಿಗೆ ಹರಿದಾಡಿದ್ದನ್ನು ನಾವು ಕಾಣುತ್ತೇವೆ. ಮೌಖಿಕ ಸಾಹಿತ್ಯದಲ್ಲಿ ತ್ರಿಪದಿಗಳು ಮೊದಲನೆ ಸ್ಥಾನವನ್ನು ಪಡೆದುಕೊಂಡಿವೆ ಎನ್ನಬಹುದು. ಸಂವೇದನೆ ಎಂದರೆ ಅನುಭವದ ಅರಿವು ಎಂದು ಅರಿತುಕೊಂಡಾಗ, ಜಾನಪದ ಹೆಣ್ಣುಮಕ್ಕಳು ತ್ರಿಪದಿ ಛಂದದಲ್ಲಿ ತಮ್ಮ ಜೀವನದ ಅನುಭವಗಳನ್ನು ಹೇಳುತ್ತ ಗರತಿಯ ಹಾಡುಗಳೆಂಬ ನಿಧಿಯನ್ನು ಜಾನಪದ ಸಾಹಿತ್ಯಕ್ಕೆ ಕೊಡುಗೆಯಾಗಿ ಕೊಟ್ಟಿರುವುದು ಕಂಡುಬರುತ್ತದೆ. ಅಕ್ಷರ ಜ್ಞಾನವಿಲ್ಲದೆ, ಸರಳ, ಸೀಮಿತ ಬದುಕಿನಲ್ಲಿಯೇ ಗ್ರಾಮೀಣ ಸಮಾಜದ ತಮ್ಮ ಜೀವನಾನುಭವವನ್ನು ಹಾಡಾಗಿ

ಹೇಳಿಕೊಂಡಿರುವುದನ್ನು ನಾವು ಕಾಣುತ್ತೇವೆ. ಈ ಅನುಭವದ ಅರಿವು, ಪಟ್ಟಣಗಳ ನಾಗರಿಕ ಸಮಾಜದಿಂದ ಭಿನ್ನವಾಗಿದ್ದರೂ, ಶಿಕ್ಷಿತ ಸಮಾಜಕ್ಕೆ ಇಂದಿಗೂ ಮಾದರಿ-ಯಾಗುತ್ತದೆ. 'ಕರ್ನಾಟಕದ ಜಾನಪದ ರತ್ನ', 'ಜಾನಪದ ದಿಗ್ಗಜ'ರೆಂದು ಖ್ಯಾತರಾದ ಸಾಹಿತಿ ಸಿಂಪಿ ಲಿಂಗಣ್ಣನವರು, 'ಗರತಿಯ ಹಾಡು' ನಮ್ಮ ಸ್ತ್ರೀ ಜೀವನದ ಒಳಗನ್ನಡಿ, ಅದು ನಮ್ಮ ಹೆಣ್ಣುಮಕ್ಕಳ ಹೃದಯದ ಪಡಿಗನ್ನಡಿ ಎನ್ನುತ್ತಾರೆ. ಗರತಿಯ ಹಾಡುಗಳಲ್ಲಿ ಬದುಕಿಗೆ ಅವಶ್ಯವೆನಿಸುವ ಪರಂಪರೆಯನ್ನು, ಪ್ರೇಮದ ಸತ್ವವನ್ನು, ಕುಟುಂಬದ ಸಂಬಂಧಗಳನ್ನು, ತಾಯ್ತನದ ಮಮತೆಯನ್ನು, ಹೆಣ್ಣಿನ ತ್ಯಾಗವನ್ನು, ಐತಿಹಾಸಿಕ-ಪೌರಾಣಿಕ ಪ್ರಸಂಗಗಳನ್ನು, ಬದುಕಿನ ಹಲವಾರು ಪರಿಸ್ಥಿತಿಗಳನ್ನು ಕಾಣುವುದರೊಂದಿಗೆ, ಮಾನವನ ಸಂವೇದನೆ ಮತ್ತು ಭಾವನೆಗಳು ಸರಳವಾಗಿ ವ್ಯಕ್ತವಾಗಿದ್ದನ್ನು ಕಾಣಬಹುದು.

'ಗರತಿಯ ಹಾಡಿನಲ್ಲಿ ಆಕೆಯ ಅಂತರಂಗದ ಚಿತ್ರಣವೇ ಚಿತ್ರಿತವಾಗಿದೆ' ಎನ್ನುವ ಮಾತಿಗೆ ಅರ್ಥಕೊಡುವಂತೆ ಜಾನಪದ ಹೆಣ್ಣುಮಕ್ಕಳು ಕಟ್ಟಿ ಹಾಡಿದ ಬಹುತೇಕ ತ್ರಿಪದಿಗಳಲ್ಲಿ ಹೆಣ್ಣಿನ ಮನೋಧರ್ಮವನ್ನು ಗುರುತಿಸಬಹುದು. ಹೆಣ್ಣಿನ ಬದುಕಿನ ಸುಖ-ದುಃಖ, ನೋವು-ನಲಿವು, ಹಾಸ್ಯ-ಲಾಸ್ಯ, ಸರಸ-ವಿರಸ, ಪ್ರೀತಿ-ಪ್ರೇಮ, ಹುಟ್ಟು-ಸಾವು...ಹೀಗೆ ಹಲವಾರು ಭಾವನೆಗಳು ಅನುಭವದ ಮೂಸೆಯಲ್ಲಿ ಬೆಂದು ಅರ್ಥಪೂರ್ಣ ಪದ್ಯಗಳಾಗಿ ಮೂಡಿಬಂದಿವೆ. ಗ್ರಾಮ್ಯ ಬದುಕಿನ ಭಾಗವಾಗಿ ಕುಟ್ಟುವಾಗ, ಬೀಸುವಾಗ, ಮಗುವನ್ನು ತೂಗುವಾಗ, ಮದುವೆಯ ಸಂಭ್ರಮದಲ್ಲಿ, ಸಾವಿನ ನೋವಿನ ಸಂದರ್ಭಗಳಲ್ಲಿ ಮತ್ತು ತವರುಮನೆ-ಅತ್ತೆಮನೆ, ತಂದೆ-ತಾಯಿ, ಅಣ್ಣ-ತಮ್ಮ, ಅಕ್ಕ-ತಂಗಿ, ಗೆಳತಿ, ಸತಿ-ಪತಿ, ತಾಯ್ತನ, ಮಕ್ಕಳೆಂಬ ನೂರಾರು ಸಂಬಂಧಗಳಲ್ಲಿ ಕಟ್ಟಿ ಹಾಡಿದ ತ್ರಿಪದಿಗಳಲ್ಲಿ ಹೆಣ್ಣಿನ ಸಂವೇದನೆ ಹಲವು ರೀತಿಯಲ್ಲಿ ವ್ಯಕ್ತವಾಗಿದೆ.

**ಗರತಿಯ ಹಾಡಿನ ಪರಂಪರೆ**

ಗರತಿಯ ಹಾಡಿನ ಪರಂಪರೆ ಹೇಗೆ ಪ್ರಾರಂಭವಾಯಿತು ಎನ್ನುವುದನ್ನು ತಿಳಿದುಕೊಂಡಾಗ, ಗೃಹಿಣಿಯಾಗಿ ಮನೆಯ ಕೆಲಸಗಳನ್ನು ನಿರ್ವಹಿಸುತ್ತ, ಕೆಲಸದ ಆಯಾಸವನ್ನು ಹಾಡಿನ ರಾಗದಲ್ಲಿ ಮರೆಸುತ್ತಿದ್ದುದು ಕಂಡುಬರುತ್ತದೆ. ಕುಟ್ಟುವಾಗ, ಬೀಸುವಾಗ, ಮಗುವನ್ನು ತೂಗುವಾಗ, ಮನೆಗೆಲಸದ ಆಯಾಸಕ್ಕೆ ಏರುವ ಉಸಿರಿಗೆ ತಕ್ಕ ಹಾಗೆ ರಾಗವನ್ನು ಹೊಂದಿಸಿ ಹಾಡುತ್ತಿದ್ದುದು ತಿಳಿಯುತ್ತದೆ. ಬೆಳಗು ಮುಂಜಾವಿನ ನಿಶ್ಶಬ್ದದಲ್ಲಿ, ಬೀಸುವಕಲ್ಲು ಹೊರಡಿಸುವ ಶಬ್ದಕ್ಕೆ ರಾಗ ಹೊಂದಿಸಿಕೊಂಡು, ಮನಸ್ಸಿನಲ್ಲಿ ತುಂಬಿಕೊಂಡಿದ್ದ ನೋವು-ನಲಿವು, ಭಕ್ತಿ, ನಂಬಿಕೆ, ಬಳಲಿಕೆಯನ್ನು ಹಾಡಿಹಾಡಿ ಹೃದಯ ಹಗುರವಾಗಿಸಿಕೊಳ್ಳುವ ಕಲೆ ಅವರದಾಗಿತ್ತು.

ಗ್ರಾಮೀಣ ಬದುಕಿನಲ್ಲಿ ಬೆಳ್ಳಿ ಮೂಡುವ ಹೊತ್ತಲ್ಲಿ ಎದ್ದು, ರಾಗಿ-ಜೋಳ ಬೀಸುವುದರೊಂದಿಗೆ ತನ್ನ ದಿನಚರಿಯನ್ನು ಪ್ರಾರಂಭಿಸುತ್ತಿದ್ದ ಗರತಿ, ಈ ಪದಗಳಲ್ಲಿ ತನ್ನ ಭಾವನೆಗಳನ್ನು ವ್ಯಕ್ತಪಡಿಸಿದ್ದಾಳೆ.

**ಪದ ಬಂದರ್ಹೇಳು ಬಾರದಿದ್ದರೆ ಶರಣಾಗು**
**ಪದವುಂಟು ನನ್ನ ಎದೆಯಲ್ಲಿ। ತಾಮ್ರದ।**
**ತಾಯ್ತುಂಟು ನನ್ನ ತೋಳಲ್ಲಿ ॥ (1)**

**ಕುಟ್ಟು ಬೀಸುವ ಹಾಡು ಯಾವಾಕಿ ಕಲಿಸ್ಯಾಳ।**
**ಕೃಷ್ಣನ ತಂಗಿ ಸುಭದ್ರಿ। ಕಲಿಸ್ಯಾಳ।**
**ಕೃಷ್ಣನ ಮ್ಯಾಲೆ ಪದಗೋಳ ॥ (2)**

ಕುಟ್ಟುವಾಗ, ಬೀಸುವಾಗ ಪದ ಕಟ್ಟಿ ಹಾಡುತ್ತಿದ್ದ ಜಾನಪದ ಹೆಣ್ಣುಮಗಳು, ಪದ್ಯಗಳು ತನ್ನ ಮನದ ಆಳದಿಂದ ಹೊರಹೊಮ್ಮುತ್ತವೆ ಎನ್ನುತ್ತಾಳೆ. ಈ ಹಾಡುಗಳನ್ನು ಕೃಷ್ಣನ ತಂಗಿಯಾದ ಸುಭದ್ರೆ ಕಲಿಸಿಕೊಟ್ಟಿದ್ದಾಳೆ ಎಂದು ತನ್ನ ಭಕ್ತಿಯನ್ನು ಹೇಳಿಕೊಳ್ಳುತ್ತಾಳೆ.

**ಸುಮ್ಮನ ಬೀಸಿದರ ಬೀಳದು ಈ ಕಲ್ಲು**
**ನಾಗಸೊರದಂತೆ ದನಿಯೆತ್ತಿ। ಹಾಡಿದರ।**
**ಗಮ್ಮನೆ ಬೀಳುವುದು ಈ ಕಲ್ಲು ॥ (3)**
(ನಾಗಸೊರ= ನಾಗಸ್ವರ ಎಂಬ ವಾದ್ಯ)

ದವಸ-ಧಾನ್ಯಗಳನ್ನು ಬೀಸಿ ಹಿಟ್ಟು ತಯಾರಿಮಾಡಿಕೊಳ್ಳುತ್ತಿದ್ದ ಗರತಿ, ಸುಮ್ಮನೆ ಬೀಸಿದರೆ ಹಿಟ್ಟು ಬೀಳುವುದಿಲ್ಲ, ನಾಗಸ್ವರದಂತೆ ಏರು ಧ್ವನಿಯಲ್ಲಿ ಪದಗಳನ್ನು ಹಾಡಿದಾಗ ಬೀಸುವ ಕಲ್ಲಿನಿಂದ ಹಿಟ್ಟು ಸುಲಭವಾಗಿ ಬೀಳುತ್ತದೆ ಎಂದು ತನ್ನ ಹಾಡಿನ ಬಗ್ಗೆ ಹೆಮ್ಮೆಯಿಂದ ಹೇಳಿಕೊಳ್ಳುತ್ತಾಳೆ.

**ಕಲ್ಲವ್ವ ಮಾತಾಯಿ ಮೆಲ್ಲವ್ವ ಜೋಳವ**
**ಜಲ್ಲಜಲ್ಲನೆ ಉದರವ್ವ। ನಾ ನಿನಗೆ।**
**ಬೆಲ್ಲದಾರತಿಯ ಬೆಳಗೇನು ॥ (4)**
(ಜಲ್ಲಜಲ್ಲನೆ = ಬಳಬಳನೆ, ವೇಗವಾಗಿ)

ತನ್ನ ದಿನಚರಿಯಲ್ಲಿನ ಕೆಲಸಗಳನ್ನು ನೆನೆದು, ಬೇಗನೆ ಹಿಟ್ಟು ಮಾಡಿಕೊಳ್ಳಬೇಕೆಂದು ಬೀಸುವ ಕಲ್ಲಿಗೆ ಬೇಡಿಕೊಳ್ಳುವುದನ್ನು ಈ ತ್ರಿಪದಿಯಲ್ಲಿ ಕಾಣುತ್ತೇವೆ. ಬದುಕಿಗೆ ಅವಶ್ಯವಾಗುವ ನಿತ್ಯ ಬಳಕೆಯ ವಸ್ತುಗಳನ್ನು, ಸಲಕರಣೆಗಳನ್ನು ಗೌರವಿಸುವ, ಭಕ್ತಿಯಿಂದ ಪೂಜಿಸುವ ಭಾವ ಈ ಪದ್ಯದಲ್ಲಿದೆ.

**ಗರತಿಯ ಹಾಡು ಮತ್ತು ಭಕ್ತಿಯ ಭಾವ:**

ಜಾನಪದ ಹೆಣ್ಣುಮಗಳು ತನ್ನ ಬದುಕಿನ ಅನುಭವಗಳ ಅರಿವನ್ನು ಭಕ್ತಿಯ ಭಾವವಾಗಿ ಕಟ್ಟಿಕೊಟ್ಟಿದ್ದಾಳೆ. ಆಕೆ ತನ್ನ ಕಷ್ಟದ ಬದುಕನ್ನು, ಅನುಭವಗಳನ್ನು ಪದವಾಗಿಸುತ್ತ

ನಿತ್ಯದ ಜೀವನವನ್ನು ಸುಲಭವಾಗಿಸಿಕೊಂಡಿದ್ದನ್ನು ಹಲವಾರು ಹಾಡುಗಳಲ್ಲಿ ಕಾಣುತ್ತೇವೆ. ಸೋಮಾರಿತನ ಮಾಡದೇ ನಿನ್ನಲ್ಲಿ ಶರಣು ಬಂದಿದ್ದೇನೆ, ಹಾಡು ಕಟ್ಟುವ ಸಾಮರ್ಥ್ಯವನ್ನು ನೀಡೆಂದು ಭಕ್ತಿ ಭಾವದಿಂದ ಜ್ಞಾನದೇವತೆಯಾದ ಸರಸ್ವತಿಯಲ್ಲಿ ಆಕೆ ಬೇಡಿಕೊಳ್ಳುತ್ತಾಳೆ.

**ನಗ್ಗಾಲ ಮರದಡಿ ನಿದ್ರೆ ಮಾಡೋದ ಬಿಟ್ಟು ।**
**ಎಗ್ಗಿಲ್ದೆ ಬಂದೆ ನಿನ ಬಳಿಗೆ । ಸರಸೋತಿ ।**
**ಚೆಂದುಳ್ಳ ಹಾಡ ಕಲಿಸಮ್ಮ ॥ (5)**
(ಎಗ್ಗಿಲ್ದೆ = ಸಂಕೋಚವಿಲ್ಲದೆ, ಸರಸೋತಿ=ಸರಸ್ವತಿ)

ಉಳುವಾಯೋಗಿಯಾಗಿ ನೆಲದ ಕಾಯಕವನ್ನು ನಂಬಿ ಬದುಕುವ ರೈತ ಕುಟುಂಬದ ಹೆಣ್ಣು ಮಕ್ಕಳು, ಭೂತಾಯಿಯ ಬಗೆಗಿನ ಭಕ್ತಿಯನ್ನು ಪದವಾಗಿ ಹಾಡಿದ್ದಾರೆ. ಜೀವನ ನಿರ್ವಹಣೆಗೆ ಬೆಳೆ ಬೆಳೆದು, ಹಸಿವನ್ನು ನೀಗುವ ಭೂಮಿತಾಯಿಯನ್ನು ದಿನದ ಪ್ರಾರಂಭದಿಂದಲೇ ನೆನೆಯುತ್ತೇನೆ ಎನ್ನುತ್ತಾರೆ.

**ಏಳುತಲೆ ಎದ್ದು ಯಾರ್ಯಾರ ನೆನೆಯಲಿ ।**
**ಎಳ್ಳು ಜೀರಿಗೆ ಬೆಳಿಯೋಳ । ಭೂಮಿತಾಯ ।**
**ಎದ್ದೊಂದು ಗಳಿಗೆ ನೆನವೇನು ॥ (6)**

ಮಳೆಯನ್ನು ನಂಬಿ ಬದುಕುವ ರೈತನ ಬದುಕಿನಲ್ಲಿ ಮಳೆಯ ಮಹತ್ವವನ್ನು ಅರಿತ ಗರತಿ ಮಳೆಯ ದೇವರನ್ನು ಬೇಡುತ್ತ ಮಳೆ ಸುರಿಸು, ಬೆಳೆ ಬೆಳೆಯಲು ಸಹಕರಿಸು ಎನ್ನುವುದನ್ನು ತನ್ನ ಸ್ತುತಿಯಾಗಿಸಿಕೊಂಡಿದ್ದಾಳೆ.

**ಅಂಬು ಕೊಡುವವನೆ ಗೊಂಬೆಹಚ್ಚಡದವನೆ ।**
**ರಂಭೆದೊಡೆಯ ಮೇಲಿರುವ ಮಳೆದೇವ ।**
**ಅಂಬರದಿಂದ ಕರುಣೀಸು ॥ (7)**
(ಅಂಬು = ನೀರು, ಹಚ್ಚಡ = ಹೊದಿಕೆ, ಅಂಬರ= ಆಕಾಶ)

ಜೀವನಾನುಭವಗಳಿಂದಲೇ ಬದುಕಿನ ಪಾಠವನ್ನು ಕಲಿಯಬಹುದೆಂಬ ಮಾತನ್ನು ಗರತಿ ತನ್ನ ಪದದಲ್ಲಿ ಪ್ರಾರ್ಥನೆಯಾಗಿಸುತ್ತ, ಅಂದಿಗೂ-ಇಂದಿಗೂ ಬುದ್ಧಿಮಾತನ್ನು ಹೇಳುವುದನ್ನು ಈ ತ್ರಿಪದಿಯಲ್ಲಿ ಕಾಣುತ್ತೇವೆ. ಜನರನ್ನು ನಂಬಿ ಮೋಸ ಹೋದ ಆಕೆ, "ದೇವರೇ ನಿನ್ನನ್ನು ನಂಬಿದ್ದೇನೆ, ಆ ನಂಬಿಕೆಯನ್ನು ಉಳಿಸಿಕೋ" ಎಂದು ಪ್ರಾರ್ಥಿಸುತ್ತಾಳೆ.

**ಮಂದಿ ಮಂದೀಯೆಂದು ಮಂದಿ ನಂಬಲಿ ಹೋದ ।**
**ಮಂದಿ ಬಿಟ್ಟಾರ ನಡುನೀರ । ಮಲ್ಲಯ್ಯ ।**
**ತಂದಿ ನನ ಕೈಯ ಬಿಡಬ್ಯಾಡ ॥ (8)**

**ಗರತಿ ಮತ್ತು ತವರುಮನೆ**

ಹೆಣ್ಣುಮಕ್ಕಳಿಗೆ ತವರುಮನೆ ಎಂದರೆ ನಾಲ್ಕು ಗೋಡೆಗಳ ಕಟ್ಟಡವಲ್ಲ, ಪತ್ರ ವ್ಯವಹಾರದ ವಿಳಾಸವಲ್ಲ. ಅವರಿಗೆ ಅದೊಂದು ಭಾವನಾತ್ಮಕ ತಾಣ. ತಂದೆ–ತಾಯಿ, ಅಣ್ಣ–ತಮ್ಮ, ಅಕ್ಕ–ತಂಗಿ, ಬಾಲ್ಯದ ಗೆಳತಿಯರು...ಹೀಗೆ ಹಲವಾರು ಸಂಬಂಧಗಳನ್ನು ನೀಡುವ ತವರು, ಈ ಎಲ್ಲ ಸಂಬಂಧಗಳನ್ನು ಗೌರವಿಸಿ, ಹೊಂದಿಕೊಂಡು ಬದುಕುವ ಕಲೆಯನ್ನೂ ಕಲಿಸಿಕೊಡುತ್ತದೆ. ಪ್ರತಿಯೊಬ್ಬ ಹೆಣ್ಣುಮಗಳು ಪುಟ್ಟ ಮಗುವಾಗಿ ಹುಟ್ಟಿ, ಬೆಳೆದು ದೊಡ್ಡವಳಾದಂತೆ ಅವಳ ಮೊಗ್ಗಿನ ಮನಸ್ಸು ಹೂವಾಗಿ ಅರಳಿ, ಕಾಯಾಗಿ, ಹಣ್ಣಾಗುವ ಪ್ರತಿ ಹಂತದಲ್ಲೂ ತವರುಮನೆಯನ್ನು ನೆನೆಯುತ್ತಾಳೆ. ಬದುಕಿನುದ್ದಕ್ಕೂ ತವರಿನ ನೆನಪುಗಳನ್ನು, ಮನೆಯ ಅಂಗಳದಲ್ಲಿ ಬಿಡಿಸುವ ಬಣ್ಣ–ಬಣ್ಣದ ವೈವಿಧ್ಯಮಯ ರಂಗೋಲಿಯಂತೆ ತನ್ನ ಮನದಂಗಳದಲ್ಲಿ ಚಿತ್ತಾರವಾಗಿಸಿಕೊಳ್ಳುತ್ತಾಳೆ. ಜಾನಪದ ಹೆಣ್ಣುಮಗಳು ಈ ಭಾವನಾತ್ಮಕ ಬೆಸುಗೆಯ ವಿವಿಧ ಅನುಭವಗಳನ್ನು ಗರತಿಯ ಹಾಡುಗಳಲ್ಲಿ ಕಟ್ಟಿಕೊಟ್ಟಿದ್ದಾಳೆ.

**ಬ್ಯಾಸಿಗಿ ದಿವಸಕ ಬೇವಿನ ಮರ ತಂಪ ।**
**ಭೀಮರತಿಯೆಂಬ ಹೊಳಿ ತಂಪ । ಹಡದಮ್ಮ ।**
**ನೀ ತಂಪ ನನ್ನ ತವರೀಗಿ ॥ (9)**
(ಬ್ಯಾಸಿಗಿ= ಬೇಸಿಗೆ, ಭೀಮರತಿ=ಭೀಮಾನದಿ, ಹೊಳಿ=ಹೊಳೆ, ನದಿ)

**ಹಲ್ಲು ಸುಲಿಯಲಿ ಬೇಕು ವೀಳ್ಯ ಮೆಲಿಯಲಿ ಬೇಕು ।**
**ಮಲ್ಲೀಗಿ ಬೇಕು ತುರುಬೀಗಿ । ಹಡೆದಮ್ಮ ।**
**ನೀ ಬೇಕು ನನ್ನ ತವರೀಗಿ ॥ (10)**

ತವರುಮನೆಯಲ್ಲಿ ತಾಯಿಯ ಮಹತ್ವವೇನು ಎನ್ನುವ ಮಾತನ್ನು ತನ್ನ ಬದುಕಿನ ಅನುಭವಗಳೊಂದಿಗೆ ಹೋಲಿಸಿ ಹೇಳಿಕೊಳ್ಳುತ್ತಾಳೆ. ತಾಯಿಯೆಂದರೆ ಬೇಸಿಗೆಯ ಬಿಸಿಲಿನ ತಾಪವನ್ನು ತಂಪಾಗಿಸುವ ಮರದ ನೆರಳು, ದಾಹವನ್ನು ಇಂಗಿಸಿ, ತಂಪಾಗಿಸುವ ನದಿ ಎಂದು ಹಾಡಿದ್ದಾಳೆ.

**ಯಾರು ಇದ್ದರು ನನ್ನ ತಾಯವ್ವನೋಲರ ।**
**ಸಾವಿರ ಕೊಳ್ಳಿ ಒಲಿಯಾಗ । ಇದ್ದರ**
**ಜ್ಯೋತಿ ನಿನ್ನ್ಯಾರು ಹೋಲರ ॥ (11)**
(ಕೊಳ್ಳಿ= ಉರಿಯುವ ಕಟ್ಟಿಗೆ)

ಗರತಿ ತನ್ನ ತಾಯಿಯ ಬಗ್ಗೆ ಹೇಳಿದ ಈ ಮಾತುಗಳು ಅದೆಷ್ಟು ಅರ್ಥಪೂರ್ಣ–ವಾಗಿವೆ. ಹೇಗೆ ಸಾವಿರಾರು ಕಟ್ಟಿಗೆಯ ತುಂಡುಗಳು ಒಲೆಯಲ್ಲಿ ಕೊಳ್ಳಿಯಾಗಿ ಧಗಧಗನೆ ಉರಿದರೂ, ಮಂದವಾಗಿ ಉರಿದು, ಬೆಳಕು ನೀಡುವ ಜ್ಯೋತಿಗೆ ಸಮನಾಗುವುದಿಲ್ಲವೋ

ಹಾಗೆ, ತನ್ನ ತಾಯಿಯನ್ನು ಬೇರೆ ಯಾರೂ ಹೋಲುವುದಿಲ್ಲ ಎನ್ನುತ್ತಾಳೆ. ತಾಯಿಯಂತೆ ತಂದೆಯೂ ಮಕ್ಕಳ ಏಳಿಗೆಗಾಗಿ ದುಡಿಯುತ್ತಾನೆ. ಆತನ ದುಡಿಮೆಯೇ ಮನೆಗೆ ಆಧಾರವೆಂದು ಅರಿಯುವ ಗರತಿ ತನ್ನ ಪದ್ಯಗಳಲ್ಲಿ ತಂದೆಯನ್ನು ನೆನೆಯುತ್ತಾಳೆ.

**ತಂದೀಯ ನೆನೆದರ ತಂಗಳ ಬಿಸಿಯಾಯ್ತು।**
**ಗಂಗಾದೇವಿ ನನ್ನ ಹಡೆದವ್ವ। ನೆನೆದರ।**
**ಮಾಸಿದ ತಲೆಯು ಮಡಿಯಾಯ್ತು॥ (12)**

ಮನೆ ಮತ್ತು ಮಕ್ಕಳ ಒಳಿತಿಗಾಗಿ ತಂದೆ-ತಾಯಿ ತಮ್ಮ ಜೀವನವನ್ನು ಮುಡುಪಾಗಿಡುವುದನ್ನು ನೆನೆಸಿಕೊಳ್ಳುವ ಜಾನಪದ ಹೆಣ್ಣುಮಗಳು, ತಂದೆಯನ್ನು ನೆನಪಿಸಿಕೊಂಡರೆ ತಂಗಳನ್ನವೂ ಬಿಸಿಯಾಗುವುದೆಂದು ಬಣ್ಣಿಸುತ್ತಾಳೆ. ತಾಯಿಯಂತೂ ಗಂಗಾದೇವಿ, ಆಕೆಯನ್ನು ನೆನಪಿಸಿಕೊಂಡರೆ ಗಂಗಾ ಸ್ನಾನದ ಪುಣ್ಯವನ್ನು ಪಡೆದಂತೆ ಎಂದು ಹಾಡಿಕೊಂಡು, ಹೆತ್ತವರನ್ನು ಸ್ಮರಿಸುತ್ತಾಳೆ. ತವರುಮನೆಯ ಬಗ್ಗೆ ಅಪಾರ ಪ್ರೀತಿಯನ್ನು ಹೊಂದಿರುವ ಹೆಣ್ಣುಮಗಳು ತವರನ್ನು ಹಾರೈಸುವ ಬಗೆಯೂ ವಿಶಿಷ್ಟವಾಗಿರುವುದು ಗರತಿಯ ಹಾಡುಗಳಲ್ಲಿ ಕಂಡುಬರುತ್ತದೆ.

**ಹಾಲುಂಡ ತವರೀಗಿ ಏನೆಂದು ಹಾಡಲೆ।**
**ಹೊಳೆದಂಡೆಲಿರುವ ಕರಕೀಯ। ಕುಡಿಯಂಗ।**
**ಹಬ್ಬಲೆ ಅವರ ರಸಬಳ್ಳಿ॥ (13)**
**(ಕರಕಿ=ಗರಿಕೆ)**

ಹಾಲುಂಡು ಬೆಳೆದ ತವರುಮನೆಯ ಏಳಿಗೆಯನ್ನು ಸದಾ ಬಯಸುವ ಜಾನಪದ ಮಹಿಳೆ, ಈ ಪದ್ಯದಲ್ಲಿ ನೀಡುವ ಹೋಲಿಕೆಯೂ ಬಹಳ ವಿಶೇಷವಾದದ್ದಾಗಿದೆ. ನದಿತಟದಲ್ಲಿ ಬೆಳೆಯುವ ಗರಿಕೆಯಂತೆ ತಾನು ಹುಟ್ಟಿ ಬೆಳೆದ ತವರಿನ ವಂಶಾಭಿವೃದ್ಧಿಯಾಗಲಿ ಎಂದು ಆಕೆ ಹಾರೈಸುತ್ತಾಳೆ. ಈ ಹೋಲಿಕೆ ಆಕೆ ಪುಸ್ತಕದಿಂದ ಪಡೆದ ಜ್ಞಾನವಾಗಿರದೆ, ಅನುಭವದಿಂದ ಪಡೆದ ಜ್ಞಾನವೆಂದು ತಿಳಿದುಬರುತ್ತದೆ. ಸಾವಿಲ್ಲದೆ, ಅಂತ್ಯವಿಲ್ಲದೆ ನಿರಂತರವಾಗಿ ಬೆಳೆಯುತ್ತ ಹೋಗುವ ಗರಿಕೆ ಹುಲ್ಲನ್ನು ಕಾಣುತ್ತ ಬೆಳೆದ ಗ್ರಾಮೀಣ ಹೆಣ್ಣುಮಗಳು, ತನ್ನ ತವರುಮನೆಯೂ ಸಹ ಕೊನೆಗೊಳ್ಳದೇ ನಿರಂತರವಾಗಿ ಬೆಳೆಯಲಿ ಎನ್ನುವ ಮಾತು ಶಿಕ್ಷಿತ ಸಮಾಜಕ್ಕೂ ಮಾದರಿಯಾಗುತ್ತದೆ.

### ಬದುಕಿನುದ್ದಕ್ಕೂ ಜೊತೆಯಾಗುವ ಸಂಬಂಧಗಳು

ಹೆಣ್ಣು ಮಗುವಿಗೆ ತವರುಮನೆ ಹಲವಾರು ಸಂಬಂಧಗಳನ್ನು ನೀಡುವುದರೊಂದಿಗೆ, ಬದುಕಿನುದ್ದಕ್ಕೂ ಅವಳು ನೆನಪುಗಳನ್ನು ಕಲೆಹಾಕುವಲ್ಲಿ ಪ್ರಮುಖ ಪಾತ್ರವಹಿಸುತ್ತದಲ್ಲವೇ? ಗರತಿಯ ಹಾಡುಗಳಲ್ಲಿ ಅಣ್ಣ-ತಮ್ಮ, ಅಕ್ಕ-ತಂಗಿ, ಅತ್ತಿಗೆ-ನಾದಿನಿ, ಗೆಳತಿರೊಂದಿಗಿನ ಭಾವನಾತ್ಮಕ ಸಂಬಂಧವನ್ನು ಬಗೆ-ಬಗೆಯಾಗಿ ಬಣ್ಣಿಸಲಾಗಿದೆ.

**ಹೆಣ್ಣೀನ ಜನುಮಕ ಅಣ್ಣತಮ್ಮರು ಬೇಕು ।**
**ಬೆನ್ನ ಕಟ್ಟುವರು ಸಭೆಯೊಳಗ । ಸಾವಿರ ।**
**ಹೊನ್ನ ಕಟ್ಟುವರು ಉಡಿಯೊಳಗ ॥ (14)**

ತುಂಬಿದ ಸಭೆಯಲ್ಲಿ ಅಸಹಾಯಕಳಾಗಿ ನಿಂತಿದ್ದ ದ್ರೌಪದಿಗೆ ಅಕ್ಷಯಾಂಬರ ನೀಡಿ ಆಕೆಯನ್ನು ರಕ್ಷಿಸಿದ ಕೃಷ್ಣನಂತೆ, ಪ್ರತಿಯೊಬ್ಬ ಹೆಣ್ಣಿನ ರಕ್ಷಣೆಗೆ ನಿಲ್ಲುವ, ಕಷ್ಟದಲ್ಲಿ ಸಹಾಯಕ್ಕೊದಗುವ ಅಣ್ಣ–ತಮ್ಮಂದಿರಿರಬೇಕು ಎಂದು ಗರತಿ ಆಶಿಸುತ್ತಾಳೆ. ಪುರಾಣದ ಕಥೆಗಳಿಂದ ಕೇಳಿ ತಿಳಿದ ಮಾಹಿತಿಯನ್ನು ತನ್ನ ಪದ್ಯದಲ್ಲಿ ಅಳವಡಿಸಿದ್ದಾಳೆ.

**ಆಡೀನ ಮಲಿ ಹಂಗ ಜೋಡ ನಾವಿಬ್ಬರ ।**
**ಆಡಬ್ಯಾಡ ತಂಗಿ ಕದನವ । ಜಗಳಕ ।**
**ಜೋಡೀನ ಹಕ್ಕಿ ಅಗಲ್ಯಾವ ॥ (15)**
(ಆಡು = ಕುರಿ)

ಅಕ್ಕ–ತಂಗಿಯರೆಂದರೆ ಕುರಿಯ ಜೋಡು ಮೊಲೆಯಂತೆ, ಜಗಳವಾಡಿಕೊಂಡು ಮನಸ್ತಾಪ ಮಾಡಿಕೊಂಡರೆ ಜೋಡಿಯಾಗಿ ಕಂಡುಬರುವ ಗೊರವಂಕಗಳು ಅಗಲಿದಂತೆ ಎನ್ನುವ ಮಾತು ಗರತಿಯು ತಾನು ನಿತ್ಯ ಬದುಕಿನಲ್ಲಿ ಕಾಣುವ ಪ್ರಾಣಿ–ಪಕ್ಷಿಗಳನ್ನು ತನ್ನ ಜೀವನದ ಅನುಭವಗಳಿಗೆ ಹೋಲಿಸಿ, ಮನಸ್ಸಿನ ಭಾವಗಳನ್ನು ಈ ಪದ್ಯದಲ್ಲಿ ವ್ಯಕ್ತಪಡಿಸಿದ್ದು ಕಂಡುಬರುತ್ತದೆ.

**ಗರತಿ ಮತ್ತು ಗೆಳತಿ**

ಬದುಕಿನಲ್ಲಿ ಜೊತೆಯಾಗುವ ಸಂಬಂಧಗಳನ್ನು ಪ್ರೀತಿಸುವ, ಗೌರವಿಸುವ ಜಾನಪದ ಹೆಣ್ಣುಮಗಳು, ತನ್ನ ಹಾಡುಗಳಲ್ಲಿ ಗೆಳೆತನಕ್ಕೂ ಮಹತ್ವವನ್ನು ನೀಡಿದ್ದಾಳೆ.

**ಮನಿಯ ಮುಂದಿನ ಗೆಳತಿ ದನಿಯ ಕೂಡಿಸ ಬಾರ ।**
**ದನಿ ಸುದ್ದ ನಿನ್ನ ಗುಣ ಸುದ್ದ । ಗೆಳತೆವ್ವ ।**
**ಗುಣಕ ಕಟ್ಟೇನಿ ಗೆಳೆತನ ॥ (16)**

**ನಾನು ನನ್ನ ಗೆಳತಿ ನೀರಿಗಿ ಹೋಗಿ ।**
**ಕುಲವ ಕೇಳ್ಯಾರ ಬಹುಮಂದಿ । ಕೇಳಿದರ ।**
**ಕುಲವೆರಡು ನಮ್ಮ ಮನವೊಂದು ॥ (17)**

ಗೆಳೆತನವನ್ನು ಬಗೆ ಬಗೆಯಾಗಿ ಉಲ್ಲೇಖಿಸುವ ಆಧುನಿಕ ಸಮಾಜದ ಮುಂದೆ, ಗರತಿಯ ಮಾತುಗಳು ಸರಳವಾಗಿ ಮನುಮುಟ್ಟುವಂತಿವೆ. "ಗೆಳೆತನ ಕೂಡಿದರ ಗೆಜ್ಜಿ ಜೋಡಿಸಿಧಾಂಗ" ಎನ್ನುವ ಸಾಲು ಆಕೆಯ ಜೀವನಾನುಭವದಿಂದ ಮೂಡಿಬಂದಿದೆ. ಒಳ್ಳೆಯ ಗುಣವನ್ನು ನೋಡಿ ಗೆಳೆತನ ಮಾಡಿರುವುದಾಗಿ ವಿವರಿಸುವ ಆಕೆ, ಗೆಳೆತನವೆನ್ನುವುದು

ಜಾತಿ, ಅಂತಸ್ತುಗಳನ್ನು ಮೀರಿದ ಭಾವನಾತ್ಮಕ ಸಂಬಂಧವೆಂದು ಹೇಳಿರುವುದನ್ನು ನೋಡಿದಾಗ, ಆಕೆಯ ಅನುಭವದ ವ್ಯಾಪ್ತಿ ವಿಶಾಲವಾಗಿತ್ತು ಎಂದು ತಿಳಿಯಬಹುದು.

ಇನ್ನು ಗರತಿ ತನ್ನ ಬದುಕಿನುದ್ದಕ್ಕೂ ಜೊತೆಯಾಗುವ ಸಂಬಂಧಗಳು ಕಾಲ, ಪರಿಸ್ಥಿತಿ-ಮನಸ್ಥಿತಿಗಳ ಪರಿಣಾಮದಿಂದ ಬದಲಾವಣೆ ಕಂಡು, ಸಹಜತೆಯ ಸಮತೋಲನವನ್ನು ತಪ್ಪಿದಾಗ ಆಕೆಗೆ ಆಗುವ ಅನುಭವಗಳನ್ನು ಪದ್ಯ ಕಟ್ಟಿ ಹಾಡಿದ್ದಾಳೆ, ತನ್ನ ನೋವನ್ನು ಹೇಳಿಕೊಂಡಿದ್ದಾಳೆ. ಸಂಬಂಧ ಎಂದಾಕ್ಷಣ ಅದರೊಂದಿಗೆ ಜೊತೆಯಾಗುವ ವಿಶ್ವಾಸ ಮತ್ತು ಪ್ರಾಮಾಣಿಕತೆಯಲ್ಲಿ ಏರುಪೇರಾಗುವುದನ್ನು ಹಲವಾರು ತ್ರಿಪದಿಗಳಲ್ಲಿ ವ್ಯಕ್ತಪಡಿಸಿರುವುದು ಅಂದಿನ, ಇಂದಿನ ಮತ್ತು ಮುಂದಿನ ದಿನಗಳಿಗೂ ಕಿವಿಮಾತಿನಂತೆ ಕಂಡುಬರುತ್ತದೆ.

ತವರು ಎಂದರೆ ತಾಯಿ ಎನ್ನುವ ಮಾತು ಪ್ರತಿಯೊಬ್ಬ ಹೆಣ್ಣಿನ ಅನುಭವದ ಮಾತೆಂಬುದು ತಿಳಿದೇ ಇದೆ. ಆದರೆ ತಾಯಿಯಿಲ್ಲದ ತವರನ್ನು, ತನಗಾದ ನೋವಿನ ಅನುಭವಗಳನ್ನು ಜಾನಪದ ಹೆಣ್ಣುಮಗಳು ಬಗೆ-ಬಗೆಯಾಗಿ ಹಂಚಿಕೊಂಡಿದ್ದಾಳೆ.

**ಹಡೆದಮ್ಮ ಹಾಳೆಂದು ಧಡ ಧಡ ನಾ ಬಂದೆ ।**
**ಒಳಗೆ ಅಣ್ಣಯ್ಯನ ಮಡದೀಯ । ದನಿ ಕೇಳಿ ।**
**ತಲಬಾಗಿಲಿಂದ ತಿರುಗೀದೆ ॥ (18)**

**ಹಡೆದಮ್ಮ ಇದ್ದಾಗ ನಡುಮನಿ ನನಗಿತ್ತ ।**
**ಕಡಗದ ಕೈಯ ಸೊಸಿ ಬಂದು । ನಡೆದಾಗ ।**
**ತುದಿಗಟ್ಟೆ ನನಗೆ ಎರವಾಯ್ತು ॥ (19)**

**ಕಡಗ ಇಲ್ಲದ ಕೈಯ ಕರುಣ ಇಲ್ಲದ ಪುರುಷ ।**
**ಹಡೆದವ್ವನಿಲ್ಲ ತವರೀಗಿ । ಹೋದಾರ ।**
**ಅಡವ್ಯಾಗ ವಸ್ತಿ ಇಳಿದಾಂಗ ॥ (20)**
**(ಅಡವ್ಯಾಗ=ಕಾಡಿನಲ್ಲಿ, ವಸ್ತಿ=ವಾಸ್ತವ್ಯ, ಬಿಡಾರ)**

"ತಾಯಿಯ ಮನಿಗೋಗಿ ಬಾಯಿ ಬೇಡಿದ್ದುಂಡೆ" ಎನ್ನುವ ಸಾಲು ಪ್ರತಿಯೊಬ್ಬ ಹೆಣ್ಣಿನ ಮನದಾಳದ ಮಾತಾಗಿದೆ. ತನ್ನ ಸುಖ-ಸಂತೋಷ ಮತ್ತು ದುಃಖ-ಸಂಕಷ್ಟಗಳಿಗೆ ಸ್ಪಂದಿಸುತ್ತಿದ್ದ ತವರು ಮನೆ, ಪರಿಸ್ಥಿತಿ ಮತ್ತು ಮನಸ್ಥಿತಿಗಳ ಕಾರಣದಿಂದ ಹಲವಾರು ರೀತಿಯಲ್ಲಿ ಬದಲಾವಣೆಗಳನ್ನು ಕಾಣುವುದು ಬಹುತೇಕ ಹೆಣ್ಣುಮಕ್ಕಳ ಅನುಭವಕ್ಕೆ ಬಂದಿರುತ್ತದೆ ಎನ್ನಬಹುದು. ಈ ಸಂವೇದನೆಯನ್ನು ಗರತಿಯ ಹಾಡುಗಳಲ್ಲಿಯೂ ಕಾಣಬಹುದಾಗಿದೆ. ಆಕೆಯ ಅನುಭವದ ಮಾತುಗಳಿಗೆ ಪ್ರತಿಯೊಬ್ಬ ಹೆಣ್ಣುಮಗಳು ಸ್ಪಂದಿಸುವಂತಾಗುತ್ತದೆ.

**ಅಣ್ಣನ ಹೆಂಡತಿ ಕಣ್ಣೀಗಿ ಒಳ್ಳೆವಳು ।**
**ಸುಣ್ಣದ ನೀರ ಒಲಿ ಮುಂದ । ಇಟಕೊಂಡು ।**
**ಎಮ್ಮಿ ಹಾಲೆಂದ ಬಡಸ್ಯಾಳ ॥ (21)**

**ಬಡತನ ಬಂದರ ಬಾಗಿಕೊಂಡಿರುವೇನೋ ।**
**ಬಾರೆನಣ್ಣಯ್ಯ ನಿನ ಮನಿಗೆ । ನಿನ ಮಡದಿ ।**
**ಏಳಲ ಮಾಡಿ ನುಡಿದಾಳ ॥ (22)**
(ಏಳಲ=ತಿರಸ್ಕಾರ)

**ಗಂಜೀಯ ಕುಡಿದರು ಗಂಡನ ಮನಿಲೇಸ ।**
**ಅಂದಣದ ಮ್ಯಾಲ ಚವುರವ । ಸಾರಿದರ ।**
**ಹಂಗೀನ ತವರುಮನಿ ಸಾಕ । (23)**

**ಜಾನಪದ ಹೆಣ್ಣುಮಗಳ ಮದುವೆ, ಅತ್ತೆಯ ಮನೆಯ ಜೀವನ**

ತವರುಮನೆಯಲ್ಲಿ ಮುದ್ದಿನಿಂದ ಬೆಳೆದ ಮಗಳನ್ನು ಮದುವೆ ಮಾಡಿ ಪರರ ಮನೆಗೆ ಕಳಿಸಿಕೊಡುವುದು ನೋವಿನ ವಿಷಯವೇ ಆಗಿದ್ದರೂ, ಹುಟ್ಟುವ ಪ್ರತಿ ಹೆಣ್ಣು ಮಗು ಬೆಳೆದು ದೊಡ್ಡವಳಾಗಿ, ಮದುವೆ ಮಾಡಿಕೊಂಡು, ಹುಟ್ಟಿ ಬೆಳೆದ ತವರನ್ನು ತೊರೆದು ಪತಿಯೊಂದಿಗೆ ಸಂಸಾರ ನಡೆಸಲು ಅತ್ತೆಯ ಮನೆಗೆ ಹೋಗಬೇಕೆಂಬುವುದು ಸಮಾಜದಲ್ಲಿ ಹಿಂದಿನಿಂದಲೂ ನಡೆದು ಬಂದಿರುವ ಪದ್ಧತಿ. ಪ್ರೀತಿಯಿಂದ ಬೆಳೆಸಿದ ಮಗಳನ್ನು ಮದುವೆ ಮಾಡಿಕೊಡುವ ತಂದೆ-ತಾಯಿ ಕಣ್ಣೀರಿಟ್ಟು ವೇದನೆಪಡುವುದನ್ನು ಗರತಿ ತನ್ನ ಪದಗಳಲ್ಲಿ ವಿವರಿಸಿದ್ದಾಳೆ.

**ಹೆಣ್ಣು ಹಡೆಯಲಿ ಬ್ಯಾಡ ಹೆರವರಿಗೆ ಕೊಡಬ್ಯಾಡ ।**
**ಹೆಣ್ಣು ಹೋಗಾಗ ಅಳಬ್ಯಾಡ । ಹಡದವ್ವ ।**
**ಸಿಟ್ಟಾಗಿ ಶಿವಗ ಬೈಬ್ಯಾಡ ॥ (24)**

**ಹೆಣ್ಣುಮಕ್ಕಳ ಖಳುವಿ ಕಣ್ಣೀಗಿ ನೀರ ತಂದು ।**
**ಸಣ್ಣ ಸೆಲ್ಲೆದಲೆ ಮುಸುಕಾಕಿ । ಹಡೆದಪ್ಪ ।**
**ಹೆಣ್ಣು ಸಾಕೆಂದ ಜಲುಮಾಕ ॥ (25)**
(ಖಳುವಿ= ಕಳುಹಿಸಿ, ಸೆಲ್ಲೆ = ಶಲ್ಯ, ಜಲುಮ = ಜನ್ಮ)

ತವರನ್ನು, ಹೆತ್ತ ತಂದೆ-ತಾಯಿ, ಒಡಹುಟ್ಟಿದವರನ್ನು ಬಿಟ್ಟು ಹೊಸದೊಂದು ವಾತಾವರಣಕ್ಕೆ ಹೊಂದಿಕೊಂಡು ಬದುಕನ್ನು ನಡೆಸುವ ಪ್ರಯತ್ನದಲ್ಲಿಯೂ ತವರು ಮನೆಗೆ ಕೀರ್ತಿ ತರುವಂತೆ ಬಾಳಬೇಕೆನ್ನುವ ಆಶಯ ಗರತಿಯದಾಗಿತ್ತು ಎನ್ನುವುದನ್ನು ಆಕೆ ಬಹಳ ಸರಳವಾಗಿ ಹೇಳುತ್ತಾಳೆ.

**ತಾವರಿಯ ಗಿಡ ಹುಟ್ಟಿ ದೇವರಿಗೆ ನೆರಳಾದೆ ।**
**ನಾ ಹುಟ್ಟಿ ಮನೆಗೆ ಎರವಾದೆ । ಹಡದವ್ವ ।**
**ನೀ ಕೊಟ್ಟ ಮನೆಗೆ ಹೆಸರಾದೆ ॥ (26)**

ಇನ್ನು ಆಕೆ ಗಂಡನ ಮನೆಯಲ್ಲಿ ಹೊಂದಿಕೊಂಡು ಬಾಳಬೇಕೆಂಬ ಆಶಯದಲ್ಲಿದ್ದಾಗ, ಆಕೆ ಅನುಭವಿಸುವ ವಿಧ ವಿಧವಾದ ಕಷ್ಟ-ಕೋಟಲೆಗಳನ್ನು, ನೋವುಗಳನ್ನು ಹಾಡುಗಳಲ್ಲಿ ವ್ಯಕ್ತಪಡಿಸಿ ಹೇಗೆಲ್ಲ ತನ್ನ ಬದುಕನ್ನು ನಡೆಸುತ್ತಿದ್ದಳು ಎನ್ನುವುದನ್ನು ಹಾಡುಗಳಲ್ಲಿ ಹೇಳಿಕೊಳ್ಳುತ್ತಾಳೆ. "ಅತ್ತಿಮನಿ ಬೆಳದಿಂಗಳು ನಮಗೆ ಬಿಸಿಲಾಯ್ತು" ಎನ್ನುವ ಮಾತಿನಲ್ಲಿಯೇ ಆಕೆ ಅತ್ತೆಯ ಮನೆಯಲ್ಲಿ ಅನುಭವಿಸಿದ ನೋವನ್ನು ಊಹಿಸಬಹುದು. ತವರುಮನೆಯಲ್ಲಿ ಬಹಳ ಅಕ್ಕರೆಯಿಂದ ಬೆಳೆದ ಆಕೆಗೆ ಅತ್ತೆಯ ಮನೆಯಲ್ಲಿ ಆಭರಣವಿಟ್ಟುಕೊಂಡು ಸಿಂಗರಿಸಿಕೊಳ್ಳುವ ಸುಖದ ಬದುಕು ಸಿಗದೇ, ಕಷ್ಟಪಡುವಂತಹ ಚಿಂತೆಯ ಬದುಕು ಸಿಕ್ಕಿದೆಯೆಂದು ನೋವುಪಟ್ಟುಕೊಳ್ಳುತ್ತಾಳೆ.

**ಚಿಂತಾಕು ಇಡಲಿಲ್ಲ ಚಿಂತೆ ಬಿಟ್ಟಿರಲಿಲ್ಲ ।**
**ಎಂಥಲ್ಲಿ ಕೊಟ್ಟೆ ಹಡೆದಮ್ಮ । ನಡುಮನಿ ।**
**ಜಂತಿ ಜರದಂಗ ಜರದೇನ ॥ (27)**
(ಚಿಂತಾಕು= ಅಡ್ಡಿಗೆ, ಕೊರಳಲ್ಲಿ ಧರಿಸುವ ಆಭರಣ, ಜಂತಿ=ಮನೆಗೆ ಆಧಾರವಾಗಿ ಹಾಕಿದ ಅಡ್ಡ ತೊಲೆಗಳು)

**ಅತ್ತಿಯ ಮನಿಯಾಗಿ ಅರವತ್ತು ಗಂಗಾಳ ।**
**ಬೆಳಗತೇನತ್ತಿ ಬೈಬ್ಯಾಡ । ತವರವರು ।**
**ಸರಮುತ್ತ ಮಾಡಿ ಸಲವ್ಯಾರ ॥ (28)**
(ಗಂಗಾಳ = ಊಟದ ತಟ್ಟೆ)

ಹಾಗಾದರೆ, ಮದುವೆ ಮಾಡಿಕೊಂಡು ಅತ್ತೆಯ ಮನೆಗೆ ಬರುವ ಗರತಿಗೆ ಬರೀ ಕಷ್ಟಗಳಿದ್ದವೇ? ಇಲ್ಲವಲ್ಲ... ಅಲ್ಲಿ ಪತಿಯ ಪ್ರೀತಿ, ಅಕ್ಕರೆ, ಹುಸಿಮುನಿಸು ಇತ್ತು ಎನ್ನುವುದು ಆಕೆ ಕಟ್ಟಿ ಹಾಡಿದ ಪದ್ಯಗಳಲ್ಲಿಯೇ ಎದ್ದುಕಾಣುತ್ತದೆ. ಕೂಲಿ ಮಾಡಿಕೊಂಡು, ಕಷ್ಟದ ಜೀವನ ನಡೆಸುವವನಾದರೂ, ಪತಿ ಎಂದರೆ ಚಿನ್ನದಂತೆ ಮನೆಗೆ ಆಸ್ತಿ ಎನ್ನುವ ಅಭಿಮಾನ ಆಕೆಯಲ್ಲಿತ್ತು.

**ಕೂಲಿ ಮಾಡಿದರೇನ ಕೋರಿ ಹೊತ್ತರೇನ ।**
**ನಮಗ ನಮ ರಾಯ ಒಡವೇನ ।**
**ಬಂಗಾರ । ಮಾಲ ಇದ್ದಾಂಗ ಮನಿಯಾಗ ॥ (29)**

**ಹಾಸೀಗಿ ಹಾಸೆಂದಾ ಮಲ್ಲೀಗೀ ಮುಡಿಯೆಂದಾ ।**
**ಬ್ಯಾಸತ್ತರ ಮಡದಿ ಮಲಗೆಂದಾ । ನನ ರಾಯಾ ।**
**ತನ ನೋಡಿ ತವರ ಮರಿಯೆಂದಾ ॥ (30)**

**ಗಂಡಹೆಂಡಿರ ಜಗಳ ಗಂಧ ತೀಡೀಧಾಂಗ ।**
**ನಿಂಗಕ ನೀರು ಎರೆದಾಂಗ । ಹಿರಿಹೊಳೆಯ ।**
**ಗಂಗವ್ವ ಸಾಗಿ ಹರಿದಂಗ ॥ (31)**
(ನಿಂಗ=ಶಿವಲಿಂಗ, ಎರೆ=ಸುರಿಯುವುದು, ಅಭಿಷೇಕ)

ಹೀಗೆ ಕಷ್ಟವೋ–ಸುಖವೋ ಪತಿಯೊಂದಿಗೆ ಹೊಂದಿ ನಡೆಯಬೇಕು ಎನ್ನುವ ಗರತಿಗೆ ವೈಧವ್ಯವೆನ್ನುವ ಪರಿಸ್ಥಿತಿ ಒದಗಿದಾಗ ಆಕೆ ಅನುಭವಿಸುವ ನೋವನ್ನೂ ಹಾಡುಗಳಲ್ಲಿ ಚಿತ್ರಿಸಿದ್ದಾಳೆ.

**ಮುಗ್ಗ ಜ್ವಾಳಧಂಗ ಕಗ್ಗ ಬೆಳಸಿನ ಹಂಗ ।**
**ಹಗ್ಗಿಲ್ಲ ಭಾವಿಕೊಡಧಾಂಗ । ಪತಿರಾಯ ।**
**ನೀ ಹೋದ ಛಣಕ ನನ ಜೀವ ॥ (32)**
(ಮುಗ್ಗ = ಮುಗ್ಗಲು, ಜ್ವಾಳ = ಜೋಳ, ಛಣ = ಕ್ಷಣ)

ಅಂದಿನ ಸಮಾಜದಲ್ಲಿ ಗೃಹಿಣಿಯಾಗಿ, ಪತಿಯ ಆಸರೆಯಲ್ಲಿ ಜೀವನ ನಡೆಸುತ್ತಿದ್ದ ಜಾನಪದ ಹೆಣ್ಣುಮಗಳು, ಪತಿಯನ್ನು ಕಳೆದುಕೊಂಡು ನಡೆಸುವ ತನ್ನ ಜೀವನ ಅರ್ಥಹೀನವಾಗಿತ್ತು ಎನ್ನುತ್ತಾಳೆ. ಮುಗ್ಗಲು ಹಿಡಿದ ಜೋಳ ಉಪಯೋಗಕ್ಕೆ ಬರದಂತೆ, ನೀರು ಸೇದಲು ಹಗ್ಗವಿರದೇ ಬರಿಯ ಕೊಡವಿದ್ದಾಗ ಬಾವಿಯಿಂದ ನೀರು ತೆಗೆದುಕೊಳ್ಳಲು ಆಗದ ಪರಿಸ್ಥಿತಿಯಂತೆ, ಪತಿಯನ್ನು ಕಳೆದುಕೊಂಡ ಕ್ಷಣದಿಂದ ತನ್ನ ಬದುಕೂ ನಿರುಪಯೋಗಿಯಾಗಿ ಅರ್ಥ ಕಳೆದುಕೊಂಡಿದೆ ಎಂದು ನಿತ್ಯ ಬದುಕಿನ ವಸ್ತುಗಳ ಹೋಲಿಕೆಯನ್ನು ಕೊಟ್ಟು ತನ್ನ ನೋವನ್ನು ಹೇಳಿಕೊಂಡಿದ್ದಾಳೆ.

'ಅತ್ತೆಗೊಂದು ಕಾಲ–ಸೊಸೆಗೊಂದು ಕಾಲ' ಎನ್ನುವಂತೆ, ಹೆಣ್ಣುಮಗಳು ಮುಂದೊಂದು ದಿನ ವಯಸ್ಸಾಗಿ, ಶಕ್ತಿಗುಂದಿ ಸೊಸೆಯ ಸುಪರ್ದಿಯಲ್ಲಿ ಜೀವನ ಕಳೆಯಬೇಕಾದಾಗ, ಮಗ ತನ್ನಿಂದ ದೂರವಾದ ಎಂದು ಸೊಸೆಯನ್ನು ದೂಷಿಸುವುದೂ ಗರತಿಯ ಹಾಡುಗಳಲ್ಲಿ ಮೂಡಿಬಂದಿದೆ.

**ಮಗ ನಿನ್ನ ಹಡಿಲಾಕ ಮುಗಿಲ ಮುಟ್ಟಿತ ಜೀವ ।**
**ಮದನಾರಿ ನನ್ನ ಸೊಸಿ ಬಂದು । ನಡಿವಾಗ ।**
**ಮಗ ನಿನ್ನ ಮನವು ಎರಡಾಗಿ ॥ (33)**

**ಸೊಸಿಯು ಬರತಾಳಂತ ಖುಸಿ ಭಾಳ ಮನದಾಗ।**
**ಸೊಸಿ ಬಂದು ಮಗನ ಕಸಗೊಂಡು। ಬಾಳ್ವಾಗ।**
**ಮುಗಿಲೀಗಿ ಬಾಯ ತಗದಾಳ॥ (34)**

### ಗರತಿ ಮತ್ತು ತಾಯ್ತನ

ಜಾನಪದ ಸಾಹಿತ್ಯದಲ್ಲಿ ತಾಯ್ತನಕ್ಕೆ ಮಹತ್ವದ ಸ್ಥಾನವಿದೆ. ತಾಯಿ ಎಂದೊಡನೆ ಮಕ್ಕಳಿಗೆ ಮಮತೆ ತೋರುವ, ಧೈರ್ಯ ತುಂಬುವ, ಸಹನೆ ತುಂಬಿರುವ ತ್ಯಾಗಮಯಿ ಜೀವ ಎನ್ನುವ ಭಾವನೆ ಎಲ್ಲರ ಮನದಲ್ಲಿ ಮೂಡುತ್ತದೆ. ಗ್ರಾಮೀಣ ಪರಿಸರದಲ್ಲಿ ಮನೆಗೆ ಸೀಮಿತವಾಗಿದ್ದುಕೊಂಡು, ಕುಟುಂಬ ನಿರ್ವಹಣೆಯಲ್ಲಿ ಬದುಕಿನ ಸಾರ್ಥಕತೆಯನ್ನು ಕಾಣುತ್ತಿದ್ದ ಜಾನಪದ ಹೆಣ್ಣುಮಗಳಿಗೆ ತನ್ನ ಮಕ್ಕಳೆಂದರೆ ಅತಿಯಾದ ಪ್ರೀತಿ. ಮಕ್ಕಳ ಆಟ, ಮಾತು, ನಗು ಆಕೆಗೆ ಆಪ್ತವಾಗಿದ್ದು, ಮಮತೆ-ವಾತ್ಸಲ್ಯಗಳನ್ನು ವ್ಯಕ್ತಪಡಿಸುವುದು ಆತ್ಮಕ್ಕೆ ತೃಪ್ತಿಯನ್ನು ನೀಡುವ ವಿಷಯವಾಗಿತ್ತು ಎನ್ನುವುದು ಗರತಿಯ ಹಾಡುಗಳಲ್ಲಿ ಕಂಡುಬರುತ್ತದೆ. ಬದುಕಿಗೊಂದು ಅರ್ಥಕೊಡುವ ತಾಯ್ತನ ತನಗೆ ಸಿಗಲಿ ಎನ್ನುವ ಪ್ರಾರ್ಥನೆ, ಹರಕೆ ಅವಳದಾಗಿತ್ತು.

**ವಿಠಲನ ಗುಡಿಯಾಗ ಎಷ್ಟೊತ್ತು ನಿಂದಿರಲೆ।**
**ಬಟ್ಟಕುಂಕುಮ ಬೆವತಾವ। ವಿಠಲ।**
**ಟೊಪ್ಪೀಗಿ ಮಗನ ದಯಮಾಡೋ॥ (35)**

**ಹಸುಗೂಸು ಹುಟ್ಟಲಿ ಹೊಸಪ್ಯಾಟಿ ಕಟ್ಟಲಿ।**
**ರಸಬಾಳಿ ಕಬ್ಬು ಬೆಳೆಯಲಿ। ನಮ್ಮೂರ।**
**ಬಸವನ ತೇರು ಎಳೆಯಲಿ॥ (36)**

"ಆಡು ಮಕ್ಕಳ ಕಂಡು ಬೇಡಿತ್ತ ನನ ಜೀವ" ಎಂದು ಜಾನಪದ ಹೆಣ್ಣುಮಗಳು ತಾಯ್ತನವನ್ನು ಬಯಸಿ, ಮಗುವಿಗಾಗಿ ಹೊತ್ತ ಹರಕೆ ಫಲಿಸಿದ ಸಂಭ್ರಮವನ್ನು, ಬಸಿರು-ಬಾಣಂತನದ ಮಧುರವಾದ ಭಾವನೆಗಳನ್ನು ಪದ್ಯವಾಗಿ ಹಾಡುತ್ತ ತನ್ನ ಸಂತೋಷವನ್ನು ಹಂಚಿಕೊಂಡಿದ್ದಾಳೆ.

**ಬಸಿರ ಬಯಕೆ ಚಂದ ಹಸಿರು ಕುಪ್ಪಸ ಚಂದ।**
**ನಸುಗೆಂಪಿನವಳ ನಗೆ ಚಂದ। ಅಕ್ಕಯ್ಯ।**
**ಬಸುರಾದರೆ ಚಂದ ಬಳಗಕ॥ (37)**

**ದೇವರ ಮನಿಯಾಗ ಜೋಡೆರಡು ದೀವಿಗಿ।**
**ದ್ವಾರೇದ ಕೈಯ ತೆಲಗುಂಬ। ಇಟಗೊಂಡು।**
**ಕಂದನ ಹಡೆದು ಮಲಗ್ಯಾಳ॥ (38)**
(ತೆಲಗುಂಬ = ತಲೆದಿಂಬು)

**ತೊಟ್ಟಿಲ ಹೊತಗೊಂಡು ತವರುಬಣ್ಣ ಉಟ್ಕೊಂಡು ।**
**ಅಪ್ಪ ಕೊಟ್ಟೆಮ್ಮೆ ಹೊಡಕೊಂಡು । ತೌರೂರ ।**
**ತಿಟ್ಟತ್ತಿ ತಿರುಗಿ ನೋಡ್ಯಾಳೋ ॥ (39)** (ತಿಟ್ಟು = ದಿಬ್ಬ)

ಹೆರಿಗೆಗೆಂದು ತವರಿಗೆ ಬಂದ ಹೆಣ್ಣುಮಗಳು, ಮಗುವನ್ನು ಕರೆದುಕೊಂಡು ಗಂಡನ ಮನೆಗೆ ಹೋಗುವಾಗಿನ ಸುಂದರ ಚಿತ್ರಣ ಈ ಪದ್ಯದಲ್ಲಿ ಮೂಡಿಬಂದಿದೆ. ತೊಟ್ಟಿಲನ್ನು ಹೊತ್ತುಕೊಂಡು, ತವರಿನವರು ಮಡಿಲು ತುಂಬಿದ (ಉಡುಗೊರೆಯಾಗಿ ಕೊಟ್ಟ) ಸೀರೆಯನ್ನು ಉಟ್ಟುಕೊಂಡು, ಮಗುವಿರುವ ಮನೆಯಲ್ಲಿ ಹಾಲು-ಮೊಸರು, ಬೆಣ್ಣೆ ಸಮೃದ್ಧಿಯಾಗಿರಬೇಕೆಂದು ತಂದೆ ಕೊಟ್ಟಿರುವ ಎಮ್ಮೆಯನ್ನು ಜೊತೆಯಾಗಿಸಿಕೊಂಡು, ಗಂಡನ ಮನೆಯ ಕಡೆಗೆ ಪ್ರಯಾಣ ಬೆಳೆಸುವ ಗರತಿ, ತವರಿನೊಂದಿಗಿನ ಅನುಬಂಧವನ್ನು ನೆನೆಯುತ್ತ ದಾರಿಯಲ್ಲಿನ ದಿಬ್ಬವನ್ನು ಹತ್ತಿ ಮತ್ತೆ, ಮತ್ತೆ ತವರುಮನೆಯನ್ನು ನೋಡಿ ಕಣ್ಣು ತುಂಬಿಕೊಳ್ಳುವಳು ಎನ್ನುವ ಭಾವನಾತ್ಮಕ ಚಿತ್ರಣ ಈ ಪದ್ಯದಲ್ಲಿದೆ.

ಮಕ್ಕಳನ್ನು ಪಡೆದ ಗರತಿ ತನ್ನ ನೋವನ್ನು ಮರೆತು ಮಕ್ಕಳನ್ನು ಮುದ್ದಿಸುತ್ತ ಲಾಲಿ ಹಾಡುತ್ತಿದ್ದಳು, ಜೋಗುಳದ ಪದಗಳಲ್ಲಿ ಮಗುವನ್ನು ವರ್ಣಿಸಿ ಸಂತೋಷಪಡುತ್ತಿದ್ದಳು.

**ಅತ್ತರ ಅಳಲವ್ವ ಈ ಕೂಸು ನನಗಿರಲಿ ।**
**ಕೆಟ್ಟರ ಕೆಡಲಿ ಮನಿಗೆಲಸ । ಕಂದನಂಥ ।**
**ಮಕ್ಕಳಿರಲವ್ವ ಮನಿತುಂಬ (40)**

**ಹಾಲ ಬೇಡ್ಯತ್ತಾನ ಕೋಲು ಬೇಡಿ ಕುಣದಾನ ।**
**ಮಸರ ಬೇಡಿ ಕೆಸರು ತುಳಿದಾನ । ಕಂದಯ್ಯನ ।**
**ಕುಸುಲದ ಗೆಜ್ಜಿ ಕೆಸರಾಯ್ತು (41)**

ಅಂದಿನ ಸಮಾಜದ ಹಲವರ ಮನಸ್ಥಿತಿಯಂತೆ ಜಾನಪದ ಹೆಣ್ಣುಮಗಳಿಗೆ ತನಗೆ ಹುಟ್ಟುವ ಮಗು ಗಂಡಾಗಿರಲೇಬೇಕೆಂಬ ಹಂಬಲವಿರಲಿಲ್ಲ. "ನನ್ನ ಹೊಟ್ಟೇಲೊಂದು ಚಿನ್ನ ಹುಟ್ಟಿತು ತಾಯಿ" ಎನ್ನುವ ಮಾತು ಆಕೆಯದಾಗಿತ್ತು.

**ಹೆಣ್ಣು ಹುಟ್ಯಾದಂತ ಹೇಳಿ ಖಳುವಲಿ ಬ್ಯಾಡ ।**
**ಹೆಣ್ಣೆಂದರವರು ಹೆದರ್ಯಾರ । ಕಂದವ್ವ ।**
**ಹೆಣ್ಣಲ್ಲ ನಮಗ ರವಿಚಿನ್ನ ॥ (42)**

ಇನ್ನು ಮಕ್ಕಳನ್ನು ಪಡೆದರಷ್ಟೇ ಜೀವನ ಸಾರ್ಥಕವೆನ್ನುತ್ತಿದ್ದ ಸಮಾಜದಲ್ಲಿ, ಮಕ್ಕಳಿಲ್ಲದೇ ಬಂಜೆತನವನ್ನು ಅನುಭವಿಸುವ ಗರತಿ ತನ್ನ ನೋವನ್ನು ಪದ್ಯಗಳಲ್ಲಿ ವ್ಯಕ್ತಪಡಿಸುತ್ತಾಳೆ.

**ಬಾಲಕರಿಲ್ಲದ ಬಾಲಿದ್ಯಾತರ ಜನ್ಮ ।**
**ಬಾಡೀಗಿ ಎತ್ತು ದುಡಿದಂಗ । ಬಾಳೆಲೆಯ ।**
**ಹಾಸ್ಯುಂಡು ಬೀಸಿ ಒಗೆದಂಗ ॥ (43)** (ಬಾಲಿ= ಬಾಲೆ, ಹುಡುಗಿ)

**ಹೆಣ್ಣು ಆಗುವುದಕಿಂತ ಮಣ್ಣು ಆಗುದು ಲೇಸು।**
**ಮಣ್ಣೀನ ಮ್ಯಾಲ ಮರವಾಗಿ। ಇದ್ದರ।**
**ಬಂದವರಿಗೆಲ್ಲ ನೆರಳವ್ವ। (44)**

ಬಂಜೆತನ ಎನ್ನುವುದು ಹೆಣ್ಣಿಗೆ ಅಂಟಿದ ಶಾಪವೆಂದು ಭಾವಿಸುತ್ತಿದ್ದ ಗ್ರಾಮೀಣ ಸಮಾಜದಲ್ಲಿ, ಮಕ್ಕಳಿಲ್ಲದ ಹೆಣ್ಣು ನಿಂದನೆಗೆ ಗುರಿಯಾಗುತ್ತಿದುದು ಗರತಿಯ ಹಾಡುಗಳಲ್ಲಿ ಕಂಡುಬರುತ್ತದೆ. ಮಕ್ಕಳಿಲ್ಲದ ಬದುಕು ಬಾಡಿಗೆಯ ಎತ್ತು ದುಡಿದಂತೆ, ಹಾಸಿ ಉಂಡು ಎಸೆಯುವ ಬಾಳೆಯೆಲೆಯಂತೆ ಎನ್ನುವ ಮಾತು ಆಕೆಯ ವೇದನೆಯನ್ನು ಗಟ್ಟಿಯಾಗಿ ವ್ಯಕ್ತಪಡಿಸುತ್ತದೆ. ಮಕ್ಕಳಿಲ್ಲದ ಹೆಣ್ಣುಮಗಳು ಎನಿಸಿಕೊಳ್ಳುವುದಕ್ಕಿಂತ, ಮಣ್ಣಾಗಿರುವುದು ಒಳಿತೆಂದೂ, ಆ ಮಣ್ಣಿನಲ್ಲಿ ಗಿಡವೊಂದು ಬೆಳೆದು ನೆರಳು ನೀಡುವಂತಾಗಬೇಕು ಎನ್ನುವ ಮಾತು ಆಕೆಯ ನೋವಿನ ಆಳವನ್ನು ತಿಳಿಸುತ್ತದೆ. ಮಕ್ಕಳಿಲ್ಲದಿರುವುದು ಸವತಿಯನ್ನು ತರುವ ಕಾರಣವಾಗುತ್ತದೆ ಎಂದೂ ಆಕೆ ನೊಂದುಕೊಳ್ಳುತ್ತಾಳೆ.

**ಅಂಗೀಯ ಮ್ಯಾಲಂಗಿ ಛಂದೇನೋ ನನ ರಾಯ।**
**ರಂಬಿ ಮ್ಯಾಲ ರಂಬಿ ಪ್ರತಿರಂಬಿ। ಬಂದರ।**
**ಛಂದೇನೋ ರಾಯ ಮನಿಯಾಗ ॥ (45)**

ಹೇಗೆ ಒಂದು ಪೋಷಾಕಿನ ಮೇಲೆ ಮತ್ತೊಂದು ಪೋಷಾಕನ್ನು ಧರಿಸಿದರೆ ಅಂದಗೆಡುವುದೋ ಹಾಗೆ ಸತಿಯಾಗಿ ತಾನಿರುವಾಗ ಸವತಿಯನ್ನು ತರುವುದು ಮನೆಗೆ ಲಕ್ಷಣವಲ್ಲ ಎಂದು ಗರತಿ ಪತಿಗೆ ಕಿವಿಮಾತು ಹೇಳುತ್ತಾಳೆ.

**ಗರತಿಯ ಬದುಕಿನಲ್ಲಿ ಹಾಸ್ಯ, ಸರಸ–ವಿರಸ ಮತ್ತು ಮನಸ್ತಾಪ**

ಗರತಿಯ ಬದುಕಿನಲ್ಲಿ ಮಕ್ಕಳ ಲಾಲನೆ–ಪಾಲನೆ, ಕುಟುಂಬ ನಿರ್ವಹಣೆ, ಕಷ್ಟ–ಕೋಟಲೆಗಳಲ್ಲದೇ ಹಾಸ್ಯವಿತ್ತು, ಬುದ್ಧಿಮಾತುಗಳಿದ್ದವು ಮತ್ತು ಸರಸ–ವಿರಸಗಳೆಂಬ ಹಲವಾರು ಭಾವಗಳು ಇದ್ದವು.

**ಕುಂಬಾರನಿಗ್ಯಾಕೊ ಗೊಂಬೆಮಾಟದ ಹೆಣ್ಣು।**
**ತುಂಬೆಂದ ಮಣ್ಣ ತುಳಿಯೆಂದ। ಮನೆಮನೆಗೆ।**
**ಹೊತ್ತು ಮಾರೆಂದ ಹೊಸ ಮಡಕೆ ॥ (46)**

ಕುಂಬಾರನಿಗೆ ಸುಂದರವಾದ ಹೆಂಡತಿ ಏಕಿರಬೇಕು? ಮಣ್ಣು ತುಳಿದು, ಮಡಕೆ ಮಾಡಿ, ಮನೆ–ಮನೆಗೆ ಮಾರಲು ಕಳಿಸುತ್ತಾನೆಂದು ಗರತಿ ತಿಳಿಹಾಸ್ಯ ಮಾಡುತ್ತಾಳೆ.

**ತಾಯಿ ಮಕ್ಕಳ ಝುಗಳ ನ್ಯಾಯ ಮಾಡವರ್ಯಾರ।**
**ವಾಲೀಗಿ ಮುತ್ತ ವಜನೇನ। ಹಡದಮ್ಮ।**
**ನಾ ಆಡಿದ ಮಾತ ನಿಜವೇನ। (47)**
(ಝುಗಳ = ಜಗಳ, ವಾಲೆ= ಓಲೆ, ವಜನ = ಭಾರ)

ತಾಯಿ–ಮಗಳ ನಡುವಿನ ಮನಸ್ತಾಪದ ಬಗ್ಗೆ ಹೇಳುತ್ತ, ಓಲೆಗೆ ಮುತ್ತು ಭಾರವಾಗದಂತೆ ತನ್ನ ಮಾತಿಗೆ ತಾಯಿ ಕೋಪಿಸಿಕೊಳ್ಳಬಾರದೆಂದು ಕೇಳಿಕೊಳ್ಳುತ್ತಾಳೆ.

**ಕಡಗದ ನನ ಕೈಯ ಬಿಡು ನನ್ನ ಮಾರಯಾ ।**
**ಕದನ ಬಂದಾವು ನಮನಿಮಗ । ವೀಳ್ಯವ ।**
**ಮಡಚಾಗ ಕಂಡ ನಿಮ ಮನವ ॥ (48)**

ಸತಿ–ಪತಿಯ ನಡುವಿನ ಸರಸವನ್ನು ಈ ಪದ್ಯದಲ್ಲಿ ಕಾಣಬಹುದು.

**ಚೆಲುವಿ ಚೆಲುವಿಯಂತ ಅತಿ ಬಾಯಿ ಬಿಡಬ್ಯಾಡ ।**
**ಚೆಲುವಿದ್ದರೇನು ಗುಣವಿಲ್ಲ । ಕೊಳದನೀರು ।**
**ತಿಳಿಯಾಗಿದ್ದರೂ ರುಚಿಯಿಲ್ಲ ॥ (49)**

ತಿಳಿಯಾಗಿದ್ದರೂ ರುಚಿಯಿರದ ಕೊಳದ ನೀರಿನಂತೆ, ಜನರನ್ನು ತನ್ನತ್ತ ಸೆಳೆಯುವ ಬಾಹ್ಯ ಸೌಂದರ್ಯಕ್ಕಿಂತ ಒಳ್ಳೆಯ ಗುಣವನ್ನು ಹೊಂದಿದ ವ್ಯಕ್ತಿಯ ಮನಸ್ಸು ಸುಂದರವಾಗಿರುತ್ತದೆ ಎನ್ನುವ ಮಾತನ್ನು ಗರತಿ ಹೇಳುತ್ತಾಳೆ.

## ಗರತಿಯ ಹಾಡಿನಲ್ಲಿ ಕಂಡುಬರುವ ಪೌರಾಣಿಕ ಮತ್ತು ಐತಿಹಾಸಿಕ ಚಿತ್ರಣಗಳು

ಅಕ್ಷರ ಜ್ಞಾನವಿಲ್ಲದಿದ್ದರೂ ಇನ್ನೊಬ್ಬರಿಂದ ಕೇಳಿ ತಿಳಿದ ಕಥೆಗಳಿಂದ ಪೌರಾಣಿಕ, ಐತಿಹಾಸಿಕ ಮಾಹಿತಿಯನ್ನು, ವರ್ಣನೆಯನ್ನು ಗರತಿ ತನ್ನ ಜೀವನಾನುಭವಗಳಿಗೆ ಹೋಲಿಸಿ ಪದ್ಯಗಳನ್ನು ರಚಿಸಿದ್ದನ್ನು ನೋಡಿದಾಗ ಆಕೆಯ ಅನುಭವದ ಅರಿವಿನ ವಿಸ್ತಾರ ತಿಳಿಯುತ್ತದೆ.

**ಹಣೆಯ ಬರಹದ ಗೆರೆಯು ಹರೆದರು ತಪ್ಪದು ।**
**ಹರಿಚಂದರಾಯ ಸುಡಗಾಡ । ಸೇರಿದರ ।**
**ಇದಿಯವನ ಬೆನ್ನ ಬಿಡಲಿಲ್ಲ ॥ (50)**
**(ಹರಿಚಂದರಾಯ = ಸತ್ಯ ಹರಿಶ್ಚಂದ್ರ, ಸುಡಗಾಡು = ಸ್ಮಶಾನ, ಇದಿ = ವಿಧಿ)**

ಹಣೆಯ ಬರಹವನ್ನು ಯಾರಿಂದಲು ಬದಲಿಸಲು ಸಾಧ್ಯವಿಲ್ಲವೆಂದು ತಿಳಿದುಕೊಳ್ಳುವ ಗರತಿ, ಸತ್ಯ ಹರಿಶ್ಚಂದ್ರನನ್ನು ತನ್ನ ಪದ್ಯದಲ್ಲಿ ಉಲ್ಲೇಖಿಸುತ್ತಾಳೆ.

**ಸೀತಾನ ಅಭಿಮಾನ ಬಾಲ ಹನುಮನು ಕಾಯ್ದ ।**
**ದ್ರೌಪದಿಯ ಮಾನ ಹರಿ ಕಾಯ್ದ । ಪದ್ಮಾವತಿ ।**
**ನೀ ಕಾಯೆ ನನ್ನ ಅಭಿಮಾನ ॥ (51)**

**ಬೆಟ್ಟದ ಮೇಲವ್ವೆ ಬಿಡುಮುಡಿ ಚಾಮುಂಡಿ ।**
**ತೊಟ್ಟವ್ವೆ ಹುಲಿಯ ಚರುಮಾವ । ಚಾಮುಂಡಿ ।**
**ಮೆಟ್ಟಿ ನಿಂತವ್ವೆ ರಣದಲ್ಲಿ ॥ (52)**

ಗರತಿಯ ಜ್ಞಾನ ಆಕೆ ಕೇಳಿ ತಿಳಿದಿದ್ದ ಪೌರಾಣಿಕ ಕಥೆಗಳಿಗಷ್ಟೇ ಸೀಮಿತವಾಗಿರಲಿಲ್ಲ. ಅಂದಿನ ಕಾಲದ ಐತಿಹ್ಯವೂ ಜಾನಪದ ಹೆಣ್ಣುಮಗಳಿಗೆ ತಿಳಿದಿತ್ತು ಎನ್ನುವುದು ಆಕೆ ಕಟ್ಟಿ ಹಾಡಿದ ಹಾಡುಗಳಲ್ಲೇ ಕಂಡುಬರುತ್ತದೆ.

**ಕಿತ್ತೂರ ಚನ್ನಮ್ಮ ಕಿತ್ತೂರ ಬಿಡವಳ್ಳ।**
**ಏಳುನೂರೆಮ್ಮಿ ಎಳೆಗರ। ಹೊಡಕೊಂಡು।**
**ಹಂಗಿಲ್ಲದ ಹಾದಿ ಹಿಡದಾಳ॥ (53)**

**ಪಟ್ಟಣಕ್ಕುಂಚಾಗಿ ಹುಟ್ಟಿತು ಮೈಸೂರು।**
**ಬೆಟ್ಟದ ಚಾಮುಂಡಿ ದಯದಿಂದ। ದೊರೆಗೋಳು।**
**ಪಟ್ಟಣವಾಳ್ಯಾರು ಅನುಗಾಲ॥ (54)**

ಕಿತ್ತೂರಿನ ರಾಣಿ ಚೆನ್ನಮ್ಮ, ಮೈಸೂರಿನ ಅರಸರನ್ನು ತನ್ನ ಪದಗಳಲ್ಲಿ ಆಕೆ ನೆನೆದಿದ್ದಾಳೆ. ಅದರೊಂದಿಗೆ ಗ್ರಾಮೀಣ ಜೀವನದ ವರ್ಣನೆಯನ್ನು ಹಲವಾರು ಪದ್ಯಗಳಲ್ಲಿ ಹೇಳಿದ್ದಾಳೆ.

**ಬೆಳ್ಳಗ ಬೆಳಗಾಗಿ ಬೆಳ್ಳಿ ಮೂಡಲವಾಗಿ।**
**ಒಳ್ಳೊಳ್ಳೆ ಮೀನ ಗರಿ ತೆಗೆದು। ಆಡ್ಯಾವ।**
**ಗರತಿ ಗಂಗಮ್ಮನ ಉಡಿಯಾಗ॥ (55)**

**ಹಳ್ಳದ ದಂಡೀಗಿ ಹಸರುಬಣ್ಣದ ಗುಬ್ಬಿ।**
**ಬಿಸಿಲೀಗಿ ಬಾಯಿ ಬಿಡತಾವ। ಆ ಗುಬ್ಬಿ।**
**ಕುಸಲದ ನಗುವ ನಗತಾದ॥ (56)**

**ಗರತಿ ಮತ್ತು ಬದುಕಿನ ಮೌಲ್ಯಗಳು:**

ಗೃಹಿಣಿಯಾಗಿದ್ದುಕೊಂಡು ಸೀಮಿತ ಪರಿಸರದಲ್ಲಿ ಬಾಳಿದರೂ ಗರತಿ ತನ್ನ ಬದುಕಿನಲ್ಲಿ ಮೌಲ್ಯಗಳನ್ನು ಅಳವಡಿಸಿಕೊಂಡು ಅರ್ಥಪೂರ್ಣ ಬದುಕನ್ನು ಕಟ್ಟಿಕೊಂಡಿದ್ದಳು. ವಿದ್ಯೆಯೇ ಬದುಕಿಗೆ ಮುಖ್ಯವಾಗದೆ, ಜೀವನಾನುಭಗಳೇ ಬದುಕಿಗೆ ದಾರಿ ತೋರುವ ದೀಪವಾಗುತ್ತವೆ ಎನ್ನುವುದನ್ನು ಗರತಿಯ ಹಾಡುಗಳಿಂದ ತಿಳಿಯಬಹುದು. ತಾನು ಕಟ್ಟಿ ಹಾಡಿದ ಪದಗಳಲ್ಲಿ ಬದುಕಿಗೊಂದು ಸ್ಪಷ್ಟನೀತಿಯನ್ನು ಮತ್ತು ಪರಿಸ್ಥಿತಿಗೆ ಹೊಂದುವಂತಹ ಪರ್ಯಾಯನೀತಿಯನ್ನು, ಬುದ್ಧಿಮಾತುಗಳನ್ನು ಸರಳವಾಗಿ ಆಕೆ ಹೇಳುತ್ತಾಳೆ.

**ಚಿಂತಿ ಮಾಡಲಿಬ್ಯಾಡ ಛೀ ಹುಚ್ಚಿ ಹಡೆದವ್ವ।**
**ಚಿಂತ್ಯಾಗ ಕಾಯ ಇಳಿತದ ಪಾಂಡವರ।**
**ಅಂಥವರಿಗುಂಟು ವನವಾಸ॥ (57)**

ತನ್ನ ಕೈಮೀರಿದ ಪರಿಸ್ಥಿತಿಗಳಿಗೆ ಚಿಂತಿಸಿ ಉಪಯೋಗವಿಲ್ಲ ಎನ್ನುವ ಕಿವಿಮಾತನ್ನು ಪಾಂಡವರ ಉದಾಹರಣೆಯೊಂದಿಗೆ ಹೇಳುವ ಗರತಿಯ ಅನುಭವದ ಅರಿವು ವಿಶಾಲವಾಗಿತ್ತು.

**ಮಕ್ಕಳುಂಟೆಂದು ಮರಿಗಳುಂಟೆಂದು ।**
**ನಚ್ಚಬೇಡ ಮನವೆ ಏನಿಲ್ಲ । ನಿನಗಿಲ್ಲಿ ।**
**ನಿಚ್ಚ ಪುರಂದರ ವಿಠಲೆನ್ನು ॥ (58)**
(ನಚ್ಚಬೇಡ = ನಂಬಬೇಡ, ನಿಚ್ಚ= ನಿತ್ಯ)

"ಯಾರಿಗೆ ಯಾರುಂಟು ಎರವಿನ ಸಂಸಾರ, ನೀರ ಮೇಲಣ ಗುಳ್ಳೆ ನಿಜವಲ್ಲ ಹರಿಯೇ" ಎನ್ನುವ ದಾಸರ ಪದವನ್ನು ಹೋಲುವಂತೆ, ಸಂಸಾರದ ಮೋಹಕ್ಕಿಂತ ನಿತ್ಯವೂ ದೇವರನ್ನು ನೆನೆಯಬೇಕು ಎನ್ನುವುದು ಗರತಿಯ ಅನುಭವದ ಮಾತಾಗಿದೆ.

**ಇದ್ದರ ಇರಬೇಕ ಬುದ್ಧಿವಂತರ ನೆರೆಯ ।**
**ಖದ್ದರಗೇಡಿ ಕುಲಗೇಡಿ । ನೆರೆಯಿದ್ದು ।**
**ಇದ್ದಟ್ಟು ಬುದ್ಧಿ ಕಳಕೊಂಡ ॥ (59)**

**ಉತ್ತಮರ ಗೆಳೆತನ ಪುತ್ಥಳಿ ಬಂಗಾರ ।**
**ಮತ್ತ ಹೀನರ ಗೆಳೆತನ । ಮಾಡಿದರ ।**
**ಹಿತ್ತಾಳಿಗಿಂತ ಬಲು ಹೀನ ॥ (60)**

ಬುದ್ಧಿವಂತರ ನೆರೆಹೊರೆ ಮತ್ತು ಉತ್ತಮರೊಂದಿಗಿನ ಗೆಳೆತನ ನಮಗಿರಬೇಕೆನ್ನುವ ಮಾತನ್ನು ಸರಳ ಹೋಲಿಕೆಯೊಂದಿಗೆ ಗರತಿ ನಮಗೆ ನೀಡಿದ್ದಾಳೆ.

**ಬಂಗಾರ ಬಳಿಯಿಟ್ಟು ಬೈಬ್ಯಾಡ ಬಡವರಿಗಿ ।**
**ಬಂಗಾರ ನಿನಗ ಸ್ಥಿರವಲ್ಲ । ಮದ್ಯಾಣ ।**
**ಬಿಸುಲು ಹೊಳ್ಳುವುದು ತಡವಲ್ಲ ॥ (61)**
(ಮದ್ಯಾಣ =ಮಧ್ಯಾಹ್ನ, ಹೊಳ್ಳು = ಹೊರಳು)

ಸಿರಿವಂತಿಕೆ ಎಂದು ಅಹಂಕಾರಪಡುವುದನ್ನು ಒಪ್ಪದ ಗರತಿ, ತನ್ನ ಜೀವನಾನುಭವದಿಂದ ಕಿವಿಮಾತನ್ನು ಹೇಳುತ್ತಾಳೆ. ತಿರುಗುವ ಜೀವನಚಕ್ರದಲ್ಲಿ ಪರಿಸ್ಥಿತಿ ಬದಲಾಗಲು ಹೆಚ್ಚು ಸಮಯ ಬೇಕಾಗುವುದಿಲ್ಲ ಎನ್ನುತ್ತಾಳೆ.

**ಒಳ್ಳೇದ ಒಳಗಿಟ್ಟು ಗೊಳ್ಳು ದಾನವ ಮಾಡಿ ।**
**ಕುಳ್ಳೀಯ ಮನಿಗೆ ತಲೆಗೊಟ್ಟು । ಹೋಗಾಗ ।**
**ಉಳ್ಳಿಲ್ಲ ದಾನ ಕೊಡಲಿಲ್ಲ ॥ (62)**
(ಕುಳ್ಳು = ಬೆರಣಿ)

ಮನುಷ್ಯನ ಬದುಕಿನಲ್ಲಿ ಆತ ಮಾಡುವ ಒಳ್ಳೆಯ ಕೆಲಸಗಳು ಮುಖ್ಯವಾಗುತ್ತವೆ ಎನ್ನುವ ಮಾತನ್ನು ತನ್ನ ಅನುಭವದ ಅರಿವಿನಿಂದ ಗರತಿ ಹೇಳುತ್ತಾಳೆ.

**ಸಮಾರೋಪ**

ಬದುಕಿನಲ್ಲಿ ಅದಮ್ಯ ಶ್ರದ್ಧೆಯಿರಿಸಿರುವ ಜಾನಪದ ಹೆಣ್ಣುಮಗಳು ಬದುಕು ನಡೆಸುವ ಬಗೆಯೇ ಮೌಲಿಕವಾಗಿದ್ದು, ಅದು ಅಧ್ಯಯನ ಯೋಗ್ಯವಾಗಿದೆ ಎನ್ನಬಹುದು. ಗರತಿಯ ಆಲೋಚನೆಗಳನ್ನು ತಿಳಿದುಕೊಳ್ಳುವುದೇ ಮಹತ್ವದ ಕೆಲಸವೆನಿಸುತ್ತದೆ. ಗರತಿಯ ಹಾಡು 'ಅಂತರಾತ್ಮನ ನೆಲೆಯೆನಿಸುವ ಹೃದಯದ ಹೊನಲಾಗಿದೆ, ಅಂತೆಯೇ ಅದಕ್ಕೆ ಆನಂದದ ಕಳೆಯಿದೆ, ಅದರಲ್ಲಿ ಹಿಗ್ಗಿನ ಬೆಳೆಯಿದೆ, ತೀರದ ರಸವಿದೆ, ಕುಂದದ ತಿಳಿಯಿದೆ' ಎನ್ನುವ ಜಾನಪದ ಶಾಸ್ತ್ರಜ್ಞರ ಮಾತು ಬಹಳ ಅರ್ಥಪೂರ್ಣವೆನಿಸುತ್ತದೆ. ಜಾನಪದ ಮಹಿಳೆ ಹಾಡುಗಳನ್ನು ಹಾಡುವುದಿಲ್ಲ, ಅವು ಆಕೆಯ ಅಂತರಂಗದ ಧ್ವನಿ ಎಂದು ಅರಿತಾಗ ಗರತಿಯ ಹಾಡುಗಳು ಆಕೆಯ ಸಂವೇದನೆಯಾಗಿ ಹೊರಹೊಮ್ಮುತ್ತವೆ.

ಜನಪದ ಸಾಹಿತ್ಯದ ಒಂದು ಮುಖ್ಯ ಭಾಗವಾದ ಗರತಿಯ ಹಾಡುಗಳ ಹಿನ್ನೆಲೆಯಲ್ಲಿ ಸ್ತ್ರೀ ಸಂವೇದನೆಯನ್ನು ಕಂಡುಕೊಳ್ಳುವ ಈ ಪ್ರಯತ್ನದ ನಂತರ ಕಾಡುವ ಒಂದು ಮುಖ್ಯ ಪ್ರಶ್ನೆಯೆಂದರೆ, ಇಲ್ಲಿ ಹೆಣ್ಣನ್ನು ಒಂದು ಸೀಮಿತ ಚೌಕಟ್ಟಿನಲ್ಲಿ ಮಾತ್ರ ಕಾಣಲು ಕಾರಣವೇನು? ಕಾಲಘಟ್ಟ, ಸಾಮಾಜಿಕ ಸ್ಥಿತಿಗತಿಗಳ ಜೊತೆಗೆ ಅತಿರಮ್ಯವೆನಿಸುವ 'ಗರತಿ' ಪಟ್ಟವೂ ಒಂದು ಸಾಧನವಾಗಿಬಿಟ್ಟಿತೇ? ಮನುಷ್ಯನ ವಿದ್ಯೆ ಮತ್ತು ವೈಚಾರಿಕತೆ ಬೆಳೆದಂತೆ ಹೆಣ್ಣನ್ನು ನೋಡುವ ದೃಷ್ಟಿಕೋನಗಳೂ ಬದಲಾಗುತ್ತಾ ಸಾಗಿವೆ. "ಹೆಣ್ಣು ಹೀಗಿದ್ದರೆ ಮಾತ್ರ ಚೆನ್ನು" ಎನ್ನುವ ಅಲಿಖಿತ ಸಿದ್ಧಮಾದರಿಗೆ ಜೋತುಬೀಳುವ ಮತ್ತು ಬೆಂಬಲ ನೀಡುವ ವ್ಯವಸ್ಥೆಯನ್ನು ಪ್ರಜ್ಞಾಪೂರ್ವಕವಾಗಿ ವಿಮರ್ಶಿಸುತ್ತಾ, ಜೀವ ಸಮಾನತೆಯ ಅರಿವನ್ನು ಗಳಿಸಿಕೊಳ್ಳುವುದು ನಮ್ಮ ಇಂದಿನ ತುರ್ತು ಅಗತ್ಯವಾಗಿದೆ. ಮತ್ತು ಈ ಹೊಸ ಅರಿವಿನ ಮಸೂರದಿಂದ ನೋಡಿದಾಗ ಬಹುಶಃ ಈ 'ಗರತಿಯ ಹಾಡುಗಳು' ಮತ್ತಷ್ಟು ಅರ್ಥಸಾಧ್ಯತೆಗಳ ಉಗ್ರಾಣವಾಗಿ ಕಾಣಬಹುದು.

**ಆಕರಗಳು:**


* ಗರತಿಯ ಹಾಡು – ಸುಪ್ರಸಿದ್ಧ ಜಾನಪದ ತ್ರಿಪದಿ ಸಂಗ್ರಹ.
* ಮಹಿಳೆ ಮತ್ತು ಮಹಿಳಾ ಸಂವೇದನೆ – ಡಾ. ಅಶೋಕ ನರೋಡೆ.
* ಕನ್ನಡ ಸಾಹಿತ್ಯದಲ್ಲಿ ಗ್ರಾಮೀಣ ಸಂವೇದನೆ – ಡಾ. ಅಶೋಕ ನರೋಡೆ.




# ಅನುಬಂಧ

ಅನುಬಂಧ–1.   ನಮ್ಮ ಲೇಖಕರು

ಅನುಬಂಧ–2.   ಕಸಾರಂ ಪ್ರಕಟಣೆಗಳ ಬಗ್ಗೆ ಅಭಿಪ್ರಾಯಗಳು

# ಲೇಖಕ-ಲೇಖಕಿಯರ ಕಿರುಪರಿಚಯ

## ಕತೆಗಳು

**ಕಾವ್ಯಾ ಕಡಮೆ ನಾಗರಕಟ್ಟೆ**
**(ಕತೆ : ಬರೆಯಲಾಗದ ಕತೆ)**



ಕಾವ್ಯಾ ಕಡಮೆ ಉತ್ತರ ಕನ್ನಡ ಜಿಲ್ಲೆಯ ಕಡಮೆಯವರು. 1988ರಲ್ಲಿ ಜನನ. ಬಿಎಸ್ಸಿ ನಂತರ ಕರ್ನಾಟಕ ವಿವಿಯಿಂದ ಆರು ಚಿನ್ನದ ಪದಕಗಳೊಂದಿಗೆ ಪತ್ರಿಕೋದ್ಯಮ ಎಂ.ಎ ಪದವಿ. 2013ರಿಂದ ಅಮೆರಿಕಾದ ನ್ಯೂಜೆರ್ಸಿಯಲ್ಲಿ ವಾಸ. 'ಧ್ಯಾನಕೆ ತಾರೀಖಿನ ಹಂಗಿಲ್ಲ', 'ಜೀನ್ಸ್ ತೊಟ್ಟ ದೇವರು' ಪ್ರಕಟಿತ ಕವನ ಸಂಕಲನಗಳು. 'ಮಾಕೋನ ಏಕಾಂತ' ಕಥಾ ಸಂಕಲನ. 'ಪುನರಪಿ' ಕಾದಂಬರಿ. 'ಆಟದೊಳಗಾಟ ಮತ್ತು ಡೋರ್ ನಂಬರ್ ಎಂಟು', 'ಸಂಜೀವಿನಿ ಸ್ಟೋರ್ಸ್' ನಾಟಕ ಸಂಕಲನಗಳು. 'ದೂರ ದೇಶವೆಂಬ ಪಕ್ಕದ ಮನೆ' ಪ್ರಬಂಧ ಸಂಕಲನ.

ಇವರ ಪದ್ಯ ಕೃತಿಗಳಿಗೆ ಕೇಂದ್ರ ಸಾಹಿತ್ಯ ಅಕಾಡೆಮಿಯ ಯುವ ಪುರಸ್ಕಾರ, ಟೋಟೋ ಪುರಸ್ಕಾರ, ಕಡೆಂಗೋಡ್ಲು ಕಾವ್ಯ ಪುರಸ್ಕಾರ ಹಾಗೂ ದಿನಕರ ಕಾವ್ಯ ಪ್ರಶಸ್ತಿ ದೊರೆತಿದೆ. ಗದ್ಯ ಕೃತಿಗಳಿಗೆ ಛಂದ ಪುಸ್ತಕ ಬಹುಮಾನ, ಅಮ್ಮ ಪ್ರಶಸ್ತಿ, ಬೇಂದ್ರೆ ಗ್ರಂಥ ಬಹುಮಾನ, ರತ್ನಮ್ಮ ಹೆಗ್ಗಡೆ ಗ್ರಂಥ ಬಹುಮಾನ, ಡಾ. ಎಚ್. ಶಾಂತಾರಾಮ್ ಪ್ರಶಸ್ತಿ, ವೀಣಾ ಶಾಂತೇಶ್ವರ ಯುವ ಕತೆಗಾರ್ತಿ ಪ್ರಶಸ್ತಿ, ಸಾಹಿತ್ಯ ಪರಿಷತ್ತಿನ ದತ್ತಿ ಪುರಸ್ಕಾರ ಮತ್ತು ನಾಟಕ ಅಕಾಡೆಮಿಯ ನಾಟಕ ಬಹುಮಾನ ಸಂದಿದೆ.

Phone: +1 848 391 1356
Email: kavya.kadame@gmail.com

**ಗುರುಪ್ರಸಾದ ಕಾಗಿನೆಲೆ**
**(ಕತೆ : ಅನೀಟಳ ಹೊಲಿಗೆಗಳು)**



ಹುಟ್ಟಿದ್ದು ಶಿವಮೊಗ್ಗದಲ್ಲಿ. ಬೆಳೆದದ್ದು ಮೈಸೂರು ಮತ್ತು ಮಂಡ್ಯ ಜಿಲ್ಲೆಯ ನಾಗಮಂಗಲದಲ್ಲಿ. ಬಳ್ಳಾರಿಯ ಸರಕಾರಿ ವೈದ್ಯಕೀಯ ವಿದ್ಯಾಲಯದಲ್ಲಿ ಎಂಬಿಬಿಎಸ್ ಮತ್ತು ಎಂ.ಡಿ ಪದವಿ. ಸದ್ಯಕ್ಕೆ ಮಿನೆಸೊಟಾ ರಾಜ್ಯದ ರಾಚೆಸ್ಟರ್‌ನಲ್ಲಿ ಪತ್ನಿ ಪದ್ಮ ಮತ್ತು ಮಕ್ಕಳಾದ ಪ್ರಣೀತ ಮತ್ತು ಪ್ರಭವರೊಂದಿಗೆ ವಾಸ. ಓಮ್ ಸ್ಟೆಡ್ ಆಸ್ಪತ್ರೆಯ ಎಮರ್ಜೆನ್ಸಿ ಮೆಡಿಸಿನ್ ವಿಭಾಗದಲ್ಲಿ ಎಮರ್ಜೆನ್ಸಿ ವೈದ್ಯನಾಗಿ ಕೆಲಸ. ಹಲವಾರು ಕೃತಿಗಳನ್ನು ಪ್ರಕಟಿಸಿದ್ದಾರೆ.

**ಕಥಾಸಂಕಲನಗಳು:** ನಿರ್ಗುಣ (2003), ಶಕುಂತಳಾ (2007), ದೇವರ ರಜಾ (2014), ಲೋಲ (2020).

**ಲೇಖನ ಸಂಗ್ರಹ:** ವೈದ್ಯ, ಮತ್ತೊಬ್ಬ (2005).

**ಕಾದಂಬರಿಗಳು:** ಬಿಳಿಯ ಚಾದರ (2007), ಗುಣ (2010), ಹಿಜಾಬ್ (2017) ಮತ್ತು ಕಾಯಾ (2020).

**ಸಂಪಾದಿತ ಕೃತಿಗಳು:** ಆಚೀಚೆಯ ಕಥೆಗಳು (2005), ಬೇರು-ಸೂರು (ಅನಿವಾಸಿ ಅನುಭವ ಕಥನ).

**ಲಲಿತ ಪ್ರಬಂಧ ಸಂಕಲನ:** ಸಾವೆಂಬ ಲಹರಿ (2018).

'ವೈದ್ಯ, ಮತ್ತೊಬ್ಬ' ಕೃತಿಗೆ 2005ರ ಡಾ. ಪಿ. ಎಸ್. ಶಂಕರ್ ಶ್ರೇಷ್ಠ ವೈದ್ಯ ಸಾಹಿತ್ಯ ಪ್ರಶಸ್ತಿ, 'ಗುಣ' ಕಾದಂಬರಿಗೆ ಸೂರ್ಯನಾರಾಯಣ ಚಡಗ ಪ್ರಶಸ್ತಿ, 'ಹಿಜಾಬ್' ಕಾದಂಬರಿಗೆ ಕನ್ನಡ ಸಾಹಿತ್ಯ ಪರಿಷತ್ತಿನ ಭಾರತೀಸುತ ಸ್ಮಾರಕ ದತ್ತಿ ಪ್ರಶಸ್ತಿ, ಡಾ. ಎಚ್. ಶಾಂತಾರಾಂ, ಹಾಗೂ ಕರ್ನಾಟಕ ಸಾಹಿತ್ಯ ಅಕೆಡೆಮಿಯಿಂದ 2018ರ ಸಾಲಿನ 'ಪುಸ್ತಕ ಪ್ರಶಸ್ತಿ' ದೊರಕಿವೆ. ಇವರ ಕೆಲವು ಕಥೆಗಳು ಮರಾಠಿ, ಕೊಂಕಣಿ, ಮಲೆಯಾಳಿ, ಇಂಗ್ಲಿಷ್ ಮತ್ತು ತೆಲುಗು ಭಾಷೆಗೂ ಅನುವಾದವಾಗಿವೆ. 'ಹಿಜಾಬ್' ಕಾದಂಬರಿ 2020ರಲ್ಲಿ ಇಂಗ್ಲಿಷ್ ಭಾಷೆಗೆ ಅನುವಾದವಾಗಿದೆ.

'The Preferred Pronoun and other Stories' ಆಯ್ದ ಕತೆಗಳ ಆಂಗ್ಲ ಅನುವಾದ, ಅನುವಾದಕರು - ಡಾ. ನಾರಾಯಣ್ ಶಂಕರನ್. ಮಣಿಪಾಲ್ ಯುನಿವರ್ಸಲ್ ಪ್ರೆಸ್ ನಿಂದ 2024ರಲ್ಲಿ ಪ್ರಕಟವಾಗುತ್ತಿದೆ.

Phone: 001-507-358-7292

Email: gkaginele@gmail.com

**ಜಯಶ್ರೀ ಮೂರ್ತಿ**

**(ಕತೆ : ತಲಾಂತರ–ತಿಳಿವಿನಂತರ)**



ಜಯಶ್ರೀ ಮೂರ್ತಿಯವರು ಮೂಲತಃ ಬೆಂಗಳೂರಿನವರಾಗಿದ್ದು ಪ್ರಸ್ತುತ ಡ್ಯಾಲಸ್ ನಗರದ ನಿವಾಸಿಯಾಗಿದ್ದಾರೆ. ಹಲವಾರು ಸ್ಥಳೀಯ ಸಂಘ–ಸಂಸ್ಥೆಗಳಲ್ಲಿ ಸ್ವಯಂಸೇವಕರಾಗಿ ಸೇವೆ ಸಲ್ಲಿಸಿದ್ದಾರೆ. ಮಲ್ಲಿಗೆ ಕನ್ನಡ ಸಂಘದ ಅಧ್ಯಕ್ಷೆಯಾಗಿ ಹಾಗು ಶಾಸ್ತ್ರೀಯ ಸಂಗೀತದ ಸಂಘವಾದ IFAA-DFW ಸಂಸ್ಥೆಯ ಅಧ್ಯಕ್ಷೆಯಾಗಿಯೂ ಕೆಲಸ ಮಾಡಿದ್ದಾರೆ. ವೃತ್ತಿಪರವಾಗಿ ತಮ್ಮದೇ Medical IT ಸಂಸ್ಥೆಯೊಂದನ್ನು ನಡೆಸುತ್ತಿದ್ದಾರೆ. (ಜಯಶ್ರೀ ತಮ್ಮ ಮಗಳಾದ ಅರ್ಚನಾ ಮೂರ್ತಿಯ ಅಭಿಪ್ರಾಯಗಳನ್ನೂ ಅಳವಡಿಸಿಕೊಂಡು ಈ ಕತೆಯನ್ನು ಬರೆದಿದ್ದಾರೆ.)

Phone: 972-679-9304

Email: 1709jayashreemurthy@gmail.com

**ಮೈ. ಶ್ರೀ. ನಟರಾಜ**

**(ಕತೆ : ಅಹಲ್ಯಾ...ದ್ರೌಪದೀ...ತಾರಾ...)**

ವಂಶದ ಹಿರಿಯರ ಊರು ಮೈಸೂರು. ಹುಟ್ಟಿ ಬೆಳೆದದ್ದು ಹಾಸನದಲ್ಲಿ. ವಿದ್ಯಾಭ್ಯಾಸ ಬೆಂಗಳೂರು, ಮುಂಬೈ ಮತ್ತು ಅಮೆರಿಕದ ಪಿಟ್ಸ್‌ಬರ್ಗ್, ಪೆನ್ಸಿಲ್ವೇನಿಯಾದಲ್ಲಿ. ವೃತ್ತಿಯಲ್ಲಿ ಸಿವಿಲ್ ಇಂಜಿನಿಯರ್. ಖಾಸಗಿ ಕಂಪನಿಗಳಲ್ಲಿ, ಮತ್ತು ಅಮೆರಿಕಾ ಸರ್ಕಾರದ ಅಣುಶಕ್ತಿ ನಿಯಂತ್ರಣ ಆಯೋಗದಲ್ಲಿ ದುಡಿದು, ಈಗ ನಿವೃತ್ತ ಜೀವನ, ಅಮೆರಿಕದ ರಾಜಧಾನಿಯ ಬಳಿ, ಪೊಟೊಮೆಕ್ ಎಂಬ ಮೇರೀಲ್ಯಾಂಡ್ ಪ್ರಾಂತ್ಯದ ಊರಿನಲ್ಲಿ. ಮಡದಿ ಗೀತಾ, ಮೂರು ಮಕ್ಕಳು ಮತ್ತು ನಾಲ್ಕು ಮೊಮ್ಮಕ್ಕಳು. ಪ್ರಕಟಿತ ಪುಸ್ತಕಗಳು ಹಲವು. ನಾಲ್ಕು ಕವನ ಸಂಕಲನಗಳು, ಆರು ನಾಟಕಗಳು, ಒಂದು ಕಥಾ ಸಂಕಲನ, ಎರಡು ಅಂಕಣ ಮಾಲೆಗಳು, ಎರಡು ಪ್ರಬಂಧ ಸಂಕಲನಗಳು, ಒಂದು ಕನ್ನಡ ಕಾದಂಬರಿಯ ಆಂಗ್ಲ ಅನುವಾದ, ವಸುಧೇಂದ್ರರ ಹನ್ನೆರಡು ಸಣ್ಣ ಕಥೆಗಳ ಆಂಗ್ಲ ಅನುವಾದ, ಹಲವಾರು ಗ್ರಂಥಗಳ ಸಂಪಾದನೆ. ಹಲವು ಪ್ರಶಸ್ತಿಗಳು, ಮುಖ್ಯವಾಗಿ, ಗೊರೂರು ಪ್ರಶಸ್ತಿ (2004), ಆಳ್ವಾಸ್ ನುಡಿಸಿರಿ ಪ್ರಶಸ್ತಿ (2018). ನ್ಯೂಕ್ಲಿಯರ್



ವೇಸ್ಟ್ ಡಿಸ್ಪೋಸಲ್ ಎಂಬ ವಿಷಯದಲ್ಲಿ ತಾಂತ್ರಿಕ ಪರಿಣತರಾಗಿ ಅಂತರರಾಷ್ಟ್ರೀಯ ತಜ್ಞರ ಸಮಿತಿಗೆ ಅಮೆರಿಕದ ಪ್ರತಿನಿಧಿಯಾಗಿ ಯೂರೋಪಿನಲ್ಲಿ ಭಾಗವಹಿಸಿದ ಗೌರವ. ಅಣುಶಕ್ತಿ ಆಯೋಗದ ಅತ್ಯುನ್ನತ ಗೌರವಗಳಲ್ಲೊಂದಾದ 'ಮೆರಿಟೋರಿಯಸ್ ಸರ್ವಿಸ್ ಅವಾರ್ಡ್' ಗೆ ಭಾಜನರಾದ ತೃಪ್ತಿ.

ಅಮೆರಿಕದ ರಾಜಧಾನಿಯ ಕನ್ನಡ ಸಂಘ, 'ಕಾವೇರಿ'ಯ ಅಧ್ಯಕ್ಷನಾಗಿ ಹಾಗೂ ಅದರ ವಿಶ್ವಸ್ಥ ಮಂಡಲಿಯ ಛೇರ್ಮನ್ ಆಗಿ ಹಲವಾರು ವರ್ಷಗಳ ಸೇವೆ. ಕನ್ನಡ ಸಾಹಿತ್ಯಕ್ಕಾಗೇ ಮುಡಿಪಾಗಿರುವ ಅಮೆರಿಕದ ಏಕೈಕ ಸಂಸ್ಥೆಯಾದ ಕನ್ನಡ ಸಾಹಿತ್ಯ ರಂಗದ ಸಂಸ್ಥಾಪಕ ಸದಸ್ಯ, ಉಪಾಧ್ಯಕ್ಷ, ಅಧ್ಯಕ್ಷ ಮತ್ತು ಆಡಳಿತ ಮಂಡಲಿಯ ಅಧ್ಯಕ್ಷನಾಗಿ ವಿವಿಧ ಸ್ಥಾನಗಳಲ್ಲಿ ಕಳೆದ 20 ವರ್ಷಗಳಿಂದ ನಿರಂತರ ಸೇವೆ. ಅಮೆರಿಕದ ರಾಜಧಾನಿಯ ಅತಿ ದೊಡ್ಡ ದೇವಾಲಯವಾದ ಶ್ರೀ ಶಿವವಿಷ್ಣು ದೇಗುಲದ ಸ್ಥಾಪನೆಯಲ್ಲಿ ಭಾಗವಹಿಸುವ ಅವಕಾಶ.

Email: mysreena@aol.com

**ಪ್ರಕಾಶ ನಾಯಕ**

**(ಕತೆ : ಕಥನ ಬಿತ್ತಿ ಇತಿಹಾಸ ಬೆಳೆದ ಕವಿ ಪಂಪಕಂಪನಾ)**



ಪ್ರಕಾಶ ನಾಯಕರು ಮೂಲತಃ ಉತ್ತರ ಕನ್ನಡ ಜಿಲ್ಲೆಯ ಹನೇಹಳ್ಳಿಯವರು. ಓದಿದ್ದು ಇಲೆಕ್ಟ್ರಿಕಲ್ ಇಂಜಿನಿಯರಿಂಗ್. ಕ್ಯಾಲಿಫೋರ್ನಿಯಾದ ಕುಪರ್ಟಿನೋ ನಗರದಲ್ಲಿ ವಾಸವಾಗಿದ್ದಾರೆ. ಉತ್ತರ ಕ್ಯಾಲಿಫೋರ್ನಿಯ ಕನ್ನಡ ಕೂಟ, ಅಕ್ಕ, ಕನ್ನಡ ಸಾಹಿತ್ಯ ರಂಗಗಳ ಪ್ರಕಟಣೆಗಳಲ್ಲಿ ಸಂಪಾದಕರಾಗಿ ಕಾರ್ಯ ನಿರ್ವಹಿಸಿದ್ದಾರೆ. 'ಅಮೂರ್ತ ಚಿತ್ತ' ಮತ್ತು 'ಪೆಸಿಫಿಕ್ ತೀರದ ಪಾತಿ' ಕಥಾಸಂಕಲನಗಳನ್ನೂ; 'ಅಂತು' ಕಾದಂಬರಿಯನ್ನೂ ಪ್ರಕಟಿಸಿದ್ದಾರೆ. Albert Camusನ The Stranger ಕಾದಂಬರಿಯನ್ನು ಕನ್ನಡಕ್ಕೆ 'ಅಪರಿಚಿತ' ಹೆಸರಿನಲ್ಲಿ ಅನುವಾದಿಸಿದ್ದಾರೆ. ಇವರ ಕಥೆಗಳು ಕನ್ನಡದ ಪ್ರಮುಖ ನಿಯತಕಾಲಿಕಗಳಲ್ಲಿ ಪ್ರಕಟವಾಗಿವೆ.

Email: phn066@gmail.com

**ಮಂಗಳಾ ಕುಮಾರ್**

**(ಕತೆ : ಧ್ವನಿ)**



ಬೆಂಗಳೂರಿನಲ್ಲಿ ಹುಟ್ಟಿ, ಬೆಳೆದ ಮಂಗಳಾ 1979ರಲ್ಲಿ ವಿಶ್ವೇಶ್ವರಯ್ಯ ಇಂಜಿನಿಯರಿಂಗ್ ಕಾಲೇಜಿನ ಪದವೀಧರೆಯಾಗಿ, 1980ರಲ್ಲಿ ಅಮೆರಿಕಾಗೆ ಬಂದು ನೆಲೆಸಿದರು. ಅಲ್ಲಿಯ ಹಲವಾರು ಹೈಟೆಕ್ ಕಂಪೆನಿಗಳಲ್ಲಿ ಉನ್ನತ ಹುದ್ದೆಗಳಲ್ಲಿ ಕೆಲಸ ಮಾಡಿ, ಜೊತೆಗೆ ಹಲವಾರು ಸಾಂಸ್ಕೃತಿಕ ಮತ್ತು ಸಾಮಾಜಿಕ ಸೇವಾ ಸಂಸ್ಥೆಗಳಲ್ಲೂ ಸೇವೆ ಸಲ್ಲಿಸುತ್ತಾ ಬಂದಿರುವ ಮಂಗಳಾ ಓರ್ವ ಹವ್ಯಾಸಿ ಬರಹಗಾರ್ತಿ. ಅವರ ಕಥೆಗಳು ಅಮೇರಿಕಾದ ವಿವಿಧ ಕನ್ನಡ ಸಂಘಗಳು ಮುದ್ರಿಸುವ ವಾರ್ಷಿಕ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಉತ್ತರ ಕ್ಯಾಲಿಫೋರ್ನಿಯಾ ಕನ್ನಡ ಕೂಟದ, ವಾರ್ಷಿಕ 'ಸ್ವರ್ಣಸೇತು' ಕಥಾ ಸ್ಪರ್ಧೆಗಳಲ್ಲಿ ಹಲವಾರು ಬಹುಮಾನಗಳನ್ನೂ ಗಳಿಸಿವೆ. ಮಂಗಳಾ ಅವರ 'ಸಾಗರದಾಚೆಯ ಸ್ಪಂದನ' ಯುಟ್ಯೂಬ್ ಚಾನಲ್‌ನಲ್ಲಿ ಅವರ ಕಥೆಗಳನ್ನು ಕೇಳಬಹುದು. https://www.youtube.com/user/magsharma

Phone: (408) 421-4113

Email: mangalakumar@gmail.com

**ಮೀರಾ ಪಿ. ಆರ್.**

**(ಕತೆ : ತೊಟ್ಟಿಲು)**

ಭಾಷಾವಿಜ್ಞಾನದಲ್ಲಿ ಮೈಸೂರು ವಿಶ್ವವಿದ್ಯಾನಿಲಯದಿಂದ ಸ್ನಾತಕೋತ್ತರ ಪದವಿ ಪಡೆದಿರುವ ಮೀರಾ ಶಿಕ್ಷಕಿಯಾಗಿ ಹಾಗು ಮೈಸೂರು ಮತ್ತು ಬೆಂಗಳೂರು ಆಕಾಶವಾಣಿಯಲ್ಲಿ



ಹಲವು ವರ್ಷ ಅರೆಕಾಲಿಕ ಉದ್ಘೋಷಕಿಯಾಗಿ ಕೆಲಸ ಮಾಡಿದ್ದಾರೆ. ಈಗ ಸದ್ಯಕ್ಕೆ ನ್ಯೂಜೆರ್ಸಿಯ 'ನಾದ' ಸಂಗೀತ ಶಾಲೆಯ ಸಂಸ್ಥಾಪಕಿ ಮತ್ತು ಶಿಕ್ಷಕಿಯಾಗಿದ್ದಾರೆ. ಕನ್ನಡದ ಹಲವು ನಿಯತಕಾಲಿಕೆಗಳಲ್ಲಿ, ವಿಶೇಷಾಂಕಗಳಲ್ಲಿ ಮತ್ತು ವೆಬ್ ಪೋರ್ಟಲ್‌ಗಳಲ್ಲಿ, ಕನ್ನಡ ಸಾಹಿತ್ಯ ರಂಗ ಮತ್ತು ಅಮೆರಿಕದ ಕನ್ನಡ ಕೂಟಗಳ ಹಲವು ಪ್ರಕಟಣೆಗಳಲ್ಲಿ ಇವರ ಹಲವು ಕಥೆ, ಕವಿತೆ, ಪ್ರಬಂಧ, ವಿಮರ್ಶೆ, ಅಂಕಣ ಬರಹಗಳು ಪ್ರಕಟವಾಗಿವೆ. ಮಕ್ಕಳ ಸಾಹಿತ್ಯ ಇವರ ವಿಶೇಷ ಪ್ರೀತಿ.

'ಅಕ್ಕ 2010'ರ ಅಂಗವಾಗಿ ಪ್ರಕಟಗೊಂಡ ಮಕ್ಕಳ ವಿಶೇಷ ಸಂಚಿಕೆ 'ಗುಬ್ಬಿಗೂಡು' ಪುಸ್ತಕದ ಸಂಪಾದಕಿ. ಇವರ ಅಂಕಣ ಬರಹ ಮತ್ತಿತರ ಲೇಖನಗಳ ಸಂಗ್ರಹವಾಗಿ ಹೊರಬಂದ ಪುಸ್ತಕ 'ದೂರಸಾಗರ' 2017ರಲ್ಲಿ ಅಭಿನವ ಪ್ರಕಾಶನದಿಂದ ಪ್ರಕಟವಾಗಿದೆ.

'ಅಕ್ಕ 2012' ಸಮ್ಮೇಳನದ ಅಂಗವಾಗಿ ಹೊರಬರುತ್ತಿದ್ದ 'ಜಗಲಿ' ವಾರ್ತಾಪತ್ರಿಕೆಯ ಸಂಪಾದಕ ಮಂಡಳಿಯಲ್ಲಿ ಮತ್ತು ಕನ್ನಡ ಸಾಹಿತ್ಯ ರಂಗದ ಪುಸ್ತಕ ಮಾಲೆ-7ರ ಪ್ರಕಟಣೆಗಳಾದ 'ಅನುವಾದ ಸಂವಾದ' ಮತ್ತು 'A Little taste of Kannada in English' ಕೃತಿಗಳ ಸಂಪಾದಕ ಮಂಡಳಿಯಲ್ಲಿಯೂ ಕೆಲಸ ಮಾಡಿದ್ದಾರೆ. 'ಅಕ್ಕ 2016' ಸಮ್ಮೇಳನಕ್ಕಾಗಿ ಮಕ್ಕಳ ಕಿರುಚಿತ್ರವೊಂದನ್ನು ಬರೆದು, ನಿರ್ದೇಶಿಸಿದ್ದಾರೆ.

ತಮ್ಮದೇ ಸಂಗೀತ ಶಾಲೆಯೊಂದನ್ನು ನಡೆಸುತ್ತಿರುವ ಮೀರಾ ಸಾಹಿತ್ಯ, ಸಂಗೀತ, ನೃತ್ಯ, ಚಿತ್ರಕಲೆ, ಸಿನಿಮಾ, ವೆಬ್ ಮತ್ತು ಗ್ರಾಫಿಕ್ ಡಿಸೈನಿಂಗ್ ಹೀಗೆ ಹತ್ತು ಹಲವು ಆಸಕ್ತಿಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಭಾರತದಿಂದ ಅಮೆರಿಕಾಗೆ ವರ್ಷ 2000ದಲ್ಲಿ ಬಂದ ಇವರು, ಸದ್ಯಕ್ಕೆ ನ್ಯೂಜೆರ್ಸಿಯ 'ಎಡಿಸನ್' ಎಂಬಲ್ಲಿ ತಮ್ಮ ಪತಿ ಭಾರ್ಗವ ಹಾಗು ಮಗ ನಿಶಾಂತ್ ಜೊತೆ ನೆಲೆಸಿದ್ದಾರೆ.

Email: bhameera@gmail.com

**ಶಶಿಕಲಾ ಚಂದ್ರಶೇಖರ್**
**(ಕತೆ : ಆಗ್ರಹಯಾತ್ರೆ)**



ಮೂಲತಃ ತುಮಕೂರಿನವರು. ಈಗ ವಾಷಿಂಗ್ಟನ್ ಡಿ.ಸಿ. ಪ್ರದೇಶದಲ್ಲಿ ವಾಸ. ಹನಿಗವನ, ಕವನ, ಸಣ್ಣಕಥೆ ಬರೆಯುವ ಹವ್ಯಾಸ. ಪ್ರಕಟವಾಗಿರುವ ಸಣ್ಣಕಥಾ ಸಂಕಲನ 'ದೀಪವು ನಿನ್ನದೇ ಗಾಳಿಯು ನಿನ್ನದೆ'ಗೆ ಕನ್ನಡ ಸಾಹಿತ್ಯ ಪರಿಷತ್ತಿನ ರೇವಯ್ಯ ದತ್ತಿ ಪ್ರಶಸ್ತಿ ಬಂದಿದೆ. ಕನ್ನಡ ಸಾಹಿತ್ಯ ರಂಗದ ಹಲವಾರು ಪುಸ್ತಕಗಳಲ್ಲಿ ಇವರ ಕತೆ ಮತ್ತು ಲೇಖನಗಳು ಪ್ರಕಟವಾಗಿವೆ.

Email: shashi.chandra@gmail.com



**ಶಾಂತಲಾ ಭಂಡಿ**
**(ಕತೆ : 'ಉ ಬುಲಾನ್ಜೆ')**

ಹುಟ್ಟೂರು: ಬೆಂಗಳೆ, ಶಿರಸಿ
ಊರು: ಭಂಡಿಮನೆ, ಮೆಣಸೀಕೇರಿ, ಶಿರಸಿ
ಪ್ರಸ್ತುತ ವಾಸ: ಟ್ರೇಸಿ, ಕ್ಯಾಲಿಫೋರ್ನಿಯ

**ವಿದ್ಯಾಭ್ಯಾಸ:** ಭೂಗೋಳಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

**ವೃತ್ತಿ:** ಟೆಕ್ನಿಕಲ್ ರಿಕ್ರೂಟರ್

2013 ರ ಉತ್ತರಕ್ಯಾಲಿಫೋರ್ನಿಯಾ ಕನ್ನಡಕೂಟದ ಅಧ್ಯಕ್ಷೆಯಾಗಿ ಸೇವೆ, 2014ರಲ್ಲಿ ಬೇ ಏರಿಯಾದಲ್ಲಿ ಜರುಗಿದ ಅಕ್ಕ ಸಮೇಳನದ ಪ್ರಚಾರ ಸಮಿತಿಯ ಮುಖಂಡತ್ವ

**ಹವ್ಯಾಸ:** ಓದುವುದು, ಬರೆಯುವುದು, ನಾಟಕ ನಿರ್ದೇಶನ ಮತ್ತು ನಟನೆ

'ನೆನಪು ಕನಸುಗಳ ನಡುವೆ' ಎಂಬ ಬ್ಲಾಗಿನ ಒಡತಿ.

**ಪ್ರಕಟಿತ ಕೃತಿಗಳು:**

'ಬೊಗಸೆಯಲ್ಲಿ ಬೆಳದಿಂಗಳು' (ಕವನ ಸಂಕಲನ) – 2010

'ಬೆಳದಿಂಗಳ ಬೇರು' (ಪ್ರಬಂಧ/ಲಹರಿ ಗುಚ್ಛ) – 2012

'ಚಂದಮಾಮ ಮಲಗಿದ್ದಾನೆ' (ಕಥಾಸಂಕಲನ) – 2021

ಪತ್ರಕರ್ತ, ದಟ್ಸ್ ಕನ್ನಡ, ಅವಧಿ, ಕೆಂಡಸಂಪಿಗೆ, ಉದಯವಾಣಿ, ಕನ್ನಡಪ್ರಭ, ಮುಂತಾದ ಕನ್ನಡದ ಹೆಸರಾಂತ ಪತ್ರಿಕೆಗಳಲ್ಲಿ ಕತೆ, ಕವನ, ಪ್ರಬಂಧಗಳು ಪ್ರಕಟ. ಹವ್ಯಕ, ಉತ್ತರ ಕ್ಯಾಲಿಫೋರ್ನಿಯಾ ಕನ್ನಡ ಕೂಟ, ಕನ್ನಡ ಸಾಹಿತ್ಯರಂಗ, ನಾವಿಕ, ಅಕ್ಕ, ಇನ್ನಿತರ ಸ್ಮರಣ ಸಂಚಿಕೆಗಳಲ್ಲಿ ಕತೆ, ಕವನ, ಲೇಖನಗಳು ಪ್ರಕಟವಾಗಿವೆ.

'ಬಬ್ರೂಷ' ಕನ್ನಡ ಚಲನಚಿತ್ರದಲ್ಲಿ ಪೋಷಕ ನಟಿ, 'ಆರನೇ ಮೈಲಿ' ಚಿತ್ರದಲ್ಲಿ ಎರಡನೆಯ ನಾಯಕಿಯಾಗಿ ನಟನೆ. ಪ್ರಸಿದ್ಧ ಕನ್ನಡ ಚಲನಚಿತ್ರ ನಿರ್ದೇಶಕರಾದ ಶ್ರೀ ಟಿ. ಎಸ್. ನಾಗಾಭರಣ ಅವರ 'ಮುದ್ದಣ ಟು ಮನೋರಮ್' ನಾಟಕದ ಸಹಾಯಕ ನಿರ್ದೇಶಕಿ. ಶ್ರೀ ಜೋಗಿಯವರು ಬರೆದ 'ಆಸ್ಕ್ ಮಿ ವೈಯನ್ಕ್' ನಾಟಕದ ನಿರ್ದೇಶಕಿ. ಇನ್ನಿತರ ಕನ್ನಡ ನಾಟಕಗಳ ನಿರ್ದೇಶನ ಮತ್ತು ನಾಟಕಗಳಲ್ಲಿ ಅಭಿನಯ. 'ಲಂಕಾದಹನ' ಮತ್ತು 'ಸುಭದ್ರಾ ಕಲ್ಯಾಣ' ಯಕ್ಷಗಾನಗಳಲ್ಲಿ ಅಭಿನಯ.

Email: shantalabhandi@gmail.com

**ಸಂಜೋತಾ ಪುರೋಹಿತ**

**(ಕತೆ : ಸ್ಥಿತಧೀರೆ)**



ಮೂಲತಃ ಧಾರವಾಡದವರಾದ ಸಂಜೋತಾ ಪುರೋಹಿತ ಸದ್ಯಕ್ಕೆ ಅಮೆರಿಕದ ಸ್ಯಾನ್ ಫ್ರಾನ್ಸಿಸ್ಕೋನಲ್ಲಿ ವಾಸಿಸುತ್ತಿದ್ದಾರೆ. ಮೊದಲ ಕಾದಂಬರಿ 'ಸಂಜೀವಿನಿ' 2019 ರಲ್ಲಿ ಬಿಡುಗಡೆಯಾಗಿದ್ದು ಪುಸ್ತಕ ಮತ್ತು e-book ಎರಡು ವಿಧದಲ್ಲಿ ಓದುಗರಿಗೆ ಲಭ್ಯವಿದೆ. ಅಮೆರಿಕದ ನಾವಿಕ ಕನ್ನಡ ಸಮ್ಮೇಳನದಲ್ಲಿ ಭಾಗಿಯಾಗಿ ಕನ್ನಡ ಪರ ಕೆಲಸಗಳನ್ನು ಮಾಡುತ್ತಿದ್ದು, ಕಳೆದ ಮೂರು

ಸಮ್ಮೇಳನಗಳಲ್ಲಿ ನಾವಿಕದ ಸ್ಮರಣ ಸಂಚಿಕೆಯ ಸಂಪಾದಕತ್ವವನ್ನು ವಹಿಸಿಕೊಂಡಿದ್ದಾರೆ. ಪತ್ರಿಕೆಗಳಿಗೆ ಆಗಾಗ ಲೇಖನಗಳನ್ನು ಬರೆಯುವದರ ಜೊತೆಗೆ ಕತೆಗಳನ್ನು ಬರೆಯುತ್ತಾರೆ. ಕನ್ನಡದಲ್ಲಿ ತಮ್ಮದೇ ಬ್ಲಾಗ್‌ಅನ್ನು ನಿರ್ವಹಿಸುತ್ತಿದ್ದು ನಿಯಮಿತವಾಗಿ ಲೇಖನಗಳನ್ನು ಬರೆಯುತ್ತಿರುತ್ತಾರೆ.

Phone: +91- 9538027721

Email: sanjota.purohit@gmail.com

## ಲೇಖನಗಳು

### ಅರ್ಚನಾ ಮೂರ್ತಿ
**(ಲೇಖನ : ಮೂಕಜ್ಜಿ ಮತ್ತು ಸ್ತ್ರೀ ಸಂವೇದನೆ)**



ಕು॥ ಅರ್ಚನಾ ಮೂರ್ತಿ, ಜಯಶ್ರೀ ಹಾಗು ಪ್ರಕಾಶ್ ಮೂರ್ತಿಯವರ ಮಗಳಾಗಿದ್ದು ಪ್ರಸ್ತುತ ಆಸ್ಟಿನ್ ನಗರದಲ್ಲಿರುವ University of Texas Law Schoolನಲ್ಲಿ ವ್ಯಾಸಂಗ ಮಾಡುತ್ತಿದ್ದಾಳೆ. ಭರತನಾಟ್ಯ, ಕರ್ನಾಟಕ ಶಾಸ್ತ್ರೀಯ ಸಂಗೀತ, ಚಿತ್ರಕಲೆಗಳ ಹವ್ಯಾಸಗಳನ್ನು ಬೆಳೆಸಿಕೊಂಡಿರುವ ಅರ್ಚನಾಳಿಗೆ ಸಾಹಿತ್ಯದಲ್ಲಿ ವಿಶೇಷವಾದ ಆಸಕ್ತಿ. ಆಂಗ್ಲ ಭಾಷೆಗೆ ತರ್ಜುಮೆಯಾಗಿರುವ ಕನ್ನಡದ ಕೆಲವು ಕಾದಂಬರಿಗಳನ್ನು ಓದಿ ವಿಮರ್ಶಿಸಿದ್ದಾಳೆ.

Email: 1709archanamurthy@gmail.com

(ಅರ್ಚನಾ ಇಂಗ್ಲೀಷಿನಲ್ಲಿ ಬರೆದ ಲೇಖನವನ್ನು ಕನ್ನಡಕ್ಕೆ ಅನುವಾದ ಮಾಡಿದವರು: ಭಾರ್ಗವ ಬಿ.ವಿ.)

### ಅನಿಲ ದೇಶಪಾಂಡೆ
**(ಲೇಖನ : ವಿಶ್ವರೂಪಿ)**



ಈಗ ಅಮೇರಿಕೆಯಲ್ಲಿ ನೆಲೆಸಿರುವ, ಹುಟ್ಟೂರು – ಮುದಗಲ್, ರಾಯಚೂರು ಜಿಲ್ಲೆಯ ಅನಿಲ ದೇಶಪಾಂಡೆ ವೃತ್ತಿಯಿಂದ ಸಾಫ್ಟ್ವೇರ್ ಕಂಪನಿಯ ಮಾಲಕರು, ಪ್ರವೃತ್ತಿಯಿಂದ ಚಿಂತಕ, ಲೇಖಕ, ಪ್ರವಚನಕಾರ, ಸಮಾಜ ಸೇವಕ, ಕರಕುಶಲ ಕರ್ಮಿ ಹಾಗು ಪಯಣಿಗ! ಲೇಖಕರಾಗಿ ಸುಮಾರು 25 ಲೇಖನಗಳು, 45 ಪದ್ಯಗಳು, 2

ನಾಟಕಗಳು, ಹಲವಾರು ಚುಟುಕಗಳನ್ನು ರಚಿಸಿರುವರು. ಇವರ ಪ್ರವಚನಗಳು; ಅಧ್ಯಾತ್ಮ, ಭಾಗವತ, ವೇದ-ಉಪನಿಷತ್ತು, ಬಸವ ತತ್ವ, ಓಶೋ ಚಿಂತನೆ, ಹಾಸ್ಯ-ಹರಟೆ (Standup comedy) ಮತ್ತು ಕಾವ್ಯ ವಾಚನ ಇತ್ಯಾದಿ ಒಳಗೊಂಡಿವೆ. ಕರಕುಶಲತೆಯಲ್ಲಿ ಹೆಚ್ಚಾಗಿ ಕಟ್ಟಿಗೆ ಕೆಲಸಗಳು (ಬಡಿಗ Carpentry work), ಚಿತ್ರಗಳು, ಕಲಾಕೃತಿಗಳು ಮತ್ತು ಅಮೂರ್ತ ಕಲೆ (abstract art) ಇತ್ಯಾದಿ ಒಳಗೊಂಡಿವೆ. ಸಮಾಜ ಸೇವೆ ಸಂಸ್ಥೆಗಳು; ಕನ್ನಡ ಕೂಟಗಳು, ಸೇವಾ ಇಂಟರ್‌ನ್ಯಾಷನಲ್ ಸಂಸ್ಥೆ, ಹಿಂದು ಸ್ವಯಂಸೇವಕ ಸಂಘ ಇತ್ಯಾದಿ ಒಳಗೊಂಡಿವೆ. ಅನಿಲ ದೇಶಪಾಂಡೆ ಪಯಣಿಗನಾಗಿ 23 ದೇಶಗಳಲ್ಲಿ ಸುತ್ತಾಡಿದ್ದಾರೆ. ಇವರ ಲೇಖನಗಳು ಮತ್ತು ಪದ್ಯಗಳು ಹೆಚ್ಚಾಗಿ ದಿನನಿತ್ಯ ನಡೆಯುವ ಸಾಮಾನ್ಯ ಘಟನೆಗಳು ಸಾರುವ ಬದುಕಿನ ಸಂದೇಶಗಳ ಬಗೆಗೆ. ಒಂದು ಚಿಕ್ಕ ಸಂಗತಿಯಿಂದ ಪ್ರಾರಂಭವಾಗುವ ಲೇಖನಗಳು, ಸೃಷ್ಟಿಕರ್ತನ ಇರುವು ಮತ್ತು ಅದರ ಅರಿವಿನ ಬಗೆಗೆ ಅಥವಾ ವೈಜ್ಞಾನಿಕ ಸಿದ್ಧಾಂತಕ್ಕೆ ಸರಿಹೊಂದಿಸಲು ಪ್ರಯತ್ನ ಮಾಡುತ್ತವೆ! ಇವರದು ಚಿಕ್ಕ ಮತ್ತು ಚೊಕ್ಕ ಕುಟುಂಬ, "ನಾನು, ಆನು, ತಾನು ಮತ್ತು ಅವನು" (ನಾನು, ನನ್ನ ಹೆಂಡತಿ, ನಮ್ಮ ಮಗ ಮತ್ತು ನಾವೆಲ್ಲ ನಂಬಿರುವ ಅವನು ಭಗವಂತ). ಅನಿಲ ದೇಶಪಾಂಡೆ ಶಿಕಾಗೊ ನಗರದ ಪ್ಯಾಲಟೈನ್ ಉಪನಗರದಲ್ಲಿ ನೆಲೆಸಿದ್ದಾರೆ.

Phone: 2246594430

Email: anilrd@aqbsystems.com

**ಆನಂದವರ್ಧನ**

**(ಲೇಖನ : ಸ್ತ್ರೀ ಸಂವೇದನೆ - ವೈಜ್ಞಾನಿಕ, ಪೌರಾಣಿಕ ಹಿನ್ನೆಲೆಯಲ್ಲಿ ಸ್ವವಿಮರ್ಶೆಯ ನೋಟ)**



ಶ್ರೀಮತಿ ಲಕ್ಷ್ಮಿದೇವಿ, ಶ್ರೀ ಜಿ. ಟಿ. ನಾರಾಯಣ ರಾವ್ ದಂಪತಿಗಳ ದ್ವಿತೀಯ ಪುತ್ರನಾಗಿ 1957ರಲ್ಲಿ ಪುತ್ತೂರಿನಲ್ಲಿ ಜನನ. ಓದಿ, ಬೆಳೆದದ್ದು ಮಡಿಕೇರಿ, ಬಳ್ಳಾರಿ, ಬೆಂಗಳೂರು, ಮೈಸೂರಲ್ಲಿ. 1980ರಲ್ಲಿ ಬಿ.ಇ. ಮುಗಿಸಿ ಅಸ್ಸಾಮ್, ರಾಜಸ್ಥಾನ, ಬೆಂಗಳೂರು, ಕ್ಯಾಲಿಫ಼ೋರ್ನಿಯ ಮತ್ತೆ ಕಡೆಯದಾಗಿ ಓರಿಗನ್ನಿನಲ್ಲಿ ಇಂಟೆಲ್ಲಿಗೆ ಕೆಲಸ ಮಾಡಿ 2020ರಿಂದ ನಿವೃತ್ತಜೀವನ. ಪತ್ನಿ, ಇರ್ವರು ಪುತ್ರಿಯರು ಮತ್ತು ಇಬ್ಬರು ಮೊಮ್ಮಗಳಂದಿರ ಕುಟುಂಬ.

3-7 ಇಯತ್ತಿನೊಳಗೆ Dickens, Hugo, Dumas, Conan Doyle ಇತ್ಯಾದಿ ಮಹೋದಯರ ಪುಸ್ತಕದ ಓದು, ಮತ್ತು ರಾಮಾಯಣ, ಮಹಾಭಾರತ, ಭಾಗವತ ಕನ್ನಡ ಪುಸ್ತಕಗಳ ಸೀಮಿತ ಓದು. ಬರವಣಿಗೆ ಶೂನ್ಯ. ವಾರಕ್ಕೆ

7ರಂತೆ ಬೇಸಿಗೆ ರಜೆಯಲ್ಲಿ ಇಡೀ ರಾತ್ರಿ ಯಕ್ಷಗಾನ ನೋಡಿದ್ದು, ಯಕ್ಷಗಾನ ಮತ್ತು ತಂದೆಯವರ ನಿತ್ಯ ನಿರಂತರ ಕನ್ನಡದ ಡಿಂಡಿಮ ಇವರ ಮೇಲೆ ತುಂಬಾ ಪ್ರಭಾವ ಬೀರಿದೆ. ಕಳೆದ 4 ದಶಕಗಳಲ್ಲಿ ಅಚ್ಯುತ ದಾಸರು, ಶತಾವಧಾನಿ ಗಣೇಶರು ಮುಂತಾದವರ ಘನ ಪ್ರವಚನಗಳು ಇವರ ಕನ್ನಡದ ಅಂಟನ್ನು ಒಣಗಲು ಬಿಟ್ಟಿಲ್ಲ. 1990ರಲ್ಲಿ ಪೋರ್ಟ್‌ಲ್ಯಾಂಡ್ ಕನ್ನಡ ಕೂಟದ ಸ್ಥಾಪನೆ. ಅನೇಕಾನೇಕ ಪೌರಾಣಿಕ ನಾಟಕಗಳನ್ನು ಮಾಡಿಸಿದ ಅನುಭವ. 66 ವರ್ಷಗಳ ಜ್ಞಾನ ಸಂಪಾದನೆ, ಕನ್ನಡ ಭಾಷಾ ಸಾಮರ್ಥ್ಯ ಮತ್ತು ಮಂಡು ತಲೆಗೆ ಬುದ್ಧಿ ಹೇಳಿ ಸ್ತ್ರೀ ಸಂವೇದನೆಯ ಬಗ್ಗೆ ಅರಿವು ಮೂಡಿಸಿದ ಮಗಳಂದಿರ ಬುದ್ಧಿವಾದ – ಇವೆಲ್ಲದರ ಫಲಶ್ರುತಿಯೇ ಈ ಚೊಚ್ಚಲ ಲೇಖನ ಎಂದು ಇವರ ಅಂಬೋಣ. ಅದ್ವೈತದ ಆಕಾರ ಮೂರ್ತಿಯಾದ ವಿಜ್ಞಾನಿ ಶ್ರೇಷ್ಠ ಆದಿ ಶಂಕರಾಚಾರ್ಯರಿಗೆ ತಮ್ಮ ಈ ಲೇಖನವನ್ನು ಅರ್ಪಿಸಿದ್ದಾರೆ.

Phone: 503-515-8575

Email: anandavardhana57@gmail.com

**ಡಾ॥ ಉಮಾ ವೆಂಕಟೇಶ್**

**(ಲೇಖನ : ಮೇರಿ ಆನಿಂಗ್ – ಜಗತ್ತಿನ ಶ್ರೇಷ್ಠ ಪಳೆಯುಳಿಕೆ ಅನ್ವೇಷಕಿ)**



ಇವರು ಹುಟ್ಟಿ, ಬೆಳೆದು ವಿದ್ಯಾಭ್ಯಾಸ ನಡೆಸಿದ್ದು ಸಂಸ್ಕೃತಿಯ ತವರೂರು ಮೈಸೂರು ನಗರದಲ್ಲಿ. ಮುಂದೆ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಸಸ್ಯಶಾಸ್ತ್ರದಲ್ಲಿ ಡಾಕ್ಟರೇಟ್ ಪದವಿ ಪಡೆದು, ಅಲ್ಲಿನ ಸ್ಥಳೀಯ ಕಾಲೇಜಿನಲ್ಲಿ ಎರಡು ವರ್ಷಗಳ ಕಾಲ ಉಪನ್ಯಾಸಕಿಯಾಗಿ ಕಾರ್ಯ ನಿರ್ವಹಣೆ. ಮದುವೆಯಾದ ನಂತರ ಪುಣೆಯಲ್ಲಿ ವಾಸ್ತವ್ಯ. 1996ರಲ್ಲಿ ಪತಿ ಮತ್ತು ಇಬ್ಬರು ಮಕ್ಕಳ ಜೊತೆಯಲ್ಲಿ ಯುನೈಟೆಡ್ ಕಿಂಗ್ಡಮ್ಮಿನಲ್ಲಿರುವ ಕಾರ್ಡಿಫ್ ನಗರಕ್ಕೆ ವಲಸೆ. ಅಲ್ಲಿ 20 ವರ್ಷಗಳ ವಾಸ್ತವ್ಯದ ನಂತರ, ಮತ್ತೊಮ್ಮೆ 2016ರ ಆಗಸ್ಟ್ ತಿಂಗಳಲ್ಲಿ, ಅಮೆರಿಕೆಯ ಪೆನ್ಸಿಲ್ವೇನಿಯಾ ರಾಜ್ಯದಲ್ಲಿರುವ ಸ್ಟೇಟ್ ಕಾಲೇಜಿಗೆ ವಲಸೆ. ಪ್ರಸಕ್ತದಲ್ಲಿ, ಪೆನ್ ಸ್ಟೇಟ್ ವಿಶ್ವವಿದ್ಯಾಲಯದಲ್ಲಿರುವ ಸಸ್ಯತಳಿಶಾಸ್ತ್ರ ವಿಭಾಗದಲ್ಲಿ ಸಂಶೋಧಕಿಯಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಬಾಲ್ಯದಿಂದ ಕನ್ನಡ ಭಾಷೆ ಮತ್ತು ಸಾಹಿತ್ಯದಲ್ಲಿ ಆಸಕ್ತಿ. ಶಾಲಾ–ಕಾಲೇಜಿನ ದಿನಗಳಿಂದಲೇ ಕನ್ನಡ ಕಾದಂಬರಿ, ಕಥೆ, ಪ್ರಬಂಧಗಳನ್ನು ಓದುವ ಹವ್ಯಾಸ. ಕನ್ನಡದಲ್ಲಿ ಬರೆಯುವ ಹವ್ಯಾಸವಿದ್ದರೂ, ಅದು ಗಂಭೀರರೂಪ ಪಡೆದದ್ದು ಯು.ಕೆ. ಕನ್ನಡ ಬಳಗದ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ 15 ವರ್ಷಗಳ ಕಾಲ ಸಕ್ರಿಯವಾಗಿ ಭಾಗವಹಿಸಿ, ಬಳಗದ 25ನೆಯ ಬೆಳ್ಳಿ ವರ್ಷದ ಸ್ಮರಣ ಸಂಚಿಕೆಯ ಸಂಪಾದಕೀಯ ಮತ್ತು ಸಾಹಿತ್ಯಗೋಷ್ಠಿಯ ಆಗುಹೋಗುಗಳನ್ನು ಯಶಸ್ವಿಯಾಗಿ

ನಿರ್ವಹಿಸಿದಾಗ ಎನ್ನಬಹುದು. ಮುಂದೆ ಕನ್ನಡ ಬಳಗದ ಸಾಹಿತ್ಯ ವೇದಿಕೆ 'ಅನಿವಾಸಿ' ಜಾಲಜಗುಲಿಯ ಸ್ಥಾಪನೆ ಮತ್ತು ವೇದಿಕೆಯ ಕಾರ್ಯಚಟುವಟಿಕೆಗಳಲ್ಲಿ ಮುಂದಾಳತ್ವ ವಹಿಸಿ ಅನೇಕ ಲೇಖನಗಳನ್ನು ಬರೆದು, ಪ್ರಕಟಿಸುತ್ತಾ ಬಂದಿದ್ದಾರೆ. ಜನಪ್ರಿಯ ವಿಜ್ಞಾನದ ಲೇಖನಗಳನ್ನು ಕರ್ನಾಟಕದ ದಿನ ಮತ್ತು ವಾರಪತ್ರಿಕೆಗಳಲ್ಲಿ ಪ್ರಕಟಿಸಿದ್ದಾರೆ. ಕರ್ನಾಟಕ ಶಾಸ್ತ್ರೀಯ ಸಂಗೀತ, ಗಮಕವಾಚನ, ಸಸ್ಯೋದ್ಯಾನಗಳಿಗೆ ಭೇಟಿ, ಜನಪ್ರಿಯ ವಿಜ್ಞಾನ ಪುಸ್ತಕ, ಕಾದಂಬರಿಗಳನ್ನು ಓದುವುದು ಇವರ ಹವ್ಯಾಸಗಳು. ಕಳೆದ ವರ್ಷ (2021) ಬಿಡುಗಡೆಯಾಗಿರುವ ಜನಪ್ರಿಯ ವಿಜ್ಞಾನ ಪುಸ್ತಕ The Edge of Physics ಕನ್ನಡ ಅನುವಾದವನ್ನು ನವಕರ್ನಾಟಕ ಪ್ರಕಾಶಕರು ಹೊರತಂದಿದ್ದಾರೆ.

Email: venkatesh.uma@gmail.com

**ಟಿ. ಎನ್. ಕೃಷ್ಣರಾಜು**

**(ಲೇಖನ : ಪಗಡೆ ಆಟದಲ್ಲಿ ಸೋತು ಬಳುಕಿದ ಭಾನುಮತಿಯ ಸಂವೇದನೆಗಳು)**



ಹುಟ್ಟಿ ಬೆಳೆದದ್ದು, ಕೊಡವೂರು, ಪಿರಿಯಾಪಟ್ಟಣ, ಮೈಸೂರು, ಮುಂಬಯಿ, ಮತ್ತು ಚಿಕಾಗೊ. ವೃತ್ತಿಯಲ್ಲಿ ನವಜಾತ ಶಿಶುವೈದ್ಯ ಪರಿಣತ; ಇಲಿನಾಯ್ ವಿಶ್ವವಿದ್ಯಾನಿಲಯದಲ್ಲಿ ಪ್ರಾಧ್ಯಾಪಕ (1974–2002); ನ್ಯಾಷನಲ್ ಇನ್‌ಸ್ಟಿಟ್ಯೂಟ್ಸ್ ಅಫ್ ಹೆಲ್ತ್, ಮೇರಿಲ್ಯಾಂಡ್, ಅಲ್ಲಿ ಶಾಖಾಧಿಕಾರಿ (2002ರಿಂದ).

**ಸಾಹಿತ್ಯ – ಕನ್ನಡ:**

'ಬೇತಾಳರಾಯ ಮತ್ತು ಇತರ ಕಥೆಗಳು' (1980), ಸಂಕಲನ.

'ಪಶ್ಚಿಮಾಯಣ'; ಕಾದಂಬರಿ (1981).

'ಸಾವಿರ ಪಕ್ಷಿಗಳು'; ನೊಬೆಲ್ ಪಾರಿತೋಷಕ ಪಡೆದ ಎಸುನಾರಿ ಕವಬಾಟರ Thousand Cranes ಕಾದಂಬರಿಯ ಅನುವಾದ (2009).

'ಸೂರ್ಯನೆಡೆಗೆ ಸಮುದ್ರಯಾನ: ವಾಸ್ಕೋಡಿ ಗಾಮನ ಭಾರತ ಯಾತ್ರೆಗಳು'; ದೇಶಕಾಲ, ಸಂಚಿಕೆ 9 (2008)

'ಕಥೆಗಳು ಮತ್ತು ಕಾದಂಬರಿ'; ಅದುವರೆಗಿನ ಬರಹಗಳ ಸಂಕಲನ (2011)

**ಇಂಗ್ಲಿಷ್:**

The Importance of Having a Brain: Tales from the History of Medicine (The Outskirts Press, April 2012).

Nobel Chronicles: A Handbook of Nobel Prize Winners in Physiology or Medicine: 1901—2001 (Author-House, Bloomington, IN 2002).

Don't Stand in Front of a Palace or Behind a Horse: An Illustrated Book of South Indian Proverbs (Author-House, Bloomington, IN 2002)

Poems and a Novella by A. K. Ramanujan (Co-Translator from Kannada; Oxford University Press, New Delhi Branch; 2006) Translation from Kannada into English.

Email: rajutonse@outlook.com

**ಗುಂಡೂ ಶಂಕರ್**

**(ಲೇಖನ : ಸ್ತ್ರೀಯೊಬ್ಬಳ ಆದರ್ಶ ರಾಜ್ಯ – ಸಲ್ಮಾನ್ ರಶ್ದಿಯ ಕಣ್ಣಲ್ಲಿ 'ವಿಕ್ಟರಿ ಸಿಟಿ' – ಒಂದು ಅವಲೋಕನ)**



ಪತ್ನಿ ಶೈಲಜ ಮತ್ತು ಇಬ್ಬರು ಮಕ್ಕಳೊಂದಿಗೆ ಫ್ರೀಹೋಲ್ಡ್ ನ್ಯೂಜರ್ಸಿಯಲ್ಲಿ ವಾಸ ಮಾಡುತ್ತಿದ್ದಾರೆ. Indian Institute of Science, Bangalore ನಿಂದ Engineering Degree ಮತ್ತು Indian Institute of Management, Calcuttaನಿಂದ M. B. A. ಡಿಗ್ರಿ ಪಡೆದರು. ಈಗ Management Consultant ಆಗಿ ಕೆಲಸ ಮಾಡುತ್ತಿದ್ದಾರೆ. ಸಾಹಿತ್ಯ ಮತ್ತು ಕಲೆಯಲ್ಲಿ ಆಸಕ್ತಿ. ಕನ್ನಡ ಸಾಹಿತ್ಯ ರಂಗ ಸಂಸ್ಥೆಯ ಕಾರ್ಯಕಾರೀ ಸಮಿತಿಯಲ್ಲಿದ್ದು 15 ವರ್ಷಗಳಿಂದ ಸಂಸ್ಥೆಯ ಕಾರ್ಯಕ್ರಮಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತಾರೆ.

Email: gundu.shankar@gmail.com

**ಜ್ಯೋತಿ ಮಹಾದೇವ್**



**(ಲೇಖನ : ಜೀವಪರ ಸಂವೇದನೆ)**

ಲೇಖಕಿ, ಹಿಪ್ನೋಥೆರಪಿಸ್ಟ್; ಮಣಿಪಾಲ.

ವಿದ್ಯಾರ್ಹತೆ: ಬಿ.ಎಸ್ಸಿ., ಕನ್ನಡ ಎಂ.ಎ., ತುಳು ಎಂ.ಎ. – ಕರ್ನಾಟಕದಲ್ಲಿ.

ಸೈಕಾಲಜಿಯಲ್ಲಿ ಎಸೋಸಿಯೇಟ್ ಡಿಗ್ರಿ, ಹಿಪ್ನೋ

ಥೆರಪಿ ಹಾಗೂ ಪರ್ಸನಲ್ ಫಿಟ್ನೆಸ್ ಟ್ರೈನಿಂಗ್‌ಗಳಲ್ಲಿ ಅಮೆರಿಕದ ಕ್ಯಾಲಿಫೋರ್ನಿಯಾದ ಪ್ರತಿಷ್ಠಿತ ಕಾಲೇಜುಗಳಲ್ಲಿ ವಿಶೇಷ ತರಬೇತಿ.

ಸುಪ್ತದೀಪ್ತಿ ಎನ್ನುವ ಕಾವ್ಯನಾಮದಲ್ಲಿ ಇವರು ಬರೆದ ಕವನ, ಕಥೆ, ಹರಟೆಗಳು ಹಾಗೂ ಬೆಳಗು–ಬೈಗು–ಇರುಳುಗಳ ಸಂದೇಶ ಸಾಲ್ಮಿಂಚುಗಳು ಸಂಕಲನಗಳಾಗಿವೆ. ಅಮೆರಿಕದಿಂದ ಪ್ರಕಟವಾಗುವ ಹಲವು ಕನ್ನಡ ಸಂಚಿಕೆಗಳ ಹಾಗೂ ಸದ್ಗ್ರಂಥಗಳ ಸಂಪಾದಕಿ, ಸಹಸಂಪಾದಕಿಯಾಗಿಯೂ ಕಾರ್ಯ ನಿರ್ವಹಿಸಿದ್ದಾರೆ. ಒಂದೂವರೆ ದಶಕಕ್ಕೂ ಹೆಚ್ಚು ಕಾಲ ಅಮೆರಿಕದಲ್ಲಿದ್ದು, 2010ರಲ್ಲಿ ಪತಿ ಮಹಾದೇವ ಮರ್ಡಿತ್ತಾಯರೊಂದಿಗೆ ಭಾರತಕ್ಕೆ ಮರಳಿಬಂದು, ಮಣಿಪಾಲ ಅನಂತನಗರದಲ್ಲಿ 'ಹಿಪ್ನೋಥೆರಪಿಸ್ಟ್' ಆಗಿ ಸ್ವೋದ್ಯೋಗದಲ್ಲಿದ್ದಾರೆ. ಕೆಲವಾರು ಶಾಲೆ–ಕಾಲೇಜುಗಳಲ್ಲಿ ವಿದ್ಯಾರ್ಥಿಗಳನ್ನುದ್ದೇಶಿಸಿ ಮನಃಸ್ವಾಸ್ಥ್ಯದ ಬಗೆಗೆ ಉಪನ್ಯಾಸಗಳನ್ನು ನೀಡುತ್ತ, ವಿದ್ಯಾರ್ಥಿಗಳ ಏಳಿಗೆಯ ಹಾದಿಯಲ್ಲಿ ನೆರವಾಗುತ್ತಿದ್ದಾರೆ.

**ಪ್ರಕಟಿತ ಕೃತಿಗಳು:**

ಸ್ವಂತ ಕೃತಿಗಳು: ಭಾವಲಹರಿ, ಭಾವಗಾನ, ಭಾವಬಿಂಬ, ಭಾವಲೋಕ, ಅಗ್ನಿಮುಡಿ (ಕವನ ಸಂಕಲನಗಳು); ಭಾವಯಾನ (ಕತೆ–ಹರಟೆಗಳ ಸಂಕಲನ); ಮಿನುಗು ಮಿಂಚು (ಬೆಳಗು–ಬೈಗು–ಇರುಳುಗಳ ಸಂದೇಶ ಸಾಲ್ಮಿಂಚು ಸಂಕಲನ).

(ಪ್ರಸ್ತುತ ಒಂದು ಕವನ ಸಂಕಲನ – 'ದೀಪ ನಕ್ಕಿತು', ಒಂದು ಪ್ರಬಂಧ ಸಂಕಲನ – 'ಅಂಗಿ ಚುಂಗು ಸೀರೆ ಸೆರಗು', ಹಾಗೂ ಎರಡು ಸಂದೇಶ ಸಾಲ್ಮಿಂಚು ಸಂಕಲನಗಳು ಅಚ್ಚಿನ ತಯಾರಿಯಲ್ಲಿವೆ.)

**ಸಹ–ಸಂಪಾದಿತ ಕೃತಿಗಳು:**

ಶ್ರೀಗಂಧ, ಸ್ವರ್ಣಸೇತು (ಉತ್ತರ ಕ್ಯಾಲಿಫೋರ್ನಿಯಾ ಕನ್ನಡ ಕೂಟದ ವಾರ್ಷಿಕ ಸಂಚಿಕೆಗಳು),

ಬೇರು ಸೂರು, ರಂಗ ತರಂಗ, ಅಮೆರಿಕನ್ನಡ ಬರಹಗಾರರ ಮಾಹಿತಿ ಕೋಶ (ಅಮೆರಿಕದ 'ಕನ್ನಡ ಸಾಹಿತ್ಯ ರಂಗ'ದ ವಿಶೇಷ ಗ್ರಂಥಗಳು); ಕಬ್ಬದೊಕ್ಕಲು (ಸಾಹಿತ್ಯ ಲಹರಿ ಬಳಗದ ಆಯ್ದ ಕವನಗಳ ಸಂಗ್ರಹ);

ಸೂರ್ಯಕಾಂತಿ (ದಿ. ರವಿಶಂಕರ ಒಡ್ಡಂಬೆಟ್ಟರ ಸಮಗ್ರ ಸಾಹಿತ್ಯ).

Email: jyothimahadev811@gmail.com

**ಜ್ಯೋತಿ ವೆಂಕಟಸುಬ್ರಹ್ಮಣ್ಯ**

**(ಲೇಖನ : ಹೊಸ್ತಿಲು ದಾಟಿದವರು; ಲೇಖನ ಅನುವಾದ: ಸ್ತ್ರೀಯೊಬ್ಬಳ ಆದರ್ಶ ರಾಜ್ಯ-ಸಲ್ಮಾನ್ ರಶ್ದಿಯ ಕಣ್ಣಲ್ಲಿ; 'ವಿಕ್ಟರಿ ಸಿಟಿ'-ಒಂದು ಅವಲೋಕನ; ಲೇಖನ ಅನುವಾದ: ವಂಶವೃಕ್ಷ ಮತ್ತು ಸ್ತ್ರೀಪರ ಚಿಂತನೆ)**



ಮೂಲತಃ ಮೈಸೂರಿನವರು. ವೃತ್ತಿಯಲ್ಲಿ ಆಯುರ್ವೇದ ವೈದ್ಯೆ. ಪ್ರವೃತ್ತಿಯಲ್ಲಿ ಸಾಹಿತ್ಯಾಸಕ್ತೆ. ಬರೆಯುವುದಕ್ಕಿಂತ ಓದುವುದರಲ್ಲಿ ಹೆಚ್ಚು ಉತ್ಸಾಹ. ಇತ್ತೀಚಿಗೆ ಕೆಲವು ವರ್ಷಗಳಿಂದ ದೃಷ್ಟಿವಿಕಲಚೇತನರಿಗಾಗಿ ಧ್ವನಿಪುಸ್ತಕಗಳನ್ನು ಹೊರತರುತ್ತಿರುವ 'ಕನ್ನಡ ಪುಸ್ತಕ' ಸಂಸ್ಥೆಯಲ್ಲಿ ಸ್ವಯಂ ಸೇವಕಿಯಾಗಿ ತೊಡಗಿಸಿಕೊಂಡಿದ್ದಾರೆ. 2022ರಲ್ಲಿ ಕನ್ನಡ ಸಾಹಿತ್ಯ ರಂಗ ಪ್ರಕಟಿಸಿದ 'ಅಮೆರಿಕನ್ ಜಾನಪದ' ಗ್ರಂಥದ ಸಹ ಸಂಪಾದಕಿಯಾಗಿ ಕಾರ್ಯ ನಿರ್ವಹಿಸಿದ್ದಾರೆ. ಕನ್ನಡದ ನಿಯತ ಕಾಲಿಕದಲ್ಲಿ ಇವರ ಸಣ್ಣ ಕಥೆ ಪ್ರಕಟವಾಗಿದೆ. ಸದ್ಯಕ್ಕೆ ವಯೋಮಿಂಗ್ ರಾಜ್ಯದ ಲ್ಯಾರಮಿಯಲ್ಲಿ ಪತಿಯೊಂದಿಗೆ ವಾಸವಾಗಿದ್ದಾರೆ.

Email: jyolight@gmail.com

**ತ್ರಿವೇಣಿ ಶ್ರೀನಿವಾಸರಾವ್**

**(ಲೇಖನ: ವಚನ ಚಳುವಳಿ ತಂದ ಸ್ತ್ರೀ ಸ್ವಾತಂತ್ರ್ಯದ ಬಳುವಳಿ)**



ಹುಟ್ಟೂರು ಚಿಕ್ಕಮಗಳೂರು ಜಿಲ್ಲೆಯ ಕಡೂರು. 'ತುಳಸಿವನ' ಮತ್ತು 'ತಿಳಿನೀಲಿ ಪೆನ್ನು' ಎಂಬೆರಡು ಪ್ರಕಟಿತ ಪುಸ್ತಕಗಳು. ಕರ್ನಾಟಕದ ಪ್ರಮುಖ ಪತ್ರಿಕೆಗಳಲ್ಲಿ ಕಥೆ, ಲೇಖನಗಳು ಪ್ರಕಟಗೊಂಡಿವೆ. ಲಲಿತಪ್ರಬಂಧಗಳು, ವೈಚಾರಿಕ ಲೇಖನ, ಸಿನಿಮಾ, ಸಂಗೀತ, ನಾಟಕ, ದಾಸಸಾಹಿತ್ಯಗಳಲ್ಲಿ ಹೆಚ್ಚಿನ ಆಸಕ್ತಿ. ಕನ್ನಡ ಸಾಹಿತ್ಯರಂಗದ ಪದಾಧಿಕಾರಿಗಳಲ್ಲೊಬ್ಬರು ಮತ್ತು ಕಸಾರಂ ಅಂತರ್ಜಾಲ ತಾಣ ಮತ್ತು ಫೇಸ್‌ಬುಕ್ ಪುಟಗಳ ನಿರ್ವಾಹಕಿ. ಕನ್ನಡ ಸಾಹಿತ್ಯ ರಂಗವು ಪ್ರಕಟಿಸಿದ 'ಮಥಿಸಿದಷ್ಟೂ ಮಾತು' ಪುಸ್ತಕದ ಮುಖ್ಯ ಸಂಪಾದಕಿಯಾಗಿದ್ದು, 'ಬೇರು ಸೂರು' ಗ್ರಂಥಗಳ ಸಂಪಾದಕ ಮಂಡಳಿಯಲ್ಲಿದ್ದು ಕಾರ್ಯ ನಿರ್ವಹಿಸಿರುವುದರ ಜೊತೆಗೆ ಕನ್ನಡ ಸಾಹಿತ್ಯ ರಂಗವು ಹೊರತಂದಿರುವ ಎಲ್ಲಾ ಗ್ರಂಥಗಳಲ್ಲಿಯೂ ತ್ರಿವೇಣಿಯವರ ಲೇಖನಗಳು ಪ್ರಕಟಗೊಂಡಿವೆ.

‘ತುಳಸಿವನ.ಕಾಂ’ ಎಂಬ ಸ್ವಂತ ಅಂತರ್ಜಾಲ ತಾಣವಿದೆ. ವಿದ್ಯಾರಣ್ಯ ಕನ್ನಡ ಕೂಟದ ‘ಸಂಗಮ’ ಸಂಚಿಕೆಯ ಸಂಪಾದಕತ್ವ ನಿರ್ವಹಣೆಯ ಅನುಭವ. ಪ್ರಸ್ತುತ, ಪತಿ ಮತ್ತು ಮಕ್ಕಳೊಂದಿಗೆ ಅಮೆರಿಕದ ಇಲಿನಾಯ್ ರಾಜ್ಯದ ಆರೋರ ನಗರದಲ್ಲಿ ವಾಸ.

Email: sritri@gmail.com

**ನಳಿನಿ ಮೈಯ**

**(ಲೇಖನ : ವಲಸೆಗಾರ್ತಿಯರ ಹೆಜ್ಜೆ ಗುರುತುಗಳು)**



ಮೂಲತಃ ದಕ್ಷಿಣ ಕನ್ನಡ ಜಿಲ್ಲೆಯವರಾದ ಶ್ರೀಮತಿ ನಳಿನಿ ಮೈಯ ಬೆಳೆದಿದ್ದು ಮೈಸೂರಿನ ಹತ್ತಿರದ ಹುಣಸೂರಿನಲ್ಲಿ. ಅವರು ತಮ್ಮ ಪತಿ ಸುಬ್ರಾಯ ಮೈಯ ಅವರೊಡನೆ ಫೇರ್‌ಫ್ಯಾಕ್ಸ್ ವರ್ಜಿನಿಯಾದಲ್ಲಿ ವಾಸಿಸುತ್ತಿದ್ದಾರೆ. ಇವರ ಕತೆಗಳು, ಕವನ, ಪ್ರಬಂಧಗಳು ಅಮೆರಿಕನ್ನಡ, ಶಿಕಾಗೊ ವಲಯದ ಕನ್ನಡ ಪತ್ರಿಕೆ ‘ಸಂಗಮ’ ಹಾಗೂ ಕರ್ನಾಟಕದ ವಿವಿಧ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ‘ಮರೀಚಿಕೆ ಮತ್ತು ಇತರ ಕಥೆಗಳು’ ಎಂಬ ಕಥಾ ಸಂಕಲನವನ್ನು ಹಾಗೂ ‘ಬಂದೀತು ಆ ದಿನ’ ಎಂಬ ಪ್ರಬಂಧ ಸಂಕಲನವನ್ನು ಪ್ರಕಟಿಸಿದ್ದಾರೆ. ಶಿಕಾಗೊ ಕನ್ನಡ ಪತ್ರಿಕೆ ‘ಸಂಗಮ’ದ ಸಂಪಾದಕಿಯಾಗಿದ್ದರು. ಅಮೆರಿಕಾದ ಏಕೈಕ ರಾಷ್ಟ್ರೀಯ ಕನ್ನಡ ಸಾಹಿತ್ಯ ಸಂಸ್ಥೆ ‘ಕನ್ನಡ ಸಾಹಿತ್ಯ ರಂಗ’ ಪ್ರಕಟಿಸಿರುವ ‘ಅವರವರ ಭಕುತಿಗೆ’ ಪುಸ್ತಕದ ಪ್ರಧಾನ ಸಂಪಾದಕಿಯಾಗಿದ್ದರು. ಅಲ್ಲದೆ ‘ಕನ್ನಡ ಸಾಹಿತ್ಯ ರಂಗ’ದ ಕಾರ್ಯಕಾರಿ ಸಮಿತಿಯ ಉಪಾಧ್ಯಕ್ಷೆಯಾಗಿಯೂ ಸೇವೆ ಸಲ್ಲಿಸಿದ್ದರು. ಇವರು ರಚಿಸಿದ ಭಕ್ತಿ ಕವನಗಳ ಗೀತಮಾಲೆ ಅರ್ಚನ ರಾವ್ ಅವರ ಸಂಗೀತ ನಿರ್ದೇಶನದಲ್ಲಿ ಧ್ವನಿಮುದ್ರಿಕೆಯಾಗಿ ಬಂದಿದೆ.

Phone: 630-677-7687

Email. nmaiya@gmail.com

**ಪ್ರಜ್ಞಾ ಕಾಗಿನೆಲೆ**

**(ಲೇಖನ: ‘ಹಿಜಾಬ್’ನ ರಾಧಿಕಾ– ಒಂದು ಸ್ತ್ರೀವಾದೀ ಅನಿಸಿಕೆ)**



ಪ್ರಜ್ಞಾ ಕಾಗಿನೆಲೆ ಟೆಕ್ಸಾಸ್‌ನ ಸೌತ್‌ಲೇಕ್‌ನ ಕ್ಯಾರೊಲ್ ಹಿರಿಯ ಪ್ರೌಢಶಾಲೆಯಲ್ಲಿ 11ನೇ ತರಗತಿ ವಿದ್ಯಾರ್ಥಿನಿ. ಅವರು ಪತ್ರಿಕೋದ್ಯಮ, ಮಾದರಿ ಯುಎನ್, ಶಿಕ್ಷಣ ಮತ್ತು ಇತರ ಪ್ರಗತಿಪರ ಸಾಮಾಜಿಕ ಕಾರಣಗಳ ಬಗ್ಗೆ

ಉತ್ಸುಕರಾಗಿದ್ದಾರೆ. ಅವರು ಹೈಸ್ಕೂಲ್ ಸುದ್ದಿ ಪತ್ರದ ಮುಖ್ಯ ಸಂಪಾದಕರಾಗಿದ್ದಾರೆ. ಅತ್ಯಾಸಕ್ತಿಯ ಓದುಗ ಮತ್ತು ಕಲೆಯ ಉತ್ಸಾಹಿ. ಅವರು ನಾಗರಿಕ ಹಕ್ಕುಗಳ ಕ್ಷೇತ್ರದಲ್ಲಿ ವೃತ್ತಿಜೀವನವನ್ನು ಮುಂದುವರಿಸಲು ಬಯಸುತ್ತಾರೆ.

**ಪೂರ್ಣಿಮಾ ಕಶ್ಯಪ್**

**(ಲೇಖನ : ದೇವಿ – ಮಾಯೆ: ದೇಶಕಾಲಧರ್ಮಾತೀತ ಸ್ತ್ರೀ ಲಹರಿ)**



ಪೂರ್ಣಿಮಾ ಮಾಗಡಿ ಹತ್ತಿರದ ಕುದೂರಿನವರು. ವೃತ್ತಿಯಲ್ಲಿ ಇಂಜಿನಿಯರ್. ಪತಿ ಸುಬ್ರಹ್ಮಣ್ಯ ಮತ್ತು ಅವಳಿ ಮಕ್ಕಳು ಅರ್ಣವ್ –ಅವನಿ. 24 ವರ್ಷಗಳಿಂದ ಅಮೆರಿಕೆ, 17 ವರ್ಷಗಳಿಂದ ಡ್ಯಾಲಸ್, ಟೆಕ್ಸಸ್ ವಾಸಿ. ಸ್ಥಳೀಯ ಕನ್ನಡ ಸಂಘ, ಕನ್ನಡ ಶಾಲೆಗಳಲ್ಲಿ ಸ್ವಯಂಸೇವಕಿ. ಮಾತೃಭಾಷೆಯ ಬಗ್ಗೆ ಸಹಜ ಅಭಿಮಾನ, ಆಸಕ್ತಿ. ಲಲಿತಕಲೆಗಳು ನೆಚ್ಚು, ಪುಸ್ತಕಗಳು ಅಚ್ಚುಮೆಚ್ಚು. ಅಕ್ಷರಮೋಹಿ, ತೋಚಿದ್ದು ಗೀಚುವ ಹವ್ಯಾಸವಿದೆ. ಕೆಲವು ಕವನಗಳು, ಲೇಖನಗಳು ಜಾಲತಾಣ ಮತ್ತು ಸ್ಮರಣ ಸಂಚಿಕೆಗಳಲ್ಲಿ ಪ್ರಕಟವಾಗಿವೆ. ಸ್ಥಳೀಯ ಕನ್ನಡ ಸಂಸ್ಥೆಯ ಈ–ಮ್ಯಾಗಜಿನ್ ಸಂಪಾದಕತ್ವ, ಹತ್ತನೇ ಅಕ್ಕ ಸಮ್ಮೇಳನದ ಸಾಹಿತ್ಯ ಸಮಿತಿಯ ಉಸ್ತುವಾರಿ, ಕನ್ನಡ ಸಾಹಿತ್ಯ ರಂಗದ ಹತ್ತನೇ ವಸಂತ ಸಾಹಿತ್ಯೋತ್ಸವದಲ್ಲೊಬ್ಬ ಸ್ವಯಂಸೇವಕಿ, ಕನ್ನಡ ಸಾಹಿತ್ಯ ರಂಗದ ಕಾರ್ಯಕಾರಿ ಸಮಿತಿಯಲ್ಲೊಂದಿಷ್ಟು ಅಳಿಲು ಸೇವೆ, ಸಮಾನ ಆಸಕ್ತರೊಡನೆ ಅಭ್ಯಾಸ ಮುಂತಾದ ಸಾಹಿತ್ಯ ಪರಿಚಾರಿಕೆಯ ಕೆಲಸಗಳಲ್ಲಿ ಆಸಕ್ತೆ. ಸ್ವಭಾವತಃ ತಿಂಡಿಪೋತಿಯಾದ್ದರಿಂದ ಅಟ್ಟುಣಿಸುವಲ್ಲೂ ಅಭಿರುಚಿಯಿದೆ! ಉಳಿದಂತೆ, ಜೀವನದ ಅಪಾರ ಸಾಧ್ಯತೆಗಳ ಬಗ್ಗೆ ತೀರದ ಕುತೂಹಲ ಮತ್ತು ಉತ್ಸಾಹ.

Email: poornimakh@gmail.com

**ರವಿ ಗೋಪಾಲರಾವ್**

**(ಲೇಖನ : ಶೋಷಿತ ಹೆಣ್ಣಿನ ಪುನಶ್ಚೇತನ : ಸವಾಲುಗಳ ಅವಲೋಕನ)**



ಮೂಲತಃ ಬೆಂಗಳೂರಿನವರಾದ ರವಿ ಗೋಪಾಲ ರಾವ್ ಅಮೆರಿಕಾಗೆ ಬಂದದ್ದು ವಿದ್ಯಾರ್ಥಿಯಾಗಿ. ಯೂನಿವರ್ಸಿಟಿ ಆಫ್ ಪೆನ್ಸಿಲ್ವೇನಿಯದಿಂದ ಡಾಕ್ಟೊರೇಟ್ ಪದವಿ ಪಡೆದು, ಸಿಲಿಕಾನ್ ಕಣಿವೆಯಲ್ಲಿ ಶೈಕ್ಷಣಿಕ, ಕನ್ಸಲ್ಟಿಂಗ್ ಮತ್ತು ಐ. ಟಿ. ಉದ್ಯಮದಲ್ಲಿ ತೊಡಗಿದ್ದಾರೆ.

ಕನ್ನಡಾಭಿಮಾನಿ ರವಿಯವರು ಕೆಲವು ಸಣ್ಣ ಕತೆ ಹಾಗು ಕವನಗಳನ್ನು ಪ್ರಕಟಿಸಿದ್ದಲ್ಲದೆ ಉತ್ತರ ಕ್ಯಾಲಿಫೋರ್ನಿಯ ಕನ್ನಡ ಕೂಟದ 2004 ಮತ್ತು 2016ರ ಸ್ವರ್ಣಸೇತುವಿನ ಪ್ರಧಾನ ಸಂಪಾದಕರಾಗಿ, ಅಕ್ಕ ಸಾಹಿತ್ಯ ವೇದಿಕೆ ಬಿಡುಗಡೆ ಮಾಡಿದ "ಕಥಾಸಂಭ್ರಮ"ದ ಸಹಸಂಪಾದಕರಾಗಿ ಕೆಲಸ ನಿರ್ವಹಿಸಿದ್ದಾರೆ. ಕನ್ನಡ ಸಾಹಿತ್ಯ ರಂಗದ ಪ್ರಕಟಣೆಗಳಲ್ಲಿ ಅವರ ಹಲವಾರು ಪ್ರಬಂಧಗಳು ಮುದ್ರಿತವಾಗಿವೆ. ಕನ್ನಡ ಗಾದೆಗಳು, ಪ್ರೇರಣೆ, ಕನ್ನಡ ಪ್ರಶ್ನಾವಳಿ, ಕಲಸುಮೇಲೋಗರ ಇವರ ಪ್ರಕಟಿತ ಜನಪ್ರಿಯ ಇ-ಪುಸ್ತಕಗಳು. ಇವರು ಬರೆದಿರುವ Kannada Proverbs ಎನ್ನುವ ಇಂಗ್ಲಿಷ್ ಮತ್ತು ಕನ್ನಡ ಪುಸ್ತಕಗಳು ಅಮೆಜಾನ್‌ನಲ್ಲಿ ಪ್ರಿಂಟ್ ಮಾಧ್ಯಮದಲ್ಲಿ ದೊರೆಯುತ್ತವೆ.

ತಮ್ಮ ಬಿಡುವಿನ ವೇಳೆಯಲ್ಲಿ ರವಿಯವರು ಕನ್ನಡ ಪುಸ್ತಕಗಳನ್ನು ಓದುವುದು ಹಾಗು ಸಂಗೀತ ಕೇಳುವ ಹವ್ಯಾಸದೊಂದಿಗೆ ಛಾಯಾಚಿತ್ರ ಮತ್ತು ತರಕಾರಿ ಬೆಳೆಯುವುದರಲ್ಲಿ ಉತ್ಸುಕರಾಗಿರುತ್ತಾರೆ. ಪತ್ನಿ ಪ್ರತಿಭಾ ಮತ್ತು ಇಬ್ಬರು ಪುತ್ರಿಯರೊಂದಿಗೆ ಸ್ಯಾನ್ ಹೋಸೆ ನಗರದಲ್ಲಿ ನೆಲಸಿದ್ದಾರೆ.

Phone: 408-813-2341

Email: ravi.gopalarao@gmail.com

## ಸಿ. ಎಂ. ರಾಮಕೃಷ್ಣ
## (ಲೇಖನ : ಸ್ತ್ರೀಸಂವೇದನೆ)



ಸಿ. ಎಂ. ರಾಮಕೃಷ್ಣರು ಬೆಂಗಳೂರಿನಲ್ಲಿ ಹುಟ್ಟಿ, ಓದಿ, ಬೆಳೆದಿದ್ದು. ಸೆಂಟ್ರಲ್ ಕಾಲೆಜ್‌ನಿಂದ ಗಣಿತಶಾಸ್ತ್ರದಲ್ಲಿ ಬಿ.ಎಸ್‌ಸಿ. (ಆನರ್ಸ್) ಪಡೆದು, ಇಂಡಿಯನ್ ಇನ್ಸ್ಟಿಟ್ಯೂಟ್ ಆಫ್ ಸೈನ್ಸ್‌ನಲ್ಲಿ ಕಮ್ಯುನಿಕೇಷನ್ ಎಂಜಿನೀರಿಂಗ್ ಓದಿ, ನಂತರ ಕೆಲವು ವರ್ಷ ಭಾರತದ 'ಅಟಾಮಿಕ್ ಎನರ್ಜಿ ಎಸ್ಟಾಬ್ಲಿಷ್ಮೆಂಟ್, ಟ್ರಾಂಬೆ, ಬೊಂಬಾಯ್' (ಈಗಿನ 'ಭಾಭಾ ಅಟಾಮಿಕ್ ರಿಸರ್ಚ್ ಸೆಂಟರ್, ಮುಂಬೈ') ನಲ್ಲಿ ಕೆಲಸ ಮಾಡಿ, ಉನ್ನತ ವ್ಯಾಸಂಗಕ್ಕೆ ಅಮೆರಿಕೆಗೆ ಬಂದರು. ಒಹಾಯೊ ಸ್ಟೇಟ್ ಯುನಿವರ್ಸಿಟಿಯಿಂದ ಪಿಎಚ್.ಡಿ. ಪಡೆದು, 'ಕಂಪ್ಯೂಟರ್ ಸೈನ್ಸಸ್ ಕಾರ್ಪೊರೇಷನ್', 'ಲಿಟನ್', ಮತ್ತು 'ಜೆನೆರಲ್ ಎಲೆಕ್ಟ್ರಿಕ್ ಕಂ.'ಗಳಲ್ಲಿ ಹಲವಾರು ವರ್ಷ ಕೆಲಸ ಮಾಡಿದರು.

ಕನ್ನಡ ಸಾಹಿತ್ಯದಲ್ಲಿ ರಾಮಕೃಷ್ಣರು ನುರಿತವರಲ್ಲ. ಮನೆಯಲ್ಲಿ ಮಾತಾಡುವುದು ತಮಿಳು. ಶಾಲಾಕಾಲೇಜ್‌ಗಳಲ್ಲಿ ಅವರ ದ್ವಿತೀಯ ಭಾಷೆ ಸಂಸ್ಕೃತ ಆಗಿತ್ತು. ಕನ್ನಡ ಅವರ ಪ್ರಾದೇಶಿಕ ಭಾಷೆ ಮಾತ್ರ. ಚಿಕ್ಕಂದಿನಿಂದಲೂ ದೇವರಲ್ಲಿ, ಕೇವಲ ನಂಬಿಕೆ ಮಾತ್ರವಲ್ಲ, ಸಂಪೂರ್ಣ ವಿಶ್ವಾಸವನ್ನಿಟ್ಟಿದ್ದ ರಾಮಕೃಷ್ಣರು, ವಿಯೆಟ್ನಾಂ ಯುದ್ಧದಲ್ಲಾದ

ಕ್ರೌರ್ಯ, ಹಿಂಸೆ, ಅತ್ಯಾಚಾರ, ಕಗ್ಗೊಲೆಗಳ ಹಿನ್ನೆಲೆಯಲ್ಲಿ, ಪ್ರಪಂಚದಲ್ಲಿ ಅನೇಕ ಧರ್ಮನಿಷ್ಠರಿಂದಲೇ, ದೇವರ ಮತ್ತು ಮತಗಳ ಹೆಸರಿನಲ್ಲಿಯೇ ಜರುಗಿದ, ಈಗಲೂ ಜರುಗುತ್ತಿರುವ ಮೋಸ, ಅನ್ಯಾಯ, ಅಧರ್ಮ, ಅತ್ಯಾಚಾರ, ಕ್ರೌರ್ಯ, ಕೊಲೆ, ಶಿಶುದಾಸ್ಯ, ಲೈಂಗಿಕದಾಸ್ಯ, ಮುಂತಾದುವುಗಳನ್ನು ಕುರಿತು ಕೂಲಂಕಷವಾಗಿ ಆಲೋಚಿಸಿ, 'ದೇವರು' ಎನ್ನುವುದರ ನಗ್ನಸತ್ಯವನ್ನು ಮನಗಂಡರು. ಈ ನವಾರ್ಜಿತ ಜ್ಞಾನವನ್ನು ತಮ್ಮ ಜೀವನದ ಅನುಭವಗಳಿಗೆ ತಾರ್ಕಣೆ ಮಾಡಿ, ತಮ್ಮ ಎಪ್ಪತ್ತೊಂದನೆಯ ವಯಸ್ಸಿನಲ್ಲಿ ಕೆಲವು ಸಣ್ಣ ಕಥೆಗಳನ್ನು ಬರೆಯತೊಡಗಿದರು; ಅವರ 'ಗೋಪಿಯ ಆತ್ಮಕತೆ' 2007ರಲ್ಲಿ ಪ್ರಕಟವಾಯಿತು.

ನಂತರ, ರಾಮಕೃಷ್ಣರು 'ಪರಬ್ರಹ್ಮ', 'ಪ್ರಾಣ ಮತ್ತು ಆತ್ಮ', 'ನಾನು, ದೇಹ, ಮನಸ್ಸು', ಮುಂತಾದ ಕೆಲವು ವೈಚಾರಿಕ ಪ್ರಬಂಧಗಳನ್ನು ಬರೆದು, ಅವುಗಳನ್ನು 'ಇಂಗ್ಲಿಷ್'ಗೂ ತಾವೇ ಭಾಷಾಂತರಿಸಿದರು. ಅವೆರಡು ಕೃತಿಗಳೂ, ಪ್ರೊಫೆಸರ್ ಶ್ರೀಪತಿ ತಂತ್ರಿಯವರ ಮುನ್ನುಡಿಗಳೊಂದಿಗೆ 'ಪ್ರೇಮ-ಸೌಂದರ್ಯ-ಆನಂದ' ಮತ್ತು 'Love-Beauty-Joy' ಎಂಬ ಶೀರ್ಷಿಕೆಗಳಿಂದ, ಮತ್ತು ರಾಮಕೃಷ್ಣರ 'How to be Heart-Healthy and Avoid Diabetes and Cancer' ಎನ್ನುವ ಪುಸ್ತಕವೂ ಪ್ರಕಟವಾದುವು.

ಪ್ರಸ್ತುತದಲ್ಲಿ, ರಾಮಕೃಷ್ಣರು ತಮ್ಮ ಜೀವನದ ಅನುಭವಗಳನ್ನು ಕುರಿತು ಬರೆಯುತ್ತಿದ್ದಾರೆ.

Phone: 856 -751-0486

Email: ramroja@gmail.com

**ಲೀಲಾರಾವ್-ಹೆಗಡೆ**

**(ಲೇಖನ : ಚಾಮರಾಜಪೇಟೆ ಮಹಿಳೆಯರು)**



ಲೀಲಾರಾವ್-ಹೆಗಡೆ ಅವರು ವೃತ್ತಿಯಿಂದ ವೈದ್ಯೆ. ಕ್ಯಾನ್ಸರ್ ಮತ್ತು ರಕ್ತಸಂಬಂಧಿ ರೋಗಗಳ ತಜ್ಞೆ. ಹಲವು ವರ್ಷ ವೈದ್ಯರಾಗಿ ಸೇವೆ ಸಲ್ಲಿಸಿ ಈಗ ಎರಡು ವರ್ಷಗಳ ಹಿಂದೆ ಪೂರ್ಣಾವಧಿ ವೈದ್ಯ ವೃತ್ತಿಯಿಂದ ನಿವೃತ್ತರಾಗಿದ್ದಾರೆ. ಹುಟ್ಟಿದ್ದು ಬೆಂಗಳೂರು. ಶಿಕ್ಷಣ ಚೆನ್ನೈಯಲ್ಲಿ. ಕ್ಯಾನ್ಸರ್ ಮತ್ತು ರಕ್ತಸಂಬಂಧಿ ರೋಗಗಳಲ್ಲಿ ಹೆಚ್ಚಿನ ತರಬೇತಿ ಮಿಚಿಗನ್ ವಿಶ್ವವಿದ್ಯಾಲಯುದಿಂದ. ಕಳೆದ 28 ವರ್ಷಗಳಿಂದ ಪತಿಯೊಂದಿಗೆ ಶಿಕಾಗೋ ವಲಯದಲ್ಲಿ ವಾಸಿಸುತ್ತಿದ್ದಾರೆ. ಲಲಿತಕಲೆ, ಸಾಹಿತ್ಯಗಳಲ್ಲಿ ತುಂಬ ಆಸಕ್ತಿ ಶಾಲಾ ದಿನಗಳಿಂದಲೂ ಇಂಗ್ಲಿಷ್ ಕಾದಂಬರಿಗಳನ್ನು ಓದುವದು, ಸ್ನೇಹಿತರೊಂದಿಗೆ ಚರ್ಚಿಸುವುದು ಇವರ ಪ್ರಮುಖ ಹವ್ಯಾಸಗಳಲ್ಲೊಂದು. ಏಳೆಂಟು ವರ್ಷಗಳಿಂದ ನವರಾತ್ರಿ

ಹಬ್ಬದ ಸಮಯದಲ್ಲಿ ನೀಲು ಗೌರಿ ಗೊಂಬೆಗಳನ್ನು ಶೃಂಗರಿಸಿ ಪ್ರದರ್ಶಿಸುತ್ತ ಬಂದಿದ್ದಾರೆ. ಬೀಡ್‌ಗಳಿಂದ ಜ್ಯುವಲರಿ ತಯಾರಿಸುವದು ಇವರ ಇನ್ನೊಂದು ಹವ್ಯಾಸ. ಇದಲ್ಲದೆ ಇವರು ಇಂಗ್ಲಿಷ್‌ನಲ್ಲಿ ಹಲವು ಸಣ್ಣ ಕಥೆಗಳನ್ನು ಬರೆದಿದ್ದಾರೆ. ಕೆಲವು ಕಥೆಗಳು ಶಿಕಾಗೋ ಕನ್ನಡ ಕೂಟದ "ಸಂಗಮ" ಪತ್ರಿಕೆಯಲ್ಲಿ ಹಾಗೂ ಅಮೆರಿಕೆಗಳ ಹವ್ಯಕ ಸಂಘದ ಸ್ಮರಣ ಸಂಚಿಕೆಗಳಲ್ಲಿ ಪ್ರಕಟವಾಗಿವೆ. ಕನ್ನಡ ಸಾಹಿತ್ಯ ರಂಗದ ಪುಸ್ತಕ ಬಳಗದಲ್ಲಿ ಪ್ರತಿ ತಿಂಗಳು ತಪ್ಪದೆ ಭಾಗವಹಿಸುತ್ತ ಬಂದಿದ್ದಾರೆ

Email: raohegde@gmail.com

**ವತ್ಸ ಕುಮಾರ್**

**(ಲೇಖನ : ಸ್ತ್ರೀ ಸಮಾನತೆಗಾಗಿ ಹೋರಾಡಿದ ಧೀರ ಮಹಿಳೆ Ruth Bader Ginsburg)**



ಬೆಂಗಳೂರಿನಲ್ಲಿ ಒಂದು ಮಧ್ಯಮ ವರ್ಗದ ವೈದಿಕ ಕುಟುಂಬದಲ್ಲಿ ಜನನ. ತಾತ ಮಹಾ ವಿದ್ವಾನ್ ವಿದ್ಯಾ ವಿಭೂಷಣ, ಆಸ್ಥಾನ ವಿದ್ವಾನ್ ನುಗ್ಗೇಹಳ್ಳಿ ತಿರುಮಲಾಚಾರ್ಯ ಸ್ವಾಮಿ ಅವರು. ಮೇಲುಕೋಟೆ ಮತ್ತು ಬೆಂಗಳೂರಿನಲ್ಲಿ ಸಂಸ್ಕೃತ ಪಾಠಶಾಲೆ ಸ್ಥಾಪಿಸಿ ಹಲವಾರು ವರ್ಷ ಅದಕ್ಕಾಗಿ ಶ್ರಮಿಸಿದವರು. ತಂದೆ ಶ್ರೀನಿವಾಸ ಅಯ್ಯಂಗಾರ್, ಎಲ್ಲರಿಗೂ ಟೀ ಕಂಪನಿ ಅಯ್ಯಂಗಾರ್ ಎಂದು ಪರಿಚಯವಾಗಿದ್ದವರು. ತಾಯಿ ಲಕ್ಷ್ಮಮ್ಮ ಮನೆಗೆ ಮಹಾಲಕ್ಷ್ಮಿಯಾಗಿದ್ದು ಇಡೀ ಕುಟುಂಬದ ಜವಾಬ್ದಾರಿ ಹೊತ್ತು ನಡೆದಿದ್ದರು. ಹುಟ್ಟೂರು ಹಾಗೂ ವಿದ್ಯಾಭ್ಯಾಸ ಬೆಂಗಳೂರಿನಲ್ಲಿ. 1978ರಲ್ಲಿ ಅಮೇರಿಕಾಗೆ ಬಂದ ಮೇಲೆ ಮತ್ತೆ ವಿದ್ಯಾಭ್ಯಾಸ ಪ್ರಾರಂಭ, ನಂತರ ನೌಕರಿ. ಟೆಕ್ಸಾಸ್‌ನ ಪ್ರಪ್ರಥಮ ನ್ಯೂಕ್ಲಿಯರ್ ವಿದ್ಯುತ್ ಕೇಂದ್ರದಲ್ಲಿ 26 ವರ್ಷಗಳ ಚಾಕರಿಯಿಂದ ನಿವೃತ್ತಿಯಾದ ನಂತರ ಮತ್ತೆ 5 ವರ್ಷಗಳು ನ್ಯೂ ಯಾರ್ಕ್ ಲೈಫ್ ಜೀವವಿಮಾ ಸಂಸ್ಥೆಯಲ್ಲಿ ಕೆಲಸ.

"2013 ಫೆಬ್ರವರಿಯಲ್ಲಿ ಹೂಸ್ಟನ್ ಮೀನಾಕ್ಷಿ ತನ್ನ ಸೇವೆಗಾಗಿ ನನ್ನನ್ನು ಆರಿಸಿಕೊಂಡದ್ದು ನನ್ನ ಪೂರ್ವಜನ್ಮದ ಪುಣ್ಯವೇ ಸರಿ. ಅಂದಿನಿಂದ ಇಂದಿನವರೆಗೆ ನನ್ನ ಸಂಪೂರ್ಣ ರಕ್ಷಣೆ ಹೊತ್ತಿರುವ ಮೀನಾಕ್ಷಿ ಅಮ್ಮನಿಗೆ ನನ್ನ ಸೇವೆ ಸದಾ ಮುಡುಪು. ಇದರಿಂದ ನನ್ನ ಬಾಳು ಹಸನಾಗಿದೆ. ನನ್ನ ಬಹು ಕಾಲದ, ಹಳೆಯ ಸ್ನೇಹಿತರು ಮತ್ತು ಹಿತೈಷಿಗಳು ಆಗಿಂದಾಗ್ಗೆ ಬಂದು ಭೇಟಿ ಮಾಡಿ ನನ್ನ ಯೋಗಕ್ಷೇಮವನ್ನು ವಿಚಾರಿಸುತ್ತಾ ಇರುತ್ತಾರೆ. ನನ್ನ ಅಣ್ಣ ಮತ್ತು ಗುರು ಶ್ರೀ ಎನ್. ಎಸ್. ರಾಮನ್, ಸಂಗೀತ ಸಾಮ್ರಾಜ್ಯದಲ್ಲಿ ಹಿರಿಯ ಹೆಸರು ಗಳಿಸಿದವರು. ಅವರ ಮಕ್ಕಳಾದ ಶ್ರೀಮತಿ ಮತ್ತು ಬದರಿ, ನನ್ನನ್ನು ಬಹಳ ಪ್ರೀತಿ ಗೌರವಗಳಿಂದ ನೋಡುತ್ತಾರೆ. ನಾನೇನೂ ಅಂತಹ ಬರವಣಿಗೆಗಾರನಲ್ಲದೇ ಇದ್ದರೂ,

ಸಣ್ಣ ಪುಟ್ಟ ಲೇಖನ ಬರೆಯುವ ಸಾಹಸ ಮಾಡುತ್ತಿದ್ದೇನೆ ಅಷ್ಟೆ. ಕನ್ನಡ ಸಾಹಿತ್ಯ ರಂಗದ ಈ ಬೃಹತ್ ಗ್ರಂಥದಲ್ಲಿ ನನ್ನ ಒಂದು ಲೇಖನವನ್ನು ಸೇರಿಸಿ ಪ್ರೋತ್ಸಾಹಿಸಿದ ಕೆ.ಎಸ್.ಆರ್. ಪುಸ್ತಕದ ಸಂಪಾದಕ ಮಂಡಳಿಗೆ ನಾನು ಅತ್ಯಂತ ಋಣಿಯಾಗಿದ್ದೇನೆ" – ಎನ್ನುತ್ತಾರೆ ವತ್ಸ ಕುಮಾರ್.

Phone: 832 689 6448

Email: vatsakumar17130@gmail.com

**ವಸುಂಧರಾ ಕಂದಾಚಾರ್**

**(ಲೇಖನ : ಸ್ತ್ರೀವಾದದಲ್ಲಿ ಪುರುಷರ ಪಾತ್ರ)**



ಹುಟ್ಟಿ ಬೆಳೆದದ್ದು ಹಾಸನ ಜಿಲ್ಲೆಯ ಅರಸೀಕೆರೆಯಲ್ಲಿ, ಕಾಲೇಜಿನ ಶಿಕ್ಷಣವಾದದ್ದು ಬೆಂಗಳೂರಿನಲ್ಲಿ. ಜೀವಕೋಶ ವಿಜ್ಞಾನದಲ್ಲಿ ಉನ್ನತ ಶಿಕ್ಷಣಕ್ಕಾಗಿ ಅಮೆರಿಕಾಕ್ಕೆ ಬಂದವರು. ಈಗ ವಾಸವಿರುವುದು ಆಲ್ಬುಕರ್ಕಿ, ನ್ಯೂ ಮೆಕ್ಸಿಕೋದಲ್ಲಿ. ಇಲ್ಲಿರುವ ಖಾಸಗಿ ಸಂಸ್ಥೆಯೊಂದರಲ್ಲಿ ಸಂಶೋಧಕ ವಿಜ್ಞಾನಿಯಾಗಿ ಕೆಲಸ ಮಾಡುತ್ತಿದ್ದಾರೆ. ಕನ್ನಡ ಸಾಹಿತ್ಯವನ್ನು ಓದುವ ಅಭ್ಯಾಸವಿದೆ. ಇಂಗ್ಲಿಷ್ ಮತ್ತು ಕನ್ನಡ ಭಾಷೆಗಳಲ್ಲಿ ಅನುವಾದಿಸುವ ಆಸಕ್ತಿಯಿದೆ. ಸಮಾಜದಲ್ಲಿ ಸ್ತ್ರೀಯರ ಸ್ಥಾನದ ಬಗ್ಗೆ ಕಾಳಜಿಯಿದೆ.

Email: kandachar@yahoo.com

**ಶಂಕರ ಹೆಗಡೆ**

**(ಲೇಖನ: ವೀಣಾ ಶಾಂತೇಶ್ವರ ಮತ್ತು ವೈದೇಹಿ ಅವರ ಕತೆಗಳ ಸ್ತ್ರೀ ಪಾತ್ರಗಳು; ಲೇಖನ ಅನುವಾದ: ಚಾಮರಾಜಪೇಟೆ ಮಹಿಳೆಯರು)**



ಶಂಕರ ಹೆಗಡೆ ಅವರು ಕಳೆದ 45 ವರ್ಷಗಳಿಂದ ತಮ್ಮ ಪತ್ನಿಯೊಂದಿಗೆ ಶಿಕ್ಯಾಗೋ ವಲಯದಲ್ಲಿ ವಾಸಿಸುತ್ತಿದ್ದಾರೆ. ಭಾರತ ಮತ್ತು ಅಮೆರಿಕೆಯ ವಿಶ್ವವಿದ್ಯಾನಿಲಯಗಳಲ್ಲಿ ಹಲವು ವರ್ಷ ಗಣಿತ ಮತ್ತು ಕಂಪ್ಯೂಟರ್ ವಿಜ್ಞಾನದ ಪ್ರಾಧ್ಯಾಪಕರಾಗಿ ದುಡಿದು ನಿವೃತ್ತರಾಗಿದ್ದಾರೆ. ತನ್ಮಧ್ಯೆ ಸುಮಾರು 18 ವರ್ಷ ಕಾಲ ಲೂಸೆಂಟ್ ಟೆಕ್ನಾಲಜೀಸ್ (ಈಗಿನ ನೋಕಿಯಾ) ಕಂಪನಿಯ ವಿವಿಧ ವಿಭಾಗಗಳಲ್ಲಿ ಇಂಜಿನಿಯರ್/ಮ್ಯಾನೇಜರ್ ಆಗಿ ಸೇವೆ ಸಲ್ಲಿಸಿದ್ದಾರೆ. ಸುಮಾರು 25 ವರ್ಷಗಳಿಂದ ಶಿಕಾಗೋ

ವಿದ್ಯಾರಣ್ಯ ಕನ್ನಡ ಕೂಟದ ಸಕ್ರಿಯ ಸದಸ್ಯರು. ಕೂಟದ ಕಾರ್ಯಕಾರಿ ಸಮಿತಿಯ ವಿವಿಧ ಹುದ್ದೆಗಳಲ್ಲಿ ಕೆಲಸ ಮಾಡಿದ್ದಾರೆ. ಎರಡು ವರ್ಷ ಕೂಟದ 'ಸಂಗಮ' ಪತ್ರಿಕೆಯ ಸಂಪಾದಕರೂ ಆಗಿದ್ದರು. ಇವರ ಸೇವೆಯನ್ನು ಗುರುತಿಸಿ ಕನ್ನಡ ಕೂಟ 2017ರಲ್ಲಿ ಇವರನ್ನು 'ರಾಜ್ಯೋತ್ಸವ ಪ್ರಶಸ್ತಿ' ಕೊಟ್ಟು ಸನ್ಮಾನಿಸಿದೆ. ಅಮೆರಿಕೆಗಳ ಹವ್ಯಕ ಸಂಘದ ಸಕ್ರಿಯ ಸದಸ್ಯರು ಮತ್ತು 2010–2011ನೇ ಸಾಲಿನ ಅಧ್ಯಕ್ಷರೂ ಆಗಿದ್ದರು. ಸದ್ಯ ಸಂಘದ ವಿಶ್ವಸ್ಥ ಮಂಡಳಿಯ ಸದಸ್ಯರು. ಕನ್ನಡ ಸಾಹಿತ್ಯ ರಂಗದ ಚಟುವಟಿಕೆಗಳಲ್ಲಿ 2006ರಿಂದ ಸಕ್ರಿಯವಾಗಿ ಭಾಗವಹಿಸುತ್ತ ಬಂದಿದ್ದಾರೆ. ರಂಗದ 2017ನೇ ವಸಂತೋತ್ಸವದ ಪ್ರಕಟನೆ 'ಬದಲಾವಣೆಯ ಬೆನ್ನಟ್ಟಿ...' ಪುಸ್ತಕದ ಸಹ–ಸಂಪಾದಕರಾಗಿದ್ದರು. 2017ರಿಂದ ರಂಗದ ವಿಶ್ವಸ್ಥ ಮಂಡಳಿಯ ಸದಸ್ಯರು. ಇವರ ಹಲವು ಲೇಖನಗಳು ಕನ್ನಡ ಕೂಟದ 'ಸಂಗಮ' ಪತ್ರಿಕೆಯ ಸಂಚಿಕೆಗಳು, ಹವ್ಯಕ ಸಂಘದ ಸಮ್ಮೇಳನಗಳ ಸ್ಮರಣ ಸಂಚಿಕೆಗಳು, ಮತ್ತು ಸಾಹಿತ್ಯ ರಂಗದ ಪುಸ್ತಕಗಳಲ್ಲಿ ಪ್ರಕಟವಾಗಿವೆ.

Email: shankranna@gmail.com

**ಶಶಾಂಕ್ ಜಯಕುಮಾರ್**
**(ಲೇಖನ : ವಂಶವೃಕ್ಷ ಮತ್ತು ಸ್ತ್ರೀಪರ ಚಿಂತನೆ)**



ಶಶಾಂಕ್ ಜಯಕುಮಾರ್ ಅವರು Drexel Universityಯಲ್ಲಿ Physicsನಲ್ಲಿ Ph.D. ಮಾಡುತ್ತಿದ್ದಾರೆ. ಇವರ ಹವ್ಯಾಸಗಳು ಅಡುಗೆ, ಬ್ಯಾಸ್ಕೆಟ್ ಬಾಲ್ ಆಡುವುದು, ವಿಡಿಯೋ ಗೇಮ್ಸ್ ಮತ್ತು ಪಿಯಾನೋ ನುಡಿಸುವುದು. ತಂತ್ರಜ್ಞಾನದಲ್ಲಿ ಬಹಳ ಆಸಕ್ತಿ ಮತ್ತು ಹೊಸತನ್ನು ಕಲಿಯುವುದರಲ್ಲಿ ಉತ್ಸಾಹ ಮತ್ತು ಸಂತೋಷ.

Email: shayjayakumar@gmail.com

**ಡಾ॥ ಶಾರದ ಚೈತ್ರ**
**(ಲೇಖನ : ಸ್ತ್ರೀ ಸಮಾನತೆ – ಸವೆದ ದಾರಿ, ಕ್ರಮಿಸಿದ ದೂರ)**



ಡಾ॥ ಶಾರದ ಚೈತ್ರ ಒಬ್ಬ ವೈದ್ಯೆ. ಹೃದಯತಜ್ಞೆಯಾಗಿ ಕೆಲಸ ಮಾಡುತ್ತಿದ್ದಾರೆ. ವಾಸ ಶಿಕಾಗೊ ಮತ್ತು ಬೆಂಗಳೂರು. ಮೂಲತಃ ಕರ್ನಾಟಕ, ಮಲೆನಾಡು ಪ್ರಾಂತದವರು. ಸಾಗರದ ಬಳಿಯ ನಡಹಳ್ಳಿ ಗ್ರಾಮ. ಓದಿದ್ದು, ಬೆಳೆದಿದ್ದು ಬೆಂಗಳೂರು.

ಪ್ರವೃತ್ತಿ – ಓದು, ಫಿಲಾಸಫಿ, ಮನಶ್ಶಾಸ್ತ್ರ, ಸಾಹಿತ್ಯ.
ಆಸಕ್ತಿ– ರಂಗಭೂಮಿ, ಯಕ್ಷಗಾನ.
Email: Sharadachaitra@gmail.com

**ಶ್ರೀಕಾಂತ ಬಾಬು**

**(ಲೇಖನ : ಸ್ತ್ರೀ ಸಮಾನತೆ ಮತ್ತು ಸ್ತ್ರೀ ಸಂವೇದನೆ)**



ಶ್ರೀಕಾಂತ ಬಾಬು ಅವರು ಸುಮಾರು ಮೂರು ದಶಕಗಳಿಂದ ಅಮೆರಿಕಾದಲ್ಲಿ ನೆಲೆಸಿದ್ದಾರೆ. ಅವರಿಗೆ ಕನ್ನಡ ಭಾಷೆ ಮತ್ತು ಸಾಹಿತ್ಯದ ಮೇಲೆ ಬಹಳ ಆಸಕ್ತಿ ಮತ್ತು ಪುಸ್ತಕಗಳನ್ನು ಓದುವ ಹವ್ಯಾಸ. ಅವರ ಕೆಲವು ಲೇಖನಗಳು ಕನ್ನಡ ಸಾಹಿತ್ಯ ರಂಗದ ಪುಸ್ತಕಗಳಲ್ಲಿ ಪ್ರಕಟವಾಗಿವೆ. ಸಾಹಿತ್ಯ ರಂಗದ ಏಳನೆಯ ಸಮ್ಮೇಳನದ 'ಅನುವಾದ ಸಂವಾದ' ಮತ್ತು ನಾವಿಕ ಕನ್ನಡ ಸಂಸ್ಥೆಯ 'ಅಲೆವಾಣಿ' ಮತ್ತು 'ಸ್ನೇಹ–ಸೇತು' ಸ್ಮರಣೆ ಸಂಚಿಕೆಗಳ ಪ್ರಧಾನ ಸಂಪಾದಕರಾಗಿ ಕೆಲಸ ಮಾಡಿದ್ದಾರೆ. ನ್ಯೂಜೆರ್ಸಿಯಲ್ಲಿ ಕಳೆದೆರಡು ದಶಕಗಳಿಂದ 'ಪ್ರಸ್ತಾಪ' ಎನ್ನುವ ಕನ್ನಡ ಸಾಹಿತ್ಯಾಸಕ್ತ ಸಂಸ್ಥೆಯ ವಕ್ತಾರರಾಗಿಯೂ ಮತ್ತು ಕನ್ನಡ ಸಾಹಿತ್ಯ ರಂಗದ ಕಾರ್ಯಕಾರಿ ಸಮಿತಿಯ ಹಾಲಿ ಅಧ್ಯಕ್ಷರಾಗಿಯೂ ಸೇವೆ ಸಲ್ಲಿಸುತ್ತಿದ್ದಾರೆ. ನ್ಯೂಜೆರ್ಸಿಯ ಬ್ರಿಡ್ಜ್‌ವಾಟರ್‌ನಲ್ಲಿ ಪತ್ನಿ ಭಾನುಶ್ರೀ ಅವರೊಂದಿಗೆ ನೆಲೆಸಿದ್ದಾರೆ ಮತ್ತು ಸಿಟಿ ಬ್ಯಾಂಕ್‌ನಲ್ಲಿ ಕೆಲಸ ಮಾಡುತ್ತಿದ್ದಾರೆ.

Email: svenkatesha@hotmail.com

**ಶ್ರೀಧರ ಕುಲಕರ್ಣಿ**

**(ಲೇಖನ : ಮರಿಯಾಳ ಜೊತೆ ರಾತ್ರಿಯ ಪಯಣ)**



ಶ್ರೀಧರ ಕುಲಕರ್ಣಿ, ಹುಟ್ಟಿ ಬೆಳೆದಿದ್ದು ಹುಬ್ಬಳ್ಳಿಯಲ್ಲಿ. ಕಳೆದ 23 ವರ್ಷಗಳಿಂದ ಅಮೆರಿಕಾದ ಬಾಸ್ಟನ್ ಶಹರದಲ್ಲಿ ವಾಸ. ಇಲ್ಲಿನ ಮಂದಾರ ಕನ್ನಡ ಕೂಟದ ಸಕ್ರಿಯ ಕಾರ್ಯಕರ್ತ. New Englandನ ಸಾಂಸ್ಕೃತಿಕ, ಸಾಮಾಜಿಕ, ಶೈಕ್ಷಣಿಕ, ಸಾಹಿತ್ಯ, ಹಾಗೂ ಸಂಗೀತ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ಸುಮಾರು 20 ವರ್ಷ ಉನ್ನತ ಶೈಕ್ಷಣಿಕ ವಿದ್ಯಾಲಯಗಳಲ್ಲಿ ಕೆಲಸ ಮಾಡಿದ ನಂತರ ಈಗ ತಮ್ಮದೇ ಆದ Education Consulting ಕಂಪನಿಯನ್ನು ನಡೆಸುತ್ತಿದ್ದಾರೆ.

Phone: 617-448-7332
Email: shridhar.kulkarni@gmail.com

**ಸತ್ಯಪ್ರಕಾಶ್ ಕಾಗಿನೆಲೆ**
**(ಲೇಖನ ಅನುವಾದ : 'ಹಿಜಾಬ್'ನ ರಾಧಿಕಾ– ಒಂದು ಸ್ತ್ರೀವಾದೀ ಅನಿಸಿಕೆ)**



ಸತ್ಯ ಕಾಗಿನೆಲೆ ಟೆಕ್ಸಾಸ್‌ನ ಸೌತ್‌ಲೇಕ್‌ನಲ್ಲಿ ಕಳೆದ 17 ವರ್ಷಗಳಿಂದ ಪತ್ನಿ ಡಾ. ರೂಪ ಸತ್ಯಪ್ರಕಾಶ್, ಮಗ ಪ್ರಣವ್ ಕಾಗಿನೆಲೆ, ಮಗಳು ಪ್ರಜ್ಞಾ ಕಾಗಿನೆಲೆ ಮತ್ತು ಅವರ ಮುದ್ದಿನ ನಾಯಿ ಬಾಲು ಅವರೊಂದಿಗೆ ವಾಸಿಸುತ್ತಿದ್ದಾರೆ. ಸತ್ಯ ಅವರು ಬಿಡುವಿನ ವೇಳೆಯಲ್ಲಿ ಪುಸ್ತಕಗಳನ್ನು ಓದಲು ಮತ್ತು ಕ್ರೀಡೆಗಳನ್ನು ವೀಕ್ಷಿಸಲು ಇಷ್ಟಪಡುತ್ತಾರೆ.

**ಸರಿತಾ ನವಲಿ**
**(ಲೇಖನ : ಗರತಿಯ ಹಾಡುಗಳು ಮತ್ತು ಸ್ತ್ರೀ ಸಂವೇದನೆ)**

ಮೂಲತಃ ಕಲ್ಯಾಣ–ಕರ್ನಾಟಕದ ಗಂಗಾವತಿಯವರಾದ ಸರಿತಾ ನವಲಿ, ಕಾಲೇಜು ಮತ್ತು ಸ್ನಾತಕೋತ್ತರ ಪದವಿಯನ್ನು ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದಿಂದ



ಪಡೆದಿದ್ದಾರೆ. 2004ರಲ್ಲಿ ಭಾರತದಿಂದ ಪತಿಯೊಂದಿಗೆ ಅಮೆರಿಕಾದ ಫೀನಿಕ್ಸ್ ರಾಜ್ಯಕ್ಕೆ ಆಗಮಿಸಿದ್ದು, 2008 ರಿಂದ ತಮ್ಮ ಪತಿ ಮತ್ತು ಮಗನೊಂದಿಗೆ ನ್ಯೂಜೆರ್ಸಿಯಲ್ಲಿ ನೆಲೆಸಿದ್ದಾರೆ. ನ್ಯೂಜೆರ್ಸಿಯ 'ಬೃಂದಾವನ' ಕನ್ನಡ ಕೂಟ ಪ್ರಾರಂಭಿಸಿದ ದ್ವೈಮಾಸಿಕ ಪತ್ರಿಕೆಯಾದ 'ಬೃಂದಾವನ ವಾಣಿ'ಯ ಮೊದಲ ಸಂಪಾದಕಿಯಾಗಿ ಕೆಲಸ ನಿರ್ವಹಿಸಿದ್ದಾರೆ. ಇವರ ಕಥೆ, ಕವನ, ಪ್ರಬಂಧಗಳು, ಅಂಕಣ ಬರಹಗಳು ಕರ್ನಾಟಕ ರಾಜ್ಯದ ಹಲವಾರು ದಿನಪತ್ರಿಕೆಗಳಲ್ಲಿ ಪ್ರಕಟವಾಗಿವೆ. 2019ರ ಮೇ ತಿಂಗಳಲ್ಲಿ ಅಮೆರಿಕಾದ ಕನ್ನಡ ಸಾಹಿತ್ಯ ರಂಗದ ವತಿಯಿಂದ ನಡೆದ 'ವಸಂತ ಸಾಹಿತ್ಯೋತ್ಸವ'ದಲ್ಲಿ ಇವರ ಮೊದಲ ಕಥಾಸಂಕಲನ 'ಆವನಾವನು ಕಾಯ್ವ' ಪ್ರಕಟಗೊಂಡಿದೆ. ನೃತ್ಯರೂಪಕಗಳ ಪರಿಕಲ್ಪನೆ–ಸಂಭಾಷಣೆ, ನಿರೂಪಣೆ, ನಾಟಕ ಅನುವಾದ, ನಟನೆ ಮತ್ತು ನಿರ್ದೇಶನ ಇವರ ಇನ್ನೊಂದು ಹವ್ಯಾಸ. 'Ra's Metanoia' ಕಿರುಚಿತ್ರದಲ್ಲಿ ಕಸ್ತೂರಬಾ ಪಾತ್ರದಲ್ಲಿ ನಟಿಸಿದ್ದಾರೆ. ನ್ಯೂ ಜೆರ್ಸಿಯಲ್ಲಿ ಕನ್ನಡ ಸಾಹಿತ್ಯದ ಚಟುವಟಿಕೆಗಳಿಗೆಂದು 'ಸಾಹಿತ್ಯ ಸುಧೆ' ತಂಡವನ್ನು ರಚಿಸಿದ್ದು, ಸಾಹಿತ್ಯದ ಕುರಿತಾದ ವಿಚಾರ ವಿನಿಮಯ, ಭಾವಸಂಗಮ ಮತ್ತು ವಿಶೇಷ ಉಪನ್ಯಾಸ ಕಾರ್ಯಕ್ರಮಗಳನ್ನು ನಡೆಸುತ್ತಿದ್ದಾರೆ. ನ್ಯೂಜೆರ್ಸಿಯಲ್ಲಿ ನೆಲೆಸಿರುವ ಕನ್ನಡಿಗರ ಓದಿಗೆ ಕನ್ನಡದ ಕೃತಿಗಳು ಲಭ್ಯವಾಗಬೇಕೆಂಬ ನಿಟ್ಟಿನಲ್ಲಿ ಅಲ್ಲಿನ

ಕೌಂಟಿ ಗ್ರಂಥಾಲಯಗಳಲ್ಲಿ ಕನ್ನಡ ಪುಸ್ತಕಗಳನ್ನು ಕೆಟಲಾಗಿಂಗ್ ಮಾಡಿಸುತ್ತಿದ್ದಾರೆ. ಕರ್ನಾಟಕದ ಕಾಲೇಜುಗಳು ಏರ್ಪಡಿಸುವ ಅಂತರರಾಷ್ಟ್ರೀಯ ವೆಬಿನಾರ್‌ಗಳಲ್ಲಿ ಸಂಪನ್ಮೂಲ ವ್ಯಕ್ತಿಯಾಗಿ ಉಪನ್ಯಾಸಗಳನ್ನು ನೀಡುತ್ತಾರೆ. ಅಮೆರಿಕಾದಲ್ಲಿ ನಡೆಸುವ ಕನ್ನಡಪರ ಚಟುವಟಿಕೆಗಳನ್ನು ಗುರುತಿಸಿ, ಬುಕ್ ಬ್ರಹ್ಮ (Zoom with ಬುಕ್ ಬ್ರಹ್ಮ), ದೂರದರ್ಶನ ಚಂದನ (Literary ಗುರು) ಮತ್ತು ಆಕಾಶವಾಣಿ ಧಾರವಾಡ ಕೇಂದ್ರಗಳು ಇವರ ಸಂದರ್ಶನವನ್ನು ಮಾಡಿದ್ದಾರೆ. ಲೇಖಿಕಾ ಸಾಹಿತ್ಯ ವೇದಿಕೆ, ಬೆಂಗಳೂರು ಏರ್ಪಡಿಸಿದ 'ತ್ರಿವೇಣಿ' ಮನೋವೈಜ್ಞಾನಿಕ ಕಥಾಸ್ಪರ್ಧೆ(2022)ಯಲ್ಲಿ ಮೆಚ್ಚುಗೆ ಬಹುಮಾನ ಮತ್ತು 'ವಾಣಿ' ಕೌಟುಂಬಿಕ ಕಥಾಸ್ಪರ್ಧೆ(2023)ಯಲ್ಲಿ ಮೊದಲ ಬಹುಮಾನ ಪಡೆದಿದ್ದಾರೆ.

Phone: 201-314-7216

Email: saritha13@gmail.com

* * *

# ನಮ್ಮ ಪ್ರಕಟಣೆಗಳ ಬಗ್ಗೆ ಅಭಿಪ್ರಾಯಗಳು

## 1. ಅಮೆರಿಕನ್ ಜಾನಪದ (2022)

**ಪ್ರಕಾಶನ : ಕನ್ನಡ ಸಾಹಿತ್ಯ ರಂಗ, ಯು.ಎಸ್.ಎ. ಹಾಗೂ ಅಭಿನವ ಪ್ರಕಾಶನ, ಬೆಂಗಳೂರು**

**ಸಂಪಾದಕರು : ಮೈ. ಶ್ರೀ. ನಟರಾಜ, ಜ್ಯೋತಿ ವೆಂಕಟಸುಬ್ರಹ್ಮಣ್ಯ**

ಅಗಾಧ ವಿಷಯ ವೈವಿಧ್ಯ, ಸರಿ ಸುಮಾರು ಎಲ್ಲಾ ಲೇಖನಗಳಲ್ಲಿಯೂ ಕಂಡು ಬರುವ ಅಮೆರಿಕನ್ – ಕರ್ನಾಟಕ ಜಾನಪದ ಪ್ರಕಾರಗಳ ಸಾಮ್ಯತೆ, ಭಿನ್ನವೃತ್ತಿಗಳಲ್ಲಿದ್ದೂ ಜಾನಪದ ಕ್ಷೇತ್ರದಲ್ಲಿ ಲೇಖಕರಿಗಿರುವ ಅಸಾಧಾರಣ ಆಸಕ್ತಿ, ಅಧ್ಯಯನ ಇವೆಲ್ಲಾ ಕಾರಣಗಳಿಂದಾಗಿ ಲೇಖಕರಿಗೆ ಹಾಗೂ ಸಂಪಾದಕರಾದ ಮೈ. ಶ್ರೀ. ನಟರಾಜ ಮತ್ತು ಜ್ಯೋತಿ ವೆಂಕಟಸುಬ್ರಹ್ಮಣ್ಯ ಅವರಿಗೆ, ಆಡಳಿತ ಮಂಡಳಿಯ ಅಧ್ಯಕ್ಷರಾದ ಶ್ರೀ ನಾಗ ಐತಾಳ ಮತ್ತು ಇತರ ಸದಸ್ಯರಿಗೆ ನನ್ನ ಹಾರ್ದಿಕ (ಹಾಗೂ ತುಸು ಅಸೂಯೆಯ) ಅಭಿನಂದನೆಗಳು.

– **ಸಿ. ಎನ್. ರಾಮಚಂದ್ರನ್** (ಮುನ್ನುಡಿಯಲ್ಲಿ)

'ಅಮೆರಿಕನ್ ಜಾನಪದ ಕನ್ನಡ ಕಂಗಳಿಗೆ ಕಂಡಂತೆ...' ಒಂದು ಅಸಾಮಾನ್ಯ ಗ್ರಂಥ. ಅಮೆರಿಕನ್ ಮೂಲನಿವಾಸಿಗಳ ಜಾನಪದ ಲೋಕದ ಮೇಲೊಂದು ಇಣುಕು ನೋಟ, ಬಹುಶಃ ಮೊದಲ ಬಾರಿಗೆ ಕನ್ನಡದಲ್ಲಿ ಬರುತ್ತಿದೆ. ಈ ದೃಷ್ಟಿಯಿಂದ ಇದು ಕನ್ನಡದ ಜ್ಞಾನಸಾಹಿತ್ಯಕ್ಕೆ ಅಮೆರಿಕನ್ನಡಿಗರ ಬಲು ದೊಡ್ಡ ಕೊಡುಗೆ ಎಂದರೂ ಸರಿ. ಒಟ್ಟಾರೆಯಾಗಿ ದೇಶೀಯ ಜಾನಪದ ಅಧ್ಯಯನ ತುಂಬ ವಿಸ್ತಾರವಾಗಿ ನಡೆದಿರುವ ಈ ಕಾಲಘಟ್ಟದಲ್ಲಿ ಅಮೆರಿಕದ ಜಾನಪದದ ಒಂದು ಸಾಕಲ್ಯದ ನೋಟ ಅಗತ್ಯವಾಗಿತ್ತು, ಮತ್ತು ಈ ಗ್ರಂಥದ ಮೂಲಕ ಸಂಪಾದಕರು ಅದನ್ನು ನೀಡಿದ್ದಾರೆ. ಅನ್ಯರ ಕಣ್ಣಿನಲ್ಲಿ ಒಂದು ಪ್ರದೇಶದ ಜಾನಪದ ಹೇಗೆ ಕಾಣುತ್ತದೆ ಎಂಬ ಈ ಪರಿಕಲ್ಪನೆಯೇ ಅರ್ಥಪೂರ್ಣ. ಹಾಗೆ ಮೂರನೆಯ ಕಣ್ಣಿನ ನೋಟವಾಗಿ ಇದಕ್ಕೆ ಸಾರ್ಥಕತೆಯಿದೆ. ಇದರ ಹಿಂದೆ ಇರುವ ಪರಿಕಲ್ಪನೆ, ಪರಿಶ್ರಮ, ಅಸಾಮಾನ್ಯ. ವಿಷಯವಿಭಾಗ, ಆಯ್ಕೆ, ಓದುವಿಕೆಗೆ ಸಾರಗ್ರಾಹಿಯಾಗಿದೆ. ಚೊಕ್ಕದಾದ ಸಂಪಾದಕೀಯವಿದೆ. ಕಸಾರಂ ಕಾಸಾರದಲ್ಲಿ ಅರಳಿದ ಈ ಉತ್ಕೃಷ್ಟ ಅಧ್ಯಯನ ಪುಷ್ಪ–ಫಲಕ್ಕಾಗಿ ಸಂಪಾದಕ, ಲೇಖಕ, ಪ್ರಕಾಶಕರೆಲ್ಲರಿಗೆ ಭಲೇ ಭಲೇ ಎನ್ನುವೆ.

– **ಡಾ. ಎಂ. ಪ್ರಭಾಕರ ಜೋಷಿ, ಮಂಗಳೂರು**
(ಸಾಹಿತಿ, ಯಕ್ಷಗಾನ ಕಲಾವಿದ, ವಿಮರ್ಶಕ)

ಅಮೆರಿಕದ ಕನ್ನಡ ಸಾಹಿತ್ಯ ರಂಗವು 'ಅಮೆರಿಕನ್ ಜಾನಪದ – ಕನ್ನಡ ಕಂಗಳಿಗೆ ಕಂಡಂತೆ' ಎನ್ನುವ ಒಂದು ವಿಶೇಷ ಕೃತಿಯನ್ನು ಪ್ರಕಟಿಸಿದೆ. ನಮ್ಮ ಈ ಗ್ರಹದಲ್ಲಿ ಹರಡಿಹೋದ ವಿವಿಧ ಜನ ಸಮುದಾಯುಗಳ ನಂಬಿಕೆಗಳು, ಪುರಾಣಗಳು, ದೇವದೇವತೆಯರು, ಬೇರೆ ಬೇರೆ ಪ್ರದೇಶಗಳಲ್ಲಿ ಬೇರೆಬೇರೆ ಕಾಲಘಟ್ಟಗಳಲ್ಲಿ ಬೇರೆಬೇರೆ ಐತಿಹ್ಯಗಳಾಗಿ ಬೇರೆಬೇರೆ ರೂಪಗಳಾಗಿ ಬೇರೆ ಬೇರೆ ರೀತಿನೀತಿಗಳಲ್ಲಿ ಕತೆಗಳಾದರೂ ಆಳದಲ್ಲಿ ಅವುಗಳ ಹಂದರದಲ್ಲಿ ಕಾಣುವ ಸಾಮ್ಯತೆಗೆ ನಾನು ಅಚ್ಚರಿಪಡುತ್ತೇನೆ. ಈ ಪುಸ್ತಕಕ್ಕೆ ಡಾ. ಕೃಷ್ಣಮೂರ್ತಿ ಹನೂರು ಕನ್ನಡ ಮತ್ತು ಅಮೆರಿಕನ್ ಜಾನಪದ ಕುರಿತಾದ ಲೇಖನವನ್ನು ಬರೆದು ಒಳ್ಳೆಯ ಪ್ರವೇಶವನ್ನು ಕೊಟ್ಟಿದ್ದಾರೆ.ಅಪರೂಪದ ಪುಸ್ತಕವಿದು."

**– ಎಂ. ಆರ್. ದತ್ತಾತ್ರಿ (ಬುಕ್‌ಬ್ರಹ್ಮದಲ್ಲಿ ಪ್ರಕಟವಾದ ಸಮೀಕ್ಷೆ)**

ಇದೊಂದು ವಿರಳ ಕೃತಿ. ಈ ಬಗೆಯ ಸಾಹಿತ್ಯ ಸಂಗ್ರಹವೇ ದೊಡ್ಡ ಶ್ರಮ ಬೇಡುತ್ತದೆ. ಆ ಕೆಲಸವನ್ನು ಸಂಪಾದಕರಿಬ್ಬರೂ ಅಚ್ಚುಕಟ್ಟಾಗಿ ನಿರ್ವಹಿಸಿದ್ದೀರಿ. ಬಹುಶಃ ನಮ್ಮ ಅರಿವಿನ ಕ್ಷಿತಿಜ ವಿಸ್ತರಿಸಲು ಈ ಬಗೆಯ ಸಾಹಿತ್ಯ ಸಂಚಯನವೂ ಬೇಕು.

**– ಡಾ. ಟಿ. ಎಸ್. ಅನಂತರಾಮು (ವಿಜ್ಞಾನ ಲೇಖಕರು)**

*

## 2. ಬದಲಾವಣೆಯ ಬೆನ್ನಟ್ಟಿ (2019)

**ಪ್ರಕಾಶನ : ಕನ್ನಡ ಸಾಹಿತ್ಯ ರಂಗ, ಯು. ಎಸ್. ಎ. ಹಾಗೂ ಅಭಿನವ ಪ್ರಕಾಶನ, ಬೆಂಗಳೂರು**

**ಸಂಪಾದಕರು : ಪ್ರಕಾಶ್ ನಾಯಕ್, ಶಂಕರ್ ಹೆಗಡೆ**

ಕನ್ನಡ ಸಾಹಿತ್ಯ ರಂಗವು ಅಮೆರಿಕದಲ್ಲಿ ಆಯೋಜಿಸಿರುವ 9ನೇ ವಸಂತ ಸಾಹಿತ್ಯೋತ್ಸವದಲ್ಲಿ ಬಿಡುಗಡೆಯಾಗುತ್ತಿರುವ 'ಬದಲಾವಣೆಯ ಬೆನ್ನಟ್ಟಿ...' ಪುಸ್ತಕವು ಜಾಗತಿಕ ಮಟ್ಟದಲ್ಲಿ ಕನ್ನಡವನ್ನು ಒಟ್ಟುಗೂಡಿಸುವ ಪ್ರಯತ್ನದಂತಿದೆ. ಅಮೆರಿಕದಲ್ಲಿರುವ ಕನ್ನಡ ಬೇರಿನ ಲೇಖಕರು ಮತ್ತು ಕರ್ನಾಟಕದ ಒಂದಿಬ್ಬರು ಖ್ಯಾತನಾಮರ ಲೇಖನ, ಪ್ರಬಂಧ, ಕವಿತೆ ಮತ್ತು ಕತೆಗಳ ಗುಚ್ಛ ಇದಾಗಿದ್ದು ಸಮೃದ್ಧ ಓದಿನ ಹೂರಣವನ್ನು ಒಳಗೊಂಡಿದೆ. ಕೆಲವು ಸಡಿಲ ಬರಹಗಳೂ ತೂರಿಗೊಂಡಿವೆ. ಆದಾಗ್ಯೂ, ದೂರದ ಅಮೆರಿಕದಲ್ಲಿರುವ ಕನ್ನಡಿಗರ ಆಲೋಚನೆಗಳು, ಅನುಭವ ಮತ್ತು ಅಕ್ಷರಬಂಧವನ್ನು ಅರ್ಥಮಾಡಿಕೊಳ್ಳಲು ಈ ಪುಸ್ತಕವನ್ನು ತುಲನೆಗೊಡ್ಡಬಹುದು. ಸಾಹಿತ್ಯೋತ್ಸವದ ಮುಖ್ಯ ಅತಿಥಿ ವಸುಧೇಂದ್ರರ ಬರಹದೊಂದಿಗೆ ಬದಲಾವಣೆಯ ಬೆನ್ನಟ್ಟಿ ಆರಂಭವಾಗುತ್ತದೆ. ಕನ್ನಡ ಸಾಹಿತ್ಯಲೋಕದ ಪಲ್ಲಟಗಳನ್ನು ಸುದೀರ್ಘ ಲೇಖನದಲ್ಲಿ ದಾಖಲಿಸಿರುವ ಅವರು, ಅಮೆರಿಕಕ್ಕೆ ವಲಸೆ ಬಂದ ಭಾರತೀಯರು ಅಗ್ನಿದಿವ್ಯದಲ್ಲಿ ಜಯಗಳಿಸಿದ್ದಾರೆ ಎಂದು ಅಭಿಪ್ರಾಯಪಟ್ಟಿದ್ದಾರೆ. 'ನಮ್ಮೂರಿನ ಶ್ರೇಷ್ಠತೆಯ ಮಾನದಂಡಗಳನ್ನೆಲ್ಲ ಹಿನ್ನೆಲೆಗೆ ಸರಿಸಿ ಮತ್ತೆ ಹೊಸ ಪ್ರಮಾಣಗಳನ್ನು ಕಲಿತು ಬದುಕನ್ನು ಆರಂಭಿಸಬೇಕಾಗುತ್ತದೆ. ನಮ್ಮ ಶಕ್ತಿ

ಮತ್ತು ದೌರ್ಬಲ್ಯಗಳೆರಡೂ ತಿಳಿಯುವುದು ಈ ಗಳಿಗೆಯಲ್ಲಿಯೇ!' ಎಂದು ವಲಸೆ ಬದುಕಿನ ಸವಾಲುಗಳನ್ನು ಲೇಖನದಲ್ಲಿ ಚರ್ಚಿಸಿದ್ದಾರೆ. ಆಹಿತಾನಲ, ಶ್ರೀನಾಥ್ ಭಲ್ಲೆ, ಕಾವ್ಯ ಕಡಮೆ ನಾಗರಕಟ್ಟೆ, ಮೈ. ಶ್ರೀ. ನಟರಾಜ, ತ್ರಿವೇಣಿ ಶ್ರೀನಿವಾಸರಾವ್, ಸುಪ್ತದೀಪ್ತಿ, ಗುರುಪ್ರಸಾದ್ ಕಾಗಿನೆಲೆ, ನಳಿನಿ ಮಯ್ಯ ಸೇರಿದಂತೆ ಹತ್ತಾರು ಲೇಖಕ, ಕತೆಗಾರ, ಕವಿಗಳು ಇಲ್ಲಿ ಬರೆದಿದ್ದಾರೆ. 'ಬದಲಾದ ಸಮಾಜದ ಜಾಗತಿಕ ಬಿಂಬಗಳನ್ನು ಕಟ್ಟಿಕೊಡುತ್ತಲೇ ಓದುಗರಲ್ಲಿ ಬಹುಮುಖ್ಯವಾದ ಪ್ರಶ್ನೆಗಳನ್ನು ಈ ಪುಸ್ತಕ ಉದ್ದೀಪಿಸುತ್ತದೆ,' ಎಂದು ಸುನಂದಾ ಕಡಮೆ ಪುಸ್ತಕದ ಮಹತ್ವವನ್ನು ವಿವರಿಸಿದ್ದಾರೆ.

**–ವಿಜಯ ಕರ್ನಾಟಕ,** ಮೇ 19, 2019

*

## 3. ಅವರವರ ಭಕುತಿಗೆ (2017)

**ಪ್ರಕಾಶನ : ಕನ್ನಡ ಸಾಹಿತ್ಯ ರಂಗ, ಯು.ಎಸ್.ಎ. ಹಾಗೂ ಅಭಿನವ ಪ್ರಕಾಶನ, ಬೆಂಗಳೂರು**

**ಪ್ರಧಾನ ಸಂಪಾದಕರು : ನಳಿನಿ ಮೈಯ**

'ಅವರವರ ಭಕುತಿಗೆ' ಪುಸ್ತಕ ಭಕ್ತಿಯನ್ನು ಕುರಿತ ಸಣ್ಣ ಮಟ್ಟಿನ ಒಂದು ಆಕರ ಗ್ರಂಥವೆಂದೇ ಹೇಳಬೇಕು. ಸಣ್ಣ ಮಟ್ಟಿನ ಎಂದೆ ಕಾರಣ ಮಾತನಾಡಿದಷ್ಟೂ ಬೆಳೆಯುವ, ಇನ್ನೂ ಬಾಕಿ ಉಳಿಯುವ ವಿಚಾರ ಭಕ್ತಿ. ಸಾಮಾನ್ಯವಾಗಿ ಭಕ್ತಿಯಂತಹ ವಸ್ತು ವಿಷಯದ ಕುರಿತು ಮಾತಾಡಲು ಹೊರಟಾಗ ತುಸು ತಾಳ ತಪ್ಪಿದರೂ ಬೇಸರ ಬರುವಂಥ ಜಡ ನಿರೂಪಣೆಗೆ ಪಕ್ಕಾಗುವುದೇ ಹೆಚ್ಚು. ಆದರೆ ಇಲ್ಲಿ ಹಾಗಾಗಿಲ್ಲ. ಈ ಕೃತಿಯಲ್ಲಿ ವಿವಿಧ ಕಲಾರಂಗಗಳಲ್ಲಿ ಕಾಣುವ ಭಕ್ತಿಯ ಸುತ್ತಣ ಜಿಜ್ಞಾಸೆ, ವಿವಿಧ ದೃಷ್ಟಿಯ, ವಿವಿಧ ರೂಪದ ಭಕ್ತಿ ಅಭಿವ್ಯಕ್ತಿಗಳ ಸಾಧಾರ ಸಂಗ್ರಹವಿದೆ. ಒಳ ನೋಟಗಳಿಂದ ಕೂಡಿದ ಘನ–ಗಾಢ ಲೇಖನಗಳಿವೆ. ಒಮ್ಮೆ ಕೈಗೆತ್ತಿಕೊಂಡರೆ ಒಂದು ಲೇಖನವನ್ನು ಓದಿ ಮುಗಿಸದೆ ಏಳಲು ಬಿಡದ ಸ್ವಾರಸ್ಯಕರ ಮತ್ತು ವಿದ್ವತ್‌ಪೂರ್ಣ ಚಿಂತನೆಗಳಿವೆ. ಸಂಪಾದಕ ವರ್ಗದ ಪರಿಕಲ್ಪನೆ ನಿಜಕ್ಕೂ ಸಾರ್ಥಕವಾಗಿದೆ. ಇಂಥ ಒಂದು ಸಂಗ್ರಹಯೋಗ್ಯ ಕೃತಿಯನ್ನು ನೀವು ಆ ದೂರದಲ್ಲಿದ್ದೂ ಸಾಧಿಸಲು ಸಾಧ್ಯವಾಗಿದ್ದು ನಿಜಕ್ಕೂ ಸಾಹಸವೇ ಸರಿ. ಅಭಿನಂದನೆಗಳು.

**–ವೈದೇಹಿ** (ಸಾಹಿತಿ, ಕಥೆಗಾರ್ತಿ)

*

ಅಂತರಂಗದ ಪಿಸುನುಡಿಯು ಭಕ್ತಿಯ ರೂಪಕವಾಗಿ ಧ್ಯಾನವನ್ನು ಸಂಚಲನ ಗೊಳಿಸುತ್ತದೆ. ಈ ನೆಲೆಯಲ್ಲಿ ಸಾವಿರಾರು ಮೈಲಿ ದೂರದಲ್ಲಿದ್ದೂ 'ಅವರವರ ಭಕುತಿಗೆ' ಯಂಥ ಮಹತ್ವಪೂರ್ಣ ಕೃತಿಯನ್ನು ಅಮೆರಿಕಾದ 'ಕನ್ನಡ ಸಾಹಿತ್ಯ ರಂಗ' ಸಂಪಾದಿಸಿ ಪ್ರಕಟಿಸಿರುವುದು ಬಹು ದೊಡ್ಡ ಮೆಚ್ಚಿಗೆಯ ಗುಣವಾಚಕವನ್ನು ಬಯಸುತ್ತದೆ. ದೇವರು, ಧರ್ಮ, ಗುಡಿ ಗೋಪುರಗಳ ಬಗ್ಗೆ ಅತ್ಯಂತ ಕೃತಕವಾಗಿ ನೋಡುತ್ತಿರುವ ಈ ಸಮಯದಲ್ಲಿ

ಇಂಥದೊಂದು ಅಮೂಲ್ಯ ಕೃತಿಯನ್ನು ಓದುಗರಿಗೆ ಕೊಡಬೇಕೆಂದು ಯೋಚಿಸಿರುವುದೇ ಅಪೂರ್ವವಾದ ಸಂಗತಿ. ಧ್ಯಾನಸ್ಥ ನೆಲೆಯಲ್ಲಿ ನಿಂತು ಸ್ಮರಣೀಯ ಮಾದರಿಗಳನ್ನು ನಮ್ಮ ಸಂತ ಮಹನೀಯರು ಬಿಟ್ಟು ಹೋಗಿದ್ದಾರೆ. ಅದು ಬೇರೆ ಬೇರೆ ರೂಪದಲ್ಲಿರಬಹುದು. ಅವುಗಳ ಚೇತೋಹಾರಿ ನೋಟವನ್ನು ಇಲ್ಲಿಯ ಕೆಲವು ಲೇಖನಗಳು ನನಗೆ ಕೊಟ್ಟಿವೆ. 'ಭಕ್ತಿ ಎಂಬ ಜೀವರಸ' ಲೇಖನದಲ್ಲಿ ನಮ್ಮ ನಡುವಿನ ಮಹತ್ವಪೂರ್ಣ ವಿದ್ವಾಂಸರಾದ ಲಕ್ಷ್ಮೀಶ ತೋಳ್ಪಾಡಿಯವರು ಗಂಭೀರವಾದ ಚರ್ಚೆ ನಡೆಸಿದ್ದಾರೆ. ಈ ಕೃತಿ ನನ್ನ ಪರಿಚಿತರಾದ ಹಲವು ಲೇಖಕರು ಗುಂಪುಗೂಡಿ 'ನಾವು ಹೀಗೆಲ್ಲ ಯೋಚಿಸುತ್ತಿದ್ದೇವೆ' ಎಂದು ಹೇಳುವಂತಿದೆ. ಸಾಹಿತ್ಯದ ಮಹೋನ್ನತಿ ಎಂದರೆ ಇದೇ ಅಲ್ಲವೆ? ಸಮೃದ್ಧತೆಯ ನೆಲೆಯಲ್ಲಿ ಗುಣಾತ್ಮಕತೆಯನ್ನು ಈ ರೀತಿ ಗ್ರಹಿಸಬೇಕು ಎಂದು ಸೂಚಿಸುವ ರೀತಿಯಲ್ಲಿವೆ ಇಲ್ಲಿಯ ಬಹುಪಾಲು ಲೇಖನಗಳು. ನಮ್ಮ ಸಂತ ಮಹನೀಯರ ಬಳಿಗೆ ಮತ್ತೆ ಕರೆದೊಯ್ಯುವಂಥವು. ಈ ಕೃತಿಯು ಬಹು ದೊಡ್ಡ ಪ್ರಮಾಣದಲ್ಲಿ ಸಂವಾದವನ್ನು ಬಯಸುವಂಥದ್ದು. ಸಂಪಾದಕತ್ವದ ಸೂಕ್ಷ್ಮ ಮನಸ್ಸುಗಳಿಗೆ ಧನ್ಯವಾದಗಳು.

–**ಶೂದ್ರ ಶ್ರೀನಿವಾಸ್** (ಸಾಹಿತಿ, ಕಾದಂಬರಿಕಾರ)

*

ಈ ತರಹದ ಪ್ರಯತ್ನ ಕನ್ನಡಕ್ಕೆ ಹೊಸದು. ಒಂದೆಡೆ ಭಕ್ತಿ ಮಾರ್ಗದಿಂದ ದೀಪ ಬೆಳಗಿಸಿದ, ಮಳೆ ಸುರಿಸಿದ ದೃಷ್ಟಾಂತಗಳನ್ನು ಕೇಳುತ್ತಲೇ ಬೆಳೆದ ನಮ್ಮ ಭಾವಲೋಕಕ್ಕೆ, ಇನ್ನೊಂದೆಡೆ ಭಕ್ತಿ ಎಂಬುದು ಒಂದು ಗುಲಾಮಗಿರಿ ಎಂಬರ್ಥದಲ್ಲಿ ಚಿಂತನೆಗೆ ಒಳಪಡಿಸಿರುವ ವೈಚಾರಿಕ ಕಾಲಘಟ್ಟದಲ್ಲಿಯೂ ಈ ಕೃತಿ ಕುತೂಹಲದಿಂದಲೇ ಓದಿಸಿಕೊಳ್ಳುವ ಸಾಮರ್ಥ್ಯ ಹೊಂದಿದೆ ಎಂಬುದು ಇದರ ಹೆಗ್ಗಳಿಕೆ. ಇಲ್ಲಿಯ ಕೊನೆಯ ಮೂರು ಲೇಖನಗಳು ವಿಜ್ಞಾನ, ನಂಬಿಕೆ ಮತ್ತು ವೈದ್ಯಶಾಸ್ತ್ರಗಳ ಪ್ರಸ್ತಾಪದೊಂದಿಗೆ ವಿಭಿನ್ನವಾದ ಹೊಳಹುಗಳನ್ನು ನೀಡುವಂತಿವೆ. ನನಗೆ ವೈಯಕ್ತಿಕವಾಗಿ ಭಕ್ತಿ ಎಂದರೆ ಧ್ಯಾನ ಮಾತ್ರ. ಮನಸ್ಸನ್ನು ಕೇಂದ್ರೀಕರಿಸಿ ಬರವಣಿಗೆಗೆ ಬೇಕಾದ ಧ್ಯಾನಸ್ಥ ಮನಸ್ಥಿತಿ ಪಡೆಯಲು ಒಂದು ಅಲೌಕಿಕ ರೂಪದ ಅಗತ್ಯ ಅಷ್ಟೇ. ಇಂತೆಲ್ಲ ಭಕ್ತಿಯ ಹಲವು ಮಜಲುಗಳನ್ನು ಒಳಗೊಂಡ 'ಅವರವರ ಭಕುತಿಗೆ' ಕೃತಿ ಮತ್ತೆ ಮತ್ತೆ ಓದುವ ಬರಹಗಳ ಗುಚ್ಛ.

–**ಸುನಂದಾ ಕಡಮೆ** (ಸಾಹಿತಿ, ಕಥೆಗಾರ್ತಿ)

*

'ಅವರವರ ಭಕುತಿಗೆ' – ಭಕ್ತಿಯ ಪರಿಕಲ್ಪನೆಯನ್ನು ವಿವಿಧ ಕೋನಗಳಿಂದ, ವಿವಿಧ ಸ್ತರಗಳಲ್ಲಿ ಪರಿಶೀಲಿಸುವ ಮಹತ್ವದ ಪ್ರಕಟಣೆ. ಅದರ ಹೆಸರಿನಂತೆ ಎಲ್ಲರಿಗೆ ಸ್ವೀಕಾರ್ಯವಾಗಿ ಇದೆ. ವಿಸ್ತಾರವಾದ ಹರಹು, ಗಹನ – ಸರಳ ಪರಾಮರ್ಶೆಗಳಿಂದ,

ಮಾಹಿತಿ ವಿಶ್ಲೇಷಣೆಗಳಿಂದ ಕೂಡಿದ, ಓರಣವಾಗಿ ಸಂಪಾದಿತವಾದ ಅಧ್ಯಯನ ಯೋಗ್ಯವಾದ ಸಂಕಲನ. ಕನ್ನಡತನವನ್ನು, ಭಾರತೀಯತೆಯನ್ನು ಉಜ್ಜೀವಿಸುವ ಸತ್ಕಾರ್ಯ ಕೂಡಾ. ಇದರ ಯೋಚನೆ, ಯೋಜನೆ ಮತ್ತು ನಿರ್ವಹಣೆಗಳಿಗಾಗಿ ನಿಮ್ಮ ಬಳಗಕ್ಕೆ ಅಭಿನಂದನೆ.

**–ಡಾ. ಎಂ. ಪ್ರಭಾಕರ ಜೋಶಿ** (ಯಕ್ಷಗಾನ ಕಲಾವಿದ)

*

ಆಶ್ಚರ್ಯಕರ ಮತ್ತು ಪ್ರಶಂಸನೀಯ ವಿಚಾರವೆಂದರೆ ಕರ್ನಾಟಕದಲ್ಲಿ ಕಳೆದ ಒಂದು ಸಾವಿರ ವರ್ಷಗಳಿಂದಲೂ ಸಾಗಿ ಬಂದಿರುವ ಒಂದು ವಿಶಿಷ್ಟ ಆಧ್ಯಾತ್ಮಿಕ ಪರಂಪರೆ, ದಾರ್ಶನಿಕ ಪ್ರಕಾರ–ಭಕ್ತಿ ಮಾರ್ಗವನ್ನು ಅಮೆರಿಕೆಗೆ ಬರಮಾಡಿಕೊಂಡು ಅದನ್ನು, ಅದರ ಆಯಾಮಗಳನ್ನು ಅರಿಯುವ, ಅರ್ಥೈಸುವ ಪ್ರಕ್ರಿಯೆಯನ್ನು ಅಮೆರಿಕಾದ ಕನ್ನಡಿಗರು ಕೈಗೆತ್ತಿಕೊಂಡದ್ದು. 'ಅವರವರ ಭಕುತಿಗೆ' ಈ ಪ್ರಯತ್ನದ ಫಲ. ಕ್ರಿಸ್ತಪೂರ್ವ ಪಾಣಿನಿಯಿಂದ ಹಿಡಿದು (ವಾಸುದೇವ ಭಕ್ತಿಯ ಉಲ್ಲೇಖ) ಮುಂದಿನ ವೇದೇತರ ಮಾರ್ಗವಾದ ಮಹಾಭಾರತ, ಗೀತೆ, ಸಾತ್ವತ ಸಂಹಿತೆ, ವಿಷ್ಣು ಪುರಾಣ, ನಾರದ ಮತ್ತು ಶಾಂಡಿಲ್ಯ ಭಕ್ತಿಸೂತ್ರ, ಭಾಗವತ, ಹರಿವಂಶ, ಯಮುನಾಚಾರ್ಯ, ರಾಮಾನುಜ, ಮಧ್ವ, ವಚನಕಾರರು, ದಾಸಪಂಥ– ಇತ್ಯಾದಿ ದಾರ್ಶನಿಕ ದಾಖಲೆಗಳ ಮೂಲಕ ಉಳಿದು ಬಂದ, ಹರಿದು ಬಂದ ಆತ್ಮ–ಪರಮಾತ್ಮ ಸಂಬಂಧದ ದಾರ್ಶನಿಕ ಮಾರ್ಗದ ಬಗ್ಗೆ ತಂತಮ್ಮ ಅರಿವು, ಚಿಂತನೆ, ಭಾವನೆಗಳ ನೆಲೆಯಲ್ಲಿ ಅರ್ಥೈಸುವ ಆಕರವೇ ಈ ಹೊತ್ತಗೆ–'ಅವರವರ ಭಕುತಿಗೆ.' ಎಲ್ಲರೂ ಒಂದೇ ರೀತಿಯಲ್ಲಿ ಅರ್ಥೈಸಿಲ್ಲ, ಅರ್ಥೈಸಲು ಸಾಧ್ಯವೂ ಇಲ್ಲ, ಅರ್ಥೈಸಲೂ ಬಾರದು. 'ಅವರವರ ಭಕುತಿಗೆ' ಪ್ರತಿಯೊಬ್ಬನ ವೈಯಕ್ತಿಕ ಅರಿವಿಗೆ ಹಿಡಿದ ಕನ್ನಡಿ. ವ್ಯಕ್ತವನ್ನು ಅವ್ಯಕ್ತದೊಡನೆ ಅನುಸಂಧಾನ ಮಾಡುವ, ಭಾವುಕವಾಗಿ ಅನನ್ಯತೆಯನ್ನು, ಲೀನತೆಯನ್ನು ಸಾಧಿಸುವ ವಿಧಾನ 'ಭಗವದನುರಾಗ –ಭಕ್ತಿ'. ಇದನ್ನು ಅರ್ಥೈಸುವ ನಮ್ಮ ಅಮೆರಿಕಾದ ಬಂಧುಗಳ ಪ್ರಯತ್ನ 'ಅವರವರ ಭಕುತಿಗೆ' ಸಾರ್ಥಕತೆಯನ್ನು ಸಾಧಿಸಿದೆ.

**–ಶ್ರೀಪತಿ ತಂತ್ರಿ** (ಸಮಾಜ ಶಾಸ್ತ್ರಜ್ಞರು)

*

...ಹೊರನಾಡ ಕನ್ನಡಿಗರಿಗೆ ಕನ್ನಡ ಎಂಬುದು ಒಂದು ಭಾಷೆಯಲ್ಲ, ಕನ್ನಡವೆಂಬುದು ಒಂದು ಜೀವನ ದೃಷ್ಟಿ, ಒಳಗಿನಿಂದಲೇ ಅರಳಿ ನಿಲ್ಲುವ ಒಂದು ಜೀವಂತ ಸೃಷ್ಟಿ ಎಂಬ ಸಂಪಾದಕರ ಮಾತಿಗನುಗುಣವಾಗಿ ಸಂಪುಟದ ಬರಹಗಳ ಆಳ, ವೈವಿಧ್ಯ, ವಿಷಯ ವ್ಯಾಪ್ತಿ ಶ್ರೀಮಂತವಾಗಿದೆ. ಯಕ್ಷಗಾನ ಸಾಹಿತ್ಯದಲ್ಲಿ ಭಕ್ತಿ, ಬೇಂದ್ರೆಯವರು ಕಂಡ ಅಭಂಗ ವಿಟ್ಠಲ, ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ದೇವರು, ವಚನಗಳಲ್ಲಿ ಮಾಯೆಯ ಕಲ್ಪನೆ, ಶತಮಾನಗಳಾಚೆಯ ಶರಣರ ಸಂದೇಶ, ಬಸವಣ್ಣ–ಒಂದು ಬೆರಗು, ಕಠೋಪನಿಷತ್ತಿನ

ನಚಿಕೇತನ ಭಕ್ತಿ, ಅರಿವನರಿವ ಹಾದಿಗೆ ಹೆಣ್ಣೆಂಬ ಹೆಸರು, ಆಧುನಿಕ ವೈದ್ಯಶಾಸ್ತ್ರ ಮತ್ತು ಭಕ್ತಿ ಎಂಬ ಉದ್ಯಮ...ಹೀಗೆ ವಿಷಯ ವ್ಯಾಪ್ತಿ ಬೆಳೆಯುತ್ತಲೇ ಹೋಗುತ್ತದೆ. ಪ್ರತಿ ಲೇಖನದಲ್ಲೂ ಅಡಕವಾಗಿರುವ ಉಲ್ಲೇಖಗಳು, ವಿಮರ್ಶಾತ್ಮಕ ದೃಷ್ಟಿಕೋನ ಗಮನ ಸೆಳೆಯುತ್ತದೆ. ..ಭಕ್ತಿ ಸಾಹಿತ್ಯ ಕುರಿತಂತೆ ಕನ್ನಡದಲ್ಲಿ ಇರುವ ಗ್ರಂಥಗಳಿಗೆ ಈ ಸಂಪುಟ ಒಂದು ಮೌಲಿಕ ಸೇರ್ಪಡೆ.

–**ಕೆ. ಸತ್ಯನಾರಾಯಣ** (ವಿಜಯ ಕರ್ನಾಟಕ ಪತ್ರಿಕೆಯ ಅಂಕಣ 'ಒಳಕಥನ'ದಿಂದ)

*

ಒಂದೇ ಮಾತಿನಲ್ಲಿ ಹೇಳುವುದಾದರೆ ಈ ಗ್ರಂಥ ಕನ್ನಡ ಸಾಹಿತ್ಯ ಲೋಕಕ್ಕೊಂದು ಅತಿ ವಿಶಿಷ್ಟ ಮತ್ತು ಅತ್ಯಂತ ಮೌಲ್ಯಯುತ ಸೇರ್ಪಡೆ. ವಚನಕಾರರು ಮತ್ತು ಅವರ ವಚನಗಳ ಕುರಿತು, ಸಾಕಷ್ಟು ಅಧ್ಯಯನ ನಡೆಸಿ ಬರೆದ ಪ್ರಬುದ್ಧ ಪ್ರಬಂಧಗಳು ಈ ಗ್ರಂಥದಲ್ಲಿವೆ. ಕುವೆಂಪು, ಬೇಂದ್ರೆ, ಪುತಿನ ಮುಂತಾದ ಕನ್ನಡದ ರಸಋಷಿಗಳು ಭಕ್ತಿಯನ್ನು ಹೇಗೆ ಪರಿಕಲ್ಪಿಸಿದ್ದಾರೆಂಬ ವಿವರಗಳಿವೆ. ಜನಪದ ಸಾಹಿತ್ಯದಲ್ಲಿ ಭಕ್ತಿ ಸಿಂಚನ, ಯಕ್ಷಗಾನ ಸಾಹಿತ್ಯದಲ್ಲಿ ಭಕ್ತಿ, ಸುಗಮ ಸಂಗೀತದಲ್ಲಿ ಭಕ್ತಿ, ಗ್ರಾಮೀಣ ಮಹಿಳೆಯರ ಜೀವನದ ಅಂತರ್ಗಾಮಿ ಭಕ್ತಿ... ಮುಂತಾದ ಶೀರ್ಷಿಕೆಗಳಿಂದಲೇ ಗ್ರಂಥದ ಆಳ, ಹರವಿನ ಅಂದಾಜಾಗುತ್ತದೆ. ಇದಿಷ್ಟು ಭಕ್ತಿ ಹೂರಣವು ಪುಸ್ತಕದ ಒಳಗೆ ತುಂಬಿದ್ದರೆ ಇದಕ್ಕೆ ಸಂಗಾತಿಯಾಗಿ, ಸಂವಾದಿಯಾಗಿ ಒಂದು ಧ್ವನಿಸಂಪುಟವೂ ಇದೆ. ಇದು ಹಿಂದೂಸ್ಥಾನಿ ಸಂಗೀತಗಾರ, ಅಪ್ಪಟ ಕನ್ನಡಿಗ ಪ್ರತಿಭೆ ಪಂ. ನಾಗರಾಜ ಹವಾಲ್ದಾರ್ ಅವರ ಪರಿಶ್ರಮದಿಂದ ಮೂಡಿ ಬಂದ ನಾದಕುಸುಮ. ಹೀಗೆ ಭಕ್ತಿಯ ಕುರಿತಂತೆ ಕನ್ನಡದಲ್ಲಿ ಸಾಹಿತ್ಯ–ಸಂಗೀತ ಸಂಗಮವೊಂದು ಸಪ್ತ ಸಾಗರದಾಚೆ ಅಮೆರಿಕಾದಲ್ಲಿ ಸಾಕಾರಗೊಳ್ಳುತ್ತಿದೆ ಎನ್ನುವುದು ಸಾಂಸ್ಕೃತಿಕ, ಪ್ರಜ್ಞಾವಂತ ಕನ್ನಡಿಗರಿಗೆಲ್ಲ ರೋಮಾಂಚನದ ಸಂಗತಿಯೇ.

–**ಶ್ರೀವತ್ಸ ಜೋಶಿ** (ವಿಶ್ವವಾಣಿ ಪತ್ರಿಕೆಯ 'ತಳಿರು ತೋರಣ' ಅಂಕಣದಲ್ಲಿ)

*

## 4. ರಂಗ ತರಂಗ (2016)

**ಪ್ರಕಾಶನ : ಕನ್ನಡ ಸಾಹಿತ್ಯ ರಂಗ, ಯು.ಎಸ್.ಎ. ಹಾಗೂ ಅಭಿನವ ಪ್ರಕಾಶನ, ಬೆಂಗಳೂರು**

**ಸಂಪಾದಕರು : ಮೈ. ಶ್ರೀ. ನಟರಾಜ, ನಾಗ ಐತಾಳ ಮತ್ತು ಜ್ಯೋತಿ ಮಹಾದೇವ್**

"ವಿವಿಧ ವಿಷಯಗಳ ಮೇಲೆ ಅಧಿಕಾರದಿಂದ ಮಾತಾಡಬಲ್ಲ ವಿದ್ವಾಂಸರ ಸಮೀಕ್ಷೆಗಳು ಕನ್ನಡ ನಾಡಿನಲ್ಲಿರುವ ಕನ್ನಡಿಗರಿಗೆ ಮತ್ತು ವಿದ್ಯಾರ್ಥಿಗಳಿಗೆ ಅಮೂಲ್ಯವಾಗಿವೆ. ಇವು ಕನ್ನಡ ಸಾಹಿತ್ಯದ ಸಾಧನೆಯನ್ನು ಚಿತ್ರಿಸುವುದಲ್ಲದೇ ನಾಡಿನ ಮುಂದಿರುವ ಸವಾಲುಗಳನ್ನು ಗಮನಿಸಿ ಕನ್ನಡದ ಮುನ್ನಡೆಗೆ ದಾರಿಯನ್ನು ಸಿದ್ಧಗೊಳಿಸುವ ಪ್ರಕಟಣೆಗಳು. ಈ ಪ್ರಕಟಣೆಗಳು ಸಾವಿರಾರು ಮೈಲುಗಳ ದೂರವನ್ನು ಗೆದ್ದು ಹತ್ತಿರ ತರುವ ಸೇತುವೆಗಳು. ಇವು ಕನ್ನಡ ನಾಡಿನಲ್ಲಿಯೂ ಪ್ರಚಾರವಾಗಬೇಕು. 'ರಂಗ ತರಂಗ' ಅನಂತವಾಗಿ ಅಮೆರಿಕದ ಕನ್ನಡಿಗರು

ಮತ್ತು ಕನ್ನಡ ನಾಡಿನ ಕನ್ನಡಿಗರ ಒಂದು ಬಂಗಾರದ ಬೆಸುಗೆಯಾಗಿ ಸಾರ್ಥಕ ಸೇವೆ ಮಾಡಲಿ"

**–ಎಲ್. ಎಸ್. ಶೇಷಗಿರಿರಾವ್** (ಬೆನ್ನುಡಿಯಿಂದ)

*

"ಈ ಸಂಕಲನ ನಿಸ್ಸಂದೇಹವಾಗಿ ಒಂದು ಪರಾಮರ್ಶನ ಗ್ರಂಥ. ಕನ್ನಡ ಭಾಷೆ, ಸಾಹಿತ್ಯವನ್ನು ಒಟ್ಟಂದದಲ್ಲಿ ಹಿಡಿಯುವ ಪ್ರಯತ್ನ ಇಲ್ಲಿದೆ. ಚರಿತ್ರೆಯನ್ನು ಹೀಗೂ ರೂಪಿಸಬಹುದು ಎಂಬ ಸಾಧ್ಯತೆಯನ್ನು ಈ ಸಂಕಲನ ತೋರಿಸಿಕೊಡುತ್ತದೆ. ಕನ್ನಡ ಸಾಹಿತ್ಯರಂಗಕ್ಕೆ ಅಭಿನಂದನೆಗಳು."

**–ನರಹಳ್ಳಿ ಬಾಲಸುಬ್ರಹ್ಮಣ್ಯ** (ಮುನ್ನುಡಿಯಿಂದ)

*

## 5. ಬೇರು ಸೂರು (2013)

**ಪ್ರಕಾಶನ : ಕನ್ನಡ ಸಾಹಿತ್ಯ ರಂಗ, ಯು.ಎಸ್.ಎ. ಹಾಗೂ ವಸಂತ ಪ್ರಕಾಶನ, ಬೆಂಗಳೂರು.**

**ಪ್ರಧಾನ ಸಂಪಾದಕರು : ಗುರುಪ್ರಸಾದ್ ಕಾಗಿನೆಲೆ**

'ಬೇರು ಸೂರು' ಗ್ರಂಥದಲ್ಲಿ ಅನೇಕ ಕತೆಗಳಿವೆ, ವೈಚಾರಿಕ ಲೇಖನಗಳಿವೆ; ಕಾರ್ಪೊರೇಟ್ ಜಗತ್ತಿನಲ್ಲಿ ದುಡಿಯುವಾಗ ಗಳಿಸಿದ ಜ್ಞಾನ ಅನುಭವಗಳ ಚಿತ್ರಣವಿದೆ– ದೇವಾಲಯಗಳ ಪರಿಚಯವಿದೆ– ರಂಗಭೂಮಿಯ ಅನುಭವ ಕಥನವಿದೆ– ಒಟ್ಟು ಅಮೆರಿಕದಲ್ಲಿರುವ ಕನ್ನಡಿಗರ ಇಂದಿನ ಜೀವನದ, ಬಹುಮುಖಿಯಾದ ಪರಿಚಯವನ್ನು ಮಾಡಿಕೊಡುವ ವಿವಿಧ ಬರಹಗಳ ಜೇನುಗೂಡು ಈ ಬೇರು ಸೂರು. ನಮ್ಮವರು ಅಲ್ಲಿ ಕಟ್ಟಿಕೊಂಡು ಬಾಳುತ್ತಿರುವ ಸೂರಿನೊಳಗೆ ಹೊಕ್ಕು ಬರೋಣವೆಂದನ್ನಿಸುವಷ್ಟು ಗಮನಿಸಲೇಬೇಕಾದ ತೀರ ಉಪಯುಕ್ತವಾದ ಮಾಹಿತಿಕೋಶ ಇದಾಗಿದೆಯೆಂದು ನಾನಿದರ ಆದ್ಯಂತ ಕಣ್ಣಾಡಿಸಿದಾಗ ಅನ್ನಿಸಿತು. ನಾನು ಓದುವುದರಲ್ಲಿ ಬಹಳ ಹಿಂದೆ. ಆದರೆ ಇದರ ಪ್ರತಿಯೊಂದು ಲೇಖನವೂ ಓದಿಸಿಕೊಂಡು ಹೋಗಿದೆ. ಶ್ರೀಕಾಂತ ಬಾಬುರವರ ನೀಲಿ ಡಬ್ಬಿಯ ಶ್ರೀಖಂಡವು ನನ್ನ ನಿದ್ದೆಯನ್ನು ಕೆಡಿಸಿದ ಕಥೆ– ಅಮೆರಿಕದಲ್ಲಿ ಮಕ್ಕಳ ಬದುಕಿಗೆ ಕನ್ನಡಿ ಹಿಡಿಯುತ್ತದೆ. ಇದಕ್ಕೆ ಪೂರಕವಾದ ಬರವಣಿಗೆ ಎಚ್. ವೈ. ರಾಜಗೋಪಾಲರ 'ಹೊಸ ನೆಲದಲ್ಲಿ ಹೊಸ ಸಸಿಗಳು,' ಈ ಸಸಿಗಳ ಬೇರು ಮತ್ತು ಸೂರು– ಎರಡೂ ಅಮೆರಿಕವೇ. Gene ಮಾತ್ರ ಕನ್ನಡದ್ದು. ತಮ್ಮ 'ಜೀನ್' ಎರಡೋ ಮೂರೋ ತಲೆಮಾರಿನಲ್ಲಿ ಮರೆತೇಹೋಗುವ ಸಾಧ್ಯತೆಯೂ ಇದೆ. ಕನ್ನಡಿ ನೋಡಿಯೇ ಇದರ ಮೂಲವನ್ನು ತಿಳಿದುಕೊಳ್ಳಬೇಕಾದೀತು. ಕನ್ನಡ ನಾಡಿನಿಂದ ಅಮೆರಿಕ ಪ್ರವೇಶಿಸಿ ಅಲ್ಲಿಯ ಸೂರಿನೊಳಗೆ ಬದುಕಲು ಬೇಕಾದ ಸಿದ್ಧತೆಯ ಬಗ್ಗೆ ನಳಿನಿ ಮಯ್ಯರ ಸುಂದರ ಚಿತ್ರಣ, ನಾಗ ಐತಾಳರ ಕಾದಂಬರಿಯನ್ನು ನೆನಪಿಸುವಂಥದ್ದು. ಕಾಗಿನೆಲೆಯವರು ಅಮೆರಿಕದಲ್ಲೇ ನೆಲೆಯನ್ನು ಕಂಡುಕೊಂಡ ಒಬ್ಬ ಶ್ರೇಷ್ಠ ಬರಹಗಾರನೆಂದು ಅವರ

'ನಾನು-ನೀನು' ಓದಿದಾಗ ತಿಳಿಯಿತು. ಶ್ರೀವತ್ಸರು ತನ್ನ ಬರಹಗಳ ಮೂಲಕ ಕರ್ನಾಟಕದಲ್ಲೂ ಪರಿಚಿತರು. ಗುಂಡೂ ಶಂಕರರಲ್ಲೂ ಒಬ್ಬ ಉತ್ತಮ ಬರಹಗಾರನನ್ನು ನಾನು ಗುರುತಿಸಿದ್ದೇನೆ. 'ಅಮೆರಿಕ- ಒಂದು ವಿಶಿಷ್ಟ ರಾಷ್ಟ್ರವೆ?'- ಈ ಲೇಖನ ಒಬ್ಬ ತನ್ನನ್ನು ತಾನೇ ತಿಳಿಯಬಯಸುತ್ತಿರುವ, ಅಮೆರಿಕಕ್ಕೇ ಹೋಗಿ ಬಾಳುವವನ ಒಳಯೋಚನೆಗಳನ್ನು ಬಿಚ್ಚಿಡುತ್ತದೆ. ವಿಮಲಾ ರಾಜಗೋಪಾಲರ ಉಸಿರಿನಲ್ಲೇ ಸಂಗೀತವಿದೆ. ಸುಪ್ತದೀಪ್ತಿಯವರ ವಲಸೆ ವೃತ್ತದ ವರಸೆಯೊಳಗೆ ಅವರ ಸಮ್ಮೋಹನಗೊಳಿಸುವ ಭಾವಗೀತೆಗಳಿಗಿಂತ ಭಿನ್ನವಾದ ಗದ್ಯವನ್ನು ಬರೆಯುವ ಸಾಮರ್ಥ್ಯ ಕಾಣುವ ಅವಕಾಶ. ಮೀರಾ ರಾಜಗೋಪಾಲರು ಒಬ್ಬ ಗಮನಾರ್ಹ ಲೇಖಕಿಯಾಗಿ ಇಲ್ಲಿ ಎದ್ದು ಕಾಣುತ್ತಾರೆ. ಇದೇ ರೀತಿ ಪಟ್ಟಿ ಮಾಡಲು, ಎಚ್. ಕೆ. ಚಂದ್ರಶೇಖರ್, ವೈಶಾಲಿ ಹೆಗಡೆ, ತ್ರಿವೇಣಿ ಶ್ರೀನಿವಾಸರಾವ್, ವತ್ಸ ಕುಮಾರ್, ಎಸ್. ಎನ್. ಶ್ರೀಧರ್, ಕೃಷ್ಣರಾಜು, ಕೆ. ಜಿ. ವಿ. ಕೃಷ್ಣ- ಹೀಗೆ ಎಲ್ಲರ ಬಗ್ಗೆಯೂ ನನ್ನ ಮೆಚ್ಚುಗೆಯನ್ನು ಪ್ರಕಟಿಸಬೇಕಾಗುತ್ತದೆ. ಸಮ್ಮೇಳನಗಳು ಇಂತಹ ಕೃತಿಯನ್ನು ಹೊರತಂದಲ್ಲಿ ಅವು ಚಿರಸ್ಮರಣೀಯವಾಗುತ್ತವೆ; ಹಕ್ಕಿಗಳು ಒಂದು ಒಳ್ಳೆಯ ಹಣ್ಣಿನ ಮರದ ಹಣ್ಣುಗಳನ್ನು ಕಚ್ಚಿಕೊಂಡು ಗಗನಕ್ಕೆ ಹಾರಿ ಬೀಜ ಪ್ರಸಾರ ಮಾಡಿದಂತೆ.

**–ಪ್ರೊ. ಶ್ರೀಪತಿ ತಂತ್ರಿ** (ಸಮಾಜ ಶಾಸ್ತ್ರಜ್ಞರು)

*

'ಬೇರು ಸೂರು' ಕೃತಿಯನ್ನು ಬಂದ ಕೂಡಲೇ ಆರಂಭಿಸಿ......ಓದಲು ಆರಂಭಿಸಿದ ಮೇಲೆ ನಿಲ್ಲಿಸಲು ಆಗಲಿಲ್ಲ. ಎಲ್ಲ ಲೇಖನಗಳೂ ಆಸಕ್ತಿದಾಯಕವಾಗಿವೆ. ಈ ಬರಹಗಳಿಗೆ ಕರ್ನಾಟಕದ ಹೊರಗಿನವರು, ಅಮೆರಿಕಾ ದೇಶದಲ್ಲಿ ಕನ್ನಡದ ಜೀವಂತ ಪರಿಸರದಿಂದ ದೂರ ಇರುವವರು, ಪಾಪ, ಅವರು ಕನ್ನಡದಲ್ಲಿ ಬರೆದದ್ದೇ ಹೆಚ್ಚು ಎಂಬ ಯಾವ ರಿಯಾಯಿತಿಯೂ ಬೇಕಾಗಿಲ್ಲ. ಪ್ರಬುದ್ಧ ಚಿಂತನೆ, ಪ್ರಬುದ್ಧ ಬರವಣಿಗೆ. ಇಲ್ಲಿಯವರು ಬರೆಯಲಾರದಂಥ ಅನೇಕ ವಿಷಯಗಳು ಇಲ್ಲಿ ಬಂದಿವೆ. ಇಲ್ಲಿಂದ ಅಲ್ಲಿಗೆ ಹೋದವರ ಆರಂಭದ ಪರದೇಶಿತನ, ಹೊಂದಿಕೊಂಡ ಮೇಲಿನ ನಿರಾಳತೆ, ಬಿಟ್ಟುಬಂದಿದ್ದಕ್ಕಾಗಿ ಒಂದು ಬಗೆಯ ವಿಷಾದ, ಅದನ್ನು ಗೆಲ್ಲುವ ಹುನ್ನಾರ, ಅಲ್ಲೇ ನಿಲ್ಲಬೇಕಾದ ಅನಿವಾರ್ಯತೆ, ತಿರುಗಿ ಬಂದವರ ತುಮುಲ- ಇತ್ಯಾದಿಗಳೆಲ್ಲ ಈ ಬರಹಗಳಲ್ಲಿ ಬಹಳ ಚೆನ್ನಾಗಿ ಬಂದಿವೆ. ಸೈಕಾಲಜಿಯ ದೃಷ್ಟಿಯಿಂದ ಈ ಲೇಖನಗಳನ್ನು ವಿಶ್ಲೇಷಿಸಿದರೆ ಕುತೂಹಲಕರವಾದ ಒಳನೋಟಗಳು ಸಿಗಬಹುದು. ಅಲ್ಲಿಗೆ ಹೋಗುವ ಯಾರಾದರೂ ತರುಣರು ಸಂಶೋಧನೆಗೆ ಈ ವಿಷಯ ಆರಿಸಿಕೊಳ್ಳಬಹುದು. ಇದೆಲ್ಲದರ ನಡುವೆ ಅಲ್ಲಿ ಕನ್ನಡತನವನ್ನು ಉಳಿಸಿಕೊಳ್ಳುವ ಪ್ರಯತ್ನಗಳನ್ನು ನೋಡಿ ನನಗೆ ಬಹಳ ಎಂದರೆ ಬಹಳ ಸಂತೋಷವಾಯಿತು. ಅನೇಕ ಲೇಖನಗಳಲ್ಲಿ ಇಂಥ ಪ್ರಸ್ತಾಪಗಳಿವೆ. ಮುಂದಿನ ಪೀಳಿಗೆಗೆ ಕನ್ನಡ ಹೇಗೂ ದಾಟಲಾರದು. ಇಲ್ಲಿಂದ ನಡೆದಿರುವ ಬಹಳ ದೊಡ್ಡ ವಲಸೆಯನ್ನು

ನೋಡಿದರೆ ಹೊಸದಾಗಿ ಹೋಗುವವರಿಗಾದರೂ ಅಲ್ಲಿಯ ಕನ್ನಡ ಸಂಘ-ಸಂಸ್ಥೆಗಳು ಆಸರೆಯಾದಾವು. ಇಂದಿನ ಇಂಗ್ಲಿಷ್ ಮೀಡಿಯಂನ ಭರಾಟೆಯನ್ನು ನೋಡಿದರೆ ಇಲ್ಲಿಂದ ಹೋಗುವವರು ಕನ್ನಡವನ್ನು ಇಲ್ಲೇ ಬಿಟ್ಟು ಹೋದಾರು ಎನಿಸುತ್ತದೆ. ಆದರೆ, ಮನೆಯಲ್ಲಾದರೂ ಕನ್ನಡ ಯಾಕೆ ಅಲ್ಲಿ ಉಳಿದಿಲ್ಲ ಎಂಬುದೊಂದು ಸೋಜಿಗ. ಎಲ್ಲ ಒತ್ತಡಗಳ ನಡುವೆಯೂ ಅನೇಕ ಸಮುದಾಯಗಳು ಹಾಗೆ ತಮ್ಮ ಭಾಷೆಗಳನ್ನು ಉಳಿಸಿಕೊಂಡಿವೆ- ಇಲ್ಲಿ ತುಳುವಿನಂತೆ. ಕನ್ನಡ ಯಾಕೆ ಅಲ್ಲಿ ಉಳಿಯುತ್ತಿಲ್ಲ? ಇರಲಿ. ಕನ್ನಡ ಸಾಹಿತ್ಯ ರಂಗಕ್ಕೆ ಹೋಗುವ ಅವಕಾಶ ಒಮ್ಮೆ ಬಂದಿತ್ತು, ವೀಸಾ ಸಿಗಲಿಲ್ಲ. ಅಲ್ಲಿಯ (ಕಸಾರಂನ) ಎಲ್ಲ ಸ್ನೇಹಿತರಿಗೂ ವಂದನೆಗಳು.

**–ಪ್ರೊ. ಗಿರಡ್ಡಿ ಗೋವಿಂದರಾಜು,** ಧಾರವಾಡ

*

'ಬೇರು ಸೂರು' ಪರಿಣಾಮಕಾರಿಯಾದ, ಅಷ್ಟೇ ಕಲಾತ್ಮಕವಾದ ಸಂಕಲನ. ಗುರುಪ್ರಸಾದರ ಮುನ್ನುಡಿ ಬಹಳ ಅರ್ಥಪೂರ್ಣವಾಗಿದೆ. ಲೇಖನಗಳು ಮನಸ್ಸು ತಟ್ಟುತ್ತವೆ. ನಿಮ್ಮೆಲ್ಲರ ಕರ್ತೃತ್ವಶಕ್ತಿ, ಬದ್ಧತೆ, ಪ್ರತಿಭೆಗಳು ನಿಜವಾಗಿ ಪ್ರಶಂಸನೀಯ. ಅಭಿನಂದನೆಗಳು.

**–ಡಾ. ವೀಣಾ ಶಾಂತೇಶ್ವರ,** ಧಾರವಾಡ

*

'ಬೇರು ಸೂರು' ತುಂಬ ಪ್ರೌಢವೂ ಆತ್ಮೀಯವೂ ವಿಚಾರ ಸೀಮೆಯನ್ನು ಹಲವಾರು ಗವಾಕ್ಷಿಗಳಿಂದ ನೋಡಬಲ್ಲ ಸಾಮರ್ಥ್ಯ ಉಳ್ಳವೂ ನೈಜ ಕಳಕಳಿಯವೂ ಆಗಿರುವುದು ನಿಜವಾಗಿ ಕನ್ನಡದ ನಿಲುವುಗಳನ್ನು ಎತ್ತರಿಸುವ ಸದ್-ಪ್ರಯತ್ನ ಎನ್ನಬಹುದಾದ ಸ್ವಾಗತಾರ್ಹ ಸಂಕಲನ. ಶಾಂತಾರಾಮ ಸೋಮಯಾಜಿಗಳು ನಮ್ಮ ಢೋಂಗಿ ಸಂಸ್ಕೃತಿಯನ್ನು ಬಿಚ್ಚಿಟ್ಟಿರುವ ರೀತಿ ಶಾಕ್ ಕೊಡುವಂಥದಾಗಿದೆ. ಎಲ್ಲರ ಬರಹಗಳಲ್ಲಿ ಶಬ್ದಸಿದ್ಧಿ, ನಿರೂಪಣ ಕೌಶಲ, ಮತ್ತು ಪ್ರಾಮಾಣಿಕ ಮಾನಸಿಕ ಒತ್ತಡಗಳನ್ನು ಕಾಣಬಹುದಾಗಿದೆ. 38 ಮಂದಿಯ ಬರಹಗಳಲ್ಲಿ ಮೂರನೆಯ ಒಂದು ಭಾಗವನ್ನು ಮಹಿಳೆಯರು ಹಂಚಿಕೊಂಡು ಸಮತೂಕದ ಬರಹಗಳನ್ನು ನೀಡಿದ್ದಾರೆ. ಯಾವ ದೃಷ್ಟಿಯಿಂದ ನೋಡಿದರೂ ಇದೊಂದು ಸಂಗ್ರಹಯೋಗ್ಯವಾದ ಬರಹಗಳ ಗುಚ್ಛವಾಗಿದೆ.

ಎಲ್ಲ ರಚಯಿತರಿಗೂ ಅವರ ಹಿಂದೆ ನಿಂತು ಬೆಂಬಲಿಸಿರುವ ಹಿರಿ-ಕಿರಿಯರಿಗೂ ನನ್ನ ಆತ್ಮೀಯ ನೆನಪುಗಳು.

**–ಪ್ರೊ. ಅ. ರಾ. ಮಿತ್ರ,** ಬೆಂಗಳೂರು

*

'ಬೇರು ಸೂರು' ಕುತೂಹಲಕಾರಿಯಾಗಿದೆ. ಆಸಕ್ತಿಯಿಂದ ಕಣ್ಣಾಡಿಸಿದೆ. ಹೊತ್ತಗೆಯ ವೈಶಿಷ್ಟ್ಯಕ್ಕೆ ಕುಂದಿಲ್ಲ. ಅಲ್ಪಾವಧಿಯಲ್ಲಾದರೂ ಆ ನಾಡಿನಲ್ಲಿ ಕೆಲಮಂದಿ ಸಹಜೀವಿಗಳೊಡನೆ ಭಾವನೆಗಳನ್ನು ಹಂಚಿಕೊಂಡ ನೆನಪು ಸದಾ ನನ್ನನ್ನು ಕಾಡುತ್ತಿರುವುದರಿಂದ ಬರಹಗಳ ಅನೇಕ ಸಾಲುಗಳು ಮನಸ್ಸನ್ನು ತಟ್ಟಿದವು. 'ವಲಸೆ' ವ್ಯವಹಾರವನ್ನು ಮೀರಿ ಅಂತರಂಗದಲ್ಲಿ ಭಾವನೆಗಳ ಮೊಟ್ಟೆಗೆ ಕಾವು ಕೊಡುವಂತೆ ಮೂಡಿ ಬಂದುದನ್ನೆಲ್ಲ ಓದಿ ಆಸ್ವಾದಿಸಿದೆ. ಅರ್ಬುದದಿಂದ ಹಿಡಿದು ಹಿಂದೂ ದೇವಾಲಯದ ತನಕ 'ಕಾಯ' ಕಾಯುವ ಕನಸುಗಳ ಅನಾವರಣ ಈ ಬೇರು ಸೂರು. ಸೂರು ನೂರಾಗಿಸಿದ ನಿಮಗೆಲ್ಲರಿಗೆ ನಮೋ ಎನ್ನುವೆ.

**–ಉದ್ಯಾವರ ಮಾಧವ ಆಚಾರ್ಯ,** ಉಡುಪಿ

*

'ಬೇರು ಸೂರು' ಓದಿದೆ. ದೂರದ ನಾಡಿನಲ್ಲಿದ್ದು ಕನ್ನಡದಲ್ಲಿ ಬರೆಯುವ ನಿಮ್ಮ ಪ್ರಯತ್ನ ಸ್ತುತ್ಯರ್ಹವಾದದ್ದು. ನಿಮ್ಮೆಲ್ಲರನ್ನೂ ಅಭಿನಂದಿಸುತ್ತೇನೆ.

**–ಎಸ್. ಎಲ್. ಭೈರಪ್ಪ, ಮೈಸೂರು**

*

## 6. ಮಥಿಸಿದಷ್ಟೂ ಮಾತು (2011)

**ಪ್ರಕಾಶನ : ಕನ್ನಡ ಸಾಹಿತ್ಯ ರಂಗ, ಯು.ಎಸ್.ಎ. ಹಾಗೂ ಅಭಿನವ ಪ್ರಕಾಶನ, ಬೆಂಗಳೂರು.**
**ಪ್ರಧಾನ ಸಂಪಾದಕರು : ತ್ರಿವೇಣಿ ಶ್ರೀನಿವಾಸರಾವ್.**

'ಅಮೆರಿಕೆಯಲ್ಲಿ ಬಿಡಾರ ಹೂಡಿರುವ ಕನ್ನಡ ಪರಿಸರದ ಸ್ಥಾಯೀ ಮತ್ತು ಸಂಚಾರೀ ಭಾವಗಳ, ವೈವಿಧ್ಯಪೂರ್ಣ ಆಧುನಿಕ ಅಭಿವ್ಯಕ್ತಿಯ ವಿಶಿಷ್ಟ ಸೊಲ್ಲುಗಳ ಸಂಕಲನ ಇದು. ಕಾವ್ಯದ ಧ್ವನಿಶಕ್ತಿಯ ಜೊತೆಗೆ ಕಥನದ ಕುತೂಹಲವನ್ನೂ ಹೊಂದಿರುವ ಲಲಿತ ನಿಬಂಧಗಳು, ತಮ್ಮ ಅನುಭವಜನ್ಯ ವಿವರಗಳಲ್ಲಿ ಮೈದಾಳುತ್ತಲೇ, ಅದರಾಚೆಗೂ ಚಿಂತನಶೀಲವಾಗಿ ರೆಕ್ಕೆ ಬಿಚ್ಚುವ ರೀತಿ ಭಾವೋದ್ದೀಪಕವಾಗಿದೆ. ಇಲ್ಲಿನ ಹೆಚ್ಚಿನ ಬರಹಗಳು ಕನ್ನಡ ಸಂವೇದನೆಯನ್ನು ಹಿಗ್ಗಿಸುವಷ್ಟು ಸತ್ವಶಾಲಿಯಾಗಿವೆ.'

**–ಜಯಂತ ಕಾಯ್ಕಿಣಿ** (ಬೆನ್ನುಡಿಯಲ್ಲಿ)

*

'ಈ ಸಂಕಲನದಲ್ಲಿರುವ ಬರಹಗಳನ್ನು ಸಂಪಾದಕರು ಸಲ್ಲಾಪ ಹರಟೆ ಚಿಂತನೆ ಎಂದು ಮೂರು ಭಾಗಗಳಲ್ಲಿ ವಿಂಗಡಿಸಿದ್ದಾರೆ. ಆದರೆ ಅನುಭವ ಮತ್ತು ಚಿಂತನಾ ಪ್ರಧಾನವಾದ ಈ ಬರಹಗಳನ್ನು ಒಟ್ಟಾರೆಯಾಗಿ ಪ್ರಬಂಧಗಳು ಎನ್ನಬಹುದು. ಈ ಪ್ರಬಂಧಗಳನ್ನು ಓದುತ್ತ ನನಗೆ ಅಮೆರಿಕ ಕನ್ನಡಿಗರ ಬಾಳಿನ ಒಂದು ಮುಖದ ದರ್ಶನವಾಗಂತಾಯಿತು. ಬೇರೆಬೇರೆ ಕ್ಷೇತ್ರದಲ್ಲಿ ಹಾಗೂ ಜ್ಞಾನಶಿಸ್ತಿನಲ್ಲಿ ಕೆಲಸ ಮಾಡುವ ಜನರು ಕನ್ನಡದೊಳಗೆ ಬರೆಯುವುದರಿಂದ ಕನ್ನಡ ಬರಹಕ್ಕೆ ಹೊಸಶಕ್ತಿಯ

ಆವಾಹನೆಯಾಗುತ್ತದೆ ಎಂದು ನಂಬಿದವನು ನಾನು. ಈ ಬರಹಗಳನ್ನು ಓದಿದ ಮೇಲೆ, ಬೇರೆಬೇರೆ ದೇಶಗಳಲ್ಲಿ ಇರುವ ಕನ್ನಡಿಗರು ಬರೆದಾಗಲೂ ಕನ್ನಡಕ್ಕೆ ಹೊಸ ಆಯಾಮದ ಕೂಡಿಕೆಯಾಗುತ್ತದೆ ಎಂದು ಅನಿಸುತ್ತಿದೆ. ಈ ಬರಹಗಳ ಹಿನ್ನೆಲೆಯಲ್ಲಿ ಅಮೆರಿಕಕ್ಕೆ ಹೋಗಿಬಂದವರು ಬರೆದ ಅನೇಕ ಪ್ರವಾಸಕಥನಗಳ ಮಿತಿಯೂ ಹೊಳೆಯುತ್ತಿದೆ.'

**–ರಹಮತ್ ತರಿಕೆರೆ**

*

## 7. ಕನ್ನಡ ಕಾದಂಬರಿ ಲೋಕದಲ್ಲಿ... ಹೀಗೆ ಹಲವು... (2009)

**ಪ್ರಕಾಶನ : ಕನ್ನಡ ಸಾಹಿತ್ಯ ರಂಗ, ಯು.ಎಸ್.ಎ. ಹಾಗೂ ಅಭಿನವ ಪ್ರಕಾಶನ, ಬೆಂಗಳೂರು.**
**ಪ್ರಧಾನ ಸಂಪಾದಕರು : ಎಂ. ಎಸ್. ನಟರಾಜ್**

'ಕಾದಂಬರಿ ಲೋಕದಲ್ಲಿ...' ಬಹಳ ವಿಶಿಷ್ಟವಾದ ಪ್ರಯತ್ನ. ನಾನು 1987ರಿಂದ ನೋಡುತ್ತಿದ್ದೇನೆ. ಅಮೆರಿಕದ ಕನ್ನಡಿಗರು ಬಹಳ ಶ್ರದ್ಧೆಯಿಂದ ಕೆಲಸಮಾಡುತ್ತಿದ್ದಾರೆ. ಇಂಥ ಪ್ರಯತ್ನವನ್ನು ನೋಡಿದಾಗ... (ಅವರು) ಕನ್ನಡದ ಕ್ಷಿತಿಜವನ್ನು ಹೆಚ್ಚಿಸಿದ್ದಾರೆನಿಸುತ್ತದೆ...

**ರಾಷ್ಟ್ರಕವಿ ಡಾ. ಜಿ. ಎಸ್. ಶಿವರುದ್ರಪ್ಪ**

–('ಅಭಿನವ'ದ ಶ್ರೀ ರವಿಕುಮಾರ್ ಅವರೊಂದಿಗೆ ನಡೆಸಿದ ದೂರವಾಣಿ ಸಂಭಾಷಣೆಯಲ್ಲಿ)

*

ಈ ಪುಸ್ತಕದಲ್ಲಿ ಎದ್ದು ಕಾಣುವ ಒಂದು ವೈಶಿಷ್ಟ್ಯವೆಂದರೆ ಇಲ್ಲಿ ಓದಿಗಾಗಿ ಆಯ್ದುಕೊಂಡ ಎಲ್ಲ ಕಾದಂಬರಿಗಳು... ಕಳೆದ ಮೂರು ದಶಕಗಳಲ್ಲಿ ಪ್ರಕಟವಾದವು. ಇವುಗಳಲ್ಲಿ ಬಹಳಷ್ಟು ಕೃತಿಗಳ ಬಗ್ಗೆ ವಿಶೇಷ ಚರ್ಚೆ ನಡೆದಿಲ್ಲ. ಅಷ್ಟೇ ಮಹತ್ವದ ಇನ್ನೊಂದು ವೈಶಿಷ್ಟ್ಯವೆಂದರೆ ಈ ಪುಸ್ತಕಕ್ಕೆ ಸೇರಿದ ಲೇಖನಗಳನ್ನು ಬರೆದವರಲ್ಲಿ ಹೆಚ್ಚಿನವರು ಸಾಹಿತ್ಯ ಕ್ಷೇತ್ರಕ್ಕೆ ಹೊರಗಿನವರು... ಸಾಹಿತ್ಯೇತರ ಕ್ಷೇತ್ರಗಳಲ್ಲಿ ಆಸಕ್ತಿ ಹೊಂದಿದವರು, ಕನ್ನಡ ಓದುಗರಿಗೆ ಹೊಸಬರು. ಆದರೆ ಚೆನ್ನಾಗಿ ಬರೆಯಬಲ್ಲವರು. ಇವರನ್ನು ಒಳಗೊಳ್ಳುವ ಮೂಲಕ ಪುಸ್ತಕಕ್ಕೆ ತಾಜಾತನ ಹಾಗೂ ವೈವಿಧ್ಯ ಬಂದಿದೆ... ಈ ಪುಸ್ತಕದ ಲೇಖನಗಳಲ್ಲಿ ಹೆಚ್ಚಿನವು ಪರಿಚಯಾತ್ಮಕ ಬರಹಗಳು... ಆದರೆ ಕೃತಿಗಳೊಡನೆ ಇನ್ನೂ ಹೆಚ್ಚು ಗಂಭೀರವಾದ ತೊಡಗಿಕೊಳ್ಳುವಿಕೆಯನ್ನು ತೋರುವ ಹಲವಾರು ಲೇಖನಗಳೂ ಈ ಪುಸ್ತಕದಲ್ಲಿವೆಯೆನ್ನುವುದು ಮಹತ್ವದ್ದಾಗಿದೆ... ಆವರಣದ ವಿಶ್ಲೇಷಣೆ ಭೈರಪ್ಪನವರ ಈ ಕಾದಂಬರಿಯನ್ನು ಕುರಿತು ಬಂದ ಅತ್ಯುತ್ತಮ ಲೇಖನಗಳಲ್ಲೊಂದಾಗಿದೆ...

**–ಡಾ. ಜಿ. ಎಸ್. ಆಮೂರ** (ಮುನ್ನುಡಿಯಲ್ಲಿ)

*

ಕನ್ನಡ ಸಾಹಿತ್ಯ ರಂಗ... ಕನ್ನಡದ ಕೆಲ ಮುಖ್ಯ ಕಾದಂಬರಿಗಳ ಕುರಿತು ಇಲ್ಲಿ ಅವಲೋಕನ ನಡೆಸಿದೆ. ಒಮ್ಮೆಗೇ ಒಟ್ಟಿಗೇ ತೆರೆದುಕೊಂಡ ಈ ರೀತಿಯ ಕಾದಂಬರೀ

ಅವಲೋಕನವೂ ಚರ್ಚೆಯೂ ಕನ್ನಡ ಸಾಹಿತ್ಯದ ಮಟ್ಟಿಗೆ ಪ್ರಾಯಶಃ ಪ್ರಪ್ರಥಮ ಎನ್ನಿಸುತ್ತದೆ... 'ಸಹೃದಯ ವಿಮರ್ಶೆ' ಎಂಬುದಕ್ಕೆ ಈ ಹೊತ್ತಗೆ ಒಂದು ಉತ್ತಮ ಮಾದರಿಯೆನ್ನಬಹುದು. ಇಂಥ ಸಾರ್ಥಕ ಹೊಳವಿಗಾಗಿ ಅಮೆರಿಕದ ಕನ್ನಡ ಸಾಹಿತ್ಯ ರಂಗಕ್ಕೆ, ಅದರ ರೂವಾರಿಗಳಿಗೆ ನಮ್ಮೆಲ್ಲರ ಅಭಿನಂದನೆ ಜೊತೆಗೆ ಕೃತಜ್ಞತೆಯೂ ಸಲ್ಲಲೇಬೇಕು.

**–ವೈದೇಹಿ** (ಬೆನ್ನುಡಿಯಲ್ಲಿ)

*

## 8. ನಗೆಗನ್ನಡಂ ಗೆಲ್ಗೆ! (2007)

**ಪ್ರಕಾಶನ : ಕನ್ನಡ ಸಾಹಿತ್ಯ ರಂಗ, ಯು.ಎಸ್.ಎ. ಹಾಗೂ ಅಭಿನವ ಪ್ರಕಾಶನ, ಬೆಂಗಳೂರು.**
**ಸಂಪಾದಕರು : ಎಚ್. ಕೆ. ನಂಜುಂಡಸ್ವಾಮಿ ಮತ್ತು ಎಚ್. ವೈ. ರಾಜಗೋಪಾಲ್**

'...ಒಂದು ಸಾಹಿತ್ಯಕ ಚರಿತ್ರೆ ಮತ್ತು ಸಾಹಿತ್ಯದ ಹಾಸ್ಯ ಸಂಕಲನ ಎರಡೂ ಒಂದೆಡೆ ಸೇರಿ ರಮ್ಯಲೋಕವನ್ನು ಪ್ರಕಟಿಸಿಬಿಟ್ಟಿದ್ದೀರಿ...'

**–ಪ್ರೊ. ಜಿ. ವೆಂಕಟಸುಬ್ಬಯ್ಯ**
('ಅಭಿನವ'ದ ಶ್ರೀ ರವಿಕುಮಾರ್ ಅವರಿಗೆ ಬರೆದ ಪತ್ರದಲ್ಲಿ)

*

'...ಈ ಕೃತಿಯಲ್ಲಿ ನಗೆಗನ್ನಡ ನಲಿದಿದೆ, ವಿಜೃಂಭಿಸಿದೆ. ಕನ್ನಡದ ಹಾಸ್ಯಾಸಕ್ತರೆಲ್ಲರೂ ಅಭಿಮಾನದಿಂದ ತಮ್ಮ ಮೆಚ್ಚಿನ ಹಿರಿಕಿರಿಯ ಹಾಸ್ಯಸಾಹಿತಿಗಳನ್ನು ಓದಿ, ಅವರ ಕುರಿತು ಪ್ರಬುದ್ಧ ಪರಿಚಯವನ್ನು ಮಾಡಿಕೊಂಡು ಕೃತಾರ್ಥಭಾವ ತಾಳುವಂತೆ ಪುಸ್ತಕ ಹೊರಬಂದಿದೆ... ಹೊರನಾಡ ಬಂಧುಗಳ ಕನ್ನಡ ಪ್ರೇಮ ಅನುಕರಣೀಯವಾದುದು...'

**–ಭುವನೇಶ್ವರಿ ಹೆಗಡೆ** (ವಾರ್ತಾ ಭಾರತಿ ಪತ್ರಿಕೆಯ ಅಂಕಣದಲ್ಲಿ)

*

## 9. ಆಚೀಚೆಯ ಕಥೆಗಳು (2005)

**ಪ್ರಕಾಶನ : ಕನ್ನಡ ಸಾಹಿತ್ಯ ರಂಗ, ಯು.ಎಸ್.ಎ. ಹಾಗೂ ಅಭಿನವ ಪ್ರಕಾಶನ, ಬೆಂಗಳೂರು.**
**ಪ್ರಧಾನ ಸಂಪಾದಕರು : ಗುರುಪ್ರಸಾದ್ ಕಾಗಿನೆಲೆ**

'ಆಚೀಚೆಯ ಕಥೆಗಳು' ಕನ್ನಡದಲ್ಲಿ ನಡೆದ ಇತ್ತೀಚಿನ ಆಕರ್ಷಕ ಪ್ರಯೋಗವಾಗಿದೆ. ತಾಯಿನೆಲದಿಂದ ದೂರವಾದ– ಕನ್ನಡದ ಜೀವಂತ ಸಂಪರ್ಕ ಅಸಾಧ್ಯವಾದ– ಜಾಗದಲ್ಲಿ ಕುಳಿತು ಕೇವಲ ತಮ್ಮ ಮಾತೃಭಾಷೆಯ ಪ್ರೀತಿಗಾಗಿ, 'ಎಂದೆಂದಿಗೂ ಕನ್ನಡವಾಗಿರುವ' ಹಠದಲ್ಲಿ ರಚಿಸಿದ ಈ ಕತೆಗಳು ಕನ್ನಡ ಕಥಾಸಾಹಿತ್ಯಕ್ಕೆ ಕಡಲಾಚೆಯ ಕನ್ನಡಿಗರಿತ್ತ ಅಪೂರ್ವ ಕೊಡುಗೆಯಾಗಿವೆ...'

**–ಯಶವಂತ ಚಿತ್ತಾಲ** (ಬೆನ್ನುಡಿಯಿಂದ)

*

## 10. ಕುವೆಂಪು ಸಾಹಿತ್ಯ ಸಮೀಕ್ಷೆ (2004)

**ಪ್ರಕಾಶನ : ಕನ್ನಡ ಸಾಹಿತ್ಯ ರಂಗ, ಯು.ಎಸ್.ಎ. ಹಾಗೂ ವಸಂತ ಪ್ರಕಾಶನ, ಬೆಂಗಳೂರು.**
**ಪ್ರಧಾನ ಸಂಪಾದಕರು: ಆಹಿತಾನಲ**

'...ಅನಿವಾಸಿ ಕನ್ನಡಿಗರ ಈ ಕೊಡುಗೆ ಕುವೆಂಪು ಅವರಿಗೆ ಅರ್ಪಿಸುವ ಒಂದು ದೊಡ್ಡ ನಮನ. ಕರ್ನಾಟಕದ ಸಮಕಾಲೀನ ಲೇಖಕರ ಮಟ್ಟಕ್ಕೇನೂ ಕಮ್ಮಿಯಿಲ್ಲದ ಲೇಖನಗಳು ಇಲ್ಲಿ ಹೊರಬಂದಿವೆ ಎನ್ನಲು ಹೆಮ್ಮೆಯಾಗುತ್ತದೆ.'

**–ಪ್ರಭುಶಂಕರ**

* * *




17/18-2, ಮೊದಲನೆಯ ಮುಖ್ಯರಸ್ತೆ, ಮಾರೇನಹಳ್ಳಿ, ವಿಜಯನಗರ. ಬೆಂಗಳೂರು-40 ದೂ. 9448804905,6366802919

## ನಮ್ಮ ಕೆಲವು ಪ್ರಕಟಣೆಗಳು

| | |
|---|---|
| ಪ್ರತಿಭೆಪರಿಶ್ರಮ ಮತ್ತು ಪರಿಣತಿ(ಹತ್ತು ಐಎಎಸ್ ಅಧಿಕಾರಿಗಳ ಜೀವನಕಥನ)–ವೈಜಿಮುರಳೀಧರ | 250/– |
| ಹಾಲಾಡಿಯಲ್ಲಿ ಹಾರುವ ಓತಿ–ಪ್ರಬಂಧಗಳು–ಶಶಿಧರ ಹಾಲಾಡಿ | 150/– |
| ನೆನಪು ಏಕತಾರಿ–ವ್ಯಕ್ತಿಚಿತ್ರಗಳು–ವೈದೇಹಿ | 500/– |
| ರಾಪದಿಬ್ಬ(ಮಕ್ಕಳಿಗಾಗಿ) ನಾಗರಾಜ ಹುಡೇದ | 25/– |
| ಸಾತಪ್ಪಟೋಪಣ್ಣವರ(ಚಲೆಜಾವ್ ಚಳವಳಿಯಲ್ಲಿಪ್ರಾಣಾರ್ಪಣೆಮಾಡಿದಮೊದಲಕನ್ನಡಿಗ)–ರಾಜಶೇಖರಬಿರಾದಾರ | 50/– |
| ಕಾಮನಬಿಲ್ಲು(ಮಕ್ಕಳಿಗಾಗಿ)–ಅಕ್ಷಯ ನಾಗ್ರೇಶಿ | 25/– |
| ಅಶೋಕನಮಸ್ಕಿಶಾಸನ(ಮಕ್ಕಳಿಗಾಗಿ–ಗುಂಡೂರಾವ್ ದೇಸಾಯಿ | 25/– |
| ಹರದ್ವಾರ ಅಂಗಡಿ(ಮಕ್ಕಳಿಗಾಗಿ)– ಅನು: ಆನಂದ ಪಾಟೀಲ | 25/– |
| ಶತಮಾನದ ಕನ್ನಡ ಸಾಹಿತ್ಯಭಾಗ1–ಸಂಜಿ.ಎಚ್.ನಾಯಕ | 650/– |
| ಶತಮಾನದ ಕನ್ನಡ ಸಾಹಿತ್ಯಭಾಗ2–ಸಂಜಿ.ಎಚ್.ನಾಯಕ | 650/– |
| ಮಕ್ಕಳೇ ದೇವರು(ಎನ್ ಆರ್ ನಾಯಕರ ಮಕ್ಕಳ ಪದ್ಯಗಳು) ಸಂ. ಆನಂದಪಾಟೀಲ | 50/– |
| ಮೈಯೇ ಸೂರು ಮನವೇ ಮಾತು–ಬಸವರಾಜ ಕಲ್ಗುಡಿ | 400/– |
| ಅನುಸಂಧಾನ– ನರಹಳ್ಳಿಬಾಲಸುಬ್ರಹ್ಮಣ್ಯ | 100/– |
| ಹಸುರಿನಕಟ್ಟೆ–ತಮ್ಮಣ್ಣಬೀಗಾರ | 75/– |
| ಅಪರೂಪದ ಮಕ್ಕಳಕವಿ ಎನ್. ಶ್ರೀನಿವಾಸ ಉಡುಪ– ಆನಂದ ಪಾಟೀಲ | 100/– |
| ಅವಳಿ(ಮಕ್ಕಳ ಕಾದಂಬರಿ) ಅನು: ಶಿವಲಿಂಗಪ್ಪ ಹಂದಿಹಾಳು | 100/– |
| ಕನಾಟಕದ ಇತಿಹಾಸ–ಬಾ.ರಾ.ಗೋಪಾಲ್ | 500/– |
| ಹಾಲಕ್ಕಿಹಾಡುಕೋಗಿಲೆ ಸುಕ್ರಿಬೊಮ್ಮಗೌಡ–ಅಕ್ಷತಾ ಕೃಷ್ಣಮೂರ್ತಿ | 50/– |
| ಅರ್ಪಣ ದೃಷ್ಟಿ–ಅನಿಲ್ ಗೋಕಾಕ್ | 75/– |
| ನಿಜತಿಲಕ(ಎಚ್ ಆರ್ ತಿಮ್ಮೇಗೌಡ ಅಭಿನಂದನೆ) ಸಂ. | 1000/ |
| ಆಡಳಿತದಲ್ಲಿ ನೈತಿಕತೆ– ವೈ ಜಿ ಮುರಳೀಧರನ್ | 150/– |
| ಹಲ್ಮಿಡಿ ಶಾಸನ ಸಮಗ್ರಅಧ್ಯಯನ–ಸಂ:ಷ.ಶೆಟ್ಟರ್ | 250/– |
| ಅಪ್ರಮೇಯ(ಕವನಸಂಕಲನ) ಕೆ. ವಿ. ತಿರುಮಲೇಶ್ | 300/– |
| ಚೆಕ್‌ಮೆಟ್– ಅನುವಾದಿತ ಮಕ್ಕಳ ಕಾದಂಬರಿ – ಅನು: ಅರವಿಂದ ಪಟೇಲ್ ಮೂಲ: ರಾಮೇಂದ್ರಕುಮಾರ್ | 150/– |
| ಪುನರ್ನವ–ಕಾದಂಬರಿ–ಸಿ. ಪಿ. ರವಿಕುಮಾರ್ | 500/– |
| ನಿರಂತರ–ಕಾದಂಬರಿ–ಟಿ. ಎಸ್. ರಮಾನಂದ | 350/– |
| ಜನವಾಣಿ–ಜೀಯು ಭಟ್ ಅಂಕಣ ಬರಹ–ಸಂ. ಕೃಷ್ಣಮೂರ್ತಿ ಹೆಬ್ಬಾರ | 200/– |
| ಸಾಹಿತ್ಯಮತ್ತುವಾಗ್ವಾದಗಳು–ರಹಮತ್ ತರೀಕೆರೆ | 250/– |
| ರಾಶೊಮಾನ್ ಅಕ್‌ತಗವ ಕಥೆಗಳು ಅನು: ಕೆ. ಪುಟ್ಟಸ್ವಾಮಿ | 200/– |
| ಕೋಲ್ಜೇನು–ಮಕ್ಕಳಅನುಭವಲೋಕ–ತಮ್ಮಣ್ಣ ಬೀಗಾರ | 100/– |
| ನೇಪಥ್ಯದ ನಿಲುವುಗನ್ನಡಿ(ಕವನ ಸಂಕಲನ) ವಸುಂಧರ ಕೆ. ಎಮ್. | 100/– |
| ಯಕ್ಷಕವಿಕೆಂಪಣ್ಣಗೌಡ(ಸಮಗ್ರಸಾಹಿತ್ಯಶೋಧ)ನರಹಳ್ಳಿ ಬಾಲಸುಬ್ರಹ್ಮಣ್ಯ | 100/– |
| ನಾನು ಪಯಣಿಗ(ವಿ.ಕೃ.ಗೋಕಾಕರ ಕೆಲವು ಕವಿತೆಗಳು)ಸಂ.ನರಹಳ್ಳಿಬಾಲಸುಬ್ರಹ್ಮಣ್ಯ,ಪಿ.ಚಂದ್ರಿಕಾ | 100/– |
| ಮಗಳು ಹೋಗಿದ್ದಾಳೆ ಶಾಲೆಗೆ(ಕವನ)ಸುಕನ್ಯಾಕಳಸ | 75/– |
| ಕನ್ನಡ ಭಾಷೆ:ರಚನೆ ಮತ್ತು ಬಳಕೆ–ಕೆ. ಪಿ. ಭಟ್ | 200/– |
| ಗೋಕಾಕರನಾಟಕಗಳು–ವಿ.ಕೃ.ಗೋಕಾಕ್ | 350/– |
| ಸಾಹಿತ್ಯಮತ್ತುಸಿದ್ಧಾಂತಗಳು–ರಾಜೇಂದ್ರಚೆನ್ನಿ | 100/– |
| ಮಲ್ಲಿಗೆ ಹುಡುಗ(ಮಕ್ಕಕಥನ ಕವನ) ಆನಂದ ಪಾಟೀಲ | 25/– |
| ಎದ್ದುನಿಂತ ಬಾಲ(ಮಕ್ಕಳಿಗಾಗಿ ಮೋಜಿನ ಕತೆ) ಆನಂದ ಪಾಟೀಲ | 25/– |
| ಸ್ಟ್ರೈಕು ಟ್ರಕ್ಕು ಹುಡಗೂರು(ಮಕ್ಕಳ ಕಥನ ಕವನ) ಅನಂದ ಪಾಟೀಲ | 25/– |
| ವಿನ್ನಿ ಪೂಹಾ (ಮಕ್ಕಳ ಅಪರೂಪದ್ದೊಂದು ಲೋಕ) ಅನು: ಆನಂದ ಪಾಟೀಲ | 75/– |
| ನನ್ನ ಪ್ರಿಯವು ಈ ಪುಟ್ಟರ ಹಾಡುಗಳು (ಮಕ್ಕಳ ಕವಿತೆಗಳು) ಅನು: ಆನಂದ ಪಾಟೀಲ | 75/– |
| ಅರಿವಿನ ಬಂಡಾಯ–ಕೈದೀವಿಗೆಯ ಬೆಳಕು–ನರಹಳ್ಳಿ ಬಾಲಸುಬ್ರಹ್ಮಣ್ಯ | 200/– |
| ಹೀಗಿದ್ದರು ಪ್ರಭುಶಂಕರ(ನೆನಪಿನ ಹೊತ್ತಿಗೆ)–ಸಂ.ನ.ರವಿಕುಮಾರ,ಅಸಿತಾ ಪ್ರಭುಶಂಕರ | 500/– |
| ಆದಿಕಾವ್ಯ1–ಚಿಕ್ಕಣಿ ರಾಜ(ಮಕ್ಕಳ ಕವನಸಂಕಲನ)–ಕೆ.ವಿ.ತಿರುಮಲೇಶ್ | 100/– |
| ಆದಿಕಾವ್ಯ2–ಒಡೋ ಪುಟ್ಟ ಒಡೋ(ಮಕ್ಕಳ ಕವನ ಸಂಕಲನ)–ಕೆ.ವಿ.ತಿರುಮಲೇಶ್ | 100/– |
| ಆದಿಕಾವ್ಯ3–ಬೀಸಿದರೆ ಉದುರಬೇಕು(ಮಕ್ಕಳಕವನಸಂಕಲನ)–ಕೆ.ವಿ.ತಿರುಮಲೇಶ್ | 150/– |
| ಆದಿಕಾವ್ಯ4–ನಂಬಿಕೆಟ್ಟವರಿಲ್ಲ ಪುಟ್ಟನ(ಮಕ್ಕಳಕವನಸಂಕಲನ)–ಕೆ.ವಿ.ತಿರುಮಲೇಶ್ | 150/– |
| ಆದಿಕಾವ್ಯ5–ನಾನಿದ್ದೀನಲ್ಲ ಅಂತಾನ್ ಪುಟ್ಟ(ಮಕ್ಕಳ ಕವನಸಂಕಲನ)–ಕೆ.ವಿ.ತಿರುಮಲೇಶ್ | 150/– |
| ಆದಿಕಾವ್ಯ6–ನೆನೆ ಪುಟ್ಟ ನೆನೆ(ಮಕ್ಕಳಕವನಸಂಕಲನ)–ಕೆ.ವಿ.ತಿರುಮಲೇಶ್ | 150/– |
| ಆದಿಕಾವ್ಯ7–ಅಟ್ಟದಲ್ಲೇನಿದೆಯೊ ಪುಟ್ಟನಿಗೇ ಗೊತ್ತು(ಮಕ್ಕಳ ಕವನ ಸಂಕಲನ)–ಕೆ.ವಿ.ತಿರುಮಲೇಶ್ | 150/– |
| ಆದಿಕಾವ್ಯ8–ಇಂತಪ್ಪ ಪುಟ್ಟ ಈಗೆಲ್ಲ ಪುಟ್ಟ(ಮಕ್ಕಳಕವನಸಂಕಲನ)–ಕೆ.ವಿ.ತಿರುಮಲೇಶ್ | 150/– |

| | | |
|---|---|---|
| ಆದಿಕಾವ್ಯ 9–ಮೆಟ್ರೋದಲ್ಲಿ ಇಲಿ(ಮಕ್ಕಳ ಕವನ ಸಂಕಲನ) – ಕೆ ವಿ ತಿರುಮಲೇಶ್ | | 150/– |
| ಆದಿಕಾವ್ಯ 10 ಓ ಲಲಾ(ಮಕ್ಕಳ ಕವನ ಸಂಕಲನ) – ಕೆ ವಿ ತಿರುಮಲೇಶ್ | | 150/– |
| ಶೈಶವ(ಧರೆಯ ಮೇಲಣ ತರೆಗಳು) ಮೂಲ:ಎಮಿಲಿ ರಾಲ್ಫ್ ಗ್ರೋಶೋಲ್ಸ್ ಅನು: ಮೈ. ಶ್ರೀ ನಟರಾಜ | | 100/– |
| ಮಣ್ಣೆ(ಪರಿಚಯಾತ್ಮಕ ಅಧ್ಯಯನ)– ಎಚ್. ಎಸ್. ಗೋಪಾಲರಾವ್ | | 250/– |
| ಅವಧ(ಸಾಹಿತ್ಯ ಅಕಾಡೆಮಿ ಪ್ರಶಸ್ತಿಪುರಸ್ಕೃತ ಕವನ ಸಂಕಲನ) –ಕೆ.ವಿ. ತಿರುಮಲೇಶ್ | | 250/– |
| ಪಶ್ಚಿಮಾಯನ(ವಸಾಹತು ಹಿಸ್ಟರಿ ಮತ್ತು ಕನ್ನಡ ಜಗತ್ತು) –ರಾಜಾರಾಮ ಹೆಗಡೆ | | 250/– |
| ನನ್ನ ಡ್ರೈವಿಂಗ್ ಡೈರಿ– ರಾಜೇಶ್ವರಿ ತೇಜಸ್ವಿ | | 150/– |
| ನನ್ನ ಕಾದಂಬರಿ ಮೀಮಾಂಸೆ– ವಿ.ಕೃ.ಗೋಕಾಕ್ | | 75/– |
| ಆಧುನಿಕೋತ್ತರವಾದ– ರಾಜೇಂದ್ರ ಚೆನ್ನಿ | | 100/– |
| ಎಸಳು(ಗೋಕಾಕರ ಮುನ್ನುಡಿಗಳು) –ಸಂ.ದೇವು ಪತ್ತಾರ | | 250/– |
| ಉರಿ ಚಮ್ಮಾಳಿಗೆ ಭಾರತದ ದಲಿತ ಚಳವಳಿಯ ಅಧ್ಯಯನ– ಡಿ. ಆರ್. ನಾಗರಾಜ್ – ಅನು: ಎಂ ಎಸ್ ಆಶಾದೇವಿ | | 100/– |
| ನೆನಪಿನ ರಂಗಸ್ಥಳ (ಕೆರೆಮನೆ ಶಿವರಾಮ ಹೆಗಡೆ ಆತ್ಮಕಥನ) ನಿ: ಜಿ. ಎಸ್. ಭಟ್ ಸಾಗರ | | 200/– |
| ತೌಲನಿಕಅಧ್ಯಯನ(ತಾತ್ವಿಕಮತ್ತುಅನ್ವಯಿಕತೆ) | ಸಿ. ಎನ್. ರಾಮಚಂದ್ರನ್ | 100/– |
| ಯಕ್ಷಗಾನಲೀಲಾವಳಿ(ಲೀಲಾವತಿಬೈಪಾಡಿತ್ತಾಯಆತ್ಮಕಥನ) | ನಿರೂಪಣೆ: ವಿದ್ಯಾರಶ್ಮಿ ಪೆಲತ್ತಡ್ಕ | 150/– |
| ಯುದ್ಧ ಮತ್ತು ಶಾಂತಿ– ಒಂದು ಪುಟ್ಟ ಕೈಪಿಡಿ | ಓ. ಎಲ್. ನಾಗಭೂಷಣಸ್ವಾಮಿ | 50/– |
| ಪ್ರಜ್ಞಾಪ್ರವಾಹ ತಂತ್ರ | ಓ. ಎಲ್. ನಾಗಭೂಷಣಸ್ವಾಮಿ | 75/– |
| ಸಮನ್ವಯ(ಭಾರತೀಯಪರಂಪರೆಒಂದುಪ್ರವೇಶ) | ಸಂ.ನರಹಳ್ಳಿಬಾಲಸುಬ್ರಹ್ಮಣ್ಯ | 400/– |
| ಭಾರತೀಯ ಪುರುಷಾರ್ಥ ಚಿಂತನೆ | ಮೂಲ: ಎಂ. ಹಿರಿಯಣ್ಣ ಅನು: ಸ್ವಾಮಿ ಅಚಲಾನಂದ | 500/– |
| ಬಾಳು –ಸಾವು ಒಡ್ಡುತ್ತಿರುವ ಆಮಿಷ!(ಉಪನಿಷತ್ತಿಗೊಂದು ಮರುಪ್ರವೇಶ) | ಲಕ್ಷ್ಮೀಶ ತೋಳ್ಪಾಡಿ | 75/– |
| ನವಿಲುಗರಿ ಮರಿ ಹಾಕಿದೆ(ಪ್ರಬಂಧಗಳು) | ವಿನಾಯಕ ಅರಳಸುರಳಿ | 100/– |
| ಸೆಪ್ಟೆಂಬರ್ 5(ಡಾ.ಸರ್ವೆಪಲ್ಲಿರಾಧಾಕೃಷ್ಣನ್‌ಜೀವನಚರಿತ್ರೆ) | ಡಾ.ಶೀಲಾಕಾಂತಪತ್ತಾರ | 100/– |
| ನೆಲ ಸಂಸ್ಕೃತಿ(ಸಾಹಿತ್ಯವಿಮರ್ಶೆ) | ನರಹಳ್ಳಿಬಾಲಸುಬ್ರಹ್ಮಣ್ಯ | 300/– |
| ದಿ ರೇಲ್ವೆ ಚಿಲ್ಡ್ರನ್(ಮಕ್ಕಳಕಾದಂಬರಿ) | ಡಾ. ಅರವಿಂದ ಪಟೇಲ್ | 200/– |
| ಹುಲಿ ಸೀರೆ(ಕವನಗಳು) | ಕೆ.ವೈ.ನಾರಾಯಣಸ್ವಾಮಿ | 150/– |
| ದೇಸಾಯಿಕಥನ(ಶಾಂತಿನಾಥದೇಸಾಯಿಸಮಗ್ರಸಾಹಿತ್ಯಅಧ್ಯಯನ) | ಟಿ.ಪಿ.ಅಶೋಕ | 125/– |
| ಅಕ್ಷರಲೋಕದಅಂಚಿನಲ್ಲಿ(ಮರೆತಮಾತುಮರೆಯಾಗದನೆನಪು) | ಕೆ.ವಿ.ತಿತುಮಲೇಶ್ | 500/– |
| ಸೂತ್ರದಗೊಂಬೆಮತ್ತುನೀಲಕಿನ್ನರಿ(ಪಿನಾಕಿಯೊ) | ಅನು: ರಜನಿ ನರಹಳ್ಳಿ | 150/– |
| ಸ್ಥಪತಿ(ರೂವಾರಿಗಳಜತೆಪಯಣ) | ಷ.ಶೆಟ್ಟರ್ /ಅನು:ಶಾಂತಿನಾಥದಿಬ್ಬದ | 400/– |
| ಸ್ವಾಯತ್ತಪ್ರಜ್ಞೆ(ಸಮಕಾಲೀನಸಮಾಜಕ್ಕೊಂದುಸಾಹಿತ್ಯಕಸ್ಪಂದನೆ) | ನರಹಳ್ಳಿಬಾಲಸುಬ್ರಹ್ಮಣ್ಯ | 200/– |
| ಪಥ್ಯದಭವಾವಳಿ(ಸಾಹಿತ್ಯ–ಸಂಸ್ಕೃತಿ:ಸಮಕಾಲೀನಪ್ರತಿಸ್ಪಂದನೆ) | ವಿಕ್ರಮ ವಿಸಾಜಿ | 500/– |
| ಸಣ್ಣಬೆಂಕಿ(ಕವಿತೆಗಳು) | ನಾಗರಾಜಹೆಗಡೆಅಪಗಾಲ | 150/– |
| ಮುಸುಗು(ಕಾದಂಬರಿ) | ಕೆ.ವಿ.ತಿರುಮಲೇಶ್ | 250/– |
| ಬಿಟ್ಟಸ್ಥಳ (ಕಥಾಸಂಕಲನ) | ಪ್ರಜ್ಞಾಮತ್ತಿಹಳ್ಳಿ | 200/– |
| ಮೊಕಾಶಿಕಥನ(ಶಂಕರಮೊಕಾಶಿಪುಣೇಕರಸಮಗ್ರಸಾಹಿತ್ಯಅಧ್ಯಯನ) | ಟಿ.ಪಿ.ಅಶೋಕ | 100/– |
| ಅಮರೊ(ಮಕ್ಕಳಿಗಾಗಿಕಾದಂಬರಿ)ಮೂಲ:ಸುಕೀರ್ತಿಭಟ್ನಾಗರ್ | ಅನು: ಯಲ್ಲಪ್ಪಹಂದ್ರಾಳ | 150/– |
| ಪದಸೋಪಾನ(ವರ್ತಮಾನದತಲ್ಲಣನಿರಂತರಧ್ಯಾನ) | ನರಹಳ್ಳಿಬಾಲಸುಬ್ರಹ್ಮಣ್ಯ | 400/– |
| ನನ್ನೊಳಗಿನ ಅಪ್ಪ(ಆತ್ಮಕತೆ) | ಆತ್ಮಾನಂದ | 175/– |
| ಬೆಳದಿಂಗಳು(ಮಕ್ಕಳಕಾದಂಬರಿ) | ಆನಂದ ಪಾಟೀಲ | 50/– |
| ಡಂಡಂಊರಿಗೆಡಿಂಡಿಂಗಾಡಿ(ಮಕ್ಕಳಕಾದಂಬರಿ) | ಆನಂದ ಪಾಟೀಲ | 50/– |
| ಪುಟ್ಟಾರಿಆನೆಪುಟ್‌ಪುಟ್!(ಮಕ್ಕಳಿಗಾಗಿಕಾದಂಬರಿ) | ಆನಂದ ಪಾಟೀಲ | 500/– |
| ವೈಷ್ಣವದಿಂದಶ್ರೀವೈಷ್ಣವಕ್ಕೆ(ಪೂರ್ವ–ರಾಮಾನುಜಯುಗದಲ್ಲಿಕರ್ನಾಟಕದಶ್ರೀವೈಷ್ಣವಅಗ್ರಹಾರಗಳು) | ಷ.ಶೆಟ್ಟರ್ | 100/– |
| ಕಪ್ಪೆಅರಭಟ್ಟನಶಾಸನ(ಸಮಗ್ರಅಧ್ಯಯನ) | ಷ.ಶೆಟ್ಟರ್ | 150/– |
| ನಾಟ್ಯಶಾಸ್ತ್ರಪರಂಪರೆಮತ್ತುಪ್ರಾಸಂಗಿಕತೆ(ಹಿಂಮೂಲ:ರಾಧಾವಲ್ಲಭತ್ರಿಪಾಟಿ) | ಅನು:ಅತ್ತಿಮುರುಡುವಿಶ್ವೇಶ್ವರ | 75/– |
| ಎಪಿಕ್‌ರಂಗಭೂಮಿ(ಬರ್ಟೋಲ್ಟ್‌ಬ್ರೆಖ್ಟ್‌ಮತ್ತುಆತನನಾಟಕ,ರಂಗಭೂಮಿಮತ್ತುಸಿದ್ಧಾಂತಗಳಪರಿಚಯ) | ಅಕ್ಷರಕೆ.ವಿ. | 100/– |
| ಹಗಲಲ್ಲಿತೊಗಲಬಾವುಲಿ(ಕತೆಗಳು) | ವಿ.ಕೃ.ಗೋಕಾಕ್ | 75/– |
| ಹಣತೆಯಹಾಡು(ಜಿ.ಎಸ್.ಶಿವರುದ್ರಪ್ಪನವಸಮಸ್ತಸಾಹಿತ್ಯಶೋಧ) | ನರಹಳ್ಳಿಬಾಲಸುಬ್ರಹ್ಮಣ್ಯ | 250/– |
| ಆರೋಹಣ(ಮಕ್ಕಳಿಗಾಗಿವೈಜ್ಞಾನಿಕಕಾದಂಬರಿ) | ಹ.ಶಿ.ಭೈರನಹಟ್ಟಿ | 75/– |
| ಕೆಂಪುಮುಡಿಯಹೆಣ್ಣು(ಒರ್ಹಾನ್‌ಪಮುಕ್‌ಕಾದಂಬರಿ) | ಅನು:ಓ.ಎಲ್.ನಾಗಭೂಷಣಸ್ವಾಮಿ | 250/– |
| ಮುದ್ದುರಾಮನಅರಿವು(999ಚೌಪದಿಗಳಸಂಕಲನ) | ಕೆ.ಸಿ.ಶಿವಪ್ಪ | 200/– |
| ಮುದ್ದುರಾಮನನಲಿವು(900ಚೌಪದಿಗಳಸಂಕಲನ) | ಕೆ.ಸಿ.ಶಿವಪ್ಪ | 200/– |
| ಕುಮಾರವ್ಯಾಸಕಥಾಂತರ(ಕರ್ಣಪರ್ವ,ಶಲ್ಯಪರ್ವ,ಗದಾಪರ್ವ) | ಎಚ್.ಎಸ್.ವೆಂಕಟೇಶಮೂರ್ತಿ | 400/– |
| ಬಾಡಿಗೆಮನೆಗಳರಾಜಚರಿತ್ರೆ(ಆತ್ಮವೃತ್ತಾಂತದನಾಲ್ಕನೇಭಾಗ) | ಕೆ.ಸತ್ಯನಾರಾಯಣ | 350/– |
| ಸ್ವಯಂದೀಪಕತೆ(ಅಡಿಗರವ್ಯಕ್ತಿತ್ವಮತ್ತುಕಾವ್ಯ) | ಎಸ್.ದಿವಾಕರ್ | 50/– |

| | | |
|---|---|---|
| ಸಿಂದಾಬಾದನ ಆತ್ಮಕಥೆ(ಕವನ ಸಂಕಲನ) | ಎಚ್.ಎಸ್.ವೆಂಕಟೇಶಮೂರ್ತಿ | 50/- |
| ಹರಿಗೋಲು(ಕವನಸಂಕಲನ) | ಎಚ್.ಎಸ್.ವೆಂಕಟೇಶಮೂರ್ತಿ | 75/- |
| ಕೃಷ್ಣಕಥನ(ಶ್ರೀಕೃಷ್ಣಆಲನಹಳ್ಳಿಸಮಗ್ರಸಾಹಿತ್ಯಅಧ್ಯಯನ) | ಟಿ.ಪಿ.ಅಶೋಕ | 80/- |
| ದೇವನೂರುಕಥನ(ದೇವನೂರುಮಹಾದೇವಸಮಗ್ರಸಾಹಿತ್ಯಅಧ್ಯಯನ) | ಟಿ.ಪಿ.ಅಶೋಕ | 75/- |
| ನ್ಯಾಯನಿಷ್ಠುರಿಗಳಜತೆಯಲ್ಲಿ(15ಮಾತುಕತೆಗಳು) | ರಹಮತ್‌ತರೀಕೆರೆ | 300/- |
| ಶಾಸನಅಧ್ಯಯನ(ಕೆಲಹೆಜ್ಜೆಗುರುತುಗಳು) | ಎಚ್.ಎಸ್.ಗೋಪಾಲರಾವ್ | 250/- |
| ಮೃಗಶಿರ(ಕಾದಂಬರಿ) | ಶ್ರೀಧರಬಳಗಾರ | 150/- |
| ಕಾಲಉರುಳಿಉಳಿದುದು ನೆನಪಷ್ಟೇ! | ನಾಗಐತಾಳ(ಆಹಿತಾನಲ) | 250/-* |
| ಅಸ್ಮಿತೆ(ಕತೆಗಳು) | ಕೃಷ್ಣಮೂರ್ತಿಚಂದರ್ | 150/- |
| ವಿಸರ್ಜನೆ(ಕವನ ಸಂಕಲನ) | ಅರವಿಂದ | 125/- |
| ದ್ಯಾವಾಪೃಥಿವೀ (ಕವನಸಂಕಲನ) | ವಿ.ಕೃ.ಗೋಕಾಕ್ | 75/- |
| ಸಿಗ್ಮಂಡ್‌ಫ್ರಾಯ್ಡ್(ಜೀವನಮತ್ತುಸಿದ್ಧಾಂತಗಳು) | ಎಂ.ಬಸವಣ್ಣ | 150/- |
| ಸಮುದ್ರದೀಚೆಯಿಂದ(ಪ್ರವಾಸಕಥನ) | ವಿ.ಕೃ.ಗೋಕಾಕ್ | 100/- |
| ಆನೆಕಥೆ | ನಾಗರಾಜ್‌ನವೀಮನೆ | 50/-* |
| ಯಕ್ಷಗಾನಜ್ವಾಲಾಪ್ರತಾಪ | ಹೊಸ್ತೋಟಮಂಜುನಾಥಭಾಗವತ | 50/-* |
| ಯಕ್ಷಗಾನಲೀಲಾವತಿಪರಿಣಯ | ಮೂಲಕತೆ:ಮಹಾದೇವಯಂಕಹಳ್ಳೀರ್<br>ಯಕ್ಷರೂಪ:ಹೊ.ಮಂಜುನಾಥಭಾಗವತ | 50/-* |
| ಬಾಕುವೆಂಪುದರ್ಶನಕೆ(ಕುವೆಂಪುಸಮಸ್ತಸಾಹಿತ್ಯಶೋಧ) | ನರಹಳ್ಳಿಬಾಲಸುಬ್ರಹ್ಮಣ್ಯ | 750/- |
| ಮೋದಾಳಿ (ನಾಟಕ) | ಪಿ.ಚಂದ್ರಿಕಾ | 75/- |
| ಆನಂದಾವಲೋಕನ(ಮಕ್ಕಳಸಾಹಿತ್ಯಕೆಲನುಡಿಚಿತ್ರಗಳು) | ಸಂ:ಕೆ.ಶಿವಲಿಂಗಪ್ಪಹಂದಿಹಾಳು | 375/- |
| ಸುತ್ತುವಗ್ರಹಗಳಿಂದಚಲಿಸುವವಿಗ್ರಹಗಳವರೆಗೆ(ವಿಜ್ಞಾನ-ಸಾಹಿತ್ಯಅಂತರ್‌ಶಿಸ್ತೀಯತೆ) | ಸಂ.ನರಹಳ್ಳಿಬಲಸುಬ್ರಹ್ಮಣ್ಯ | 200/-* |
| ಮಾತುತಲೆಎತ್ತಿದಬಗೆ(ಭಾರತೀಯಸಮಾಜಕ್ಕೆಪ್ರತಿಸ್ಪಂದನೆ) | ಸಂ:ನ.ರವಿಕುಮಾರ | 125/-* |
| ನನ್ನದೊಂದುಕನಸಿದೆ(ಮಾತುಗಳಲ್ಲಿಮಿಡಿದಮಾನವೀಯತೆವಿಶ್ವಾತ್ಮಕನೋಟ) | ಸಂ:ನ.ರವಿಕುಮಾರ | 75/-* |
| ಹೊ.ಮಂಜುನಾಥಭಾಗವತರಚಿತ್ರಪಟರಾಮಾಯಣ | ಸಂ:ಪೃಥ್ವಿರಾಜಕವತ್ತಾರು | 100/-* |
| ಕಲೆಯ ನೆಲೆ | ವಿ.ಕೃ.ಗೋಕಾಕ್ | 75/- |
| ಸೌಂದರ್ಯಮೀಮಾಂಸೆ | ವಿ.ಕೃ.ಗೋಕಾಕ್ | 75/- |
| ಸಾಹಿತ್ಯದಲ್ಲಿಪ್ರಗತಿ | ವಿ.ಕೃ.ಗೋಕಾಕ್ | 100/-* |
| ಲೈಂಗಿಕಜಾತಕ(ಕಾದಂಬರಿ) | ಕೆ.ಸತ್ಯನಾರಾಯಣ | 150/- |
| ಮಹಾಸತಿಆಚರಣೆ(ಒಂದುಅಧ್ಯಯನ) | ಬಸವರಾಜಕಲ್ಗುಡಿ | 500/- |
| ಮುಗ್ಧ-ಪ್ರಬುದ್ಧ(ಕಾದಂಬರಿಓದುವಾಗ,ಬರೆಯುವಾಗನಮಗೇನಾಗುತ್ತದೆ) | ಮೂಲ:ಒರ್ಹಾನ್‌ಪಮುಕ್,<br>ಅನು:ಓ.ಎಲ್.ನಾಗಭೂಷಣಸ್ವಾಮಿ | 150/- |
| ಹಿತ್ತಲಜಗತ್ತು(ಲಲಿತಪ್ರಬಂಧಗಳು) | ರಹಮತ್‌ತರೀಕೆರೆ | 200/- |
| ನವ್ಯತೆ | ವಿ.ಕೃ.ಗೋಕಾಕ್ | 175/-* |
| ಸಮುದ್ರದಾಚೆಯಿಂದ(ಪ್ರವಾಸಕಥನ) | ವಿ.ಕೃ.ಗೋಕಾಕ್ | 200/- |
| ಜನ್ನನಯಶೋಧರಚರಿತೆ(ತಿಳಿಗನ್ನಡಅವತರಣ) | ಎಚ್.ಎಸ್.ವೆಂಕಟೇಶಮೂರ್ತಿ | 150/- |
| ಅವ್ಯಯಕಾವ್ಯ | ಕೆ.ವಿ.ತಿರುಮಲೇಶ್ | 275/-* |
| ಕುವೆಂಪುದರ್ಶನಮೀಮಾಂಸೆ | ನರಹಳ್ಳಿಬಾಲಸುಬ್ರಹ್ಮಣ್ಯ | 100/- |
| ಇಹದಪರಿಮಳದಹಾದಿ(ಕೆ.ಎಸ್.ನ.ಜೀವನಮತ್ತುಸಾಹಿತ್ಯಕುರಿತಮಹಾಪ್ರಬಂಧ) | ನರಹಳ್ಳಿಬಾಲಸುಬ್ರಹ್ಮಣ್ಯ | 300/- |
| ರೂವಾರಿ(ಕನ್ನಡನಾಡಿನವಾಸ್ತು-ಶಿಲ್ಪಿಗಳಚಾರಿತ್ರಿಕಹಿನ್ನೆಲೆ) | ಷ.ಶೆಟ್ಟರ್ | 350/- |
| ಕರಗಿಸುವಕಡಾಯಿ...ಕೋಸುಂಬರಿಕುಕ್ಕೆ(ಪ್ರಬಂಧಗಳು) | ಮೈ.ಶ್ರೀ.ನಟರಾಜ | 350/- |
| ಪ್ರಗತಿಶೀಲತೆ | ಎಚ್.ಎಸ್.ರಾಘವೇಂದ್ರರಾವ್ | 150/- |
| ದೇಹದನಂಟಿನತುದಿಯಪ್ರೇಮದಹೂ | ಪಿ.ಚಂದ್ರಿಕಾ,ಡಿ.ಸಿ.ಗೀತಾ | 20/- |
| ಸಿನಿಮಾಯಾನ(ಕನ್ನಡಚಿತ್ರರಂಗ75:ಒಂದುಫ್ಲಾಷ್‌ಬ್ಯಾಕ್) | ಕೆ.ಪುಟ್ಟಸ್ವಾಮಿ | 375/- |
| ಮರುಕಳಿಸಿದಮಾರ್ದವತೆ(ಎಂ.ಗೋಪಾಲಕೃಷ್ಣಅಡಿಗ-ಕೆಲವುಸಂವೇದನೆಗಳು) | ಕೆ.ಸತ್ಯನಾರಾಯಣ | 50/-* |
| ಕರ್ನಾಟಕ-ಬಹುತ್ವದಆಯಾಮಗಳು | ಷ.ಶೆಟ್ಟರ್ | 75/- |
| ಅನುರೂಪ(ಲೇಖನಗಳು) | ಶ್ರೀಧರಹೆಗಡೆಭದ್ರನ್ | 200/- |
| ಸಾಹಿತ್ಯಚಳುವಳಿಗಳು(ಆಯ್ದಲೇಖನಗಳು) | ಸಂ:ಶ್ರೀಧರಹೆಗಡೆಭದ್ರನ್ | 100/- |

| | | |
|---|---|---|
| ದಿಯಂಗ್‌ಸೈಂಟಿಸ್ಟ್(ಮಕ್ಕಳಿಗಾಗಿಕಾದಂಬರಿ) | ಅನು:ಕೆ.ಶಿವಲಿಂಗಪ್ಪಹಂದಿಹಾಳು | 50/–* |
| ಓಡಿಹೋದಹುಡುಗ(ಮಕ್ಕಳಿಗಾಗಿಕಾದಂಬರಿ) | ಬಸು ಬೇವಿನಗಿಡದ | 150/– |
| ವಚನಸೂಕ್ತಿಸಂಚಯ | ಕೆ.ಸಿ.ಶಿವಪ್ಪ | 600/– |
| ಇಂದಿನಕನ್ನಡಕಾವ್ಯದಗೊತ್ತುಗುರಿಗಳು | ವಿ.ಕೃ.ಗೋಕಾಕ | 150/– |
| ಅದರನಂತರ(ಕವಿತೆಗಳು) | ಎಚ್.ಆರ್.ರಮೇಶ | 100/–* |
| ನೀರೊಳಗೆಮಾಯದಜೋಳಿಗೆ(ಕವಿತೆಗಳು) | ರಾಜೇಂದ್ರಪ್ರಸಾದ್ | 100/–* |
| ಮಾತಿಗೆಮುನ್ನ(ಗೋಪಾಲಕೃಷ್ಣಅಡಿಗರಕಾವ್ಯದಸುತ್ತಮುತ್ತ) | ಲಕ್ಷ್ಮೀಶತೋಳ್ಪಾಡಿ | 100/–* |
| ಬೆಟ್ಟಮಹಮದನಬಳಿಗೆಬಾರದಿದ್ದರೆ | ಲಕ್ಷ್ಮೀಶತೋಳ್ಪಾಡಿ | 150/– |
| ಪಾ.ವೆಂ.ಹೇಳಿದಕತೆ | ರವಿಬೆಳಗೆರೆ | 150/– |
| ಆಪ್ತಗೀತೆ(ಭಗವದ್ಗೀತೆಯತಿಳಿಗನ್ನಡಅವತರಣ) | ಎಚ್.ಎಸ್.ವೆಂಕಟೇಶಮೂರ್ತಿ | 275/– |
| ಸ್ಕೂಲುಬಿಡುವಸಮಯ(ಪ್ರಬಂಧಗಳು) | ಕೆ.ಸತ್ಯನಾರಾಯಣ | 250/–* |
| ದಾಸ್ಯದಿಂದಆಚೆಗೆ(ಬೂಕರ್‌ಟಿ.ವಾಸಿಂಗ್ಟನ್‌ಆತ್ಮಕತೆ) | ಕನ್ನಡಕ್ಕೆ:ಕೆ.ಪುಟ್ಟಸ್ವಾಮಿ | 200/–* |
| ಸ್ತ್ರೀವಾದ(ಪದವಿವರಣಕೋಶ) | ಎಚ್.ಎಸ್.ಶ್ರೀಮತಿ | 500/–* |
| ಭಾರತಯಾತ್ರೆ(ಮಹಾಭಾರತಅನುಸಂಧಾನ) | ಲಕ್ಷ್ಮೀಶತೋಳ್ಪಾಡಿ | 200/– |
| ಸಂರಚನಾವಾದ | ಕಿಕ್ಕೇರಿನಾರಾಯಣ | 100/–* |
| ಅನಕೃಮತ್ತುಕನ್ನಡಸಂಸ್ಕೃತಿ | ನರಹಳ್ಳಿಬಾಲಸುಬ್ರಹ್ಮಣ್ಯ | 100/–* |
| ವೈದೇಹಿ(ಜೀವನಮತ್ತುಕೃತಿಗಳಶೋಧ) | ಸಂ:ಮುರಳೀಧರಉಪಾಧ್ಯಹಿರಿಯಡಕ | 500/–* |
| ಸಂಜೀವನ(ಯಕ್ಷಗಾನಗುರುಬನ್ನಂಜೆಸಂಜೀವಸುವರ್ಣರಅಪೂರ್ಣಆತ್ಮಕಥನ) | ನಿರೂಪಣೆ:ಪೃಥ್ವಿರಾಜಕವತ್ತಾರು | 200/–* |
| ಪ್ರಾಕೃತಜಗದ್ವಲಯ(ಪ್ರಾಕೃತ–ಕನ್ನಡ–ಸಂಸ್ಕೃತಭಾಷೆಗಳಅನುಸಂಧಾನ) | ಷ.ಶೆಟ್ಟರ್ | 250/– |
| ಅಪರೂಪದಕತೆಗಳು | ಕೆ.ವಿ.ತಿರುಮಲೇಶ್ | 300/–* |
| ಕುಮಾರವ್ಯಾಸಕಥಾಂತರ(ಉದ್ಯೋಗಪರ್ವ,ಭೀಷ್ಮಪರ್ವ,ದ್ರೋಣಪರ್ವ) | ಎಚ್.ಎಸ್.ವೆಂಕಟೇಶಮೂರ್ತಿ | 300/–* |
| ಕಾವ್ಯಸೃಷ್ಟಿಯಸ್ವರೂಪ | ಪ್ರಭುಶಂಕರ | 50/–* |
| ಐಸಿರಿ(ಸಿರಿಧಾನ್ಯಗಳಕುರಿತಉಪನ್ಯಾಸಗಳಸಂಕ್ಷಿಪ್ತರೂಪ) | ಡಾ.ಖಾದರ್,ನಿರೂಪಣೆ:ಪಿ.ಚಂದ್ರಿಕಾ | 75/– |
| ಚೆಲುವಿನ ನಿಲುವು | ವಿ.ಕೃ.ಗೋಕಾಕ | 100/– |
| ಕವನಗಳಲ್ಲಿಸಂಕೀರ್ಣತೆ | ವಿ.ಕೃ.ಗೋಕಾಕ | 50/–* |
| ಆಂಗ್ಲಸಾಹಿತ್ಯನೀಡಿದಸ್ಫೂರ್ತಿ | ವಿ.ಕೃ.ಗೋಕಾಕ | 35/–* |
| ಎಲ್ಲಕತೆ,ಕಾದಂಬರಿಗಳು(ಸಮಗ್ರ) | ದೇವನೂರಮಹಾದೇವ | 150/– |
| ನೆತ್ತರಸೂತಕ(ಧರ್ಮ,ರಾಜಕಾರಣ,ಸಂಸ್ಕೃತಿ,ಸಾಹಿತ್ಯ) | ರಹಮತ್‌ತರೀಕೆರೆ | 250/– |
| ನಕ್ಷೆ–ನಕ್ಷತ್ರ(ಸಾಹಿತ್ಯ,ಇತಿಹಾಸಮತ್ತುಸಂಸ್ಕೃತಿ) | ಬಸವರಾಜಕಲ್ಗುಡಿ | 200/– |
| ವಾಚನಶಾಲೆ(ಸಾಹಿತ್ಯ,ಸಂಸ್ಕೃತಿ,ವಿಚಾರ) | ಕೆ.ವಿ.ತಿರುಮಲೇಶ್ | 300/– |
| ಜೀವದಾಯಿನಿ(ಪ್ರಬಂಧಗಳು) | ನರಹಳ್ಳಿಬಾಲಸುಬ್ರಹ್ಮಣ್ಯ | 200/–* |
| ಕರ್ನಾಟಕದಲ್ಲಿತುರ್ತುಪರಿಸ್ಥಿತಿ(ಪ್ರಭಾವಮತ್ತುಪರಿಣಾಮಗಳು) | ರಶ್ಮಿ.ಎಸ್. | 500/–* |
| ಆಚಾರ್ಯಸಂಪಾದಕಶ್ರೀನಾರಾಯಣದತ್ತ | ವಿಜಯದತ್ತಶ್ರೀಧರ,ಜಿ.ಭಾಸ್ಕರಮಯ್ಯ | 250/–* |
| ಭಕ್ತಿಯ ನೆಪದಲ್ಲಿ | ಲಕ್ಷ್ಮೀಶತೋಳ್ಪಾಡಿ | 100/– |
| ಬಾವಲಿಗುಹೆ(ಮಕ್ಕಳಿಗಾಗಿಕಾದಂಬರಿ) | ತಮ್ಮಣ್ಣಬೀಗಾರ | 75/– |
| ತೊಟ್ಟಿಲಗೊಂಬೆ(ಮಕ್ಕಳಿಗಾಗಿ ಕಾದಂಬರಿ) | ಮಾದುಪ್ರಸಾದಹುಣಸೂರು | 70/–* |
| ನೆನಪಿನ ಒಣಿಯೊಳಗಮಿನುಗುತಾವದೀಪ(ಜಿ.ಎಸ್.ಎಸ್.ವ್ಯಕ್ತಿ:ಶಕ್ತಿಕೆಲನೋಟಗಳು) | ಸಂ:ನಾಗಐತಾಳ,ನಳಿನಿಮೈಯ | 150/–* |
| ಸ್ಮರಣೆಸಾಲದೆ...(ಕೆಲವುನೆನಪುಗಳು) | ನಾಗಐತಾಳ | 150/–* |
| ಪೂರ್ವಿ(ಮಕ್ಕಳಿಗಾಗಿಕಾದಂಬರಿ) | ಗಣೇಶಪಿ.ನಾಡೋರ | 70/–* |
| ಅಂಶು,ಅನುಮತ್ತುರೋಬೋ(ಮಕ್ಕಳಿಗಾಗಿಕಾದಂಬರಿ) | ಮತ್ತೂರುಸುಬ್ಬಣ್ಣ | 100/– |
| ಸೈಕಲಾಜಿಕಲ್‌ಕಾಂಪ್ಲೆಕ್ಸ್‌ಗಳು(ಮನೋವೈಜ್ಞಾನಿಕವಿವರಣೆ) | ಎಂ.ಬಸವಣ್ಣ | 175/– |
| ವರ್ಧಮಾನ(ಕವಿತೆಗಳು) | ಎಂ.ಗೋಪಾಲಕೃಷ್ಣಅಡಿಗ | 35/– |
| ಬಂದೀತು ಆ ದಿನ (ಪ್ರಬಂಧಗಳು) | ನಳಿನಿ ಮೈಯ | 100/–* |
| ಭಕ್ತಿಯ ಬೆರಗು(ಸಾಹಿತ್ಯದಲ್ಲಿ ಭಕ್ತಿ) | ಸಂ: ಪಿ.ಚಂದ್ರಿಕಾ | 275/– |
| ಸಾವಿನ ದಶಾವತಾರ(ಕಾದಂಬರಿ) | ಕೆ.ಸತ್ಯನಾರಾಯಣ | 150/– |
| ಮಹಾಯುದ್ಧಕ್ಕೆ ಮುನ್ನ...(ಭಗವದ್ಗೀತೆ:ಕೆಲವು ವಿಚಾರಗಳು) | ಲಕ್ಷ್ಮೀಶ ತೋಳ್ಪಾಡಿ | 25/– |
| ಗೆರೆಮಿರಿವಚಿನ್ನದದಿರು(ಗೋಪಾಲಕೃಷ್ಣಅಡಿಗ–ಒಂದುಪ್ರವೇಶ) | ನರಹಳ್ಳಿಬಾಲಸುಬ್ರಹ್ಮಣ್ಯ | 15/– |
| ಶೈಲಿಶಾಸ್ತ್ರ | ಕೆ.ವಿ.ನಾರಾಯಣ | 75/– |

ಹೆಣ್ಣು ಬದುಕನ್ನು ಅರ್ಥ ಮಾಡಿಕೊಳ್ಳುವ, ಅವಳ ಬದುಕು ಎದುರಿಸುತ್ತಿರುವ ಸಾಮಾಜಿಕ ಸಮಸ್ಯೆಗಳನ್ನು ಪರಿಹರಿಸುವ ನಿಟ್ಟಿನಲ್ಲಿ ಆರಂಭವಾದ ಸ್ತ್ರೀವಾದೀ ಚಿಂತನೆ ಹಾಗೂ ಹೋರಾಟಗಳು ಮೊದಮೊದಲಲ್ಲಿ ಹೆಣ್ಣುಬದುಕಿನ ಎಲ್ಲ ಕಷ್ಟಗಳಿಗೂ ಪುರುಷರೇ ಕಾರಣ ಎಂದು ತಿಳಿದದ್ದು ಹೌದು. ಸ್ತ್ರೀವಾದವು ಮಾಗುತ್ತಾ ಬಂದಂತೆ ಇಂದು ಮಹಿಳೆಯರಂತೆಯೇ ಪುರುಷರು ಕೂಡಾ ಈ ಪಿತೃಪ್ರಧಾನ ವ್ಯವಸ್ಥೆಯ ಆಟದಲ್ಲಿ ಉರುಳುವ ದಾಳಕ್ಕೆ ತಕ್ಕಂತೆ ನಡೆಯುವ ಕಾಯಿಗಳಷ್ಟೇ ಎಂಬುದನ್ನು ಮನಗಂಡಿದೆ.

ಈ ಅರಿವನ್ನು ದೃಢೀಕರಿಸುವ ಒಂದು ಹಾದಿಯಾಗಿ, ಈ ಚಿಂತನೆಯು ಪಿತೃಪ್ರಧಾನ ವ್ಯವಸ್ಥೆಯು ತನ್ನ ಸಾಂಸ್ಥಿಕ ರಚನೆಗಳಲ್ಲಿ, ಹಾಗೂ ಜ್ಞಾನವಲಯಗಳಲ್ಲಿ ಹುದುಗಿಸಿಟ್ಟಿರುವ ನಿಯಮಾವಳಿಗಳು, ಹಾಗೂ ಮಿಥ್‌ಗಳನ್ನು ಮರುಶೋಧನೆಗೆ ಒಳಪಡಿಸುತ್ತದೆ.

ಸ್ತ್ರೀ ಸಂವೇದನೆಯನ್ನು ಕುರಿತ ಇಂದಿನ ಸಂವಾದಗಳು ಮೂಡಿಸಬಹುದಾದ ಅರಿವು, ಮಹಿಳೆಯರಲ್ಲಿ ಮಾತ್ರವೇ ಅಲ್ಲ, ಪುರುಷರಲ್ಲೂ ತಮ್ಮ ನಿಜ ಸಂವೇದನೆಗಳನ್ನು ಗುರುತಿಸಿಕೊಳ್ಳಲು ನೆರವಾಗಲಿ ಎಂದು ಆಶಿಸುತ್ತೇನೆ. ಇಂಥಾ ಸಂವೇದನೆಗಳು ನಮ್ಮನ್ನು, ಮುಖ್ಯವಾಗಿ, ನಮ್ಮ ಕಿರಿಯ ತಲೆಮಾರನ್ನು ಪೊರೆಯಲಿ ಎಂದು ಆಶಿಸುತ್ತೇನೆ.

ಎಚ್.ಎಸ್. ಶ್ರೀಮತಿ
(ಮುಖ್ಯ ಅತಿಥಿಗಳ ಆಶಯ ಭಾಷಣದಿಂದ)

ಇಲ್ಲಿಯ ಕತೆಗಳು ಅಮೂರ್ತವಾದ ಸೈದ್ಧಾಂತಿಕತೆಯಿಂದ ಅನುಭವವನ್ನು ಶೋಧಿಸುವುದಿಲ್ಲ. ಬಹಳ ಸಹಜವಾಗಿ ಕತೆ ಹೇಳುತ್ತಲೇ ಆಳವಾದ ಪ್ರಶ್ನೆಗಳನ್ನು ಕೆದಕುತ್ತವೆ. ಅಲ್ಲದೆ ವಾಸ್ತವ-ನಿರೂಪಣೆ-ಕತೆ ಇವುಗಳ ಸಂಬಂಧದ ಬಗ್ಗೆಯೇ ಈ ಕತೆಗಳು ಇವೆ.

ಶ್ರೀಮಂತವಾದ ಕನ್ನಡ ಕಥಾಲೋಕಕ್ಕೆ ಇವು ಬೆಲೆಬಾಳುವ ಸೇರ್ಪಡೆಗಳು ಎಂದು ನನಗೆ ಅನ್ನಿಸಿತು. ಈ ಕತೆಗಳು ಒಂದು ಹೊಸ ಮನ್ವಂತರದ ಸೂಕ್ಷ್ಮ ದಾಖಲೆಗಳಾಗಿವೆ. ಸೈದ್ಧಾಂತಿಕ ಭರಾಟೆ ಹಟಮಾರಿತನವಿಲ್ಲದೆಯೆ ಪುರುಷಪ್ರಾಧಾನ್ಯದ ಅನೇಕ ಮುಖಗಳನ್ನು ತೆರೆದಿಡುತ್ತವೆ.

ಈ ಸಂಗ್ರಹವನ್ನು ಓದಿದಾಗ ನನಗೆ ತುಂಬಾ ಸಂತೋಷವನ್ನು ಕೊಟ್ಟ ವಿಷಯವೆಂದರೆ ಇಲ್ಲಿಯ ಬರಹಗಳಲ್ಲಿ ಇರುವ ಸೂಕ್ಷ್ಮವಾದ ಸ್ಪಂದನೆ ಮತ್ತು ಮನುಷ್ಯ ಪರವಾದ ಚಿಂತನೆ. ಮಾಧ್ಯಮ ನಿರ್ದೇಶಿತ ಪೂರ್ವಗ್ರಹಗಳಿಂದ ಹೊರಬಂದು ಅನೇಕ ಸೂಕ್ಷ್ಮ ಜಾಗೃತ ಮನಸ್ಸುಗಳೊಂದಿಗೆ ಸಂಬಂಧ ಕುದುರಿಸಿದಂಥ ಅನುಭವ ಈ ಸಂಗ್ರಹದ ಓದಿನಿಂದ ಸಿಕ್ಕುತ್ತದೆ. ನನಗಂತೂ ಇಂಥ ಅರ್ಥಪೂರ್ಣ ಅನುಭವ ಸಿಕ್ಕಿದೆ.

ರಾಜೇಂದ್ರ ಚೆನ್ನಿ
(ಮುನ್ನುಡಿಯಿಂದ)

